ಗಳಗನಾಥ ಸುರಸ ಗ್ರಂಥಮಾಲೆ

— ರಹಸ್ಯಪ್ರಕಾಶಕವಾದ —

ಸಚಿತ್ರ

# ಮಹಾ ಭಾರತಾಮೃತ

## ಆದಿಪರ್ವ

ಇದನ್ನು

ವೇಂಕಟೇಶ ತಿರಕೋ ಕುಲಕರಣಿ ಗಳಗನಾಥ

ಪೆನಶನರ, ಅ|| ಮಾಸ್ತರ, ಟ್ರೇನಿಂಗ ಕಾಲೇಜ, ಧಾರವಾಡ

ಇವರು ಸಂಪಾದಿಸಿದರು.

— ೩ಯಾವೃತ್ತಿ – ೫೦೦೦ ಪ್ರತಿಗಳು —

೧೯೩೧



ಬೆಲೆ ೩ — ೮ — ೦

ಬೆಂಗಳೂರು ಸಿಟಿ ಸ್ಟ್ಯಾಂಡರ್ಡ್ ಪ್ರೆಸ್

ಮೂಲಕ ಬಿ. ಯಲ್. ನರಸಿಂಹಯ್ಯನಿಂದ ಮುದ್ರಿಸಲ್ಪಟ್ಟಿತು.

ಪ್ರಕಾಶಕ:— ವೇ. ತಿ. ಗಂಗನಾಥ

ಪ್ರಸಿದ್ಧಿಸುವ ಸ್ಥಳ:— "ಸದ್ಗುರು ಆಫೀಸ್" ಹಾವೇರಿ. ಡಿ|| ಧಾರವಾಡ

॥ ಶ್ರೀ ಗಣೇಶಾಯ ನಮಃ ॥

# ಪ್ರಸ್ತಾವನೆ

**ಉಪೋದ್ಘಾತ**-ಭಗವಂತನಾದ ಶ್ರೀಕೃಷ್ಣಪರಮಾತ್ಮನು, ಶ್ರೀಮನ್ಮಹಾಭಾರತದ ಅರಣ್ಯಪರ್ವದ ೧೮೩ನೇ ಅಧ್ಯಾಯದಲ್ಲಿ, ಧರ್ಮಾತ್ಮನಾದ ಯುಧಿಷ್ಠಿರನಿಗೆ ಆತನ ಆಯುಃಕ್ರಮಣದ ಸರ್ವೋತ್ಕೃಷ್ಟ ರೀತಿಯನ್ನು ಆತನಮುಂದೆ ಹೇಳಿ, ಅದಕ್ಕಾಗಿ ಆತನನ್ನು ಅಭಿನಂದಿಸಿರುವನು. ಭಗವಂತನ ಈ ಅಭಿನಂದನಕ್ಕೆ ಪಾತ್ರರಾಗುವ ಇಚ್ಛೆಯು, ಇಹ-ಪರ-ಸುಖೇಚ್ಛುಗಳಾದ ಯಾವ ಪುಣ್ಯಪುರುಷರಿಗೆ ಉತ್ಪನ್ನವಾಗಲಿಕ್ಕಿಲ್ಲ? ಅದಕ್ಕಾಗಿಯೇ ನಾವು ಪ್ರಸ್ತಾವನದ ಆರಂಭದಲ್ಲಿ ಅಸ್ತಿವಾರರೂಪದಿಂದ ಆ ಆಯುಃಕ್ರಮಣದ ರೀತಿಯನ್ನು ಉಲ್ಲೇಖಿಸಿರುವೆವು. ಆ ಅಧ್ಯಾಯದಲ್ಲಿ ಭಗವಂತನು, ಧರ್ಮರಾಜನನ್ನು ಕುರಿತು ಹೇಳಿರುವನೇನಂದರೆ—"ಎಲೈ ಪಾಂಡುಪುತ್ರಾ-ರಾಜಾ ಯುಧಿಷ್ಠಿರಾ, (೧) ರಾಜ್ಯಪ್ರಾಪ್ತಿಗಿಂತ ಧರ್ಮಪಾಲನವು ಶ್ರೇಷ್ಠವಾದದ್ದಿದ್ದು, ಧರ್ಮಪಾಲನಕ್ಕಾಗಿ ತಪಶ್ಚರ್ಯ ಮಾಡಬೇಕೆಂದು ಶಾಸ್ತ್ರದಲ್ಲಿ ಹೇಳಿರುವದು; ಆದ್ದರಿಂದಲೇ ಧರ್ಮಾ, (೨) ನೀನು ಸತ್ಯ-ಸರಲತೆಗಳ ಯೋಗದಿಂದ ಸ್ವಧರ್ಮವನ್ನು ಆಚರಿಸಿ, ಇಹಲೋಕ-ಪರಲೋಕಗಳೆರಡನ್ನೂ ಪ್ರಸೇರಿಸಿಕೊಂಡಿರುತ್ತೀ. ಇದಕ್ಕಾಗಿ ನೀನು (೩) ಮೊದಲು ಬ್ರಹ್ಮಚರ್ಯಾದಿ ವ್ರತಗಳನ್ನು ಆಚರಿಸಿ ವೇದಾಧ್ಯಯನ ಮಾಡಿದೆ; ಆಮೇಲೆ ಸಂಪೂರ್ಣ ಧನುರ್ವೇದದ ಜ್ಞಾನವನ್ನು ಸಂಪಾದಿಸಿ, ಕ್ಷಾತ್ರಧರ್ಮದಂತೆ ಧನವನ್ನು ಗಳಿಸಿದೆ; ಮತ್ತು ಅನಾದಿಕಾಲದಿಂದ ನಡೆಯುತ್ತಬಂದಿದ್ದ ಯಾವತ್ತು ಯಜ್ಞಗಳನ್ನು ಮಾಡಿದೆ. ಎಲೈ ಯುಧಿಷ್ಠಿರಾ, ಗ್ರಾಮ್ಯಧರ್ಮದಲ್ಲಿ ನಿನ್ನ ಆಸಕ್ತಿಯಿರದೆ, ನೀನು ಯಾವ ಕೆಲಸವನ್ನೇ ಆಗಲಿ, ವಿಷಯಭೋಗತೃಪ್ತಿಗಾಗಿ ಮಾಡುವದಿಲ್ಲ. ಧರ್ಮತಃ ಪ್ರಾಪ್ತವಾಗಬಹುದಾದ ಇಹ-ಪರ ಸುಖಕ್ಕಾಗಿ ಮಾಡುತ್ತೀ; ಮತ್ತು

ಧನದ ಅಭಿಲಾಷೆಯಿಂದ ಧರ್ಮವನ್ನು ತ್ಯಜಿಸುವದಿಲ್ಲ! ಈ ಸಂಗತಿಗಳ ಯೋಗದಿಂದಲೇ ನೀನು "ಧರ್ಮರಾಜ"ನೆಂದು ಕರೆಸಿಕೊಳ್ಳುತ್ತಿರುವೆ !!"

ಶ್ರೀಕೃಷ್ಣನ ಮೇಲಿನ ಅಭಿನಂದನದ ವಾಕ್ಯರತ್ನಗಳಮಹತ್ವವು ಅಷ್ಟಿಷ್ಟೆಂದು ಹೇಳಲಾಗುವದಿಲ್ಲ. ಜಗತ್ಕಾರಣನಾದ ಆ ಪ್ರಭುವು, ವೈದಿಕನಾದ ಧರ್ಮರಾಜನನ್ನು ಅಭಿನಂದಿಸುವ ನೆವದಿಂದ, ಜಗತ್ತಿನೊಳಗಿನ ಎಲ್ಲ ಧರ್ಮಗಳ ಇಹ-ಪರ-ಸುಖೇಚ್ಛು ಪುಣ್ಯಪುರುಷರ, ಆಯುಃಕ್ರಮಣದ ಕಲ್ಯಾಣಕಾರಕ ಪವಿತ್ರರೀತಿಯನ್ನೇ ಸಂಪೂರ್ಣವಾಗಿ ಹೇಳಿಬಿಟ್ಟಂತಾಗಿರುವದು! ಮೇಲೆ ನಾವು (೧) (೨) (೩) ಎಂಬ ಕ್ರಮಾಂಕಗಳಿಂದ ಆ ವಾಕ್ಯರತ್ನಗಳ ಗುಂಪುಗಳನ್ನು ಚಿಹ್ನಿಸಿರುವೆವಷ್ಟೆ? ಆ ಗುಂಪುಗಳಲ್ಲಿ ೧ನೇ ಗುಂಪಿನೊಳಗಿನ ವಾಕ್ಯರತ್ನವು—"ಮನುಷ್ಯನು ಧರ್ಮಕ್ಕಾಗಿ ತಪಸ್ಸುಮಾಡಬೇಕು" ಎಂಬ ಕಲ್ಯಾಣಕಾರಕ ಪವಿತ್ರಸಿದ್ಧಾಂತವನ್ನು ಸ್ಥಾಪಿಸುವದು. ೨ನೇ ಗುಂಪಿನೊಳಗಿನ ವಾಕ್ಯರತ್ನಗಳು—"ತಪಸ್ಸೆಂದರೆ ಸತ್ಯ-ಸರಲತೆಗಳ ಯೋಗದಿಂದ ಸ್ವಧರ್ಮವನ್ನು ಆಚರಿಸುವದು" ಎಂದು ಸ್ಪಷ್ಟೀಕರಿಸಿ, ಆಮೇಲೆ "ಆ ತಪಸ್ಸಿನ ಫಲವು ಇಹ-ಪರ ಸುಖವೆಂ"ದು ಹೇಳಿರುತ್ತವೆ. ಇನ್ನು ೩ನೆಯ ಗುಂಪಿನ ವಾಕ್ಯರತ್ನಗಳು, ಆ ಇಹ-ಪರ-ಸುಖಪ್ರಾಪ್ತಿರೂಪ-ಸಿದ್ಧಿಯಾಗಬೇಕಾದರೆ, "ಕಾರ್ಯಕ್ಷಮವಾದ ಧಾರ್ಮಿಕಶಿಕ್ಷಣವನ್ನು ಮೊದಲು, ಕಾರ್ಯಕ್ಷಮವಾದ ಔದ್ಯೋಗಿಕ ಶಿಕ್ಷಣವನ್ನು ಹಿಂದುಗಡೆ ಪಡೆಯಬೇಕೆಂ"ತಲೂ, "ಉದ್ಯೋಗದಿಂದ ಧರ್ಮದಂತೆ ಪೌರುಷಮಾಡಿ ದ್ರವ್ಯವನ್ನು ಸಂಪಾದಿಸಿ, ಆ ಸ್ವಾರ್ಜಿತ ದ್ರವ್ಯವನ್ನು, ತನ್ನ ಸ್ವಚ್ಛಂದದ ವಿಷಯಭೋಗಕ್ಕಾಗಿಯಲ್ಲ, ಮೊದಲು ದೇವತಾತೃಪ್ತಿಗಾಗಿ, ಆಮೇಲೆ ಧರ್ಮತಃ ಪ್ರಾಪ್ತವಾಗುವ ಸ್ವಪರಸುಖಕ್ಕಾಗಿ ಉಪಯೋಗಿಸಬೇಕೆಂ"ತಲೂ ಹೇಳಿರುತ್ತವೆ. ಒಟ್ಟಿಗೆ, ತಪಸ್ಸೇ ಆಗಲಿ, ವಿದ್ಯಾರ್ಜನವೇ ಆಗಲಿ, ದ್ರವ್ಯಸಂಪಾದನವೇ ಆಗಲಿ, ದ್ರವ್ಯದ ವಿನಿಯೋಗವೇ ಆಗಲಿ ಧರ್ಮಮೂಲವಾಗಿಯೂ, ಧರ್ಮಕ್ಕಾಗಿಯೂ ಆಗಬೇಕೆಂಬ ಕಲ್ಯಾಣಕಾರಕ ಪವಿತ್ರತತ್ವವು, ಧರ್ಮರಾಜನ ಆಯುಃಕ್ರಮಣದಲ್ಲಿ ಅಡಕವಾಗಿದ್ದು, ಆ ತತ್ವವು ಜಗತ್ಕಾರಣನಾದ ಶ್ರೀಕೃಷ್ಣಪರಮಾತ್ಮನಿಗೆ ಸರ್ವತೋಪರಿ ಮಾನ್ಯವಾಗಿದೆಯೆಂಬದು ಸ್ಪಷ್ಟವಾಗುತ್ತದೆ. ಆದ್ದ

ರಿಂದಲೇ ಈ ಪ್ರಸ್ತಾವನೆಯಲ್ಲಿ ಮೊದಲಿಗೆ ಸರ್ವಮೂಲವಾದ ಧರ್ಮದ ಸ್ವರೂಪವನ್ನು ಕುರಿತು ವಿಸ್ತಾರವಾಗಿ ವಿವೇಚಿಸುವೆವು.

**ಧರ್ಮವೆಂದರೇನು?**— ಮೊದಲು ಧರ್ಮವೆಂದರೇನೆಂಬದನ್ನು ಕುರಿತು ವಿಚಾರಿಸುವಾ. ಮುಂದೆ ಇದೇ ಮಹಾಭಾರತದ ಶಾಂತಿಪರ್ವದಲ್ಲಿ ಧರ್ಮವೆಂದರೇನೆಂಬದರ ಸಂಬಂಧದಿಂದ ಭೀಷ್ಮರು ಧರ್ಮರಾಜನನ್ನು ಕುರಿತು—"ಧಾರಣಾದ್ಧರ್ಮ ಇತ್ಯಾಹುರ್ಧರ್ಮೇಣ ವಿಧೃತಾಃ ಪ್ರಜಾಃ। ತಸ್ಮಾದ್ಧಾರಣಸಂಯುಕ್ತಃ ಸಧರ್ಮ ಇತಿನಿಶ್ಚಯಃ" ಎಂದು ಹೇಳಿರುತ್ತಾರೆ. ಅವರು ಹೇಳುವದರ ತಾತ್ಪರ್ಯವು ಸ್ವಲ್ಪದರಲ್ಲಿ— "ಧಾರಣಮಾಡುವದರಿಂದ ಅದಕ್ಕೆ ಧರ್ಮವೆನ್ನುವರು. ಧರ್ಮದಿಂದಲೇ ಪ್ರಜೆಗಳು ಧರಿಸಲ್ಪಟ್ಟಿರುವವು; ಆದ್ದರಿಂದ ಧಾರಣಾಯುಕ್ತವಾದದ್ದೇ ಧರ್ಮವೆಂಬದು ನಿಶ್ಚಯವು" ಎಂದು ಆಗುತ್ತದೆ. ಧರ್ಮಪಾಲನದಿಂದುಂಟಾಗುವ ಸ್ನೇಹಾಕರ್ಷಣದಿಂದ ಕುಟುಂಬದೊಳಗಿನ ವ್ಯಕ್ತಿಗಳೂ, ಸಮಾಜದೊಳಗಿನ ಕುಟುಂಬಗಳೂ, ರಾಷ್ಟ್ರದೊಳಗಿನ ಸಮಾಜಗಳೂ, ವಿಶ್ವದೊಳಗಿನ ವಸ್ತುಕೋಟಿಗಳೂ ಸಂಘಟಿತವಾಗದಿದ್ದರೆ, ಅವುಗಳ ಧಾರಣೆಯಾಗದೆ ಹೋಗಿ ಅವು ನಾಶಹೊಂದುವವೆಂಬದು ಈ ಅರ್ಥದ ಸ್ಪಷ್ಟೀಕರಣವಾಗಿರುತ್ತದೆ! ಮತ್ತು ಇದೇಧರ್ಮದ ವ್ಯಾಖ್ಯೆಯನ್ನು ಶ್ರೀಮಚ್ಛಂಕರಭಗವತ್ಪಾದರು—'ಅಭ್ಯುದಯ-ನಿಃಶ್ರೇಯಸಕರವಾದದ್ದುಧರ್ಮವು'ಎಂದು ಮಾಡಿರುವದರಿಂದ, ಧರ್ಮದಲ್ಲಿ ಲೌಕಿಕಧರ್ಮವೆಂತಲೂ, ಪಾರಮಾರ್ಥಿಕಧರ್ಮವೆಂತಲೂ ಎರಡು ವಿಧಗಳಿರುತ್ತವೆಂದು ಸಿದ್ಧವಾಗುತ್ತದೆ; ಹೇಗೆಂದರೆ, ಅಭ್ಯುದಯವೆಂದರೆ, ಇಹಲೋಕ-ಪರಲೋಕಗಳ, ಅಂದರೆ ಒಟ್ಟಿನಲ್ಲಿ ಲೌಕಿಕದ ಉತ್ಕರ್ಷವೆಂತಲೂ, ನಿಶ್ರೇಯಸವೆಂದರೆ, ಮೋಕ್ಷರೂಪ ಪಾರಮಾರ್ಥಿಕ ಉತ್ಕರ್ಷವೆಂತಲೂ ಅರ್ಥವಾಗುವದರಿಂದ, ಭಗವತ್ಪಾದರ ಧರ್ಮದ ವ್ಯಾಖ್ಯೆಯ ಅರ್ಥವು—"ಲೌಕಿಕ-ಪಾರಮಾರ್ಥಿಕ ಉತ್ಕರ್ಷಗಳೆರಡನ್ನೂ ಮಾಡುವದು ಧರ್ಮವು" ಎಂದು ಆಗುವದು. ಲೌಕಿಕಧರ್ಮವಾಗಲಿ, ಪಾರಮಾರ್ಥಿಕಧರ್ಮವಾಗಲಿ ಶಾಸ್ತ್ರಶುದ್ಧಗಳಾದ ಕಲ್ಯಾಣಕಾರಕ ನಿಯಮಗಳ ಸಮುಚ್ಚಯದಿಂದ ಆಗಿರುತ್ತವೆ; ಆದದ್ದರಿಂದ ಲೌಕಿಕೋತ್ಕರ್ಷಕಾರಕಗಳಾದ ಶಾಸ್ತ್ರಶುದ್ಧ ಕಲ್ಯಾಣಕಾರಕ ನಿಯ

ಮುಗಳ ಸಮುಚ್ಚಯವನ್ನು ಲೌಕಿಕಧರ್ಮವೆಂತಲೂ, ಪಾರಮಾರ್ಥಿಕೋತ್ಕರ್ಷಕಾರಕಗಳಾದ ಶಾಸ್ತ್ರಶುದ್ಧ ಕಲ್ಯಾಣಕಾರಕ ನಿಯಮಗಳ ಸಮುಚ್ಚಯವನ್ನು ಪಾರಮಾರ್ಥಿಕಧರ್ಮವೆಂತಲೂ ಕರೆಯಬೇಕಾಗುವದು. ಇನ್ನು ಜಗತ್ತಿಗೆ ಮೋಕ್ಷಕ್ಕಿಂತ ಲೌಕಿಕೋತ್ಕರ್ಷವೇ ಸಾರ್ವತ್ರಿಕವಾಗಿ ಬೇಕಾಗಿರುವದು ಸ್ವಾಭಾವಿಕವಾಗಿರುವದಲ್ಲದೆ, ಮಹಾಭಾರತಗ್ರಂಥವು ಧರ್ಮಾರ್ಥಕಾಮಗಳೆಂಬ ಪುರುಷಾರ್ಥ ತ್ರಯಿಯನ್ನು ಕುರಿತೇ ಪ್ರಾಮುಖ್ಯವಾಗಿ ಹೇಳುತ್ತಿರುವದು; ಆದ್ದರಿಂದ ಪ್ರಕೃತಕ್ಕೆ ಇಲ್ಲಿ ಲೌಕಿಕಧರ್ಮವನ್ನು ಕುರಿತು ವಿವೇಚಿಸುವದು ಅವಶ್ಯವಾಗಿರುತ್ತದೆ.

**ಪಂಚಮಹಾಭೂತಗಳ ಧರ್ಮಪಾಲನ** — ಮೇಲೆ ನಾವು ಕುಟುಂಬ, ಸಮಾಜ, ರಾಷ್ಟ್ರ, ವಿಶ್ವ ಇವುಗಳ ಸಂಘಟನೆಯು ಸ್ನೇಹಾಕರ್ಷಣದಿಂದ ಆಗದಿದ್ದರೆ, ಅವವುಗಳ ಅಸ್ತಿತ್ವವೇ ಇಲ್ಲದಾಗಿ, ಅವುಗಳ ನಾಶವಾಗುತ್ತದೆಂದು ಹೇಳಿರುವೆವಷ್ಟೆ? ಇವುಗಳಲ್ಲಿ ಕುಟುಂಬ, ಸಮಾಜ, ರಾಷ್ಟ್ರ ಇವುಗಳ ಸಂಘಟನೆಯು ಕೇವಲ ಅಲ್ಪಸಂಖ್ಯಾಕವಾದ ಕ್ಷುದ್ರ ಮಾನವಕೋಟಿಗೆ ಸಂಬಂಧಿಸಿದ್ದಾಗಿದ್ದು, ವಿಶ್ವದ ಉಳಿವು-ಅಳಿವುಗಳ ದೃಷ್ಟಿಯಿಂದ ಇವುಗಳ ವಿಚಾರವು ಅಷ್ಟು ಮಹತ್ವದ್ದಾಗಿರುವದಿಲ್ಲ; ಯಾಕಂದರೆ ವಿಶ್ವದ ಅಸ್ತಿತ್ವಕ್ಕೂ, ನಾಶಕ್ಕೂ ಪ್ರಾಮುಖ್ಯವಾಗಿ ಮೊದಲು ವಿಶ್ವದ ಜಡಕೋಟಿಯು, ತರುವಾಯದಲ್ಲಿ ಮನುಷ್ಯೇತರ ವೃಕ್ಷಕೋಟಿ-ಪ್ರಾಣಿಕೋಟಿಗಳ ಧರ್ಮಪಾಲನವು-ಅಥವಾ ಧರ್ಮೋಲ್ಲಂಘನವು ಮುಖ್ಯಕಾರಣಗಳಾಗಿರುತ್ತವೆ; ಆದ್ದರಿಂದ ಇಲ್ಲಿ ಮೊದಲು ಜಡಕೋಟಿಯು, ಆಮೇಲೆ ಮನುಷ್ಯೇತರವಾದ ವೃಕ್ಷಕೋಟಿ-ಪ್ರಾಣಿಕೋಟಿಗಳ, ಆಮೇಲೆ ಮಾನವಕೋಟಿಯ ಧರ್ಮಪಾಲನವನ್ನು ಕುರಿತು ವಿಚಾರಿಸುವಾ. ಜಡಕೋಟಿಯ ಧರ್ಮಪಾಲನದ ಮಹತ್ವವನ್ನು ವಿಚಾರಿಸುವದಕ್ಕಾಗಿ, ನಾವು ಮೊದಲು ನಮ್ಮ ಸೂರ್ಯಮಾಲೆಯನ್ನೇ ಉದಾಹರಣೆಗಾಗಿ ಇಟ್ಟುಕೊಳ್ಳೋಣ. ಸೂರ್ಯನೂ, ಆತನ ಸುತ್ತಲೂ ತಿರುಗುವ ಪೃಥ್ವ್ಯಾದಿ ಗ್ರಹಗಳೂ ಕೂಡಿ ನಮ್ಮ ಸೂರ್ಯಮಾಲೆಯಾಗಿರುವದಷ್ಟೆ? ಆ ಸೂರ್ಯಮಾಲೆಯ ಧರ್ಮಪಾಲನವೆಂದರೆ, ಜಗತ್ಕಾರಣನಾದ ಪರಮೇಶ್ವರನ ಅಪ್ಪಣೆಯಂತೆ ಪ್ರತಿಬಂದು ಗೋಲವೂ ನಡೆದುಕೊಳ್ಳೋಣವು. ಅದರಂತೆ

ನಮ್ಮ ಸೂರ್ಯಮಾಲಿಯೊಳಗಿನ ಪೃಥಿವ್ಯಾದಿ ಗ್ರಹಗಳು ಅನಾದಿಕಾಲದಿಂದ ಸೂರ್ಯನ ಸುತ್ತುಮುತ್ತು ಒಂದೇಸವನೆ ತಿರುಗುತ್ತಲಿರುವವು; ಹಾಗೆಯೇ ಸೂರ್ಯನು ಅವುಗಳ ಪ್ರದಕ್ಷಿಣೆಗೆ ಬಾಧೆಬಾರದಂತೆ ಒಂದೇಸವನೆ ಅವುಗಳೊಡನೆ ತನ್ನ ಸಂಬಂಧವನ್ನು ಕಾಯ್ದುಕೊಳ್ಳುತ್ತ ಬಂದಿರುವನು. ಹೀಗೆ ಗ್ರಹಗಳೂ, ಸೂರ್ಯನೂ ತಮ್ಮತಮ್ಮ ಪರಸ್ಪರ ಹಿತಸಂಬಂಧವನ್ನು ಕಾಯ್ದುಕೊಳ್ಳದೆ, ಸೂರ್ಯನು, ತಾನು ಇನ್ನಿಷ್ಟುದೊಡ್ಡವನಾಗಬೇಕೆಂಬ ಮಹತ್ವಾಕಾಂಕ್ಷೆಯಿಂದ ಪೃಥಿವ್ಯಾದಿ ಕ್ಷುದ್ರಗೋಲಗಳನ್ನು ಆಕರ್ಷಿಸಿಕೊಂಡುಬಿಟ್ಟರೆ, ಅಥವಾ ಪೃಥಿವ್ಯಾದಿ ಗ್ರಹಗಳು ಸೂರ್ಯನ ದೊಡ್ಡಿಸ್ತಿಕೆಗಾಗಿ ಅಸೂಯಪಟ್ಟು, ತಾವೆಲ್ಲ ಗ್ರಹಗಳು ಒಟ್ಟುಗೂಡಿ ತಮ್ಮದೊಂದು ಸಂಘವನ್ನು ಮಾಡಿಕೊಂಡು ಔದ್ಧತ್ಯದಿಂದ ಸೂರ್ಯನನ್ನು ನಾಶಗೊಳಿಸಬೇಕೆಂದು ಆತನಮೇಲೆ ದುಮುಕಿದರೆ, ಅಥವಾ ಗ್ರಹಗಳ ಹಂಗೇನೆಂದು ಸೂರ್ಯನೂ, ಸೂರ್ಯನ ಹಂಗೇನೆಂದು ಗ್ರಹಗಳೂ ವ್ಯಕ್ತಿಸ್ವಾತಂತ್ರ್ಯದ ಮುಂಡತನದ ಒಗರಿನಿಂದ ಎತ್ತಾದರೂ ಸಿಡಿದು ಹೋಗಿಬಿಟ್ಟರೆ, ಸೂರ್ಯಮಾಲೆಯ ಅಸ್ತಿತ್ವವು ಉಳಿಯಬಹುದೋ? ಇದರಂತೆಯೇ ಸೂರ್ಯಗೋಲಕ್ಕಿಂತ ಸಾವಿರಾರುಪಟ್ಟು ದೊಡ್ಡವಾಗಿರುವ ಅನಂತ ನಕ್ಷತ್ರಗಳು ತಮ್ಮತಮ್ಮ ಅನುಚರಗ್ರಹಗಳೊಡನೆ ಹೀಗೆಯೇ ತಮ್ಮ ಧರ್ಮವನ್ನು ಅತಿಕ್ರಮಿಸಿ ಸ್ವಚ್ಛಂದವಾಗಿ ನಡೆದುಕೊಂಡರೆ, ಆ ಪ್ರಚಂಡ ನಕ್ಷತ್ರಮಾಲೆಗಳೊಡನೆ ನಮ್ಮ ಸೂರ್ಯಮಾಲೆಯೂ ನಷ್ಟವಾಗಿ, ಇಡಿಯ ವಿಶ್ವವೇ ಶೂನ್ಯವಾಗುತ್ತಿತ್ತು. ಆದರೆ ಪರಮಾತ್ಮನ ಅಪ್ಪಣೆಯಿಲ್ಲದೆ ಯಾವ ಗೋಲಗಳೂ ತಮ್ಮತಮ್ಮ ಧರ್ಮಗಳನ್ನು ಎಷ್ಟುಮಾತ್ರವೂ ಬಿಡದಿರುವದರಿಂದ, ಅವುಗಳ ಧರ್ಮಪಾಲನವು ವಿಶ್ವವನ್ನು ಧರಿಸಿರುತ್ತದೆ!

ಹೀಗೆ ವಿಶ್ವದ ಅಸ್ತಿತ್ವಕ್ಕೆ ಪೃಥಿವ್ಯಾದಿ ಘನಗೋಲಗಳ, ಅಂದರೆ ಪೃಥ್ವಿಯೆಂಬ ಮಹಾಭೂತದ ಧರ್ಮಪಾಲನವು ಕಾರಣವಾಗಿರುವಂತೆ, ಜಲ, ವಾಯು, ಅಗ್ನಿ (ತೇಜ)ಗಳೆಂಬ ಈ ಮೂರು ಮಹಾಭೂತಗಳ ಧರ್ಮಪಾಲನವೂ ಹೇಗೆ ಕಾರಣವಾಗಿರುತ್ತದೆಂಬದನ್ನು ನೋಡೋಣ. ಪ್ರಾಣಿಗಳ ವಾಸಕ್ಕೆ ಯೋಗ್ಯವಾಗಿರುವ ಒಣನೆಲದ ಮೂರುಪಟ್ಟು ಭೂಪ್ರದೇಶ

ವನ್ನು ಸಮುದ್ರವು ವ್ಯಾಪಿಸಿರುವದಷ್ಟೇ? ಈ ಸಮುದ್ರರೂಪವಾದ ಜಲವೆಂಬ ಮಹಾಭೂತವು ಕ್ಷೋಭಿಸಿ ತನ್ನ ಮರ್ಯಾದೆಯನ್ನು ಮೀರಿಹೋಗಿ ಯಾವತ್ತು ಒಣನೆಲವನ್ನು ವ್ಯಾಪಿಸಿಬಿಟ್ಟರೆ, ಅಥವಾ ಮೇಘರೂಪದಿಂದ ಆ ಜಲವೆಂಬ ಮಹಾಭೂತವು ತನ್ನ ಮಿತಿಯನ್ನುಮೀರಿ ಒಂದೇಸವನೆ ತಿಂಗಳುಗಟ್ಟಲೆ, ಅಥವಾ ವರ್ಷಗಟ್ಟಲೆ ಪ್ರಳಯಕಾಲದಾಗಿನಂತೆ ಭೋರೆಂದು ಮಳೆ ಸುರಿಸಹತ್ತಿದರೆ, ಪೃಥ್ವಿಯ ಗತಿಯು ಏನಾದೀತು? ಅದರಂತೆ ಸರ್ವ ವಸ್ತುಜಾಲದಲ್ಲಿ ಸರ್ವತ್ರ ಸೌಮ್ಯರೂಪದಿಂದ ವ್ಯಾಪಿಸಿರುತ್ತಿದ್ದ ಅಗ್ನಿಯೆಂಬಮಹಾಭೂತವು ಪರಮಾತ್ಮನ ಅಪ್ಪಣೆಯನ್ನು ಮೀರಿ ಆ ವಸ್ತುಗಳನ್ನು ಸುಡಹತ್ತಿದರೆ, ವಿಶ್ವದೊಡನೆ ನಮ್ಮ ಭೂಮಿಯ ಗತಿಯು ಏನಾದೀತು? ಅದರಂತೆ, ಪ್ರಚಂಡಬಲದ ವಾಯುವೆಂಬ ಮಹಾಭೂತವು ಪರಮಾತ್ಮನ ಅಪ್ಪಣೆಮೀರಿ ತನ್ನ ಅಗಾಧಬಲವನ್ನು ಪ್ರಕಟಿಸಿ, ಒಂದೇಸವನೆ ವರ್ಷಗಟ್ಟಲೆ ಬೀಸಹತ್ತಿದರೆ, ಯಾವ ಪ್ರಾಣಿಗಳು ಬದುಕಿ ಉಳಿಯಬಹುದು? ಇದೂ ಅಲ್ಲದೆ ಆ ಮಹಾಭೂತಗಳು ಯಾವದೊಂದುಕಾರಣದಿಂದ ಅಸ್ತವಾಗಿ ಬಿಟ್ಟರೆ, ವಿಶ್ವದಲ್ಲಿ ಏನು ಉಳಿಯುವದು? ಆದರೆ ಆ ಮಹಾಭೂತಗಳು ತಮಗೆ ಜನ್ಮಕೊಟ್ಟಿರುವ ಪರಮೇಶ್ವರನ ಅಪ್ಪಣೆಯನ್ನು, ಅಂದರೆ ತಮ್ಮತಮ್ಮ ಧರ್ಮಗಳನ್ನು ಸತತವಾಗಿ ಪಾಲಿಸುತ್ತ ಇದ್ದುಬಿಟ್ಟಿದ್ದರಿಂದಲೇ, ವಿಶ್ವವೂ, ಅದರೊಡನೆ ನಮ್ಮ ಭೂಲೋಕವೂ—ನಾವೂ ಉಳಿದಿರುತ್ತೇವೆ.

**ಮನುಷ್ಯೇತರ ಪ್ರಾಣಿಕೋಟಿಯ ಧರ್ಮಪಾಲನ**-ಇನ್ನುಮೇಲೆ ಮಾನವಕೋಟಿಯಿಂದ ಇತರವಾಗಿರುವ ಪ್ರಚಂಡಜೀವಕೋಟಿಯ ಧರ್ಮಪಾಲನದ ವೈಭವವನ್ನು ನೋಡೋಣ ವೃಕ್ಷಗಳು ಸ್ಥಾವರಜೀವಕೋಟಿಯಲ್ಲಿ ಬರುವವಷ್ಟೆ? ಈ ಕೋಟಿಯಲ್ಲಿ ಕ್ಷುದ್ರಹಾವಸೆಯಿಂದವಾಗಿ ಆರಂಭ ಆಲದಗಿಡದಂಥ ಪ್ರಚಂಡವೃಕ್ಷಗಳವರೆಗಿನ ಸಣ್ಣ ದೊಡ್ಡ ಸಸ್ಯಗಳೆಲ್ಲವುಗಳ ಸಮಾವೇಶವಾಗುವದು. ದೊಡ್ಡದೊಡ್ಡ ವೃಕ್ಷಗಳು, ಪೃಥಿಯೊಳಗಿನ ಎಲ್ಲ ಪೋಷಕದ್ರವ್ಯಗಳೂ, ಆರ್ದ್ರತೆಯೂ ನಮಗೂ, ನಮ್ಮ ಸಂತತಿಗೂ ಮಾತ್ರ ಇರಬೇಕೆಂತಲೂ, ತಲೆತಲೆಗಳವರೆಗೆ ತಮ್ಮ ಸಂತತಿಗೆ ಸಾಲುವಷ್ಟು ಅವು ಕೂಡಿಬೀಳಬೇಕೆಂತಲೂ, ಇಷ್ಟುಸಾಲದೆ, ತಾವು ಒಳ್ಳೇ ಶ್ರೀಮಂ

ತರೆಂಬ ಹೆಮ್ಮೆಯಿಂದ ಮೆರೆಯಲಿಕ್ಕೂ, ತಮ್ಮ ದುಂದುಗಾರಿಕೆಗೆ ಸಾಕಾಗುವಷ್ಟು ಅವುಗಳ ಸಂಗ್ರಹವಾಗಿರಬೇಕೆಂತಲೂ ನಮ್ಮ ಅಧಾರ್ಮಿಕಮಾನವರಹಾಗೆ ಆಶೆಬುರಕತನದಿಂದ ಆ ದೊಡ್ಡದೊಡ್ಡ ವೃಕ್ಷಗಳೂ ಎಲ್ಲವನ್ನೂ ತಾವೇ ಬೊಕ್ಕರಿಸಹತ್ತಿದರೆ, ಉಳಿದ ಕ್ಷುದ್ರಸಸ್ಯಗಳ ಗತಿಯು ಏನಾಗಬೇಕು? ಇದೇ ಅಧಾರ್ಮಿಕ ದುರ್ಬುದ್ಧಿಯಿಂದ ಎಲ್ಲ ಕ್ಷುದ್ರಸಸ್ಯಗಳು ತಮ್ಮತಮ್ಮ ಜಾತಿಗಳಂತೆ ಸಂಘಗಳನ್ನು ಮಾಡಿಕೊಂಡು, ದೊಡ್ಡದೊಡ್ಡ ವೃಕ್ಷಗಳಿಗೆ ಏನೂ ಆಹಾರ ಸಿಗದಂತೆ ಮಾಡಲು ಯತ್ನಿಸಿದರೆಪರಿಣಾಮವೇನಾದೀತು? ಅಥವಾ ಎಲ್ಲ ಸಣ್ಣದೊಡ್ಡ ಸಸ್ಯಗಳು ಒಟ್ಟಾಗಿ ನಮ್ಮ ಮಾನವಕೋಟಿಯೊಡನೆ ಅಸಹಕಾರಬಳಿಸಿ ತಮ್ಮ ತಮ್ಮೊಳಗೆ—"ನಾವು ಸುಮ್ಮನೆ ನಿಂತಲ್ಲಿನಿಂತುಬಿಟ್ಟು ನಿರುಪದ್ರವಿಗಳಾಗಿ ಜಂಗಮ ಪ್ರಾಣಿಗಳಿಗೆ ನೆಳಲನ್ನೂ, ಉಷ್ಣತೆ ಹೀರಿಕೊಂಡು ತಂಪನ್ನೂ, ದುಃಖ ಸಹಿಸಿ ಸವಿಸವಿ ಆಹಾರಗಳನ್ನೂ ಒದಗಿಸಿಕೊಡುತ್ತಿರಲು, ಮನುಷ್ಯೇತರ ಪ್ರಾಣಿಗಳು ಧರ್ಮತಃ ಪರಮಾತ್ಮನ ಸಂಕೇತಕ್ಕನುಸರಿಸಿ ತಮ್ಮ ಪೋಷಣದಮಟ್ಟಿಗೆ ನಮ್ಮನ್ನು ಉಪಯೋಗಿಸಿಕೊಳ್ಳುವಂತೆ, ಮನುಷ್ಯರು ನಮ್ಮನ್ನು ಉಪಯೋಗಿಸಿಕೊಳ್ಳುವದಿಲ್ಲ; ಆ ಕೃತಘ್ನರು ಧರ್ಮಾಧರ್ಮವಿಚಾರವಿಲ್ಲದೆ, ತಮ್ಮ ಚಕ್ಕಂದಕ್ಕಾಗಿ ಸಿಕ್ಕಹಾಗೆ ನಮ್ಮನ್ನು ಕಡಿಯುವರು, ಕೊಯ್ಯುವರು, ಕಿತ್ತುವರು, ಕೆತ್ತುವರು, ಹರಿಯುವರು; ಆದ್ದರಿಂದ ಈ ದುಷ್ಟರ ಕೈಗೆ ಸಿಗದಂತೆ ಏನಾದರೂ ಹಂಚಿಕೆಮಾಡೋಣ" ಎಂದು ಯೋಚಿಸಿ ನಮ್ಮ ಮಾನವರ ಕೆಲಸಕ್ಕೆ ಬಾರದಹಾಗೆ ಅವು ಏನಾದರೂ ಉಪಾಯಮಾಡಿಬಿಟ್ಟರೆ, ಕ್ಷುದ್ರ ಮಾನವರಾದ ನಮಗೆ ಅಶನ-ವಸನಗಳಾದರೂ ಸಿಗಬಹುದೇ? ಈ ಸ್ಥಾವರಗಳಾದ ಸಸ್ಯಗಳಂತೆ ಜಂಗಮಗಳಾದ ಆನೆಯಂಥ ಪ್ರಚಂಡಶಕ್ತಿಯ ಪ್ರಾಣಿಗಳೂ, ಸಿಂಹ-ಹುಲಿಗಳಂಥ ಪ್ರತಾಪಶಾಲಿಗಳಾದ ಪ್ರಾಣಿಗಳೂ, ಸರ್ಪಗಳಂಥ ಸಿಟ್ಟಿನ ವಿಷವುಳ್ಳ ಪ್ರಾಣಿಗಳೂ ತಮ್ಮಮರ್ಯಾದೆಯನ್ನು ಮೀರಿ ಹಗಲು ರಾತ್ರಿ ತೆರಪಿಲ್ಲದೆ ಮಾನವ ವಸತಿಯಮೇಲೆ ನಿರ್ಭಯದಿಂದ ದಾಳಿಮಾಡಿದರೆ, ನಾವು ಎತ್ತ ತಪ್ಪಿಸಿಕೊಂಡುಹೋದೇವು? ಆ ದೊಡ್ಡದೊಡ್ಡ ಹೊರಗಿನ ವನಚರ ಪ್ರಾಣಿಗಳೂ ಹೋಗಲಿ, ನಮ್ಮ ಮನೆಯಲ್ಲಿಯೇ ಇರುವ ಚೇಳು, ಕಟ್ಟಿರುವೆ,

ಕೆಂಪಿರುವೆ, ಕೆಂಜಿಗ, ಗೆದ್ದಲಿ, ಇಲಿ, ಹೆಗ್ಗಣ ಮುಂತಾದವು ತಮ್ಮ ಮರ್ಯಾದೆ ಮೀರಿ ಹಗಲು ರಾತ್ರಿ ನಮಗೆ ಒಂದೇಸಮನೆ ಉಚ್ಚಾಟಣೆ ಕೊಟ್ಟರೆ, ನಮ್ಮ ಮಾನವರ ಗತಿಯು ಏನಾದೀತು? ಅವೂ ಅಲ್ಲದೆ ಮಾರಿಕಾ, ಪ್ಲೇಗು ಮುಂತಾದ ಅಸಂಖ್ಯರೋಗಗಳ ಅತಿಸೂಕ್ಷ್ಮ ಜಂತುಗಳು, ಉಗ್ರರೂಪತಾಳಿ ಮರ್ಯಾದೆಯನ್ನು ಬಿಟ್ಟು ನಮ್ಮ ಸುತ್ತು ಸತತವಾಗಿ ಬೆನ್ನುಹತ್ತಿದರೆ, ಭೂಮಿಯಮೇಲೆ ಬೀಜಕ್ಕಾಗಿಯಾದರೂ ನಾವು ಉಳಿಯಬಹುದೇ? ಅಲ್ಲದೆ, ವೃಕ್ಷಗಳ ಉದಾಹರಣೆಯಲ್ಲಿ ಹೇಳಿದ ನಮ್ಮ ಮಾನವರ ನೀಚತನದಂತೆ, ಈ ಎಲ್ಲ ಸಣ್ಣ ದೊಡ್ಡ ಜಂಗಮಪ್ರಾಣಿಗಳು ತಮ್ಮ ತಮ್ಮ ಆಹಾರಾದಿಗಳನ್ನು ಸಂಗ್ರಹಿಸಿ ಸಂಗ್ರಹಿಸಿ ಇಡಹತ್ತಿದರೆ, ಮತ್ತು ಋತುಗಮನದ ನಿಯಮವನ್ನು ಮುರಿದು ಒಂದೇಸಮನೆ ತಮ್ಮ ಸಂತತಿಯನ್ನು ಹೆಚ್ಚಿಸತೊಡಗಿದರೆ ಪರಿಣಾಮವೇನಾದೀತು? ಆದರೆ ಈ ಮನುಷ್ಯೇತರ ಪ್ರಾಣಿಗಳು ಕೂಡ ಈಶ್ವರನ ಆಜ್ಞಾರೂಪವಾದ ಧರ್ಮವನ್ನು ಉಲ್ಲಂಘಿಸದಿರುವದರಿಂದಲೇ, ಮನುಷ್ಯಪ್ರಾಣಿಯು ಪರಿಣಾಮವಾಗಿ ಹುತ್ತದೆ. ಇವುಗಳಂತೆಯೇ ಮನುಷ್ಯನೂ ಧರ್ಮನಿಷ್ಠನಾಗಿ ಇದ್ದುಬಿಟ್ಟಿದ್ದರೆ, ಜಗತ್ತಿನ ತಾಪದುಃಖಗಳು ನಿಶ್ಚಯವಾಗಿ ಕಡಿಮೆಯಾಗಿ, ಯಾವಾಗಲೂ ಭೂಮಿಯಲ್ಲಿ ಸತ್ಯಯುಗವು, ಅಂದರೆ ಕೃತಯುಗವು ಇದ್ದುಬಿಡುತ್ತಿತ್ತು; ಆದರೆ ದೇವರ ಸಂಕೇತವು ಹಾಗಿರುವದಿಲ್ಲ!

**ದೇವರ ನಾಲ್ಕರುಮಕ್ಕಳು**— ಈ ಜಗತ್ತಿನೊಳಗಿನ ಯಾವತ್ತು ವಸ್ತುಗಳು ಚೇತನಾಯುಕ್ತವಾಗಿರುತ್ತವೆಂಬ ಮಾತು, ಈ ಆದಿಪರ್ವ ಭಾರತದ ೮೮ನೇ ಅಧ್ಯಾಯದ ೨೩೩ನೇ ಪುಟದಲ್ಲಿ, ಯಯಾತಿಯೆಂಬ ರಾಜರ್ಷಿಯು ಅಷ್ಟಕನೆಂಬ ಸಾಧುವಿನೊಡನೆ ಸಂಭಾಷಣಮಾಡುವಾಗ ವ್ಯಕ್ತವಾಗಿರುತ್ತದೆ. ಅಲ್ಲದೆ, ಈ ಸಂಬಂಧದಿಂದ ಶ್ರುತಿಯು—"ಭೀಷಾಸ್ಮಾದ್ವಾತಃ ಪವತೇ, ಭೀಷೋದೇತಿ ಸೂರ್ಯಃ" ಇತ್ಯಾದಿ ವಾಕ್ಯಗಳಿಂದ— "ಗಾಳಿಯು ಪರಮೇಶ್ವರನ ಭಯದಿಂದ ನಿಯಮದಂತೆ ಬೀಸುವದು; ಸೂರ್ಯನು ಪರಮೇಶ್ವರನ ಭಯದಿಂದ ನಿಯಮದಂತೆ ಉದಯಹೊಂದುವನು." ಎಂದು ಮುಂತಾಗಿ ಹೇಳಿರುವದರಿಂದ, ವಾಯು ಮೊದಲಾದ ಪಂಚಮಹಾಭೂತಗಳಲ್ಲಿಯೂ ಪರಮೇಶ್ವರನು ತನ್ನ ಅಂಶವಾದ ಚೇತನವನ್ನು

ಇಟ್ಟಿರುವನೆಂಬ ಮಾತು ಸಿದ್ಧವಾಗುತ್ತದೆ; ಆದರೆ ಆ ಪಂಚಮಹಾಭೂತಗಳಿಗೆ ಜಗತ್ಕಲ್ಯಾಣಕ್ಕಾಗಿ ಇಂದ್ರಿಯಗಳನ್ನು ಕೊಟ್ಟಿರದ್ದರಿಂದ, ಅವುಗಳಲ್ಲಿ ಚೇತನವಿದ್ದದ್ದು, ಅಂದರೆ ಅವಕ್ಕೆ ಹುಟ್ಟು–ಬೆಳವಣಿಗೆ–ಸಾವುಗಳಿದ್ದದ್ದು ಸ್ಪಷ್ಟವಾಗಿ ಗೊತ್ತಾಗುವದಿಲ್ಲ; ಆದ್ದರಿಂದ ಅವನ್ನು ಅಜಾಗ್ರತಚೇತನವುಳ್ಳ ವಸ್ತುಗಳೆಂದು ಕರೆಯುಬಹುದು. ಇಂಥ ಈ ಜಡವಸ್ತುಗಳು, ಪರಮೇಶ್ವರನ ಇಂದ್ರಿಯಹೀನ ಮಕ್ಕಳಾಗಿರುವರು. ಇನ್ನು ಈ ಜಡವಸ್ತುಗಳಂತೆ ವೃಕ್ಷಗಳಲ್ಲಿಯೂ ಪರಮೇಶ್ವರನು ತನ್ನ ಚೇತನಾಂಶವನ್ನು ಇಟ್ಟಿದ್ದು, ಅವಕ್ಕೆ ಬೇರು, ಬೊಡ್ಡೆ, ಹರಿ, ಟೊಂಗೆ, ಎಲೆ ಮುಂತಾದ ಅವಯವಗಳೆಂಬ ಅವ್ಯವಸ್ಥಿತ ಇಂದ್ರಿಯಗಳನ್ನು ಕೊಟ್ಟಿರುವದರಿಂದ, ಅವಕ್ಕೆ ಚೇತನವಿದ್ದದ್ದು, ಅವುಗಳ ಹುಟ್ಟು-ಬೆಳವಣಿಗೆ-ಸಾವುಗಳಮೇಲಿಂದ ಸ್ಪಷ್ಟವಾಗಿ ಗೊತ್ತಾಗುವದು; ಆದ್ದರಿಂದ ಇವನ್ನು ಜಾಗ್ರತಚೇತನವುಳ್ಳ ವಸ್ತುಗಳೆಂದು ಕರೆಯುಬಹುದು; ಆದರೆ ಜಡವಸ್ತುಗಳಂತೆಯೇ ಇವಕ್ಕಾದರೂ ಸ್ಥಳಾಂತರಮಾಡಲಿಕ್ಕೆ ಬಾರದ್ದರಿಂದ, ಇವು ಪರಮೇಶ್ವರನ ಹೆಳವಮಕ್ಕಳಾಗಿರುವವು. ಇನ್ನು ಮನುಷ್ಯೇತರ ಜಂಗಮಪ್ರಾಣಿಗಳಲ್ಲ ಪರಮೇಶ್ವರನು ತನ್ನ ಚೇತನಾಂಶವನ್ನು ಇಟ್ಟಿದ್ದು, ಅವಕ್ಕೆ ಬಹುತರವಾಗಿ ಪಂಚಕರ್ಮೇಂದ್ರಿಯಗಳು, ಪಂಚಜ್ಞಾನೇಂದ್ರಿಯಗಳು, ಅಂತರಿಂದ್ರಿಯವಾದ ಮನಸ್ಸು ಎಂಬ ಹನ್ನೊಂದು ಇಂದ್ರಿಯಗಳನ್ನು, ಅಪೂರ್ಣಸ್ಥಿತಿಯಲ್ಲಿಯೇ ಆಗಲೊಲ್ಲದೇಕೆ ಕೊಟ್ಟಿರುವದರಿಂದ, ಅವು ಸ್ವಚ್ಛಂದವಾಗಿ ಸಂಚರಿಸಲಿಕ್ಕೂ, ವ್ಯವಹರಿಸಲಿಕ್ಕೂ ಸಮರ್ಥವಾಗಿರುವವು; ಮತ್ತು ಅವುಗಳಿಗೆ ಭಯ–ಕ್ರೋಧ–ಸುಖ-ದುಃಖ ಮೊದಲಾದ ಮಾನಸಿಕ ವಿಕಾರಗಳಿದ್ದದ್ದು ಸ್ಪಷ್ಟವಾಗಿ ಗೊತ್ತಾಗುವದು; ಆದ್ದರಿಂದ ಇವನ್ನು ಜಾಗ್ರತತರ ಚೇತನವುಳ್ಳ ವಸ್ತುಗಳೆಂದು ಕರೆಯಬಹುದು: ಆದರೆ ಇವಕ್ಕೆ ಬುದ್ಧಿಯಿಲ್ಲದ್ದರಿಂದ ಇವು ಪರಮೇಶ್ವರನ ಬುದ್ಧಿಗೇಡಿ, ಅಂದರೆ ದಡ್ಡಮಕ್ಕಳಾಗಿರುವವು. ಇನ್ನು ಸರ್ವಶ್ರೇಷ್ಠನಾದ ಮನುಷ್ಯನಲ್ಲಿ ಪರಮೇಶ್ವರನ ಚೇತನಾಂಶವಿರುವದಲ್ಲದೆ, ಆ ಹನ್ನೊಂದು ಇಂದ್ರಿಯಗಳೂ ಮನುಷ್ಯನಲ್ಲಿ ಪೂರ್ಣಸ್ಥಿತಿಯಲ್ಲಿರುವವಲ್ಲದೆ, ಆತನಿಗೆ ಬುದ್ಧಿಯೆಂಬ ಅಪರೂಪದ ಸಾಧನ ಸಂಪತ್ತೂ, ಪರಮೇಶ್ವರನ

ಗುಣಾಂಶಗಳಾದ ಕಿಂಚಿತ್ ಜ್ಞಾನ-ಕಿಂಚಿತ್ ಸ್ವಾತಂತ್ರ್ಯಗಳೆಂಬ ದಿವ್ಯ ಸಾಧನಗಳೂ ದೊರೆತಿರುತ್ತವೆ ; ಆದ್ದರಿಂದ ಮನುಷ್ಯರು ಪರಮೇಶ್ವರನ ಬುದ್ಧಿವಂತ ಮಕ್ಕಳಾಗಿರುವರು. ಇಂಥ ಸರ್ವಾಂಗಸುಂದರರಾದ ಮಕ್ಕಳನ್ನು ಜಾಗ್ರತತಮಚೇತನವುಳ್ಳ ವಸ್ತುಗಳೆಂದು ಕರೆಯಬಹುದು.

**ದೇವರ ಇಂದ್ರಿಯಹೀನ ಮಕ್ಕಳು**— ಹೀಗೆ ಷಡ್ಗುಣೈಶ್ವರ್ಯಸಂಪನ್ನನಾದ ಪರಮಾತ್ಮನ ಎರಡು ವಿಭೂತಿಗಳೆನಿಸುವ **ಜಡ** ಅಂದರೆ **ಮೂಲಪ್ರಕೃತಿ, ಚೇತನ** ಅಂದರೆ **ಆತ್ಮಾ** ಎಂಬ ಎರಡು ಅದೃಶ್ಯಮೂಲ ಘಟಕಗಳ ಸಂಯೋಗದಿಂದ ದೃಶ್ಯತೆಪಡೆದು ಸಕಲ ವಸ್ತುಗಳು ಉತ್ಪನ್ನವಾಗಿರುವವು. ಜಗತ್ತಿನೊಳಗಿನಸಮಗ್ರವಸ್ತುಜಾಲವೆಂಬ ತನ್ನ ಈನಾಲ್ಕು ಬಗೆಯ ಮಕ್ಕಳ ಯೋಗಕ್ಷೇಮವನ್ನು ವಹಿಸುವಲ್ಲಿ ಪರಮೇಶ್ವರನು ತನ್ನ ಸಮತಾಸ್ವಭಾವದಂತೆ ವಿಲಕ್ಷಣಸಮತೆಯನ್ನು ತೋರಿಸಿರುವದು ಕೌತುಕದ ಸಂಗತಿಯಾಗಿರುವದು! ಹೀಗೆ ಸಮತೆಯನ್ನು ತೋರಿಸುವಾಗ ಪರಮಾತ್ಮನು- "ಸಾಧನಸಂಪತ್ತಿನ ಕೊರತೆಯುಳ್ಳವರಾದ ದೀನರಿಗೆ ತನ್ನ ಸಹಾಯವು ಹೆಚ್ಚು, ಸಾಧನ ಸಂಪತ್ತಿನ ವಿಪುಲತೆಯುಳ್ಳ ಸಮರ್ಥರಿಗೆ ತನ್ನ ಸಹಾಯವು ಕಡಿಮೆ" ಎಂಬ ಸಿದ್ಧಾಂತವನ್ನು ಸ್ಥಾಪಿಸಿರುವನು. ಅದರಂತೆ, ಇಂದ್ರಿಯಹೀನರಾಗಿರುವ, ಅಂತೇ ಯಾವಬಗೆಯ ಸಾಧನಸಂಪತ್ತೂ ಇಲ್ಲದವರಾಗಿರುವ ಪಂಚಮಹಾಭೂತಗಳೆಂಬ ತನ್ನ ಚೊಚ್ಚಲಮಕ್ಕಳಿಗೆ, ಸರ್ವಾಧಾರವಾಗಿರುವ ತನ್ನ ಆಜ್ಞಾರೂಪಧರ್ಮವನ್ನು ಕುಂದು-ಕೊರತೆಗಳೇನು ಇಲ್ಲದಂತೆ ಅವಿಚ್ಛಿನ್ನವಾಗಿ ಪಾಲಿಸುವಹಾಗೆ ತನ್ನ ವಿಷಯದ ಭಯಭಕ್ತಿಯನ್ನು ಅವಕ್ಕೆ ಕೊಟ್ಟಿರುವನು ; ಅದರಿಂದ ಅವು ತಮ್ಮ ಧರ್ಮವನ್ನು ಮೇಲೆ ಹೇಳಿದಂತೆ ಅಕೃತ್ರಿಮವಾಗಿಯೂ, ಅವಿಚ್ಛಿನ್ನವಾಗಿಯೂ ಪಾಲಿಸುತ್ತ, ತಮ್ಮ ತಂದೆಯಾದ ಪರಮೇಶ್ವರನ ನಂಬಿಗೆಗೆ ಪಾತ್ರವಾಗಿ, ಆತನ ಸೃಷ್ಟಿವ್ಯವಹಾರರೂಪಕಾರ್ಯಕ್ಕೆ ಅತ್ಯಂತ ಸಹಾಯಕಗಳಾಗಿರುವವು. ಹೀಗೆ ಕೇವಲ ತನ್ನ ಆಜ್ಞಾಧಾರಕರಾಗಿರುವ ತನ್ನ ಮಕ್ಕಳಲ್ಲಿ ಪರಮೇಶ್ವರನು ತಾನು ಗುಪ್ತವಾಗಿ ವಾಸಿಸಿ, ಸೃಷ್ಟಿಕಾರ್ಯವನ್ನು ಸಾಗಿಸುತ್ತ, ತನ್ನ ಷಡ್ಗುಣೈಶ್ವರ್ಯ ಸಂಪನ್ನತೆಯನ್ನು, ಅಂದರೆ—"ಐಶ್ವರ್ಯಸ್ಯ ಸಮಗ್ರಸ್ಯ ಧರ್ಮಸ್ಯ ಯಶಸಃ ಶ್ರಿಯಃ।

ಜ್ಞಾನವೈರಾಗ್ಯಯೋಶ್ಚೈವ ಷಣ್ಣಾಂ ಭಗ ಇತೀರಣಾ ||" "೧ ಸಮಗ್ರ ಐಶ್ವರ್ಯ, ೨ ಧರ್ಮ, ೩ ಯಶಸ್ಸು, ೪ ಸಂಪತ್ತು, ೫ ಜ್ಞಾನ ೬ ವೈರಾಗ್ಯ" ಎಂಬ ಆರುಗುಣದ ಐಶ್ವರ್ಯಗಳನ್ನು ಪಂಚಮಹಾಭೂತಗಳಲ್ಲಿ ಇಡಗಂಟಿ ನಂತೆ ಇಟ್ಟು, ಆ ಪಂಚಮಹಾಭೂತಗಳ ಧರ್ಮಪಾಲನದ ಮುಖಾಂತರ ಆ ಗುಣಗಳನ್ನು ಜಗತ್ತಿಗೆ ಪ್ರಕಟಮಾಡಿರುವನೆಂಬದು ಕೆಳಗಿನ ವಿವರಣೆ ಯಿಂದ ಗೊತ್ತಾಗಬಹುದು.

(೧) ಪರಮಾತ್ಮನ ಐಶ್ವರ್ಯವೆಂದರೆ, ಪರಮಾತ್ಮನ ಪಾಲನಶಕ್ತಿ ಯಿಂದುಂಟಾದ ಆತನ ಆಧಿಪತ್ಯವು. ಈ ಸೃಷ್ಟಿಯೊಳಗಿನ ಎಲ್ಲವಸ್ತುಗಳ ಶರೀರಗಳೂ, ಎಲ್ಲ ಪ್ರಾಣಿಗಳ ಆಹಾರಗಳೂ ಈ ಪಂಚಮಹಾಭೂತಗಳೇ ಆಗಿದ್ದು, ಈ ಪಂಚಮಹಾಭೂತಗಳು ಇಲ್ಲದಹಾಗಾದರೆ, ಸೃಷ್ಟಿಯೇ ಇಲ್ಲದಹಾಗಾಗುವದರಿಂದ, ಈ ಪಂಚಮಹಾಭೂತಗಳೇ ಜಗತ್ತಿನ ಪಾಲ ನದ ಆದಿಕಾರಣವಾಗಿ ತೋರಿ, ಅವುಗಳ ಮುಖಾಂತರ ಪರಮಾತ್ಮನ ಸರ್ವೈಶ್ವರ್ಯವೆಂಬ ಗುಣವು ಪ್ರಕಟವಾಗುತ್ತದೆ. (೨) ಹೀಗೆ ವಿಶ್ವಕ್ಕೆ ಸರ್ವಾಧಾರವಾಗಿ ತೋರುವ ತಮ್ಮ ಆ ಧರ್ಮವನ್ನು ಪಂಚಮಹಾಭೂ ತಗಳು ಅಕೃತ್ರಿಮವಾಗಿಯೂ, ಅವಿಚ್ಛಿನ್ನವಾಗಿಯೂ ಪಾಲಿಸುತ್ತಿರುವದ ರಿಂದ, ಅವುಗಳ ಮುಖಾಂತರ ಪರಮಾತ್ಮನ ಧರ್ಮಸ್ವರೂಪವು ಪ್ರಕಟ ವಾಗುತ್ತಿರುವದು. (೩) ಹೀಗೆ ಈ ಪಂಚಮಹಾಭೂತಗಳು ಸೃಷ್ಟಿಯ ಕಾರಣವಾಗಿರುವವೆಂಬ ಇವುಗಳ ಯಶಸ್ಸು ಎಲ್ಲಕಡೆಗೆ ಪಸರಿಸಿರುವ ನೆವ ದಿಂದ, ಪರಮಾತ್ಮನ ಯಶಸ್ಸು ಇವುಗಳ ಮುಖಾಂತರ ವ್ಯಕ್ತವಾಗಿರು ವದು. (೪) ಶ್ರೀಃ ಅಥವಾ ಸಂಪತ್ತು ಅಂದರೆ ಸುಖಸಾಧನಗಳ ಅನು ಕೂಲ್ಯವು. ಸರ್ವ ಸುಖಸಾಧನಗಳ ಈ ಅನುಕೂಲತೆಯು ಪಂಚಮಹಾ ಭೂತಗಳಿಂದಲೇ ಉಂಟಾಗುವ ನೆವದಿಂದ, ಪರಮಾತ್ಮನ ಶ್ರೀಯು, ಅಥವಾ ಸಂಪತ್ತು ಅವುಗಳ ಮುಖಾಂತರ ಪ್ರಕಟವಾಗಿರುವದು. (೫) ಲೋಕಹಿತಕ್ಕಾಗಿಯೇ, ಅಂದರೆ ಪರೋಪಕಾರಕ್ಕಾಗಿಯೇ ಈ ಪಂಚ ಮಹಾಭೂತಗಳ ಅಸ್ತಿತ್ವವಿರುವದರಿಂದ, ಜ್ಞಾನದ ಪರಿಣಾಮವಾಗಿರುವ ಇವುಗಳ ಪರೋಪಕಾರಗುಣದ ಮೂಲಕ ಪರಮೇಶ್ವರನ ಜ್ಞಾನವು ಪ್ರಕ ಟವಾಗಿರುವದು. (೬) ಈ ಪಂಚಮಹಾಭೂತಗಳು ತಮ್ಮ ಈ ಬಗೆಯ

ಗೌರವಕ್ಕಾಗಿ ಯಾರಿಂದಲೂ, ಏನನ್ನೂ ಪ್ರತಿಫಲವಾಗಿ ಬಯಸದಿರುವದರಿಂದ, ಇವುಗಳಲ್ಲಿ ತೋರುವ ನಿಸ್ಪೃಹತೆಯ ಮುಖಾಂತರ ಪರಮಾತ್ಮನ ವೈರಾಗ್ಯವು ಪ್ರಕಟವಾಗಿರುವದು. ಹೀಗೆ ಪರಮಾತ್ಮನ ಷಡ್ಗುಣಗಳು ಪಂಚಮಹಾಭೂತಗಳ ಅಕೃತ್ರಿಮವೂ, ಅವಿಚ್ಛಿನ್ನವೂ ಆದ ಧರ್ಮಪಾಲನದಿಂದ ವ್ಯಕ್ತವಾಗುವದರಿಂದ "ಗುಣಾಃ ಪೂಜಾಸ್ಥಾನಂ ಗುಣಿಷುನ ಚಲಿಂಗಂ ನಚವಯಃ" ಎಂಬಂತೆ, ಆ ಪಂಚಮಹಾಭೂತಗಳನ್ನೇ ಆ ಪರಮಾತ್ಮನ ಪ್ರತೀಕವಾಗಿ, ಅಂದರೆ ಪ್ರತಿಮೆಯಾಗಿ ಇಟ್ಟುಕೊಂಡು, ಯಜ್ಞಯಾಗಾದಿಗಳ ರೂಪದಿಂದ ಅವುಗಳಲ್ಲಿಯ ಪರಮಾತ್ಮನ ಪ್ರೀತ್ಯರ್ಥವಾಗಿ ಉಪಾಸನೆಯನ್ನು ಅನಾದಿಕಾಲದಿಂದ ಧರ್ಮಿಷ್ಠರು ಮಾಡುತ್ತ ಬಂದಿರುವರು. ಈಗಿನ ಮೂರ್ತಿಪೂಜೆಯು ದೇಶ-ಕಾಲ-ಪರಿಸ್ಥಿತಿಗನುಸರಿಸಿ ಆದ ಒಂದುಬಗೆಯ ಈ ಉಪಾಸನೆಯ ರೂಪಾಂತರವೇಆಗಿರುವದು. ಹೀಗೆಪಂಚಮಹಾಭೂತಗಳಿಗೆ ಅವುಗಳ ಧರ್ಮಪಾಲನದ ಪ್ರತಿಫಲವಾಗಿ ಗೌರವಪ್ರಾಪ್ತಿಯಾಗಿರುವದಲ್ಲದೆ, ಯಾವಬಗೆಯ ಸಾಧನಸಂಪತ್ತೂ ಇಲ್ಲದ ಅವುಗಳಜೀವನಕ್ಕೆ ಅನಾಯಾಸದ ಅನುಕೂಲತೆಯೂ, ಅವುಗಳ ಸುಷುಪ್ತಾವಸ್ಥೆಯ ಚೇತನದಮೂಲಕ ಅವಕ್ಕೆ ಸುಖ-ದುಃಖ ಸಂವೇದನದ, ಹಾಗು ಆಧಿವ್ಯಾಧಿಗಳ ಅಭಾವವೂ ಬಹುಮಟ್ಟಿಗೆ ಅದೇ ಈಶ್ವರನ ಕೃಪೆಯಿಂದಲೇ ಉಂಟಾಗಿರಬಹುದು. ಅಂತೇ ಆ ಪಂಚಮಹಾಭೂತಗಳ ಧರ್ಮಪಾಲನವು ಅನಾದಿಕಾಲದಿಂದ ಅವಿಚ್ಛಿನ್ನವಾಗಿ ನಡೆಯುತ್ತ ಬಂದಿರುವದು !

(೨) **ದೇವರ ಹೆಳವ ಮಕ್ಕಳು**— ಇನ್ನು ಸಸ್ಯಗಳ ಸಂಬಂಧದ ಪರಮೇಶ್ವರನ ಸಮತೆಯನ್ನು ಕುರಿತು ವಿಚಾರಮಾಡುವಾ. ಇವಕ್ಕೆ ಬೇರು, ಬೊಡ್ಡೆ, ಹರಿ ಮುಂತಾದ ಅವಯವಗಳಿರುತ್ತವೆಂದು ಈ ಮೊದಲೆಹೇಳಿರುತ್ತದಷ್ಟೆ ? ಇಷ್ಟು ಅನುಕೂಲತೆಯನ್ನು ಹೊಂದಿದಕೂಡಲೆ ಆ ಸಸ್ಯಗಳು ತಮ್ಮಲ್ಲಿಯ ಜಾಗ್ರತ ಚೇತನದ ಜಾಗ್ರತಿಯನ್ನು ಕಾಯ್ದುಕೊಳ್ಳಬೇಕಾಗಲು, ಅವುಗಳಿಗೆ ಆಹಾರದ ಆವಶ್ಯಕತೆಯು ಉಂಟಾಯಿತು,ಆಗ ಅವು ತಮ್ಮ ಅವಯವರೂಪ ಇಂದ್ರಿಯಗಳಿಂದ ತಮ್ಮ ಆಹಾರವನ್ನು ಪಂಚಮಹಾಭೂತಗಳಿಂದ ಶೋಷಿಸಿಕೊಳ್ಳುವ ಆಯಾಸವನ್ನು ಪಡಬೇಕಾಯಿತು. ಅಲ್ಲದೆ, ಅವಕ್ಕೆ ಯೋಗ್ಯವಾದ ಹಾಗು ತಕ್ಕಷ್ಟು ಆಹಾರವು

ದೊರೆಯದಾದರೆ, ಅವು ರೋಗದ ಕಷ್ಟವನ್ನೂ, ಮೂಲತಃ ಆಹಾರವೇ ದೊರೆಯದಾದರೆ ಮರಣದ ಕಷ್ಟವನ್ನೂ, ಜನರು ತಮ್ಮನ್ನು ಕಡಿಯು ವಾಗ, ಕಿತ್ತುವಾಗ, ಹರಿಯುವಾಗ, ಕೊಯ್ಯುವಾಗ ಆಗುವ ಕಷ್ಟವನ್ನೂ ಸಹಿಸಬೇಕಾಗುವದು! ಇವೆಲ್ಲ ಉಪಾಧಿಗಳು ಅವುಗಳ ಬೆನ್ನುಹತ್ತಿ ದ್ದರಿಂದ, ಅವನ್ನು ನಿರ್ವಹಿಸುವಾಗ, ಅವುಗಳಲ್ಲಿ ಸ್ವಾರ್ಥವು ಉಂಟಾಗಿ ಅಷ್ಟರಮಟ್ಟಿಗೆ ಧರ್ಮಪಾಲನದಲ್ಲಿ ಅಂತರವಾಗುವದು; ಅಂತೇ ಧರ್ಮಪಾಲನದಲ್ಲಿ ಪಂಚಮಹಾಭೂತಗಳಿಗಿಂತಲೂ ಇವುಗಳ ಯೋಗ್ಯತೆಯು ಕಡಿಮೆಯಾದದ್ದರಿಂದ, ಆ ಮಾನದಿಂದ ಇವುಗಳ ಪೂಜ್ಯ ತೆಯೂ, ಪರಮಾತ್ಮನ ಗುಣಪ್ರದರ್ಶಕತೆಯೂ ಕಡಿಮೆಯಾದವು! ಆದರೂ ಈ ಸಸ್ಯಕೋಟಿಯು ಯಾವತ್ತು ಜಂಗಮಕೋಟಿಯ ಜೀವನಕ್ಕೆ ಪ್ರತ್ಯಕ್ಷ ವಾಗಿಯಾಗಲಿ, ಅಪ್ರತ್ಯಕ್ಷವಾಗಿಯಾಗಲಿ ಆಧಾರವಾಗಿರುವದರಿಂದ, ಇವೂ ಪಂಚಮಹಾಭೂತಗಳಂತೆಯೇ ಭಾವಿಕರಾದ ಕೃತಜ್ಞ ಧರ್ಮನಿಷ್ಠ ರಿಗೆ ಪೂಜ್ಯವಾಗಿಯೇ ಇರುವವು. ಒಟ್ಟಿಗೆ, ಪರಮೇಶ್ವರನು ಇವಕ್ಕೆ ಕಿಂಚಿತ್ ಅನುಕೂಲತೆಯೊದಗಿಸಿಕೊಟ್ಟುಕೂಡಲೆ, ಅಷ್ಟರಮಟ್ಟಿಗೆ ಅವು ಗಳ ಯೋಗಕ್ಷೇಮದ ವಿಷಯದ ತನ್ನ ಜವಾಬುದಾರಿಯನ್ನು ಕಡಿಮೆಮಾ ಡಿಕೊಂಡಿರುವನು; ಆದರೂ ಇವುಗಳ ಇಂದ್ರಿಯಗಳ ಕೊರತೆಯ ಮೂಲ ಕವಾಗಿಯೂ, ಇವುಗಳ ಹೆಳವತನದ ಮೂಲಕವಾಗಿಯೂ ಪರಮಾತ್ಮನು ದಯೆತಾಳಿ ಇವಕ್ಕೆ "ಕೂತಲ್ಲಿ ಮಣೆ, ನಿಂತಲ್ಲಿ ನೀರು" ಎನ್ನುವಂತೆ, ಇವು ಇದ್ದ ಸ್ಥಳದಲ್ಲಿಯೇ ಇವಕ್ಕೆ ಅನ್ನನೀರು ಸ್ವಾಭಾವಿಕವಾಗಿ ದೊರೆಯು ವಂತೆ ಋತುಮಾನಕ್ಕನುಸರಿಸಿ ವ್ಯವಸ್ಥೆಮಾಡಿರುವನು; ಮತ್ತು ಅನ್ಯ ಪ್ರಾಣಿಗಳು ಇವುಗಳ ಟೊಂಗೆ, ಎಲೆ ಮೊದಲಾದ ಅವಯವಗಳನ್ನು, ಅವು ಗಳ ಬೇರಿಗೆ ಅಪಾಯವಾಗದಂತೆ ನಷ್ಟಪಡಿಸಿದರೆ, ಆ ಅವಯವಗಳು ಮತ್ತೆ ಒಂದಕ್ಕೆ ಎರಡರಂತೆ ಅಭಿವೃದ್ಧಿಹೊಂದುವ ಸ್ಥಿತಿಯನ್ನು ಅವಕ್ಕೆ ದಯಪಾಲಿಸಿರುವನು. ಇವುಗಳಿಗೆ ಮಂದಮನೋವಿಕಾರಗಳಿರುವದರಿಂದ ಇವುಗಳ ಸುಖ-ದುಃಖಾನುಭವವೂ ಮಂದವಾಗಿಯೇ ಇರಬೇಕಾಗುವದು.

**(೩) ದೇವರ ಬುದ್ಧಿಗೇಡಿ, ಅಂದರೆ ದಡ್ಡ ಮಕ್ಕಳು**—ಇವಕ್ಕೆ ದೇವರು ಅಪೂರ್ಣಸ್ಥಿತಿಯ ಪಂಚ ಕರ್ಮೇಂದ್ರಿಯಗಳನ್ನೂ, ಪಂಚ

ಜ್ಞಾನೇಂದ್ರಿಯಗಳನ್ನೂ, ಮನಸ್ಸನ್ನೂ ಕೊಟ್ಟಿರುವನೆಂದು ಈ ಮೊದ
ಹೇಳಿದೆಯಷ್ಟೆ? ಇದರಿಂದ ಈ ಪ್ರಾಣಿಗಳು ಸ್ವೇಚ್ಛಾಗಮನ-ಸ್ವೇಚ್ಛಾಚಾ
ಗಳಿಂದ ತಮ್ಮ ಯೋಗಕ್ಷೇಮವನ್ನು ಸ್ವತಃ ಸಾಗಿಸಿಕೊಳ್ಳುವ ಯೋಗ್ಯ
ಯವಾಗಲು, ದೇವರು ಅವುಗಳಯೋಗಕ್ಷೇಮದ ತನ್ನ ಜವಾಬುದಾರಿಯನ್ನು
ಬಹುಮಟ್ಟಿಗೆ ಕಡಿಮೆಮಾಡಿಕೊಂಡಿರುವನು. ಈ ಪ್ರಾಣಿಗಳಿಗೆ ಸಸ್ಯಗಳಂತೆ
ಅವು ಇದ್ದಲ್ಲಿಯೇ ಆಹಾರವು ದೊರೆಯುವಂತೆ ಇರದ್ದರಿಂದ, ತಮ್ಮ ಆಹಾ
ರವನ್ನು ದೊರಕಿಸುವದಕ್ಕಾಗಿ ಅವು ಅರಣ್ಯದಲ್ಲಿ ತಿರುಗಿತಿರುಗಿ ಕಷ್ಟಪಡಬೇ
ಕಾಗುವದು. ಅವಕ್ಕೆ ಒಮ್ಮೊಮ್ಮೆ ಆಹಾರವುದೊರೆಯದಾಗಲು, ಅವು ಉಪ
ವಾಸದ ತಾಪವನ್ನು ಅನುಭವಿಸಬೇಕಾಗಬಹುದು. ಈ ಪ್ರಾಣಿಗಳಲ್ಲಿಯ
ಮಾಂಸಾಹಾರಿ ಪ್ರಾಣಿಗಳು ಸಜಾತೀಯವನ್ನು ಬಿಟ್ಟು ತಮ್ಮತಮ್ಮೊಳಗೆ
ಒಂದನ್ನೊಂದು ಆಹಾರವಾಗಿ ಉಪಯೋಗಿಸುತ್ತಿರುವದರಿಂದ, ಇವುಗ
ಳಲ್ಲಿ ಜೀವನಾರ್ಥಕಲಹವು ಯಾವಾಗಲೂ ನಡೆದಿರುವದು ; ಆತ್ಮರಕ್ಷಣೆ
ಕ್ಕಾಗಿ ಇವು ಬಹು ಎಚ್ಚರಪಡಬೇಕಾಗುವದು. ದುರ್ಬಲ ಸಾತ್ವಿಕಪ್ರಾ
ಣಿಗಳಿಗಂತು ಪ್ರಾಣಭಯವು ಬಹಳ. ಈ ಎಲ್ಲ ತೊಂದರೆಗಳಮೂಲಕ
ಇವುಗಳಲ್ಲಿ ಸ್ವಾರ್ಥವು ಸಸ್ಯಗಳಿಗಿಂತ ಹೆಚ್ಚು ಉತ್ಪನ್ನವಾಗುವದರಿಂದ,
ಧರ್ಮಪಾಲನವು ಸಸ್ಯಗಳಿಗಿಂತಲೂ ಇವುಗಳಲ್ಲಿ ಕಡಿಮೆಯಾಗಿರುವದು.
ಆದ್ದರಿಂದ ಇವುಗಳಲ್ಲಿ ಪರಮಾತ್ಮನ ಗುಣವೈಭವವು ಸಾರ್ವತ್ರಿಕವಾಗಿ
ವ್ಯಕ್ತವಾಗುವದು ಕಡಿಮೆ. ಇವುಗಳಲ್ಲಿ ಗೋಗಳಂಥ ಸಾತ್ವಿಕ ಪ್ರಾಣಿ
ಗಳ ಪರೋಪಕಾರಗುಣಕ್ಕಾಗಿ, ಅವು ಧರ್ಮಿಷ್ಠ ವೈದಿಕರಿಗೆ ಅತ್ಯಂತ
ಪೂಜ್ಯವಾಗಿರುವವು. ಒಟ್ಟಿಗೆ, ಈ ಪ್ರಾಣಿಗಳಿಂದ ಅನ್ಯರಿಗೆ ಉಪಕಾರ
ವಾಗುವದಕ್ಕಿಂತ ಅಪಕಾರವಾಗುವದೇ ಹೆಚ್ಚು. ಆದರೂ ದಯಾಲು
ವಾದ ದೇವರು ಇವುಗಳಲ್ಲಿಯ ಬುದ್ಧಿಯ ಕೊರತೆಗಾಗಿ ಇವಕ್ಕೆ ಬಹುತರ
ಆಹಾರದ ಕೊರತೆಯಾಗದಂತೆಯೂ, ಇವಕ್ಕೆ ರೋಗಬಾಧೆಗಳು ವಿಶೇಷ
ವಾಗಿ ಆಗದಂತೆಯೂ, ಅವುಗಳಿಂದ ಮಿತಿಯು ಮೀರಿ ಲೋಕಪೀಡೆಯು
ಆಗದಂತೆಯೂ ವ್ಯವಸ್ಥೆಮಾಡಿರುವನು. ಇದೇ ಅವುಗಳ ಹಾಗು ಲೋಕದ
ಹಿತವಾಗಿರುತ್ತದೆ.

**(೪) ದೇವರ ಬುದ್ಧಿವಂತ ಮಕ್ಕಳು**—ಇನ್ನು ಭೂಲೋಕದ ಉಚ್ಚಕೋಟಿಯವರಾದ ಮನುಷ್ಯರ ಸಂಬಂಧದಿಂದ ಪರಮೇಶ್ವರನು ತನ್ನ ಸಮತೆಯನ್ನು ಹೇಗೆ ಕಾಯ್ದುಕೊಂಡಿರುವನೆಂಬದನ್ನು ಕುರಿತು ವಿಚಾರಮಾಡೋಣ. ದೇವರು ಮನುಷ್ಯನಿಗೆ ಶ್ರೇಷ್ಠತರಗಳಾದ ಪರಿಪೂರ್ಣಸ್ಥಿತಿಯ ಐದು ಕರ್ಮೇಂದ್ರಿಯಗಳನ್ನೂ, ಐದು ಜ್ಞಾನೇಂದ್ರಿಯಗಳನ್ನೂ, ಮನಸ್ಸೆಂಬ ಅಂತರಿಂದ್ರಿಯವನ್ನೂ ಕೊಟ್ಟಿರುವನಲ್ಲದೆ, ತನ್ನ ಗುಣಾಂಶವಾದ ಬುದ್ಧಿಯನ್ನೂ, ತದಂಗವಾದ ಕಿಂಚಿತ್‌ಜ್ಞಾನ-ಕಿಂಚಿತ್ ಸ್ವಾತಂತ್ರ್ಯಗಳನ್ನೂ ಕೊಟ್ಟಿರುವನೆಂದು ಹಿಂದೆ ಹೇಳಿರುವದಷ್ಟೆ ? ಮನುಷ್ಯೇತರ ಚರಾಚರವಸ್ತುಗಳಲ್ಲಿ ಪರಮಾತ್ಮನ ಗುಣಗಳು ಎಷ್ಟು ವ್ಯಕ್ತವಾಗಿ ತೋರಿದರೂ, ಅವು ಆಯಾ ವಸ್ತುಗಳ ಸೊತ್ತಾಗಿರದೆ, ಆ ಗುಣಗಳು ಆ ವಸ್ತುಗಳೆಂಬ ಪೆಟ್ಟಿಗೆಯಲ್ಲಿ ಭದ್ರವಾಗಿಟ್ಟಿದ್ದ ದೇವರ ಸೊತ್ತಾಗಿರುತ್ತವೆ ; ಆದರೆ ಮನುಷ್ಯನ ಮಾತು ಹಾಗಲ್ಲ. ಆತನಲ್ಲಿರುವ ಬುದ್ಧಿಯು ಬಹುಪುಣ್ಯವನ್ನು ವೆಚ್ಚಮಾಡಿ ದೇವರಿಂದ ಆತನು ಸಂಪಾದಿಸಿದ ಸೊತ್ತಾಗಿರುವದು ! ಈ ತನ್ನ ಸ್ವಾರ್ಜಿತಸೊತ್ತಿನ ಸಹಾಯದಿಂದ ನರನು ಧರ್ಮಿಷ್ಠನಾಗಿ ಈಶ್ವರನಿಗೆ ಶರಣುಹೋಗಿ, ಧರ್ಮಪಾಲನರೂಪ ತಪಸ್ಸು ಮಾಡಿದರೆ ಆ ನರನು ಹೋಗಿ ನಾರಾಯಣನಾಗಲು, ಭಗವಂತನ ಷಡ್ಗುಣೈಶ್ವರ್ಯಸಂಪತ್ತು ಆತನಿಗೂ ಪ್ರಾಪ್ತವಾದಂತಾಗುವದು. ಇಂಥ ಸಾಧನ ಸಂಪತ್ತನ್ನು ದೇವರು ಮನುಷ್ಯನಿಗೆ ಕೊಟ್ಟಿರುವದರಿಂದ ಆ ಭಗವಂತನು ಮನುಷ್ಯನ ಯೋಗಕ್ಷೇಮದ ಯಾವ ಭಾರವನ್ನೂ ವಹಿಸದೆ, "ಯೇಯಥಾಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಂ" ಅಂದರೆ—"ನನ್ನ ವಿಷಯದಲ್ಲಿ ನೀನು ಹೇಗೋ, ನಿನ್ನ ವಿಷಯದಲ್ಲಿ ನಾನು ಹಾಗೆ" ಎಂಬ ಸಿದ್ಧಾಂತದಂತೆ ತಾನು ಆ ಮನುಷ್ಯಪ್ರಾಣಿಯ ವಿಷಯದಲ್ಲಿ ತಟಸ್ಥವೃತ್ತಿಯನ್ನು ತಾಳಿ ಇರುವನು ; ಮತ್ತು ಮನುಷ್ಯನಿಗೆ ಧರ್ಮಜ್ಞಾನವಾಗುವದಕ್ಕಾಗಿ ತಾನು ಬೇರೆಬೇರೆ ದೇಶಗಳಲ್ಲಿ ಬೇರೆಬೇರೆ ರೂಪಗಳಿಂದ ಅವತರಿಸಿ, ನಮ್ಮ ವೇದ, ಬೌದ್ಧರ ತ್ರಿಪಟಿಕಾ, ಪಾರ್ಶಿಗಳ ಝಂದಾವೆಸ್ತಾ, ಮುಸಲ್ಮಾನರ ಕುರಾಣ, ಕ್ರಿಶ್ಚನ್ನರ ಬಾಯಬಲ್ ಮುಂತಾದ ಧರ್ಮಗ್ರಂಥಗಳನ್ನು ಅವರವರಿಗೆ ಒದಗಿಸಿಕೊಟ್ಟಿರುವನು ! ಅಲ್ಲದೆ,

ಮನುಷ್ಯರ ನಡವಳಿಕೆಯ ಸ್ವರೂಪದಂತೆ, ಅವರವರ ಕರ್ಮದ ಫಲಗಳನ್ನು ಅವರವರಿಗೆ ಕೊಡುತ್ತ, ನಗುವವರನ್ನು ಅಳಿಸದೆ, ಅಳುವವರನ್ನು ನಗಿಸದೆ ಕೇವಲ ಸಾಕ್ಷೀಭೂತನಾಗಿ ತಾನು ಇದ್ದುಬಿಟ್ಟಿರುವನು! ದೇವರ ಈ ತಟಸ್ಥವೃತ್ತಿಯಮೂಲಕ ಮನುಷ್ಯನ ಯೋಗಕ್ಷೇಮದ ಭಾರವು ಮನುಷ್ಯನಮೇಲೆ ಬಿದ್ದು, ಅವಕ್ಕಾಗಿ ಮನುಷ್ಯನು ಕರ್ಮಾಸಕ್ತನಾಗಲೇ ಬೇಕಾಗಿ, ಆತನು ತನ್ನ ಕರ್ಮಾಸಕ್ತಿಯ ಮಾನದಂತೆ ಹೆಚ್ಚುಕಡಿಮೆ ಆಯಾಸಪಡಬೇಕಾಗುವದು!

ಮನುಷ್ಯನ ಈ ಕರ್ಮಾಸಕ್ತಿಯು ಮೂರುಬಗೆಯದಾಗಿರುವದು. ಕೆಲವರು ಧರ್ಮಾಧರ್ಮಗಳನ್ನು, ಅರ್ಥಾತ್ ದೇವರ ಭಯವನ್ನು ಲಕ್ಷಿಸದೆ, ಮನಸ್ಸಿಗೆ ಬಂದಂತೆ ನಡೆದು ವಿಷಯಭೋಗಮಗ್ನರಾಗಿ ಆ ಭೋಗದ ಅಭಿವೃದ್ಧಿಗಾಗಿಯೇ ವಿಷಯಗಳಲ್ಲಿ ಭಕ್ತಿಯನ್ನಿಟ್ಟು, ವಿಷಯಪ್ರಾಪ್ತಿಯ ಜ್ಞಾನವನ್ನು ಸಂಪಾದಿಸಿ, ಧರ್ಮದ ವಿಷಯದಲ್ಲಿ ವೈರಾಗ್ಯತಾಳಿ ಅಸತ್ಕರ್ಮಾಸಕ್ತರಾಗುವರು! ಇಂಥ ಉದ್ದಾಮರಿಗೆ, ಅಂದರೆ ಧರ್ಮಲಂಡ-ದೇವಲಂಡರಾದವರಿಗೆ, ಅವರ ಸ್ವೇಚ್ಛಾಕರ್ಮಸ್ವರೂಪಕ್ಕೆ ಅನುಗುಣವಾಗಿ, ಭಗವಂತನು ತನ್ನ ಗೀತೆಯಲ್ಲಿ—"ತಾನಹಂದ್ವಿಷತಃಕ್ರೂರಾನ್ ಸಂಸಾರೇಷು ನರಾಧಮಾನ್ । ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವಯೋನಿಷು" ಎಂದು ಹೇಳಿದಂತೆ, ಕೇವಲ ವಿಷಯಭೋಗಪ್ರಧಾನವೂ ಧರ್ಮಹೀನವೂ ಆದ ಆಸುರೀಯೋನಿಯಲ್ಲಿ, ಅಂದರೆ ತಿರ್ಯಗಾದಿ ತಮೋಗುಣಪ್ರಧಾನಯೋನಿಯಲ್ಲಿ ಜನ್ಮಕೊಡುವನು; ಯಾಕಂದರೆ ಇವರು ಧರ್ಮಹೀನವಾದ ನೀಚಯೋನಿಯಲ್ಲಿ ಜನ್ಮತಾಳಿ ಭವಚಕ್ರದಲ್ಲಿ ಪರಿಭ್ರಮಿಸುವದೇ ಶಾಸ್ತ್ರಕ್ಕೂ, ಯುಕ್ತಿಗೂ ಸಮ್ಮತವಾಗಿರುವದು! ಈ ಮಾತಿಗೆ ಭಾರತದಲ್ಲಿ ಬೇಕಾದಷ್ಟು ಉಕ್ತಿಗಳು ಆಧಾರವಾಗಿ ದೊರೆಯುವವು. ಇನ್ನು ಧರ್ಮದಲ್ಲಿ ಹಾಗು ದೇವರಲ್ಲಿ ಲಕ್ಷವಿಟ್ಟು, ಭಯಭಕ್ತಿಯುಳ್ಳವರಾಗಿ ಪರಮೇಶ್ವರನು ಇಷ್ಟಾರ್ಥಪ್ರದನೆಂದು ತಿಳಿದು, ಆತನಆಜ್ಞೆಯಾಗಿರುವ ತಮ್ಮತಮ್ಮ ಧರ್ಮದಂತೆ ಸಕಾಮುಕರ್ಮಗಳನ್ನು ಆಚರಿಸುವವರು, ತಮ್ಮ ಆ ಸತ್ಕರ್ಮದಿಂದ ಸಂಪಾದಿಸಿದ ಪುಣ್ಯದ ಮಾನದಿಂದ ಉಚ್ಚತರ ಐಹಿಕ ಭೋಗಗಳನ್ನಾಗಲಿ, ದೇವಾದಿಕರ ಲೋಕಗಳ ಪಾರತ್ರಿಕ ಉಚ್ಚತರ

ಭೋಗಗಳನ್ನಾಗಲಿ ಪಡೆದು, ಆ ಪುಣ್ಯವುತೀರುವತನಕ ಆ ಭೋಗಗಳನ್ನು ಭೋಗಿಸುವರು. ಆಸ್ತಿಕರಾದ ಸಕಾಮಕರ್ಮದವರಿಗೆ ಈ ಫಲದೊರೆಯುವದಾದರೂ ಶಾಸ್ತ್ರಸಮ್ಮತವೂ, ಯುಕ್ತಿಸಮ್ಮತವೂ ಆಗಿರುವದು. ಇನ್ನು ಬೇರೆ ಕೆಲವುಮಹಾತ್ಮರು ದೇವರಹೊರತು ಉಳಿದವೆಲ್ಲ ನಾಶವಂತವಾದದ್ದರಿಂದ, ದೇವರೇ ತಮಗೆ ಶ್ರೇಷ್ಠಗತಿಯಾಗಿರಲು, ಆತನ ಪ್ರೀತಿಗಾಗಿ ಸರ್ವಧರ್ಮಗಳನ್ನು ನಿಷ್ಕಾಮದಿಂದ ಆಚರಿಸಿ, ಧರ್ಮಸಮ್ಮತವಲ್ಲದ ಸ್ವರ್ಗಸುಖವನ್ನಾದರೂ ತಿರಸ್ಕರಿಸುತ್ತ, ತಮ್ಮ ಧರ್ಮಸಮ್ಮತ ಕರ್ಮಗಳ ಫಲಗಳನ್ನು ಬ್ರಹ್ಮಾರ್ಪಣಬುದ್ಧಿಯಿಂದ ಪರಮೇಶ್ವರನಿಗೆ ಅರ್ಪಿಸುವರು! ಅಂಥ ಧೀರೋದಾತ್ತರಿಗೆ ಪರಮೇಶ್ವರನು ಅವರವರ ಯೋಗ್ಯತೆ-ಅಭಿರುಚಿಗಳಿಗನುಸರಿಸಿ, ಬೌದ್ಧರ ನಿರ್ವಾಣವನ್ನೋ, ಜೈನರ ಅರ್ಹತ್‌ಪದವಿಯನ್ನೋ, ವಿಶಿಷ್ಟಾದ್ವೈತರ ತಾರತಮ್ಯರಹಿತ ಆನಂದವನ್ನೋ, ದ್ವೈತರ ತಾರತಮ್ಯಯುಕ್ತ ಆನಂದವನ್ನೋ, ಅದ್ವೈತರ ಸಮರಸತೆಯ ಅಖಂಡಾನಂದವನ್ನೋ, ಮತ್ತಾರಿಗೆ ಮತ್ತಾವಬಗೆಯ ಮುಕ್ತಿಯನ್ನೋ ದಯಪಾಲಿಸಿ, ಅವರ ಜೀವಿತ್ವದ ಸಾರ್ಥಕ್ಯವನ್ನುಂಟುಮಾಡುವನು! ಈ ಮಾತಾದರೂ ಶಾಸ್ತ್ರಕ್ಕೂ, ಯುಕ್ತಿಗೂ ಸಮ್ಮತವಾಗಿಯೇ ಇರುವದು!

ಹೀಗೆ ದೇವರೇ ತಟಸ್ಥನಾಗಿದ್ದು ಮನುಷ್ಯರಿಗೆ ಅವರವರ ಕರ್ಮದಂತೆ ಫಲಕೊಡುತ್ತ ಸಾಕ್ಷೀಭೂತನಾಗಿರುವಾಗ, ಎಡಸೆಯುವರ ಭೋಧದ ಹಿರಿಯತನವಾದರೂ ಮನುಷ್ಯನ ಮುಂದೆ ಏನು ನಡೆಯುವದು? ಆದ್ದರಿಂದ, ದೇವರಿರುವನು, ಕಾಲ-ಪರಿಸ್ಥಿತಿಗನುಸರಿಸಿ ಆತನು ಪ್ರಕಟಿಸಿರುವ ವಿವಿಧ ಧರ್ಮಪಂಥಗಳಿರುವವು; ಅದರಂತೆ ತನಗಿದ್ದ ಕಿಂಚಿತ್‌ಜ್ಞಾನ, ಕಿಂಚಿತ್ ಸ್ವಾತಂತ್ರ್ಯಗಳ ಯೋಗದಿಂದ ತನ್ನ ಬುದ್ಧಿಪ್ರಭಾವವನ್ನು ಉಪಯೋಗಿಸಿ ತನಗೆ ಬೇಕಾಗಿದ್ದದ್ದನ್ನು ಸಂಪಾದಿಸಲು ಮನುಷ್ಯನು ಸಮರ್ಥನಿರುವನು; ಅಂದರೆ, "ಆತ್ಮೈವಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ" ಎಂಬ ಉಕ್ತಿಯಂತೆ ಪತಿತನಾಗಲಿಕ್ಕೂ, ಉದ್ಧೃತನಾಗಲಿಕ್ಕೂ ಆತನಿಗೆ ಈಶ್ವರದತ್ತ ಜನ್ಮಸಿದ್ಧಹಕ್ಕು ಇರುವದು! ಆದ್ದರಿಂದ ಹೀಗೆ ಹಾಗೆ ಎಂದು ಯಾರಿಗೂ ಹೆಸರಿಡದೆ, ಯಾರನ್ನೂ ಅಭಿನಂದಿಸದೆ, ಯಾರನ್ನೂ ತಿರಸ್ಕರಿಸದೆ—ದೇವರ ಸ್ವರೂಪವನ್ನೂ, ಧರ್ಮದ ಸ್ವರೂಪ

ವನ್ನೂ, ಕರ್ಮದ ಸ್ವರೂಪವನ್ನೂ, ಕರ್ಮಗಳ ಗತಿಗಳ ಸ್ವರೂಪವನ್ನೂ ಉದಾಹರಣ ಪೂರ್ವಕವಾಗಿ ತಟಸ್ಥವೃತ್ತಿಯಿಂದ ಬೋಧಿಸುವದು ಜ್ಞಾನಿಗಳಿಗೆ ಸಮ್ಮತವಾದ ಕೆಲಸವಾಗಿರುತ್ತದೆ, ಅಂತಹ ಶ್ರೇಷ್ಠತರ ಬೋಧ ಗ್ರಂಥವೆಂದರೆ ಜಗತ್ತಿನಲ್ಲಿಯೇ ಮಿಗಿಲಾಗಿರುವ ಶ್ರೀ ವ್ಯಾಸಪ್ರಣೀತ ಮಹಾಭಾರತ ಗ್ರಂಥವೇ ಸರಿ! ಆ ಗ್ರಂಥವನ್ನು ಓದತೊಡಗುವದಕ್ಕಿಂತ ಮೊದಲು ವಾಚಕರಿಗೆ--"ಧರ್ಮವು, ಸರ್ವಮೂಲವೂ-ಸರ್ವಗತವೂ-ಸರ್ವ ಸಿದ್ಧಿಪ್ರದವೂ" ಎಂಬದನ್ನು ತೋರಿಸುವದಕ್ಕಾಗಿಯೇ ಪ್ರಸ್ತಾವನೆಯ ಆರಂಭದಲ್ಲಿ ಭಗವಂತನ ಅತ್ಯುತ್ಕೃಷ್ಟ ಬೋಧವನ್ನು ಆಧಾರವಾಗಿಟ್ಟುಕೊಂಡು, ಧರ್ಮದ ಸಂಬಂಧದಿಂದ ಇಷ್ಟು ಊಹಾಪೋಹವನ್ನು ಮಾಡಬೇಕಾಯಿತು!

**ಮಹಾಭಾರತದ ಮಹತ್ವ**—ಆ ಲೌಕಿಕ ಗ್ರಂಥದ ಮಹತ್ವವನ್ನು ನಮ್ಮಂಥ ಸಾಮಾನ್ಯರು ತಮ್ಮ ಪಾಮರವಾಣಿಯಿಂದ ಹೇಳುವದು ಶಕ್ಯವಲ್ಲ; ಆದ್ದರಿಂದ ಮಹಾತ್ಮರಾದ ಶ್ರೀ ವೇದವ್ಯಾಸರ ವಾಕ್ಯಗಳಿಂದಲೇ ಸ್ವಲ್ಪದರಲ್ಲಿ ಅದರ ದಿಗ್ದರ್ಶನಮಾಡುವೆವು--"ಮಹಾಭಾರತವು, ಅಜ್ಞಾನ ರೂಪವಾದ ಕತ್ತಲೆಯಿಂದ ಕುರುಡರಾದವರ ಕಣ್ಣು ತೆರೆಸುವ ಜ್ಞಾನರೂಪ ಅಂಜನದ ಕಡ್ಡಿಯಾಗಿರುವದು. ಇದರಲ್ಲಿ ಅನೇಕ ವಿಷಯಗಳ ಪ್ರತಿಪಾದನ ಮಾಡಿರುತ್ತದೆ. ವೇದರಹಸ್ಯ. ಅದರೊಳಗಿನ ಬೇರೆವಿಸ್ತಾರ, ಸಾಂಗೋಪಾಂಗ ಉಪನಿಷದಗಳು, ಇತಿಹಾಸಗಳು, ಪುರಾಣಗಳು, ಕಾಲದ ತ್ರಿವಿಧಸ್ಥಿತಿ, ಜರಾ-ಮೃತ್ಯು-ಭಯ-ವ್ಯಾಧಿ-ಅಸ್ತಿತ್ವ ಅಭಾವ ಇವುಗಳ ನಿಶ್ಚಯ, ಧರ್ಮಾಧರ್ಮವಿಚಾರ, ಆಶ್ರಮಗಳ ಲಕ್ಷಣಗಳು, ಚಾತುರ್ವರ್ಣ್ಯ-ತಪಶ್ಚರ್ಯ-ಬ್ರಹ್ಮಚರ್ಯಗಳ ಯಥಾಸ್ಥಿತವಿವೇಚನ, ಪುರಾಣದೊಳಗಿನ ಕಥಾನಿರ್ದೇಶ ಮೊದಲಾದ ಒಂದಲ್ಲ ಎರಡಲ್ಲ, ಹಲವು ವ್ಯಾಹಹಾರಿಕ-ನೈತಿಕ-ಆಧ್ಯಾತ್ಮಿಕ-ಶಾಸ್ತ್ರೀಯ ವಿಷಯಗಳ ವಿವೇಚನವಿರುವದು. ಭಾರತರೂಪವಾದ ದಿವ್ಯವೃಕ್ಷವು, ಶ್ರೇಷ್ಠ ಕವಿಗಳ ಆಧಾರ ಸ್ತಂಭವಾಗಿರುವದು ಈ ಗ್ರಂಥದಿಂದ ಭೂತಲದೊಳಗಿನ ರಸಿಕರ, ಹಾಗು ಜ್ಞಾನಸಂಪನ್ನರ ಅಖಂಡ ಉಪಜೀವನವಾಗುತ್ತಿರುವದು. ಮಹಾಭಾರತದಲ್ಲಿ ಒಂದು ಲಕ್ಷ ಶ್ಲೋಕಗಳಿರುವವು; ಅವುಗಳಲ್ಲಿ ಇಪ್ಪತ್ತು

ನಾಲ್ಕುಸಾವಿರ ಶ್ಲೋಕಗಳು ಭಾರತದ ಕಥೆಯನ್ನು ಹೇಳುವವು ; ಉಳಿದ ಎಪ್ಪತ್ತಾರುಸಾವಿರಶ್ಲೋಕಗಳು ಸಚ್ಛೀಲಪುರುಷರ ಮನೋವೇಧಕ ಕಥೆಗಳನ್ನೂ, ಹಲವು ತತ್ವಗಳನ್ನೂ ಬೋಧಿಸುವವು

ಒಟ್ಟಿಗೆ, ಈ ಮಹಾಭಾರತಗ್ರಂಥವು, ಮನಸ್ಸಿಗೆ ಶಾಂತಿಯನ್ನುಂಟುಮಾಡುವದೊಂದು ವ್ಯಾಸಪ್ರಣೀತ ಉಪನಿಷತ್ತೇ ಆಗಿರುವದು. ಈ ಗ್ರಂಥದೊಳಗಿನ ತತ್ವಗಳು ಅನಾದಿಸಿದ್ಧವಾಗಿದ್ದು, ಶ್ರೀ ವ್ಯಾಸರಂಥ ಜ್ಞಾನಿಗಳು ಆ ತತ್ವಗಳ ಕೇವಲ ಪ್ರವಚನಮಾತ್ರಮಾಡುವರು. ಪೂರ್ವದಲ್ಲಿ ದೇವತೆಗಳು ಭಾರತಗ್ರಂಥವನ್ನೂ, ಉಪನಿಷತ್ತುಗಳಿಂದ ಸಹಿತವಾದ ನಾಲ್ಕು ವೇದಗಳನ್ನೂ ತೂಗಿನೋಡಲು, ಭಾರತಗ್ರಂಥದ ತೂಕವೇ ಹೆಚ್ಚಾಯಿತು ! ಅಂದಿನಿಂದ ಈ ಗ್ರಂಥಕ್ಕೆ ಬರಿಯ "ಭಾರತ"ವೆಂದಲ್ಲ, "ಮಹಾಭಾರತ"ವೆಂಬ ಹೆಸರು ಬಂದಿತು ! ಈ ಗ್ರಂಥದಲ್ಲಿ ಯುದ್ಧಾದಿ ಭಯಂಕರ ವರ್ಣನೆಗಳಿರುವವು. ಅದರಂತೆ ಸ್ಥಳವಿಶೇಷದಲ್ಲಿ ಕುಟಿಲನೀತಿಯ ವರ್ಣನವೂ ಇರುವದು ; ಆದ್ದರಿಂದ ಧರ್ಮಾಧರ್ಮ ವಿವೇಕ, ಆತ್ಮಾನಾತ್ಮವಿಚಾರ ಇವುಗಳೊಡನೆ ಈ ಗ್ರಂಥದಲ್ಲಿ ಬೇರೆ ತ್ಯಾಜ್ಯವಿಷಯಗಳೂ ಕೂಡಿರುವದರಿಂದ, ವಿಷಮಿಶ್ರಿತ ಅನ್ನದಂತೆ ಈ ಗ್ರಂಥವು ತ್ಯಾಜ್ಯವೆಂದು ಕದಾಚಿತ್ ಯಾರಾದರೂ ಶಂಕಿಸಬಹುದು ; ಆದರೆ ಈ ಗ್ರಂಥದಲ್ಲಿ ಧರ್ಮಾಧರ್ಮ ವಿವೇಕ, ಪರಬ್ರಹ್ಮಪ್ರಾಪ್ತಿ ಇವುಗಳ ವಿವೇಚನವೇ ಮುಖ್ಯವಾಗಿದ್ದು, ಉಳಿದ ವಿಷಯಗಳು ಆ ಮುಖ್ಯವಿಷಯಗಳ ಸಾಧನೆಗಾಗಿಯೇ ವಿಸ್ತಾರವಾಗಿ ವಿವೇಚಿಸಲ್ಪಟ್ಟಿರುವವು. ಈ ಮುಖ್ಯವಿಷಯಗಳನ್ನು ಲಕ್ಷಿಸುವಾಗ ಉಳಿದ ಗೌಣವಿಷಯಗಳನ್ನು ಸರ್ವಥಾ ದುರ್ಲಕ್ಷಿಸತಕ್ಕದ್ದು. ಒಟ್ಟಿನಲ್ಲಿ ಹೇಳುವದೇನಂದರೆ–"ಮಹಾಭಾರತದಲ್ಲಿಲ್ಲದ್ದು ಜಗತ್ತಿನಲ್ಲಿಲ್ಲ, ಜಗತ್ತಿನಲ್ಲಿದ್ದದ್ದೆಲ್ಲ ಮಹಾಭಾರತದಲ್ಲಿರುತ್ತದೆ" ಎಂದು ಅನ್ನುವಷ್ಟು ಮಹಾಭಾರತ ಗ್ರಂಥವು ಮಹತ್ವದ್ದಾಗಿರುವದು.

**ಸಾಹಸದ ಉದ್ಯೋಗ ಪ್ರವೃತ್ತಿ**—ಭಾರತೀಯರಿಗೆ ಮಹಾಭಾರತ ಗ್ರಂಥವು ಬಹು ಪ್ರಾಚೀನ ಕಾಲದಿಂದ ಪ್ರಾಣಕ್ಕಿಂತಲೂ ಹೆಚ್ಚು ಪ್ರಿಯವಾದ ಗ್ರಂಥವಾಗಿತ್ತು ; ಅಂತೇ ಶ್ರದ್ಧೆಯಿಂದ ಆ ಮಹತ್ವದ ಗ್ರಂಥ

ದಲ್ಲಿಯು ತತ್ವಗಳ ಸೇವನಮಾಡುತ್ತ ಬಂದದ್ದರಿಂದ, ಕಾಲಕ್ಕನುಸರಿಸಿ ಭರತಭೂಮಿಯ ಮೇಲೆ ಎಂತಹ ಸಂಕಟಗಳೊದಗುತ್ತ ಬಂದರೂ, ಅದು ತನ್ನ ಸಂಸ್ಕೃತಿಯನ್ನು ಕಳೆದುಕೊಳ್ಳದೆ, ಸ್ವಾಭಿಮಾನದಿಂದ ತನ್ನ ಸಂಕಟಗಳನ್ನು ನೀಗಿ ತನ್ನ ವೈಶಿಷ್ಟ್ಯವನ್ನು ಕಾಯ್ದುಕೊಂಡು ಮತ್ತೆ ಮತ್ತೆ ತಲೆಯೆತ್ತುತ್ತಲೇ ಬಂದಿರುವದು; ಆದರೆ ಈಗಿನ ವಿಲಕ್ಷಣವಾದ ಕಾಲಮಹಿಮೆಯಿಂದ ಭಾರತೀಯರೇ ಭರತಭೂಮಿಯ ಸಂಸ್ಕೃತಿಯನ್ನು ನಷ್ಟಪಡಿಸಲಿಕ್ಕೆ ನಿಂತಿರುವದು ದುಃಖದ ಸಂಗತಿಯಾಗಿರುತ್ತದೆ! ಅವರು ಪರಸಂಸ್ಕೃತಿಯವರ ಶ್ರದ್ಧಾವಿನಾಶಕ ದುಷ್ಟ ಶಿಕ್ಷಣದಿಂದಲೂ, ಆ ಪರಸಂಸ್ಕೃತಿಯವರ ಅಶಾಂತಿಕಾರಕ ರಾಜಸಗುಣಪ್ರಧಾನ ಸಂಸ್ಕೃತಿ-ಕಾರ್ಯಪದ್ಧತಿಗಳ ಅವಲೋಕನದಿಂದಲೂ ಭ್ರಮಿಷ್ಟರಾಗಿ, ಭಾರತೀಯರಿಗೆಸ್ವಚ್ಛಂದಾಚರಣೆಯ ಚಟಹಚ್ಚಿ ಅವರನ್ನು ಅತಂತ್ರರಾಗಮಾಡತೊಡಗಿದ್ದಾರೆ. ಕಾಲಮಹಿಮೆಯಿಂದ ಭಾರತೀಯರು ಮೊದಲೇ ಧರ್ಮಾ-ಧರ್ಮಗಳ ವಿಚಾರವನ್ನು ಬಿಟ್ಟು ಸ್ವಚ್ಛಂದವೃತ್ತಿಯವರಾಗ ತೊಡಗಿರಲು, ಅದಕ್ಕೆ ಉತ್ತೇಜನಕೊಡುವವರೇ ಅದೇ ಕಾಲಮಹಿಮೆಯಿಂದ ಜಗದ್ಗುರುತ್ವವನ್ನು ಪಡೆದದ್ದರಿಂದ, ನಮ್ಮ ಭಾರತೀಯರ ಮನೆತನಗಳು ಹಾಳಾಗತೊಡಗಿದವು; ಸಮಾಜಗಳು ವಿಸ್ಖಲಿತವಾಗತೊಡಗಿದವು; ರಾಷ್ಟ್ರವು ಪರವಶವಾಗತೊಡಗಿತು! ಇಂಥಾ ತೌಳು ತಂತುಗಳಿಲ್ಲದ ಕುಟುಂಬ-ಸಮಾಜಗಳೇ ಘಟಕಗಳಾಗಿ ಉಳ್ಳ ಭಾರತೀಯರ ರಾಷ್ಟ್ರವು ಸ್ವಾತಂತ್ರ್ಯ ಸಂಪಾದಿಸುವ ಭರದಲ್ಲಿ. ಹುಡುಗರು ಕಟ್ಟುವ ಉಸುಗಿನ ಮನೆಯ ಪರಿಣಾಮವನ್ನೆಲ್ಲಿ ಹೊಂದುವದೋ ಎಂಬ ಭಯವು ಉತ್ಪನ್ನವಾಗುವ ಸಂಭವವು ವಿಶೇಷವಾಗಿರುತ್ತದೆ! ಉದ್ದೇಶವು ಒಳ್ಳೆಯದಿದ್ದ ಮಾತ್ರದಿಂದಾಗಲಿ, ಉದ್ದಿಷ್ಟ ಫಲಪ್ರಾಪ್ತಿಗಾಗಿ ದೇಹವನ್ನರ್ಪಿಸಲು ರಾಷ್ಟ್ರಕ್ಕೆ ರಾಶಿಯೇ ನಿಂತಮಾತ್ರದಿಂದಾಗಲಿ, ತಪ್ಪುಹಾದಿ ಹಿಡಿದಿದ್ದ ಪಕ್ಷದಲ್ಲಿ ಬೆಂಕಿಯಲ್ಲಿ ಹಾರಿಕೊಂಡಂತಾದರೆ, ಇಷ್ಟಾರ್ಥಪೂರ್ತಿಯಾಗುವದೊತ್ತಟ್ಟಿಗುಳಿದು, ಗುಡ್ಡಕ್ಕೆ ಕಲ್ಲು ಹೊತ್ತಂತಾಗಿ ದುರ್ಯೋಧನನಂತೆ ಸರ್ವನಾಶಕ್ಕೆಲ್ಲಿ ಗುರಿಯಾಗಬೇಕಾಗುವದೋ ಎಂಬ ಶಂಕೆಯು ಉತ್ಪನ್ನವಾದರೆ ಆಶ್ಚರ್ಯವಲ್ಲ! ಇಂಥ ವಿಷಮಕಾಲದಲ್ಲಿ ಶ್ರೀ ವೇದವ್ಯಾಸರಂಥ ಮಹರ್ಷಿಗಳ ವಿಚಾರಗಳನ್ನು ಕೇಳಿ

ಕೊಳ್ಳುವದು ಭಾರತೀಯರಿಗೆ ಹಿತವಾದೀತೆಂದು ತಿಳಿದು, ಭಗವಾನ್ ವೇದವ್ಯಾಸರ ಚರಣಗಳಿಗೇ ಶರಣುಹೋಗಿ "**ರಹಸ್ಯ ಪ್ರಕಾಶಕವಾದ ಸಚಿತ್ರ ಮಹಾ ಭಾರತಾಮೃತ**" ವೆಂಬ ಗ್ರಂಥವನ್ನು ಬರೆಯುವ ಅಶಕ್ಯ ಉದ್ಯೋಗಕ್ಕೆ ಕೈಹಾಕುವ ಸಾಹಸಮಾಡಿದಂತಾಗಿರುತ್ತದೆ!

**ಶ್ರೀ ಶೇಷಸದ್ಗುರುನಾಥನ ಬೆಂಬಲವು**—ಈಗ ನಾವು ಕೈಹಾಕಿದ ಕೆಲಸವು ಅಶಕ್ಯವಾದದ್ದೆಂಬದಕ್ಕೆ ಬೇರೆ ಸಾಕ್ಷಿಗಳೇ ಬೇಡ. ಆ ಪ್ರಚಂಡ ಭಾರತಗ್ರಂಥದ ಕರ್ತಾರರಾದ ಭಗವಾನ್ ವೇದವ್ಯಾಸರೇ ಅದರ ಪ್ರಸಾರದ ಚಿಂತೆಯಲ್ಲಿ ಮುಣುಗಿರುವಾಗ ಶ್ರೀ ಗಜಾನನನು ಕರುಣಿಸಿ ಸರ್ವ ವಿಘ್ನಗಳನ್ನು ದೂರಮಾಡಿ ಭಾರತವನ್ನು ಸಂಪೂರ್ಣವಾಗಿ ಬರೆದು ಮೂರು ವರ್ಷಗಳಲ್ಲಿ ಮುಗಿಸಬೇಕಾಯಿತು! ಅಂದಬಳಿಕ, ನಾವಂತು ಸಂಸಾರದೊಳಗಿನ ಹುಳಗಳು! ನಮಗೆ ಭಾರತದ ಪ್ರಸಿದ್ಧೀಕರಣವು ಅಶಕ್ಯವಾದರೆ ಆಶ್ಚರ್ಯವೇನು? ನಮ್ಮ ಆ ಅಶಕ್ಯಕಾರ್ಯಕ್ಕೆ ಮೂರು ಬಾಧೆಗಳಿದ್ದದ್ದು ಸ್ಪಷ್ಟವಾಗಿರುವದು—(೧) ಎರಡೇ ವರ್ಷಗಳಲ್ಲಿ ಭಾರತಾಮೃತವ ಮುಗಿಸಬೇಕೆಂದು ಮನೋರಾಜ್ಯಮಾಡುವ ನಮಗೆ ಅರವತ್ತೆರಡು ವರ್ಷಗಳ ವಯಸ್ಸಾಗಿರುವದು. (೨) ದೇವರ ದಯದಿಂದ ಆ ಗ್ರಂಥವು ಕನ್ನಡದಲ್ಲಿ ಬರೆದು ಮುಗಿದರೂ, ಅದನ್ನು ಪ್ರಸಿದ್ಧಗೊಳಿಸಲಿಕ್ಕೆ ಇಪ್ಪತ್ತು ಇಪ್ಪತ್ತೈದು ಸಾವಿರ ರೂಪಾಯಿಗಳಾದರೂ ಬೇಕಾಗುವವು. (೩) ಈವರೆಗೆ ಭಾರತವನ್ನು ಬರೆಯತೊಡಗಿರುವವರು ಬಹುಶಃ ಅದನ್ನು ಪೂರ್ಣಮಾಡಿರುವದಿಲ್ಲವೆಂಬವೊಂದು ದೊಡ್ಡ ಅಪಕೀರ್ತಿಯು ಆ ಕೆಲಸ ಮಾಡುವವರಿಗೆ ಗುಡ್ಡದಂತೆ ಅಡ್ಡಬರುತ್ತಿರುವದು! ಅಂದಬಳಿಕ ನಾವು ಕೈಕೊಂಡಿರುವ ಕಾರ್ಯವು ಅಶಕ್ಯವಾದದ್ದೆಂಬದರಲ್ಲಿ ಸಂಶಯವೇನು? ಆದರೆ ನಮಗೊದಗಿರುವ ಈ ಮೂರು ಬಾಧೆಗಳ ನಿವಾರಣಕ್ಕಾಗಿ ಶ್ರೀ ಶೇಷಸದ್ಗುರುನಾಥನು ಮೂರೇ ಅಲ್ಲ, ನಾಲ್ಕು ಬಲಗಳ ಅನುಕೂಲತೆಯನ್ನು ಒದಗಿಸಿಕೊಟ್ಟಿರುವದೊಂದು ಮಹಾ ಧೈರ್ಯವು ನಮಗಿರುತ್ತದೆ! ಆ ವಿಘ್ನನಿವಾರಕ ಬಲಗಳು ಯಾವವೆಂದರೆ—(೧) ಕೌಟುಂಬಿಕ ಅನುಕೂಲ್ಯದಬಲ, (೨) ಸಾಮಾಜಿಕ ಸಹಾನುಭೂತಿಯ ಬಲ, (೩) ಬ್ರಾಹ್ಮಣರ ಆಶೀರ್ವಾದ ಬಲ (೪) ಮಹಾಪುರುಷ ಸಂಶ್ರಯದ ಮಹಾಬಲ!

ಇವುಗಳಲ್ಲಿ ಮೊದಲನೆಯ ಬಲದಿಂದ ನನ್ನ ವಾರ್ಧಕ್ಯದೋಷದ ಪರಾಧೀನತೆಯ ಬಾಧೆಯೂ, ಎರಡನೆಯ ಬಲದಿಂದ ನನ್ನ ದ್ರವ್ಯಾಭಾವದ ಬಾಧೆಯೂ, ಇನ್ನೆರಡನೇ ಮಹಾಬಲಗಳಿಂದ ನನ್ನ ಆಯುರ್ಬಲಾರೋಗ್ಯಗಳು ಹೆಚ್ಚುವವಲ್ಲದೆ, ನನಗೊದಗಬಹುದಾಗಿರುವ ವಿಘ್ನಗಳ ಬಾಧೆಯೂ ದೂರವಾಗುವವೆಂದು ನಾನು ದೃಢವಾಗಿ ನಂಬಿರುತ್ತೇನೆ. ಮೇಲಾಗಿ ಕವಿಕುಲಗುರುವಾದ ಕಾಲಿದಾಸನು— "ಕ್ಷಣಮಪ್ಯವತಿಷ್ಠತೇ ಶ್ವಸನ್ ಯದಿ ಜಂತುರ್ನನು ಲಾಭವಾನಸೌ" ಎಂದು, ಅಂದರೆ— "ಪ್ರಾಣಿಯು ಕ್ಷಣಮಾತ್ರ ಉಸುರಾಡಿಸುವವನಾದರೂ ಸತ್ಕಾರ್ಯಪ್ರವೃತ್ತಿಯಿಂದ ಲಾಭವಂತನಾಗುವನೆಂ''ದು ಹೇಳಿರುವದರಿಂದ, ಭಗವಾನ್ ವೇದವ್ಯಾಸರ ಚರಣರಜಸ್ಸಿನ ಸೇವೆಯು ನನ್ನಿಂದ ಎಷ್ಟರಮಟ್ಟಿಗೇ, ಯಾವ ಬಗೆಯಿಂದಲೇ ಆಗಲಿ ಅದು ಲಾಭದಾಯಕವಾಗಲಿಕ್ಕಿಲ್ಲವೆ ? ಇನ್ನು ಸದ್ಗುರು ಕೃಪೆಯಿಂದ ನನಗೆ ಪ್ರಾಪ್ತವಾಗಿರುವ ನಾಲ್ಕುಬಗೆಯ ಬಲಗಳನ್ನು ಅತ್ಯಂತಕೃತಜ್ಞತೆಯಿಂದ ಇಲ್ಲಿ ಸ್ವಲ್ಪದರಲ್ಲಿಯೇ ಉಲ್ಲೇಖಿಸುವೆನು.

೧ **ಕೌಟುಂಬಿಕ ಆನುಕೂಲ್ಯ**— ಯಾವದೊಂದು ಕಾರ್ಯವು ಕೌಟುಂಬಿಕವಿರಲಿ, ಸಾಮಾಜಿಕವಿರಲಿ, ರಾಷ್ಟ್ರೀಯವೇ ಇರಲಿ, ಅದನ್ನು ಸಾಧಿಸುವದಕ್ಕಾಗಿ ಕುಟುಂಬದೊಳಗಿನವರೆಲ್ಲರೂ ತಮ್ಮತಮ್ಮ ಧರ್ಮಗಳಂತೆ ಆಚರಿಸಿ, ಪರಸ್ಪರ ಪ್ರೇಮಪಾಶದಿಂದ ಬದ್ಧರಾಗಿ ಕುಟುಂಬದ ಯಜಮಾನನ ತಂತ್ರಕ್ಕೆ ಒಳಗಾಗಿ ನಡೆಯುತ್ತಿದ್ದರೆ, "ಎತ್ತು ಎರೆಗೆಳೆದರೆ ಕೋಣಪ್ರ ಕೆರೆಗೆಳೆಯಿತೆಂ''ಬ ಗಾದೆಯಂತೆ ಆಗಿ, ಕುಟುಂಬವು ಕಸುವುಗೆಡಲು, ಅದರ ಕಾರ್ಯಕ್ಷಮತೆಯು ನಿಶ್ಚಯವಾಗಿ ಕುಗ್ಗುವದು. ಆದರೆ ಇಂಥ ಅನಿಷ್ಟಪ್ರಸಂಗವು ನಮ್ಮ ನಲವತ್ತುವರ್ಷಗಳ ವ್ಯವಹಾರದಲ್ಲಿ ಶ್ರೀ ಗುರುಕೃಪೆಯಿಂದ ನಮಗೆ ಬರಲಿಲ್ಲ. ಅಂತೇ ಆಗಡಿ ಆನಂದವನದಲ್ಲಿ ಇಪ್ಪತ್ತುಜನ ವಿದ್ಯಾರ್ಥಿಗಳು ಒಬ್ಬ ಅಧ್ಯಾಪಕರಿಂದ ಆರಂಭವಾದ ಸಂಸ್ಕೃತ ಪಾಠಶಾಲೆಯು, ಹನ್ನೊಂದುವರ್ಷಗಳಲ್ಲಿ ಎಂಭತ್ತುಜನ ವಿದ್ಯಾರ್ಥಿಗಳು ಎಂಟುಜನ ಅಧ್ಯಾಪಕರು ಉಳ್ಳದ್ದಾಗಲು, ಅದರ ಯೋಗಕ್ಷೇಮವನ್ನು ಸಾಗಿಸಿಕೊಂಡು ಹೋಗಲು ನಮ್ಮ ಬಡಕುಟುಂಬದವರು ಸದ್ಗುರುನಾಥನ ಬೆಂಬಲದಿಂದ ಸಮರ್ಥರಾದರು ; ಆ ಸದ್ಗುರು



ಶ್ರೀ ಶೀಷಸದ್ಗುರುನಾಥನು



ಗಳಗನಾಥರು ಸ್ಥಾಪಿಸಿದ ಶ್ರೀ ಶೇಷಾಚಲ ಸಂಸ್ಕೃತ ಪಾಠಶಾಲೆ

ನಾಥನು ಕರುಣಿಸಲು, ಏಳುಸಾವಿರ ಚಂದಾದಾರರವರೆಗೆ ಆಶ್ರಯ ಪಡೆದ "**ಶ್ರೀ ಶೇಷಾಚಲ ಸದ್ಬೋಧಚಂದ್ರಿಕೆ**"ಯ ಭಾರವನ್ನು ನಮ್ಮ ಕುಟುಂಬದವರು, ನಮ್ಮ ಪ್ರಿಯ ವಿದ್ಯಾರ್ಥಿಗಳ ಸಹಾಯದಿಂದ ವಹಿಸಲು ಸಮರ್ಥರಾದರು; ಈ ವ್ಯವಹಾರಗಳಿಗಾಗಿ ಸರಕಾರಿಯ ನೌಕರಿಯನ್ನು ಬಿಟ್ಟು ದೇಹದಂಡನಮಾಡುವ ಪ್ರಸಂಗವು ನನಗೆ ಬರಲು, ಅಂದಿನಿಂದ ಇಂದಿನವರೆಗೆ ಅಖಂಡ ಇಪ್ಪತ್ತು ಇಪ್ಪತ್ತೆರಡು ವರ್ಷಗಳಿಂದ ಪರಿಪರಿಯ ಕಷ್ಟ-ನಷ್ಟಗಳನ್ನು ಭೋಗಿಸುತ್ತ ನನ್ನ ಕುಟುಂಬದವರು ನನ್ನನ್ನು ಹಿಂಬಾಲಿಸಿ ಸತ್ಕಾರ್ಯಪ್ರವೃತ್ತರಾಗಿರುವರು! ಈಗಿನ ಮಹಾಭಾರತಾಮೃತದ ಆದಿಪರ್ವದಲ್ಲಿಯೇ ಹದಿನಾರು ಸುಂದರ ಚಿತ್ರಗಳನ್ನು ಸ್ವತಃ ಬರೆದುಹಾಕಿ, ಈವರೆಗೆ ಕನ್ನಡದಲ್ಲಿ ಯಾರೂ ಮಾಡದಿರುವ ಪುಸ್ತಕಾಲಂಕರಣದ ಕೆಲಸವನ್ನು ನಮ್ಮ ಹಿರಿಯ ಅಳಿಯಂದಿರಾದ ಶ್ರೀ ಮಲ್ಹಾರಿದೀಕ್ಷಿತಕಕ್ಕನವರು ಮನಃಪೂರ್ವಕ ಮಾಡಿದ್ದನ್ನು ಮನಸ್ಸಿನಲ್ಲಿ ತಂದರೆ, ನನ್ನ ಕುಟುಂಬದವರ ಅನುಕೂಲ್ಯವು ಸ್ಪಷ್ಟವಾಗುವದು! ಈ ಉದ್ಯಮಪ್ರಿಯರು, ಸತ್ಕುಲಪ್ರಸೂತರೂ, ಸಂಸ್ಕೃತಜ್ಞರೂ, ಕಲಾಕುಶಲರೂ, ಸದಾಚಾರಿಗಳೂ, ಪಾಪಭೀರುಗಳೂ, ಉತ್ತಮ ಲೇಖಕರೂ ಇರುವರು! ಇದರಂತೆ ನನ್ನ ಚಿಕ್ಕ ಮಗಳ ಗಂಡನೂ, ನನ್ನ ಸೋದರಳಿಯನೂ ಆದ ಚಿ॥ ಶಂಕರ ಮಲ್ಹಾರಿ ಜೋಶಿ ಎಂಬಾತನು ಅತ್ಯಂತ ಬುದ್ಧಿಶಾಲಿಯು, ಕಲ್ಪಕನು, ಕಾರ್ಯದಕ್ಷನು, ಜನಪ್ರಿಯನು, ಸನ್ಮಾರ್ಗೋನ್ಮುಖನು, ಲೇಖನಕಲೆಯ ಜೀವಾಳವುಳ್ಳವನು, ಎಲ್ಲ ಕೆಲಸಗಳಲ್ಲಿಯೂ ನನಗೆ ನೆರಳಿನಂತೆ ಅನುಕೂಲನಾಗಿರುವವನು ಇರುವನು. ಸದ್ಗುರು ಕೃಪೆಯಿಂದ ಈ ಇಬ್ಬರು ವಿವೇಕಿಗಳ ಸಹಾಯವು ನನಗೆ ಒದಗಿರುವದರಿಂದ, ನಾನು ಎಂತಹ ಕಾರ್ಯವನ್ನಾದರೂ ಪೂರಯಿಸಲು ಸಮರ್ಥನಾಗಿರುವೆನು; ಅಂದಬಳಿಕ ಮಹಾಭಾರತಾಮೃತದ ಕಾರ್ಯವನ್ನು ಇವರ ಸಹಾಯದಿಂದ ಸದ್ಗುರುನಾಥನು ನನ್ನಿಂದ ಯಾಕೆ ಪೂರ್ಣಮಾಡಿಸಲಿಕ್ಕಿಲ್ಲ?

**ಮಹಾಭಾರತಗ್ರಂಥಕ್ಕೆ ಇಬ್ಬರು ಮೊಮ್ಮಕ್ಕಳಬಲಿ**—ಅಗಡಿಯ ಆನಂದವನದ ಶ್ರೀಸದ್ಗುರು ಸನ್ನಿಧಿಯನ್ನು ಹೊಂದಿದಬಳಿಕ ಆತನ ಕೃಪೆಯಿಂದ ಮಕ್ಕಳೊಂದಿಗನಾದ ನಾನು, ಎಂಬತ್ತುಜನ ವಿದ್ಯಾರ್ಥಿಗಳ

ದೊಡ್ಡ ಕುಟುಂಬವನ್ನು ಸಾಗಿಸುತ್ತ ಬಂದಾಗ, ಅಖಂಡ ಇಪ್ಪತ್ತೈದು ವರ್ಷ ಬೇಕಾದಷ್ಟು ಕಷ್ಟ-ನಷ್ಟಗಳನ್ನು ಹೊಂದಿದರೂ, ಮರಣದುಃಖದ ಅನುಭವವು ನನಗೆ ಲೇಶವೂ ಒದಗಲಿಲ್ಲ; ಆದ್ದರಿಂದ ಗುರುಕೃಪೆಯ ಬಗ್ಗೆ ಒಂದುಬಗೆಯ ಅಹಂಕಾರವು ನನ್ನಲ್ಲಿ ಉಂಟಾಗಿತ್ತು! ಆದರೆ ಜನಕ ಮಹಾರಾಜನಂಥ ಜ್ಞಾನಿಶ್ರೇಷ್ಠನ ಅಹಂಕಾರವೂ ಕುಗ್ಗಿದ್ದು, ಶ್ರೀವೇಂಕಟೇಶ ಮಹಾತ್ಮ್ಯದಿಂದ ಗೊತ್ತಾಗುತ್ತಿರುವಾಗ, ನನ್ನಂಥ ಪಾಮರನ ಅಹಂಕಾರವು ಕುಗ್ಗದೆ ಹೇಗಿದ್ದೀತು? ಸುಖದುಃಖಗಳ ಮಿಶ್ರಾನುಭವವು ಸಂಸಾರದ ಲಕ್ಷಣವೇ ಆಗಿರುವದು. ನಾನು ಭಾರತಬರೆಯತೊಡಗಲು, ನನ್ನ ಚಿಕ್ಕಮಗಳಾದ ಚಿ! ಕು. ಸೌ. ಏಣಕ್ಕನು ಅಂದೇಶಪಟ್ಟು ನನಗೆ- "ಅಪ್ಪಾ, ಭಾರತಬರೆಯಬೇಡಪ್ಪಾ! ನಿನಗೆ ಬರೆಯಲಿಕ್ಕೆ ಬೇರೆ ಬುಕ್ಕುಗಳಿಲ್ಲವೆ?" ಎಂದು ಕೇಳಲು, ಅದಕ್ಕೆ ನಾನು ಸಹಜವಾಗಿ—"ತಂಗೀ, ದೇಹವು ಅಸ್ಥಿರವಲ್ಲವೆ? ಯೋಗವಿದ್ದಂತಾಗುತ್ತದೆ. ಅದಕ್ಕೆ ಅಂಜಬೇಕೇಕೆ? ಈಗ ಕನ್ನಡದಲ್ಲಿ ನಿಮ್ಮಂಥವರಿಗೆ ಓದಲಿಕ್ಕೆ ಸುಲಭ ಭಾರತವಾಗಬೇಕವ್ವಾ!" ಎಂಬರ್ಥದಿಂದ ಉತ್ತರಕೊಟ್ಟೆನು. ಕೂಡಲೆ ನನ್ನ ಆ ಪಿತೃಭಕ್ತ ಕೂಸಿನ ಮನಸ್ಸಿನಲ್ಲಿ—"ನಮ್ಮ ಅನಂತನು ಹೋಗಿ ಅಪ್ಪನ ಭಾರತವು ಮುಗಿಯಬಹುದೆ?" ಎಂಬ ಬರಬಾರದ ಅಮಂಗಲ ವಿಚಾರವು ತಟ್ಟನೆ ಮನಸ್ಸಿನಲ್ಲಿ ಬಂದುಬಿಟ್ಟಿತಂತೆ! ಕಾಲಕರ್ಮಸಂಯೋಗದಿಂದ ಆಕೆಯ ಆ ವಿಚಾರವೇ ನಿಜವಾಗಿ, ಆಕೆಯ ಚಿಕ್ಕಮಗ ಅನಂತನು ತನ್ನ ಎರಡುವರ್ಷ ಎರಡುತಿಂಗಳ ವಯಸ್ಸಿನಲ್ಲಿ, ನನ್ನ ಭಾರತಾಮೃತದ ವಿರಾಟಪರ್ವವು ಮುಗಿದು ಆದಿಪರ್ವದೊಳಗಿನ ಸರ್ಪಯಜ್ಞಪ್ರಸಂಗದ ಲೇಖನವು ನಡೆದಿರುವಾಗ, ತನ್ನ ತಾಯಿಯ ಮನಸ್ಸಿನ ಇಂಗಿತವನ್ನು ತಿಳಿದು ನಡೆಯುವ ಸತ್ಪುತ್ರನೆನಿಸಿ ಅಕಸ್ಮಾತ್ ನಮ್ಮೆಲ್ಲರನ್ನು ದುಃಖದಲ್ಲಿ ದೂಡಿ, ಪರಲೋಕಕ್ಕೆ ತೆರಳಿದನು! ಶಿವಶಿವ!! ನಮ್ಮ ಅನಂತನು ಸರ್ವಸಾಧರಣ ಹುಡುಗನಲ್ಲ, ತಾಯಿಯ ಹೊಟ್ಟೆಯಲ್ಲಿ ಮೂಡಿದಕೂಡಲೆ ಆಕೆಯಲ್ಲಿ ಸುವಿಚಾರ-ಸತ್ಸೇವೆಗಳ ಬಯಕೆಗಳನ್ನು ಉತ್ಪನ್ನಮಾಡಿದನು; ತಾಯಿಗೆ ಲೇಶವೂ ಪ್ರಸವವೇದನೆಯನ್ನುಂಟುಮಾಡದೆ, ಅಶೋಕರಾಜನು ಹುಟ್ಟಿದಹಾಗೆ ಹುಟ್ಟಿದನು; ಜೀನೆ ಬೇಸರಿಕೆಗಳಿಲ್ಲದೆ ನಯನಮನೋಹರ



ಗಳಗನಾಥರ ಕುಟುಂಬದ ಜನರು



ಭಾರತಬರೆಯುವ ಗಳಗನಾಥರು.

ನಾಗಿ ಬಹಭಹ ಬೆಳೆದನು; ಮೊದಲೇ ಕಲ್ಪಕಸ್ವಭಾವದ ನನ್ನ ಮನಸ್ಸಿನಲ್ಲಿ ಏನೇನೋ ಉದಾತ್ತಕಲ್ಪನೆಗಳನ್ನುಂಟುಮಾಡಿದನು ; ಆದರೆ ಆವೇಸಂಗತಿಗಳಿಂದ ನಮ್ಮೆಲ್ಲರ ಅಂತಃಕರಣವು ಆಜನ್ಮ ಕೊರೆಯುವಂತೆ ಮಾಡಿ, ಪರೋಪಕಾರಕ್ಕೆ ಬಲಿಯಾಗುವ ಮಹಾತ್ಮರ ಅನಾದಿಪದ್ಧತಿಯಂತೆ ನನ್ನ ಭಾರತಲೇಖನಕ್ಕೆ ಬಲಿಯಾಗಿ, ನಮ್ಮ ಅನಂತನು ನಮ್ಮನ್ನು ಬಿಟ್ಟು ಹೊರಟುಹೋಗಿಬಿಟ್ಟನು ! ಆ ಯೋಗಭ್ರಷ್ಟನು ತನ್ನ ಮರಣವ್ಯಥೆಯಲ್ಲಿಯೂ ತನ್ನ ವಾಡಿಕೆಯ ಯೋಗಾಸನವನ್ನು ಬಿಟ್ಟುಕುಳಿತುಕೊಳ್ಳಲಿಲ್ಲ ! ಆ ನಮ್ಮ ಪುಣ್ಯವಂತ ಅನಂತನು, ಇಲ್ಲಿ ಮುಂದೆ ಕೊಟ್ಟಿರುವ ನಮ್ಮ ಕುಟುಂಬದ ಚಿತ್ರಗಳಲ್ಲಿ ತನ್ನ ತಂದೆಯ ತೊಡೆಯಮೇಲೆ ಕುಳಿತಿರುವದನ್ನೂ, ತುಲಾಭಾರದಚಿತ್ರದಲ್ಲಿ ತನ್ನ ತಾಯಿಯ ಬಗಲಲ್ಲಿ ಕುಳಿತುಕೊಂಡಿರುವದನ್ನೂ, ಪೂಜ್ಯ ಬ್ರಹ್ಮವೃಂದದ ಚಿತ್ರದಲ್ಲಿ ನನ್ನ ಕೈಮೇಲೆ ಕುಳಿತುಕೊಂಡಿರುವದನ್ನೂ ನೋಡಿದರೆ, ನನಗೆ ಒಂದುಬಗೆಯ ಸಮಾಧಾನವೂ, ಹಿಡಿಸಲಾರದ ದುಃಖವೂ ಆಗುವವು ! ಇಷ್ಟಕ್ಕೆ ನಮ್ಮ ಚಿ|| ಕುಂ|| ಸೌ|| ಏಣಕ್ಕನ ದುಃಖವು ಮುಗಿಯಲಿಲ್ಲ. ನಮ್ಮ ಅನಂತನು ಕೈಬಿಟ್ಟು ಹೋದ ನಾಲ್ಕೇ ತಿಂಗಳಲ್ಲಿ ಹುಟ್ಟಿದ ಆಕೆಯ ತೇಜಸ್ವಿಯಾದ ಸದೃಢ ಇನ್ನೊಂದು ಗಂಡು ಕೂಸು, ಹುಟ್ಟಿದ ಇಪತ್ತುನಾಲ್ಕು ತಾಸುಗಳಲ್ಲಿ ದೇಹವನ್ನು ಬಿಟ್ಟು, ಗಾಯಕ್ಕೆ ಉಪ್ಪುತೊಡೆದಂತೆ ಮಾಡಿತು ! ದೈವಯತ್ನಕ್ಕೆ ಯಾರ ಉಪಾಯವು ? ಭಾರತಕ್ಕೆ ನಾನು ಬಲಿಯಾಗಬಹುದಾಗಿರುವಾಗ, ಹೀಗೆ ನನ್ನ ಇಬ್ಬರು ಮೊಮ್ಮಕ್ಕಳು ಬಲಿಯಾದದ್ದು ಯಾವ ನ್ಯಾಯವು ? ಆದರೆ ಸರ್ವೇಶ್ವರನ ಇಚ್ಛೆ ! ಆತನ ತಂತ್ರವು ಯಾರಿಗೆ ತಿಳಿಯಬೇಕು ?

೨ **ಸಾಮಾಜಿಕ ಸಹಾನುಭೂತಿ** — ಇಂತಹ ದುಸ್ತರ ಪುತ್ರವಿಯೋಗ ದುಃಖವನ್ನು ನುಂಗಿಕೊಂಡು, ನಮ್ಮ ಚಿ|| ಕುಂ|| ಸೌ|| ಏಣಕ್ಕನು ಸಮಾಧಾನದಿಂದ ತನ್ನ ಕರ್ತವ್ಯತತ್ಪರಳಾಗಿರುವಾಗ, ನಾನು ಭಾರತ ಬರೆಯುವ ಕೆಲಸವನ್ನು ಮುಂದಕ್ಕೆ ನಾಗಿಸಿರುವಲ್ಲಿ ಆಶ್ಚರ್ಯವೇನು ? ನನ್ನ ಕರ್ನಾಟಕವು ಮೂವತ್ತು ವರ್ಷಗಳಿಂದ ನನ್ನನ್ನು ಪ್ರೀತಿಸಿ ಸಂಭಾವಿಸುತ್ತ ಬಂದ ಉಪಕಾರಕ್ಕಾಗಿ, ದೇಹವಿರುವವರೆಗೆ ಹೀಗೆಯೇ ಸಂತತವಾಗಿ ಅದರ ಸೇವೆಮಾಡುವದು ನನ್ನ ಪವಿತ್ರ ಕರ್ತವ್ಯವಾಗಿ

ರುವದು! ನಮ್ಮ ಪ್ರಿಯ ಕನ್ನಡಿಗರು ನನ್ನ ಲೇಖಗಳ ಪ್ರತಿಫಲವಾಗಿ ಈವರೆಗೆ ಅರವತ್ತು ಎಪ್ಪತ್ತು ಸಹಸ್ರ ರೂಪಾಯಿಗಳನ್ನು ಕೊಟ್ಟು,ನಾನು ಕೈಕೊಂಡ ವಿದ್ಯಾದಾನಾದಿ ಪರೋಪಕಾರದ ಕಾರ್ಯಗಳಿಗೆ ಸಹಾಯಮಾಡಿರುವರು. ಈ ದ್ರವ್ಯಸಹಾಯವಲ್ಲದೆ ನಮ್ಮ ಮೈಸೂರು ಪ್ರಾಂತದ ಕನ್ನಡಿಗರು ನನ್ನನ್ನು ಸನ್ಮಾನಿಸಿದ್ದು ನನ್ನಲ್ಲಿ ವಿಲಕ್ಷಣ ಕಾರ್ಯೋತ್ಸಾಹವನ್ನುಂಟು ಮಾಡಿರುವದು. ಹೀಗೆ ನನ್ನನ್ನು ಪ್ರೋತ್ಸಾಹಿಸಿದ ಮೈಸೂರವರ ಎರಡು ಗೌರವದ ಸಂಸ್ಥೆಗಳು, ನನ್ನಲ್ಲಿ ಉತ್ಪನ್ನಮಾಡಿದ ಆತ್ಮವಿಶ್ವಾಸವನ್ನಂತು ನಾನು ಎಂದೂ ಮರೆಯುವದಿಲ್ಲ. ಅವರಲ್ಲಿ ಮೊದಲನೆಯ ಸಂಸ್ಥೆಯಾದ ಬೆಂಗಳೂರಿನಲ್ಲಿರುವ ಸಾಹಿತ್ಯಪರಿಷತ್ತು, ತಾರೀಖು ೧೦-೧೧-೧೯೩೭ನೆಯ ದಿವಸ ನನ್ನನ್ನು ಕುರಿತು ಪಡುವ ಅಭಿಪ್ರಾಯವನ್ನು ಕೃತಜ್ಞತೆಯಿಂದ ಇಲ್ಲಿ ಉಲ್ಲೇಖಿಸುವೆನು.

"ಮ|| ರಾ|| ಗಳಗನಾಥರವರು ಕನ್ನಡಭಾಷೆಯಲ್ಲಿ ಅನೇಕ ಪ್ರೌಢ ಗ್ರಂಥಗಳನ್ನು ರಚಿಸಿ ಅವುಗಳನ್ನು ಪ್ರಕಟಿಸಿ ಅವರು ಮಾಡಿರುವ ಕರ್ನಾಟಕ ವಾಙ್ಮಯ ಸೇವಾತಿಶಯಕ್ಕಾಗಿ ಅವರಿಗೆ ಎರಡುನೂರಾ ಐವತ್ತು ರೂಪಾಯಿಗಳ ಸಂಭಾವನೆಯನ್ನು ಕೊಡತಕ್ಕದ್ದು."

ಇನ್ನು ಎರಡನೆಯ ಗೌರವದ ಸಂಸ್ಥೆಯಾದ ಮೈಸೂರ ಮಹಾರಾಜರವರ ಕಾಲೇಜಿನ ಕರ್ನಾಟಕ ಸಂಘವು, ನನ್ನ ವಿಷಯದ ವಾತ್ಸಲ್ಯವನ್ನು ತಾಳಿ ನನ್ನನ್ನು ಮೈಸೂರಿಗೆ ಕರೆಸಿಕೊಂಡು, ಕೆಳಗಿನಂತೆ ಬಹುಮಾನದ ಪತ್ರಿಕೆಯನ್ನು ಕೊಟ್ಟು ನನ್ನಲ್ಲಿ ಅತ್ಯಂತವಾದ ಆತ್ಮವಿಶ್ವಾಸವನ್ನೂ, ಕಾರ್ಯೋತ್ಸಾಹವನ್ನೂ ಉಂಟುಮಾಡಿರುವದು. ಈ ವಿಶ್ವಾಸೋತ್ಸಾಹಗಳೇ ನನ್ನ ದುಃಖತಾಪಗಳನ್ನು ಕುಗ್ಗಒಡೆದು, "ಮಹಾಭಾರತಾಮೃತವನ್ನು" ಪುನಃ ಬರೆಯಹಚ್ಚಿದವೆಂದು ಕೃತಜ್ಞತೆಯಿಂದ ತಿಳಿಸುವೆನು! ಆ ಉದಾರಸಂಸ್ಥೆಯ ಘನವಂತರಾದ ಸದಸ್ಯರು ಶುಕ್ಲಸಂವತ್ಸರದ ಫಾಲ್ಗುಣ ಶುದ್ಧ ೩ ದಿವಸ ಕೊಟ್ಟಿರುವ ಮಾನಪತ್ರಿಕೆಯನ್ನಾದರೂ ಕೃತಜ್ಞತೆಯಿಂದ ಇಲ್ಲಿ ಕೊಟ್ಟಿರುತ್ತೇವೆ!

ಶ್ರೀಃ

ಶ್ರೀಮನ್

ವೇಂಕಟೇಶ ತಿರಕೊ ಕುಲಕರಣಿ ಗಳಗನಾಥರವರ ಸನ್ನಿಧಿಯಲ್ಲಿ
ಮೈಸೂರ ಮಹಾರಾಜರವರ ಕಾಲೇಜಿನ ಕರ್ನಾಟಕ ಸಂಘದ ಸದಸ್ಯರು
ವಿನಯದಿಂದ ಮಾಡಿದ ವಿಜ್ಞಾಪನೆಗಳು.

ಮಹನೀಯರೇ,

ಈಗ ಸುಮಾರು ಎರಡು ವರ್ಷಗಳಹಿಂದೆ ತಾವು ಬೆಂಗಳೂರಿನಲ್ಲಿ ಕೆಲವುದಿನ ನಿಂತಿದ್ದ ವೇಳೆಯಲ್ಲಿ ತಮ್ಮ ದರ್ಶನಲಾಭವು ಮೈಸೂರನಗರದ ನಮಗೂ ದೊರೆಯುವದೆಂದು ನಿರೀಕ್ಷಿಸಿಕೊಂಡಿದ್ದೆವು. ಅಂದು ಕೈಗೂಡದ ಹಾರೈಕೆ ನಮ್ಮ ಭಾಗ್ಯವಿಶೇಷದಿಂದ ಇಂದು ನೆರವೇರಿತು. ನಮ್ಮ ಪ್ರಾರ್ಥನೆಯನ್ನು ತಮಗೆ ಸಹಜವಾದ ಕರುಣೆಯಿಂದಲೂ, ಸೌಜನ್ಯದಿಂದಲೂ ಒಪ್ಪಿಕೊಂಡು, ತಾವು ಈಗ ಹಿಡಿದಿರುವ ಮಹಾಕಾರ್ಯಕ್ಕೆ ಒದಗತಕ್ಕ ವಿಚ್ಛೇದವನ್ನೂ, ದೂರಪ್ರಯಾಣದ ಶ್ರಮವನ್ನೂ ಗಮನಿಸದೆ, ಹಾವೇರಿಯಿಂದ ಇಲ್ಲಿಗೆ ತಾವುದಯಮಾಡಿಸಿ, ನಮ್ಮನ್ನು ಅನುಗ್ರಹಿಸಿರುವದಕ್ಕಾಗಿ ನಾವು ತಮಗೆ ಅತ್ಯಂತ ಕೃತಜ್ಞರಾಗಿದ್ದೇವೆ.

ನಮ್ಮ ಭಕ್ತಿಯನ್ನು ತಮಗೆ ನಿವೇದಿಸಲು ನಾವು ಉತ್ಸುಕರಾಗಿರುವುದಕ್ಕೆ ಮುಖ್ಯಕಾರಣವು ತಮ್ಮ ದೀರ್ಘವೂ, ಸಂತತವೂ ಆದ ಭಾಷಾಸೇವೆ. ಈಗ ಮೂವತ್ತು ವರ್ಷಗಳ ಹಿಂದಿನಿಂದಲೂ, ಕನ್ನಡಕ್ಕೆ ಈಗಿರುವ ಪುರಸ್ಕಾರವಿಲ್ಲದಿದ್ದ ಕಾಲದಿಂದಲೂ ತಾವು ನಮ್ಮ ಸಾಹಿತ್ಯದ ಏಳಿಗೆಗಾಗಿ ಶ್ರಮವನ್ನೆಣಿಸದೆ ದುಡಿಯುತ್ತಿದ್ದೀರಿ. ಸರಕಾರದ ಕೈಕೆಳಗೆ ತಾವು ಉಪಾಧ್ಯಾಯರಾಗಿದ್ದಾಗ ಸಾಹಿತ್ಯಸೇವೆಗೆ ಪೂರ್ಣಾವಕಾಶವು ಸಿಕ್ಕದಿದ್ದುದರಿಂದ, ಅಲ್ಲಿ ಇನ್ನೂ ಅಭಿವೃದ್ಧಿಗೆ ಬರುವಂತಿದ್ದರೂ ಆ ಪ್ರಯೋಜನವನ್ನು ಕಡೆಗಾಣಿಸಿ, ಕೆಲವುಜನ ವಿದ್ಯಾರ್ಥಿಗಳಿಗೆ ಮಾತ್ರ ದೊರೆಯುತ್ತಿದ್ದ ತಮ್ಮ ಉಪದೇಶಸಾಮರ್ಥ್ಯದ ಫಲವು ಮೊದಲು "ಸದ್ಬೋಧಚಂದ್ರಿಕೆ"ಯ ಮೂಲಕವೂ, ಈಚೆಗೆ "ಸದ್ಗುರು"ವಿನ ಮೂಲಕವೂ ದೇಶಕ್ಕೆಲ್ಲಾ ದೊರೆಯುವಂತೆ ಮಾಡಿದಿರಿ. ಮರಾಠಿ ಮೊದಲಾದವರ ಸಾಹಿತ್ಯಗಳ ರುಚಿಕರವಾದ ಅನೇಕ ಗ್ರಂಥಗಳ ರಸಪರಿಚಯವನ್ನು ತಾವು ಕನ್ನಡಿಗ

ರಿಗೆ ಮಾಡಿಕೊಟ್ಟಿದ್ದೀರಿ. ಮಹತ್ವವುಳ್ಳ ಅನೇಕ ಗ್ರಂಥಗಳನ್ನು ಸ್ವತಂತ್ರವಾಗಿ ರಚಿಸಿ, ಕನ್ನಡ ಸಾಹಿತ್ಯವನ್ನು ಅಲಂಕರಿಸಿದ್ದೀರಿ. ತಮ್ಮ ಸರಳವೂ, ಉದ್ದೀಪಕವೂ ಆದ ಗದ್ಯಶೈಲಿ ಹೊಸಗನ್ನಡಸಾಹಿತ್ಯದಲ್ಲಿ ಶ್ರೇಷ್ಠ ಪದವಿಯನ್ನು ಗಳಿಸಿರುತ್ತದೆ.

ತಮ್ಮ ಸುರಸ ಕಾದಂಬರಿಗಳು ಕನ್ನಡನಾಡಿನ ಮೂಲೆಮೂಲೆಗೂ ನುಗ್ಗಿ ಜನರಲ್ಲಿ ವಾಚನಾಭಿರುಚಿಯನ್ನು ಹಬ್ಬಿಸುತ್ತವೆ; ಓದಲು ಮನಸ್ಸಿಲ್ಲದವರನ್ನು ಕೂಡ ಆಕರ್ಷಿಸಿ ಅವರಿಗೆ ಕನ್ನಡದಲ್ಲಿ ಮಮತೆ ಹುಟ್ಟುವಂತೆ ಮಾಡುತ್ತಿವೆ. ತಾವು "ಕಮಲಕುಮಾರಿ" ಪ್ರಕಟಿಸುತ್ತಿದ್ದ ಕಾಲದಲ್ಲಿ "ಸದ್ಬೋಧ ಚಂದ್ರಿಕೆ"ಗೆ ಏಳುಸಾವಿರ ಜನ ಚಂದಾದಾರರು ಒದಗಿದರೆಂಬ ಒಂದು ವಿಷಯವೇ ತಮ್ಮ ಕೃತಿಗಳು ಕನ್ನಡಿಗರಿಗೆ ಎಷ್ಟು ಅಚ್ಚುಮೆಚ್ಚಾಗಿರುವವೆಂಬುದನ್ನು ಸಾರುತ್ತದೆ.

ತಮ್ಮ ಉಜ್ವಲವಾದ ಐತಿಹಾಸಿಕ ಕಾದಂಬರಿಗಳು ನಮ್ಮ ನಾಡಿನ ಗತವೈಭವವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿ, ನಮ್ಮ ದೇಶಪ್ರೇಮವನ್ನು ಉಕ್ಕಿಸುತ್ತಿವೆ. ಮಹಾರಾಷ್ಟ್ರವೀರರೂ, ರಾಜಪುತ್ರರಮಣಿಯರೂ, ಕನ್ನಡಕಲಿಗಳೂ ತಮ್ಮ ಲೇಖನಿಯ ಪ್ರಭಾವದಿಂದ ನಮ್ಮ ಸ್ಮೃತಿಮಂದಿರಲ್ಲಿದ ಶಾಶ್ವತವಾಗಿ ನೆಲಿಸಿದ್ದಾರೆ. ಅವರ ಸಾಹಸಗಳು ಇಂದಿಗೂ ನಮ್ಮಲ್ಲಿ ಧೈರ್ಯವನ್ನು ತುಂಬುತ್ತಿವೆ; ಪೌರುಷವನ್ನು ಹುರಿಗೊಳಿಸುತ್ತಿವೆ.

ಕನ್ನಡಿಗರಲ್ಲೆಲ್ಲ ಐಕಮತ್ಯ ಭಾವನೆಯನ್ನು ಬಲಪಡಿಸುವದರಲ್ಲಿ ತಮ್ಮ ಕಾದಂಬರಿಗಳಿಂದ ಸಹಾಯವು ದೊರೆತಿರುವದನ್ನು ಇಲ್ಲಿ ಹೇಳದಿರಲಾರೆವು. ಉತ್ತರ ಕರ್ನಾಟಕದೊಡನೆ ಬಳಕೆ ನಮ್ಮ ಮೈಸೂರಿನವರಿಗೆ ಮುಖ್ಯವಾಗಿ ಉಂಟಾದುದು, ಅಲ್ಲಿಯ ಲೇಖಕರಲ್ಲಿ ಅಗ್ರಗಣ್ಯರಾದ ತಮ್ಮ ಮೂಲಕವೆ. ಆ ಪರಿಚಯವನ್ನು ಮುಂದುವರಿಸುವದಕ್ಕಾಗಿ ತಾವು ಬೆಂಗಳೂರಿನಲ್ಲಿ ನಮ್ಮ ನಡುವೆ ಹಲವು ದಿನಗಳು ಇದ್ದ ವಿಷಯವನ್ನೂ ನಾವು ಸ್ಮರಿಸದಿರಲಾರೆವು.

ವಯಃಪರಿಣತಿಯಿಂದಲೂ, ಜ್ಞಾನಸಂಪತ್ತಿನಿಂದಲೂ, ಗ್ರಂಥಸಮೃದ್ಧಿಯಿಂದಲೂ ತಾವು ಅಖಿಲಕರ್ನಾಟಕಕ್ಕೆ ಪೂಜ್ಯರಾಗಿದ್ದೀರಿ; ಭೂಷಣವಾಗಿದ್ದೀರಿ. ಈ ವಯಸ್ಸಿನಲ್ಲಿ ಕೂಡ ತಾವು ಉತ್ಸಾಹದಿಂದಲೂ,

ಏಕನಿಷ್ಠೆಯಿಂದಲೂ ಮಾಡುತ್ತಿರುವ ಸಾಹಿತ್ಯಸೇವೆಯನ್ನು ನೋಡಿ ತರುಣರಾದ ನಾವೆಲ್ಲರೂ ನಾಚಿ ತಮ್ಮಿಂದ ಉದ್ಯೋಗಶೀಲತೆಯ ಪಾಠವನ್ನು ಕಲಿಯಬೇಕಾಗುತ್ತದೆ. ಆಗಡಿಯ ಶ್ರೀ ಶೇಷಾಚಲ ಸಾಧುಗಳ ಪವಿತ್ರ ಸಹವಾಸದಿಂದ ಪರಿಶುದ್ಧವಾದ ತಮ್ಮ ಜೀವನದ ಸುಪ್ರೇರಣೆ ನಮಗೂ ಒದಗುವಂತೆ ತಾವು ನಮ್ಮನ್ನು ಆಶೀರ್ವದಿಸಬೇಕು.

ಮಹನೀಯರೇ, ಜಗದೀಶ್ವರನು ತಮಗೆ ಆಯುರಾರೋಗ್ಯಭಾಗ್ಯಗಳನ್ನು ದಯಪಾಲಿಸಿ, ತಾವು ಕೈಕೊಂಡಿರುವ ದೇಶಭಾಷಾ ಸೇವೆಗಳು ಚಿರಕಾಲನಡೆದು ಅವುಗಳ ಫಲವನ್ನು ನಾವು ಸವಿಯುವಂತೆ ಅನುಗ್ರಹಿಸಲೆಂದು ನಾವು ಆತನನ್ನು ಭಕ್ತಿಯಿಂದ ಪ್ರಾರ್ಥಿಸುತ್ತೇವೆ.

ಈ ಬಗೆಯಾಗಿ ಕನ್ನಡನಾಡೂ, ಆ ನಾಡಿನೊಳಗಿನ ಗೌರವದ ಸಂಸ್ಥೆಗಳೂ ಪರಮವಾತ್ಸಲ್ಯದಿಂದ ನನ್ನನ್ನು ಎತ್ತಿಕೊಳ್ಳುತ್ತಿರುವಾಗ, ಕನ್ನಡ ಭಾಷಾಸೇವೆಯಲ್ಲಿ ನನಗೆ ಯಾತರ ಕೊರತೆಯುಂಟಾದೀತು ?

೩ ಬ್ರಾಹ್ಮಣರ ಆಶೀರ್ವಾದಪ್ರಾಪ್ತಿ—ಹೀಗೆ ಎರಡುಬಲಗಳ ಅನುಕೂಲ್ಯವು ನನಗಿರುವದಲ್ಲದೆ, ಕಳೆದ ವಿಭವಸಂವತ್ಸರದ ಪುಷ್ಯಕೃಷ್ಣ ಷಷ್ಠಿಯದಿವಸ ಆದ ನನ್ನ ಅರವತ್ತುವರ್ಷದ ಶಾಂತಿಯನಿಮಿತ್ತದಿಂದ, ನನಗೆ ಬ್ರಾಹ್ಮಣರ ಆಶೀರ್ವಾದದ ಅಲಭ್ಯಲಾಭದಯೋಗವು ಒದಗಿತು ! ಅನೇಕ ದೊಡ್ಡದೊಡ್ಡ ಸತ್ಪುರುಷರ ವಂಶಜರೂ, ಪ್ರಸಿದ್ಧ ವಿದ್ವಾಂಸರೂ, ಸತ್ಕರ್ಮಶೀಲರೂ ಆದ ವೇದಮೂರ್ತಿಗಳು ದಯಮಾಡಿಸಿ, ವೇದೋಕ್ತಾಶೀರ್ವಾದದಿಂದ ನನ್ನ ಆಯುರ್ವೃದ್ಧಿಯನ್ನು ಮಾಡಿ, ನನ್ನ ಜೀವನವನ್ನು ಪವಿತ್ರವಾಗಮಾಡಿದರು ! ಆ ಪೂಜ್ಯ ಬ್ರಹ್ಮವೃಂದವನ್ನು ಪೂಜಿಸುವ ಯೋಗ್ಯತೆಯಂತು ಇರಲಿ, ಅದನ್ನು ನಮಸ್ಕರಿಸುವ ಯೋಗ್ಯತೆಯೂ ನನಗಿರುವದಿಲ್ಲ. ಆದರೂ ನನ್ನನ್ನು ಅನುಗ್ರಹಿಸುವದಕ್ಕಾಗಿಯೇ— ಲೋಕಾಪುರದ ಶ್ರೀ ಜ್ಞಾನೇಶ್ವರ ಮಹಾರಾಜರು, ಬಡಲಿಯ ಶ್ರೀ ಚಿದಂಬರದೀಕ್ಷಿತರು, ಆನಂದವನದ ಶ್ರೀಗುರು ಪೌತ್ರ ಶ್ರೀ ದತ್ತಣ್ಣನವರು, ವಿದ್ವದ್ವರ್ಯ ಹಾನಗಲ್ಲ ಶ್ರೀ ಮಹಾದೇವಶಾಸ್ತ್ರಿಗಳು, ವಿದ್ವವೃದ್ಧ ನಾಗೇಶಶಾಸ್ತ್ರಿಗಳು, ರಾಣೇಬೆನ್ನೂರ ಶ್ರೀ ಪಾಪಾಶಾಸ್ತ್ರಿಗಳು, ಗುರ್ಲಹೊಸೂರ ಶ್ರೀ ಚಿಂತಾಮಣಿದೀಕ್ಷಿತರು, ಶ್ರೀ ಬಾಪುದೀಕ್ಷಿತರು, ಧಾರವಾಡ ಜಗದ್ಗುರು

ರಿಗೆ ಮಾಡಿಕೊಟ್ಟಿದ್ದೀರಿ. ಮಹತ್ವವುಳ್ಳ ಅನೇಕ ಗ್ರಂಥಗಳನ್ನು ಸ್ವತಂತ್ರವಾಗಿ ರಚಿಸಿ, ಕನ್ನಡ ಸಾಹಿತ್ಯವನ್ನು ಅಲಂಕರಿಸಿದ್ದೀರಿ. ತಮ್ಮ ಸರಳವೂ, ಉದ್ದೀಪಕವೂ ಆದ ಗದ್ಯಶೈಲಿ ಹೊಸಗನ್ನಡಸಾಹಿತ್ಯದಲ್ಲಿ ಶ್ರೇಷ್ಠ ಪದವಿಯನ್ನು ಗಳಿಸಿರುತ್ತದೆ.

ತಮ್ಮ ಸುರಸ ಕಾದಂಬರಿಗಳು ಕನ್ನಡನಾಡಿನ ಮೂಲೆಮೂಲೆಗೂ ನುಗ್ಗಿ ಜನರಲ್ಲಿ ವಾಚನಾಭಿರುಚಿಯನ್ನು ಹಬ್ಬಿಸುತ್ತವೆ; ಓದಲು ಮನಸ್ಸಿಲ್ಲದವರನ್ನು ಕೂಡ ಆಕರ್ಷಿಸಿ ಅವರಿಗೆ ಕನ್ನಡದಲ್ಲಿ ಮಮತೆ ಹುಟ್ಟುವಂತೆ ಮಾಡುತ್ತಿವೆ. ತಾವು "ಕಮಲಕುಮಾರಿ" ಪ್ರಕಟಿಸುತ್ತಿದ್ದ ಕಾಲದಲ್ಲಿ "ಸದ್ಬೋಧ ಚಂದ್ರಿಕೆ"ಗೆ ಏಳುಸಾವಿರ ಜನ ಚಂದಾದಾರರು ಒದಗಿದರೆಂಬ ಒಂದು ವಿಷಯವೇ ತಮ್ಮ ಕೃತಿಗಳು ಕನ್ನಡಿಗರಿಗೆ ಎಷ್ಟು ಅಚ್ಚುಮೆಚ್ಚಾಗಿರುವವೆಂಬದನ್ನು ಸಾರುತ್ತದೆ.

ತಮ್ಮ ಉಜ್ವಲವಾದ ಐತಿಹಾಸಿಕ ಕಾದಂಬರಿಗಳು ನಮ್ಮ ನಾಡಿನ ಗತವೈಭವವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿ, ನಮ್ಮ ದೇಶಪ್ರೇಮವನ್ನು ಉಕ್ಕಿಸುತ್ತಿವೆ. ಮಹಾರಾಷ್ಟ್ರವೀರರೂ, ರಾಜಪುತ್ರರಮಣಿಯರೂ, ಕನ್ನಡಕಲಿಗಳೂ ತಮ್ಮ ಲೇಖನಿಯ ಪ್ರಭಾವದಿಂದ ನಮ್ಮ ಸ್ಮೃತಿಮಂದಿರಲ್ಲಿದ ಶಾಶ್ವತವಾಗಿ ನೆಲಿಸಿದ್ದಾರೆ. ಅವರ ಸಾಹಸಗಳು ಇಂದಿಗೂ ನಮ್ಮಲ್ಲಿ ಧೈರ್ಯವನ್ನು ತುಂಬುತ್ತಿವೆ; ಪೌರುಷವನ್ನು ಹುರಿಗೊಳಿಸುತ್ತಿವೆ.

ಕನ್ನಡಿಗರಲ್ಲೆಲ್ಲ ಐಕಮತ್ಯ ಭಾವನೆಯನ್ನು ಬಲಪಡಿಸುವದರಲ್ಲಿ ತಮ್ಮ ಕಾದಂಬರಿಗಳಿಂದ ಸಹಾಯವು ದೊರೆತಿರುವದನ್ನು ಇಲ್ಲಿ ಹೇಳದಿರಲಾರೆವು. ಉತ್ತರ ಕರ್ನಾಟಕದೊಡನೆ ಬಳಕೆ ನಮ್ಮ ಮೈಸೂರಿನವರಿಗೆ ಮುಖ್ಯವಾಗಿ ಉಂಟಾದುದು, ಅಲ್ಲಿಯ ಲೇಖಕರಲ್ಲಿ ಅಗ್ರಗಣ್ಯರಾದ ತಮ್ಮ ಮೂಲಕವೆ. ಆ ಪರಿಚಯವನ್ನು ಮುಂದುವರಿಸುವದಕ್ಕಾಗಿ ತಾವು ಬೆಂಗಳೂರಿನಲ್ಲಿ ನಮ್ಮ ನಡುವೆ ಹಲವು ದಿನಗಳು ಇದ್ದ ವಿಷಯವನ್ನೂ ನಾವು ಸ್ಮರಿಸದಿರಲಾರೆವು.

ವಯಃಪರಿಣತಿಯಿಂದಲೂ, ಜ್ಞಾನಸಂಪತ್ತಿನಿಂದಲೂ, ಗ್ರಂಥಸಮೃದ್ಧಿಯಿಂದಲೂ ತಾವು ಅಖಿಲಕರ್ನಾಟಕಕ್ಕೆ ಪೂಜ್ಯರಾಗಿದ್ದೀರಿ; ಭೂಷಣವಾಗಿದ್ದೀರಿ. ಈ ವಯಸ್ಸಿನಲ್ಲಿ ಕೂಡ ತಾವು ಉತ್ಸಾಹದಿಂದಲೂ,

ಏಕನಿಷ್ಠೆಯಿಂದಲೂ ಮಾಡುತ್ತಿರುವ ಸಾಹಿತ್ಯಸೇವೆಯನ್ನು ನೋಡಿ ತರುಣರಾದ ನಾವೆಲ್ಲರೂ ನಾಚಿ ತಮ್ಮಿಂದ ಉದ್ಯೋಗಶೀಲತೆಯ ಪಾಠವನ್ನು ಕಲಿಯಬೇಕಾಗುತ್ತದೆ. ಅಗಡಿಯ ಶ್ರೀ ಶೇಷಾಚಲ ಸಾಧುಗಳ ಪವಿತ್ರ ಸಹವಾಸದಿಂದ ಪರಿಶುದ್ಧವಾದ ತಮ್ಮ ಜೀವನದ ಸುಪ್ರೇರಣೆ ನಮಗೂ ಒದಗುವಂತೆ ತಾವು ನಮ್ಮನ್ನು ಆಶೀರ್ವದಿಸಬೇಕು.

ಮಹನೀಯರೇ, ಜಗದೀಶ್ವರನು ತಮಗೆ ಆಯುರಾರೋಗ್ಯಭಾಗ್ಯಗಳನ್ನು ದಯಪಾಲಿಸಿ, ತಾವು ಕೈಕೊಂಡಿರುವ ದೇಶಭಾಷಾ ಸೇವೆಗಳು ಚಿರಕಾಲನಡೆದು ಅವುಗಳ ಫಲವನ್ನು ನಾವು ಸವಿಯುವಂತೆ ಅನುಗ್ರಹಿಸಲೆಂದು ನಾವು ಆತನನ್ನು ಭಕ್ತಿಯಿಂದ ಪ್ರಾರ್ಥಿಸುತ್ತೇವೆ.

ಈ ಬಗೆಯಾಗಿ ಕನ್ನಡನಾಡೂ, ಆ ನಾಡಿನೊಳಗಿನ ಗೌರವದ ಸಂಸ್ಥೆಗಳೂ ಪರಮವಾತ್ಸಲ್ಯದಿಂದ ನನ್ನನ್ನು ಎತ್ತಿಕೊಳ್ಳುತ್ತಿರುವಾಗ, ಕನ್ನಡ ಭಾಷಾಸೇವೆಯಲ್ಲಿ ನನಗೆ ಯಾತರ ಕೊರತೆಯುಂಟಾದೀತು?

೩ **ಬ್ರಾಹ್ಮಣರ ಆಶೀರ್ವಾದಪ್ರಾಪ್ತಿ**—ಹೀಗೆ ಎರಡುಬಲಗಳ ಅನುಕೂಲ್ಯವು ನನಗಿರುವದಲ್ಲದೆ, ಕಳೆದ ವಿಭವಸಂವತ್ಸರದ ಪುಷ್ಯಕೃಷ್ಣ ಷಷ್ಠಿಯದಿವಸ ಆದ ನನ್ನ ಅರವತ್ತುವರ್ಷದ ಶಾಂತಿಯಣೆವದಿಂದ, ನನಗೆ ಬ್ರಾಹ್ಮಣರ ಆಶೀರ್ವಾದದ ಅಲಭ್ಯಲಾಭದಯೋಗವು ಒದಗಿತು! ಅಗ ದೊಡ್ಡದೊಡ್ಡ ಸತ್ಪುರುಷರ ವಂಶಜರೂ, ಪ್ರಸಿದ್ಧ ವಿದ್ವಾಂಸರೂ, ಸತ್ಕರ್ಮಶೀಲರೂ ಆದ ವೇದಮೂರ್ತಿಗಳು ದಯಮಾಡಿಸಿ, ವೇದೋಕ್ತಾಶೀರ್ವಾದದಿಂದ ನನ್ನ ಆಯುರ್ವೃದ್ಧಿಯನ್ನು ಮಾಡಿ, ನನ್ನ ಜೀವನವನ್ನು ಪವಿತ್ರವಾಗಮಾಡಿದರು! ಆ ಪೂಜ್ಯ ಬ್ರಹ್ಮವೃಂದವನ್ನು ಪೂಜಿಸುವ ಯೋಗ್ಯತೆಯಂತು ಇರಲಿ, ಅದನ್ನು ನಮಸ್ಕರಿಸುವ ಯೋಗ್ಯತೆಯೂ ನನಗಿರುವದಿಲ್ಲ. ಆದರೂ ನನ್ನನ್ನು ಅನುಗ್ರಹಿಸುವದಕ್ಕಾಗಿಯೇ— ಲೋಕಾಪುರದ ಶ್ರೀ ಜ್ಞಾನೇಶ್ವರ ಮಹಾರಾಜರು, ಬಡಲಿಯ ಶ್ರೀ ಚಿದಂಬರದೀಕ್ಷಿತರು, ಆನಂದವನದ ಶ್ರೀಗುರು ಪೌತ್ರ ಶ್ರೀ ದತ್ತಣ್ಣನವರು, ವಿದ್ವದ್ವರ್ಯ ಹಾನಗಲ್ಲ ಶ್ರೀ ಮಹಾದೇವಶಾಸ್ತ್ರಿಗಳು, ವಿದ್ವವ್ರತ್ನ ನಾಗೇಶಶಾಸ್ತ್ರಿಗಳು, ರಾಣೇಬೆನ್ನೂರ ಶ್ರೀ ಪಾಪಾಶಾಸ್ತ್ರಿಗಳು, ಗುರ್ಲಹೊಸೂರ ಶ್ರೀ ಚಿಂತಾಮಣಿದೀಕ್ಷಿತರು, ಶ್ರೀ ಬಾಪುದೀಕ್ಷಿತರು, ಧಾರವಾಡ ಜಗಳ್ಳಳ್ಳು

ಪಾಠಶಾಲಾಧ್ಯಾಪಕ ಶ್ರೀ ಗುಂಡಶಾಸ್ತ್ರಿಗಳು, ಸುಪ್ರಸಿದ್ಧ ಕೀರ್ತನಕಾರರಾದ ಮುಳಗುಂದದ ಶ್ರೀ ರಾಮಶಾಸ್ತ್ರಿಗಳು, ಧಾರವಾಡದ ಟ್ರೇ. ಕಾ. ಕನ್ನಡಪಂಡಿತ ಮಹಾದೇವಶಾಸ್ತ್ರಿಗಳು, ಸವನೂರ ಅಪ್ಪಾಶಾಸ್ತ್ರಿಗಳು, ಸವನೂರ ಸುಪ್ರಸಿದ್ಧ ಶಿವರಾಮಜ್ಯೋತಿಷಿಗಳು, ರಾಣೇಬೆನ್ನೂರರ ಶ್ರೀನಿವಾಸಶಾಸ್ತ್ರಿಗಳು, ಅಗಡಿ ಆನಂದವನದ ವೇ. ರಾ ಸುಬ್ರಹ್ಮಣ್ಯಘನಪಾಠಿಗಳು, ಮುಳಗುಂದದ ಶ್ರೀ ಬನಪ್ಪಶಾಸ್ತ್ರಿಗಳು, ಹುಲಗೂರ ಶಹಡಂಬಿ ಶ್ರೀ ನಾರಾಯಣಶಾಸ್ತ್ರಿಗಳು, ಶ್ರೀ ದಾಮೋದರಭಟ್ಟ ಹಾವನೂರ, ಶ್ರೀ ರಾಮಭಟ್ಟ ಸತರಂಟೆ, ಶ್ರೀ ಚಿದಂಬರಭಟ್ಟ ಕೋಲಾರ ಮುಂತಾದ ಹಲವುಜನ ಮಹನೀಯರು ನನ್ನ ಮೇಲಿನ ಪರಮ ವಾತ್ಸಲ್ಯದಿಂದ ದಯಮಾಡಿಸಿದ್ದರು. ವಿದ್ವದ್ರತ್ನ ಶ್ರೀನಾಗೇಶಶಾಸ್ತ್ರಿಗಳವರು ತಮ್ಮ ಅಧಿಕಾರಸಂಪನ್ನ ವಿದ್ವತ್ಪ್ರಚುರ ಗಂಭೀರವಾಣಿಯಿಂದ—"ಗಾತುಂ ಯಜ್ಞಾಯ ಗಾತುಂಯಜ್ಞಪತಯೇ" ಇತ್ಯಾದಿ ಶ್ರುತಿವಾಕ್ಯಮೂಲವಾಗಿ— "ಈಶ್ವರೋಪಾಸನೆ—ಲೋಕಸೇವೆಗಳಲ್ಲಿ ಆಯುಷ್ಯಕಳೆಯುವವರ ಜೀವನವೇ ಜೀವನವು; ಅಂಥವರ ಆಯುರ್ವೃದ್ಧಿಗಾಗಿ ಯತ್ನಿಸುವದು ಪ್ರತಿಒಬ್ಬರ ಕರ್ತವ್ಯವು. ಆ ಕರ್ತವ್ಯಜಾಗ್ರತಿಯಿಂದಲೇ ಇಂತಹ ಬ್ರಹ್ಮವೃಂದವು ಕೂಡಿದ್ದಾಗಿರುವದು" ಎಂದು ಉಪೋದ್ಘಾತಮಾಡಿ, ಆಯುಷ್ಯದ ಸದುಪಯೋಗಮಾಡುವ ರೀತಿಯನ್ನು ಕುರಿತು ಒಂದುವರೆ ತಾಸು ಅಸ್ಖಲಿತ ಭಾಷಣಮಾಡಿದರು! ಗಂಗಾಪ್ರವಾಹದಂತೆ ಪವಿತ್ರವಾಗಿದ್ದ ಆ ವಿದ್ವದ್ವರ್ಯರ ವಾಗ್ಝರಿಯು ನಮ್ಮಂಥ ಪಾಮರರ ಮನಃಕಿಲ್ಬಿಷಗಳನ್ನು ತೊಳೆದುಕೊಂಡು ಹೋಯಿತು! ಅದರಂತೆ "ಪಂಡಿತ" "ಜ್ಯೋತಿರ್ಮಾರ್ತಂಡ" ಎಂಬ ಗೌರವದ ಉಪಪದಗಳುಳ್ಳ ರಿತ್ತಿ ಶ್ರೀ ಶಂಕರಶಾಸ್ತ್ರಿಗಳವರು ಷಷ್ಟಿಪೂರ್ತಿಶಾಂತಿಯ ಉದ್ದೇಶವನ್ನೂ, ಗ್ರಹಗಳಿಗೂ ಪ್ರಾಣಿಗಳಿಗೂ ಇರುವ ಸಂಬಂಧವನ್ನೂ, ಆ ಸಂಬಂಧಕ್ಕನುಸರಿಸಿ ಪ್ರಾಣಿಗಳಿಗುಂಟಾಗುವ ಇಷ್ಟಾನಿಷ್ಟಫಲಗಳನ್ನೂ ಕುರಿತು ಸ್ಪಷ್ಟವಾಗಿ ನಿರೂಪಿಸಿದರು. ಅದರಂತೆ ಸುಪ್ರಸಿದ್ಧ ಕೀರ್ತನಕಾರರೂ, ಉತ್ತಮವಾಗ್ಮಿಗಳೂ, ಯೋಜಕತೆಯ ಹುಟ್ಟುಗುಣವುಳ್ಳವರೂ, ವಿದ್ವಾಂಸರೂ, ಸಹೃದಯರೂ ಆದ ಮುಳಗುಂದದ ರಾಮಶಾಸ್ತ್ರಿಗಳವರು ಶ್ರೀಮಾರ್ಕಾಂಡೇಯ ಮಹಾಮುನಿಯ ಆಖ್ಯಾನವನ್ನು



ಗಳಗನಾಥರ ಷಷ್ಠಿಪೂರ್ತಿ-ಶಾಂತಿಕಾಲದಲ್ಲಿ ಕೂಡಿದ ಬ್ರಹ್ಮವೃಂದ



ಗಳಗನಾಥರ ಷಷ್ಟ್ಯಬ್ದಪೂರ್ತಿ ಶಾಂತಿಕಾಲದ ತುಲಾಭಾರವು.

ಹೇಳಿ, ಎರಡುವರೆ ತಾಸು ಶ್ರೋತೃವೃಂದವನ್ನು ತಟಸ್ಥವೃತ್ತಿಯಿಂದ ಆನಂದಗೊಳಿಸಿದರು! ಈ ಮಂಗಲಪ್ರಸಂಗದಲ್ಲಿ ನನ್ನ ಸರ್ವಾಧಾರರಾದ ಶ್ರೀ ಗುರುಪತ್ನೀ ಶ್ರೀ. ಗ. ಭಾ. ಮಾತೃಶ್ರೀ ರಾಧಾಬಾಯಿ ಕರಂದೀಕರ ಬಾಯಿ ಸಾಹೇಬರವರು ಸಪರಿವಾರ ಬಂದು ನನ್ನನ್ನು ಆಶೀರ್ವದಿಸಲಿಕ್ಕೆ ಮರೆಯಲಿಲ್ಲ. ಆ ಪ್ರಸಂಗದಲ್ಲಿ ಹಾವೇರಿಯ ಹೇಲಪಜನ ಸದ್ಗೃಹಸ್ಥರೂ, ನನ್ನ ಪರಮಮಿತ್ರರಾದ ಫೀಮೇಲ ಟ್ರೇನಿಂಗ ಕಾಲೇಜದ ಅಧ್ಯಾಪಕ ಮಿ. ತಮ್ಮಣ್ಣರಾವ ಅಮ್ಮಿನಭಾವಿಯವರೂ, ಸು. ರಾ. ರಾ. ಭೀಮರಾವ ಹಟ್ಟೀಕೇರಿಯವರೂ ಮ. ರಾ. ರಾ. ಶಿವನಾಗಪ್ಪನವರು ವಾಗ್ವಿಲಾಸ ಬುಕ್ ಡಿಪೋ ಹುಬ್ಬಳ್ಳಿ ಇವರೂ ಮಾಡಿದ ಸ್ನೇಹಾಭಿನಂದನ ಸತ್ಕಾರಗಳು ನನ್ನ ಜನ್ಮದಲ್ಲಿ ಮರೆಯುವಹಾಗಿಲ್ಲ.

**೪ ಮಹಾಪುರುಷ ಸಂಶ್ರಯ.**—ಶ್ರೀ ಗುರುಕೃಪೆಯ ಮುಂದೆ ಪ್ರಾರಬ್ಧದ ಆಟವು ನಡೆಯುವೆಂಬದೇ ಸಿದ್ಧವು. ಆಗಿನ ಶಾಂತಿಯಕಾಲದ ನನ್ನ ದೇಹದ ಅಶಕ್ತತೆಯನ್ನು ಮನಸ್ಸಿನಲ್ಲಿ ತಂದರೆ, ನಾನು ಈಗಿನಷ್ಟು ಗಟ್ಟಿಮುಟ್ಟಿಯಾಗಿ "ಮಹಾಭಾರತಾಮೃತ" ವನ್ನು ಬರೆಯತೊಡಗುವೆನೆಂದು ನಾನು ಭಾವಿಸಿದ್ದಿಲ್ಲ. ನನ್ನ ಪ್ರಾರಬ್ಧದ ದುಸ್ಥಿತಿಯು ಶ್ರೀ ಗುರುಕೃಪೆ–ಬ್ರಾಹ್ಮಣರ ಆಶೀರ್ವಾದ–ಕನ್ನಡಿಗರ ಪರಿಶುದ್ಧಪ್ರೇಮ ಇವುಗಳ ಯೋಗದಿಂದ ಅಳಿಸಿಹೋಯಿತೆಂದು ನಾನು ನಂಬಿರುವೆನು. ನನ್ನ ಈ ನಂಬಿಗೆಗೆ ಅಕಸ್ಮಾತ್ತಾಗಿ ಒದಗಿದ ಮಹಾಪುರುಷ ಸಂಶ್ರಯದ ಅಲಭ್ಯಯೋಗವು ಪರಿಪುಷ್ಟಿಯನ್ನುಂಟುಮಾಡುವದು! ಕೂಡಲಿ ಶೃಂಗೇರೀಪೀಠದ ಜಗದ್ಗುರು ಶ್ರೀ ನರಸಿಂಹಭಾರತೀ ಭಗವತ್ಪಾದರವರು, ತಮ್ಮ ವೃದ್ಧಾಪ್ಯ-ಅಶಕ್ತತೆಗಳ ಮೂಲಕ, ಪೀಠಾಧಿಕಾರವನ್ನು ಕಣ್ವಶಾಖೆಯ ಮುರಗೋಡ ಶ್ರೀಮಚ್ಚಿದಂಬರದೀಕ್ಷಿತರ ವಂಶಜರಾದ, ಕರ್ಕಿಹಳ್ಳಿ ಶ್ರೀ ಮಲ್ಹಾರಿದೀಕ್ಷಿತರಿಗೆ ಸನ್ಯಾಸದೀಕ್ಷಾಪೂರ್ವಕವಾಗಿ ಕೊಟ್ಟು, ಆ ಭಗವತ್ಪಾದರವರಿಗೆ "ಸುರೇಶ್ವರಶಂಕರಭಾರತೀ" ಎಂಬ ಹೆಸರನ್ನಿಟ್ಟರು! ಈ ಸಮಾರಂಭವು ಕಳೆದ ಶುಕ್ಲಸಂವತ್ಸರದ ಚೈತ್ರ ಕೃಷ್ಣ ೯ಯ ದಿವಸ ಶ್ರೀ ಶೇಷಸದ್ಗುರುನಾಥನ ಜಯಂತಿಯ ಕಾಲದಲ್ಲಿ ಹಾವೇರಿಯಲ್ಲಿ ಜರುಗಲು, ಆಗ ದಾಸಾನುದಾಸನಾಗಿ ಉಭಯ ಭಗವತ್ಪಾದರ ಸೇವೆಮಾಡುವ ಸುಪ್ರಸಂಗವು ನನಗೆ ಒದಗಿ,

ಮಹಾಪುರುಷ ಸಂಶ್ರಯದ ಪುಣ್ಯವು ಅನಾಯಾಸವಾಗಿ ಲಭಿಸಿತು! ಈ ಪೀಠದ ಪರಿಚಯವನ್ನು ಸ್ವಲ್ಪದರಲ್ಲಿ ಮಾಡಿಕೊಡುವದು ಪ್ರವಾಹಪ್ರಾಪ್ತವಾಗಿರುವದರಿಂದ, ಅದನ್ನು ಸಂಕ್ಷೇಪವಾಗಿ ಕೆಳಗೆ ಮಾಡಿಕೊಟ್ಟಿರುತ್ತದೆ.

ಶ್ರೀಮದಾದಿ ಶಂಕರಭಗವತ್ಪಾದ ಸ್ಥಾಪಿತ ಶ್ರೀ ಶೃಂಗೇರೀ ಪೀಠದ ಪ್ರಥಮಗುರು ಕಣ್ವಶಾಖೆಯ ಶ್ರೀ ಸುರೇಶ್ವರ ಭಗವತ್ಪಾದರವರಿಂದ ೪೬ನೆಯ ತಲೆಯವರಾದ ಶ್ರೀ ನರಸಿಂಹಭಾರತೀ ಮಹಾಸ್ವಾಮಿಗಳವರು, ಕಾಶೀಯಾತ್ರೆಯಿಂದ ತಿರುಗಿ ಶೃಂಗೇರಿಗೆ ಬರುವದರೊಳಗಾಗಿ ಮತ್ತೊಬ್ಬ ಮಹಾಸ್ವಾಮಿಗಳವರು ಪುಸ್ತಕಸನ್ಯಾಸದಿಂದ ಶ್ರೀ ಶೃಂಗೇರಿ ಜಗದ್ಗುರು ಪೀಠವನ್ನು ಅಲಂಕರಿಸಿದ್ದರು. ಆಗ ಶ್ರೀ ನರಸಿಂಹಭಾರತೀ ಮಹಾಸ್ವಾಮಿಗಳವರು ಕೂಡ್ಲಿಯಲ್ಲಿ ತಮ್ಮ ಜಗದ್ಗುರುಪೀಠವನ್ನು ಸ್ಥಾಪಿಸಲು, "ಕೂಡಲಿ ಶೃಂಗೇರೀ ಜಗದ್ಗುರುಪೀಠ"ವೆಂಬ ಹೆಸರಿನಿಂದ ಅವಿಚ್ಛಿನ್ನ ಗುರುಪರಂಪರೆಯು ಸಾಗುತ್ತ ಬಂದಿತು. ಈ ಮಹಾಸ್ವಾಮಿಗಳಿಗೆ ಹಾವನೂರ ಸಂಸ್ಥಾನಿಕನಾದ ಕಣ್ವಶಾಖೆಯ ದಾನಶೌಂಡ ಹನುಮಂತಗೌಡ ಬಹದ್ದರದೇಸಾಯಿ ಎಂಬ ಪುಣ್ಯವಂತನು "ಉದ್ದಗಟ್ಟಿ" ಎಂಬ ತುಂಗಾತೀರದ ಗ್ರಾಮವನ್ನು ದಾನವಾಗಿ ಕೊಟ್ಟು, ಅಲ್ಲಿ ಮಠವನ್ನು ಕಟ್ಟಿಸಿಕೊಡಲು, ಭಗವತ್ಪಾದ ಶ್ರೀ ನರಸಿಂಹಭಾರತೀ ಮಹಾಸ್ವಾಮಿಗಳ ವೃಂದಾವನವು ಉದ್ದಕಟ್ಟೆಯ ಮಠದಲ್ಲಿಯೇ ಆಗಿ, ಆ ಮಹಾಸ್ವಾಮಿಗಳು ಖಂಬದಸ್ವಾಮಿಗಳೆಂಬ ಹೆಸರಿನಿಂದ ಈಗಲೂ ಜಾಗ್ರತರಾಗಿದ್ದು, ಭಜಕರ ಇಷ್ಟಾರ್ಥಗಳನ್ನು ಪೂರಯಿಸುತ್ತಿರುವರು! ಆ ಮಹಾಸ್ವಾಮಿಗಳ ತರುವಾಯ ಮೂಲಪೀಠದಿಂದ ೬೦ನೇ ತಲೆಯವರಾದ ಶ್ರೀ ಶಂಕರಭಾರತೀ ಮಹಾಸ್ವಾಮಿಗಳವರು, ರಾಣೇಬೆನ್ನೂರ ವಿದ್ವದ್ವರ್ಯ ತಪಸ್ವಿ ಕೇಶವ ಶಾಸ್ತ್ರಿಗಳವರಿಗೆ ಪೀಠಪ್ರದಾನಮಾಡಿ, ಅವರಿಗೆ "**ನರಸಿಂಹಭಾರತೀ**" ಎಂಬ ನಾಮಾಭಿಧಾನ ಮಾಡಿದರು. ಬಳಿಕ ಅದೇ ಶ್ರೀ ನರಸಿಂಹಭಾರತೀ ಮಹಾಸ್ವಾಮಿಗಳು ಮತ್ತೊಬ್ಬ ಭಗವತ್ಪಾದರಿಗೆ ಪೀಠವನ್ನು ಕೊಟ್ಟರು. ಹೀಗಾಗಿ ಕೂಡಲೀ ಶೃಂಗೇರೀಪೀಠದ ಅವಿಚ್ಛಿನ್ನಪರಂಪರೆಯು ಮೊದಲನೇಸಾರೆ ಪೀಠಸ್ಥರಾದ ಶ್ರೀ ನರಸಿಂಹಭಾರತೀ ಮಹಾಸ್ವಾಮಿ (ಕೇಶವಶಾಸ್ತ್ರಿ)ಗಳಿಂದ ಸಾಗಿಬಂದಿತು. ಈ ಅವಿಚ್ಛಿನ್ನ ಗುರುಪರಂಪರೆಯಲ್ಲಿಯೇ



…ತಪ್ರದಾನ ಸಮಾರಂಭದಲ್ಲಿ ಶ್ರೀ ಮುಂಟ್ಲು ಶೃಂಗೇರಿಮಠದ ಜಗದ್ಗುರು
ನೃಸಿಂಹ ಭಾರತೀ ಸ್ವಾಮಿಗಳವರನ್ನು ಶಿಷ್ಯರಾದ ಸುರೇಶ್ವರ
ಶಂಕರ ಭಾರತೀ ಸ್ವಾಮಿಗಳವರು ಪೂಜಿಸಿದ್ದು.



ಪೀಠಪ್ರದಾನ ಸಮಾರಂಭದಲ್ಲಿ ಶ್ರೀ ಕೂಡ್ಲಿ ಶೃಂಗೇರಿಮಠದ ಜಗದ್ಗುರು
ನೃಸಿಂಹ ಭಾರತೀ ಸ್ವಾಮಿಗಳವರು, ಶಿಷ್ಯರಾದ ಶ್ರೀ ಸುರೇಶ್ವರ
ಶಂಕರ ಭಾರತೀ ಸ್ವಾಮಿಗಳವರನ್ನು ಪೂಜಿಸಿದ್ದು.

ಈಗಿನ ಶ್ರೀ ಸುರೇಶ್ವರ ಶಂಕರಭಾರತೀ ಮಹಾಸ್ವಾಮಿಗಳವರು ಮೂಲ ಪೀಠ ಪರಂಪರೆಯ ೬೫ನೇ ಸಂತತಿಯವರಾಗಿ ಅಧಿಕಾರಾರೂಢರಾಗಿರುವರು. ಈ ಅವಿಚ್ಛಿನ್ನ ಗುರುಪರಂಪರೆಯು, ಕೆಳಗಿನ ಸಂಕ್ಷಿಪ್ತ ವಂಶಾವಲಿಯಿಂದ ಸ್ಪಷ್ಟವಾಗಿ ತಿಳಿಯಬಹುದು.

ಶ್ರೀಮದಾದ್ಯ ಶಂಕರ ಭಗವತ್ಪಾದರವರಿಂದ ಸ್ಥಾಪಿತವಾದ
ಶ್ರೀ ಶೃಂಗೇರಿಯ ಆದ್ಯಪೀಠದ ಪರಂಪರೆಯು.

೧ನೇ ತಲೆಯವರು—ಶ್ರೀ ವಿಶ್ವರೂಪಭಾರತೀ (ಶ್ರೀಸುರೇಶ್ವರಾಚಾರ್ಯ)

೨೦ನೇ ತಲೆಯವರು—ಶ್ರೀ ವಿದ್ಯಾರಣ್ಯಭಾರತೀ (ಶ್ರೀ ಮಾಧವಾಚಾರ್ಯ ೧೩೩೭–೧೩೫೮)

|

ಕೂಡಲೀ ಶೃಂಗೇರಿ ಪೀಠಸ್ಥಾಪಕರು.

೪೬ನೇ ತಲೆಯವರು—ಶ್ರೀ ನರಸಿಂಹಭಾರತೀ (ಶ್ರೀ ಖಂಬದಸ್ವಾಮಿಗಳು ೧೫೪೭–೧೫೫೦)

|

೬೦ನೇ ತಲೆಯವರು—ಶ್ರೀ ನರಸಿಂಹಭಾರತೀ (ಶ್ರೀ ಕೇಶವಶಾಸ್ತ್ರಿಗಳು ೧೮೭೩–೧೮೯೭)

|

೬೩ನೇ ತಲೆಯವರು—ಶ್ರೀ ಶಂಕರಭಾರತೀ (ಶ್ರೀಹರಿಭಟ್ಟರು ೧೯೦೭–೧೯೧೪)

|

೬೪ನೇ ತಲೆಯವರು—ಶ್ರೀ ನರಸಿಂಹಭಾರತೀ (ಶ್ರೀ ಶಿವಭಟ್ಟರು ೧೯೧೪–೧೯೩೯)

|

೬೫ನೇ ತಲೆಯವರು—ಶ್ರೀ ಸುರೇಶ್ವರಶಂಕರಭಾರತೀ (ಶ್ರೀ ಮಲ್ಲಾರಿ ದೀಕ್ಷಿತ ೧೯೩೯)

|

**ಮಹಾಭಾರತಾಮೃತ ಲೇಖನಕ್ರಮ**— ಹೀಗೆ ಸದ್ಗುರುನಾಥನ ಪುಣ್ಯವಿಶೇಷದಿಂದ ಪ್ರಾಪ್ತವಾಗಿರುವ ನಾಲ್ಕು ಬಲಗಳ ಧೈರ್ಯದಿಂದ "ರಹಸ್ಯಪ್ರಕಾಶಕವಾದ ಸಚಿತ್ರ ಮಹಾಭಾರತಾಮೃತ"ದಂಥ ಲೇಖನ ಕಾರ್ಯಕ್ಕೆ ಕೈಹಾಕಿದ್ದಾಗಿದೆ. ಮೂಲ ಮಹಾಭಾರತದೊಳಗಿನ ದ್ವಿರುಕ್ತಿಯನ್ನು ಬಿಟ್ಟಿದ್ದರೂ, ದ್ವಿರುಕ್ತಿಯೊಳಗಿನ ವಿಶೇಷ ವಿಚಾರಗಳನ್ನು ಸಂಗ್ರಹಿಸಿ, ಯುದ್ಧವರ್ಣನ-ಪರ್ವತಾದಿ ಸೃಷ್ಟಿ, ಸೌಂದರ್ಯವರ್ಣನ-ಕ್ಷೇತ್ರವರ್ಣನಗಳಂಥ ಮಿತಿಮೀರಿ ಬೆಳೆದಿರುವ ವರ್ಣನಗಳನ್ನು ಕಡಿಮೆ

ರಹಸ್ಯಗಳ ಸಂಬಂಧವು ಒಂದಿಲ್ಲೊಂದು ಬಗೆಯಿಂದ ರಾಜಕೀಯ ವ್ಯವಹಾರಕ್ಕಿರುತ್ತದೆಂಬದನ್ನರಿತು, ಎಲ್ಲರಹಸ್ಯಗಳನ್ನು ಓದಿಯೇತೀರತಕ್ಕದ್ದು. ಹೀಗೆ ಮೊದಲು ಈ ರಹಸ್ಯಗಳನ್ನು ಓದುವವರಿಂದ ಭಾರತಾವಲೋಕನದ ಗೌರವವೂ, ಕುತೂಹಲವೂ ಹೆಚ್ಚುವವೆಂದು ನಾವು ಭಾವಿಸಿದ್ದೇವೆ. ಈ ಆದಿಪರ್ವದಲ್ಲಿ ಒಟ್ಟಿಗೆ ೫೩ ರಹಸ್ಯಗಳು ಬರೆದಿರುವವು. ಇಡಿಯ ಭಾರತದೊಳಗಿನ ರಾಜಕೀಯ ರಹಸ್ಯಗಳನ್ನು ಬರೆದಬಳಿಕ ಅವೆಲ್ಲವುಗಳ ಏಕೀಕರಣದಿಂದ "ಧರ್ಮಪರಿಪಾಲಿತ ನಿರ್ದುಷ್ಟ ಸ್ವರಾಜ್ಯ" ಎಂಬ ವಿಷಯವನ್ನು ಕುರಿತು ಒಂದು ರಾಜಕೀಯ ಮಾರ್ಗದರ್ಶಕ ಪುಸ್ತಕಬರೆಯುವ ವಿಚಾರವಿದೆ. ಈಶ್ವರೀಯೋಗವು ಹೇಗಿದೆಯೋ ನೋಡಬೇಕು.

**ಕೃತಜ್ಞತೆ**— ಈಗ ಮುದ್ರಿಸಿ ಸಿದ್ಧವಾಗಿರುವ ಆದಿಪರ್ವವು, ಶ್ರೀಲಕ್ಷ್ಮೀವೇಂಕಟೇಶನ ಕೃಪೆಯು, ಹಾಗು ಬಹುಜನ ಪುಣ್ಯಶಾಲಿಗಳು ಮಾಡಿರುವ ಸಹಾಯದ ಫಲವಾಗಿರುವದು! ಅವಶ್ಯಾಗಿ ನಾನು ಭಗವಚ್ಚರಣದಲ್ಲಿ ಭಕ್ತಿವಿನಮ್ರನೂ, ಆ ಪುಣ್ಯಶಾಲಿಗಳ ವಿಷಯದಲ್ಲಿ ಕೃತಜ್ಞನೂ ಆಗಿರುವೆನು. ಸದ್ಗುರುಪ್ರೇರಣೆಯಿಂದ ಶ್ರೀಲಕ್ಷ್ಮೀವೇಂಕಟೇಶನು ನನ್ನ ಆಯುರಾರೋಗ್ಯಭಾಗ್ಯಗಳನ್ನು ಕಾಯ್ದು, ನನ್ನ ಬುದ್ಧಿಯಲ್ಲಿ ಸತ್ಪ್ರೇರಣೆಯನ್ನುಂಟುಮಾಡದಿದ್ದರೆ, ಅಥವಾ ಆ ಉಳಿದ ಪುಣ್ಯಶಾಲಿಗಳು ನನಗೆ ಧನಾದಿಗಳ ಸಹಾಯವನ್ನು ಮಾಡದಿದ್ದರೆ ನನ್ನಿಂದ ಏನು ಕೆಲಸವಾಗುತ್ತಿತ್ತು? ಆದ್ದರಿಂದ "ಕೆರೆಯನೀರು ಕೆರೆಗೆ ಹಾಕಿ ವರವು ಪಡೆಯುವಂತೆ" ಶ್ರೀಲಕ್ಷ್ಮೀಪತಿಯ ಕೃಪಾವಿಶೇಷದಿಂದ ದೊರೆತಿರುವ ಈ ಆದಿಪರ್ವರೂಪ ತುಲಸೀಪತ್ರವನ್ನು, ಆ ಭಗವಂತನ ಚರಣಕ್ಕರ್ಪಿಸಿ, ಬರುವ ಫಲವನ್ನೆಲ್ಲ ಮನಃಪೂರ್ವಕವಾಗಿ ನನಗೆ ಸಹಾಯಮಾಡಿರುವ ಪುಣ್ಯಶಾಲಿಗಳ ವರ್ಗಕ್ಕೆ ನಾನಾದರೂ ಮನಃಪೂರ್ವಕವಾಗಿಯೇ ಅರ್ಪಿಸಿಬಿಡುವೆನು! ಈ ನನ್ನ ಸತ್ಸಮರ್ಪಣದ ಫಲದಿಂದ ನನ್ನ ಭಾರತಲೇಖನದ ಮುಂದಿನಕಾರ್ಯವು ನಿರ್ವಿಘ್ನವಾಗಿ ಸಾಗಿ ಅದು ಪೂರ್ಣವಾದರೆ, ನಾನು ಶ್ರೇಷ್ಠತರ ಪ್ರತಿಫಲದೊರೆತು ಕೃತಕೃತ್ಯನಾಗಿಯೇ ತೀರುತ್ತೇನೆ

**ನನಗೆ ಈಗ ಸಹಾಯಮಾಡಿದ ಪುಣ್ಯಶಾಲಿಗಳು**—ನನ್ನ ಈ ಮಹಾಭಾರತಾಮೃತದ ಲೇಖನಕಾರ್ಯವು ಭರದಿಂದ ಸಾಗಲಿಕ್ಕೆ ಅತ್ಯಂತ

ರಹಸ್ಯಗಳ ಸಂಬಂಧವು ಒಂದಿಲ್ಲೊಂದು ಬಗೆಯಿಂದ ರಾಜಕೀಯ ವ್ಯವಹಾರಕ್ಕಿರುತ್ತದೆಂಬದನ್ನರಿತು, ಎಲ್ಲರಹಸ್ಯಗಳನ್ನು ಓದಿಯೇತೀರತಕ್ಕದ್ದು. ಹೀಗೆ ಮೊದಲು ಈ ರಹಸ್ಯಗಳನ್ನು ಓದುವವರಿಂದ ಭಾರತಾವಲೋಕನದ ಗೌರವವೂ, ಕುತೂಹಲವೂ ಹೆಚ್ಚುವವೆಂದು ನಾವು ಭಾವಿಸಿದ್ದೇವೆ. ಈ ಆದಿಪರ್ವದಲ್ಲಿ ಒಟ್ಟಿಗೆ ೫೩ ರಹಸ್ಯಗಳು ಬರೆದಿರುವವು. ಇಡಿಯ ಭಾರತದೊಳಗಿನ ರಾಜಕೀಯ ರಹಸ್ಯಗಳನ್ನು ಬರೆದಬಳಿಕ ಅವೆಲ್ಲವುಗಳ ಏಕೀಕರಣದಿಂದ "ಧರ್ಮಪರಿಪಾಲಿತ ನಿರ್ದುಷ್ಟ ಸ್ವರಾಜ್ಯ" ಎಂಬ ವಿಷಯವನ್ನು ಕುರಿತು ಒಂದು ರಾಜಕೀಯ ಮಾರ್ಗದರ್ಶಕ ಪುಸ್ತಕಬರೆಯುವ ವಿಚಾರವಿದೆ. ಈಶ್ವರೀಯೋಗವು ಹೇಗಿದೆಯೋ ನೋಡಬೇಕು.

**ಕೃತಜ್ಞತೆ**— ಈಗ ಮುದ್ರಿಸಿ ಸಿದ್ಧವಾಗಿರುವ ಆದಿಪರ್ವವು, ಶ್ರೀಲಕ್ಷ್ಮೀವೇಂಕಟೇಶನ ಕೃಪೆಯು, ಹಾಗು ಬಹುಜನ ಪುಣ್ಯಶಾಲಿಗಳು ಮಾಡಿರುವ ಸಹಾಯದ ಫಲವಾಗಿರುವದು! ಅದಕ್ಕಾಗಿ ನಾನು ಭಗವಚ್ಚರಣದಲ್ಲಿ ಭಕ್ತಿವಿನಮ್ರನೂ, ಆ ಪುಣ್ಯಶಾಲಿಗಳ ವಿಷಯದಲ್ಲಿ ಕೃತಜ್ಞನೂ ಆಗಿರುವೆನು. ಸದ್ಗುರುಪ್ರೇರಣೆಯಿಂದ ಶ್ರೀಲಕ್ಷ್ಮೀವೇಂಕಟೇಶನು ನನ್ನ ಆಯುರಾರೋಗ್ಯಭಾಗ್ಯಗಳನ್ನು ಕಾಯ್ದು, ನನ್ನ ಬುದ್ಧಿಯಲ್ಲಿ ಸತ್ಪ್ರೇರಣೆಯನ್ನುಂಟುಮಾಡದಿದ್ದರೆ, ಅಥವಾ ಆ ಉಳಿದ ಪುಣ್ಯಶಾಲಿಗಳು ನನಗೆ ಧನಾದಿಗಳ ಸಹಾಯವನ್ನು ಮಾಡದಿದ್ದರೆ ನನ್ನಿಂದ ಏನು ಕೆಲಸವಾಗುತ್ತಿತ್ತು? ಆದ್ದರಿಂದ "ಕೆರೆಯನೀರು ಕೆರೆಗೆ ಹಾಕಿ ವರವು ಪಡೆಯುವಂತೆ" ಶ್ರೀಲಕ್ಷ್ಮೀಪತಿಯ ಕೃಪಾವಿಶೇಷದಿಂದ ದೊರೆತಿರುವ ಈ ಆದಿಪರ್ವರೂಪ ತುಲಸೀಪತ್ರವನ್ನು, ಆ ಭಗವಂತನ ಚರಣಕ್ಕರ್ಪಿಸಿ, ಬರುವ ಫಲವನ್ನೆಲ್ಲ ಮನಃಪೂರ್ವಕವಾಗಿ ನನಗೆ ಸಹಾಯಮಾಡಿರುವ ಪುಣ್ಯಶಾಲಿಗಳ ವರ್ಗಕ್ಕೆ ನಾನಾದರೂ ಮನಃಪೂರ್ವಕವಾಗಿಯೇ ಅರ್ಪಿಸಿಬಿಡುವೆನು! ಈ ನನ್ನ ಸತ್ಕರ್ಮದ ಫಲದಿಂದ ನನ್ನ ಭಾರತಲೇಖನದ ಮುಂದಿನಕಾರ್ಯವು ನಿರ್ವಿಘ್ನವಾಗಿ ಸಾಗಿ ಅದು ಪೂರ್ಣವಾದರೆ, ನಾನು ಶ್ರೇಷ್ಠತರ ಪ್ರತಿಫಲದೊರೆತು ಕೃತಕೃತ್ಯನಾದೆನೆಂದು ತಿಳಿಯುತ್ತೇನೆ.

**ನನಗೆ ಈಗ ಸಹಾಯಮಾಡಿದ ಪುಣ್ಯಶಾಲಿಗಳು**— ನನ್ನ ಈ ಮಹಾಭಾರತಾಮೃತದ ಲೇಖನಕಾರ್ಯವು ಭರದಿಂದ ಸಾಗಲಿಕ್ಕೆ ಅತ್ಯಂತ

ಸಹಾಯಕವಾಗಿರುವ ಮಹಾಭಾರತದ ಮರಾಠೀ ಸುರಸಭಾಷಾಂತರವೂ, ಶ್ರೀಕೃಷ್ಣರಾಜವಾಣೀವಿಲಾಸದ ಕನ್ನಡ ಭಾರತವೂ ದೊರೆತದ್ದಕ್ಕಾಗಿ ಕೃತಜ್ಞನಾಗಿರುವ ನಾನು, ಶ್ರೀಯುತ ಚಿಪಳೂಣಕರ ಮಂಡಲಿಯವರ, ಹಾಗು ಶ್ರೀಕೃಷ್ಣರಾಜ ವಾಣೀವಿಲಾಸದ ಪರಮೋಪಕಾರವನ್ನು ಸ್ಮರಿಸುವೆನು. ಅದರಂತೆ ಪ್ರೂಫುಗಳನ್ನು ನೋಡುವಾಗ ಆಗುತ್ತಿರುವ ಸಹಾಯಕ್ಕಾಗಿ ವೇ. ಶಾ. ರಾ. ರಾ. ಗಣಪತಿಶಾಸ್ತ್ರಿ ಶಂಕರಭಟ್ಟ ಸರ್ಪಕರ್ಣೇಶ್ವರ, ಹಾಗು ಚಿ| ಶಂಕರ ಮಲ್ಹಾರಿಜೋಶಿ ಇವರ ಅಭೀಷ್ಟವನ್ನು ಚಿಂತಿಸುವೆನು. ಚಿ| ಜೋಶಿ ಇವರ ವಿವಿಧ ಪರಿಶ್ರಮದ ಸಹಾಯವು ಸಂಸ್ಮರಣೀಯವಾಗಿದ್ದು, ಅದು ನನಗೆ ಕಾರ್ಯದಲ್ಲಿ ಒಂದುಬಗೆಯ ಧೈರ್ಯವನ್ನು ಉಂಟು ಮಾಡುತ್ತಿರುವದು! ಇವರು ಪ್ರೂಫು ನೋಡುತ್ತ ನೋಡುತ್ತ ಭಾರತ ಮುಗಿಯುವದರೊಳಗಾಗಿ ಲೇಖಕರಾಗುವ ಲಕ್ಷಣವು ತೋರುತ್ತಿರುವದು! ಇದರಂತೆ ರಹಸ್ಯಲೇಖನದ ಚರ್ಚೆಯಲ್ಲಿಯೂ, ಮೂಲಭಾರತ ನೋಡುವ ವಿಷಯದಲ್ಲಿಯೂ ನಮ್ಮ ಆ ತರುಣಗಣಪತಿಶಾಸ್ತ್ರಿಗಳ ಸಹಾಯವು ಚನ್ನಾಗಿ ಆಗುತ್ತಿರುತ್ತದೆ. ಈ ಶಾಸ್ತ್ರೀಗಳು ವಿದ್ವಾಂಸರೂ, ಕಲ್ಪಕರೂ, ವಾದಧುರೀಣರೂ, ಕರ್ತೃತ್ವಶಾಲಿಗಳೂ, ತಿಂಗಳೊಪ್ಪತ್ತಿನಲ್ಲಿಯೂ ಶಾಸ್ತ್ರಜ್ಞಾನ ಪಡೆಯುವಷ್ಟು ಸ್ವಾವಲಂಬಿಗಳೂ ಇರುವರು! ಇದಲ್ಲದೆ ಈ ಆದಿಪರ್ವದಲ್ಲಿ ಹಾಕಿರುವ ಸುಂದರವಾದ ಹದಿನಾರು ಚಿತ್ರಗಳನ್ನು ಮನೆಯವರಾದ ಶ್ರೀ ಮಲ್ಹಾರಿದೀಕ್ಷಿತ ಕಕ್ಕನವರ ಇವರು ಸ್ವತಂತ್ರವಾಗಿ ಬರೆಯುದಿದ್ದರೆ, ಭಾರತದ ಅಲಂಕರಣದ ಕೆಲಸವು ಸರ್ವಥಾ ನನ್ನಿಂದ ಆಗುತ್ತಿದ್ದಿಲ್ಲವೆಂದು ಈ ಮೊದಲೆ ಹೇಳಿದೆ! ಇವರು ಇಡಿಯ ಭಾರತದೊಳಗಿನ ತಮ್ಮ ಚಿತ್ರಗಳನ್ನೆಲ್ಲ ಒಟ್ಟುಗೂಡಿಸಿ ಅವುಗಳಸಂಬಂಧದ ಸಂಕ್ಷಿಪ್ತ ಚರಿತ್ರದೊಡನೆ "ಚಿತ್ರಮಯ ಪ್ರಮೋದಭಾರತ"ವನ್ನು ರಚಿಸುವ ನಿಶ್ಚಯಮಾಡಿ, ಸದ್ಯಕ್ಕೆ ಆದಿಪರ್ವದಮಟ್ಟಿಗೆ ಆ ಕೆಲಸಮಾಡುತ್ತಿರುವರು. ಇದರಿಂದಇವರ ಹುಟ್ಟುಗುಣಗಳಾಗಿರುವ ಚಿತ್ರಕಲೆ-ಲೇಖನಕಲೆಗಳಿಗೆ ಒಳಿತಾಗಿ ಚಾಲನೆ ದೊರೆಯುವದೆಂದು ನನಗೆ ತೋರುತ್ತದೆ; ಅಲ್ಲದೆ, ಕನ್ನಡಿಗರಿಗೂ ಒಂದು ಚಿತ್ತಾಕರ್ಷಕ ಬೋಧಪ್ರದ ಪುಸ್ತಕವು ದೊರೆತಂತಾಗುವದು.

ಹೀಗೆ ನಾನು ಮಹಾಭಾರತದ ಪ್ರಿಂಟುಮಾಡುವಕೆಲಸವಲ್ಲದೆ, ಪಾಠ ಶಾಲೆ-ಮನೆಗಳಕಟ್ಟಿಸುವಕೆಲಸವನ್ನೂ, ಬಾವಿಯ ಅಗಿಸುವ ಕೆಲಸವನ್ನೂ ಈವರ್ಷ ಕೈಕೊಂಡೆನು. ಆ ಕೆಲಸಗಳು ಅರ್ಧಕ್ಕಿಂತ ಹೆಚ್ಚು ಆಗಿರುತ್ತವೆ. ಈ ಪ್ರಸಂಗದಲ್ಲಿ ಉದಾರರಾದ ಸದ್ಗೃಹಸ್ಥರು ಸರಾಸರಿ ಹನ್ನೆರಡು ಸಾವಿರರೂಪಾಯಿಗಳ ಸಹಾಯವನ್ನು ನನಗೆ ಒದಗಿಸಿಕೊಟ್ಟದ್ದು ಆಶ್ಚ ರ್ಯಪಡತಕ್ಕ ಸಂಗತಿಯೇ ಸರಿ! ದುಡ್ಡುಹುಟ್ಟದ ಈಗಿನ ಅಸ್ಥಿರತೆಯ ಕಾಲದಲ್ಲಿ ಮಾಡಿಕೊಟ್ಟ ಈ ದ್ರವ್ಯಾನುಕೂಲತೆಗಾಗಿ ನಾನು ಆಯಾ ಮಹ ನೀಯರ ಉಪಕಾರವನ್ನು ಎಷ್ಟು ಸ್ಮರಿಸಿದರೂ ಸ್ವಲ್ಪವೇ ಇರುವದು. ಇಂಥ ಧೈರ್ಯಶಾಲಿಗಳಾದ ಉದಾರರಲ್ಲಿ, ಶ್ರೀಗುರುಪತ್ನಿ ತೀ. ಗ ಭಾ. ಮಾತೃಶ್ರೀ ರಾಧಾಬಾಯಿಸಾಹೇಬ ಕರಂದೀಕರ ಧಾರವಾಡ, ಶ್ರೀಮಂತ ಬಳವಂತರಾವ್ ನಾಡಗೌಡ ಗರಗ; ಶ್ರೀಮಂತ ಅಶ್ವತ್ಥನಾಯಕ ಡಂಬಳ ಹಾವೇರಿ; ಶ್ರೀಮಂತ ನೀಲಕಂಠರಾವ್ ಕುಲಕರಣಿ ಮುಸಿಗೇರಿ; ಶ್ರೀಮಂತ ಚಂಬಣ್ಣ ನವರು ಮಾಗಾವಿ ಹಾವೇರಿ; ಶ್ರೀಮಂತ ರಾಘವೇಂದ್ರರಾವ್ ದೇಸಾಯಿ ಕಲ್ಲಾಪುರ; ಶ್ರೀಮಂತ ಫಕ್ಕೀರಪ್ಪಾ ಅಣ್ಣಾ ಅತ್ತಿಗೇರಿ ಹುಲಗೂರು; ವೇ. ರಾ. ರಾ. ರಂಗಣ್ಣ ವಿಜಾಪುರ; ಮ. ರಾ ಬಿ. ಯಲ್. ನರಸಿಂಹಯ್ಯ ಸ್ಟ್ಯಾಂ ಡರ್ಡ್ಪ್ರೆಸ್ ಬೆಂಗಳೂರು ಸಿಟಿ, ಮ. ರಾ. ಸಲಾಂ ಅಬ್ದುಲ್ ಮಜೀದ್ ಕಾಗ ದದವ್ಯಾಪಾರಿಗಳು ದೊಡ್ಡಪೇಟೆ ಬೆಂಗಳೂರು ಸಿಟಿ, ಇವರು ಮುಖ್ಯರಾ ಗಿರುವರು. ನಮ್ಮ ಹಾವೇರಿಯ ಪ್ರಸಿದ್ಧ ವ್ಯಾಪಾರಿಗಳಾದ ನಮ್ಮ ಆ ಚಂಬಣ್ಣನವರು ಕೇವಲ ಮನೆಯವರಂತೆ ನಮ್ಮ ಮನೆತನದ ಯೋಗ ಕ್ಷೇಮವನ್ನು ಸಾಗಿಸುತ್ತಿರುವರಲ್ಲದೆ, ಅಡಚಣೆಯ ಪ್ರಸಂಗದಲ್ಲಿ ಬೇಡಿದಾಗ ದುಡ್ಡು ಹಿಡಿದಿರುವರು! ಈ ಧರ್ಮಿಷ್ಠರು ನನಗೆಬೆಂಗಳೂರಿಗೆಬರೆದ ಪತ್ರವು ಈ ಬಗೆಯದಿರುತ್ತದೆ—"ತಮ್ಮ ಶ್ರೇಯಃಪೂರಕ ಪತ್ರ ಮುಟ್ಟಿ ಆನಂದ ವಾಯಿತು ಮಹಾಭಾರತದ ಪ್ರಿಂಟು ನಡೆದಿರುವದನ್ನು ಓದಿ ಬಹಳ ಸಂತೋಷವಾಯಿತು....ಅದರಲ್ಲೂ ಈಗಿನ ಕಾಲದಲ್ಲಿ ಧಾರ್ಮಿಕಗ್ರಂಥಗ ಳನ್ನು ಪ್ರಿಂಟುಮಾಡಿಸಿ ಜನಸಾಮಾನ್ಯರಿಗೆಲ್ಲ ಧರ್ಮಬುದ್ಧಿಯುಂಟಾಗು ವಂತೆ ಮಾಡುವವರು ಬಹಳ ವಿರಳ! ತಾವು ತಮ್ಮ ಇಡಿಯ ಆಯುಷ್ಯ ದಲ್ಲಿ ಈರೀತಿ ಧಾರ್ಮಿಕ ಗ್ರಂಥಗಳನ್ನೂ, ಸಾಹಿತ್ಯಗ್ರಂಥಗಳನ್ನೂ ಬರೆದು

ಪ್ರಚುರಮಾಡುವದರಲ್ಲಿಯೇ ಮನಸ್ಸು ಹಾಕುತ್ತ ಬಂದಿರುತ್ತೀರಿ.... ತಾವು ಬರೆದಪ್ರಕಾರ ಅವರು ಕೇಳಿದಕೂಡಲೆ ರೂಪಾಯಿಗಳನ್ನು ಕೊಡುತ್ತೇನೆ. ಇ. ಶ.||"

ಈ ಉದಾರ ಶ್ರೀಮಂತಜನರಲ್ಲದೆ, ಸ್ವತಃ ತಾವು ಬಡವರೂ, ಸಾಲಗಾರರೂ ಆಗಿದ್ದು ಕೇವಲ ನನ್ನಮೇಲಿನ ಹಾಗು ಸತ್ಕಾರ್ಯದಮೇಲಿನ ಅಭಿಮಾನದಿಂದ ಸಹಾಯಮಾಡಿದವರ ಉಪಕಾರವನ್ನೂ, ಸೌಜನ್ಯವನ್ನೂ ನಾನು ಎಂದೂ ಮರೆಯಲಾರೆನು. ಇವರಲ್ಲಿ—ವೇ॥ ರಾ. ರಾ. ಬಾಳಂಭಟ್ಟ ಹೊಂಬಾಳ ಬ್ಯಾಡಗಿ ಮಿ॥ ರಾ. ಕೃಷ್ಣ ಪರಶುರಾಮ ಪಾಟೀಲ ಹಾವನೂರ; ವೇ॥ ರಾ. ಅಶ್ವತ್ಥದೀಕ್ಷಿತ ಹಾವನೂರ ಮಿ॥ ರಾ. ರಾ. ತಿಪ್ಪಣ್ಣ ಕುಲಕರಣಿ ಶ್ಯಾಲಕೊಂಡ ಇವರು ಮುಖ್ಯರಾಗಿರುವರು! ಹೀಗೆ ಶ್ರೀಮಂತರೂ, ಬಡವರೂ ಸಹಾಯಮಾಡುತ್ತ ಬಂದದ್ದರಿಂದಲೇ ಗಳಗನಾಥನ ಸಾಹಸದ ಕಾರ್ಯಗಳೂ ಕೊನೆಗಾಣುತ್ತ ಬಂದು, ಆ ಸಹಾಯಕರೆಲ್ಲರೂ ಪುಣ್ಯಭಾಗಿಗಳಾಗುತ್ತ ಬಂದಿರುತ್ತಾರೆ!

**ಕನ್ನಡಿಗರಿಗೆ ಪ್ರಾರ್ಥನೆ**—ಇಷ್ಟು ಕಷ್ಟಪಟ್ಟು, ಇಷ್ಟು ಖರ್ಚು ಮಾಡಿ, ಹದಿನಾರುಮಂದಿಗೆ ಕೈಜೋಡಿಸಿ ಹಲ್ಲುತೆರೆದು ಪ್ರಾರ್ಥಿಸಿ, ಮನೆ ಮಾರುಗಳನ್ನು ಬಿಟ್ಟು ಆರುತಿಂಗಳಿಂದ ಬೆಂಗಳೂರಲ್ಲಿ ಮನೆಮಾಡಿಕೊಂಡು ಇದ್ದು ಆಯಾಸಪಟ್ಟದ್ದು ಕೇವಲ ಕನ್ನಡಿಗರ ಸೇವೆಗಾಗಿಯೇ ಅಲ್ಲವೆ? ಇನ್ನುಮೇಲಾದರೂ ಕನ್ನಡಿಗರ ಸೇವೆಯನ್ನು ದೇಹದಂಡನ-ಮನೋದಂಡನಗಳಿಂದ ಬೇಕಾದಷ್ಟುಮಾಡುವೆನು; ಆದರೆ ದುಡ್ಡಿಗಾಗಿ ಮಂದಿಗೆ ಬಾಯಿತೆರೆಯುವದು ಇಲ್ಲಿಗೆ ಸಾಕು! ಈಗ ಮೂವತ್ತು ವರ್ಷಗಳಿಂದ ಕನ್ನಡಿಗರ ಸೇವೆಗಾಗಿ, ಹಾಗು ಸಂಸ್ಕೃತ ವಿದ್ಯಾದಾನದ ಕಾರ್ಯಕ್ಕಾಗಿ ಅರವತ್ತು ಎಪ್ಪತ್ತು ಸಾವಿರರೂಪಾಯಿ ಸಾಲಮಾಡಿ ತೀರಿಸುವಾಗ "ಮೊದಲು ನಾನೆ ಸಾಲಮಾಡಿ ಪುಸ್ತಕ ಛಾಪಿಸಬೇಕು, ಆಮೇಲೆ ನನ್ನ ಪ್ರಿಯಕನ್ನಡಿಗರು ನನ್ನ ಪುಸ್ತಕ ಕೊಂಡು ಅದನ್ನು ತೀರಿಸಬೇಕು!" ಈ ರೀತಿಯು ಅನ್ನ ಸರಿಬಿದ್ದಾಗಿದೆ! ಆದರೆ ಹೀಗೆ ನಾನು ಹೇಳುವಾಗ, ನಮ್ಮ ಪೇಶವೇ ರಾಜ್ಯ ಪ್ರಸಾರಕರಾದ ವೀರವರ ೧ನೇ ಬಾಜೀರಾಯ ಸಾಹೇಬರು ತಮ್ಮ ಗುರುಗಳಾದ ಶ್ರೀ ಬ್ರಹ್ಮೇಂದ್ರಸ್ವಾಮಿಗಳನ್ನು ಕುರಿತು—"ಮಹಾರಾಜ, ದುಡ್ಡಿ

ಗಾಗಿ ಮುಂದಿಗೆ ಕೈಜೋಡಿಸಿ ಜೋಡಿಸಿ ನನ್ನ ಕೈಗಳಿಗೆ ದಡ್ಡುಗಳು ಬಿದ್ದವು; ಹಣೆ ಹಚ್ಚಿಹಚ್ಚಿ ನನ್ನ ಹಣೆಗೆ ದಡ್ಡುಗಳು ಬಿದ್ದವು; ಆದ್ದರಿಂದ ಈ ಕೋಳಿ ಪಾಟದಿಂದ ನನ್ನನ್ನು ಉದ್ಧರಿಸಿರಿ'' ಎಂದು ಪ್ರಾರ್ಥಿಸಿದ್ದು, ಶ್ರೀ ಶೇಷ ಸದ್ಗುರು ಸನ್ನಿಧಿಯಲ್ಲಿದ್ದ ನನಗೂ ಆಗಾಗ್ಗೆ ನೆನಪಾಗುತ್ತಬಂದಿದ್ದರೆ ಆಶ್ಚರ್ಯವಲ್ಲ! ನನ್ನ ಪ್ರಿಯಕನ್ನಡಿಗರು ಅರವತ್ತೆರಡುವರ್ಷದ ವಯಸ್ಸಿನ ನನ್ನ ಈ ಕೋಳಿಪಾಟವನ್ನು ಇನ್ನು ದೂರಮಾಡಬೇಕು. ಈಗಾಗಿರುವ ಸಾಲವನ್ನು ಆದಿಪರ್ವ ಭಾರತದ ಐದುಸಾವಿರ ಪ್ರತಿಗಳನ್ನು ಮಾರಿ ತೀರಿಸಬೇಕೆಂತಲೂ, ಇನ್ನುಮುಂದೆ ಯಾವಕೆಲಸಕ್ಕೂ ಸಾಲಮಾಡಲಿಕ್ಕಿಲ್ಲವೆಂತಲೂ ಪ್ರತಿಜ್ಞೆಮಾಡಿರುವೆನು ನಾನು ಸೇವೆಮಾಡುತ್ತ ಮಾಡುತ್ತ ಮುದುಕನಾದರೂ ಸಾಲಗಾರನಾಗಿಯೇ ಇರುವದು, ನನ್ನ ಸೇವ್ಯರಾದ ಪ್ರಿಯಕನ್ನಡಿಗರಿಗೆ ಭೂಷಣವಾಗಬಹುದೇ? ನಾನು ಇನ್ನುಮೇಲೆ ಬರೆಯುವ ಪುಸ್ತಕಗಳ ಒಂದೊಂದು ಪ್ರತಿಯನ್ನೂ, ಈ ಮೊದಲೆ ನಾನು ಬರೆದಿರುವ ೩೦-೪೦ ಪುಸ್ತಕಗಳಲ್ಲಿ ತಮಗೆ ಬೇಕಾದವನ್ನೂ ಸಾಲಮಾಡಿಯಾದರೂ ಕೊಂಡುಕೊಳ್ಳುವ ನಿಶ್ಚಯವನ್ನು ಸ್ಥಿತಿವಂತರಾದ ಅಕ್ಷರಸ್ಥ ಕನ್ನಡಿಗರ ಮಟ್ಟಿಗಾದರೂ ಮಾಡಿದರೆ, ಹೊಸಉತ್ಸಾಹ ಉಂಟಾಗಿ ನಾನು ಇನ್ನೂ ಬೇಕಾದಷ್ಟು ಕೆಲಸಮಾಡುವಹಾಗಿದ್ದೇನೆ!

**ಉಪಸಂಹಾರ**— ಇನ್ನುಮೇಲೆ, ಈವರೆಗೆ ಹೇಳಿದ್ದನ್ನು ಒಟ್ಟಿನಲ್ಲಿ ಸ್ವಲ್ಪದರೊಳಗೆ ಅವಲೋಕಿಸಿ, ಕಡೆಗೆ ಹೇಳತಕ್ಕ ಮಾತನ್ನು ಕೇವಲ ಹಿತಬುದ್ಧಿಯಿಂದ ಭಗವಾನ್ ವೇದವ್ಯಾಸರ ಮಾತೆಂದು ಸ್ವಲ್ಪದರಲ್ಲಾದರೂ ಸ್ಪಷ್ಟವಾಗಿ ಹೇಳಿಬಿಡುವೆವು. ಅದನ್ನು ಭಾರತೀಯರು ಶಾಂತಮನಸ್ಸಿನಿಂದ ವಿಚಾರಿಸತಕ್ಕದ್ದು ಮರಣೋನ್ಮುಖಮನುಷ್ಯನಿಗಾದರೂ, ಅವನ ಮರಣವ್ಯಥೆಯು ಕಡಿಮೆಯಾಗುವದಕ್ಕಾಗಿ ಔಷಧೋಪಚಾರಮಾಡಬೇಕಾಗುವಂತೆ, ಕಲಿಯುಗದ ಧರ್ಮನಾಶದ ಈಗಿನ ಕಾಲದಲ್ಲಾದರೂ, ಲೋಕಹಿತಕ್ಕಾಗಿ ಧರ್ಮಜಾಗ್ರತಿಯಾಗಲು ಯತ್ನಿಸಬೇಕಾಗುವದು, ಯಾಕಂದರೆ--''ಆಗುವಹಾಗೆ ಆಗುವದು ಕಾಲದ ಧರ್ಮವಾಗಿರು''ವಂತೆ; ಮಾಡುವಹಾಗೆ ಮಾಡುವದು ಕರ್ತವ್ಯನಿಷ್ಠರ ಧರ್ಮವಾಗಿರುತ್ತದೆ.'' ಅದಕ್ಕಾಗಿಯೇ ಈ ಪ್ರಸ್ತಾವನೆಯಲ್ಲಿ ಶ್ರೀಕೃಷ್ಣಪರಮಾತ್ಮನ ಉಕ್ತಿ

ಯನ್ನು ಉಪೋದ್ಘಾತವಾಗಿ ಇಟ್ಟುಕೊಂಡು, ಪಂಚಮಹಾಭೂತಗಳ ಅಕೃತ್ರಿಮವಾದ ಅವಿಚ್ಛಿನ್ನ ಧರ್ಮಪಾಲನಕ್ಕಿಂತ, ವೃಕ್ಷಕೋಟಿ, ಮನುಷ್ಯೇತರ ಪ್ರಾಣಿಕೋಟಿ, ಮನುಷ್ಯಕೋಟಿಗಳಲ್ಲಿ ಧರ್ಮಪಾಲನವು ಉತ್ತರೋತ್ತರ ಕಡಿಮೆಯಾಗುತ್ತ ಬರುತ್ತದೆಂ''ಬದನ್ನು ಸುಲಭ ಉಪಪತ್ತಿಯೊಡನೆ ನಿರೂಪಿಸಿ, ''ಪಂಚಮಹಾಭೂತಗಳ ಅಕೃತ್ರಿಮವಾದ ಅವಿಚ್ಛಿನ್ನ ಧರ್ಮಪಾಲನದಿಂದಲೇ ಜಗತ್ತಿನ ಧಾರಣವಾಗಿರುತ್ತದೆಂ''ತಲೂ, ''ಆ ಪಂಚಮಹಾಭೂತಗಳು ಈಶ್ವರಾಜ್ಞೆಯಿಂದ ತಮ್ಮ ಧರ್ಮವನ್ನು ಬಿಟ್ಟಾಗಲೇ ಜಗತ್ತಿನನಾಶವಾಗುತ್ತದೆ''ಂತಲೂ ವಿಸ್ತಾರವಾಗಿ ವಿವೇಚಿಸಲಾಗಿರುವದು ; ಮತ್ತು ಸರ್ವಸಾಧಾರಣ ವ್ಯಕ್ತಿಯು ಕೂಡ ಔಪಚಾರಿಕವಾಗಿಯೇ ಆಗಲೊಲ್ಲದೇಕೆ, ಸತ್ಸಮಾಗಮಪೂರ್ವಕ ಧರ್ಮಾಶ್ರಯವನ್ನು ಯಥಾಶಕ್ತಿಮಾಡಿದರೂ, ಧರ್ಮಪ್ರಭಾವದಿಂದ ಆ ವ್ಯಕ್ತಿಗೆ ಅಲಭ್ಯಸುಪ್ರಸಂಗಗಳು ಒದಗಲು, ಆತನ ಕಲ್ಯಾಣವು ಹೇಗಾಗುತ್ತದೆಂಬದನ್ನು ತೋರಿಸಿಕೊಡುವದಕ್ಕಾಗಿ, ನನ್ನ ಸಾಮಾನ್ಯಜೀವನದ ಪ್ರಸಂಗಗಳನ್ನೇ ಉದಾಹರಣವಾಗಿ ಇಟ್ಟು, ಆ ಪ್ರಸಂಗಗಳನ್ನು ಸ್ಪಷ್ಟವಾಗಿ ವಿವರಿಸಿದ್ದಾಗಿರುವದು. ಇದನ್ನೆಲ್ಲ ವಿಚಾರಿಸಿ, ಸ್ಥಾಲೀಪುಲಾಕ ನ್ಯಾಯದಂತೆ ಅಂದರೆ ಒಂದು ಅಗಳು ಹಿಚಿಕಿನೋಡಿ ತಿಳಿದುಕೊಳ್ಳುವಂತೆ, ಭಾರತೀಯರು ಧರ್ಮದೃಷ್ಟಿಯುಳ್ಳವರಾಗಿ ಮಹಾಭಾರತಗ್ರಂಥವನ್ನು ಅವಲೋಕಿಸಬೇಕು ; ಮತ್ತು ಭಗವಾನ್ ವೇದವ್ಯಾಸರು ತಮ್ಮ ಯೋಗಸಾಮರ್ಥ್ಯದಿಂದ ಕಂಡುಹಿಡಿದಿರುವ, ಧರ್ಮಮಯ ಕಲ್ಯಾಣದ ಮಾರ್ಗವನ್ನು ಹಿಡಿದು, ತಾವೂ ಹೋಗಿ ಇಹಪರಸುಖಗಳನ್ನು ಸಂಪಾದಿಸಲು ಯತ್ನಿಸಬೇಕು. ಹೀಗೆ ಯತ್ನಿಸುವವರ ಸಂಖ್ಯೆಯು ಹೆಚ್ಚಿದಮಾನದಿಂದ, ನಮ್ಮ ಭಾರತಾಮೃತಲೇಖನದ ಶ್ರಮವು ಹೆಚ್ಚು ಸಫಲವಾಯಿತೆಂದು ತಿಳಿಯುವೆವು !

**ಕಡೆಗೆಹೇಳುವ ಸ್ಪಷ್ಟಮಾತು**— ಕಲಿಯುಗದ ಧರ್ಮದಂತೆ ನಾವು ಭಾರತೀಯರು ಧರ್ಮಭ್ರಷ್ಟರಾಗುತ್ತ ನಡೆದಿರುವಾಗ, ಈಶ್ವರೀಸಂಕೇತದಂತೆ ಪಾಶ್ಚಿಮಾತ್ಯರ ಸಾರ್ವಭೌಮಾಧಿಕಾರದ ಜಗದ್ಗುರುತ್ವದ ಯೋಗವು ನಮಗೆ ಒದಗಲು, ನಾವು ಭರದಿಂದ ಧರ್ಮಭ್ರಷ್ಟರಾಗತೊಡಗಿದೆವೆಂದು

ಹಿಂದೆ ಹೇಳಿದ್ದೇವೆ. ಈಗಂತು ಧರ್ಮನಿಷ್ಠರಾಗದೆ ಯಾವಕಾರ್ಯ ಮಾಡಲಿಕ್ಕೂ ನಮಗೆ ಬಾರವಂತಾಗಿಬಿಟ್ಟಿದೆ! ಆದ್ದರಿಂದ ನಮಗೆ ಶ್ರುತಿ ಸ್ಮೃತಿಗಳ ನಿರ್ಬಂಧಗಳು ಬೇಡಾಗಿವೆ; ಧರ್ಮಮಾರ್ಗಾನುಸರಣವು ತಿರಸ್ಕರಣೀಯವಾಗಿದೆ; ಧಾರ್ಮಿಕ ವೇಷಧಾರಿಗಳ ಚಾಳಿಗಳೇ ಧರ್ಮಾಚರಣಗಳೆಂದು ಮುಂದೆಮಾಡಿ, ಸರ್ವಗತ ಜಗದ್ಧಾರಕಧರ್ಮವನ್ನೇ ತಿರಸ್ಕರಿಸುತ್ತ ನಾವು ದ್ರೋಹಿಗಳಾಗತೊಡಗಿರುತ್ತೇವೆ; ಶ್ರೇಷ್ಠ-ಕನಿಷ್ಠಭಾವವು ಸೃಷ್ಟಿಯ ಸ್ಪಷ್ಟಲಕ್ಷಣವಾಗಿದ್ದರೂ, ಅದು ನಮಗೆ ಸಂತಾಪಜನಕವಾಗತೊಡಗಿದೆ; ಝುಂಝೂಮಾರುತನ ಅವಿಚ್ಛಿನ್ನ ಮನಸೋಕ್ತಗತಿಯಂತೆ ಸ್ವಚ್ಛಂದಾಚರಣೆಮಾಡಲು ನಾವು ಆತುರರಾಗಿರುತ್ತೇವೆ! ಒಟ್ಟಿಗೆ, ಇಂದ್ರಿಯನಿಗ್ರಹರೂಪ ತಪಶ್ಚರ್ಯವು ನಮಗೆ ಸರ್ವಥಾ ಬೇಡಾಗಿದ್ದು, ಮನಸ್ಸಿಗೆ ಬಂದಂತೆ ಕುಣಿಯುವದು ನಮ್ಮೆಲ್ಲರಿಗೆ ಬೇಕಾಗಿದೆ; ಆದ್ದರಿಂದಭಾರತೀಯರನ್ನೂ, ಜಗತ್ತಿನ ಎಲ್ಲ ಮನುಷ್ಯಮಾತ್ರ ಬಾಂಧವರನ್ನೂ ಭಗವಾನ್ ವೇದವ್ಯಾಸರ ಪ್ರೇರಣೆಯಿಂದ ಕ್ಷಮಾಯಾಚನಾಪೂರ್ವಕ ಕೈಜೋಡಿಸಿ ಪ್ರಾರ್ಥಿಸುವದೇನಂದರೆ-"ಸ್ವರಾಜ್ಯಸಿಕ್ಕಿತೆಂಬಬುದ್ಧಿನಿಂದಾಗಲಿ, ಮುಂದೆ ಸಿಗುವದೆಂಬ ಆಶೆಯಿಂದಾಗಲಿ, ಸ್ವರಾಜ್ಯವು ನಮಗೆ ಮೊದಲೇ ಇರುತ್ತದೆಂಬ ದುರಸಂಕಾರದಿಂದಾಗಲಿ ನ್ಯಾಯಾಶೆಯಿಂದ ಸಯ-ಭಯ-ಭಕ್ತಿಗಳುಳ್ಳವರಾಗಿ, ನಿಮ್ಮನಿಮ್ಮ ಧರ್ಮಗಳಿಗೆ ಶರಣು ಹೋಗಿ, ಧರ್ಮನಿಷ್ಠ ನಿಸ್ಪೃಹಿಜ್ಞಾನಿಗಳ ಆಲೋಚನೆಯನ್ನು ಕೇಳಿ, ದೇವರನ್ನು ಮರೆಯದೆ, ಧರ್ಮಾಧರ್ಮವಿವೇಕವನ್ನು ಬಿಡದೆ ಧರ್ಮದಂತೆ ನಡೆಯಿರಿ! ಭಾರತೀಯರೇ, ನಿಮ್ಮ ಪುರಾತನ ಧರ್ಮಮೂರ್ತಿಯಾದ ಯುಧಿಷ್ಠಿರನ ಪ್ರಶಸ್ತ ಧರ್ಮಾಚರಣೆಯ ಮಹಾಮಹಿಮೆಯನ್ನು, ಮಹಾಭಾರತಾವಲೋಕನದಿಂದ ನೀವು ತಿಳಿದುಕೊಳ್ಳುವದು ಹಿತಕರವಲ್ಲವೆ? ಸಾರ್ವಭೌಮನಾಗಿ ರಾಜಸೂಯಯಜ್ಞಮಾಡಿದಾಗ, ಆ ಭಾಗ್ಯಶಾಲಿ ಯುಧಿಷ್ಠಿರನು ಧರ್ಮವನ್ನು ಬಿಡದಿರುವಂತೆ, ರಾಜಸಭೆಯಲ್ಲಿ ಪ್ರತ್ಯಕ್ಷ ತನ್ನ ಪಟ್ಟರಾಣಿ ದ್ರೌಪದಿಯ ಸೀರೆಸೆಳೆಯುವಾಗಲೂ ಆ ಧರ್ಮಮಯನು ತನ್ನ ಪತ್ನೀ–ಬಾಂಧವರೊಡನೆ ತನ್ನ ಧರ್ಮವನ್ನು ಬಿಡದೆಯಿದ್ದದ್ದರಿಂದ, ಪ್ರತ್ಯಕ್ಷ ದೇವರು ಆ ಮಹಾತ್ಮನ ಧರ್ಮಪಾಲನಕ್ಕಾಗಿ ಅಕ್ಷಯ್ಯವಸ್ತ್ರಗಳ

ರೂಪದಿಂದ ಅವತರಿಸಬೇಕಾಯಿತು! ಅದರಂತೆ ಆ ಧರ್ಮರಾಜನು, ವನವಾಸದಲ್ಲಿಯಾದರೂ ತನ್ನ ಪತ್ನೀ-ಬಂಧುಗಳೊಡನೆ ತನ್ನ ಧರ್ಮವನ್ನು ಕಾಯ್ದು ಕೊಳ್ಳಲು, ಭಗವಾನ್ ಶ್ರೀ ಸೂರ್ಯನಾರಾಯಣನು, ಆ ಸತ್ವಶಾಲಿಗೆ ಅಕ್ಷಯ್ಯಪಾತ್ರವನ್ನು ಕೊಟ್ಟು ಕಾಪಾಡಬೇಕಾಯಿತು! ಹಾಗೆಯೇ ಅಜ್ಞಾತವಾಸದಲ್ಲಿಯೂ ಆ ಧರ್ಮನಿಷ್ಠರ ಯುಧಿಷ್ಠಿರನು, ತನ್ನ ಧರ್ಮವನ್ನು ಬಿಡದಿದ್ದರಿಂದ ಸಜ್ಜನರೂ, ದೇವರೂ ಆತನಿಗೆ ಸಹಾಯಮಾಡಬೇಕಾಯಿತು! ಅಲ್ಲದೆ, ಧರ್ಮಭ್ರಷ್ಟ ದುರ್ಯೋಧನನೊಡನೆ ಭಯಂಕರವಾದ ಕುರುಕ್ಷೇತ್ರದ ರಣರಂಗದಲ್ಲಿ ಕಾದುತ್ತಿರುವಾಗೂ, ನಮ್ಮ ಭಾರತಭೂಮಾತೆಯ ಧರ್ಮಿಷ್ಠ ಸತ್ಪುತ್ರ ಯುಧಿಷ್ಠಿರನು, ಧರ್ಮಾಶ್ರಯವನ್ನೇ ಮಾಡಿದ್ದರಿಂದ ದೇವರು ಆ ಅಜಾತಶತ್ರುವಿನ ಆಳಾಗಿ ಅವನಿಗೆ ಜಯವನ್ನೊದಗಿಸಿ ಕೊಡಬೇಕಾಯಿತು! ಇಂತಹ ನಲ-ರಾಮ-ಯುಧಿಷ್ಠಿರರಂತಹ ಧರ್ಮಮೂರ್ತಿಗಳು ನಮ್ಮ ಭರತಭೂಮಿಯಲ್ಲಿಯಂತೆ ಮತ್ತೆ ಯಾವ ಕಡೆಗಾದರೂ ವಿಪುಲವಾಗಿ ದೊರೆಯಬಹುದೆಯೇ? ಆದ್ದರಿಂದ ಕ್ಷುದ್ರಐಹಿಕದ ಚಂಚಲಲಾಭಕ್ಕಾಗಿ ಧರ್ಮತ್ಯಾಗಮಾಡುವದು ನಮ್ಮಂಥ ಭಾರತಭೂಮಾತೆಯ ಧನ್ಯಪುತ್ರರಿಗೆ ಭೂಷಣವೇ? ಆದರೆ ಏನು ಮಾಡಬೇಕು? ನಮಗಾದರೂ ನಿಮಗಾದರೂ ಸ್ವಾತಂತ್ರ್ಯವೆಲ್ಲಿದೆ? "ಬುದ್ಧಿಃಕರ್ಮಾನುಸಾರಿಣೀ" ಎಂಬ ಸಿದ್ಧಾಂತದಂತೆ ನಾವೂ, ನೀವೂ ಪರಿಸ್ಥಿತಿಯ ಪ್ರವಾಹದಲ್ಲಿ ತೇಲಿಹೋಗುವ ಕ್ಷುದ್ರಕೀಟಕಳಾಗಿರುವೆವು; ಆದ್ದರಿಂದ ಸರ್ವೇಶ್ವರನೇ ನಮಗೂ, ನಿಮಗೂ ಅಂಥ ಸದ್ಬುದ್ಧಿಯನ್ನು ಕೊಡಬೇಕಾದ್ದರಿಂದ, ಸರ್ವಾಂತರ್ಯಾಮಿಯಾಗಿರುವ ಆ ಪ್ರಭುವಿಗೇ ನಾವೂ ನೀವೂ ಶರಣುಹೋಗೋಣ!

| | |
|---|---|
| ಬೆಂಗಳೂರು ಬಸವನಗುಡಿ | ಕನ್ನಡಿಗರ ಸೇವಕ |
| ಬುಲ್ ಟೆಂಪಲ್ ರೋಡ ನಂ. ೨೯ | ವೇಂಕಟೇಶ ತಿರಕೊ ಕುಲಕರಣಿ |
| ತಾ॥ ೧೩-೩-೧೯೩೧ | ಗಳಗನಾಥ |

# ಸಂಕ್ಷಿಪ್ತ ವಿಷಯಾನುಕ್ರಮಣಿಕೆ

(೧) ಅನುಕ್ರಮಣಿಕಾಪರ್ವ ೧ನೇ ಅಧ್ಯಾಯ—ಮಂಗಲಾಚರಣ, ಮಹಾಭಾರತದಮಹತ್ವ, ವ್ಯಾಸಗಣಪತಿಸಂವಾದ, ಕೌರವ-ಪಾಂಡವ ವಂಶ ವೃಕ್ಷದ ರೂಪಕ. ಇತ್ಯಾದಿ

(೨) ಪರ್ವಸಂಗ್ರಹಪರ್ವ ೨ನೇ ಅಧ್ಯಾಯ—ಸಮಂತಪಂಚಕವರ್ಣನ, ಅಕ್ಷೌಹಿಣೀ ಪರಿಮಾಣ, ಮುಖ್ಯಪರ್ವಗಳು, ಉಪಪರ್ವಗಳು ಇತ್ಯಾದಿ.

(೩) ಪೌಷ್ಯಪರ್ವ ೩ನೇ ಅಧ್ಯಾಯ — ಜನಮೇಜಯನ ಶಾಪ, ಅರುಣಿ-ಉಪಮನ್ಯು-ವೇದ-ಉತ್ತಂಕರ ಗುರುನಿಷ್ಠೆ.

(೪) ಪೌಲೋಮಪರ್ವ ೪-೧೨ ಅಧ್ಯಾಯಗಳು — ಭೃಗುವಂಶ ವರ್ಣನ, ಪ್ರಮದ್ವರಾ-ರುರು ವಿವಾಹ, ಡುಂಡುಭವೃತ್ತ, ಸರ್ಪಸತ್ರ ಪ್ರಸ್ತಾವ.

(೫) ಆಸ್ತೀಕಪರ್ವ ೧೩-೫೮ ಅಧ್ಯಾಯಗಳು—ಜರತ್ಕಾರು- ಪಿತೃಸಂವಾದ, ಆಸ್ತೀಕಾಖ್ಯಾನ, ಅಮೃತಮಂಥನ, ಸರ್ಪಗಳಿಗೆ ತಾಯಿಯ ಶಾಪ, ಸೌಪರ್ಣಾಖ್ಯಾನ, ಅರುಣನು ಸೂರ್ಯನ ಸಾರಥಿಯಾದದ್ದು, ಗರುಡನ ಆಹಾರವ್ಯವಸ್ಥೆ, ವಾಲಖಿಲ್ಯರ ರಕ್ಷಣ, ಗರುಡನಿಗೂ ದೇವತೆಗಳಿಗೂ ಯುದ್ಧ, ಇಂದ್ರ-ಗರುಡ ಸಂವಾದ, ಪರೀಕ್ಷಿತನಿಗೆ ಶೃಂಗಿಯು ಶಾಪಕೊಟ್ಟದ್ದು. ಕಾಶ್ಯಪ-ಧನ್ವಂತರಿಯ ಪ್ರಭಾವ. ಪರೀಕ್ಷಿತನಿಗೆ ಸರ್ಪದಂಶ, ಜರತ್ಕಾರುವಿವಾಹ, ಸರ್ಪಸತ್ರ, ಋತ್ವಿಜರಹೆಸರು, ಆಸ್ತೀಕನು ಸರ್ಪಯಜ್ಞಕ್ಕೆ ಹೋದದ್ದು, ಸರ್ಪಯಜ್ಞ ಸಮಾಪ್ತಿ.

(೬) ಅಂಶಾವತರಣಪರ್ವ ೫೯-೬೪ ಅಧ್ಯಾಯಗಳು—ಸಂಕ್ಷಿಪ್ತ ಭಾರತವರ್ಣನ, ಉಪರಿಚರರಾಜ ಚರಿತ್ರ, ವ್ಯಾಸಾದಿಕರ ಉತ್ಪತ್ತಿ, ಅವತಾರನಿಶ್ಚಯ.

(೭) ಸಂಭವಪರ್ವ ೬೫-೧೪೦ ಅಧ್ಯಾಯಗಳು—ಆದಿತ್ಯಾದಿ ವಂಶ ವರ್ಣನ, ಅಂಶಾವತರಣ, ದುಷ್ಯಂತನ ವರ್ಣನ, ಯಯಾತಿಯ ಆಖ್ಯಾನ, ಯಯಾತಿಗೆ ಶುಕ್ರನಶಾಪ, ಕಚೋಪಾಖ್ಯಾನ, ಪುರುವಿಗೆ ರಾಜ್ಯಾಭಿಷೇಕ,

ಯಯಾತಿಇಂದ್ರ ಸಂವಾದ, ಅಷ್ಟಕ-ಯಯಾತಿ ಸಂವಾದ, ಪುರುವಂಶ ಕಥನ, ಮಹಾಭಿಷೋಪಾಖ್ಯಾನ, ಪ್ರತೀಪೋಪಾಖ್ಯಾನ, ಭೀಷ್ಮಜನ್ಮ ಶಾಂತನು ಪುತ್ರ ಚಿತ್ರಾಂಗದವಧೆ, ವಿಚಿತ್ರವೀರ್ಯನ ವಿವಾಹ, ಸತ್ಯವತೀ ಭೀಷ್ಮಸಂವಾದ, ಉತಥ್ಯನ ಗರ್ಭಸ್ಥಪುತ್ರನ ಆಖ್ಯಾನ, ಧೃತರಾಷ್ಟ್ರ-ಪಂಡು-ವಿದುರರ ಉತ್ಪತ್ತಿ, ಪಾಂಡವಾಖ್ಯಾನ, ಯಮಧರ್ಮ ಶಾಪವೃತ್ತ, ಗಾಂಧಾರೀ-ಧೃತರಾಷ್ಟ್ರ ವಿವಾಹ, ಕರ್ಣಜನ್ಮ, ಕುಂತೀ-ಪಂಡು ವಿವಾಹ ಮಾದ್ರೀ-ಪಂಡು ವಿವಾಹ, ವಿದುರ ವಿವಾಹ, ಗಾಂಧಾರೀ ಪುತ್ರೋತ್ಪತ್ತಿ, ಪಂಡುರಾಜನ ವೈರಾಗ್ಯ, ವ್ಯುಷಿತಾಶ್ವರಾಜನಕಥೆ, ಶ್ವೇತಕೇತುವಿನಕಥೆ, ಯುಧಿಷ್ಠಿರ-ಭೀಮ-ಅರ್ಜುನ-ನಕುಲ-ಸಹದೇವರಜನ್ಮ, ಪಂಡುರಾಜನ ನಿಧನ, ಪಾಂಡವರು ಹಸ್ತಿನಾವತಿಗೆ ಬಂದದ್ದು, ಭೀಮನಿಗೆ ವಿಷಪ್ರಯೊಗ, ಭೀಮನಿಗೆ ಸಹಸ್ರನಾಗಬಲಪ್ರಾಪ್ತಿ, ಕೃಪಾಚಾರ್ಯ-ದ್ರೋಣಾಚಾರ್ಯರ ಜನ್ಮವೃತ್ತ, ದ್ರೋಣ-ದ್ರುಪದರ ದ್ವೇಷೋತ್ಪತ್ತಿ, ಏಕಲವ್ಯವೃತ್ತಾಂತ, ಕೌರವ ಪಾಂಡವರ ಅಸ್ತ್ರವಿದ್ಯಾಪರೀಕ್ಷೆ, ಕರ್ಣನ ಅಂಗರಾಜ್ಯಾಭಿಷೇಕ, ಭೀಮಾರ್ಜುನರು ದ್ರುಪದನನ್ನು ಗುರುದಕ್ಷಿಣೆಯಾಗಿ ಅರ್ಪಿಸಿದ್ದು, ಕಣಿಕನೀತಿ, ನರಿಯಕಥೆ.

(೮) ಜತುಗೃಹಪರ್ವ ೧೪೧—೧೫೧ ಅಧ್ಯಾಯಗಳು — ಪಾಂಡವರು ವಾರಣಾವತಕ್ಕೆ ಹೋದದ್ದು, ಅರಗಿನಮನೆಸುಟ್ಟದ್ದು, ಪಾಂಡವ ವನಪ್ರವೇಶ.

(೯) ಹಿಡಿಂಬವಧಪರ್ವ ೧೫೨—೧೫೬ ಅಧ್ಯಾಯಗಳು—ಭೀಮ-ಹಿಡಿಂಬಿ ಸಂವಾದ, ಭೀಮ-ಹಿಡಿಂಬಯುದ್ಧ, ಘಟೋತ್ಕಚಜನ್ಮ, ವ್ಯಾಸ ದರ್ಶನ.

(೧೦) ಬಕವಧಪರ್ವ ೧೫೭—೧೬೪ ಅಧ್ಯಾಯಗಳು—ಭೀಮನ-ಬಕ ವಧಾಂಗೀಕಾರ, ಕುಂತಿ-ಯುಧಿಷ್ಠಿರಸಂವಾದ, ಬಕವಧ.

(೧೧) ಚೈತ್ರರಥಪರ್ವ ೧೬೫—೧೮೩ ಅಧ್ಯಾಯಗಳು — ಧೃಷ್ಟದ್ಯುಮ್ನ-ದ್ರೌಪದಿಯರ ವೃತ್ತಾಂತೋಪಕ್ರಮ, ದ್ರೋಣನು ದ್ರುಪದನ ಸೇಡು ತಿರಿಸಿದ್ದು, ಧೃಷ್ಟದ್ಯುಮ್ನ-ದ್ರೌಪದಿಯರ ಉತ್ಪತ್ತಿ, ದ್ರೌಪದೀ, ಪೂರ್ವವೃತ್ತಾಂತ, ಚಿತ್ರರಥ-ಅರ್ಜುನರ ಯುದ್ಧ, ತಪತಿಯ ಆಖ್ಯಾನ

ವಿಶ್ವಾಮಿತ್ರನ ಆಖ್ಯಾನ, ಕಲ್ಮಾಷಪಾದಮೋಕ್ಷ, ಔರ್ವೋಪಾಖ್ಯಾನ, ರಾಕ್ಷಸ ಸತ್ರೋಪಕ್ರಮ, ಸಮಾಪ್ತಿ.

(೧೨) ಸ್ವಯಂವರಪರ್ವ ೧೮೪-೧೯೨ ಅಧ್ಯಾಯಗಳು — ದ್ರುಪದ ಪುರವನ್ನು ಪಾಂಡವರು ಹೊಕ್ಕದ್ದು, ಅರಸರಪರಾಭವ, ಅರ್ಜುನನು ಮತ್ಸ್ಯ ಯಂತ್ರ ಭೇದಿಸಿದ್ದು, ಭೀಮಾರ್ಜುನರಿಗೂ ಅರಸರಿಗೂ ಯುದ್ಧ, ಅತ್ತೆಯ ಮನೆಯಲ್ಲಿ ದ್ರೌಪದಿಯ ನಡತೆ.

(೧೩) ವೈವಾಹಿಕಪರ್ವ ೧೯೩-೧೯೯ ಅಧ್ಯಾಯಗಳು — ಪಂಚೇಂದ್ರೋಪಾಖ್ಯಾನ, ದ್ರೌಪದೀವಿವಾಹ, ದ್ರೌಪದಿಗೆ ಕುಂತಿಯ ಆಶೀರ್ವಾದ

೧೪) ರಾಜ್ಯಲಂಭಪರ್ವ ೨೦೦-೨೧೨ ಅಧ್ಯಾಯಗಳು-ಪಾಂಡವರ ನಾಶಕ್ಕಾಗಿ ದುರ್ಯೋಧನನ ಉಪಾಯ, ಅಂಬುವೀಚರಾಜನಕಥೆ, ಪಾಂಡವರು ಹಸ್ತಿನಾವತಿಗೆ ಬಂದದ್ದು, ಸುಂದೋಪ ಸುಂದಾಖ್ಯಾನ.

(೧೫) ಅರ್ಜುನ ವನವಾಸಪರ್ವ ೨೧೩-೨೧೮ ಅಧ್ಯಾಯಗಳು— ಅರ್ಜುನ-ಉಲೂಪಿ ಸಮಾಗಮ, ಅರ್ಜುನ-ಚಿತ್ರಾಂಗದಾ ಸಮಾಗಮ, ವರ್ಗಾದಿ ಅಪ್ಸರೆಯರ ಉದ್ಧಾರ, ಅರ್ಜುನನು ದ್ವಾರಕೆಗೆ ಹೋದದ್ದು.

(೧೬) ಸುಭದ್ರಾಹರಣಪರ್ವ ೨೧೯-೨೨೦ ಅಧ್ಯಾಯಗಳು—ಸುಭದ್ರಾಹರಣವಿಚಾರ, ಬಲರಾಮನ ಸಿಟ್ಟು.

(೧೭) ಹರಣಾಹರ ಪರ್ವ ೨೨೧ನೇ ಅಧ್ಯಾಯ-ಅರ್ಜುನ-ಸುಭದ್ರಾ ವಿವಾಹ, ಅಭಿಮನ್ಯು ಜನ್ಮ, ದ್ರೌಪದೀ ಪುತ್ರಜನ್ಮ.

(೧೮) ಖಾಂಡವದಾಹಪರ್ವ ೨೨೨-೨೨೭ನೇ ಅಧ್ಯಾಯಗಳು— ಶ್ವೇತಕೀರಾಜನಕಥೆ, ಅರ್ಜುನನಿಗೆ ಗಾಂಡೀವ ಧನುಸ್ಸಿನ ಪ್ರಾಪ್ತಿ. ದೇವ ಕೃಷ್ಣಾರ್ಜುನಯುದ್ಧ.

(೧೯) ಮಯದರ್ಶನಪರ್ವ ೨೨೮-೨೩೪ ಅಧ್ಯಾಯಗಳು—ಮಯ ಸಂರಕ್ಷಣ, ಶಾಂರ್ಜಕೋಪಾಖ್ಯಾನ, ವರಪ್ರದಾನ.



# ಚಿತ್ರಗಳ ಅನುಕ್ರಮಣಿಕೆ

(೧) ಶ್ರೀ ಶೇಷಸದ್ಗುರುನಾತನು ಪುಟ ೨೨ (೨) ಗಳಗನಾಥರು ಸ್ಥಾಪಿಸಿದ ಶ್ರೀ ಶೇಷಾಚಲ ಸಂಸ್ಕೃತಪಾಠಶಾಲೆ ಪುಟ ೨೩ (೩) ಭಾರತಬರೆಯುವ ಗಳಗನಾಥರು ಪುಟ ೨೪ (೪) ಗಳಗನಾಥರ ಕುಟುಂಬದ ಜನರು ಪುಟ ೨೫ (೫) ಗಳಗನಾಥರ ಷಷ್ಠ್ಯಬ್ದಪೂರ್ತಿ ಶಾಂತಿಕಾಲದಲ್ಲಿ ಕೂಡಿದ ಬ್ರಹ್ಮವೃಂದ ಪುಟ ೩೦ (೬) ಗಳಗನಾಥರ ಷಷ್ಠ್ಯಬ್ದಪೂರ್ತಿ ಶಾಂತಿ ಕಾಲದ ತುಲಾಭಾರ ಪುಟ ೩೧ (೭) ಪೀಠಪ್ರದಾನ ಸಮಾರಂಭದಲ್ಲಿ ಶ್ರೀ ಕೂಡ್ಲಿ ಶೃಂಗೇರಿಮಠದ ಜಗದ್ಗುರು ನೃಸಿಂಹ ಭಾರತೀಸ್ವಾಮಿಗಳವರನ್ನು ಶಿಷ್ಯರಾದ ಶ್ರೀ ಸುರೇಶ್ವರ ಶಂಕರಭಾರತೀ ಸ್ವಾಮಿಗಳವರು ಪೂಜಿಸಿದ್ದು ಪುಟ ೩೨ (೮) ಪೀಠಪ್ರಧಾನಸಮಾರಂಭದಲ್ಲಿ ಶ್ರೀ ಕೂಡ್ಲಿ ಶೃಂಗೇರಿ ಮಠದ ಜಗದ್ಗುರು ನೃಸಿಂಹಭಾರತೀ ಸ್ವಾಮಿಗಳವರು ಶಿಷ್ಯರಾದ ಶ್ರೀ ಸುರೇಶ್ವರ ಶಂಕರಭಾರತೀ ಸ್ವಾಮಿಗಳವರನ್ನು ಪೂಜಿಸಿದ್ದು ಪುಟ ೩೩ (೯) ಶ್ರೀ ಲಕ್ಷ್ಮೀವೇಂಕಟೇಶನು ಪುಟ ೫೦ (೧೦) ಭಾರತಲೇಖನ ಮತ್ತು ಶ್ರೀ ವಿಷ್ಣು-ಶಾರದೆಯರ ಸಾನ್ನಿಧ್ಯ ಪುಟ ೧೦ (೧೧) ಉತ್ತಂಕನು ಗುರುಪತ್ನಿಗೆ ಕುಂಡಲಗಳನ್ನು ತಂದುಕೊಟ್ಟದ್ದು ಪುಟ ೫೪ (೧೨) ಗಜ—ಕೂರ್ಮಯುದ್ಧ ಪುಟ ೧೦೭ (೧೩) ಮೃತಸರ್ಪಹಾಕಿದ್ದು ಪುಟ ೧೩೦ (೧೪) ಸರ್ಪಸತ್ರಯಾಗ ಪುಟ ೧೨೧ (೧೫) ದುಷ್ಯಂತನು ಕಣ್ವಾಶ್ರಮಕ್ಕೆ ಬಂದದ್ದು ಪುಟ ೧೭೮ (೧೬) ಭೀಷ್ಮಪ್ರತಿಜ್ಞೆ ಪುಟ ೨೪೭ (೧೭) ವಿಷಪ್ರಯೋಗದಿಂದ ಮೂರ್ಛಿತನಾದ ಭೀಮನನ್ನು ಕಟ್ಟಿ ಮಡುವಿನಲ್ಲಿ ಹಾಕಿದ್ದು ಪುಟ ೨೯೮ (೧೮) ದ್ರುಪದನ ಸೆರೆ ಪುಟ ೩೨೭ (೧೯) ಹಿಡಿಂಬವಧ ಪುಟ ೩೮೮ (೨೦) ಬಕನಕೊಲೆ ಪುಟ ೪೦೫ (೨೧) ವಸಿಷ್ಠಗೋಹರಣ ಪುಟ ೪೨೮ (೨೨) ದ್ರೌಪದೀಸ್ವಯಂವರ ಪುಟ ೪೫೭ (೨೩) ಸುಭದ್ರಾಹರಣ ಪುಟ ೫೧೨ (೨೪) ಖಾಂಡವದಹನ ಪುಟ ೫೧೩



# ೧. ರಾಜಕೀಯ ರಹಸ್ಯಗಳ ಅನುಕ್ರಮಣಿಕೆ.


| | | ಪುಟ |
|---|---|---|
| ೧. | ಜೀವರು ತಂತ್ರಚತುಷ್ಟಯ ಬದ್ಧರು. | ೧೪೪ |
| ೨. | ರಾಜ್ಯಾಧಿಪತ್ಯವು ಪ್ರಗಮನಶೀಲವು. | ೪೦೯ |
| ೩. | ಅತ್ಯುತ್ಕರ್ಷವು ಪತನಹೇತುವು. | ೪೯೯ |
| ೪. | ಪ್ರಜೆಗಳ ಧರ್ಮರಕ್ಷಣವು ರಾಜರ ತಾರಕಕರ್ತವ್ಯವು. | ೫೦೮ |
| ೫. | ಧರ್ಮನಿಷ್ಠೆಯೇ ಸ್ವಾರ್ಥತ್ಯಾಗದ ಮೂಲವು. | ೬೪ |
| ೬. | ಪ್ರಧಾನಧರ್ಮಾನುಷ್ಠಾನಾವಸರದಲ್ಲಿ ಗೌಣಧರ್ಮಾನುಷ್ಠಾನ ಲೋಪವು ಪ್ರತ್ಯವಾಯಕವಲ್ಲ | ೩೯೪ |
| ೭. | ಆರ್ಯಸ್ತ್ರೀಯರು ಧರ್ಮಮಯರು | ೪೬೪ |
| ೮. | ನಸ್ತ್ರೀಸ್ವಾತಂತ್ರ್ಯಮರ್ಹತಿ. | ೪೪೩ |
| ೯. | ರಾಜಕಾರಣವು ಗೂಢತಂತ್ರಮಯವು. | ೩೮೦ |
| ೧೦. | ಕುಟಿಲತನವು ಸರ್ವನಾಶಕರವು. | ೩೫೮ |
| ೧೧. | ತಾಮಸಪ್ರಕೃತಿಯವರ ರಜೋಗುಣಪ್ರಾಬಲ್ಯವು ಪರಪೀಡಾ ಕಾರಕವು. | ೩೬೧ |
| ೧೨. | ಧರ್ಮಿಷ್ಠರಾದ ಕುಲೀನರು ನೀಚಕರ್ಮವನ್ನು ಆಚರಿಸರು. | ೫೧೭ |
| ೧೩. | ಸಹಕಾರವೇ ಮಹಾಕಾರ್ಯದ ಮೂಲವು. | ೧೪೯ |
| ೧೪. | ಅಹಂಕಾರವು ನಾಶಕರವು. | ೧೫೪ |


# ೨. ಇತರ ರಹಸ್ಯಗಳ ಅನುಕ್ರಮಣಿಕೆ.


| | | |
|---|---|---|
| ೧೫. | ಮಂಗಲಾಚರಣದ ಆವಶ್ಯಕತೆ. | ೨೬ |
| ೧೬. | ಗುಣಗಳೇ ಪೂಜ್ಯತೆಗೆ ಸ್ಥಾನವು. | ೨೬ |
| ೧೭. | ಭಾರತಾವಲೋಕನಕ್ಕೆ ಶ್ರದ್ಧೆಯ ದೃಢನಿಶ್ಚಯವು ಬೇಕು. | ೨೭ |
| ೧೮. | ಭಾರತಗ್ರಂಥದ ಅಲೌಕಿಕತೆ. | ೨೯ |
| ೧೯. | ಫಲಶ್ರುತಿ. | ೨೯ |
| ೨೦. | ಭಾರತದ ವಿಷಯದ ಕಾಲ್ಪನಿಕ ದೋಷಗಳು. | ೩೬ |
| ೨೧. | ಭಾರತದ ಪ್ರಧಾನಾಂಗವು ಕಥಾಭಾಗವಲ್ಲ, ತಾತ್ವಿಕವಿಷಯ ಭಾಗವು. | ೪೦ |

ಪುಟ
೨೨. ಅಸ್ಪೃಶ್ಯತೆಯು ಅಪರಿಹಾರ್ಯ ಧಾರ್ಮಿಕ ತತ್ವವಾಗಿರುವದು. ೫೭
೨೩. ಬ್ರಾಹ್ಮಣರ ನಾಲ್ಕು ವರ್ಗಗಳು. ೬೦
೨೪. ಗುರುಸೇವೆಯ ಮಹತ್ವ. ೬೨
೨೫. ಗುರುದಕ್ಷಿಣೆಯು ಪೌರುಷ ಪ್ರದರ್ಶಕವು. ೬೬
೨೬. ಜೀವರ ಯೋನಿಗಳು ವಿವಿಧವಾಗಿರುವುವು. ೮೦
೨೭. ಶಾಪಾನುಗ್ರಹ ರಹಸ್ಯ ೮೧
೨೮. ಧಾರ್ಮಿಕಹಿಂಸೆಯು ಪಾಪಕರವಲ್ಲ ೮೩
೨೯. ಭೋಗದಿಂದಲೇ ಕರ್ಮಕ್ಷಯವು. ೮೫
೩೦. ಹುಟ್ಟುಗುಣವು ಹುಗಿದರೂ ಹೋಗುವದಿಲ್ಲ. ೧೫೦
೩೧. ಅತ್ಯಾಶೆ ಗತಿಗೆಡಿಸಿತು. ೧೫೧
೩೨. ಮಾತಾಪಿತೃಗಳು ಶ್ರೇಷ್ಠದೈವತವು. ೧೫೧
೩೩. ದೊಡ್ಡವರ ನಿಗ್ರಹವೂ ಅನುಗ್ರಹವೇ. ೧೫೨
೩೪. ಸದ್ಗುಣಿಯೇ ಶ್ರೇಯೋವಂತನು. ೧೫೩
೩೫. ನಿಸ್ಪೃಹಿಗೆ ಜಗತ್ತೇ ತೃಣವು. ೧೫೪
೩೬. ದೊಡ್ಡವರದೆಲ್ಲ ದೊಡ್ಡದೇ. ೧೫೫
೩೭. ದೈವಾಧೀನರು ದೈವವನ್ನವಲಂಬಿಸಿಯೇ ನಡೆಯಬೇಕು. ೧೫೬
೩೮. ತೇಜಸ್ವಿಗಳ ಕಾರ್ಯಗಳೂ ತೇಜಸ್ವಿಗಳೇ. ೧೫೭
೩೯. ಅವತಾರರಹಸ್ಯ. ೧೬೮
೪೦. ಈಗಿನ ಕ್ಷತ್ರಿಯರ ಪೂರ್ವಪೀಠಿಕೆಯ ವಿಚಾರ. ೧೬೯
೪೧. ಆರಣ್ಯಕಬ್ರಾಹ್ಮಣರ ಇರವು. ೩೩೯
೪೨. ಗಾಂಧರ್ವವಿವಾಹದ ದೋಷಗಳು. ೩೪೦
೪೩. ಬ್ರಾಹ್ಮಣರು ಶೀಘ್ರಕೋಪಿಗಳು, ಆದರೆ ದೀರ್ಘದ್ವೇಷಿಗಳಲ್ಲ. ೩೪೧
೪೪. ಶ್ರೇಯಾಂಸಿ ಬಹುವಿಘ್ನಾನಿ. ೩೪೩
೪೫. ಕುಲದೀಪಕ ಪುತ್ರನೇ ಸತ್ಪುತ್ರನು. ೩೪೪
೪೬. ಸುವ್ರತರಿಗೇ ಸತ್ಪುತ್ರಪ್ರಾಪ್ತಿ. ೩೪೬
೪೭. ಸ್ತ್ರೀಯರ ಸಲಿಗೆಯು ಚಿತ್ತವಿಕಾರಹೇತುವು. ೩೫೯

೪೮. ಆಗುವದೆಲ್ಲ ನಮ್ಮ ಹಿತಕ್ಕಾಗಿಯೇ ಆಗುತ್ತದೆ. ೩೫೩

೪೯. ಋಷಿಗಳ ಶಾಸನವೇ ಧರ್ಮವು ೩೫೬

೫೦. ಈಶಸಂಕಲ್ಪವೇ ಸತ್ಯಸಂಕಲ್ಪವು. ೪೭೯

೫೧. ಸ್ವಭಾವೋ ದುರತಿಕ್ರಮಃ. ೫೧೩

೨೫. ಸರ್ವನಾಶಪ್ರಸಂಗದಲ್ಲಿ ಅಲ್ಪನಾಶವು ಕ್ಷಮ್ಯವು. ೫೨೩

೫೩. ಪರಿವಾರಕ್ಕಾಗಿ ತಾನಲ್ಲ, ತನಗಾಗಿ ಪರಿವಾರವು. ೫೩೧




ಓಂ

ನಮೋ ಭಗವತೇ ಶ್ರೀ ಲಕ್ಷ್ಮೀ ವೇಂಕಟೇಶಾಯ

— ರಹಸ್ಯ ಪ್ರಕಾಶಕವಾದ —

ಸಚಿತ್ರ

# ಮಹಾ ಭಾರತಾಮೃತ

ಎಂಬ

ಅಲೌಕಿಕ ಐತಿಹಾಸಿಕ ಗ್ರಂಥರೂಪ ತುಲಸೀಪತ್ರವನ್ನು

ವೇಂಕಟೇಶ ತಿರಕೋ ಕುಲಕರಣಿ ಗಳಗನಾಥ

ಈತನು

ತನ್ನ ಕುಲಸ್ವಾಮಿಯಾದ

ಶ್ರೀ ಲಕ್ಷ್ಮೀ ವೇಂಕಟೇಶನ ದಿವ್ಯಚರಣಗಳಲ್ಲಿ

ಅನನ್ಯಭಕ್ತಿಯಿಂದ

ಕಾಣಿಕೆಯಾಗಿ ಸಮರ್ಪಿಸಿರುವನು.



॥ ಶ್ರೀ ಗಣೇಶಾಯನಮಃ ॥

ರಹಸ್ಯಪ್ರಕಾಶಕವಾದ

ಸಚಿತ್ರ

# ಮಹಾ ಭಾರತಾಮೃತ

## ಆದಿಪರ್ವ

### ೧ ಅನುಕ್ರಮಣಿಕಾಪರ್ವ — ೧ನೇ ಅಧ್ಯಾಯ.

ನಾರಾಯಣಂ ನಮಸ್ಕೃತ್ಯ ನರಂಚೈವ ನರೋತ್ತಮಂ ।
ದೇವೀಂ ಸರಸ್ವತೀಂಚೈವ ತತೋಜಯ ಮುದೀರಯೇತ್ ॥

**ಶ್ರೀ ವೇದವ್ಯಾಸಕೃತ ಮಂಗಲಾಚರಣ** — ಈ ಯಾವತ್ತು ಬ್ರಹ್ಮಾಂಡದೊಳಗಿನ ಎಲ್ಲ ಸ್ಥಾವರ ಜಂಗಮ ಪದಾರ್ಥಗಳಲ್ಲಿ ಚಿದಾಭಾಸ ರೂಪದಿಂದ ಅನುಭವಕ್ಕೆ ಬರುವ ನರಸಂಜ್ಞೆಯುಳ್ಳ ಜೀವಾತ್ಮನನ್ನೂ, ಆ ನರಸಂಜ್ಞೆಯ ಜೀವಾತ್ಮನಿಗೆ ಯಾವಾಗಲೂ ಆಶ್ರಯಕೊಡುತ್ತಿರುವ ನಾರಾಯಣನೆಂಬ ಹೆಸರಿನ ಕಾರಣಾತ್ಮನನ್ನೂ, ಈ ನರನಾರಾಯಣಾತ್ಮಕವಾದ ಕಾರ್ಯಕಾರಣದ ಸೃಷ್ಟಿಯಿಂದ ಹೊರಗಿರುವ ಶ್ರೇಷ್ಠನಾದ ನರೋತ್ತಮನೆಂಬ ಸಂಜ್ಞೆಯುಳ್ಳ ಸಚ್ಚಿದಾನಂದರೂಪದ ಪರಮಾತ್ಮನನ್ನೂ ನಾನು ಅಭಿವಂದಿಸುವೆನು. ಅದರಂತೆ, ನರ, ನಾರಾಯಣ, ನರೋತ್ತಮ ಎಂಬ ಈ ಮೂರು ತತ್ವಗಳ ಯಥಾರ್ಥಜ್ಞಾನವನ್ನುಂಟುಮಾಡಿ

ಕೊಡುವ ದೇವೀ ಸರಸ್ವತಿಯನ್ನೂ ನಾನು ಅಭಿವಂದಿಸಿ, ಆಮೇಲೆ ಈ ಪರಮ ಕರುಣಾಶಾಲಿನಿಯಾದ ಜಗನ್ಮಾತೆಯು ಲೋಕಹಿತಕ್ಕಾಗಿ ನನ್ನ ಅಂತಃಕರಣದಲ್ಲಿ ಉತ್ಪನ್ನಮಾಡಿರುವ ಸ್ಫೂರ್ತಿಯಸಹಾಯದಿಂದ, ಈ ಭವ ಬಂಧ-ಮೋಚಕವಾದ "ಜಯ" ಅಂದರೆ ಮಹಾಭಾರತ ಗ್ರಂಥವನ್ನು ಆರಂಭಿಸುತ್ತೇನೆ. ಪ್ರತಿ ಒಬ್ಬ ಧರ್ಮಶೀಲ ಪುರುಷನು, ಸರ್ವ ಪುರು ಷಾರ್ಥ-ಪ್ರತಿಪಾದಕಗಳಾದ ಶಾಸ್ತ್ರಗಳನ್ನು ವಿವೇಚಿಸುವಾಗ, ಇದರಂತೆ ಮೊದಲಿಗೆ ನರ-ನಾರಾಯಣ-ನರೋತ್ತಮಗಳೆಂಬ ಈ ಭಗವನ್ಮೂರ್ತಿ ಗಳನ್ನು ಧ್ಯಾನಿಸಿ, ಆಮೇಲೆ ಪ್ರತಿಪಾದ್ಯ ವಿಷಯವನ್ನು ನಿರೂಪಿಸತೊಡ ಗುವದು ಸರ್ವಥೈವ ಇಷ್ಟವಾಗಿರುವದು.

ಭಗವಾನ್ ವಾಸುದೇವನಿಗೆ ನನ್ನ ನಮಸ್ಕಾರವು ; ಪರಾತ್ಪರ ಗುರು ಬ್ರಹ್ಮದೇವನಿಗೆ ನನ್ನ ನಮಸ್ಕಾರವು ; ವಸಿಷ್ಠ ಮರೀಚ್ಯಾದಿ ಪ್ರಜಾಪತಿ ಗಳಿಗೆ ನನ್ನ ನಮಸ್ಕಾರವು ; ನನ್ನ ಚಿತ್ತದಲ್ಲಿ ಯಾವಾಗಲೂ ನಿವಾಸಿಸು ತ್ತಿರುವ ಕೃಷ್ಣದ್ವೈಪಾಯನಾತ್ಮಕ ಪರಬ್ರಹ್ಮ ತತ್ವಕ್ಕೆ ನನ್ನ ನಮಸ್ಕಾ ರವು ; ಅದರಂತೆ ಸರ್ವ ವಿಘ್ನಗಳನ್ನು ನಿವಾರಿಸುವ ಹಲವು ದೇವತೆಗಳನ್ನು ನಾನು ನಮಸ್ಕರಿಸುವೆನು.

**ಶ್ರೀ ವೇದವ್ಯಾಸಕೃತ ಉಪೋದ್ಘಾತ**— ಈ ಜಗತೀತಲದೊಳಗೆ ಪೂರ್ವದಲ್ಲಿ ಲೋಮಹರ್ಷಣನೆಂಬ ಹೆಸರಿನ ಒಬ್ಬ ಮಹಾವಿಖ್ಯಾತನಾದ ಶೂದ್ರ ಪುರಾಣಿಕನು ಆಗಿಹೋದನು. ಆತನಿಗೆ ಉಗ್ರಶ್ರವನೆಂಬ ಹೆಸರಿನ ಒಬ್ಬ ಮಗನಿದ್ದನು. ಉಗ್ರಶ್ರವನಾದರೂ ಪುರಾಣಹೇಳುವಲ್ಲಿ ತನ್ನ ತಂದೆ ಯಂತೆಯೇ ನಿಪುಣನಿದ್ದನು. ಆತನು ಮಹಾ ಜ್ಞಾನಿಯು ; ಆತನಿಗೆ ಯಾವತ್ತು ಉಪನಿಷತ್ತುಗಳ ಜ್ಞಾನವು ಪೂರ್ಣವಾಗಿ ಇತ್ತು. ಒಂದು ಸಮಯದಲ್ಲಿ ಶೌನಕನೆಂಬ ಹೆಸರಿನ ಕುಲಪತಿಯು ನೈಮಿಷಾರಣ್ಯದಲ್ಲಿ ದ್ವಾದಶ ವಾರ್ಷಿಕ ಸತ್ರವನ್ನು ಆರಂಭಿಸಿದನು. ಅಲ್ಲಿ ಉಗ್ರತಪಸ್ವಿಗಳಾದ ಬ್ರಹ್ಮಋಷಿಗಳು ಪ್ರಾಪ್ತರಾದರು. ಆ ಮಹಾತ್ಮರು ಒಂದು ದಿವಸ ನಿತ್ಯ ನೈಮಿತ್ತಿಕ ಕರ್ಮಗಳನ್ನು ತೀರಿಸಿಕೊಂಡು ಸ್ವಸ್ಥರಾಗಿ ಬ್ರಹ್ಮವಿಚಾರ ಮಾಡುತ್ತಿರುವಾಗ, ಸೂತಪುತ್ರನಾದ ಆ ಉಗ್ರಶ್ರವಪುರಾಣಿಕನು ಬಂದನು. ಆತನು ಆ ಋಷಿವೃಂದದ ಮುಂದೆ ವಿನಯದಿಂದ ಕೈಜೋಡಿಸಿ ನಿಂತುಕೊಂ

ಡನು. ಆತನನ್ನು ನೋಡಿ ಮನೋಹರ ಕಥೆ ಕೇಳುವ ವಿಷಯದಲ್ಲಿ ಎಲ್ಲರೂ ಆತುರರಾಗಿ, ತಪಸ್ವಿಯಾದ ಆ ಶ್ರೇಷ್ಠ ಪುರಾಣಿಕನ ಸುತ್ತು-ಮುತ್ತು ನೆರೆದರು.

ಉಗ್ರಶ್ರವನು ಆ ಎಲ್ಲ ಮುನಿವರ್ಯರನ್ನು ವಂದಿಸಿ, ಅವರು ತೋರಿಸಿದ ಆಸನದಲ್ಲಿ ಕುಳಿತುಕೊಂಡನು. ಆಗ ಒಬ್ಬ ಋಷಿಯು ಉಗ್ರಶ್ರವನಿಗೆ--"ಸೂತಪುತ್ರಾ, ನೀನು ಎಲ್ಲಿಂದ ಬಂದೆ ? ಈವರೆಗೆ ನೀನು ಎಲ್ಲಿ ಎಲ್ಲ ವಾಸಿಸಿದೆ ?" ಎಂದು ಪ್ರಶ್ನಮಾಡಿದನು. ಅದಕ್ಕೆ ಸೌತಿಯು— "ಮುನಿಶ್ರೇಷ್ಠರೇ, ಪರೀಕ್ಷಿತಮಹಾರಾಜನ ಮಗನಾದ ಮಹಾತ್ಮ ಜನಮೇಜಯರಾಜನ ಸರ್ಪಸತ್ರಕ್ಕೆ ನಾನು ಹೋಗಿದ್ದೆನು. ಅಲ್ಲಿ ಆ ರಾಜೇಂದ್ರನಿಗೆ ವೈಶಂಪಾಯನರು, ಕೃಷ್ಣದ್ವೈಪಾಯನ-ವ್ಯಾಸಪ್ರಣೀತವಾದ ಮಹಾಭಾರತ ಗ್ರಂಥದೊಳಗಿನ ಪುಣ್ಯಕಾರಕಗಳಾದ ಹಲವು ಹೃದಯಂಗಮ ಕಥೆಗಳನ್ನು ಹೇಳಿದರು. ಅವನ್ನು ನಾನು ಯಥಾವಿಧಿ ಶ್ರವಣಮಾಡಿದೆನು. ಆಮೇಲೆ ಹಲವು ತೀರ್ಥಕ್ಷೇತ್ರಗಳನ್ನು ತಿರುಗುತ್ತ, ಸಮಂತಪಂಚಕವೆಂಬ ಹೆಸರಿನ ಪರಮಪಾವನವಾದ ದೇಶಕ್ಕೆ ಹೋದೆನು. ಅಲ್ಲಿಯೇ ಪೂರ್ವದಲ್ಲಿ ಕೌರವ-ಪಾಂಡವರ ಯುದ್ಧವಾಯಿತು. ಈಗ ನಾನು ಆ ಸಮಂತಪಂಚಕ ಕ್ಷೇತ್ರದಿಂದ ತಮ್ಮ ದರ್ಶನಕ್ಕಾಗಿ ಇಲ್ಲಿಗೆ ಬಂದೆನು. ಮಹಾತ್ಮರೇ, ಸೂರ್ಯಾಗ್ನಿಗಳಂತೆ ತೇಜಸ್ವಿಗಳಾದ ತಾವು, ನನಗೆ ಪ್ರತ್ಯಕ್ಷ ಪರಬ್ರಹ್ಮವಾಗಿಯೇ ತೋರುವಿರಿ. ಮಹಾರಾಜ, ಅಂತರ್ಬಾಹ್ಯಶುದ್ಧಿಯನ್ನುಂಟುಮಾಡುವ ಸ್ನಾನ-ಸಂಧ್ಯಾದಿ ಕರ್ಮಗಳನ್ನು ತೀರಿಸಿಕೊಂಡು, ನೀವು ಸ್ವಸ್ಥವಾಗಿ ಕುಳಿತಿರುವಿರಿ ; ಆದ್ದರಿಂದ ಪರಮಪಾವನವಾದ ಪುರಾಣಕಥೆಗಳು, ದಾನಮೋಕ್ಷಾದಿಗಳ ನಿಯಮಗಳು, ಅರ್ಥಪ್ರಾಪ್ತಿಯ ಉತ್ತಮ ಮಾರ್ಗಗಳು, ದೊಡ್ಡದೊಡ್ಡ ಮಹಾತ್ಮರ ವೃತ್ತಾಂತಗಳು, ಮಹಾ ಮಹಾ ರಾಜರ್ಷಿಗಳ ಚರಿತ್ರಗಳು ಇವುಗಳಲ್ಲ ಯಾವವನ್ನು ನಿಮಗೆ ಹೇಳಲಿ ? ದಯಮಾಡಿ ಅಪ್ಪಣೆ ಕೊಡಿಸಬೇಕು," ಎಂದು ಕೇಳಲು, ಋಷಿಗಳು ಮಹಾಭಾರತ ಕೇಳುವ ತಮ್ಮ ಇಚ್ಛೆಯನ್ನು ಪ್ರಕಟಮಾಡಿದರು.

**ಸೌತಿಕೃತ ಮಂಗಲಾಚರಣ** — ಋಷಿಗಳ ಈ ಇಚ್ಛೆಯಂತೆ ಭಾರತವನ್ನು ಹೇಳುವದಕ್ಕಾಗಿ ಸೂತಪುತ್ರ ಉಗ್ರಶ್ರವನು ಮಂಗಲಾ

**ಚ**ರಣವನ್ನು ಮಾಡುವನು—"ಯಾರಿಂದ ಸ್ಥಿರಚರಾತ್ಮಕ ಸರ್ವವಿಶ್ವದ ಉತ್ಪತ್ತಿಯಾಗುವದೋ, ಗಾಢನಿದ್ರೆಯಲ್ಲಿಯೂ, ಪ್ರಳಯಕಾಲದಲ್ಲಿಯೂ ಸರ್ವಬ್ರಹ್ಮಾಂಡದ ಲಯವು ಯಾರಲ್ಲಿ ಆಗುವದೋ, ಸರ್ವಜಗತ್ತಿನ ಯೋಗಕ್ಷೇಮವು ನಡೆಯುವದಕ್ಕಾಗಿ ಯಜ್ಞ-ಯಾಗಾದಿಗಳಲ್ಲಿ ಯಾರನ್ನು ಕರೆದು ಸಾಮ-ಮಂತ್ರಗಳಿಂದ ಗಾಯನಮಾಡುವರೋ, ಯಾವನು ಜೀವ ಹಾಗು ಈಶ್ವರರೂಪಗಳಿಂದ ಸರ್ವತ್ರ ವ್ಯಾಪಿಸಿರುವನೋ, ಯಾವನು ಅದ್ವಿತೀಯನು, ಸತ್ಯನು, ನಿತ್ಯನು, ಪರಬ್ರಹ್ಮರೂಪನು, ದೇಶಕಾಲಾದಿಗಳಿಂದ ಅಪರಿಚ್ಛಿನ್ನನು ಆಗಿರುವನೋ, ಯಾವನ ವಾಸ್ತವಿಕಸ್ವರೂಪವು, ಕಾರ್ಯ-ಕಾರಣ ಸೃಷ್ಟಿಯಿಂದ ಹೊರಗೆ ಇದ್ದು, ವಾಸ್ತವಿಕವಾಗಿ ಸುಳ್ಳು ಇರುವ ಆ ಕಾರ್ಯ-ಕಾರಣದ ಸೃಷ್ಟಿಯು ಕೇವಲ ಅಜ್ಞಾನದಿಂದ ಸತ್ಯವಾಗಿ ಯಾವನ ಯೋಗದಿಂದ ತೋರುವದೋ, ಯಾವನಿಂದ ಉಚ್ಚ-ನೀಚವಾಗಿರುವ ಸಕಲ ವಸ್ತುಗಳ ಉತ್ಪತ್ತಿಯಾಗುವದೋ, ಯಾವನು ವಸ್ತುತಃ ಅನಾದಿಯು, ಅನಂತನು, ವಿಕಾರಶೂನ್ಯನು ಇದ್ದು, ಕೇವಲ ಭಕ್ತರ ಕಲ್ಯಾಣಕ್ಕಾಗಿ ಹೊಸಹೊಸ ರೂಪ (ಅವತಾರ) ಗಳನ್ನು ಧರಿಸುವನೋ, ಸಂಸಾರವು ಅನಂತವಾದದ್ದಿದ್ದು, ಅದರ ಮೂಲದಲ್ಲಿ ಆದಿಕಾರಣರೂಪದಿಂದ ಈ ಪರಮಾತ್ಮನು ಇರುವದರಿಂದ ಈ ಯಾವನ ಲಯವು ಎಂದೂ ಆಗುವದಿಲ್ಲವೋ, ಸರ್ವವಿಶ್ವದಲ್ಲಿ ಯಾವನು ಅತ್ಯಂತ ಶ್ರೇಷ್ಠನು ಇರುವನೋ, ಅದರಂತೆ, ಯಾವನು ಮಂಗಲದಾಯಕನಿದ್ದು, ಸ್ವತಃ ಮಂಗಲಮೂರ್ತಿಯು ಇರುವನೋ, ಯಾವನಲ್ಲಿ ದೋಷಾದಿಗಳ ವಾಸ್ತವ್ಯವು ಮೂಲತಃ ಇರದೆ, ಯಾವನು ಪಾವನತ್ವದ ನಿಧಾನವಾಗಿರುವನೋ, ಯಾವನು ಇಂದ್ರಿಯಾದಿಗಳ ನಿಯಂತ್ರವಾಗಿದ್ದು, ಚರಾಚರಗಳ ಅಧಿಪತಿಯಾಗಿರುವನೋ, ಅಂಥ ಆ ಭಕ್ತಕಾಮಕಲ್ಪದ್ರುಮನೂ, ಜಗದ್ವ್ಯಾಪಕನೂ, ಭವಭಂಜಕನೂ, ಯಜ್ಞಸ್ವರೂಪನೂ ಆದ ಪರಮಾತ್ಮನನ್ನು ನಾನು ನಮಸ್ಕರಿಸುವೆನು."

**ಜಗತ್ತಿನ ಉತ್ಪತ್ತಿ**—ಸೂತನು ಈಪ್ರಕಾರ ಮಂಗಲಾಚರಣವನ್ನು ಮಾಡಿ ಶೌನಕಾದಿಗಳನ್ನು ಕುರಿತು—"ಬ್ರಾಹ್ಮಣೋತ್ತಮರೇ, ಅತ್ಯಂತ ಮಹತ್ವದ ಭಾರತವನ್ನು ಹೇಳುವಾಗ ಮೊದಲು ಜಗತ್ತಿನ ಉತ್ಪತ್ತಿ

ಯನ್ನೂ, ಉಪಸಂಹಾರವನ್ನೂ, ದೇವಸೃಷ್ಟಿಯನ್ನೂ ಹೇಳುವೆನು ಕೇಳಿರಿ. ಈ ಸೃಷ್ಟಿಯೊಳಗಿನ ಅಗಣಿತವಸ್ತುಗಳೂ, ಅವುಗಳ ಅನಂತವ್ಯಾಪಾರಗಳೂ ಭಗವನ್ಮಾಯೆಯ ಕಾರ್ಯಗಳಾಗಿರುವವು. ಮಾಯೆಯ ಈ ಲೋಕೋತ್ತರ ಸಾಮರ್ಥ್ಯವನ್ನು ಆಲೋಚಿಸಿದರೆ, ಅದರ ಸಾಮರ್ಥ್ಯದ ವಿಷಯವಾಗಿ ಆಶ್ಚರ್ಯವಾಗುತ್ತದೆ. ನಿಜವಾಗಿಯೆಂದರೆ, ಸರ್ವವಿಶ್ವವನ್ನು ಹುಟ್ಟಿಸುವ ಈ ಮಾಯೆಯು ಪೂರಾ ಪರತಂತ್ರವಾಗಿರುವದು. ಆ ಮಾಯೆಯಲ್ಲಿ ತೋರುವ ವಿಲಕ್ಷಣಪರಾಕ್ರಮವು, ಅಚಿಂತ್ಯನಾದ ಆ ಲೋಕನಾಯಕ ಪರಮಾತ್ಮನದಾಗಿರುತ್ತದೆ. ಮಾಯೆಯು ಕೇವಲ ಪರಮಾತ್ಮನ ಕೈಯೊಳಗಿನ ಕಟ್ಟಿಗೆಯ ಗೊಂಬೆಯಾಗಿರುವದು ಆತನ ಪ್ರೇರಣೆಯಂತ ಆ ಗೊಂಬೆಯು ಕಾರ್ಯಮಾಡುತ್ತದೆ. ಪರಮಾತ್ಮನ ಶಕ್ತಿಯಿಂದಲೇ ಮಾಯೆಗೆ ಜಗತ್ತನ್ನು ಹುಟ್ಟಿಸಲಿಕ್ಕೆ ಬರುತ್ತದೆ; ಮತ್ತು ಆತನ ಶಕ್ತಿಯಿಂದಲೇ ಮಾಯೆಯು ಸುಮ್ಮನಾಗಿ ಜಗತ್ತಿನ ಉಪಸಂಹಾರವಾಗುತ್ತದೆ.

ಋಷಿಗಳೇ, ಪ್ರಳಯಕಾಲದಲ್ಲ, ಅಂದರೆ ಈ ಸೃಷ್ಟಿಯು ಹುಟ್ಟುವ ಮೊದಲು ಮಾಯೆಯ ಶಕ್ತಿಯು ಸ್ತಿಮಿತವಾಗಿ, ಆ ಮಾಯೆಯು ಪರಬ್ರಹ್ಮಸ್ವರೂಪದಲ್ಲ ಲೀನವಾಗಿ ಕುಳಿತುಕೊಂಡಿತ್ತು. ಆಗ ದ್ರಷ್ಟಾ, ದೃಶ್ಯ, ದರ್ಶನ ಅಂದರೆ ನೋಡುವವನು, ನೋಡಿಸಿಕೊಳ್ಳುವದು, ನೋಡೋಣವು ಅಥವಾ ಜ್ಞಾತಾ, ಜ್ಞೇಯ, ಜ್ಞಾನ ಅಂದರೆ ತಿಳಿಯುವವನು, ತಿಳಿಯತಕ್ಕದ್ದು, ತಿಳಿಯೋಣವು ಇತ್ಯಾದಿ ವಿಕಾರಗಳು ಮಾಯೆಯ ಅಭಾವದಿಂದ ನಷ್ಟವಾಗಿದ್ದವು. ಈ ಸ್ಥಿತಿಯು ಎಲ್ಲಕಡೆಗೂ ಇರುವಾಗ, ಪರಮಾತ್ಮನ ಮನಸ್ಸಿನಲ್ಲಿ ಜಗದುತ್ಪತ್ತಿಯ ವಿಚಾರವು ಉತ್ಪನ್ನವಾಗಲು, ಸರ್ವ ತ್ರೈಲೋಕ್ಯಗಳನ್ನು ಧರಿಸುವಂತಹ ಒಂದು ತತ್ತ್ವಯು ಉತ್ಪನ್ನವಾಯಿತು. ಋಷಿಗಳೇ, ಈ ಸೃಷ್ಟಿಯೊಳಗಿನ ಸ್ಥಾವರ-ಜಂಗಮ ಸರ್ವವಸ್ತುಗಳನ್ನು ಉತ್ಪನ್ನಮಾಡುವ ಈ ತತ್ತ್ವಯು ಯಾವತ್ತು ಸೃಷ್ಟಿಯ ಅವಿನಾಶಿಬೀಜವಾಗಿರುವದು. ಪ್ರತಿಒಂದು ಕಲ್ಪದ ಆರಂಭದಲ್ಲಿ ಈ ತತ್ತ್ವಯು ಬ್ರಹ್ಮಾಂಡದ ಉತ್ಪತ್ತಿಯ ಕಾರಣವಾಗಿರುವದರಿಂದ, ಇದಕ್ಕೆ "ಮಹದ್ದಿವ್ಯ" ಎಂಬ ಸಂಜ್ಞೆಯನ್ನು ಕೊಡುವರು. **ಈ ತತ್ತ್ವಯಲ್ಲಿ (ಕಾರಣಾತ್ಮನಲ್ಲಿ) ಅದ್ಭುತನು, ಅಚಿಂತ್ಯನು, ಸರ್ವತ್ರ**

ಸಮನಾಗಿ ವ್ಯಾಪ್ತನು, ಅವ್ಯಕ್ತನು, ಜಗತ್ಕರ್ತೃಕ ಸೂಕ್ಷ್ಮನು, ಕಾರ್ಯ ಕಾರಣರೂಪನು, ನಿತ್ಯನು, ಸತ್ಯನು, ಜ್ಞಾನಮಯನು ಆದ ಪರಮಾತ್ಮನು ಪ್ರವೇಶಿಸಿದನೆಂದು ವೇದಗಳು ಹೇಳುವವು.

ಬಳಿಕ ಆ ತತ್ತ್ವದಿಂದ ಹಿರಣ್ಯಗರ್ಭನೆಂಬ ಹೆಸರಿನ ಪ್ರಜಾಪತಿಯು ಉತ್ಪನ್ನನಾದನು. ಈತನು ಯಾವತ್ತು ತ್ರಿಭುವನಗಳ ಅಧಿಪತಿಯಾಗಿದ್ದು, ಪಿತಾಮಹನಾಗಿರುವನು. ಬ್ರಹ್ಮ-ವಿಷ್ಣು-ಮಹೇಶ್ವರರು ಆ ಹಿರಣ್ಯಗರ್ಭನ ರಾಜಸ-ಸಾತ್ವಿಕ-ತಾಮಸ ವಿಭೂತಿಗಳಾಗಿರುವರು. ಇವರಲ್ಲಿ ಬ್ರಹ್ಮನೆಂಬ ಒಂದನೆಯ ವಿಭೂತಿಯಿಂದ ಮನು, ಪರಮೇಷ್ಠಿ, ಪ್ರಾಚೇತಸ ದಕ್ಷ, ಕ್ರೋಧ, ತಮ, ದಮ, ವಿಕ್ರೀತ, ಅಂಗಿರಾ, ಕರ್ದಮ, ಅಶ್ವ ಎಂಬ ಹತ್ತುಜನ ದಕ್ಷಪುತ್ರರು, ಮರೀಚಿಯೇ ಮೊದಲಾದ ಸಪ್ತ ಋಷಿಗಳು, ಹದಿನಾಲ್ಕುಮಂದಿ ಮನುಗಳು ಹೀಗೆ ಮೂವತ್ತೊಂದುಜನ ಪ್ರಜಾಪತಿಗಳು ಉತ್ಪನ್ನರಾದರು. ಇನ್ನು ಎರಡನೆಯ ವಿಷ್ಣುವೆಂಬ ವಿಭೂತಿಯಿಂದ ಮತ್ಸ್ಯಕೂರ್ಮಾದಿ ಅಚಿಂತ್ಯ-ಅವತಾರ-ಮೂಲವಾದ ಪುರುಷನಾಮಕ ವಿಭೂತಿ, ವಿಶ್ವೇದೇವತೆಗಳು, ಆದಿತ್ಯರು, ವಸುಗಳು, ಅಶ್ವಿನೀಕುಮಾರರು ಹುಟ್ಟಿದರು. ಅದರಂತೆ, ಮಹೇಶ್ವರನೆಂಬ ಮೂರನೆಯ ವಿಭೂತಿಯಿಂದ ಯಕ್ಷರು, ಸಾಧ್ಯರು, ಪಿಶಾಚಗಳು, ಗುಹ್ಯಕರು, ಪಿತರರು ಹುಟ್ಟಿದರು. ಇದರಂತೆ ಆ ಶಂಕರನಿಂದಲೇ ದೊಡ್ಡದೊಡ್ಡ ಜ್ಞಾನಿಗಳು, ಬ್ರಹ್ಮಜ್ಞರು, ಧೈರ್ಯೌದಾರ್ಯಾದಿ ಸಕಲಗುಣಮಂಡಿತ ಭೂಪಾಲರು, ಪೃಥಿವೀ-ಅಪ್-ತೇಜ-ವಾಯು-ಆಕಾಶಗಳೆಂಬ ಮಹಾಭೂತಗಳು, ಚಂದ್ರ, ಸೂರ್ಯ, ಸಂವತ್ಸರ, ಋತು, ಮಾಸ, ಪಕ್ಷ, ಅಹೋ-ರಾತ್ರ ಇವೆಲ್ಲ ಹುಟ್ಟಿದವು. ಋಷಿಗಳೇ, ಇವುಗಳಲ್ಲದೆ ಈ ಜಗತ್ತಿನಲ್ಲಿ ಬೇರೆಯಾವವಾದರೂ ದೃಷ್ಟ-ದೃಶ್ಯ, ಜ್ಞಾನ-ಜ್ಞೇಯ ಅಥವಾ ಶ್ರುತ-ಶ್ರಾವ್ಯ ಇವು ಇದ್ದರೆ, ಅವೆಲ್ಲವೂ ಈ ಬೃಹತ್ ಅಂಡದ ಮುಖ್ಯ ಮೂರು ವಿಭೂತಿಗಳಾದ ಬ್ರಹ್ಮ-ವಿಷ್ಣು-ಮಹೇಶ್ವರರಲ್ಲಿ ಯಾವದೊಂದು ವಿಭೂತಿಯಿಂದ ಉತ್ಪನ್ನವಾಗಿರುವವೆಂದು ತಿಳಿಯಬೇಕು.

**ಜಗತ್ತಿನ ಉಪಸಂಹಾರವು**— ಕಲ್ಪಕಾಲದ ಆರಂಭವಾಯಿತೆಂದರೆ, ಮೇಲೆ ಹೇಳಿದಂತೆ ಜಗತ್ತಿನ ಉತ್ಪತ್ತಿಯಾಗುತ್ತದೆ. ಕಲ್ಪಕಾಲವು

ಮುಗಿಯುವಕಾಲದಲ್ಲಿ ಪುನಃ ಪರಮಾತ್ಮನಲ್ಲಿಯೇ ಜಗತ್ತಿನ ಉಪಸಂಹಾರ ವಾಗುತ್ತದೆ. ವಸಂತಾದಿ ಆಯಾ ಋತುಗಳಲ್ಲಿ ತೋರುವ ಚಿಗುರು, ಹೂ ಮೊದಲಾದ ಋತುಚಿಹ್ನಗಳು ಆಯಾ ಋತುಗಳ ಸಮಾಪ್ತಿಕಾಲದಲ್ಲಿ ಅಡಗಿ ಹೋಗುವಂತೆ, ಪ್ರತಿ ಒಂದು ಕಲ್ಪಾರಂಭದಲ್ಲ ಸೃಷ್ಟಿಯು ಉದಯವಾಗಿ, ಕಲ್ಪಾಂತದಲ್ಲಿ ಸೃಷ್ಟಿಯು ಅದೃಶ್ಯವಾಗುವದು ; ಆದರೆ ಸೃಷ್ಟಿಯ ಆತ್ಯಂತಿಕ, ಅಂದರೆ, ಸಹಮೂಲನಾಶವು ಎಂದೂ ಆಗುವದಿಲ್ಲ. ಋಷಿಗಳೇ, ಸೃಷ್ಟಿಯ ಈ ಉತ್ಪತ್ತಿ-ಪ್ರಳಯಗಳ ವಾಸ್ತವಿಕ ಕಾರಣವು ಮಾಯೆಯ ಅದ್ವಿತೀಯ ಶಕ್ತಿಯಾಗಿರುವದು. ಪರಬ್ರಹ್ಮದ ಯಥಾರ್ಥಜ್ಞಾನದಿಂದ ಮಾಯೆಯ ಪಾರತಂತ್ರ್ಯದ ಅನುಭವವಾಯಿತೆಂದರೆ, ಈ ಜಗತ್ತಿನ ವಿಷಯದ ತುಚ್ಛತೆಯು ಕೂಡಲೆ ಮನಸ್ಸಿನಲ್ಲಿ ಬಂದು, ಆಮೇಲೆ ಜೀವನು ಪರಮಾತ್ಮನ ಸಚ್ಚಿನ್ಮಯರೂಪದಲ್ಲಿ ಲೀನನಾಗಿ ಶಾಶ್ವತ ಸುಖವನ್ನು ಅನುಭವಿಸತೊಡಗುವನು. ಜ್ಞಾನರೂಪ ಸೂರ್ಯನಿಂದ ಮಾಯಾರೂಪ ಅಂಧಕಾರದ ನಾಶವಾಗುವವರೆಗೆ, ಭೂತಗಳ ಸಂಹಾರಮಾಡುವ, ಹಾಗು ಅವುಗಳನ್ನು ಪುನಃ ಹುಟ್ಟಿಸುವ ಆದ್ಯಂತರಹಿತವಾದ ಕಾಲಚಕ್ರವು ಈ ಬ್ರಹ್ಮಾಂಡದಲ್ಲಿ ಒಂದೇಸವನೆ ತಿರುಗುತ್ತಿರುವದೆಂಬದನ್ನು ಲಕ್ಷದಲ್ಲಿಡಿರಿ.

**ದೇವಸೃಷ್ಟಿ**— ಋಷಿಗಳೇ, ಹಿಂದೆ ಹೇಳಿದಂತೆ ಬೃಹತ್ ಅಂಡದಲ್ಲಿ ಪ್ರವೇಶಿಸಿದ ಜ್ಞಾನಮಯ ಪರಮಾತ್ಮರೂಪ ಚೈತನ್ಯದಿಂದಲೇ ಮುಂದೆ ದೇವಾದಿಕ ಚೇತನಸೃಷ್ಟಿಯು ಉದಯಹೊಂದಿತು. ಮುಖ್ಯ ದೇವತೆಗಳು ಮೂವತ್ತುಮೂರು ಜನರು ಇರುವರು. ಅವರು—ಎಂಟುಜನ ವಸುಗಳು, ಹನ್ನೊಂದುಜನ ರುದ್ರರು, ಹನ್ನೆರಡುಜನ ಆದಿತ್ಯರು, ಇಂದ್ರ, ಪ್ರಜಾಪತಿ ಎಂಬವರು ಆಗಿರುವರು. ಈ ಮೂವತ್ತುಮೂರು ಕೋಟಿಯಿಂದಲೇ (ಮುಖ್ಯ ವರ್ಗದಿಂದಲೇ) ಮೂವತ್ತುಮೂರು ನೂರು, ಮುಂದೆ ಮೂವತ್ತುಮೂರು ಸಾವಿರ ದೇವತೆಗಳಾದರು. ಇದು ದೇವಸೃಷ್ಟಿಯ ಸಂಕ್ಷಿಪ್ತ ಲಕ್ಷಣವೇ ಆಗಿರುವದು ; ಯಾಕಂದರೆ, ಇವುಗಳ ವಿಭೂತಿಗಳು ಅಗಣಿತವಾಗಿರುತ್ತವೆ.

**ಭಾರತದ ವಿಷಯವೂ, ಅದರ ಅಭ್ಯಾಸವೂ**— ಋಷಿಗಳೇ, ಈ ಭಾರತ ಗ್ರಂಥದಲ್ಲಿ ದೇವಸೃಷ್ಟಿ, ಭೂತಸೃಷ್ಟಿ, ಚತುರ್ವಿಧ ಪುರುಷಾರ್ಥ

ಗಳು, ಆ ಪುರುಷಾರ್ಥಗಳನ್ನು ವಿವೇಚಿಸುವ ಶ್ರುತಿ-ಸ್ಮೃತಿ-ಶಾಸ್ತ್ರ ಇತ್ಯಾದಿ ವಿವಿಧ ವಿಷಯಗಳು ವಿವೇಚಿಸಲ್ಪಟ್ಟಿರುವವು. ಈ ಮೊದಲಿ ಹೇಳಿರುವ ಸೃಷ್ಟಿಯ ಉಪಕ್ರಮೋಪಸಂಹಾರಗಳು ಭಗವಾನ್ ವೇದವ್ಯಾಸರಿಗೆ ಯೋಗಬಲದಿಂದ ಗೋಚರವಾದವು. ದೃಢಸಮಾಧಿಯ ಅನುಷ್ಠಾನದಿಂದ ಅವರ ಹೃದಯದಲ್ಲಿ ಸಂಪೂರ್ಣ ಇತಿಹಾಸವೂ, ಸಕಲ ಶ್ರುತಿಗಳೂ ಪ್ರಕಟವಾದವು. ಅವನ್ನೆಲ್ಲ ಈ ಗ್ರಂಥದಲ್ಲಿ ತಾತ್ಪರ್ಯರೂಪದಿಂದ ವಿಷಯವು ದೃಢವಾಗಬೇಕೆಂದು ಸಂಕ್ಷೇಪವಾಗಿಯೂ, ವಿಸ್ತಾರವಾಗಿಯೂ ವಿವರಿಸಿರುವರು. ಭಾರತವು ಎಲ್ಲಿಂದ ಆರಂಭವಾಯಿತೆಂಬ ಬಗ್ಗೆ ಮತಭೇದಗಳಿರುವವು. ಕೆಲವರು "ಓಂ ನಮೋ ಭಗವತೇ ವಾಸುದೇವಾಯ" ಎಂಬ ಮಹಾಮಂತ್ರದಿಂದ, ಅಂದರೆ ಆದಿಪರ್ವದ ಮೊದಲನೇ ಅಧ್ಯಾಯದ ಆರಂಭದಿಂದಲೇ ಆಯಿತೆನ್ನುವರು ; ಕೆಲವರು ಆಸ್ತಿಕನ ಚರಿತ್ರದಿಂದ, ಅಂದರೆ ಆದಿಪರ್ವದ ಹದಿಮೂರನೇ ಅಧ್ಯಾಯದಿಂದ ಆರಂಭವಾಯಿತೆನ್ನುವರು ; ಕೆಲವರು ಉಪರಿಚರ ವಸುವಿನ ಆಖ್ಯಾನದಿಂದ, ಅಂದರೆ ಆದಿಪರ್ವದ ಅರವತ್ತುಮೂರನೇ ಅಧ್ಯಾಯದಿಂದ ಆರಂಭವಾಯಿತೆನ್ನುವರು. ಭಾರತದ ಆರಂಭವು ಎಲ್ಲಿಂದಲೇ ಆಗಿರಲಿ, ಆದರೆ ಅದರ ಮಹತ್ವದ ವಿಷಯದಲ್ಲಿಯೂ, ಜ್ಞಾನಪ್ರತಿಪಾದಕತ್ವದ ವಿಷಯದಲ್ಲಿಯೂ ಮತಭೇದವಿಲ್ಲವು.

**ವ್ಯಾಸ ಚಿಂತಾ ಪರಿಹಾರ** — ಹೀಗೆ ವ್ಯಾಸರು ಉಗ್ರ ತಪಸ್ಸಿನಿಂದಲೂ, ಕಠಿಣ ಬ್ರಹ್ಮಚರ್ಯದಿಂದಲೂ ಸಮಾಧಿಯೋಗವನ್ನು ಸಾಧಿಸಿ, ಸನಾತನ ವೇದದ ವಿಭಾಗಗಳನ್ನು ಮಾಡಿದರು ; ಹಾಗು ಆ ವೇದಗಳ ತತ್ವಗಳ ವಿವೇಚನವನ್ನು ಮಾಡುವದಕ್ಕಾಗಿ, ಪರಮಪಾವನವಾದ ಭಾರತವೆಂಬ ಇತಿಹಾಸದ ಸುವ್ಯವಸ್ಥಿತ ರಚನೆಯನ್ನು ಅಂತರಂಗದಲ್ಲಿ ಮಾಡಿದರು ; ಆದರೆ ಅದನ್ನು ಬರೆಯದೆ ಪಾಠಪ್ರವಚನಕ್ಕೆ ಹೇಗೆ ಅನುಕೂಲವಾಗಬೇಕು ? ಆದ್ದರಿಂದ ಯೋಗ್ಯ ಲೇಖಕನು ಸಿಗದಿದ್ದರೆ, ತಮ್ಮ ಅಂತರಂಗದ ಗ್ರಂಥರಚನೆಯ ಶ್ರಮವು ವ್ಯರ್ಥವಾಗುವದೆಂದು ಅವರು ಚಿಂತಿಸತೊಡಗಿದರು. ಅವರ ಈ ಚಿಂತೆಯನ್ನು ಲೋಕಗುರುವಾದ ಬ್ರಹ್ಮದೇವರು ಅರಿತು, ಲೋಕಕಲ್ಯಾಣಕ್ಕಾಗಿ ವ್ಯಾಸರಿಗೆ ಪ್ರತ್ಯಕ್ಷವಾದರು. ಆಗ

ವ್ಯಾಸರು ಬ್ರಹ್ಮದೇವರನ್ನು ಪೂಜಿಸಿ ತಮ್ಮ ಚಿಂತೆಯ ಕಾರಣವನ್ನು ಹೇಳಲು, ಬ್ರಹ್ಮದೇವರು—"ಎಲೈ ವ್ಯಾಸನೇ, ಈ ಲೋಕದಲ್ಲಿ ತಪೋನಿಷ್ಠರೂ, ಮಹಾಜ್ಞಾನಿಗಳೂ ಆದ ಋಷಿಗಳು ಬಹುಜನರಿರುವರು; ಆದರೆ ಅವರಲ್ಲಿ ನಿನ್ನಂತೆ ಅಧ್ಯಾತ್ಮಶಾಸ್ತ್ರಪ್ರವೀಣರು ಒಬ್ಬರೂ ಇಲ್ಲವು; ಆದ್ದರಿಂದ ನಿನಗೆ ನಾನು ಸರ್ವಬ್ರಹ್ಮಜ್ಞರಲ್ಲಿ ಅಗ್ರಪದವನ್ನು ಕೊಡುವೆನು. ಅಪ್ಪಾ, ನಿನ್ನ ವಾಣಿಯು ಸತ್ಯವನ್ನೂ, ವೇದವನ್ನೂ ಅನುಸರಿಸಿರುವದರಿಂದ, ನಿನ್ನ ಗ್ರಂಥಕ್ಕೆ ಕಾವ್ಯವೆಂಬ ಸಂಜ್ಞೆಯನ್ನು ಕೊಟ್ಟದ್ದು ನಿಜವಾಗಿಯೇ ಅನ್ವರ್ಥಕವಾಗಿರುವದು. ನಿನ್ನ ಈ ಕಾವ್ಯವನ್ನು ಬೇರೆ ಯಾವ ಕಾವ್ಯಗಳೂ ಸರಿಗಟ್ಟಲಾರವು. ಎಲೈ ಪರಾಶರಪುತ್ರನೇ, ನಿನ್ನ ಕಾವ್ಯವನ್ನು ಬರೆಯಲಿಕ್ಕೆ ವಿದ್ಯಾಧಿಪತಿಯಾದ ವಿಘ್ನನಾಯಕ ಗಣಪತಿಯೇ ಯೋಗ್ಯನಾಗಿರುತ್ತಾನೆ. ನೀನು ಆತನ ಸ್ಮರಣಮಾಡು, ಅಂದರೆ ಆತನು ಪ್ರಕಟನಾಗಿ ನಿನ್ನ ಚಿಂತೆಯನ್ನು ದೂರಮಾಡುವನು".

**ವ್ಯಾಸ ಗಣಪತಿ ಸಂವಾದ**-ಶೌನಕಾದಿ ಋಷಿಗಳೇ, ಜಗದ್ಗುರುವಾದ ಬ್ರಹ್ಮದೇವರು ವ್ಯಾಸರಿಗೆ ಹೀಗೆ ಹೇಳಿ, ತಮ್ಮ ಸ್ಥಳಕ್ಕೆ ಹೊರಟು ಹೋದರು. ಬಳಿಕ ವ್ಯಾಸರು ಗಣನಾಯಕನ ಸ್ಮರಣಮಾಡಿದಕೂಡಲೆ, ಆ ಭಕ್ತಕಾಮಕಲ್ಪದ್ರುಮನಾದ ಭಗವಾನ್ ಹೇರಂಬನು ಅಲ್ಲಿ ಪ್ರಕಟನಾದನು. ಆಗ ಸತ್ಯವತೀ-ಸುತ-ವ್ಯಾಸರು ಆ ಗಣಪತಿಯನ್ನು ಪೂಜಿಸಿ ಆತನನ್ನು ಕುರಿತು—

ವ್ಯಾಸ—ವಿಘ್ನೇಶಾ, ನಾನು ಮನಸ್ಸಿನಲ್ಲಿ ರಚಿಸಿರುವ ಭಾರತವನ್ನು ಸ್ವತಃ ಹೇಳುವೆನು, ಅದನ್ನು ನೀನು ಬರೆಯಬೇಕು.

ಗಣಪತಿ—ಅಪ್ಪಾ, ವ್ಯಾಸಾ, ನೀನು ಹೇಳಿದಂತೆ ಮಾಡುವೆನು; ಆದರೆ ಬರೆಯುವಾಗ ನನ್ನ ಕೈ ನಿಲ್ಲಬಾರದು ನೋಡು; ಹಾಗಿದ್ದರೆ ನಾನು ನಿನ್ನ ಲೇಖಕನಾಗುವೆನು.

ವ್ಯಾಸ—ಹಾಗೆಯೇ ಆಗಲಿ; ಆದರೆ ನಾನು ಹೇಳುವದರ ಅರ್ಥಗ್ರಹಣಮಾಡದೆ ಮಾತ್ರ ನೀನು ಬರೆಯಬಾರದು; ಅಂದರೆ ನಿನ್ನ ನಿಯಮವನ್ನು ನಾನು ಒಪ್ಪಿಕೊಳ್ಳುವೆನು.

ಗಣಪತಿ— ಹಾಗೆಯೇ ಆಗಲಿ.

**ಕೂಟಶ್ಲೋಕಗಳು** — ಹೀಗೆ ಸಂಭಾಷಣವಾದ ಬಳಿಕ ವ್ಯಾಸರು ಮಹಾಭಾರತವನ್ನು ಹೇಳಿದರು, ಗಣಪತಿಯು ಬರೆದನು. ಈ ಭಾರತದಲ್ಲಿ ವ್ಯಾಸಮುನಿಗಳು ಬುದ್ಧಿಪೂರ್ವಕವಾಗಿ ಕೌತುಕದಿಂದ ಎಷ್ಟೋ ಸ್ಥಳಗಳಲ್ಲಿ ಗೂಢಾರ್ಥವನ್ನಿಟ್ಟಿರುವರು. ಅದನ್ನು ಅರಿತುಕೊಳ್ಳುವದು ಬಹಳ ಕಠಿಣ ವಾಗಿರುವದು. ಈ ಕಾಠಿಣ್ಯದ ಸಂಬಂಧದಿಂದ ಸ್ವತಃ ವ್ಯಾಸರೇ ಪ್ರತಿಜ್ಞೆ ಯಿಂದ–"ಈ ಗ್ರಂಥದೊಳಗಿನ ಎಂಟುಸಾವಿರದ ಎಂಟುನೂರು ಶ್ಲೋಕಗಳ ಅರ್ಥವು ನನಗೆ, ಅಥವಾ ನನ್ನ ಮಗ ಶುಕನಿಗೆ ಸರಿಯಾಗಿ ತಿಳಿದಿರುವದು. ಸಂಜಯನು ಮಹಾಜ್ಞಾನಿಯು ಸರಿ; ಆದರೆ ಅತನಿಗೆ ಈ ಶ್ಲೋಕಗಳ ಅರ್ಥವು ತಿಳಿದಿರುವದೋ ಇಲ್ಲವೋ" ಎಂದು ಅಂದಿರುವರು. ಶೌನಕಾ, ಈ ಶ್ಲೋಕಗಳ ಸುಬೋಧಾರ್ಥಮಾಡುವದು ಈವರೆಗೂ ಅಶಕ್ಯವಾಗಿರು ವದು. ಸರ್ವಜ್ಞ ಗಣೇಶನು ಈ ಕೂಟಶ್ಲೋಕಗಳ ಅರ್ಥವನ್ನು ಮನಸ್ಸಿ ನಲ್ಲಿ ತಂದುಕೊಳ್ಳುವದಕ್ಕಾಗಿ ಸ್ವಲ್ಪಹೊತ್ತು ಮನನಮಾಡುತ್ತ ಕುಳಿತು ಕೊಳ್ಳುವದರೊಳಗೆ, ವ್ಯಾಸಮುನಿಗಳು ಬೇರೆ ಅನೇಕ ಶ್ಲೋಕಗಳನ್ನು ರಚಿಸಿ ಸಿದ್ಧಮಾಡುತ್ತಿದ್ದರು! ಆದ್ದರಿಂದ ಬರೆಯುವ, ಹಾಗು ಹೇಳುವ ಪ್ರವಾಹವು ಒಂದೇಸವನೆ ಸಾಗಿತ್ತು.

**ಭಾರತದ ಮಹತ್ವವೂ, ಸ್ವರೂಪವೂ** — ಋಷಿಗಳೇ, ಭಾರತಗ್ರಂಥದ ಮಹತ್ವವನ್ನೇನು ವರ್ಣಿಸುವದು? ಅದು ಅಜ್ಞಾನರೂಪ ಕತ್ತಲೆಯಿಂದ ಕುರುಡರಾದವರ ಕಣ್ಣು ತೆರೆಸುವ ಜ್ಞಾನರೂಪ ಅಂಜನದ ಕಡ್ಡಿಯಾಗಿರು ವದು. ಇದರಲ್ಲಿ ಅನೇಕ ವಿಷಯಗಳ ಪ್ರತಿಪಾದನ ಮಾಡಿರುತ್ತದೆ. ವೇದ ರಹಸ್ಯ, ಅದರೊಳಗಿನ ಬೇರೆವಿಸ್ತಾರ, ಸಾಂಗೋಪಾಂಗ ಉಪನಿಷದಗಳು, ಇತಿಹಾಸಗಳು, ಪುರಾಣಗಳು, ಕಾಲದ ತ್ರಿವಿಧಸ್ಥಿತಿ, ಜರಾ-ಮೃತ್ಯು- ಭಯ-ವ್ಯಾಧಿ-ಅಸ್ತಿತ್ವ-ಅಭಾವಗಳ ನಿಶ್ಚಯ, ಧರ್ಮಾಧರ್ಮವಿಚಾರ, ಆಶ್ರಮದ ಲಕ್ಷಣಗಳು, ಚಾತುರ್ವರ್ಣ್ಯ-ತಪಶ್ಚರ್ಯ-ಬ್ರಹ್ಮಚರ್ಯಗಳ ಯಥಾಸ್ಥಿತವಿವೇಚನ, ಪುರಾಣದೊಳಗಿನ ಕಥಾನಿರ್ದೇಶ ಮೊದಲಾದ ಒಂದಲ್ಲ-ಎರಡಲ್ಲ, ಹಲವು ವ್ಯಾವಹಾರಿಕ, ನೈತಿಕ, ಆಧ್ಯಾತ್ಮಿಕ, ಶಾಸ್ತ್ರೀಯ ವಿಷಯಗಳ ವಿವೇಚನವಿರುವದು. ಭಾರತರೂಪವಾದ ದಿವ್ಯವೃಕ್ಷವು,



ಭಾರತ ಲೇಖನ ಮತ್ತು, ಶ್ರೀವಿಷ್ಣು-ಶಾರದೆಯರ ಸಾನ್ನಿಧ್ಯ.

ಶ್ರೇಷ್ಠಕವಿಗಳ ಆಧಾರಸ್ತಂಭವಾಗಿರುವದು. ಈ ಗ್ರಂಥದಿಂದ ಭೂತಲ ದೊಳಗಿನ ರಸಿಕರ, ಹಾಗು ಜ್ಞಾನಸಂಪನ್ನರ ಅಖಂಡ ಉಪಜೀವನವಾಗು ತ್ತಿರುವದು.

ಋಷಿಗಳೇ, ನಾನು ನಿಮಗೆ ಹೇಳುವ ಮಹಾಭಾರತದ ಶ್ಲೋಕಗಳು ಒಂದುಲಕ್ಷ ಇರುವವುವು. ಅಗಳಲ್ಲಿ ಭಾರತಕಥೆಯನ್ನು ಹೇಳುವ ಸಂಹಿತೆಯು ಇಪ್ಪತ್ತುನಾಲ್ಕು ಸಾವಿರದ್ದಿದ್ದು, ಉಳಿದ ಎಪ್ಪತ್ತಾರುಸಾವಿರ ಶ್ಲೋಕ ಗಳಲ್ಲಿ ಸಚ್ಛೀಲ ಪುರುಷರ ಮನೋವೇಧಕ ಕಥೆಗಳನ್ನು ವರ್ಣಿಸಿರುವನು. ಭಾರತದ ಕಥಾಭಾಗದ ಆ ಇಪ್ಪತ್ತುನಾಲ್ಕು ಸಾವಿರಶ್ಲೋಕಗಳ ವಿಷಯ ವನ್ನು ಬಿಟ್ಟು, ಉಳಿದ ಎಪ್ಪತ್ತಾರುಸಾವಿರದ ಸಂಹಿತಾಗ್ರಂಥವು ವಿಸ್ತಾರ ವಾದದ್ದಿರುವದರಿಂದ, ಅದರೊಳಗಿನ ತತ್ವಗಳೂ, ಆಖ್ಯಾನಗಳೂ ಯಥಾಸ್ಥಿತವಾಗಿ ಮನಸ್ಸಿನಲ್ಲಿ ಬರುವದು ಕಠಿಣವಾಗಿರುವದು; ಅದ್ದ ರಿಂದ ಭಗವಾನ್ ಬಾದರಾಯಣರು ಆ ಇಡಿಯ ವಿಸ್ತೃತಗ್ರಂಥದ ಸಂಕೋ ಚಮಾಡಿ, ನೂರಾಐವತ್ತು ಶ್ಲೋಕಗಳಲ್ಲಿ ಭಾರತದ ಎಲ್ಲ ಪರ್ವಗಳನ್ನೂ, ಆ ಪರ್ವಗಳೊಳಗಿನ ವಿವಿಧ ವೃತ್ತಾಂತಗಳನ್ನೂ ಒಟ್ಟುಗೂಡಿಸಿ ಹೇಳಿರು ವರು. ಬ್ರಾಹ್ಮಣರೇ, ಈ ಅಧ್ಯಾಯದಲ್ಲಿ ಸರ್ವಗ್ರಂಥಗಳ ಅನುಕ್ರಮ ಣಿಕೆಯನ್ನು ಹೇಳಿರುವದರಿಂದ, ಇದಕ್ಕೆ ಅನುಕ್ರಮಣಿಕಾಧ್ಯಾಯವೆಂಬ ಹೆಸರು ಬಂದಿರುವದು.

ಭಾರತದ ಈ ಲಕ್ಷಶ್ಲೋಕಗಳನ್ನು ಬಾದರಾಯಣರು ರಚಿಸಿದ್ದಲ್ಲದೆ, ಅವರು ಮತ್ತೆ ಐವತ್ತರೊಂಬತ್ತುಲಕ್ಷ ಶ್ಲೋಕಗಳನ್ನು ರಚಿಸಿದರು. ಹೀಗೆ ಒಟ್ಟಿಗಾದ ಅರವತ್ತುಲಕ್ಷ ಶ್ಲೋಕಗಳಲ್ಲ, ಮೂವತ್ತುಲಕ್ಷಗಳ ಸಂಹಿತೆಯು ದೇವಲೋಕದಲ್ಲಿ, ಹದಿನೈದುಲಕ್ಷಗಳ ಸಂಹಿತೆಯು ಪಿತೃ ಲೋಕದಲ್ಲಿ, ಹದಿನಾಲ್ಕುಲಕ್ಷ ಶ್ಲೋಕಗಳ ಸಂಹಿತೆಯು ಗಂಧರ್ವಲೋಕ ದಲ್ಲಿ ಪ್ರಸಿದ್ಧವಾಗಿರುವವು. ಈಗ ನಾನು ನಿಮಗೆ ಹೇಳುತ್ತಿರುವ ಒಂದು ಲಕ್ಷಶ್ಲೋಕಗಳ ಸಂಹಿತೆಯು ಮೃತ್ಯುಲೋಕದಲ್ಲಿ ಪ್ರಸಿದ್ಧವಾಗಿರುವದು. ದೇವಲೋಕದಲ್ಲಿ ಪ್ರಸಿದ್ಧವಾಗಿರುವ ಭಾರತವನ್ನು ದೇವರ್ಷಿ ನಾರದರು ದೇವತೆಗಳಿಗೆ, ಪಿತೃಲೋಕದಲ್ಲಿದ್ದ ಸಂಹಿತೆಯನ್ನು ಅಸಿತ-ದೇವಲರಿಬ್ಬರು ಪಿತೃಗಳಿಗೆ, ಗಂಧರ್ವಲೋಕದಲ್ಲಿದ್ದ ಸಂಹಿತೆಯನ್ನು ಶುಕ್ರಾಚಾರ್ಯರು

ಗಂಧರ್ವ-ಯಕ್ಷ ರಾಕ್ಷಸರಿಗೆ ಹೇಳಿದರು. ಮನುಷ್ಯಲೋಕದಲ್ಲಿರುವ ಭಾರತವನ್ನು, ನಾನು ಹಿಂದೆ ಹೇಳಿದಂತೆ ವೈಶಂಪಾಯನರು ಮನುಷ್ಯರಿಗೆ ನಿರೂಪಿಸಿದರು.

**ಕೌರವಪಾಂಡವರ ವಂಶಗಳಿಗೆ ವೃಕ್ಷಗಳ ರೂಪಕವು**—ತಪೋಧನರೇ, ಮಹಾಭಾರತಗ್ರಂಥದ ರಹಸ್ಯವು ನಿಮ್ಮ ಮನಸ್ಸಿನಲ್ಲಿ ಉತ್ತಮ ರೀತಿಯಿಂದ ಬಿಂಬಿಸಬೇಕೆಂದು, ಕೌರವ ಪಾಂಡವವೆಂಬ ಎರಡು ಪ್ರಬಲ ಪಕ್ಷಗಳಿಗೆ ವೃಕ್ಷಗಳ ರೂಪಕವನ್ನು ಕಲ್ಪಿಸಿ ನಿರೂಪಿಸುವದು ಅವಶ್ಯವಾಗಿರುವದು. ಕೌರವಪಕ್ಷದ ಅಧಿಪತಿಯಾದ ದುರ್ಯೋಧನನು ಅಹಂಕಾರದಿಂದ ಉತ್ಪನ್ನನಾಗುವ ದ್ವೇಷ, ಈರ್ಷ್ಯ, ಮತ್ಸರ ಮೊದಲಾದ ದುಷ್ಟಮನೋವಿಕಾರಗಳ ಮೂರ್ತಿಯಾದದ್ದರಿಂದ, ಕೌರವಪಕ್ಷವನ್ನು ಅಹಂಕಾರವೃಕ್ಷವೆಂದು ಕರೆಯುತಕ್ಕದ್ದು. ಈ ವೃಕ್ಷದಲ್ಲಿ ಹರಿದಾಡುವ ನಾನಾವಿಧರಸಗಳೆಂದರೆ, ಕ್ರೋಧ, ಮೋಹ, ರಾಗ, ದ್ವೇಷ ಇವು ಆಗಿರುವವು; ಆದ್ದರಿಂದ ಈ ವೃಕ್ಷದ ಬೊಡ್ಡೆ, ಹರಿ, ಹೂ, ಹಣ್ಣು ಮೊದಲಾದ ಎಲ್ಲ ಅಂಗೋಪಾಂಗಗಳು ದುಷ್ಟಮನೋವೃತ್ತಿಯ ಮೂರ್ತಿಗಳಾಗಿದ್ದವು. ಕರ್ಣನು ಕೌರವವೃಕ್ಷದ ಬೊಡ್ಡೆಯು; ಶಕುನಿಯು ಆ ವೃಕ್ಷದ ಹರಿಯು; ಫಲ-ಪುಷ್ಪಗಳ ಸ್ಥಾನದಲ್ಲಿ ದುಷ್ಟ ದುಶ್ಶಾಸನನನ್ನು ಯೋಜಿಸತಕ್ಕದ್ದು. ಮುಖ್ಯನಾದ ಧೃತರಾಷ್ಟ್ರನನ್ನು ಈ ವಿಷವೃಕ್ಷದ ಬೇರೆಂದು ತಿಳಿಯಬೇಕು. ಧೃತರಾಷ್ಟ್ರನು ದುರ್ಯೋಧನಾದಿ ನೂರುಜನ ಕೌರವರಿಗೆ ಜನ್ಮಕೊಟ್ಟದ್ದಕ್ಕಾಗಿ ಆತನನ್ನು ವಿಷವೃಕ್ಷದ ಬೇರೆಂದು ಹೇಳಿದೆನೆಂದು ತಿಳಿಯಬೇಡಿರಿ; ಆದರೆ ದುರ್ಯೋಧನಾದಿ ಮಕ್ಕಳ ಮೇಲಿನ ಪ್ರೇಮದಿಂದ ಅವರ ಅಧೀನನಾಗಿ ಹೆಚ್ಚುಹೆಚ್ಚು ದುಷ್ಕೃತ್ಯಗಳನ್ನು ಮಾಡಲಿಕ್ಕೆ ಉತ್ತೇಜನ ಕೊಟ್ಟದ್ದರಿಂದ, ಆತನ ಅವಿವೇಕವೇ ದುರ್ಯೋಧನಾದಿಗಳ ಘೋರಕೃತ್ಯಗಳ ಬೀಜವೆಂದು ತಿಳಿಯುವೆನು.

ಬ್ರಹ್ಮಜ್ಞರೇ, ಪಾಂಡವಪಕ್ಷದ ಮುಖ್ಯನು ಯುಧಿಷ್ಠಿರನು. ಆತನಲ್ಲಿ ಶಮ, ದಮ, ಸತ್ಯ, ಅಹಿಂಸಾ ಮೊದಲಾದ ಅನಂತ ಸದ್ಗುಣಗಳು ಇರುವದರಿಂದ, ಆತನು ಕೇವಲ ಧರ್ಮದ ಮೂರ್ತಿಯಾಗಿದ್ದನು. ಇಂಥ **ಧರ್ಮನು ಮುಖ್ಯನಾಗಿರುವ ಪಾಂಡವವೃಕ್ಷವು, ಧರ್ಮವೃಕ್ಷವಾಗಿರುವ**

ದೆಂದು ಹೇಳಬಹುದು. ದಯಾ-ದಾಕ್ಷಿಣ್ಯಾದಿ ಉದಾರಮನೋವೃತ್ತಿಗಳು ಪಾಂಡವವೃಕ್ಷದೊಳಗಿನ ನಾನಾವಿಧರಸಗಳಾಗಿದ್ದು, ಆ ವೃಕ್ಷದ ಬೊಡ್ಡೆ, ಹರಿ, ಹೂ, ಕಾಯಿ ಇತ್ಯಾದಿ ಅಮೃತತುಲ್ಯ ಅಂಗೋಪಾಂಗಗಳು ಅರ್ಜುನ, ಭೀಮ, ನಕುಲ,ಸಹದೇವ ಇವರು ಆಗಿರುವರು. ಪಾಂಡವವೃಕ್ಷದ ಮುಖ್ಯ ಆಧಾರವು ಸತ್ವಗುಣಮೂರ್ತಿಯಾದ ಭಗವಾನ್ ಶ್ರೀಕೃಷ್ಣ ಪರಮಾತ್ಮನೂ, ಬ್ರಹ್ಮನಿಷ್ಠಬ್ರಾಹ್ಮಣರೂ ಇರುವವರಿಂದ, ಅವರೆಲ್ಲರಿಗೆ ಪಾಂಡವಕುಲರೂಪ ವೃಕ್ಷದ ಬೇರೆಂದು ನಾನು ತಿಳಿಯುವೆನು! ಭಗವಾನ್ ವಾಸುದೇವನ ಕೃಪೆಯಿಂದಲೂ, ದೊಡ್ಡವರ ಅನುಗ್ರಹ ಉಪದೇಶಗಳಿಂದಲೂ ಪಾಂಡವ ವೃಕ್ಷವು ಯಾವಾಗಲೂ ನಿರ್ಮಲವೂ, ಧರ್ಮಮಯವೂ ಆಗಿರುತ್ತದೆ.

**ಭಾರತ ಕಥೆಯು ಆರಂಭ** (ಸಂಕ್ಷೇಪವಾಗಿ ಅನುಕ್ರಮಣಿಕಾ ರೂಪದಿಂದ)—ಋಷಿಗಳೇ, ವ್ಯಾಸರು ಪರಾಶರ-ಸತ್ಯವತಿಯರ ಮಕ್ಕಳು. ಅವರು ಹುಟ್ಟಿದಬಳಿಕ ಸತ್ಯವತಿಯ ವಿವಾಹವು ಶಾಂತನುರಾಜನೊಡನೆ ಆಯಿತು. ಈ ವಿವಾಹವಾಗುವ ಮೊದಲು ಶಾಂತನುವಿಗೆ ಗಂಗೆಯಿಂದ ಭೀಷ್ಮನೆಂಬ ಮಗನು ಹುಟ್ಟಿದ್ದನು. ಶಾಂತನುರಾಜನಿಗೆ ಸತ್ಯವತಿಯ ಹೊಟ್ಟೆಯಲ್ಲಿಯೂ ಚಿತ್ರಾಂಗದ-ವಿಚಿತ್ರವೀರ್ಯ ಎಂಬ ಇಬ್ಬರು ಮಕ್ಕಳು ಆದರು. ಶಾಂತನುವಿನ ತರುವಾಯ ಭೀಷ್ಮನು ಚಿತ್ರಾಂಗದನನ್ನು ಪಟ್ಟಕ್ಕೆ ಕುಳ್ಳಿರಿಸಿದನು; ಆದರೆ ಅಲ್ಪವಯಸ್ಸಿನಲ್ಲಿಯೇ ಚಿತ್ರಾಂಗದನು ಚಿತ್ರಾಂಗದನೆಂಬ ಗಂಧರ್ವನ ಕೈಯಿಂದ ಮರಣಹೊಂದಿದನು. ಆ ಮೇಲೆ ಭೀಷ್ಮನು ವಿಚಿತ್ರವೀರ್ಯನಿಗೆ ರಾಜ್ಯವನ್ನು ಕೊಟ್ಟು, ಅಂಬಿಕಾ, ಅಂಬಾಲಿಕಾ ಎಂಬ ಇಬ್ಬರು ವಧುಗಳೊಡನೆ ಅವನ ವಿವಾಹ ಮಾಡಿದನು. ಆತನಿಗೂ ಸಂತತಿಯಾಗುವ ಮೊದಲೇ ಅಕಾಲದಲ್ಲಿ ಮರಣವು ಪ್ರಾಪ್ತವಾಯಿತು! ಆಗ ಸತ್ಯವತಿಯೂ, ಭೀಷ್ಮನೂ ಮುಂದೆ ಏನು ಮಾಡಬೇಕೆಂದು ಚಿಂತಿಸತೊಡಗಿದರು. ಸತ್ಯವತಿಗೆ ಉಪಾಯವು ತೋರಿ, ತನಗೆ ಕೌಮಾರಸ್ಥಿತಿಯಲ್ಲಿ ಪರಾಶರರಿಂದ ಹುಟ್ಟಿದ ವ್ಯಾಸರನ್ನು ಸ್ಮರಿಸಿದಳು. ಕೂಡಲೆ ಅವರು ಬಂದು ಅಪ್ಪಣೆಯೇನೆಂದು ತಾಯಿಯನ್ನು ಕೇಳಿದರು. ಆಗ ಆಕೆಯು ಭೀಷ್ಮನ ಅನುಮತಿಪಡೆದು ವಿಚಿತ್ರವೀರ್ಯನ **ಕ್ಷೇತ್ರಗಳಲ್ಲಿ, ಅಂದರೆ, ಅಂಬಿಕಾ-ಅಂಬಾಲಿಕಾ ಎಂಬ ಇಬ್ಬರು ಧರ್ಮ**

ಪತ್ನಿಯರಲ್ಲಿ ಮಕ್ಕಳನ್ನು ಹಡೆಯುವದಕ್ಕಾಗಿ ವ್ಯಾಸರನ್ನು ಆಜ್ಞಾಪಿಸಿದಳು. ಆಗ ವ್ಯಾಸರು ತಾಯಿಯ ಅಪ್ಪಣೆಯಂತೆ, ಅಂಬಿಕಾ-ಅಂಬಾಲಿಕಾ ಎಂಬವರ ಹೊಟ್ಟೆಯಲ್ಲಿ ಇಬ್ಬರು ಮಕ್ಕಳನ್ನು ಹಡೆದರು. ಅದರಂತೆ ಆ ಇಬ್ಬರು ಸ್ತ್ರೀಯರ ದಾಸಿಯ ಹೊಟ್ಟೆಯಲ್ಲಿ ಮತ್ತೊಬ್ಬ ಮಗನನ್ನು ಹಡೆದು, ಪುನಃ ತಪಶ್ಚರ್ಯಕ್ಕಾಗಿ ಬದರಿಕಾಶ್ರಮಕ್ಕೆ ಹೊರಟುಹೋದರು. ಮುಂದೆ ಆ ಮೂವರು ಹುಡುಗರೂ ಕ್ರಮವಾಗಿ ಧೃತರಾಷ್ಟ್ರ-ಪಾಂಡು-ವಿದುರ ಎಂಬ ಹೆಸರುಗಳಿಂದ ಅತ್ಯಂತ ದೇದೀಪ್ಯಮಾನರಾಗಿ ಬೆಳೆಯಹತ್ತಿದರು.

**ಪಾಂಡವರ ಜನ್ಮ ಚರಿತ್ರ** (ಸಂಕ್ಷೇಪವಾಗಿ ಅನುಕ್ರಮಣಿಕೆಯ ಚಂದದಿಂದ) - ಅಂಬಾಲಿಕೆಯ ಹೊಟ್ಟೆಯಲ್ಲಿ ವ್ಯಾಸವೀರ್ಯದಿಂದ ಪಾಂಡುವಿನ ಜನ್ಮವಾಯಿತೆಂದು ಮೇಲೆ ಹೇಳಿದೆಯಷ್ಟೆ? ಪಾಂಡುವು ದೊಡ್ಡವನಾದಮೇಲೆ, ಭೀಷ್ಮನು ಹುಟ್ಟುಗುರುಡನಾದ ಧೃತರಾಷ್ಟ್ರನನ್ನು ಪಟ್ಟಕ್ಕೆ ಕುಳ್ಳಿರಿಸದೆ, ಪಾಂಡುವನ್ನು ಪಟ್ಟಕ್ಕೆ ಕುಳ್ಳಿರಿಸಿ, ಕುಂತಿ-ಮಾದ್ರಿಯರೆಂಬ ಇಬ್ಬರು ವಧುಗಳೊಡನೆ ಪಾಂಡುವಿನ ಲಗ್ನಮಾಡಿದನು. ಅರಸನಾದಬಳಿಕ ಪಾಂಡುವು ತನ್ನ ಬುದ್ಧಿಕೌಶಲ್ಯದಿಂದಲೂ, ಪರಾಕ್ರಮದಿಂದಲೂ ಅನೇಕ ದೇಶಗಳನ್ನು ಗೆದ್ದು, ಎಲ್ಲಕಡೆಗೂ ತನ್ನ ಸಾಮರ್ಥ್ಯವನ್ನು ತೋರಿಸಿದನು. ಒಂದುದಿನ ಪಾಂಡುರಾಜನು ತನ್ನ ಹೆಂಡತಿಯೊಡನೆ ಬೇಟೆಗೆ ಹೋದಾಗ "ಕಿಂದಮ" ಎಂಬ ಹೆಸರಿನ ಯಾವನೋ ಒಬ್ಬ ಋಷಿಯು ಮೃಗರೂಪದಿಂದ ತನ್ನ ಹೆಂಡತಿಯೊಡನೆ ರತಿಕ್ರೀಡೆಮಾಡುತ್ತಿದ್ದನು. ಆಗ ಪಾಂಡುರಾಜನು ಬೇರೆ ಮೃಗಗಳ ಮೇಲೆ ನಿಃಶಂಕವಾಗಿ ಬಾಣಬಿಡುವಂತೆ, ಕಾಮಾಸಕ್ತನಾದ ಕಿಂದಮಋಷಿಯಮೇಲೆಯೂ ನಿಃಶಂಕವಾಗಿ ಬಾಣಬಿಡಲು, ಋಷಿಯು ಮರಣೋನ್ಮುಖನಾದನು. ಆಗ ಆ ಋಷಿಯು ತತ್ಕಾಲ ತನ್ನ ಪೂರ್ವರೂಪವನ್ನು ಧರಿಸಿ, ಪ್ರಾಣಬಿಡುವಾಗ ಪಾಂಡುರಾಜನಿಗೆ— "ರಾಜಾ, ನೀನು ಹೀಗೆಯೇ ಸ್ತ್ರೀಸಮಾಗಮವಾದ ಕೂಡಲೆ ಪ್ರಾಣಬಿಡುವೆ" ಎಂದು ಶಾಪವನ್ನು ಕೊಟ್ಟನು! ಋಷಿಯ ಶಾಪವನ್ನು ಕೇಳಿ ಪಾಂಡುವಿಗೆ ಅನಿವಾರ ದುಃಖವಾಯಿತು. ಈ ಸುದ್ದಿಯನ್ನು ಕೇಳಿ ಆತನ ಹೆಂಡಿರೂ ದುಃಖಿತರಾದರು. ಅವರು, ತಮ್ಮೊಡನೆ ಪತಿಯು ರತಿಕ್ರೀಡಾಸಕ್ತನಾಗದಂತೆ ವ್ಯವಸ್ಥೆಯಿಟ್ಟರು.

ಮುಂದೆ ಪಾಂಡುರಾಜನಾದರೂ ಸ್ತ್ರೀ ಸಮಾಗಮ ಪರಿತ್ಯಾಗಕ್ಕೆ ಈ ರಾಜ್ಯಭೋಗವು ಪ್ರತಿಕೂಲವೆಂದು ತಿಳಿದು, ಅರಣ್ಯದಲ್ಲಿ ದೇಹವನ್ನು ಕ್ಷೀಣಮಾಡಿ ತಪಶ್ಚರ್ಯದಿಂದ ದೇಹಸಾರ್ಥಕ್ಯಮಾಡಿಕೊಳ್ಳಬೇಕೆಂದು ಯೋಚಿಸಿ, ಭೀಷ್ಮನ ಒಪ್ಪಿಗೆಯಿಂದ ಸ್ತ್ರೀಯರೊಡನೆ ಹಿಮಾಲಯದ ಶಿಖರಕ್ಕೆ ತಪಶ್ಚರ್ಯಕ್ಕಾಗಿ ಹೋದನು. ಅಲ್ಲಿ ಆತನು ತಪೋನಿಷ್ಠ ಬ್ರಾಹ್ಮಣರ ಸಹವಾಸದಲ್ಲಿ ಪೂರ್ಣ ವೈರಾಗ್ಯದಿಂದ ಕಾಲಕ್ಷೇಪಮಾಡತೊಡಗಿದನು. ಹೀಗೆ ಪಾಂಡುವು ತನ್ನ ಇಬ್ಬರು ಹೆಂಡಿರೊಡನೆ ವಾನಪ್ರಸ್ಥಾಶ್ರಮವನ್ನು ಆಚರಿಸುತ್ತಿರುವಾಗ, ಒಂದುದಿನ ಕುಂತಿಯು ಪಾಂಡುರಾಜನನ್ನು ಕುರಿತು– "ಎಲೈ ಪ್ರಿಯತಮನೇ, ನಾನು ಪುತ್ರಪ್ರಾಪ್ತಿಯ ಮಂತ್ರವನ್ನು ದೂರ್ವಾಸ ಋಷಿಗಳಿಂದ ಸಂಪಾದಿಸಿರುವೆನು ; ತಮ್ಮ ಅಪ್ಪಣೆಯಾದರೆ ಅವುಗಳ ಜಪದಿಂದ ಮಕ್ಕಳನ್ನು ಹಡೆಯುವೆನು," ಎಂದು ಕೇಳಿಕೊಂಡಳು. ಬ್ರಾಹ್ಮಣರೇ, ಕುಂತಿಯ ಈ ಮಾತುಗಳನ್ನು ಕೇಳಿ, ಪಾಂಡುರಾಜನಿಗೆ ಬಹಳ ಸಂತೋಷವಾಯಿತು. ಕುಲಸ್ತ್ರೀಯರು ಆಪತ್ಕಾಲದಲ್ಲಿ ವಿಶಿಷ್ಟ ಪುರುಷನನ್ನು ಪ್ರಾರ್ಥಿಸಿ ಸಂತಾನವೃದ್ಧಿ ಮಾಡುವಲ್ಲಿ ಯಾವದೋಷವೂ ಇಲ್ಲವೆಂಬ ಧರ್ಮವನ್ನು ಮನಸ್ಸಿನಲ್ಲಿ ತಂದು, ಪಾಂಡುರಾಜನು ಕುಂತಿಯ ವಿಚಾರವನ್ನು ಅನುಮೋದಿಸಿದನು. ಆಗ ಆಕೆಯು ಯಮಧರ್ಮ, ವಾಯು ಇಂದ್ರ ಇವರ ಮಂತ್ರಗಳನ್ನು ಜಪಿಸಿ ಅವರನ್ನು ಕರೆದು ಅವರಿಂದ ಕ್ರಮವಾಗಿ ಧರ್ಮ, ಭೀಮ, ಅರ್ಜುನ ಎಂಬ ಮೂವರು ಮಕ್ಕಳನ್ನು ಹಡೆದಳು. ಇನ್ನುಳಿದ ಒಂದು ಮಂತ್ರವನ್ನು ಪತಿಯ ಅಪ್ಪಣೆಯಿಂದ ಕುಂತಿಯು ಮಾದ್ರಿಗೆ ಕೊಟ್ಟಳು. ಆ ಮಂತ್ರಜಪದಿಂದ ಮಾದ್ರಿಯು ಅಶ್ವಿನೀ ದೇವತೆಗಳನ್ನು ಬರಮಾಡಿಕೊಂಡು, ಅವರಿಂದ ನಕುಲ ಸಹದೇವರೆಂಬ ಇಬ್ಬರು ಮಕ್ಕಳನ್ನು ಹಡೆದಳು. ಹೀಗೆ ಪಾಂಡುವಿಗೆ, ದೇವತೆಗಳಿಗೆ ಸಮಾನರಾದ ಐದುಜನ ಮಕ್ಕಳಾದರು. ಕುಂತಿ-ಮಾದ್ರಿಯರು ಆ ಹುಡುಗರ ಸಂಗೋಪನವನ್ನು ಉತ್ತಮರೀತಿಯಿಂದ ಮಾಡಿದರು. ಪವಿತ್ರ ಆಶ್ರಮದಲ್ಲಿ ಜನ್ಮ, ಜನ್ಮಾದಾರಭ್ಯ ತಪೋನಿಧಿಗಳ ಸಮಾಗಮ ಈ ಅಪೂರ್ವಯೋಗಗಳ ಮೂಲಕ, ಧರ್ಮಾದಿಕ ಬಾಲಕರಲ್ಲಿ ಹಲವು ದೊಡ್ಡ ದೊಡ್ಡ ಗುಣಗಳ ಉದಯವಾಗಿ, ಅವರು ತಪಸ್ವಿಗಳ ಅತ್ಯಂತವಾದ ಪ್ರೇಮಕ್ಕೆ ಪಾತ್ರರಾದರು.

ಋಷಿಗಳೇ, ಕಾಮವಿಕಾರವು ಅತ್ಯಂತ ಪ್ರಬಲ ಶತ್ರುವು. ಯಾವನೊಬ್ಬನು ಎಷ್ಟು ಎಚ್ಚರದಿಂದ ಕಾಮವಾಸನೆಯನ್ನು ಬಿಗಿಹಿಡಿಯುತ್ತಿದ್ದರೂ, ಸ್ವಲ್ಪ ಛಿದ್ರವುಂಟಾದಕೂಡಲೆ ಅದರೊಳಗಿಂದ ಆ ಶತ್ರುವು ಪ್ರವೇಶಿಸಬೇಕೆಂದು ಒಪ್ಪುಹಾಕಿ ಕುಳಿತಿರುವನು. ಪಾಂಡುರಾಜನು ವಾನಪ್ರಸ್ಥಾಶ್ರಮದಲ್ಲಿ ಚಿತ್ತವೃತ್ತಿಯನ್ನು ಅಂತರ್ಮುಖಮಾಡಿ ಮನೋವಿಕಾರಗಳನ್ನು ಬಿಗಿಹಿಡಿದಿದ್ದರೂ, ಆತನ ಚಿತ್ತವು ಚಂಚಲವಾಗಿ, ದೈವಯೋಗದಿಂದ ಮಾದ್ರಿಯ ಉಪಾಯವು ನಡೆಯದೆ, ಆತನು ಬಲಾತ್ಕಾರದಿಂದ ಮಾದ್ರಿಯನ್ನು ಉಪಭೋಗಿಸಿದನು! ಋಷಿಗಳೇ, ಬ್ರಹ್ಮಶಾಪವು ಅಮೋಘವಾದದ್ದು. ಕೂಡಲೆ ಭೋಗಾಸಕ್ತ ಪಾಂಡುವು ಮರಣಹೊಂದಿ, ಎಲ್ಲ ಕಡೆಯಲ್ಲಿಯೂ ಹಾಹಾಕಾರವುಂಟಾಯಿತು! ಆಗ ಮಾದ್ರಿಯು ತನ್ನ ಮಕ್ಕಳನ್ನು ಕುಂತಿಗೆ ಒಪ್ಪಿಸಿ, ತಾನು ಪತಿಯೊಡನೆ ಸಹಗಮನಮಾಡಿದಳು. ಬಳಿಕ ಆ ತಪೋವನದಲ್ಲಿ ಆ ಐವರು ಹುಡುಗರು, ಕುಂತಿ ಹೀಗೆ ಆರು ಜನರು ಅನಾಥರಾಗಿ ಉಳಿದರು. ಮುಂದೆ ಈ ಸುದ್ದಿಯು ಹಸ್ತಿನಾವತಿಗೆ ಮುಟ್ಟಿತು. ಇತ್ತ ತಪಸ್ವಿಗಳು ಕುಂತಿಯೊಡನೆ ಪಾಂಡವರನ್ನು ಹಸ್ತಿನಾವತಿಗೆ ಮುಟ್ಟಿಸುವದಕ್ಕಾಗಿ ದುರ್ಯೋಧನಾದಿ ಕೌರವರ ಕಡೆಗೆ ಹೋಗಿ ಅವರನ್ನು ಕುರಿತು – “ಕೌರವರೇ, ಇವರೈವರೂ ಪಾಂಡುವಿನ ಮಕ್ಕಳಾಗಿರುವದರಿಂದ, ನಿಮಗೆ ಅಣ್ಣತಮ್ಮಂದಿರಾಗಿರುವರು. ಇವರು ಸಣ್ಣವರೂ, ಜಟಾಧಾರಿಗಳೂ ಆಗಿದ್ದರೂ, ಆಚಾರವಿಚಾರಗಳಲ್ಲಿ ಅತ್ಯಂತ ಶ್ರೇಷ್ಠರು; ಇವರನ್ನು ಸ್ವೀಕರಿಸಿರಿ” ಎಂದು ಹೇಳಿ, ತಪೋವನಕ್ಕೆ ಹೊರಟುಹೋದರು. ಭೀಷ್ಮ, ದ್ರೋಣ, ಕೃಪ ಮೊದಲಾದ ಕೌರವ ಪಕ್ಷದ ಜನರಿಗೂ, ಪ್ರಜಾಜನರಿಗೂ ಆ ಪಾಂಡುಪುತ್ರರನ್ನು ನೋಡಿ ಸಂತೋಷವಾಯಿತು; ಆದರೆ ಅಲ್ಪಜ್ಞ ಮನುಷ್ಯಜನರು, “ಶಾಪಗ್ರಸ್ತಪಾಂಡುವಿಗೆ ಮಕ್ಕಳಾಗುವದು ಹೇಗೆ?” ಎಂದು ಶಂಕಿಸಿದರೂ, ಪಾಂಡುರಾಜನ ಪತ್ನಿಯರು ಅತ್ಯಂತಪತಿವ್ರತೆಯರಾದದ್ದರಿಂದ, ಈ ಶಂಕೆಯು ಯೋಗ್ಯವಲ್ಲವೆಂದು ಸಜ್ಜನರು ನಿಷೇಧಿಸಿದರು. ಹೀಗಿರುವಾಗ ಎಲ್ಲಕಡೆಗೂ ಸಂಚರಿಸುತ್ತಿರುವ ಭೂತಗಳು ಪಾಂಡವರ ಜಯಜಯಕಾರಮಾಡಿದವು. ಆಕಾಶದಿಂದ ಪುಷ್ಪವೃಷ್ಟಿಯಾಯಿತು. ಶಂಖ-ದುಂದುಭಿಗಳು ಮೊಳಗಿದವು. ಈ

ಚಮತ್ಕಾರವನ್ನು ನೋಡಿ ನಾಗರಿಕರ ಹರ್ಷೋನ್ಮಾದಗಳು ಹೊರಟವು. ಪಾಂಡವರು ಅರಮನೆಯನ್ನು ಹೊಕ್ಕರು.

**ಪಾಂಡವರ ಪರಾಕ್ರಮದ ಕೃತ್ಯಗಳು** (ಸಂಕ್ಷೇಪವಾಗಿ ಅನುಕ್ರಮಣಿಕೆಯಂತೆ)—ಬಳಿಕ ಪಾಂಡವರು ಯಾವತ್ತು ವೇದಶಾಸ್ತ್ರಗಳ ಅಧ್ಯಯನಮಾಡಿ ನಿರ್ಭಯದಿಂದ ವಾಸಿಸಹತ್ತಿದರು. ಅವರು ಸದ್ಗುಣಗಳ ನಿಧಿಯಾಗಿದ್ದರು. ವಿನಯ ಪರಾಕ್ರಮಗಳು ಎಲ್ಲರಲ್ಲಿಯೂ ಸರಿಯಾಗಿ ಇದ್ದವು. ಧರ್ಮರಾಜನಲ್ಲಿ ಸರ್ವತ್ರ ಸಮಬುದ್ಧಿ, ಭೀಮಸೇನನಲ್ಲಿ ಧೈರ್ಯ, ಅರ್ಜುನನಲ್ಲಿ ವಿಲಕ್ಷಣ ಶೌರ್ಯ, ನಕುಲ-ಸಹದೇವರಲ್ಲಿ ಗುರುಜನರ ವಿಷಯದ ಆದರ, ಹಾಗು ಕ್ಷಮಾ ಇವು ಪರಿಪೂರ್ಣವಾಗಿದ್ದವು. ಪಾಂಡವರಲ್ಲಿಯ ಈ ಲೋಕೋತ್ತರ ಗುಣಗಳು ಪ್ರಕಟವಾಗಲಿಕ್ಕೆ ತಡವಾಗಲಿಲ್ಲ. ದ್ರುಪದರಾಜನು ಮಾಡಿದ ಸ್ವಯಂವರದಲ್ಲಿ ಅರ್ಜುನನು ಮತ್ಸ್ಯಯಂತ್ರವನ್ನು ಭೇದಿಸಿ ದ್ರೌಪದಿಯನ್ನು ಗೆದ್ದನು. ಧರ್ಮರಾಜನು ರಾಜಸೂಯ ಯಜ್ಞವನ್ನು ಮಾಡಬಿಚ್ಛಿಸಲು, ಅರ್ಜುನನು ಎಲ್ಲ ಅರಸರನ್ನು ಗೆದ್ದನು. ಆಗ ಶ್ರೀ ಕೃಷ್ಣನು ಭೀಮಾರ್ಜುನರಿಂದ ಜರಾಸಂಧನು ಹಾಗು ಬೇರೆ ದುಷ್ಟರಾಜರ ಸಂಹಾರಮಾಡಿಸಿ, ಸದ್ಬೋಧದಿಂದಲೂ ಮನಸ್ಸು ತಿರುಗದ ಶಿಶುಪಾಲನನ್ನು ತಾನು ಸ್ವತಃ ತನ್ನ ಸುದರ್ಶನದಿಂದ ಸಂಹರಿಸಿದನು. ಅದರಿಂದ ಯುಧಿಷ್ಠಿರನ ರಾಜಸೂಯ ಯಜ್ಞವು ಸಾಂಗವಾಯಿತು. ಈ ಯಜ್ಞದಲ್ಲಿ ದುರ್ಯೋಧನನು ಪಾಂಡವರ ಕೋಶಾಧ್ಯಕ್ಷನಾಗಿದ್ದನು. ಆತನು ಪಾಂಡವರ ಸಂಪತ್ತನ್ನು ನೋಡಿ ಹೊಟ್ಟೆಕಿಚ್ಚಿನಿಂದ ಉರಿದನು. ದುರ್ಯೋಧನನ ಈ ಸಂತಾಪವು ಹೆಚ್ಚಲಿಕ್ಕೆ ಮತ್ತೂ ಒಂದು ಕಾರಣವು ಒದಗಿತು. ಮಯಾಸುರನು ಪಾಂಡವರಿಗೆ ಕೊಟ್ಟಿದ್ದ ಒಂದು ವಿಚಿತ್ರ ಸಭೆಯನ್ನು ನೋಡಲಿಕ್ಕೆ ದುರ್ಯೋಧನನು ಹೋದನು. ಅಲ್ಲಿ ನೆಲವಿದ್ದಲ್ಲಿ ನೀರು ಕಾಣುವಂತೆ, ನೀರಿದ್ದಲ್ಲಿ ನೆಲವು ಕಾಣುವಂತೆ, ಬಾಗಿಲಿದ್ದಲ್ಲಿ ಬಾಗಿಲು ಇಲ್ಲದಹಾಗೆ ಕಾಣುವಂತೆ, ಬಾಗಿಲಿಲ್ಲದಲ್ಲಿ ಬಾಗಿಲು ಇದ್ದಹಾಗೆ ಕಾಣುವಂತೆ ಮಯನು ಚಾತುರ್ಯದ ರಚನೆ ಮಾಡಿದ್ದನು. ಇದನ್ನರಿಯದೆ ದುರ್ಯೋಧನನು ನೀರಿಲ್ಲದಲ್ಲಿ ತನ್ನ ದೋತರವನ್ನು ಮೇಲೆ ಮಾಡಿಕೊಂಡು, ನೀರಿದ್ದಲ್ಲಿ ತಿಳಿಯದೆ ದೋತರವನ್ನು ತೋಯಿಸಿಕೊಂಡು,

ಅದರಂತೆ ಬಾಗಿಲಿದ್ದಲ್ಲಿ ಅದನ್ನರಿಯದೆ ಮುಕ್ಕರಿಸಿ, ಬಾಗಿಲಿಲ್ಲದಲ್ಲಿ ಬಾಗಿಲೆಂದು ತಿಳಿದು ಗೋಡೆಯನ್ನು ಹಾದು ನಗೆಗೀಡಾದನು. ಇದನ್ನು ನೋಡಿ ಭೀಮನು ಕಗ್ಗಮನುಷ್ಯನಂತೆ ಕೃಷ್ಣನ ಸಮಕ್ಷ ಗಟ್ಟಿಯಾಗಿ ನಕ್ಕನು ; ಆದ್ದರಿಂದ ದುರ್ಯೋಧನನ ಸಂತಾಪವು ಹೆಚ್ಚಲು, ಆತನು ಪಾಂಡವರ ಐಶ್ವರ್ಯದ ಹರಣಮಾಡಿ ಇದರ ಸೇಡು ತೀರಿಸಿಕೊಳ್ಳಬೇಕೆಂದು ನಿಶ್ಚಯಿಸಿದನು. ಮಗನ ಈ ನಿಶ್ಚಯವನ್ನು ಅರಿತು ಧೃತರಾಷ್ಟ್ರನು ಅವಿವೇಕದಿಂದ ಪಾಂಡವರೊಡನೆ ಜೂಜಾಡಲಿಕ್ಕೆ ದುರ್ಯೋಧನನಿಗೆ ಒಪ್ಪಿಗೆ ಕೊಟ್ಟನು. ಇದನ್ನು ಕೇಳಿ ಶ್ರೀ ಕೃಷ್ಣನಿಗೆ ಸಿಟ್ಟುಬಂದರೂ, ದುರ್ಯೋಧನಾದಿ ದುರಾತ್ಮರು ದ್ಯೂತಾದಿಗಳ ಕಾರಣದಿಂದ ಪಾಂಡವರೊಡನೆ ಕಲಹಬೆಳಿಸಿ, ಕಡೆಗೆ ವಿದುರ, ಭೀಷ್ಮ, ದ್ರೋಣ, ಕೃಪಾಚಾರ್ಯ ಇವರ ಅಪ್ಪಣೆಯನ್ನು ಮೀರಿ ಭಯಂಕರ ಯುದ್ಧಮಾಡುವದರಿಂದ, ಪರಸ್ಪರರ ಸಂಹಾರವಾಗಿ ಭೂಭಾರವಿಳಿಯುವದು ಅಯೋಗ್ಯವಲ್ಲವೆಂದು ತಿಳಿದು, ಆ ಭಗವಂತನು ಧೃತರಾಷ್ಟ್ರನ ಆ ಅನುಮೋದನವನ್ನೂ, ದುಷ್ಕೃತ್ಯಗಳನ್ನೂ ದುರ್ಲಕ್ಷಿಸಿದನು.

**ಧೃತರಾಷ್ಟ್ರನ ಶೋಕ** (ಸಂಕ್ಷೇಪದಿಂದ ಭಾರತಕಥೆಯ ಪ್ರಸಂಗಗಳ ಅನುಕ್ರಮಣಿಕೆಯು)—ಋಷಿಗಳೇ, ಲೋಕನಾಯಕ ಪ್ರಭುವಿನ ಭವಿಷ್ಯದಂತೆ ಕೌರವ-ಪಾಂಡವರ ಭಯಂಕರ ಯುದ್ಧವಾಗಿ, ಕ್ಷತ್ರಿಯರ ಸಂಹಾರವಾಯಿತು. ದುರ್ಯೋಧನನೇ ಮೊದಲಾದ ತನ್ನ ನೂರುಜನ ಮಕ್ಕಳ ಸಂಹಾರವಾಗಿ ಪಾಂಡವರು ಜಯಶಾಲಿಗಳಾದರೆಂಬ ಸುದ್ದಿಯನ್ನು ಸಂಜಯನ ಮುಖದಿಂದ ಕೇಳಿದ ಧೃತರಾಷ್ಟ್ರನು ಬಹಳವಾಗಿ ದುಃಖಿಸಿದನು. ಆತನು ಸಂಜಯನನ್ನು ಕುರಿತು—"ಸಂಜಯಾ, ಈ ಘೋರ ಅನರ್ಥದ ಕಾರಣನು ನಾನಲ್ಲೆಂಬದು ವಿಚಾರಾಂತದಲ್ಲಿ ನಿನಗೆ ಗೊತ್ತಾದೀತು. ಸಂಜಯಾ, ಏನುಮಾಡಲೋ! ನಾನು ಮೊದಲೇ ಕುರುಡನು, ದೀನನು ; ಅದರಲ್ಲಿ ಪುತ್ರಪ್ರೇಮದಿಂದ ಪರಾಧೀನನಾದೆನು ; ಆದ್ದರಿಂದ ಮೂರ್ಖ ದುರ್ಯೋಧನನೊಡನೆ ನನ್ನ ಬುದ್ಧಿಯು ಭ್ರಷ್ಟವಾಯಿತು! ಹಿಮಾಲಯದಿಂದ ಪಾಂಡವರು ಹಸ್ತಿನಾವತಿಗೆ ಬಂದಾಗಿನಿಂದ ಒದಗಿದ ಒಂದೊಂದೇ ಕೃತ್ಯಗಳನ್ನು ಕೇಳಿ ನನ್ನ ಮನಸ್ಸಿನ ಸ್ಥಿತಿಯು ಏನಾಯಿತೆಂಬದನ್ನು

ಹೇಳುವೆನು ಕೇಳು ; ಅಂದರೆ ನನ್ನಿಂದ ಏನಾದರೂ ಅವಿವೇಕವಾಯಿತೇ ಎಂಬದು ನಿನಗೆ ಗೊತ್ತಾದೀತು. ಸಂಜಯಾ, ಪಾಂಡವರ ಜಯವೂ, ಕೌರವರ ನಾಶವೂ ಆಗುವದೆಂದು ನಾನು ಮೊದಲೇ ತರ್ಕಿಸಿದ್ದೆನು. ಲಾಕ್ಷಾಗೃಹಬಾಧಾನಿವಾರಣ, ದ್ರೌಪದೀಸ್ವಯಂವರ, ಸುಭದ್ರಾ ಹರಣ, ಖಾಂಡವವನದಹನ, ಜರಾಸಂಧವಧ, ರಾಜಸೂಯಯಾಗ ಇತ್ಯಾದಿ ಮಹಾಮಹಾ ಕಾರ್ಯಗಳನ್ನು ಪಾಂಡವರು ಮಾಡುತ್ತ ಬಂದಿರಲು, ಅವರನ್ನು ಗೆಲ್ಲುವದು ಯಾರಿಗೆ ಶಕ್ಯವಾಗಿ ತೋರೀತು ಹೇಳು ? ದ್ರೌಪದೀ ವಸ್ತ್ರಾಪಹರಣದಲ್ಲಿ ಆ ಪತಿವ್ರತೆಯ ಶಾಪಕ್ಕೆ ಕೌರವರು ಗುರಿಯಾದದ್ದು ಹಾನಿಯ ಲಕ್ಷಣವಲ್ಲವೆ ? ಅದರಂತೆ, ಪಾಂಡವರನ್ನು ಅನ್ಯಾಯದಿಂದ ದ್ಯೂತದಲ್ಲಿ ಸೋಲಿಸಿ ಅವರನ್ನು ಅಡವಿಗೆ ಅಟ್ಟಿದ್ದು ಸಾಧಾರಣ ಅನ್ಯಾಯವೇ ? ಸಂಜಯಾ, ಕಿರಾತರೂಪಿಯಾದ ಪರಮೇಶ್ವರನನ್ನು ಅರ್ಜುನನು ಮೆಚ್ಚಿಸಿ, ಪಾಶುಪತಾಸ್ತ್ರ ದೊರಕಿಸಿದ್ದನ್ನೂ, ಸತ್ಯಪ್ರತಿಜ್ಞನಾದ ಅರ್ಜುನನು ಇಂದ್ರಲೋಕಕ್ಕೆ ಹೋಗಿ ಪ್ರತ್ಯಕ್ಷ ದೇವೇಂದ್ರನಿಂದ ಯಥಾವಿಧಿ ದಿವ್ಯಾಸ್ತ್ರಗಳ ಉಪದೇಶಹೊಂದಿದ್ದನ್ನೂ, ಅದೇ ಅರ್ಜುನನು ದೇವತೆಗಳಿಗೆ ಕಂಟಕರಾದ ಕಾಲಕೇಯ ಪೌಲೋಮ ದೈತ್ಯರ ಸಂಹರಿಸಿದ್ದನ್ನೂ ಕೇಳಿದಾಗಲೇ, ಕೌರವರಿಗೆ ಜಯವಾಗದೆಂದು ನಾನು ನಿಶ್ಚಯಿಸಿದೆನು. ಅದರಂತೆ, ಪಾಂಡವರು ಮನುಷ್ಯರಿಗೆ ಅಗಮ್ಯವಾದ ದೇಶದಲ್ಲಿ ಕುಬೇರನೊಡನೆ ಹೋದದ್ದು, ಘೋಷಯಾತ್ರೆಯಲ್ಲಿ ಅರ್ಜುನನು ಗಂಧರ್ವನಿಂದ ದುರ್ಯೋಧನನನ್ನು ಬಿಡಿಸಿದ್ದು, ಯಕ್ಷನ ಪ್ರಶ್ನಗಳಿಗೆ ಧರ್ಮರಾಜನು ಸಮರ್ಪಕ ಉತ್ತರಕೊಟ್ಟದ್ದು, ಅಜ್ಞಾತವಾಸವನ್ನು ಯಾವ ಸುದ್ದಿಯೂ ಇಲ್ಲದಂತೆ ಆ ಪಾಂಡವರು ಕಳೆದದ್ದು ಇವು ಸಾಮಾನ್ಯ ಕೆಲಸಗಳೇ? ಇಂಥ ಪಾಂಡವರನ್ನು ಕೌರವರು ಕೊಲ್ಲುವದು ಅಶಕ್ಯವೆಂದು ನಾನು ತಿಳಿದಿದ್ದೆನು. ಸಂಜಯಾ, ಉತ್ತರಗೋಗ್ರಹಣದಲ್ಲಿ ಅರ್ಜುನನು ನಮ್ಮ ಕಡೆಯ ಮಹಾ ಮಹಾ ವೀರರೊಡನೆ ಕಾದಿ ಅವರನ್ನು ಸೋಲಿಸಲಿಲ್ಲವೆ? ಉತ್ತರೆಯನ್ನು ಅರ್ಜುನನು ತಾನು ಲಗ್ನಮಾಡಿಕೊಳ್ಳದೆ, ತನ್ನ ಮಗ ಅಭಿಮನ್ಯುವಿಗೆ ಆಕೆಯ ಲಗ್ನಮಾಡಿಕೊಟ್ಟದ್ದು ಅರ್ಜುನನ ಇಂದ್ರಿಯ ಜಯದ ಲಕ್ಷಣವಲ್ಲವೆ ? ಹೀಗೆ ಇಂದ್ರಿಯಗಳನ್ನು ಜಯಿಸಿದವನ ಮುಂದೆ

ಪ್ರತ್ಯಕ್ಷ ಕಾಲನ ಆಟವೂ ನಡೆಯಲಾರದು! ಸಂಜಯಾ, ಪ್ರತ್ಯಕ್ಷ ಭಗವಾನ್ ಲಕ್ಷ್ಮೀಪತಿಯೇ ಪಾಂಡವಪಕ್ಷಪಾತಿಯಾಗಲು, ಅವರನ್ನು ಯಾರು ಜಯಿಸಬಹುದು? ಅರ್ಜುನನೂ, ಶ್ರೀಕೃಷ್ಣನೂ ನರ-ನಾರಾಯಣರೆಂಬುದನ್ನು ನಾರದರ ಮುಖದಿಂದ ಕೇಳಿದಾಗಲೇ. ಕೌರವರು ಕೃಷ್ಣಾರ್ಜುನರನ್ನು ದ್ವೇಷಿಸುವುದು ಅಯೋಗ್ಯವೆಂದು ನಾನು ಭಾವಿಸಿದೆನು. ಆ ಭಗವಾನ್ ಶ್ರೀಕೃಷ್ಣನು ಸಂಧಿಗಾಗಿ ಬಂದಾಗ ಕೌರವರು ಆತನನ್ನು ಬಂಧಿಸಹೋದದ್ದನ್ನೂ, ಆಗ ಭಗವಂತನು ತನ್ನಂತಹ ಹಲವು ರೂಪಗಳ ಪ್ರಕಟಮಾಡಿದ್ದನ್ನೂ ಕೇಳಿ, ಜಯದ ಆಶೆಯನ್ನು ನಾನು ಬಿಟ್ಟುಬಿಟ್ಟೆನು. ಎಲೈ ಸಾರಥಿಯೇ, ಭಗವಾನ್ ಕೃಷ್ಣನು ಪಾಂಡವರ ಹಿತಚಿಂತಿಸುತ್ತಿರಲು, ಅವರಿಗೆ ಸೋಲು ಹೇಗೆಬಂದೀತು? ಅರ್ಜುನನು ಮೋಹಗ್ರಸ್ತನಾಗಿಗಾಂಡೀವವನ್ನು ಕೆಳಗಿಟ್ಟಾಗ ಶ್ರೀ ಕೃಷ್ಣನು ವಿರಾಟ್‌ರೂಪ ತೋರಿಸಿ ಅರ್ಜುನನನ್ನು ಪ್ರೋತ್ಸಾಹಗೊಳಿಸಿದ್ದನ್ನೂ, ಭೀಷ್ಮರು ಶಿಖಂಡಿಯ ನೆವದಿಂದ ಶರಪಂಜರದಲ್ಲಿ ಶಯನಮಾಡಿದ್ದನ್ನೂ ಕೇಳಿ, ನಾನು ಜಯದ ವಿಷಯವಾಗಿ ನಿರಾಶೆಪಟ್ಟಿದ್ದರೆ ಆಶ್ಚರ್ಯವೇನು? ಅದರಂತೆ, ಧೃಷ್ಟದ್ಯುಮ್ನನು ದ್ರೋಣನನ್ನು ಸಂಹರಿಸಿದ್ದು, ಅರ್ಜುನನು ಜಯದ್ರಥನನ್ನು ಕೊಂದದ್ದು ಸಾಮಾನ್ಯ ಕೆಲಸಗಳೇ? ಸಂಜಯಾ, ಕರ್ಣನು ತನ್ನ ಕೈಯಲ್ಲಿ ಸಿಕ್ಕಿದ್ದ ಭೀಮನನ್ನು ನಿಂದಿಸಿ ಬಿಟ್ಟುಬಿಟ್ಟದ್ದು, ಹಾಗು ಅರ್ಜುನನನ್ನು ಕೊಲ್ಲಲು ಕಾದಿಟ್ಟಿದ್ದ ತನ್ನ ಇಂದ್ರದತ್ತ ದಿವ್ಯಶಕ್ತಿಯನ್ನು ಆ ಕರ್ಣನು ಘಟೋತ್ಕಚನ ಮೇಲೆ ಬಿಟ್ಟಿದ್ದು, ದ್ರೋಣಾಚಾರ್ಯರು ಮಗನ ಮರಣದ ಸುದ್ದಿಯನ್ನು ಕೇಳಿ ರಥದಲ್ಲಿ ಸ್ವಸ್ಥ ಕುಳಿತಿರುವಾಗ ಧೃಷ್ಟದ್ಯುಮ್ನನು ಅವರ ಶಿರಚ್ಛೇದಮಾಡಿದ್ದು, ಅಶ್ವತ್ಥಾಮನ ನಾರಾಯಣಾಸ್ತ್ರವು ವ್ಯರ್ಥವಾದದ್ದು ಭೀಮನು ದುಃಶಾಸನನ ರಕ್ತಪಾನಮಾಡಿದ್ದು, ಅರ್ಜುನನು ಕರ್ಣನನ್ನು ಸಂಹರಿಸಿದ್ದು, ಧರ್ಮರಾಜನು ಶಲ್ಯನನ್ನೂ, ಸಹದೇವನು ಶಕುನಿಯನ್ನೂ ಕೊಂದದ್ದು ನನಗೆ ಪ್ರತಿಕೂಲ ಸಂಗತಿಗಳಲ್ಲವೆ? ದುರ್ಯೋಧನನು ರಥಹೀನನೂ, ಶಕ್ತಿಹೀನನೂಆಗಿ ಜಲಸ್ತಂಭನ ಮಾಡಿದನೆಂಬ ಸುದ್ದಿಯನ್ನ ಕೇಳಿದ ಬಳಿಕ ನನಗೆ ಯಾತರ ಆಶೆ ಉಳಿದಿರಬಹುದು? ಗದಾಯುದ್ಧದ ಭೀಮನು ಕೃಷ್ಣನ ಆಲೋಚನೆಯಿಂದ ಮೋಸಮಾಡಿ ದುರ್ಯೋಧ

ನನ್ನು ಕೊಂದ ಸುದ್ದಿಯನ್ನು ಕೇಳಿದ ಬಳಿಕ, ನನ್ನ ಸರ್ವಸ್ವದ ಘಾತವಾಯಿತೆಂದು ನಾನು ತಿಳಿದೆನು. ಅಶ್ವತ್ಥಾಮನು ಉಪಪಾಂಡವರನ್ನು ಮಲಗಿದಾಗ ಕೊಂದನೆಂಬ ಸುದ್ದಿಯನ್ನು ಕೇಳಿ, ಕುರುವಂಶವು ನಷ್ಟವಾಯಿತೆಂದು ನಾನು ಭಾವಿಸಿದೆನು. ಅಶ್ವತ್ಥಾಮನು "ಐಷಿಕ" ವೆಂಬ ಹೆಸರಿನಅಸ್ತ್ರದಿಂದ ಉತ್ತರೆಯಗರ್ಭವನ್ನು ಮೃತಪ್ರಾಯಮಾಡಿದನೆಂಬ ಸುದ್ದಿಯನ್ನು ಕೇಳಿ, ದೊಡ್ಡ ಅನರ್ಥವು ಒದಗಿತೆಂದು ನಾನು ಆಕ್ರೋಶಮಾಡಿದೆನು. ಅಶ್ವತ್ಥಾಮನು ಬ್ರಹ್ಮಾಸ್ತ್ರವನ್ನು ಬಿಟ್ಟು ಉತ್ತರೆಯ ಗರ್ಭಪಾತಮಾಡಲು ಯತ್ನಿಸಿದಾಗ ವ್ಯಾಸರೂ, ಕೃಷ್ಣನೂ ಆತನಿಗೆ ಶಾಪಕೊಟ್ಟದ್ದನ್ನು ಕೇಳಿ, ನನ್ನ ರಕ್ಷಕರು ಯಾರೂ ಉಳಿಯಲಿಲ್ಲವೆಂದು ದುಃಖಿಸಿದೆನು ಸಂಜಯಾ, ಈ ಮೇರೆಗೆ ಮಕ್ಕಳು-ಮೊಮ್ಮಕ್ಕಳ, ಗುರುಹಿರಿಯರ, ಇಷ್ಟಸ್ನೇಹಿತರ ನಾಶವಾಗಿ, ಗಾಂಧಾರಿಯು ದುಃಖಸಾಗರದಲ್ಲಿ ಮುಳುಗಿದಳು; ಪಾಂಡವರು ದುಷ್ಕರಕೃತ್ಯ ಮಾಡಿ ನಿಷ್ಕಂಟಕ ರಾಜ್ಯವನ್ನು ಸಂಪಾದಿಸಿದರು! ಸಂಜಯಾ, ಆ ಮಹಾ ಭಯಂಕರ ಸಂಗ್ರಾಮದಲ್ಲಿ ಹದಿನೆಂಟು ಅಕ್ಷೋಹಿಣೀ ಕ್ಷತ್ರಿಯರಲ್ಲಿ ನನ್ನ ಪಕ್ಷದವರು ಮೂವರು, ಅಂದರೆ ಕೃಪ-ಅಶ್ವತ್ಥಾಮ-ಕೃತವರ್ಮರು, ಪಾಂಡವಪಕ್ಷದ ಏಳುಜನರು, ಅಂದರೆ ಐವರು ಪಾಂಡವರು-ಕೃಷ್ಣ-ಸಾತ್ಯಕಿ ಹೀಗೆ ಹತ್ತುಜನರು ಮಾತ್ರ ಉಳಿದರು! ಹರ ಹರ! ಸಂಜಯಾ, ಏನುಮಾಡಲೋ! ಎಲ್ಲಕಡೆಯಲ್ಲ ಕತ್ತಲೆ ಮುಸುಕಿತು; ನನ್ನ ಜ್ಞಾನಕಲೆಯು ನಷ್ಟವಾಯಿತು : ನನ್ನ ಮೈಮೇಲಿನ ಎಚ್ಚರವು ತಪ್ಪಿತು! ಈಗ ನನಗೆ ಏನೂ ತೋಚದಾಗಿದೆ.

**ಧೃತರಾಷ್ಟ್ರನ ಸಮಾಧಾನ** — ಈಮೇರೆಗೆ ನುಡಿದು ಧೃತರಾಷ್ಟ್ರನು ದುಃಖದಿಂದ ಮೂರ್ಛಿತನಾದನು. ಆಗ ಸಂಜಯನು ಆತನನ್ನು ಎಚ್ಚರಗೊಳಿಸಿ ಸಮಾಧಾನಪಡಿಸುವದಕ್ಕಾಗಿ ಆತನನ್ನು ಕುರಿತು — "ಎಲೈ ಭೂಪತೀ ಧೃತರಾಷ್ಟ್ರಾ, ಕೃಷ್ಣದ್ವೈಪಾಯನರೂ, ದೇವರ್ಷಿ ನಾರದರೂ ನಿನಗೆ ಏನುಹೇಳಿದರೆಂಬದು ನಿನಗೆ ಗೊತ್ತೇ ಇರುವದು. ಈ ಜಗತ್ತಿನಲ್ಲಿ ನಿನ್ನ ಮಕ್ಕಳೊಬ್ಬರೇ ಮರಣಹೊಂದಿರುತ್ತಾರೆಂತಲ್ಲ ; ಯಾರ ವಿಶಾಲಕೀರ್ತಿಯು ತ್ರಿಭುವನದಲ್ಲಿರುವದೋ, ಅಂತಹ ಸೋಮ-ಸೂರ್ಯಾದಿ ಅನೇಕ ವಂಶಗಳಲ್ಲಿ ಈವರೆತ್ತಿನವರೆಗೆ ಅಗಣಿತ ರಾಜರು ಹುಟ್ಟಿ

ದರು, ನಿನ್ನ ಮಕ್ಕಳಂತೆ ಈ ಲೋಕವನ್ನು ಬಿಟ್ಟು ಹೊರಟುಹೋದರು! ಅವರಲ್ಲಿ ಸತ್ಯ, ಶೌಚ, ದಯಾ, ದೃಢ ಭಗವದ್ಭಕ್ತಿ ಇತ್ಯಾದಿ ಅನಂತ ಗುಣಗಳು ಇದ್ದವು. ಈ ರಾಜರು ಅತ್ಯಂತ ದಾನಶೂರರು, ಪರಮ ಪ್ರತಾಪಿಗಳು, ಧೈರ್ಯೌದಾರ್ಯಾದಿ ಗುಣಗಳಿಂದ ಮಂಡಿತರು ಇದ್ದದ್ದರಿಂದ, ಶುದ್ಧವೂ, ದೇದೀಪ್ಯಮಾನವೂ ಆದ ಅವರ ಯಶಸ್ಸನ್ನು ದೊಡ್ಡ ದೊಡ್ಡ ಕವಿಗಳು ನಿತ್ಯದಲ್ಲಿ ಗಾಯನಮಾಡುತ್ತಿರುವರು. ಅಂಥ ಸದ್ಗುಣ ನಿಧಿಗಳಿಗೂ ಈ ಪೃಥ್ವಿಯನ್ನು ಬಿಟ್ಟು ಹೋಗಬೇಕಾಗಲು, ನಿನ್ನ ಮಕ್ಕಳ ಪಾಡೇನು ?

ಧೃತರಾಷ್ಟ್ರಾ, ನಿನ್ನ ಮಕ್ಕಳು ಸತ್ತದ್ದು ಒಂದು ರೀತಿಯಿಂದ ನೆಟ್ಟಗೇ ಆಯಿತೆಂದು ನನಗೆ ತೋರುತ್ತದೆ; ಯಾಕಂದರೆ, ಆ ದುರಾತ್ಮರು ಕ್ರೋಧ, ಲೋಭ, ಈರ್ಷ್ಯಾ, ಅಸೂಯಾ ಇತ್ಯಾದಿ ದುಷ್ಟ ಮನೋವಿಕಾರಗಳಿಂದ ಕ್ಷುಬ್ಧರಾಗಿ, ನಿತ್ಯ ದುರಾಚರಣಮಾಡಲು ಸಿದ್ಧರಿರುತ್ತಿದ್ದರು; ಆದ್ದರಿಂದ ಅವರ ಮರಣದಿಂದ ಈ ಭೂತಲದ ಕಂಟಕವೇ ದೂರವಾದಂತಾಗಿರುವದು. ಅಂದಬಳಿಕ ಇಂಥ ಕುಲಕಂಟಕರ ವಿಷಯವಾಗಿ ನೀನು ಶೋಕಿಸುತ್ತ ಕುಳಿತುಕೊಳ್ಳುವದು ಅನುಚಿತವು! ಎಲೈ ನೃಪತಿಯೇ, ನೀನು ಜ್ಞಾನಸಂಪನ್ನನಿರುವೆ; ನಿನ್ನಲ್ಲಿ ದೂರದರ್ಶಿತ್ವವು ಉತ್ತಮ ಪ್ರಕಾರವಾಗಿ ವಾಸಿಸುತ್ತಿರುವದು. ನಿನ್ನ ಬುದ್ಧಿಗೆ ಸದಸನ್ನಿರ್ಣಯವು ಉತ್ತಮರೀತಿಯಿಂದ ಆಗುವದು. ದೊಡ್ಡದೊಡ್ಡ ಪ್ರಾಜ್ಞಪುರುಷರೂ ನಿನ್ನ ಜ್ಞಾನವನ್ನು ವರ್ಣಿಸುವರು; ಆದ್ದರಿಂದ ಸಾಮಾನ್ಯ ಮನುಷ್ಯರಂತೆ ನೀನು ಮೋಹವಶವಾಗುವದು ಯೋಗ್ಯವಲ್ಲವು. ಜ್ಞಾನಿಗಳು ಎಂತಹ ದುರ್ಧರ ಪ್ರಸಂಗಬಂದರೂ ವಿವೇಕಭ್ರಷ್ಟರಾಗುವದಿಲ್ಲವೆಂಬದನ್ನು ಲಕ್ಷದಲ್ಲಿಡು. ಮೇಲಾಗಿ, ನಿನಗೊದಗಿದ ಅನರ್ಥಕ್ಕೆ ಕೇವಲ ನಿನ್ನ ಮಕ್ಕಳ ದುರ್ವರ್ತನವೇ ಕಾರಣವಲ್ಲ. ಅದರ ಮೂಲವು ನೀನೇ ಆಗಿರುತ್ತೀ. ದುರ್ಯೋಧನನೇ ಮೊದಲಾದ ನಿನ್ನ ಹೊಟ್ಟೆಯ ಮಕ್ಕಳಲ್ಲಿ ನೀನು ಮೋಹಮಾಡಿದೆ; ಧರ್ಮರಾಜನೇ ಮೊದಲಾದ ಪಾಂಡವರಲ್ಲಿ ದ್ವೇಷಮಾಡಿದೆ; ಅದರಿಂದಲೇ ಈ ಅನರ್ಥವು ಒದಗಿತೆಂಬಲ್ಲಿ ಸಂಶಯವಿಲ್ಲ. ವಿಷಹಾಕುವದು, ಬೆಂಕಿಹಚ್ಚುವದು ಮೊದಲಾದ ದುಷ್ಕೃತ್ಯಗಳಿಗೆ

ನೀನು ಅನುಮತಿಯನ್ನು ಕೊಡದಿದ್ದರೆ, ಇಂದು ನಿನಗೆ ಪುತ್ರಶೋಕ ಮಾಡುವ ಪ್ರಸಂಗವು ಬರುತ್ತಿದ್ದಿಲ್ಲ.

ರಾಜಾ, ಆಗುವದನ್ನು ತಪ್ಪಿಸುವದು ಯಾರಿಂದಲೂ ಆಗುವದಿಲ್ಲ; ಬ್ರಹ್ಮನು ಹಣೆಯಲ್ಲಿ ಬರೆದಂತೆ ಆಗಿಯೇ ತೀರುತ್ತದೆ. ಜನ್ಮ, ಮರಣ, ಸುಖ, ದುಃಖ ಮೊದಲಾದವು ಕಾಲಶಕ್ತಿಯಿಂದ ಒದಗುತ್ತವೆ. ಪ್ರಾಣಿಗಳ ಜನನ-ಮರಣಗಳನ್ನುಂಟುಮಾಡುವ ಆ ಕಾಲದ ನಿಯಮನವನ್ನಾದರೂ ಕಾಲವೇ ಮಾಡುತ್ತದೆ ಕಾಲದ ವಾಸ್ತವಿಕಸ್ವರೂಪವು ಅಚಿಂತ್ಯಶಕ್ತಿಯು ಪರಮೇಶ್ವರನ ಪರಮಾತ್ಮಸ್ವರೂಪವೇ ಆಗಿರುವದು. ಈ ತ್ರೈಲೋಕ್ಯ ದೊಳಗಿನ ಯಾವತ್ತು ವಸ್ತುಗಳ ಜನ್ಮವೂ, ಉಪಸಂಹಾರವೂ ಕಾಲದಿಂ ದಲೇ ಆಗುತ್ತದೆ. ಮತ್ತು ಪರಮಾತ್ಮನ ಸ್ವರೂಪದಲ್ಲಿ ಲೀನವಾಗಿದ್ದ ಅಖಿಲ ಬ್ರಹ್ಮಾಂಡದ ಪುನರುಜ್ಜೀವನವಾದರೂ ಕಾಲದಿಂದಲೇ ಆಗುತ್ತದೆ. ವಿಶ್ವದೊಳಗಿನ ಎಲ್ಲ ಜೀವಗಳು ನಿದ್ರೆಯಲ್ಲಿರುವಾಗ ಕಾಲವೇ ಜಾಗ್ರತ ವಾಗಿರುತ್ತದೆ. ಯಾವತ್ತು ಸ್ಥಾವರಜಂಗಮ ಪದಾರ್ಥಗಳ ಅಂತರ್ಭಾಗ ದಲ್ಲಿ ಯಾವಾಗಲೂ ಪ್ರತಿಬಂಧವಿಲ್ಲದೆ ಸಂಚಾರಮಾಡುವದು ಕಾಲವೇ ಆಗಿರುವದು. ಕಾಲದ ಸಾಮರ್ಥ್ಯವನ್ನು ನಷ್ಟಪಡಿಸಲು ಯಾರೂ ಸಮ ರ್ಥರಲ್ಲವು. ರಾಜಾ, ಭೂತ-ವರ್ತಮಾನ-ಭವಿಷ್ಯಕಾಲಗಳಲ್ಲಿಯ ಮೂಲ ಕಾರಣವು ಕಾಲವೇ ಆಗಿರುವದು ; ಆದ್ದರಿಂದ ನೀನು ಮೋಹವಶನಾಗಿ ದುಃಖಿಸುವದು ಯೋಗ್ಯವಲ್ಲವು" ಎಂದು ಉಪದೇಶಿಸಲು, ಧೃತರಾಷ್ಟ್ರನು ದೇಹಾದಿಗಳಲ್ಲಿಯ ಮಮತ್ವವನ್ನು ಬಿಟ್ಟು, ಹೃದಯದೊಳಗಿನ ಪುತ್ರ ಶೋಕದ ಗಟ್ಟಿಮುಟ್ಟಿಯಾದ ಗಂಟನ್ನು ಕಡಿದು ಚಲ್ಲಿದನು.

**ಪ್ರಥಮಾಧ್ಯಾಯದ ಫಲಶ್ರುತಿಯು** — ಮಹಾಭಾರತವು ಮನ ಸ್ಸಿಗೆ ಶಾಂತಿಯನ್ನುಂಟುಮಾಡುವದೊಂದು ವ್ಯಾಸಪ್ರಣೀತ ಉಪನಿಷತ್ತೇ ಆಗಿರುವದು. ಇದರ ಅಧ್ಯಯನದಿಂದ ಅವಿದ್ಯೆಯ, ಹಾಗು ಅದರ ಕಾರ್ಯದ ಸಮೂಲ ಉಚ್ಛೇದವಾಗಿ, ಪರಬ್ರಹ್ಮರೂಪದ ನಿರ್ಮಲ ಜ್ಞಾನ ಜ್ಯೋತಿಯ ಪ್ರಭೆಯು ಸರ್ವತ್ರ ಪಸರಿಸುವದರ ಅನುಭವವಾಗುವದು. ಈ ಗ್ರಂಥದೊಳಗಿನ ತತ್ವಗಳು ಅನಾದಿ ಸಿದ್ಧವಾಗಿದ್ದು, ಶ್ರೀಮದ್ವ್ಯಾಸ ರಂಥ ಜ್ಞಾನಿಗಳು ಆ ತತ್ವಗಳ ಕೇವಲ ಪ್ರವಚನ ಮಾತ್ರ ಮಾಡಿರುವರು.

ಎಲ್ಲಿ ಬ್ರಾಹ್ಮಣರುಗಳಿರಾ, ಚತುರ್ವಿಧ ಪುರುಷಾರ್ಥಗಳನ್ನು ಸಾಧಿಸುವವರಿಗೆ ಮಹಾಭಾರತವು ಅತ್ಯುತ್ತಮ ಮೇಲುಪಂಗ್ತಿಯಾಗಿರುವದು. ಇದರಲ್ಲಿ ದೇವತೆಗಳು, ದೇವರ್ಷಿಗಳು, ಬ್ರಹ್ಮಋಷಿಗಳು ಮೊದಲಾದವರ ಚರಿತ್ರಗಳಿರುವವು. ಈ ಗ್ರಂಥದಲ್ಲಿ ಸಕಲ ಐಶ್ವರ್ಯ, ಜ್ಞಾನ, ಯಶ, ಶ್ರೀ, ವೈರಾಗ್ಯ, ಧರ್ಮ ಎಂಬ ಷಡ್ಗುಣಗಳ ನಿಧಿಯಾದ ವಾಸುದೇವನ ಮನೋಹರವಾದ ಕಥೆಗಳನ್ನು ವಿಸ್ತಾರವಾಗಿ ಹೇಳಿರುತ್ತದೆ ಈ ಅವಾಥವ್ಯ ವಿಶ್ವದಲ್ಲಿ ಶಾಶ್ವತ ವಸ್ತುವೆಂದರೆ, ಭಗವಾನ್ ವಾಸುದೇವನೆಂದು ತಿಳಿಯಬೇಕು. ಉಳಿದ ಜ್ಞಾತೃ, ಜ್ಞೇಯ ವಿಷಯುಗಳೆಲ್ಲ ಆತನ ಸ್ವರೂಪಗಳೆಂದು ತಿಳಿಯಬೇಕು. ಈ ಮಹಾಭಾರತ ಗ್ರಂಥವನ್ನು ಪಠಿಸುವರೆ, ವಾಸುದೇವನ ಯಥಾರ್ಥ ಜ್ಞಾನವಾಗಿ, ಮಾಯೆಯ ಪೂರ್ಣ ನಿವೃತ್ತಿಯಾಗುವದು; ಅದರಿಂದ ಪ್ರತಿ ಒಬ್ಬನು ಅಹರ್ನಿಶ ಭಾರತದ ಅಭ್ಯಾಸ ಮಾಡುವದು ಇಷ್ಟವಾಗಿರುವದು. ಶ್ರದ್ಧೆಯಿಂದ ಚಿತ್ತವನ್ನು ಏಕಾಗ್ರಗೊಳಿಸಿ ಧರ್ಮನಿಷ್ಠೆಯಿಂದ ಈ ಅನುಕ್ರಮಣಿಕಾಧ್ಯಾಯದ ಮನನಮಾಡುವವನ ಪಾತಕಗಳೆಲ್ಲ ನಷ್ಟವಾಗುವವು. ಅವನ ಆಪತ್ತುಗಳೆಲ್ಲ ದೂರವಾಗುವವು ಶ್ರಾದ್ಧಕಾಲದಲ್ಲಿ ಮಹಾಭಾರತದ ಒಂದು ಶ್ಲೋಕಾರ್ಥವನ್ನು ಶ್ರವಣಮಾಡಿಸಿದರೂ ಪಿತೃಗಳಿಗೆ ಅಕ್ಷಯ್ಯ ಅನ್ನೋದಕಗಳು ಮುಟ್ಟುವವು ಇದನ್ನು ಠಠಿಸುವವನಿಗೆ ದೀರ್ಘಾಯುಷ್ಯ ವಿಶಾಲಕೀರ್ತಿ ಪರಲೋಕ ಇವು ಸಾಧಿಸುವವು. ಪೂರ್ವದಲ್ಲಿ ದೇವತೆಗಳು ಮಹಾಭಾರತ ಗ್ರಂಥವನ್ನೂ, ಉಪನಿಷತ್ತುಗಳಿಂದ ಸಹಿತವಾದ ನಾಲ್ಕು ವೇದಗಳನ್ನೂ ತೂಗಿ ನೋಡಲು, ಮಹಾಭಾರತ ಗ್ರಂಥದ ತೂಕವು ಹೆಚ್ಚಾಯಿತು. ಅಂದಿನಿಂದ ಈ ಗ್ರಂಥಕ್ಕೆ ಬರಿಯ "ಭಾರತ"ವೆಂದಲ್ಲ, "ಮಹಾಭಾರತ"ವೆಂಬ ಹೆಸರು ಬಂದಿತು!

ಋಷಿಗಳೇ, ಈ ಅನುಕ್ರಮಣಿಕಾಧ್ಯಾಯದಿಂದ ನಿಮಗೆ ಮಹಾಭಾರತ ಗ್ರಂಥದ ಸಾಮಾನ್ಯ ಸ್ವರೂಪವು ಗೊತ್ತಾಗಿರಬಹುದು. ಇದರಲ್ಲಿ ಯುದ್ಧಾದಿ ಭಯಂಕರ ವರ್ಣನೆಗಳಿರುವವು; ಅದರಂತೆ ಸ್ಥಳವಿಶೇಷದಲ್ಲಿ ಕುಟಿಲ ನೀತಿಗಳ ಉಲ್ಲೇಖವೂ ಇರುವದು; ಅದರಿಂದ ಧರ್ಮಾಧರ್ಮ ವಿವೇಕ, ಆತ್ಮಾನಾತ್ಮ ವಿಚಾರ ಇವುಗಳೊಡನೆ ಈ ಗ್ರಂಥದಲ್ಲಿ ಬೇರೆ

ತ್ಯಾಜ್ಯವಿಷಯಗಳೂ ಕೂಡಿರುವದರಿಂದ, ವಿಷಮಿಶ್ರಿತ ಅನ್ನದಂತೆ ಈ ಗ್ರಂಥವು ಸರ್ವಥಾ ತ್ಯಾಜ್ಯವೆಂದು ಕದಾಚಿತ್ ಯಾರಾದರೂ ಶಂಕಿಸ ಬಹುದು ; ಆದರೆ ಈ ಗ್ರಂಥದಲ್ಲಿ ಧರ್ಮಾಧರ್ಮ ವಿವೇಕ, ಪರಬ್ರಹ್ಮ ಪ್ರಾಪ್ತಿ ಇವುಗಳ ವಿವೇಚನವೇ ಮುಖ್ಯವಾಗಿ ಇದ್ದು, ಉಳಿದ ವಿಷಯ ಗಳು, ಆ ಮುಖ್ಯ ವಿಷಯಗಳ ಸಾಧನೆಗಾಗಿಯೇ ವಿಸ್ತಾರವಾಗಿ ವಿವೇಚಿಸ ಲ್ಪಟ್ಟಿರುವವು. ಈ ಮುಖ್ಯವಿಷಯಗಳನ್ನು ಲಕ್ಷಿಸುವಾಗ ಉಳಿದ ಗೌಣ ವಿಷಯಗಳನ್ನು ಸರ್ವಥಾ ದುರ್ಲಕ್ಷಿಸತಕ್ಕದ್ದು. ಇಲ್ಲಿ ಹೇಳಿರುವ ಅರ್ಥ- ಪ್ರಾಪ್ತಿಯ ಉಪಾಯಗಳ ಹೇತುವು ಇಂದ್ರಿಯತೃಪ್ತಿಯಲ್ಲ; ಹಸಿವೆ- ನೀರಡಿಕೆಗಳನ್ನು ಸಹಿಸಿ ದೇಹಯಾತ್ರೆಯು ಸಾಗಿಸುವದೂ, ಬ್ರಹ್ಮಚಿಂತನ ಮಾಡುವದೂ ಮುಖ್ಯಹೇತುಗಳಾಗಿರುತ್ತವೆ. ತಾತ್ಪರ್ಯವೇನಂದರೆ, ತಪಶ್ಚರಣೆ, ವೇದಾಧ್ಯಯನ, ವೇದಗಳಲ್ಲಿ ಹೇಳಿದಂತೆ ಯಜ್ಞಗಳನ್ನು ಮಾಡುವದು ಇವು ಪಾಪನಾಶಕಗಳಾಗಿದ್ದರೂ, ಅವನ್ನು ಶುದ್ಧಭಾವದಿಂದ ಮಾಡದಿದ್ದರೆ, ತಿರುಗಿ ಅವು ಪಾಪಕ್ಕೆ ಕಾರಣವಾಗುವವು.

## ಶ್ರೀ ಶೇಷಸದ್ಗುರು - ಸೂಕ್ತಿರೂಪದ ರಹಸ್ಯಗಳು

**ಉಪಕ್ರಮ**—ಗ್ರಂಥಾರಂಭದಲ್ಲಿ ವಿಷಯಾನುಕ್ರಮಣಿಕೆ ಹೇಳುವ ಪ್ರಚಾರವು ಈಗಲೂ ಇರುತ್ತದಷ್ಟೆ? ಅದರಂತೆ ಆದಿಪರ್ವದೊಳಗಿನ ಈ ಒಂದನೆಯ ಉಪಪರ್ವದಲ್ಲಿ ಇಡಿಯ ಭಾರತದೊಳಗಿನ ವಿಷಯಗಳ ಅನು ಕ್ರಮಣಿಕೆಯನ್ನು ಕೇವಲ ದಿಗ್ದರ್ಶನರೂಪವಾಗಿ ಹೇಳಿರುವದರಿಂದ, ಈ ಪರ್ವಕ್ಕೆ ಅನುಕ್ರಮಣಿಕಾ ಪರ್ವವೆಂಬ ಹೆಸರು ಬಂದಿರುವದು. ಈ ಅನುಕ್ರಮಣಿಕೆಯ ಮೇಲಿಂದ ಮಹಾಭಾರತದಲ್ಲಿ ಕಥಾಪ್ರಸಂಗಗಳೂ ತಾತ್ವಿಕವಿಷಯಗಳೂ ಬಂದಿರುವವೆಂಬ ಮಾತು ಸಾಮಾನ್ಯವಾಗಿ ಗೊತ್ತಾ ಗುವದು. ಶ್ರೀ ವೇದವ್ಯಾಸರು ಮಹಾಭಾರತದ ಅನುಕ್ರಮಣಿಕೆಯ ದಿಗ್ದರ್ಶನವನ್ನು ಕೂಡ ಎಷ್ಟು ಮನೋಹರವಾಗಿ ಮಾಡಿರುವರೆಂಬದು ವಿಚಾರಿಸತಕ್ಕ ಮಾತಾಗಿದೆ. ಈ ಪರ್ವದಲ್ಲಿ ಕೆಳಗಿನ ರಹಸ್ಯಗಳು ಗ್ರಹಿಸ ತಕ್ಕವಾಗಿರುವವು.

(೧) **ಮಂಗಲಾಚರಣದ ಆವಶ್ಯಕತೆ**—ಮಂಗಲಾಚರಣವೆಂದರೆ, ಕಾರ್ಯಾರಂಭದಲ್ಲಿ ಮಾಡುವ ದೇವರ, ಗುರುಗಳು ಮೊದಲಾದ ಪೂಜ್ಯರ ವಂದನವೆಂದು ತಿಳಿಯಬೇಕು ; ಅದರಲ್ಲಿ ದೇವತಾವಂದನರೂಪ ಮಂಗಲ ಮಾಡುವದೇ ವಿಶೇಷವಾಗಿ ಬಳಿಕೆಯಲ್ಲಿರುವದು. ಹೀಗೆ ಮಂಗಲ ಮಾಡುವದು ಶ್ರೇಷ್ಠತರವಾದ ಕಲ್ಯಾಣಕಾರಕ ಪವಿತ್ರ ನೀತಿಯಾಗಿರುತ್ತದೆ. ನಮ್ಮ ವೈದಿಕಸಾಂಪ್ರದಾಯದಂತೆ, ಗ್ರಂಥಾರಂಭದಲ್ಲಿ ಮಂಗಲವನ್ನು ಆಚರಿಸದಿರುವದು ದೋಷವು; ಆದರೆ ಪಾಶ್ಚಾತ್ಯ ಸಂಸ್ಕೃತಿಯು ನಮ್ಮಲ್ಲಿ ಉಣ್ಣುತ್ತಬಂದ ಮಾನದಿಂದ, ನಮ್ಮಲ್ಲಿ ಅಹಂಕಾರವು ಹೆಚ್ಚಿತು ; ನಮ್ಮ ಭಕ್ತಿ-ಭಾವಗಳು ಮಣ್ಣುಗೂಡಿದವು. ಹೀಗೆ ನಾಸ್ತಿಕರಾಗಿ ಹೋದ ನಮಗೆ ಗ್ರಂಥಾರಂಭದಲ್ಲಿ ಮಂಗಲವನ್ನು ಆಚರಿಸಲಿಕ್ಕೆ ನಾಚಿಕೆ ಬರುತ್ತಿರುವದು! ಆದರೆ ಇದು ಸರಿಯಲ್ಲ. ಮಂಗಲಾಚರಣದಿಂದ ಕೆಳಗಿನ ಎರಡು ಲಾಭಗಳಾಗುತ್ತವೆಂಬದನ್ನು ಲಕ್ಷದಲ್ಲಿಡತಕ್ಕದ್ದು.

(ಅ) **ಕರ್ತವ್ಯಪಾಲನದ ಶಾಂತಿ**—ದೇವರು ಜಗದಾಧಾರನೂ, ಜಗತ್ಕರ್ತೃವೂ, ಜಗದ್ರಕ್ಷಕನೂ ಆಗಿರುವದರಿಂದ, ಆತನನ್ನು ಗ್ರಂಥಾರಂಭದಲ್ಲಿ ಕೃತಜ್ಞತೆಯಿಂದ ವಂದಿಸುವದು ನಮಗೆ ಶಾಂತಿದಾಯಕವೂ, ಕಲ್ಯಾಣಕಾರಕವೂ ಆಗಿರುವದು; ಅಲ್ಲದೆ, ದೇವರ ಕೃಪೆಯಿಂದ ನಮ್ಮ ಮನಸ್ಸಿನಲ್ಲಿ ಒಳ್ಳೆಯ ವಿಚಾರಗಳು ಉತ್ಪನ್ನವಾಗಬಹುದಾಗಿದೆ.

(ಆ) **ವಿಘ್ನನಿವಾರಣ**—ನಮ್ಮ ಕಾರ್ಯದಲ್ಲಿ ಬರುವ ವಿಘ್ನಗಳು ದೇವರ ಕೃಪೆಯಿಂದ ದೂರವಾಗುವ ಸಂಭವವಿರುವದು. ನಮ್ಮ ಮಂಗಲಾಚರಣವು ಸರಿಯಾಗಿ ಆಗದ್ದರಿಂದಾಗಲಿ, ನಮ್ಮ ಕೆಲಸವು ದೇವರ ಮನಸ್ಸಿಗೆ ಬಾರದ್ದರಿಂದಾಗಲಿ ನಾವು ಮಾಡಿದ ಮಂಗಲಾಚರಣದಿಂದ ಕಾರ್ಯವು ಕಡೆಗಾಣದಿದ್ದರೂ, ಮೇಲೆ ಹೇಳಿದಂತೆ ಕರ್ತವ್ಯಪಾಲನದ ಶಾಂತಿಯಂತು ನಮ್ಮಲ್ಲಿ ಉಂಟಾಗುವದು.

(೨) **ಗುಣಗಳೇ ಪೂಜ್ಯತೆಗೆ ಸ್ಥಾನವು**—ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳು ದೇವರಿಂದ ಉಂಟಾಗಿರುವವೆಂದು ವೇದದಲ್ಲಿ ಹೇಳಿರುವದು. "ವರ್ಣಾನಾಂ ಬ್ರಾಹ್ಮಣೋಗುರುಃ" ಎಂಬ ಉಕ್ತಿಯಂತೆ, ಆ ನಾಲ್ಕು ವರ್ಣಗಳಿಗೂ ಬ್ರಾಹ್ಮಣರೇ ಗುರು

ಗಳಿಂದು ವೇದಗಳಲ್ಲಿ ಶ್ರದ್ಧೆಯುಳ್ಳ ಜನರು ನಂಬುತ್ತ ಬಂದಿರುವರು; ಆದರೂ ಆಯಾವರ್ಣದವರು ತಮ್ಮ ತಮ್ಮ ಕರ್ತವ್ಯಗಳನ್ನು ಅಂತಃಕರಣ ಪೂರ್ವಕ ಪಾಲಿಸುತ್ತ ಬಂದಮೂನದಿಂದಲೇ ಪೂಜ್ಯತೆಯನ್ನು ಪಡೆಯು ವರು. ಶ್ರೀರಾಮ-ಶ್ರೀಕೃಷ್ಣರು ಕ್ಷತ್ರಿಯರಾದರೂ ಅವರಲ್ಲಿಯ ದೇವ ತ್ವದ ಮೂಲಕ ಅವರು ಬ್ರಾಹ್ಮಣರಿಗೂ ಪೂಜ್ಯರಾಗಿರುವದು ಅನುಭವ ಸಿದ್ಧವು. ಅದರಂತೆ, ಇಲ್ಲಿ ಶೂದ್ರನಾದ ಉಗ್ರಶ್ರವಪೌರಾಣಿಕನು ಸದಾ ಚಾರಿಯೂ, ಜ್ಞಾನಸಂಪನ್ನನೂ, ಶ್ರೀ ವೇದವ್ಯಾಸರ ಅನುಗ್ರಹಕ್ಕೆ ಪಾತ್ರನಾದವನೂ ಇದ್ದದ್ದರಿಂದ, ಶೌನಕಾದಿ ಬ್ರಹ್ಮ ಋಷಿಮಂಡಲದ ಮುಂಭಾಗದಲ್ಲಿ ಅಗ್ರಾಸನವನ್ನು ಪಡೆದು ಭಾರತಪುರಾಣ ಹೇಳುತ್ತಿರು ವನು; ಆದರೂ ಆತನು ತನ್ನ ಶೂದ್ರಧರ್ಮದ ತಾರತಮ್ಯವನ್ನು ಬಿಟ್ಟಿರು ವದಿಲ್ಲವೆಂಬದು ಆತನ ಆಚರಣೆಯಿಂದ ಗೊತ್ತಾಗುವದು. ಇದರಂತೆ, ಆಯಾ ವರ್ಣದವರು ಪರಸ್ಪರ ಅಸೂಯಾಭಾವವನ್ನು ತೊರೆದು, ಪರಸ್ಪರ ಸಹಾನುಭೂತಿಯುಳ್ಳವರಾಗಿ, ತಮ್ಮ ತಮ್ಮ ಧರ್ಮದಂತೆ ತಮ್ಮ ತಮ್ಮ ಕರ್ತವ್ಯಗಳನ್ನು ಪಾಲಿಸತೊಡಗಿದರೆ, ಪ್ರೇಮವೃದ್ಧಿಯ ಮೂಲಕ ಈಶ್ವರ ಕೃಪೆಯಾಗಿ ಸರ್ವರ ಸುಖವು ಹೆಚ್ಚುವದಲ್ಲದೆ, ಪರಸ್ಪರರು ಪರಸ್ಪರರ ಆದರಭಾವಕ್ಕೆ ಪಾತ್ರರಾಗುವರು. ಹೀಗೆ ಮಾಡದೆ, ಒಂದು ವರ್ಣದವರು ಮತ್ತೊಂದು ವರ್ಣದವರ ಧರ್ಮವನ್ನು ಕೈಕೊಂಡರೆ, ಈಶ್ವರೀ ಕ್ಷೋಭದ ಮೂಲಕ ಭಯಗ್ರಸ್ತರಾಗುವದು ಸದ್ಯದ ಅನುಭವದ ಮಾತಾಗಿರುತ್ತದೆ ಶ್ರದ್ಧಾವಂತರಾದ ಚಾತುರ್ವರ್ಣ್ಯದ ವೈದಿಕರು ಈ ಅನುಭವವನ್ನು ವಿಚಾ ರಿಸಿ ನೋಡತಕ್ಕದ್ದು.

**(೩) ಭಾರತಾವಲೋಕನಕ್ಕೆ ಶ್ರದ್ಧೆಯ ದೃಢನಿಶ್ಚಯವುಬೇಕು** ಭಾರತದ ರಚನೆಯು ಸುಲಭ—ಕಠಿಣವಿಷಯಗಳ ಸರಿಬೆರಿಕೆಯಿಂದ ಆಗಿರು ವದರಿಂದ, ನಡನಡುವೆ ಕಠಿಣವಿಷಯಗಳು ಬಂದು ಭಾರತ ಓದುವವರ ರಸಭಂಗವಾದಂತಾಗುವದು; ಆದ್ದರಿಂದ ಕಾದಂಬರಿಗಳ ವಾಚನಕ್ಕೆ ಮೆಚ್ಚಿದ ಈಗಿನ ಚಂಚಲವೃತ್ತಿಯವರಿಗೆ, ಒಂದೇಸವನೆ ಮಹಾಭಾರತ ವನ್ನು ಓದುವದು ಬೇಸರದ ಕೆಲಸವಾಗಬಹುದು. ಈ ಮಾತು ಈ ಅನು **ಕ್ರಮಣಿಕಾಪರ್ವದೊಳಗಿನ "ಮಂಗಲಾಚರಣ" "ಜಗದುತ್ಪತ್ತಿ"**

"ದೇವತಾಸೃಷ್ಟಿ" ಮೊದಲಾದ ವಿಷಯಗಳನ್ನು ಓದುವಾಗ ಅಲ್ಪ ಸ್ವಲ್ಪ ಪ್ರಮಾಣದಿಂದ ಅನುಭವಕ್ಕೆ ಬರಬಹುದು; ಆದರೆ ಹೀಗೆ ಬೇಸರಿಯುವದು ಸರಿಯಲ್ಲ. ಭಾರತದಲ್ಲಿ ಕೌರವ ಪಾಂಡವರ ಕಥೆಯಂತಹ ಅತ್ಯಂತ ಮನೋಹರವಾದ ಕಥೆಗಳೂ ಇರುವವು; ಮತ್ತು ಜಗತ್ತಿನ ಬೇರೆಕಡೆಗೆ ದೊರೆಯದ ಶ್ರೀ ಭಗವದ್ಗೀತೆಯಂಥ ಅದ್ವಿತೀಯ ಆಧ್ಯಾತ್ಮಿಕ ವಿಷಯಗಳೂ, ವಿದುರನೀತಿ-ಭೀಷ್ಮನೀತಿಗಳಂಥ ಉತ್ಕೃಷ್ಟವಾದ ನೈತಿಕವಿಷಯಗಳೂ, ಕಣಿಕನೀತಿ-ನಾರದನೀತಿಗಳಂಥ ಉತ್ತಮ ರಾಜಕೀಯ ವಿಷಯಗಳೂ, ಅರ್ಥಶಾಸ್ತ್ರ, ವ್ಯವಹಾರಶಾಸ್ತ್ರಗಳಂಥ ಹಲವು ಶಾಸ್ತ್ರೀಯ ವಿಷಯಗಳೂ ಬಂದಿರುವವು ; ಆದ್ದರಿಂದ ಶಾಶ್ವತವಾದ ಮಹತ್ವದ ಲಾಭದ ತಾತ್ವಿಕ ವಿಷಯಗಳನ್ನು ದುರ್ಲಕ್ಷಿಸಿ, ತಾತ್ಕಾಲಿಕ ಕ್ಷುದ್ರಲಾಭದ ಮನೋರಂಜಕ ವಿಷಯಗಳನ್ನು ಓದಲಿಕ್ಕೆ ಮೆಚ್ಚಿದವರಿಗೆ ಮಹಾಭಾರತದಿಂದ ಆಗತಕ್ಕಷ್ಟು ಪ್ರಯೋಜನವು ಆಗಲಾರದೆಂಬ ರಹಸ್ಯವನ್ನು ಲಕ್ಷ್ಯದಲ್ಲಿಡತಕ್ಕದ್ದು. ಮಹಾಭಾರತಾವಲೋಕನದ ಶ್ರೇಷ್ಠಫಲವು ತತ್ವಜ್ಞಾನವಲ್ಲದೆ ಮನೋರಂಜನವಲ್ಲ. ಭಾರತದೊಳಗಿನ ಕಥೆಗಳಲ್ಲಿ ತತ್ವಜ್ಞಾನವಿಲ್ಲೆಂದು ನಾವು ಹೇಳುವದಿಲ್ಲ. ಆ ಕಥೆಗಳು ತತ್ವಗಳ ವ್ಯಾವಹಾರಿಕರೂಪಗಳಾಗಿರುವದರಿಂದ, ಅವುಗಳನ್ನು ಸೋಸಿನೋಡಿದಾಗ ತತ್ವಗಳು ಗೊತ್ತಾಗುವವು; ಆದ್ದರಿಂದ ಭಾರತವನ್ನು ಓದುವವರು ಅದರೊಳಗಿನ ಮನೋರಂಜಕ ಕಥೆಗಳನ್ನು ಓದುವಂತೆ, ಉಳಿದ ತಾತ್ವಿಕ ವಿಷಯಗಳನ್ನೂ ದೃಢಮನಸ್ಸಿನಿಂದ ಬೇಸರಿಯದೆ ಓದಿ, ತಮಗೆ ತಿಳಿಯದ ವಿಷಯವನ್ನು ಬಲ್ಲವರಿಂದ ತಿಳಿದುಕೊಂಡು, ಅದರಂತೆ ಶ್ರದ್ಧೆಯಿಂದ ಆಚರಿಸಿ ತಮ್ಮ ಆತ್ಮೋನ್ನತಿಯನ್ನು ಮಾಡಿಕೊಳ್ಳತಕ್ಕದ್ದು.

(೪) **ಭಾರತಗ್ರಂಥದ ಅಲೌಕಿಕತೆ**—ಭಾರತದಂಥ ಮಹತ್ವದ ಗ್ರಂಥವು ಜಗತ್ತಿನಲ್ಲಿರುವದಿಲ್ಲವೆಂಬ ಮಾತು ಸರ್ವಥಾ ಅತಿಶಯೋಕ್ತಿಯದಲ್ಲ; ಮನಃಪೂರ್ವಕವಾಗಿ ಇಡಿಯಭಾರತವನ್ನು ಅವಲೋಕಿಸುವ ಪುಣ್ಯವಂತರಿಗೆ ಈಮಾತು ಅನುಭವಕ್ಕೆ ಬಂದೇಬರುವದೆಂದು ಪ್ರತಿಜ್ಞಾಪೂರ್ವಕವಾಗಿ ಹೇಳಬಹುದು. ಐದನೆಯ ವೇದವೆನಿಸಿಕೊಂಡಿದ್ದ **ಈ ಗ್ರಂಥದ ಅಲೌಕಿಕತೆಗೆ ಮೂರುಕಾರಣಗಳಿರುವವು**—(೧) **ತ್ರಿಕಾಲಜ್ಞ**

ರಾದ ಭಗವಾನ್ ವೇದವ್ಯಾಸಮಹರ್ಷಿಗಳು ತಮ್ಮ ತಪಸ್ಸಿದ್ಧಯೋಗ ಸಾಮರ್ಥ್ಯದಿಂದ ಭಾರತದ ರಚನೆಯನ್ನು ಮೊದಲು ಮನಸ್ಸಿನಲ್ಲಿ ಮಾಡಿದ್ದು; (೨) ವಿದ್ಯಾಧಿದೇವತೆಯಾದ ಶ್ರೀ ಗಜಾನನನು ಅದನ್ನು ಅರ್ಥ ತಿಳಿದುಕೊಳ್ಳುತ್ತ ಬರೆದದ್ದು! ಮತ್ತು ಆ ದೇವೋತ್ತಮನ ಕೈಯು ನಿಲ್ಲದಂತೆ ಋಷಿಶ್ರೇಷ್ಠರಾದ ಶ್ರೀ ವ್ಯಾಸರು ಶ್ಲೋಕರಚನೆಮಾಡಿ ಹೇಳಿದ್ದು. (೩) ಭೂಲೋಕದಲ್ಲಿ ಒಂದು ಲಕ್ಷ ಶ್ಲೋಕಗಳ ಭಾರತವಿರು ವದಲ್ಲದೆ, ಲೋಕಾಂತರಗಳಲ್ಲಿ ಐವತ್ತರೊಂಬತ್ತು ಲಕ್ಷ ಶ್ಲೋಕಗಳ ಭಾರತವಿದ್ದು, ಒಟ್ಟು ಅರವತ್ತುಲಕ್ಷ ಶ್ಲೋಕಗಳ ಭಾರತವು ವೇದ ವ್ಯಾಸರಿಂದ ರಚಿಸಲ್ಪಟ್ಟಿದ್ದು.

ಭಾರತದ ಈ ಅಲೌಕಿಕತೆಯ ವಿಷಯವಾಗಿ ಭಾವಿಕರು ಸರ್ವಥಾ ಶಂಕಿಸತಕ್ಕದ್ದಲ್ಲ; ಯಾಕಂದರೆ ಮಹರ್ಷಿ ವ್ಯಾಸರಂಥ ನಮ್ಮ ಪರಮ ಆಪ್ತರ, ಅಸತ್ಯವನ್ನು ಹೇಳರು; ಭಾರತದ ಅಲೌಕಿಕತೆಯು ಸತ್ಯವಾ ದದ್ದರಿಂದಲೇ ಬಹು ಪ್ರಾಚೀನ ಕಾಲದಿಂದ ವಂಶಪರಂಪರೆಯಾಗಿ ಆ ಗ್ರಂಥವು ನಮ್ಮ ಭಾರತೀಯರ ಕಲ್ಯಾಣವನ್ನು ಒಂದೇಸವನೆ ಮಾಡುತ್ತ ಬಂದಿದೆ. ಈಗಾದರೂ ನಾವು ಭಾರತವನ್ನು ಶ್ರದ್ಧೆಯಿಂದ ಅವಲೋಕಿಸಿ, ಅದರೊಳಗಿನ ಉದಾತ್ತ ತತ್ವಗಳಂತೆ ಆಚರಿಸಿದರೆ, ಈಶ್ವರ ಕೃಪೆಯಿಂದ ಭರತಭೂಮಿಯ ನಿಜವಾದ ಉದ್ಧಾರವಾಗುವಲ್ಲಿ ಸಂಶಯವಿಲ್ಲ.

**೫. ಫಲಶ್ರುತಿ**—ಭಾರತದಲ್ಲಿ ಭಗವಾನ್ ವೇದವ್ಯಾಸರು ಅಲ್ಲಲ್ಲಿ ಫಲಶ್ರುತಿಯನ್ನು ಹೇಳಿರುವದು ಜಡವಾದಿಗಳಾದ ನಾಸ್ತಿಕರಿಗೆ ನಿರರ್ಥಕ ವಾಗಿ ತೋರಬಹುದು; ಆದರೆ ಮೇಲೆ ಹೇಳಿದಂತೆ ವೇದವ್ಯಾಸರು ಅಸತ್ಯ ವಾದಿಗಳಲ್ಲ; ಅವರು ಸುಳ್ಳಾಡಿ ಏನನ್ನಾದರೂ ಗಳಿಸುವಂಥವರಲ್ಲ; ಆದ್ದರಿಂದ ಆಸ್ತಿಕರಾದವರು ಭಾರತದಲ್ಲಿಯ ಫಲಶ್ರುತಿಯ ವಿಷಯದಲ್ಲಿ ಸರ್ವಥಾ ಶಂಕಿಸಬಾರದು. ಭಾರತವು ನಿಷ್ಫಲ ಗ್ರಂಥವಾಗಿದ್ದರೆ, ಅದು ಇಷ್ಟುದಿವಸ ನಿಲ್ಲುತ್ತಲೂ ಇದ್ದಿಲ್ಲ; ಅದರ ಅಭಿವೃದ್ಧಿಯೂ ಆಗುತ್ತಿ ದ್ದಿಲ್ಲ. ಪ್ರಯೋಜನವಿಲ್ಲದೆ ಮಂದನೂ ಕಾರ್ಯಮಾಡದಿರಲು, ನಿಷ್ಫಲ ವಾದ ಭಾರತವ ಸೇವಿಸುವ ಶ್ರಮವನ್ನು ವೇದವ್ಯಾಸರಂಥ ಮಹಾತ್ಮರು **ನಮ್ಮಮೇಲೆ ಸರ್ವಥಾ ಹಾಕಲಾರರು; ಆದ್ದರಿಂದ ಭಾರತದ ಫಲ**

ಶ್ರುತಿಯು ಸತ್ಯವೆಂದು ನಂಬಿ ಭಾರತವನ್ನು ಶ್ರದ್ಧೆಯಿಂದ ಶ್ರವಣಮಾಡ ತಕ್ಕದ್ದು.

**ಉಪಸಂಹಾರ**—ಈ ರಹಸ್ಯಗಳಲ್ಲದೆ, ಧೃತರಾಷ್ಟ್ರಾದಿಗಳ ಉತ್ಪತ್ತಿಯೇ ಮೊದಲಾದ ಹಲವು ಗೂಢ ವಿಷಯಗಳ ರಹಸ್ಯಗಳನ್ನು ಇಲ್ಲಿ ಹೇಳಬಹುದಾಗಿತ್ತು ; ಆದರೆ, ಅವನ್ನು ಇಲ್ಲಿ ಅನುಕ್ರಮಣಿಕಾ ಪರ್ವದಲ್ಲಿ ಹೇಳದೆ, ಆ ವಿಷಯಗಳು ವಿಸ್ತಾರವಾಗಿ ಬಂದಿರುವ ಸ್ಥಳಗಳಲ್ಲಿ ಮುಂದೆ ಹೇಳಬೇಕೆಂದು ಬಿಟ್ಟಿರುತ್ತದೆ.



## ೨ ಪರ್ವಸಂಗ್ರಹಪರ್ವ — ೨ನೇ ಅಧ್ಯಾಯ

**ಸಮಂತ ಪಂಚಕ ವರ್ಣನ**— ಶೌನಕಾದಿ ಬ್ರಾಹ್ಮಣರು ಸೂತ ಪೌರಾಣಿಕನನ್ನು ಕುರಿತು—"ಸೂತರೇ, ನೀವು ಸಮಂತಪಂಚಕ ಕ್ಷೇತ್ರದಿಂದ ಬಂದೆವೆಂದು ಆಗಲೆ ಹೇಳಿದಿರಲ್ಲ ; ಆ ಕ್ಷೇತ್ರದ, ಹಾಗು ಅಲ್ಲಿ ನಡೆದ ಕೌರವ ಪಾಂಡವರ ಯುದ್ಧದ ವರ್ಣನವನ್ನು ನಾವು ಕೇಳಬೇಕೆಂದಿರುವೆವು, ಅವನ್ನು ನಮಗೆ ಹೇಳಿರಿ" ಎಂದು ಕೇಳಲು, ಸೂತರು—"ಋಷಿಗಳೇ, ಹಿಂದಕ್ಕೆ ತ್ರೇತಾ - ದ್ವಾಪರಯುಗಗಳ ಸಂಧಿಕಾಲದಲ್ಲಿ ಕಾರ್ತವೀರ್ಯನೆಂಬ ಕ್ಷತ್ರಿಯನು, ಜಮದಗ್ನಿಋಷಿಯ ಕಾಮಧೇನುವನ್ನು ಹರಣಮಾಡಿದನು. ಆಗ ಜಮದಗ್ನಿಯ ಮಗನಾದ ಪರಶುರಾಮನು ಆ ಸಹಸ್ರಾರ್ಜುನನನ್ನು ಕೊಂದು ಕಾಮಧೇನುವನ್ನು ತಕ್ಕೊಂಡು ಬಂದನು. ತಂದೆಯ ಮರಣದ ಈ ಸೇಡು ತೀರಿಸಿಕೊಳ್ಳುವದಕ್ಕಾಗಿ ಕಾರ್ತವೀರ್ಯಾರ್ಜುನನ ಮಕ್ಕಳು, ಆಶ್ರಮದಲ್ಲಿ ಪರಶುರಾಮನು ಇಲ್ಲದ ಸಂಧಿಯನ್ನು ನೋಡಿ ಜಮದಗ್ನಿಯನ್ನು ಕೊಂದರು.

ಋಷಿಗಳೇ, ತಂದೆಯ ಈ ಮರಣದ ಸುದ್ದಿಯನ್ನು ಕೇಳಿ, ಶಸ್ತ್ರಧರಾಗ್ರಣಿಯಾದ ಪರಶುರಾಮನು ಸಂತಪ್ತನಾಗಿ ಪುನಃಪುನಃ ಕ್ಷತ್ರಿಯರನ್ನು ಸಂಹರಿಸಿ ಅವರ ರಕ್ತದಿಂದ ಐದು ಮಡುವುಗಳನ್ನು ತುಂಬಿದನು. ಇದನ್ನು ನೋಡಿ ಪರಶುರಾಮನ ಪಿತೃಗಳಾದ ಋಚೀಕನೇ ಮೊದಲಾದ

ವರು ಆತನ ಬಳಿಗೆ ಬಂದು— "ಎಲೈ ಮಹಾಭಾಗಾ,ಭಾರ್ಗವಾ,ಪರಶು ರಾಮಾ, ನಿನ್ನ ಈ ಪಿತೃಭಕ್ತಿಯನ್ನೂ, ಅಲೌಕಿಕ ಸಾಮರ್ಥ್ಯವನ್ನೂ ನೋಡಿ ನಮಗೆ ಬಹಳ ಸಂತೋಷವಾಗಿರುತ್ತದೆ ; ಆದ್ದರಿಂದ ಏನಾದರೂ ವರಗಳನ್ನು ಬೇಡಿಕೋ" ಅನ್ನಲು, ಪರಶುರಾಮನು—"ನೀವು ಅನುಗ್ರಹಿ ಸುತ್ತಿರುವದನ್ನು ನೋಡಿ ನಾನುಧನ್ಯನಾಗಿರುವೆನು;ಆದರೆ ನನ್ನ ಈಘೋರ ಕೃತ್ಯಕ್ಕಾಗಿ ಮಾತ್ರ ನನಗೆ ಅಷ್ಟು ಧನ್ಯತೆಯು ತೋರುವದಿಲ್ಲ ; ಆದ್ದ ರಿಂದ ನನ್ನಮೇಲೆ ನೀವು ಪ್ರಸನ್ನರಾಗಿರುವದೇ ನಿಜವಿದ್ದರೆ, ನನಗೆ ಎರಡು ವರಗಳನ್ನು ಕೊಡಬೇಕೆಂದು ಪ್ರಾರ್ಥಿಸುವೆನು. ಈ ಕ್ಷತ್ರಿಯ ಸಂಹಾರದ ಪಾಪದಿಂದ ನಾನು ಮುಕ್ತನಾಗಬೇಕೆಂಬದು ನನ್ನ ಒಂದನೆಯ ವರವು ; ಕ್ಷತ್ರಿಯರ ರಕ್ತದಿಂದ ತುಂಬಿದ ಈ ಐದು ಮಡುವುಗಳು ಮಹಾ ಪವಿತ್ರಕ್ಷೇತ್ರವೆಂದು ಪ್ರಸಿದ್ಧವಾಗಬೇಕೆಂಬದು ನನ್ನ ಎರಡನೆಯ ವರವು" ಎಂದು ಪ್ರಾರ್ಥಿಸಿದನು. ಅದಕ್ಕೆ ಪಿತೃಗಳು— "ಪರಶುರಾಮಾ, ನೀನು ಅಂದಂತೆಯೇ ಆಗುವದು. ಇನ್ನು ನೀನು ಕ್ಷತ್ರಿಯರ ಸಂಹಾರವನ್ನು ನಿಲ್ಲಿಸು," ಎಂದು ಹೇಳಿದರು. ಋಷಿಗಳೇ, ಹೀಗೆ ರಕ್ತದ ಆ ಐದು ಮಡುವುಗಳ ಸಮೀಪದ ಪ್ರದೇಶಕ್ಕೆ ಸಮಂತಪಂಚಕವೆಂಬ ಹೆಸರು ಉಂಟಾಯಿತು. ಈ ಹೆಸರು ಉಂಟಾಗಲಿಕ್ಕೆ ಇನ್ನೂ ಒಂದು ಕಾರಣ ಹೇಳುವರು. ಕೌರವ-ಪಾಂಡವರ ಭಯಂಕರ ಯುದ್ಧವು ಈ ಸಮಂತ ಪಂಚಕ ಪ್ರದೇಶದಲ್ಲಿಯೇ ಆಯಿತು. ಆ ಯುದ್ಧದಲ್ಲಿ ಹದಿನೆಂಟು ಅಕ್ಷೋಹಿಣೀ ಸೈನ್ಯದ ಸಂಹಾರವು ಹದಿನೆಂಟೇ ದಿನಗಳಲ್ಲಿ ಆಯಿತು. "ಸಮಂತ" ಎಂಬ ಶಬ್ದದ ಅರ್ಥವು "ಕೂಡಿದ ವೀರರ ಸಂಹಾರ" ಎಂದು ಆಗುವವರಿಂದ, ಈ ಶಬ್ದವ್ಯುತ್ಪತ್ತಿಯಮೇಲಿಂದಲೂ, ಇತಿ ಹಾಸದ ಮೇಲಿಂದಲೂ ಪರಮಪಾವನವಾದ ಆ ಐದು ಮಡವುಗಳ ಸಮೀ ಪದ ಪ್ರದೇಶಕ್ಕೆ "ಸಮಂತಪಂಚಕ" ಎಂಬ ಹೆಸರು ಉಂಟಾಗಿ, ಅದು ತ್ರಿಭುವನದಲ್ಲಿ ಪ್ರಖ್ಯಾತವಾಯಿತು.

**ಅಕ್ಷೌಹಿಣಿಯ ಪರಿಮಾಣವು** — ಶೌನಕಾದಿಗಳು ಸೂತನನ್ನು ಕುರಿತು— "ಸೂತನೇ, ನೀನು ಕೌರವ-ಪಾಂಡವರ ಯುದ್ಧದಲ್ಲಿ ಹದಿ ನೆಂಟು ಅಕ್ಷೌಹಿಣೀ ಸೈನ್ಯದ ಸಂಹಾರವಾಯಿತೆಂದು ಹೇಳಿದೆ; ಆದರೆ

ಅಕ್ಷೌಹಿಣಿಯೆಂದರೇನು ? ನಮಗೆ ವಿಸ್ತಾರವಾಗಿ ಹೇಳಬೇಕು" ಎಂದು ಕೇಳಿದರು. ಅದಕ್ಕೆ ಸೌತಿಯು -- "ಋಷಿವರ್ಯರೇ, ತಜ್ಞಪುರುಷರು— ಒಂದು ರಥ, ಒಂದು ಆನೆ, ಮೂರು ಕುದುರೆ, ಐವರು ಕಾಲಾಳು ಕೂಡಿ ಆಗುವ ಸೈನ್ಯಕ್ಕೆ "ಪತ್ತಿ" ಎಂಬ ಸಂಜ್ಞೆಯನ್ನು ಕೊಡುವರು. ಮೂರು ಪತ್ತಿಗಳು ಕೂಡಿ ಒಂದು ಸೇನಾಮುಖವಾಗುವದು. ಮೂರು ಸೇನಾ ಮುಖಗಳು ಕೂಡಿ ಒಂದು ಗುಲ್ಮವಾಗುವದು ; ಮೂರು ಗುಲ್ಮಗಳು ಕೂಡಿ ಒಂದು ಗಣವಾಗುವದು ; ಅದರಂತೆ ಮೂರು ಗಣಗಳಿಂದ ಒಂದು ವಾಹಿನಿಯೂ, ಮೂರು ವಾಹಿನಿಗಳಿಂದ ಒಂದು ಪೃತನವೂ, ಮೂರು ಪೃತನಗಳಿಂದ ಒಂದು ಚಮುವೂ, ಮೂರು ಚಮುಗಳು ಕೂಡಿ ಒಂದು ಅನೀಕಿನಿಯೂ ಆಗುವವು. ಇಂತಹ ಹತ್ತು ಅನೀಕಿನಿಗಳು ಕೂಡಿ ಒಂದು ಅಕ್ಷೌಹಿಣಿಯಾಗುವದು. ಒಟ್ಟಿಗೆ, ಒಂದು ಅಕ್ಷೌಹಿಣೀ ಸೈನ್ಯವೆಂದರೆ, ಇಪ್ಪತ್ತೊಂದು ಸಾವಿರದ ಎಂಟುನೂರಾಎಪ್ಪತ್ತು ರಥಗಳು, ಅಷ್ಟೇ ಆನೆಗಳು, ಅರವತ್ತೈದುಸಾವಿರದ ಆರುನೂರಾಹತ್ತು ಕುದುರೆಗಳು, ಒಂದುಲಕ್ಷ ಒಂಬತ್ತುಸಾವಿರದ ಮುನ್ನೂರುಐವತ್ತು ಕಾಲಾಳು ಇಷ್ಟು ಸಂಖ್ಯೆಯಾಗುವದು. ಇಂತಹ ಹದಿನೆಂಟು ಅಕ್ಷೌಹಿಣೀಸೈನ್ಯದ ಸಂಹಾರವು ಹದಿನೆಂಟೇ ದಿನಗಳಲ್ಲಿ ಆಯಿತು ! ಆ ಹದಿನೆಂಟು ದಿನಗಳೊಳಗಿನ ಮೊದಲಿನ ಹತ್ತು ದಿನಗಳಲ್ಲಿ ಮಹಾಪ್ರತಾಪಶಾಲಿಗಳಾದ ಭೀಷ್ಮರು ಸೇನಾಧ್ಯಕ್ಷರಾಗಿದ್ದರು. ಅವರು ಶರಪಂಜರದಲ್ಲಿ ಶಯನಮಾಡಿದಬಳಿಕ ಮುಂದೆ, ದ್ರೋಣಾಚಾರ್ಯರು ಐದುದಿವಸ, ಕರ್ಣನು ಎರಡುದಿವಸ, ಶಲ್ಯನು ಅರ್ಧದಿವಸ, ಉಳಿದ ಅರ್ಧದಿವಸ ದುರ್ಯೋಧನನು ಹೀಗೆ ಸೇನಾಧ್ಯಕ್ಷರಾಗಿ ರಣಭೂಮಿಯಲ್ಲಿ ದೇಹವಿಟ್ಟರು. ಹೀಗೆ ಕೌರವರ ನಾಶವಾದಬಳಿಕ, ಇನ್ನು ತಮಗೆ ಯಾರಭಯವೂ ಇಲ್ಲೆಂದು ತಿಳಿದು ಧರ್ಮರಾಜನ ಸೈನ್ಯವು ಹದಿನೆಂಟನೆಯದಿವಸ ರಾತ್ರಿ ಸ್ವಸ್ಥವಾಗಿ ಮಲಗಿರಲು, ಕೌರವರಕಡೆಗೆ ಉಳಿದಿದ್ದ ಅಶ್ವತ್ಥಾಮ, ಕೃಪಾಚಾರ್ಯ, ಕೃತವರ್ಮ ಇವರು ಮೂವರು ವೀರರು ಆ ಪಾಂಡವಸೈನ್ಯದಮೇಲೆ ಅಕಸ್ಮಾತ್ ಮುಗಿಬಿದ್ದು ಅದನ್ನು ಸಂಹರಿಸಿದರು."

**ಮಹಾಭಾರತದ ವಿಸ್ತಾರವೂ, ಯೋಗ್ಯತೆಯೂ**—ಋಷಿಗಳೇ, ಜನಮೇಜಯನ ಸರ್ಪಯಾಗದಲ್ಲಿ ವ್ಯಾಸರ ಬುದ್ಧಿವಂತ ಶಿಷ್ಯನಾದ ವೈಶಂಪಾಯನನು ಹೇಳಿದ ಮಹಾಭಾರತವನ್ನು ಹೇಳುವದಕ್ಕಿಂತ ಮೊದಲು, ವೈಶಂಪಾಯನನು ಹೇಳದೆಯಿದ್ದ ಪೌಷ್ಯ, ಪೌಲೋಮ, ಆಸ್ತಿಕ ಎಂಬ ಮೂರು ಉಪಪರ್ವಗಳ ವಿಷಯವನ್ನು ನಾನು ನಿಮಗೆ ಹೇಳುವೆನು. ಹೆಚ್ಚಿನ ಈ ಮೂರು ಉಪಪರ್ವಗಳ ಸೇರಿಸಿದ್ದರ ಉದ್ದೇಶವು, ಭೂಪತಿಗಳ ಯಶಸ್ಸನ್ನೂ, ಪರಾಕ್ರಮವನ್ನೂ ವರ್ಣಿಸಿ, ಭಾರತದ ಕಥೆಯನ್ನು ವಿಸ್ತರಿಸುವದಾಗಿರುತ್ತದೆ. ಈ ಮೂರು ಉಪಪರ್ವಗಳಲ್ಲಿ ಗುರುವಿನ ಅಗಾಧಪ್ರಭಾವ, ಗುರು ಶುಶ್ರೂಷಣದ ದಿವ್ಯಫಲ, ತಪೋನಿಧಿಗಳ ವಿಲಕ್ಷಣ ಸಾಮರ್ಥ್ಯ, ಗೃಹಸ್ಥಾಶ್ರಮವನ್ನು ಸ್ವೀಕರಿಸದಿರುವದರಿಂದಾಗುವ ಅನರ್ಥ, ಅದನ್ನು ಸ್ವೀಕರಿಸಲು, ಯಜ್ಞಯಾಗಾದಿಗಳ ಯೋಗದಿಂದ ಪ್ರಾಪ್ತವಾಗುವ ಪರಮಾತ್ಮಸುಖ ಇವನ್ನು ಸಪಿಸ್ತಾರವಾಗಿ ಹೇಳಿರುತ್ತದೆ! ಆದ್ದರಿಂದ ಈ ಮೂರು ಉಪಪರ್ವಗಳ ಜೋಡಣೆಯಿಂದ ಭಾರತದ ಪ್ರಭೆಯು ಹೆಚ್ಚಿದ್ದರಲ್ಲಿ ಸಂಶಯವಿಲ್ಲ. ಬ್ರಹ್ಮಾಂಡದ ಆದಿಕಾರಣವಾದ ಸಚ್ಚಿದಾನಂದ ಸ್ವರೂಪದ ಜ್ಞಾನದಿಂದ ಪರಿಪೂರ್ಣವಾಗಿರುವ ಈ ಭಾರತ ಶಾಸ್ತ್ರವೇ ಸರ್ವ ಶಾಸ್ತ್ರಗಳಲ್ಲ ಶ್ರೇಷ್ಠವಾಗಿರುವದು. ಶರೀರಕ್ಕೆ ಅನ್ನಾದಿಗಳ ಮುಖ್ಯ ಆಧಾರವಿರುವಂತೆ, ಜಗತ್ತಿನೊಳಗಿನ ಎಲ್ಲ ಕಥೆಗಳಿಗೂ, ಎಲ್ಲ ತಾತ್ವಿಕ ವಿಷಯಗಳಿಗೂ ಮುಖ್ಯಾಧಾರವು ಈ ಮಹಾಭಾರತ ಗ್ರಂಥವಾಗಿರುವದು! ಹೆಚ್ಚಳವನ್ನು ಇಚ್ಛಿಸುವ ಸೇವಕ ಜನರು, ಕುಲೀನ ಅಧಿಪತಿಯನ್ನು ಅವಲಂಬಿಸಿ ತಮ್ಮ ಉಪಜೀವಿಕೆಯನ್ನು ಸಾಗಿಸುತ್ತಿರುವಂತೆ, ಸನ್ಮಾನ್ಯ ಕವಿಜನರು ಮಹಾಭಾರತವೆಂಬ ಕಥಾಸುರಭಿಯನ್ನು ಅವಲಂಬಿಸಿ, ತಮ್ಮ ಉಪಜೀವನವನ್ನು ಸಾಗಿಸುವರು. ಇರಲಿ, ಇನ್ನು ಈ ಮಹಾಭಾರತದೊಳಗಿನ ಪರ್ವಗಳನ್ನೂ, ಉಪಪರ್ವಗಳನ್ನೂ ನಿಮಗೆ ಹೇಳುವೆನು ಕೇಳಿರಿ.

**ಮುಖ್ಯ ಪರ್ವಗಳು** — ೧ ಆದಿಪರ್ವ. ೨ ಸಭಾಪರ್ವ. ೩ ವನಪರ್ವ. ೪ ವಿರಾಟಪರ್ವ. ೫ ಉದ್ಯೋಗಪರ್ವ. ೬ ಭೀಷ್ಮಪರ್ವ. ೭ ದ್ರೋಣಪರ್ವ. ೮ ಕರ್ಣಪರ್ವ. ೯ ಶಲ್ಯಪರ್ವ. ೧೦ ಸೌಪ್ತಿಕಪರ್ವ.

೧೧ ಸ್ತ್ರೀಪರ್ವ. ೧೨ ಶಾಂತಿಪರ್ವ. ೧೩ ಅನುಶಾಸನಪರ್ವ. ೧೪ ಅಶ್ವಮೇಧಿಕಪರ್ವ. ೧೫ ಆಶ್ರಮವಾಸಿಪರ್ವ. ೧೬ ಮೌಸಲಪರ್ವ. ೧೭ ಮಹಾಪ್ರಸ್ಥಾನಿಕಪರ್ವ. ೧೮ ಸ್ವರ್ಗಾರೋಹಣಪರ್ವ. ಎಂಬ ಹದಿನೆಂಟು ಮುಖ್ಯ ಪರ್ವಗಳಿರುವವು. ಅಲ್ಲದೆ, ಹತ್ತೊಂಬತ್ತನೆಯ ಹರಿವಂಶವೆಂಬ ಹೆಸರಿನ ಇನ್ನೊಂದು ಪರ್ವವನ್ನು ಭಾರತದ ಮುಖ್ಯ ಪರ್ವಗಳಲ್ಲಿ ಎಣಿಸುವ ರೂಢಿಯಿರುತ್ತದೆ.

**ಸೂಚನೆ—** (ಪ್ರತಿ ಒಂದು ಮುಖ್ಯ ಪರ್ವದೊಳಗಿನ ಉಪಪರ್ವಗಳನ್ನೂ, ಆಯಾ ಉಪಪರ್ವದೊಳಗಿನ ವಿಷಯಗಳನ್ನೂ ಇಲ್ಲಿಯೇ ಒಮ್ಮೆಲೆ ಕೊಟ್ಟುಬಿಡದೆ, ಆಯಾ ಮುಖ್ಯಪರ್ವದ ಆರಂಭದಲ್ಲಿ ಕೊಟ್ಟಿರುತ್ತದೆ )

**ಫಲಶ್ರುತಿ—**ಶೌನಕಾದಿ ಋಷಿಗಳಿರಾ, ಮಹಾಭಾರತ ಗ್ರಂಥವನ್ನು ಉತ್ತಮರೀತಿಯಿಂದ ತಿಳಿದುಕೊಳ್ಳದವನು, ನಾಲ್ಕು ವೇದಗಳ, ವೇದಾಂತ ಶಾಸ್ತ್ರದ ಅಧ್ಯಯನ ಮಾಡಿದರೂ ಆತನನ್ನು ವಿಚಕ್ಷಣನೆಂದು ಕರೆಯಲಾಗುವದಿಲ್ಲ. ಭಗವಾನ್ ವ್ಯಾಸಮುನಿಗಳು ಈ ವಿಸ್ತೃತ ಭಾರತ ಗ್ರಂಥದಲ್ಲಿ ಸರ್ವ ವ್ಯವಹಾರದ ಅಧಿಷ್ಠಿತ ತತ್ವವಾದ ಅರ್ಥಶಾಸ್ತ್ರವನ್ನು ಪೂರ್ಣವಾಗಿ ಪ್ರತಿಪಾದಿಸಿರುವರು. ಅಲ್ಲದೆ, ಧರ್ಮಶಾಸ್ತ್ರ-ಕಾಮಶಾಸ್ತ್ರಗಳನ್ನೂ ಇದರಲ್ಲಿ ಸಾಂಗವಾಗಿ ವರ್ಣಿಸಿರುವರು; ಆದ್ದರಿಂದ ಚತುರ್ವಿಧ ಪುರುಷಾರ್ಥಗಳನ್ನು ಸಾಧ್ಯಮಾಡಿಕೊಡುವ ಈ ಭಾರತ ಗ್ರಂಥವನ್ನು ಒಮ್ಮೆ ಶ್ರವಣಮಾಡಿದವನು, ಬೇರೆ ಯಾವದನ್ನೂ ಕೇಳಲಿಚ್ಛಿಸುವದಿಲ್ಲ. ಇಂದ್ರಿಯಗಳ ಸರ್ವ ವ್ಯಾಪಾರಗಳು ಕೇವಲ ವಿಚಿತ್ರ ಮನೋವೃತ್ತಿಗಳನ್ನನುಸರಿಸಿ ನಡೆಯುವಂತೆ, ಜಗತ್ತಿನೊಳಗಿನ ಯಾವತ್ತು ಒಳ್ಳೆಯ ಕೆಡಕು ಕರ್ಮಗಳ ಸರ್ವಸಾಧನಗಳು ಈ ಮಹಾ ಭಾರತಗ್ರಂಥವನ್ನೇ ಅವಲಂಬಿಸಿ ಇರುವವು. ಋಷಿಗಳೇ, ನಿಮ್ಮ ಅಂತಃಕರಣವನ್ನು ಯಾವಾಗಲೂ ಜಾಗ್ರತವಾಗಿಟ್ಟು, ಧರ್ಮದಲ್ಲಿ ಪೂರ್ಣ ಲಕ್ಷವನ್ನಿಡಿರಿ. ಪರಲೋಕದಲ್ಲಿ ನಮಗೆ ಧರ್ಮದ ಹೊರತು ಬೇರೆ ಸಹಾಯಕರಿಲ್ಲವು. ಸಂಪತ್ತಿನ ಉಪಭೋಗ ಹಾಗು ಸ್ತ್ರೀಯರಸೇವೆ ಇವನ್ನು ಎಷ್ಟುಮಾಡಿದರೂ ಆತ್ಮಭಾವಹಾಗಲಿ, ಸ್ಥೈರ್ಯವಾಗಲಿ ಉತ್ಪನ್ನವಾಗುವದಿಲ್ಲ. ಧರ್ಮವು ಮಾತ್ರ ಸ್ಥಿರವಿದ್ದು, ಸಂಪತ್ತು-ಸ್ತ್ರೀಯರು ಕ್ಷಣಭಂಗುರರಿರುವರು. ಇರಲಿ. ಋಷಿಗಳೇ,

ವ್ಯಾಸರ ಓಷ್ಠಪ್ರಾಂತದಿಂದ ಉತ್ಪನ್ನವಾಗಿರುವ ಈ ಅಗಾಧವಾದ ಭಾರತ ಶಾಸ್ತ್ರವು ಅತ್ಯಂತ ಪುಣ್ಯದಾಯಕವಿರುವದರಿಂದ ಇದರ ಅವಲೋಕನ ಮಾಡಲು, ಸರ್ವ ಪಾತಕಗಳು ಭಸ್ಮವಾಗಿ ಚಿತ್ತಶುದ್ಧಿಯಾಗುವದಲ್ಲದೆ, ಸರ್ವತೋಪರಿ ಜೀವರ ಕಲ್ಯಾಣವಾಗುವದು. ಭಾರತಗ್ರಂಥದ ಶ್ರವಣ-ಮನನ-ನಿದಿಧ್ಯಾಸಗಳನ್ನು ಉತ್ತಮರೀತಿಯಿಂದ ಮಾಡಿ, ವಿಷಯವನ್ನು ಹೃದಯದಲ್ಲಿ ಬಿಂಬಿಸಿಕೊಳ್ಳುವವನಿಗೆ ಪುಷ್ಕರತೀರ್ಥದ ಸ್ನಾನದಿಂದ ಬರುವ ಹೆಚ್ಚಿನ ಫಲವೇನು? ಭಾರತೋದಧಿಯನ್ನು ದಾಟಲಿಕ್ಕೆ ಈ ಪರ್ವ ಸಂಗ್ರಹಾಧ್ಯಾಯವು ನೌಕೆಯಂತೆ ಸಹಾಯಕಾರಿಯಾಗಿರುವದು.

## ಶ್ರೀ ಶೇಷಸದ್ಗುರು-ಸೂಕ್ತಿರೂಪ ರಹಸ್ಯಗಳು

**ಉಪಕ್ರಮ** — ಹಿಂದಿನ ಅನುಕ್ರಮಣಿಕಾ ಪರ್ವದಲ್ಲಿ ಭಾರತದ ವಿಷಯಾನುಕ್ರಮಣಿಕೆಯನ್ನು ಸಾಮಾನ್ಯವಾಗಿ ದಿಗ್ದರ್ಶನರೂಪದಿಂದ ಹೇಳಿರುವದರಿಂದ, ಅಲ್ಲಿ ಭಾರತದೊಳಗಿನ ವಿಷಯಗಳ ಸಾಂಗೋಪಾಂಗ ಉಲ್ಲೇಖವಾಗಿರುವದಿಲ್ಲ; ಆದ್ದರಿಂದ ಈ ಉಪಪರ್ವದಲ್ಲಿ ಇಡಿಯ ಭಾರತ ದಲ್ಲಿಯ ಮುಖ್ಯ ಪರ್ವಗಳನ್ನೂ, ಪ್ರತಿ ಮುಖ್ಯ ಪರ್ವದೊಳಗಿನ ಉಪ ಪರ್ವಗಳನ್ನೂ, ಆ ಪ್ರತಿ ಒಂದು ಉಪಪರ್ವದೊಳಗಿನ ಮುಖ್ಯ ಮುಖ್ಯ ವಿಷಯಗಳನ್ನೂ ವಿವರವಾಗಿ ಹೇಳಿರುವದು; ಆದ್ದರಿಂದ ಈ ಉಪಪರ್ವಕ್ಕೆ ಪರ್ವಸಂಗ್ರಹಪರ್ವವೆನ್ನುವರು. ಈ ಉಪಪರ್ವದಲ್ಲಿ ಹೇಳಿರುವ ಎಲ್ಲ ಪರ್ವಗಳ ವಿವರಣೆಯ ವಿಸ್ತಾರವಾದ ಅನುಕ್ರಮಣಿಕೆಯನ್ನು ಹಿಂದೆ ೩೩ನೇ ಪುಟದ ಕೊನೆಯಲ್ಲಿ ಸೂಚಿಸಿದಂತೆ, ಇದೇ ಪರ್ವದಲ್ಲಿ ಒತ್ತಟ್ಟಿಗೆ ಕೊಟ್ಟು ಬಿಡದೆ, ಆಯಾ ಮುಖ್ಯಪರ್ವದ ಆರಂಭದಲ್ಲಿ ಆಯಾ ಪರ್ವದ ಅನುಕ್ರಮ ಣಿಕೆಯನ್ನು ಕೊಟ್ಟಿರುತ್ತದೆ. ಈ ಆದಿಪರ್ವದ ವಿಸ್ತಾರವಾದ ಅನುಕ್ರಮ ಣಿಕೆಯನ್ನು ಈ ಪರ್ವದ ಆರಂಭದಲ್ಲಿ ಕೊಟ್ಟಿದ್ದು, ಮುಂದೆಯೂ ಆಯಾ ಮುಖ್ಯ ಪರ್ವಗಳ ಆರಂಭದಲ್ಲಿ ಅದನ್ನು ಇದರಂತೆ ಕೊಡುತ್ತ ಹೋಗು ವೆವು; ಇದರಿಂದ ಆಯಾ ಪರ್ವಗಳೊಳಗಿನ ವಿಷಯಾವಲೋಕನಕ್ಕೆ ಬಹಳ ಸಹಾಯವಾಗುವದು.

(೬) **ಭಾರತದ ವಿಷಯದ ಕಾಲ್ಪನಿಕ ದೋಷಗಳು**— ಅನ್ಯ ಧರ್ಮದವರೂ, ಪಾಶ್ಚಾತ್ಯ ಪದ್ಧತಿಯ ಬಾಹ್ಯಾಂಗ ನಿರೀಕ್ಷಣದ ಚಟ ಬಿದ್ದವರೂ, ಶ್ರದ್ಧಾಹೀನರೂ ಭಾರತದಲ್ಲಿ ಕೆಲವು ದೋಷಗಳನ್ನು ಕಲ್ಪಿಸಿ, ಭಾವಿಕರ ಬುದ್ಧಿಭೇದಮಾಡಲು ಯತ್ನಿಸುವರು. ಆ ಕಾಲ್ಪನಿಕ ಮುಖ್ಯ ದೋಷಗಳು ಯಾವವೆಂದರೆ—೧ ಭಾರತವು ಕಟ್ಟುಕಥೆಗಳಿಂದ ತುಂಬಿರುವದು. ೨ ಅದನ್ನು ವ್ಯಾಸರೊಬ್ಬರೇ ಬರೆದಿರದೆ, ಧೂರ್ತರು ಅದರಲ್ಲಿ ಆಗಾಗ್ಗೆ ಹೊಸ ವಿಷಯ ಸೇರಿಸಿ ಅದನ್ನು ವಿಸ್ತರಿಸಿರುವದರಿಂದ ಅದು ವಿಶ್ವಾಸಕ್ಕೆ ಅರ್ಹವಲ್ಲವು. ೩ ಅಶಕ್ಯಸಂಗತಿಗಳು ಭಾರತದಲ್ಲಿ ತುಂಬಿರುವವು. ೪ ಅದರಲ್ಲಿ ಭಂಡತನವು ಬಹಳ. ೫ ಪುನರುಕ್ತಿಯ ದೋಷವು ಅದರಲ್ಲ ಕಂಡುಬರುವದು.

ಮೇಲಿನ ಐದು ದೋಷಗಳು ದೋಷಗಳಾಗಿರದೆ ಗುಣಗಳಾಗಿರುವವೆಂಬದನ್ನು ನಾವು ಕ್ರಮವಾಗಿ ತೋರಿಸುವೆವು.

(ಅ) **ಭಾರತದ ಕಟ್ಟುಕಥೆಗಳು** — ಭಾರತದ ಕಥೆಗಳಲ್ಲಿ ಕಟ್ಟುಕಥೆಗಳು, ಐತಿಹಾಸಿಕ ಕಥೆಗಳು, ಅದ್ಭುತ ಅಥವಾ ಅಲೌಕಿಕ ಕಥೆಗಳು ಎಂಬ ಮೂರು ವರ್ಗಗಳನ್ನು ಮಾಡಬಹುದು. ಪಕ್ಷಿ-ಮೃಗ ಮೊದಲಾದ ತಿರ್ಯಕ್ ಪ್ರಾಣಿಗಳಿಗೆ ಸಂಬಂಧಿಸಿದ ಕಥೆಗಳು ಕಟ್ಟುಕಥೆಗಳು ; ಭರತಾದಿ ವಂಶದ ಅರಸರಿಗೆ ಸಂಬಂಧಿಸಿದ ಕಥೆಗಳು ಐತಿಹಾಸಿಕ ಕಥೆಗಳು ; ದೇವ, ದೈತ್ಯ, ರಾಕ್ಷಸ, ಗಂಧರ್ವ, ಋಷಿ ಮೊದಲಾದ ಅಲೌಕಿಕ ಪುರುಷರಿಗೆ ಸಂಬಂಧಿಸಿದ ಕಥೆಗಳು ಅದ್ಭುತ ಕಥೆಗಳು. ಈ ಎಲ್ಲ ಬಗೆಯ ಕಥೆಗಳನ್ನು ಲೋಕಕಲ್ಯಾಣಕ್ಕಾಗಿ ಭಾರತಕಾರರು ತಮ್ಮ ಅಲೌಕಿಕ ಬುದ್ಧಿಸಾಮರ್ಥ್ಯದಿಂದ ಅಲಂಕರಿಸಿ ಬಳೆದಿರುವರೆಂಬದನ್ನು ವಾಚಕರು ನೆನಪಿನಲ್ಲಿಡಬೇಕು. ಇನ್ನು ಕಟ್ಟುಕಥೆಗಳ ಸಂಬಂಧದಿಂದ ವಿಚಾರಮಾಡೋಣ; ಪಶು-ಪಕ್ಷ್ಯಾದಿಗಳ ಸುಂದರ ಕಥೆಗಳಿಂದ ಬೋಧಿಸಿದ ನೀತಿಯು, ಹುಡುಗರಿಗಷ್ಟೇ ಅಲ್ಲ, ದೊಡ್ಡವರಿಗೂ ಒಂದುಬಗೆಯ ಕೌತುಕದ್ದಾಗಿ ಮನಸ್ಸಿನಲ್ಲಿ ನಟ್ಟುಬಿಡುವದರಿಂದ, ಹಾಗೆ ಕಟ್ಟುಕಥೆಗಳಿಂದ ನೀತಿಯನ್ನು ಬೋಧಿಸುವ ಪ್ರಚಾರವು ಎಲ್ಲದೇಶಗಳಲ್ಲಿಯೂ ಬಳಿಕೆಯಲ್ಲಿ ಬಂದಿರುವದು. ನಮ್ಮ ದೇಶದಲ್ಲಿಯ ಪಂಚತಂತ್ರದ ಕಥೆಗಳೂ, ಪಾಶ್ಚಾತ್ಯರಲ್ಲಿಯ ಇಸಾಪನ

ನೀತಿಯ ಕಥೆಗಳೂ ಈ ಮಾತಿಗೆ ಸಾಕ್ಷಿಗಳಾಗಿರುವವು. ಅಂದಬಳಿಕ ಚಿಕ್ಕ ಮಕ್ಕಳಿಂದ ಶ್ರೇಷ್ಠ ತತ್ವಜ್ಞರವರೆಗೆ ಎಲ್ಲರನ್ನೂ ಬೋಧಿಸುವ ಕರುಣಾ ಶಾಲಿಗಳಾದ ಭಗವಾನ್ ವೇದವ್ಯಾಸರ ಭಾರತಸಮುದ್ರದಲ್ಲಿ, ಕಟ್ಟುಕಥೆ ಗಳು ಇರುವದು ಶ್ರೇಷ್ಠಗುಣವೇ ಆಗಿರುವದಲ್ಲದೆ, ದೋಷವು ಹೇಗಾದೀತು?

**(ಅ) ಭಾರತದ ಬಹು ಕರ್ತೃಕತ್ವ**—ಈಗಿನ ಮಹಾಭಾರತವು ವ್ಯಾಸರೊಬ್ಬರೇ ಬರೆದದ್ದಲ್ಲವೆಂಬ ಮಾತನ್ನು ಎರಡನೆಯವರೇಕೆ ಹೇಳ ಬೇಕು? ಪ್ರತ್ಯಕ್ಷ ಉಗ್ರಶ್ರವಪೌರಾಣಿಕನೇ ಇದೇ ಉಪಪರ್ವದ ೩೩ ನೇ ಪುಟದಲ್ಲ ಹೇಳಿದ್ದು ವಾಚಕರ ಸ್ಮರಣದಲ್ಲಿರಬಹುದು. ಪೌಷ್ಯ, ಪೌಲೋಮ, ಆಸ್ತಿಕಪರ್ವಗಳು ವ್ಯಾಸರು ಹೇಳಿದವಲ್ಲವೆಂದು ಭಾರತದಲ್ಲಿಯೇ ಉಲ್ಲೇಖ ವಾಗಿರುವದು. ಮಹೋದಧಿಯನ್ನು ಹಲವು ನದಿಗಳು ಕೂಡುವಂತೆ, ವ್ಯಾಸರ ಜಗತ್ಕಲ್ಯಾಣದೃಷ್ಟಿಯುಳ್ಳ ಹಲವು ಜ್ಞಾನಿಗಳ ಉಪಯುಕ್ತ ವಿಷಯಗಳು ಭಾರತದಲ್ಲಿ ಕೂಡಿರಬಹುದು; ಆದರೆ ಅದರಿಂದಾಗುವ ಹಾನಿ ಯೇನು? ಬಹುಜನರು ಸಂಪಾದಿಸಿದ ರತ್ನಗಳೆಂದು ರತ್ನಗಳ ರಾಶಿಯನ್ನು ಯಾರಾದರೂ ನಿರಾಕರಿಸಬಹುದೆ? ಹೀಗೆ ಬಹುಜನರ ಕೃತಿಗಳು ಕೂಡು ವಾಗ, ಅಯೋಗ್ಯವಿಷಯಗಳೂ ಭಾರತದಲ್ಲ ಕೂಡಿರುವವೆಂದು ಕಲ್ಪಿಸಿ ದರೂ, ಮೂಲತಃ ಸವಿಯಾಗಿದ್ದ ಸಮುದ್ರದ ನೀರು ಬರಬರುತ್ತ ಉಪ್ಪಾ ಗುತ್ತ ನಡೆದಿರುವಂತೆ, ಆ ಅಯೋಗ್ಯವಿಷಯಗಳ ಬೆರಿಕೆಯಿಂದ ಮಹಾ ಭಾರತವು ಎಷ್ಟರಮಟ್ಟಿಗೆ ವಿಕಾರಹೊಂದಿರಬಹುದು? ಸಮುದ್ರದ ಉಪ್ಪು- ನೀರೇ ಜಗತ್ತಿನ ರಕ್ಷಣಕ್ಕೆ ಕಾರಣವಾಗಿರುವಂತೆ, ನಮ್ಮ ಪ್ರಾಚೀನ ಋಷಿ ಗಳು ನಮ್ಮಕಲ್ಯಾಣಕ್ಕಾಗಿ ಬರೆದಿಟ್ಟಿರುವ ಭಾರತದ ಇಡಗಂಟು, ಅದು ಎಷ್ಟುದೂಷಿತವಾದರೂ ನಮ್ಮ ಕಲ್ಯಾಣಕ್ಕೆ ಕಾರಣವಾಗಲಿಕ್ಕಿಲ್ಲವೆ? ಜಗತ್ತಿ ನೊಳಗಿನ ಯಾವ ಪ್ರಾಚೀನಗ್ರಂಥಗಳು ಈ ವಿಕೃತಿಯದೋಷಕ್ಕೆ ಈಡಾ ಗದೆ ಹೋಗಿದ್ದಾವು? ಬತ್ತದಮೇಲಿನ ಗೊಳಲಿಯ ದೋಷಕ್ಕಾಗಿ ಬತ್ತ ದೊಳಗಿನ ಅಕ್ಕಿಯನ್ನು ಯಾರಾದರೂ ವಿವೇಕಿಗಳು ಚೆಲ್ಲಿಕೊಡಬಹುದೋ? ಜಗತ್ತಿನಲ್ಲಿ ನಿರ್ದೋಷವಾದದ್ದಾಗಲಿ, ಗುಣರಹಿತವಾದದ್ದಾಗಲಿ ಯಾವ ದಿರುವದು? ಜಗತ್ತೇ ಗುಣದೋಷಗಳ ಮಿಶ್ರಣದಿಂದ ಮಾಡಿದ್ದಾಗಿರು ವಾಗ, ಜಗತ್ತಿನ ಕೃತಿಗಳಲ್ಲಿ ಅಲ್ಪಸ್ವಲ್ಪದೋಷಗಳಿದ್ದರೆ ಆಶ್ಚರ್ಯವೇನು?

ಹಿಂದಿನ ಅನುಕ್ರಮಣಿಕಾ ಪರ್ವದ ೨೫ನೇ ಪುಟದಲ್ಲಿ ಭಾರತವನ್ನು "ವಿಷಮಿಶ್ರಿತಾನ್ನಕ್ಕೆ" ಹೋಲಿಸಿರುವ ಗುಟ್ಟನ್ನು ಇಲ್ಲಿ ನೆನಪಿಗೆ ತಂದು ವಿಚಾರಿಸಬಹುದಾಗಿದೆ. ಒಟ್ಟಿಗೆ ಹೇಳುವದೇನಂದರೆ, ದೋಷದೃಷ್ಟಿಯ ದುಷ್ಟರಿಗೆ, ಅಥವಾ ಮೂರ್ಖರಿಗೆ ಮಹಾಭಾರತದಲ್ಲಿಯ ಗುಣಗಳೂ ದೋಷಗಳಾಗಿ ತೋರಬಹುದು; ಆದರೆ ಅಷ್ಟಕ್ಕೆ ಕಡ್ಡಿಯನ್ನು ಗುಡ್ಡದಂತೆ ಮಾಡಿ ಮಹಾಭಾರತದ ವಿಷಯವಾಗಿ ಅಶ್ರದ್ಧೆಯನ್ನು ತಾಳುವದೂ, ಅನ್ಯರಲ್ಲಿ ಅಶ್ರದ್ಧೆಯನ್ನುಂಟುಮಾಡುವದೂ ಹಾನಿಕಾರಕವೇ ಅಲ್ಲ, ಘೋರ ಪಾಪಕಾರಕವೂ ಆಗಿರುವದು!

**(ಇ) ಮಹಾಭಾರತದಲ್ಲಿಯ ಅಶಕ್ಯಸಂಗತಿಗಳು**—ಜಗತ್ತಿನಲ್ಲಿ ಪ್ರಾಮುಖ್ಯವಾಗಿ ದೈವೀ, ಆಸುರೀ, ಪಾಶವೀ, ಮಾನವೀ ಎಂಬ ನಾಲ್ಕು ಪ್ರಕಾರದ ಶಕ್ತಿಗಳಿರುವದು ಪ್ರಸಿದ್ಧವೂ, ಶಾಸ್ತ್ರಸಿದ್ಧವೂ ಆಗಿರುವದು ಇವುಗಳಲ್ಲಿ ಮೊದಲಿನವೆರಡು, ಅಂದರೆ ದೈವೀ-ಆಸುರೀಶಕ್ತಿಗಳು ಅದ್ಭುತಗಳೂ, ಅಲೌಕಿಕಗಳೂ ಆಗಿರುವವು. ದೈವೀಶಕ್ತಿಯು ಸತ್ವಗುಣ ಪ್ರಧಾನವಾಗಿದ್ದು, ಅದರಲ್ಲಿ ರಜಸ್ತಮೋಗುಣಗಳು ಕಡಿಮೆ ಕಡಿಮೆ ಮಿಶ್ರವಾಗಿರುವವು! ಅದರಂತೆ ಆಸುರೀಶಕ್ತಿಯು ರಜೋಗುಣಪ್ರಧಾನವಾಗಿದ್ದು, ಅದರಲ್ಲಿ ತಮಸ್ಸತ್ವಗುಣಗಳು ಕಡಿಮೆ ಕಡಿಮೆ ಮಿಶ್ರವಾಗಿರುವವು. ಪಾಶವೀಶಕ್ತಿಯು ಕೇವಲ ತಮೋವೃತವಾಗಿದ್ದು, ಉಳಿದ ಸತ್ವ-ರಜೋಗುಣಗಳು ಅದರಲ್ಲಿ ತೀರಕಡಿಮೆ ಮಿಶ್ರವಾಗಿರುವವು. ಇನ್ನು ಮಾನವೀಶಕ್ತಿಯು ಈಮೂರೂಶಕ್ತಿಗಳ ಸಮ್ಮಿಶ್ರಣದಿಂದಾಗಿರುವದರಿಂದ, ದೈವೀಶಕ್ತಿಯ ಅಂಶವು ಹೆಚ್ಚು ಇದ್ದ ಮನುಷ್ಯರು ದೈವೀಭಾವದವರೂ, ಆಸುರೀಶಕ್ತಿಯ ಅಂಶವು ಹೆಚ್ಚು ಇದ್ದ ಮನುಷ್ಯರು ಆಸುರೀಭಾವದವರೂ, ಪಾಶವೀಶಕ್ತಿಯ ಅಂಶವು ಹೆಚ್ಚು ಇದ್ದ ಮನುಷ್ಯರು ಪಾಶವೀಭಾವದವರೂ ಆಗಿರಬಹುದು. ಈ ಎಲ್ಲ ಶಕ್ತಿಗಳ ನಿಯಮನಮಾಡುವದೇ ಪರಮಾತ್ಮನ ಯೌಗಿಕವೆಂಬ ದುರತ್ಯಯವಾದ ಅಗಾಧ ಶಕ್ತಿಯಾಗಿರುವದು! ಅದನ್ನೇ ಈಶ್ವರೀಮಾಯೆಯೆಂದು ಕರೆಯುವರು. ಹೀಗೆ ಒಟ್ಟಾದ ಐದು ಶಕ್ತಿಗಳ ವರ್ಣನಗಳೂ ಪುರಾಣಗಳಲ್ಲಿ ಬರಲೇಬೇಕಾದದ್ದರಿಂದ, ಪರಮಾತ್ಮನ ಯೌಗಿಕಶಕ್ತಿಯ, ದೇವ-ಗಂಧರ್ವ-ಅಪ್ಸರಸ್ ಮೊದಲಾದ ದೇವಯೋನಿ

ಗಳ ದೈವೀಶಕ್ತಿಯು, ದೈತ್ಯ-ರಾಕ್ಷಸ-ಯಕ್ಷ ಮೊದಲಾದ ಅಸುರ ಯೋನಿಗಳ ಆಸುರೀಶಕ್ತಿಯು ಅದ್ಭುತಗಳೂ, ಅಲೌಕಿಗಳೂ, ನಮ್ಮ ಕ್ಷುದ್ರ ಮಾನವರಿಗೆ ಅಶಕ್ಯವಾಗಿ ತೋರುವಂತಹವೂ ಆದ ಚರಿತ್ರಗಳು ಭಾರತದಲ್ಲಿ ವ್ಯಾಸರಿಂದ ವರ್ಣಿಸಲ್ಪಟ್ಟಿರುವವು. ಇವುಗಳೊಡನೆ ಮನುಷ್ಯ ಯೋನಿಯ ಲೌಕಿಕ ಚರಿತ್ರಗಳೂ ಭಾರತದಲ್ಲಿ ಬಂದಿರುವವು. ಮನುಷ್ಯ ಯೋನಿಯವರಾದ ಋಷಿಗಳು ತಪಸ್ಸಿನಿಂದ ದೈವೀ ಅಥವಾ ಆಸುರೀ ಅದ್ಭುತಶಕ್ತಿಯನ್ನು ಸಂಪಾದಿಸಿರುವದರಿಂದ, ಋಷಿಗಳ ಅದ್ಭುತ ಚರಿತ್ರ ಗಳೂ ಭಾರತದಲ್ಲಿ ಬಂದಿರುವವು. ಹೀಗೆ ಎಲ್ಲ ಶಕ್ತಿಗಳ ಚರಿತ್ರ ಗಳ ಸಮಾವೇಶವು ಭಾರತದಲ್ಲಿ ಆಗಿರುವದರಿಂದಲೇ, ಅದು ತ್ರಿಕಾಲಾಬಾಧಿ ತವಾದ ಸಾಂಗೋಪಾಂಗ ಪರಿಪೂರ್ಣ ಉಪದೇಶಗ್ರಂಥವಾಗಿ, ಈವರೆಗೆ ಪ್ರಕಾಶಿಸುತ್ತಿರುವದು. ಒಟ್ಟಿಗೆ, ವಿವೇಕಿಗಳಾದವರು ಪುರಾಣಗಳಲ್ಲಿಯ ಅಶಕ್ಯ ಸಂಗತಿಗಳ ಕಾರ್ಯಕಾರಣಭಾವವನ್ನು ಹುಡುಕುವಗೊಡವಿಗೆ ಹೋಗದೆ, ಅವು ಅದ್ಭುತಶಕ್ತಿಯು ದೇವಾದಿಕರಿಗೆ ಅಶಕ್ಯಗಳಲ್ಲವೆಂತಲೂ, ಅವು ಬಡವರಾದ ಮನುಷ್ಯರು ಕುಡಿಯುವ ಗಂಜಿಗಳಲ್ಲವೆಂತಲೂ ತಿಳಿದು, ಆ ಅದ್ಭುತ ಚರಿತ್ರಗಳಿಂದ ಫಲಿತವಾದ ನೀತಿಯನ್ನು ಗ್ರಹಿಸಿ, ಅನೀತಿ ಯನ್ನು ತ್ಯಜಿಸಿ, ನೀತಿವಂತರೂ, ಶೀಲವಂತರೂ ಆಗಿ ತಮ್ಮ ಕಲ್ಯಾಣ ಮಾಡಿಕೊಳ್ಳಬೇಕು. ಇದೇ ಪುರಾಣಶ್ರವಣಪದ್ಧತಿಯ ಗುಟ್ಟು. ಈ ಗುಟ್ಟನ್ನು ನೆನಪಿನಲ್ಲಿಡುವದಲ್ಲದೆ, ಮನುಷ್ಯನು ಅದ್ಭುತಶಕ್ತಿಯನ್ನು ಸಂಪಾದಿಸುವ ಗೊಡವಿಗೆ ಹೋಗದೆ—"ಆನೆಯಾಗಿ ಕಬ್ಬು ಮೇಯುವದ ಕ್ಕಿಂತ ಇರುವೆಯಾಗಿ ಸಕ್ಕರೆ ಮೇಯುವದು ಲೇಸು" ಎಂಬ ಲೋಕೋ ಕ್ತಿಯಂತೆ, ತನ್ನಲ್ಲಿದ್ದ ಶಕ್ತಿಯನ್ನು ಸತ್ಸಮಾಗಮದಿಂದ ಸುಸಂಸ್ಕೃತ ವಾಗಿ ಮಾಡಿ ಕೃತಾರ್ಥನಾಗತಕ್ಕದ್ದು.

**(ಈ) ಭಾರತದಲ್ಲಿ ಭಂಡತನವು ಬಹಳ**— ಇದರ ಉತ್ತರವು ಮೇಲೆ ಬಂದಿದೆ. ಭಾರತವು ವಿಷಮಿಶ್ರಿತ ಅನ್ನವೆಂದು ಹೇಳಿಯೇ ಅದೆ. ಭಾರತವು ಪರಿಪೂರ್ಣ ಗ್ರಂಥವು, ಅದರಲ್ಲಿ ಜಗತ್ತಿನೊಳಗಿರುವದೆಲ್ಲ ಇರು ವದು; ಭಾರತದಲ್ಲಿಲ್ಲದ್ದು ಜಗತ್ತಿನಲ್ಲಿಯೇ ಇಲ್ಲವೆಂದು ಖ್ಯಾತಿಯಿರುವದು;

ಆದ್ದರಿಂದ ಭಂಡರಿಗೆ ಭಾರತದಲ್ಲಿದ್ದ ಭಂಡತನವೇ ಒಡೆದುಕಂಡರೆ ಆಶ್ಚರ್ಯವೇನು ?

(ಉ) **ಭಾರತದ ಪುನರುಕ್ತಿ**--ವಿಷಯವು ದೃಢವಾಗುವದಕ್ಕಾಗಿ ಅದನ್ನು ಮತ್ತೆಮತ್ತೆ ಹೇಳುವದು ಅವಶ್ಯವಾಗಿದ್ದು, ಹಾಗೆ ಭಾರತಕಾರರು ಮಾಡಿರುವದು ಅವರ ಕರುಣಾಶಾಲಿತ್ವದ ಲಕ್ಷಣವಾಗಿರುವದಲ್ಲದೆ, ಅವರ ದೋಷವಾಗಿರುವದಿಲ್ಲ.

(೭) **ಭಾರತದ ಪ್ರಧಾನಾಂಗವು ಕಥಾಭಾಗವಲ್ಲ, ತಾತ್ವಿಕ ವಿಷಯಭಾಗವು**—ಮೇಲೆ ಭಾರತದ ವಿಷಯದ ಐದು ಕಾಲ್ಪನಿಕ ದೋಷಗಳ ನಿರಾಕರಣಮಾಡಿದೆಯಷ್ಟೆ? ಆದರೆ ಈ ಕಥಾಭಾಗದ ವಿಷಯವು ಭಾರತದ ಮುಖ್ಯ ವಿಷಯವಲ್ಲವೇ ಅಲ್ಲ ; ಅದು ಗೌಣವಿಷಯವು. ಭಾರತದ ಲಕ್ಷಗ್ರಂಥ (ಶ್ಲೋಕ) ಗಳಲ್ಲಿ ಇಪ್ಪತ್ತುನಾಲ್ಕು ಸಾವಿರ ಗ್ರಂಥಗಳು ಮಾತ್ರ ಭಾರತದ ಕಥೆಗಳಿಗೆ ಸಂಬಂಧಪಟ್ಟಿರುವವು. ಉಳಿದ ಎಪ್ಪತ್ತಾರು ಸಾವಿರ ಶ್ಲೋಕಗಳಲ್ಲ ಆಧ್ಯಾತ್ಮಿಕ, ನೈತಿಕ, ಧಾರ್ಮಿಕ, ರಾಜಕೀಯ, ವಿವಿಧಶಾಸ್ತ್ರೀಯ ವಿಷಯಗಳು ವಿವೇಚಿಸಲ್ಪಟ್ಟಿರುವವು. ಈ ತಾತ್ವಿಕ ವಿಷಯ ವಿವೇಚನವೇ ಭಾರತದ ಪ್ರಧಾನಾಂಗವು. ಈ ಪ್ರಧಾನಾಂಗದ ಸಂಪೂರ್ಣಾವಲೋಕನವು ಯಾವ ಪುಣ್ಯವಂತನಿಗಾಗುವದೋ ದೇವರೇ ಬಲ್ಲ. ಹೀಗಿರಲು, ಭಾರತದ ನಿಟ್ಟು ನೆರಳುಕಾಣದ ಕುಹಕರು ಆಗದವರ ಕೇಳಿಕೆಯ ಎರಡು ಮಾತುಗಳನ್ನು ಕೇಳಿ ಭಾರತವನ್ನು ನಿರಾಕರಿಸುವದು ಎಂಥ ಸಾಹಸವು !

**ಉಪಸಂಹಾರ**—ಈ ರಹಸ್ಯಗಳಲ್ಲದೆ, ಪರಶುರಾಮನು ಮಾಡಿದ ಕ್ಷತ್ರಿಯರ ನಾಶಾದಿಗಳ ಸಂಬಂಧದ ರಹಸ್ಯವನ್ನು ಮುಂದೆ ಆ ಸಂಗತಿಗಳ ಸವಿಸ್ತರ ವರ್ಣನಗಳು ಬಂದಿರುವ ಸ್ಥಳಗಳಲ್ಲಿ ಹೇಳುವೆವು.

## ೩ ಪೌಷ್ಯಪರ್ವ — ೩ ನೆಯ ಅಧ್ಯಾಯ

**ಜನಮೇಜಯನ ಶಾಪ**—ಸೂತರು ಶೌನಕರನ್ನು ಕುರಿತು-"ಋಷಿಗಳೇ, ಹಿಂದಕ್ಕೆ ಕುರುಕ್ಷೇತ್ರದಲ್ಲಿ ಜನಮೇಜಯರಾಜನು ದೀರ್ಘಸತ್ರ

ವನ್ನು ಆರಂಭಿಸಿರುವಾಗ, ಯಜ್ಞಮಂಡಪದಲ್ಲಿ ಸಾರಮೇಯ ಎಂಬ ಹೆಸರಿನ ಒಂದು ನಾಯಿಯು ಬಂದಿತು. ಆಗ ಜನಮೇಜಯನ ತಮ್ಮಂದಿರಾದ ಶ್ರುತಸೇನ, ಉಗ್ರಸೇನ, ಭೀಮಸೇನ ಎಂಬವರು ಅದನ್ನು ಹೊಡೆದು ಓಡಿಸಿದರು. ಆಗ ಆ ಸಾರಮೇಯವು ಅಳುತ್ತ ತನ್ನ ತಾಯಿಯಾದ ದೇವಶುನಿ-ಸರಮೆಯ ಬಳಿಗೆ ಹೋಗಿ— "ಅವ್ವಾ, ನಾನು ಯಜ್ಞದ ದ್ರವ್ಯಗಳನ್ನು ಮುಟ್ಟುವದಂತು ಇರಲಿ, ಅವನ್ನು ಹಣಿಕಿಯೂ ನೋಡದಿರಲು, ನಿಷ್ಕಾರಣವಾಗಿ ಜನಮೇಜಯನ ತಮ್ಮಂದಿರು ನನ್ನನ್ನು ಹೊಡೆದರು" ಎಂದು ದೂರಿಕೊಂಡಿತು. ಆಗ ದೇವಶುನಿಯು ದುಃಖದಿಂದ ಜನಮೇಜಯನಬಳಿಗೆ ಹೋಗಲು, ತಮ್ಮಂದಿರೊಡನೆ ಆ ರಾಜನು ಕಾರ್ಯತತ್ಪರನಾಗಿದ್ದನು. ಆಗ ಸರಮೆಯು ಸಿಟ್ಟಿನಿಂದ ಜನಮೇಜಯನಿಗೆ-- "ರಾಜಾ, ನನ್ನ ಈ ಮಗನು ನಿನ್ನ ಹೋಮದ್ರವ್ಯಗಳನ್ನು ಮುಟ್ಟದಿದ್ದರೂ ನಿನ್ನ ತಮ್ಮಂದಿರು ಈತನನ್ನು ಹೊಡೆದ ಕಾರಣವೇನು?" ಎಂದು ಪ್ರಶ್ನಮಾಡಲು, ಅದಕ್ಕೆ ಯಾರೂ ಉತ್ತರಕೊಡದೆ ಸುಮ್ಮನಿದ್ದರು. ಆಗ ಸರಮೆಯು— "ರಾಜಾ, ನೋಡು, ನಿನ್ನ ತಮ್ಮಂದಿರು ಏನೂ ಮಾತಾಡುವದಿಲ್ಲ; ಆದ್ದರಿಂದ ಅವರು ತಪ್ಪುಮಾಡಿದ್ದು ನಿಜವಾಯಿತು. ತಪ್ಪಿಗೆ ಶಿಕ್ಷೆಯಾಗುವದು ಅವಶ್ಯವಿರುವದರಿಂದ, ನಾನು ನಿನಗೆ ಶಾಪ ಕೊಡುತ್ತೇನೆ, ನಿನ್ನ ಯಜ್ಞಕ್ಕೆ ಅಕಸ್ಮಾತ್ ವಿಘ್ನಒದಗುವದು" ಎಂದು ನುಡಿದು, ಆ ದೇವಶುನಿಯು ಹೊರಟುಹೋಯಿತು. ಆಗ ರಾಜನು ಅತ್ಯಂತ ವ್ಯಸನಪಟ್ಟು, ಸತ್ರವನ್ನು ಮುಗಿಸಿ, ಹಸ್ತಿನಾವತಿಗೆ ಬಂದು ಆ ಶಾಪದ ನಿವೃತ್ತಿಗಾಗಿ ಒಬ್ಬ ಸಮರ್ಥನಾದ ಪುರೋಹಿತನನ್ನು ಹುಡುಕಲು ಯತ್ನನಡಿಸಿದನು.

ಮುಂದೆ ಕೆಲವು ದಿನಗಳ ಮೇಲೆ ಜನಮೇಜಯನು ಬೇಟೆಯಾಡುವದಕ್ಕಾಗಿ ಅರಣ್ಯಕ್ಕೆ ಹೋಗಿರುವಾಗ, ಅಲ್ಲಿ ಒಂದು ಆಶ್ರಮವನ್ನು ಕಂಡನು. ಅಲ್ಲಿ ಶ್ರುತಶ್ರವನೆಂಬ ಯಾವನೋ ಒಬ್ಬ ಋಷಿಯು ವಾಸಿಸುತ್ತಿದ್ದನು. ಆ ಋಷಿಯ ಮಗನಾದ ಸೋಮಶ್ರವನೆಂಬವನು ಸದಾ ತಪಸ್ತತ್ಪರನಾಗಿರುತ್ತಿದ್ದನು. ರಾಜನು ಸೋಮಶ್ರವನ ತಪಸ್ತೇಜವನ್ನು ನೋಡಿ, ಆತನನ್ನು ತನ್ನ ಪುರೋಹಿತನನ್ನಾಗಿ ಮಾಡಿಕೊಳ್ಳಲಿಚ್ಛಿಸಿ,

ಶ್ರುತಶ್ರವನಿಗೆ ನಮಸ್ಕಾರಮಾಡಿ—"ಭಗವನ್, ನಿಮ್ಮ ಮಗನನ್ನು ನಾನು ಪುರೋಹಿತನನ್ನಾಗಿ ಮಾಡಿಕೊಳ್ಳಬೇಕೆಂದು ಇಚ್ಛಿಸುತ್ತೇನೆ, ನನ್ನ ಆ ಇಚ್ಛೆಯನ್ನು ದಯಮಾಡಿ ಪೂರ್ಣಮಾಡಬೇಕು" ಎಂದು ಪ್ರಾರ್ಥಿಸಿದನು. ಅದಕ್ಕೆ ಶ್ರುತಶ್ರವನು— "ರಾಜಾ, ಅವಶ್ಯವಾಗಿ ಆಗಬಹುದು. ನನ್ನ ಮಗನಾದ ಈ ಸೋಮಶ್ರವನು ಪ್ರತಿ ಸೂರ್ಯನಂತೆ ಇರುವನು. ನನ್ನ ತಪೋಮಯ ಉಗ್ರವೀರ್ಯವನ್ನು ಒಂದು ಹೆಣ್ಣುಹಾವು ಪ್ರಾಶನ ಮಾಡಿದ್ದರಿಂದ, ನನ್ನ ದಿವ್ಯತಪಸ್ಸೇ ಮೂರ್ತಿಗೊಂಡಂತೆ ಈತನು ಆ ಹೆಣ್ಣುಹಾವಿನ ಹೊಟ್ಟೆಯಿಂದ ಹುಟ್ಟಿರುವನು. ನಿನ್ನ ಎಂತಹ ಅರಿಷ್ಟವನ್ನಾದರೂ ಪರಿಹರಿಸಲು ಈತನು ಸಮರ್ಥನು. ಇನ್ನು, ಪ್ರತ್ಯಕ್ಷ ಶಂಕರನು ಯಾವದೊಂದು ಅರಿಷ್ಟವನ್ನುಂಟುಮಾಡಿದರೆ ಮಾತ್ರ ಉಪಾಯವಿಲ್ಲ; ಆದರೆ, ರಾಜಾ, ಒಂದು ವಿಶೇಷಸಂಗತಿಯನ್ನು ಕೇಳು — ಬ್ರಾಹ್ಮಣನು ಬಂದು ಏನು ಬೇಡಿದರೂ ಕೊಡುವ ಕಠಿಣನಿಯಮವು ನನ್ನ ಮಗನದಿರುವದು ; ಆ ನಿಯಮವನ್ನು ನೀನು ಪಾಲಿಸುವಹಾಗಿದ್ದರೆ, ಈತನನ್ನು ಕರಕೊಂಡು ಹೋಗಿ ಪೌರೋಹಿತ್ಯವನ್ನು ಕೊಡು," ಎಂದು ಹೇಳಲು, ಜನಮೇಜಯನು ಅದಕ್ಕೆ ಒಪ್ಪಿಕೊಂಡು ಸೋಮಶ್ರವನನ್ನು ಕರಕೊಂಡು ಹೋಗಿ ತಮ್ಮಂದಿರೊಡನೆ ಆತನ ನಿಯಮವನ್ನು ಪಾಲಿಸಹತ್ತಿದನು. ಮುಂದೆ ಜನಮೇಜಯನು ತಕ್ಷಶಿಲಾ ಎಂಬ ಹೆಸರಿನ ದೇಶಕ್ಕೆ ಹೋಗಿ ಅದನ್ನು ಗೆದ್ದು ತನ್ನ ರಾಜಧಾನಿಗೆ ತಿರುಗಿ ಬಂದನು. ಈ ಕಾಲದಲ್ಲ ಧೌಮ್ಯನೆಂಬ ಋಷಿಯು ಒಂದು ಸ್ಥಳದಲ್ಲಿ ವಾಸಿಸುತ್ತಿದ್ದನು. ಆತನ ಬಳಿಯಲ್ಲಿ ಆರುಣಿ, ಉಪಮನ್ಯು, ವೇದ ಎಂಬ ಮೂವರು ಶಿಷ್ಯರು ವಾಸಿಸುತ್ತಿದ್ದರು.

**ಆರುಣಿಯ ಗುರುನಿಷ್ಠಾ**—ಋಷಿಗಳೇ, ಧೌಮ್ಯರು "ಆರುಣಿ" ಎಂಬ ಶಿಷ್ಯನನ್ನು ಪರೀಕ್ಷಿಸುವದಕ್ಕಾಗಿ, ಒಂದುದಿನ ತಮ್ಮ ಬತ್ತದ ಗದ್ದೆಗೆ ಒಡ್ಡುಹಾಕಿ ನೀರು ಕಟ್ಟೆಂದು ಆತನಿಗೆ ಹೇಳಿ, ತಮ್ಮ ಯೋಗ ಸಾಮರ್ಥ್ಯದಿಂದ ಜಲಪ್ರವಾಹಕ್ಕೆ ಒಳ್ಳೇ ವೇಗವನ್ನುಂಟುಮಾಡಿದರು. ಗುರುಗಳ ಅಪ್ಪಣೆಯಂತೆ ಆರುಣಿಯು ಗದ್ದೆಗೆಹೋಗಿ ಒಡ್ಡುಹಾಕುವದಕ್ಕಾಗಿ ಎಷ್ಟು ಯತ್ನಮಾಡಿದರೂ ಒಡ್ಡು ನಿಲ್ಲಲೊಲ್ಲದು. ಆಗ ಆತನು

ಚಿಂತಾಕ್ರಾಂತನಾಗಿ ಆಲೋಚಿಸುತ್ತಿರುವಾಗ, ತಾನೇ ಒಡ್ಡಿನಂತೆ ಅಡ್ಡ ಮಲಗಿ ನೀರು ಕಟ್ಟಬೇಕೆಂಬ ಹಂಚಿಕೆಯು ಆತನಿಗೆ ಹೊಳೆಯಿತು. ಆಗ ಆರುಣಿಯು ಅದರಂತೆ ಮಾಡಿ ಗದ್ದೆಗೆ ನೀರುಕಟ್ಟಿದನು. ಹೀಗೆ ಕೆಲವು ದಿನಗಳು ಕಳೆದುಹೋದ ಬಳಿಕ ಧೌಮ್ಯರು ಒಂದುದಿನ ಉಳಿದ ಶಿಷ್ಯರನ್ನು ಕುರಿತು —"ಆರುಣಿಯು ಎಲ್ಲಿ?" ಎಂದು ಕೇಳಲು—"ಭಗವನ್, ತಮ್ಮ ಅಪ್ಪಣೆಯಂತೆಯೇ ಆರುಣಿಯು ಗದ್ದೆಗೆ ನೀರುಕಟ್ಟ ಹೋಗಿದ್ದಾನೆ." ಎಂದು ಹೇಳಿದರು. ಬಳಿಕ ಗುರುಗಳು ಯಾವತ್ತು ಶಿಷ್ಯರನ್ನು ಕರ ಕೊಂಡು ಗದ್ದೆಗೆಹೋಗಿ ಆರುಣಿಯನ್ನು ನೋಡಿದರು; ಆದರೆ ಆತನು ಅಲ್ಲಿ ಇದ್ದಿಲ್ಲ. ಆಗ ಧೌಮ್ಯರು—"ಅಪ್ಪಾ, ಆರುಣೀ, ಎಲ್ಲಿರುವೆ?" ಎಂದು ಕೂಗಲು, ಗುರುಗಳ ದನಿಯನ್ನು ಕೇಳಿ ಆರುಣಿಯು ಗದ್ದೆಯ ಒಡ್ಡು ಒಡೆದು ಎದ್ದುಬಂದು ಗುರುಗಳನ್ನು ನಮಸ್ಕರಿಸಿ, ಕೈಜೋಡಿಸಿ ನಿಂತು ಎಲ್ಲ ಸಂಗತಿಯನ್ನು ಹೇಳಿ, "ಮತ್ತೇನು ಅಪ್ಪಣೆ" ಎಂದು ಕೇಳಿ ಕೊಂಡನು. ಆಗ ಗುರುಗಳು—"ಆರುಣೀ, ನೀನು ಹೊಲದ ಒಡ್ಡಿನ ಉದ್ದಾಲವಮಾಡಿ, ಅಂದರೆ ಒಡೆದು ಬಂದದ್ದರಿಂದ ನಿನಗೆ ಉದ್ದಾಲಕ ನೆಂಬ ಹೆಸರು ಉಂಟಾಗುವದು. ನೀನು ನನ್ನ ಅಪ್ಪಣೆಯನ್ನು ಅಕ್ಷರಶಃ ಪಾಲಿಸಿದ್ದರಿಂದ ನನಗೆ ಬಹಳ ಸಂತೋಷವಾಗಿದೆ. ನನ್ನ ವರದಿಂದ ನಿನಗೆ ಯಾವತ್ತು ವೇದಗಳು, ವೇದಾಂಗಗಳು, ಧರ್ಮಶಾಸ್ತ್ರಗಳು ಅರ್ಥ ಸಹಿತವಾಗಿ ಉಪಲಬ್ಧವಾಗುವವು; ಮತ್ತು ಐಹಿಕ ಪಾರಲೌಕಿಕ ಸುಖ ಗಳೆಲ್ಲ ನಿನಗೆ ಒದಗಿ, ಕಡೆಗೆ ನೀನು ಸದ್ಗತಿಯನ್ನು ಹೊಂದುವೆ," ಎಂದು ನುಡಿಯಲು, ಆರುಣಿಯು ಕೃತಾರ್ಥನಾಗಿ ಗುರುಗಳ ಅಪ್ಪಣೆಯಂತೆ ತನ್ನ ದೇಶಕ್ಕೆ ಹೋದನು.

**ಉಪಮನ್ಯುವಿನ ಗುರುನಿಷ್ಠೆ**— ಧೌಮ್ಯರು ತಮ್ಮ ಎರಡನೆಯ ಶಿಷ್ಯನಾದ ಉಪಮನ್ಯುವಿಗೆ ಆಕಳ ಕಾಯಲಿಕ್ಕೆ ಹೇಳಿದ್ದರು. ಅದರಂತೆ ಉಪಮನ್ಯುವು ಆಕಳು ಕಾಯುತ್ತಿರಲು, ಕೆಲದಿನಗಳಮೇಲೆ ಆತನ ದೇಹವು ಕ್ಷೀಣವಾಗದೆ ಪುಷ್ಟವಾಗಿರುವದನ್ನು ಗುರುಗಳು ನೋಡಿ ಆತ ನನ್ನು ಕುರಿತು-"ಉಪಮನ್ಯೂ, ನೀನು ಒಳ್ಳೇ ಬಲಿಷ್ಠನಾಗಿರುವೆ; ಆದರೆ ನಿನ್ನ ಉಪಜೀವನವನ್ನು ಹೇಗೆ ಸಾಗಿಸುತ್ತೀ?" ಎಂದು ಕೇಳಿದರು.

ಗುರುಗಳ ಈ ಪ್ರಶ್ನೆಕ್ಕೆ ಉಪಮನ್ಯುವು— "ಗುರುಮಹಾರಾಜ, ನಾನು ಮಧುಕರಿಮಾಡಿ ಉಪಜೀವನ ಸಾಗಿಸುವೆನು" ಎಂದು ಹೇಳಲು, ಗುರುಗಳು—"ಇನ್ನು ಮೇಲೆ ನೀನು ಮಧುಕರಿಯನ್ನು ನಮಗೆ ತಂದುಕೊಡಬೇಕು." ಎಂದು ಆಜ್ಞಾಪಿಸಿದರು. ಅದರಂತೆ ಉಪಮನ್ಯುವು ಮಧುಕರಿಯನ್ನು ಗುರುಗಳಿಗೆ ಕೊಡುತ್ತ ದನಗಳನ್ನು ಕಾಯಹತ್ತಿದನು. ಮುಂದೆ ಕೆಲದಿನಗಳ ಮೇಲೆ ಉಪಮನ್ಯುವಿನ ದೇಹವು ಮತ್ತೂ ಪುಷ್ಟವಾಗಿಯೇ ಇರುವದನ್ನು ಧೌಮ್ಯರು ನೋಡಿ, ತಮ್ಮ ಆ ಶಿಷ್ಯನನ್ನು ಕುರಿತು—"ಉಪಮನ್ಯೂ, ಮಧುಕರಿಯನ್ನೆಲ್ಲ ನಮಗೆ ತಂದುಕೊಡುತ್ತಿದ್ದರೂ ನೀನು ಮತ್ತೂ ಪುಷ್ಟವಾಗಿಯೇ ಇರುವೆಯಲ್ಲ!" ಎಂದು ಕೇಳಲು, ಉಪಮನ್ಯುವು—"ಗುರುಗಳೇ, ನಾನು ಎರಡುಸಾರೆ ಮಧುಕರಿಯನ್ನು ಬೇಡುವೆನು. ಮೊದಲನೆಯ ಮಧುಕರಿಯನ್ನು ನಿಮಗೆ ತಂದುಕೊಟ್ಟು, ಎರಡನೆಯದನ್ನು ನಾನು ಭಕ್ಷಿಸುವೆನು." ಎಂದು ಹೇಳಿದನು. ಅದಕ್ಕೆ ಗುರುಗಳು—"ಅಪ್ಪಾ, ಉಪಮನ್ಯೂ, ಹೀಗೆ ಗುರುಗಳನ್ನು ಮೋಸಗೊಳಿಸುವದು ಯೋಗ್ಯವಲ್ಲ. ನೀನು ಎರಡುಸಾರೆ ಮಧುಕರಿ ಬೇಡುವದರಿಂದ ಉಳಿದ ಮಧುಕರಿಯವರಿಗೆ ತೊಂದರೆಯಾಗುತ್ತದೆ; ಆದ್ದರಿಂದ ಈ ಪದ್ಧತಿಯನ್ನು ನಿಲ್ಲಿಸಿಬಿಡು," ಎಂದು ಆಜ್ಞಾಪಿಸಿದರು.

ಗುರುಗಳ ಅಪ್ಪಣೆಯಂತೆ ಉಪಮನ್ಯುವು ತನ್ನ ಸಲುವಾಗಿ ಎರಡನೆಯಸಾರೆ ಮಧುಕರಿಯನ್ನು ಬೇಡದೆ, ದನಗಳನ್ನು ಕಾಯಹತ್ತಿದನು. ಹೀಗೆ ಕೆಲವು ದಿನಗಳು ಕಳೆದ ಬಳಿಕ ಉಪಮನ್ಯುವು ಮತ್ತೂ ಪುಷ್ಟನಾಗಿಯೇ ಇರುವದನ್ನು ನೋಡಿ, ಗುರುಗಳು ಆತನ ಪುಷ್ಟಿಯ ಕಾರಣವನ್ನು ಕೇಳಿದರು. ಅದಕ್ಕೆ ಉಪಮನ್ಯುವು—"ಸ್ವಾಮೀ, ತಮ್ಮ ಅಪ್ಪಣೆಯಂತೆ ನಾನು ಎರಡನೆಯಸಾರೆ ಮಧುಕರಿಗೆ ಹೋಗದಿದ್ದರೂ, ಅಡವಿಯಲ್ಲಿ ಆಕಳ ಕರುಗಳು ತಮ್ಮ ತಾಯಿಯ ಮೊಲೆಹಾಲು ಕುಡಿಯುವಾಗ ಕೆಳಗೆ ಬೀಳುತ್ತಿರುವಹಾಲನೊರೆಯನ್ನು ಸೇವಿಸಿ ನಾನು ಜೀವಿಸುತ್ತಿರುವೆನು" ಎಂದು ಹೇಳಿದನು. ಅದಕ್ಕೆ ಗುರುಗಳು—"ಉಪಮನ್ಯೂ, ನಿನ್ನ ಈ ನಡತೆಯು ತೀರಾ ಅಯೋಗ್ಯವು. ಆ ದೀನವಾತ್ಸಲ್ಯದ ಕರುಗಳಿಗೆ ನಿನ್ನ ವಿಷಯವಾಗಿ ದಯವು ಉತ್ಪನ್ನವಾಗಲು, ಅವು ತಾವು ಕುಡಿಯುವದನ್ನು ಬಿಟ್ಟು ಹೆಚ್ಚು

ಹಾಲನ್ನು ನಿನ್ನ ಸಲುವಾಗಿ ಸುರಿಸುತ್ತಿರುವವು; ಅದರಿಂದ ನಿನ್ನ ಉದರ ಪೂರ್ತಿಯು ಚೆನ್ನಾಗಿ ಆಗುತ್ತಿರುವದು.' ಇನ್ನುಮೇಲೆ ನೀನು ಹೀಗೆ ಸರ್ವಥಾ ಮಾಡಬಾರದು ; ಯಾಕಂದರೆ ಆ ಸಣ್ಣ ಕರುಗಳು ನಿನ್ನ ಈ ಕೃತಿಯಿಂದ ಉಪವಾಸವಾಗುವವು''ಎಂದು ಹೇಳಲು, ಉಪಮನ್ಯುವು ಅದನ್ನೂ ಬಿಟ್ಟು ಉಪವಾಸ ಪವನಗಳನ್ನು ಕಾಯುಹತ್ತಿದನು. ಹೀಗೆ ಎಷ್ಟೋ ದಿವಸಗಳು ಕಳೆದುಹೋದವು ಆದರೂ ಆತನು ಗುರುಗಳ ಅಪ್ಪಣೆಯನ್ನು ಉಲ್ಲಂಘಿಸಲಿಲ್ಲ. ಕಡೆಗೆ ಆತನು ಹಸಿವೆಯನ್ನು ತಡೆಯಲಾರದೆ ಎಕ್ಕೆಯ ಎಲೆಗಳನ್ನು ತಿಂದನು. ಅದರಿಂದ ಹೊಟ್ಟೆಯಲ್ಲಿ ಉರಿಬಿದ್ದು ಆತನ ಕಣ್ಣುಗಳು ಹೋದವು. ಆಗ ಆತನಿಗೆ ಹಾದಿಯು ಕಾಣದ ಹಾಗಾಗಿ ಅತ್ತಿತ್ತ ಎಡವುತ್ತ ತಡವುತ್ತ ಹೋಗುತ್ತಿರಲು, ಆತನು ಒಂದು ಬಾವಿಯಲ್ಲಿ ಬಿದ್ದನು !

ಇತ್ತ ಸೂರ್ಯಾಸ್ತವಾದರೂ ಉಪಮನ್ಯುವು ಮನೆಗೆ ಬಾರದಿರುವದನ್ನು ನೋಡಿ ಗುರುಗಳು ಉಳಿದ ಶಿಷ್ಯರಿಗೆ—"ಇಂದು ಉಪಮನ್ಯುವು ಇನ್ನೂ ಬರಲಿಲ್ಲ. ನಾನು ಎಲ್ಲಬಗೆಯಿಂದ ಆತನ ಊಟಕ್ಕೆ ಪ್ರತಿಬಂಧಮಾಡಿದ್ದರಿಂದ ಆತನು ನನ್ನಮೇಲೆ ಸಿಟ್ಟಾದಹಾಗೆ ಕಾಣುತ್ತದೆ ; ಆದ್ದರಿಂದ ಆತನನ್ನು ಕರಕೊಂಡುಬರೋಣ ನಡೆಯಿರಿ," ಎಂದು ಹೇಳಿ, ಶಿಷ್ಯರೊಡನೆ ಧೌಮ್ಯರು ವನಕ್ಕೆ ಹೋಗಿ ನೋಡಲು, ಉಪಮನ್ಯುವು ಅಲ್ಲಿ ಇದ್ದಿಲ್ಲ. ಆಗ ಅವರು—"ಉಪಮನ್ಯೂ, ಎಲ್ಲಿರುವೆಯೋ, ಬಾ" ಎಂದು ಕೂಗಿದರು. ಆಗ ಉಪಮನ್ಯುವು ಗುರುಗಳ ದನಿಯನ್ನು ಕೇಳಿ ಗಟ್ಟಿಯಾಗಿ ಕೂಗಿ "ಗುರುಗಳೇ, ನಾನು ಈ ಬಾವಿಯಲ್ಲಿ ಬಿದ್ದಿದ್ದೇನೆ" ಎಂದು ಹೇಳಿದನು. ಆಗ ಧೌಮ್ಯರು ಶಿಷ್ಯನ ಮುಖದಿಂದ ಎಲ್ಲ ಸಂಗತಿಯನ್ನು ಕೇಳಿಕೊಂಡು ಕನಿಕರದಿಂದ ಆತನನ್ನು ಕುರಿತು—"ಬಾಲಕಾ, ನೀನು ಅಶ್ವಿನೀದೇವತೆಗಳನ್ನು ಪ್ರಾರ್ಥಿಸು, ಅಂದರೆ, ಆ ದೇವವೈದ್ಯರು ಪ್ರಸನ್ನರಾಗಿ ನಿನಗೆ ಕಣ್ಣುಗಳನ್ನು ಕೊಡುವರು" ಎಂದು ಹೇಳಿದರು. ಗುರುಗಳ ಅಪ್ಪಣೆಯಾದಕೂಡಲೆ ಉಪಮನ್ಯುವು ಋಕ್ಛಂದಗಳಿಂದ ಅಶ್ವಿನೀದೇವತೆಗಳನ್ನು ಸ್ತುತಿಸಹತ್ತಿದನು.

**ಅಶ್ವಿನೀಕುಮಾರರ ಸ್ತುತಿ**—ಅಹೋ ಅಶ್ವಿನೀಕುಮಾರರೇ, ಈ ಸ್ಥಾವರಜಂಗಮ ಸರ್ವವಿಶ್ವದ ಆರಂಭದಲ್ಲಿ ಪರಬ್ರಹ್ಮರೂಪದಿಂದ ವಾಸಿಸುವವರು ನೀವೇ ಇರುತ್ತೀರಿ. ಈ ಜಗತ್ತೆಲ್ಲ ನಿಮ್ಮ ಲೀಲೆಯೇ ಆಗಿರುವದು. ನಿಮ್ಮ ಮನಸ್ಸಿನಲ್ಲಿ ಜಗದುತ್ಪತ್ತಿಯನ್ನು ಮಾಡುವ ವಿಚಾರವು ಉತ್ಪನ್ನವಾಯಿತೆಂದರೆ, ನೀವೇ ಕಾರಣಾತ್ಮನ ದ್ವಾರದಿಂದ ಹಿರಣ್ಯಗರ್ಭನ ಅವತಾರಮಾಡುತ್ತೀರಿ. ಆಶ್ಚರ್ಯಕಾರಕವಾದ ಈ ಸರ್ವ ಪ್ರಪಂಚವು ನಿಮ್ಮ ಆ ಹಿರಣ್ಯಗರ್ಭಮೂರ್ತಿಯಿಂದಲೇ ಉದಯವಾಗುವದು. ಶ್ರುತಿ ಸ್ಮೃತ್ಯಾದಿಗಳ ಜ್ಞಾನದಿಂದ, ಹಾಗು ಧ್ಯಾನ-ಮನನಾದಿಗಳ ಯೋಗದಿಂದ ನಿಮ್ಮ ಆ ಸಚ್ಚಿನ್ಮಯಮೂರ್ತಿಯ ಜ್ಞಾನಜ್ಯೋತಿಯು ನನ್ನ ಚಿತ್ತದಲ್ಲಿ ಪ್ರಜ್ವಲಿತವಾಗಬೇಕೆಂದು ನಾನು ಬೇಡಿಕೊಳ್ಳುವೆನು. ಎಲೈ ಪರಬ್ರಹ್ಮಮೂರ್ತಿಗಳೇ,. ನಿಮ್ಮ ಸ್ವರೂಪದ ಯಥಾರ್ಥ ಆಕಲನವಾಗಬೇಕಾದರೆ, ಜ್ಞಾನದೃಷ್ಟಿಯ ಆವಶ್ಯಕತೆಯೇ ಇರುವದು ದೇಶ ಕಾಲಾತೀತವೂ, ಇಯತ್ತಾಶೂನ್ಯವೂ ಆದ ನಿಮ್ಮ ಸರ್ವವ್ಯಾಪಕಸ್ವರೂಪದ ಜ್ಞಾನವು, ಜಡವಾದ ಇಂದ್ರಿಯಶಕ್ತಿಯಿಂದ ಆಗುವದು ಎಂದಿಗೂ ಶಕ್ಯವಿಲ್ಲ. ನಿಮ್ಮ ಪ್ರಸಾದವಾಗಿ ನನ್ನ ಹೃದಯದಲ್ಲಿ ಚಿನ್ಮಯಜ್ಯೋತಿಯು ಪ್ರಜ್ವಲಿಸಿದಾಗ ನನ್ನ ಸರ್ವಪುರುಷಾರ್ಥಗಳು ಸಿದ್ಧಿಸಿದಂತಾಗುವವು; ಯಾಕಂದರೆ, "ಬ್ರಹ್ಮಜ್ಞಪುರುಷನು ಸ್ವತಃ ಬ್ರಹ್ಮನಾಗುವನು" ಎಂಬ ನಿಶ್ಚಯವಿರುವದರಿಂದ, ನಾನು ಸ್ವತಃ ಬ್ರಹ್ಮಾನಂದ ಸುಖವನ್ನು ಅನುಭವಿಸುವೆನು. ಆಮೇಲೆ ನನಗೆ ಭವಬಂಧದ ಅಂಜಿಕೆಯು ಉಳಿಯಲಾರದು.

ಅಶ್ವಿನೀದೇವತೆಗಳಿರಾ, ನಾನು ನಿಮ್ಮ ಆ ಪರಬ್ರಹ್ಮರೂಪವನ್ನು ಅಭಿವಂದಿಸುವೆನು; ಅದರಂತೆ, ನೀವು ಕೊರಳಲ್ಲಿ ಧರಿಸಿರುವ ಬ್ರಹ್ಮಾಂಡರೂಪವಾದ ಕಮಲಗಳ ಮಾಲೆಯನ್ನು ನಮಸ್ಕರಿಸುವೆನು. ಯಾವತ್ತು ಜಗತ್ತಿನಲ್ಲಿ ನಿತ್ಯವಾಗಿಯೂ, ಶಾಶ್ವತವಾಗಿಯೂ ಇರುವವರು ನೀವೆಯೇ; ಮಾಯಾವಶರಾಗಿ ಕರ್ಮಗಳನ್ನು ಮಾಡುವವರಿಗೆ ನೀವೇ ಫಲಗಳನ್ನು ಕೊಡುತ್ತೀರಿ! ಆದ್ದರಿಂದ ನಿಮ್ಮ ಕೃಪೆಯಿಲ್ಲದೆ ದೇವತೆಗಳಿಗಾಗಲಿ, ಅನ್ಯರಿಗಾಗಲಿ ಯಾವ ಕೆಲಸಮಾಡುವದೂ ಸುಲಭವಲ್ಲ. ದೇವಾಧಿದೇವರೇ,

ಪ್ರಾಣಿಗಳ ಜನ್ಮವು ಹೇಗಾಗುವದೆಂಬದನ್ನು ವಿಚಾರಿಸಿದರೂ, ಸರ್ವತ್ರ ನಿಮ್ಮ ಸತ್ತೆಯೇ ಇರುವದೆಂಬದರ ಅನುಭವವಾಗುವದು. ನೋಡಿರಿ, ನೀವೇ ಉತ್ಪನ್ನಮಾಡಿದ ಅನ್ನದಿಂದ ಮಾತಾಪಿತೃಗಳಲ್ಲಿಯ ಗರ್ಭಬೀಜವು ಉತ್ಪನ್ನವಾಗುತ್ತದೆ. ಆಮೇಲೆ ಆ ಬೀಜವು ಪುರುಷನಲ್ಲಿ ಶುಕ್ರರೂಪ ದಿಂದಲೂ, ಸ್ತ್ರೀಯಲ್ಲಿ ಶೋಣಿತರೂಪದಿಂದಲೂ ಪರಿಪಕ್ವವಾಗಿ, ಮುಂದೆ ಸ್ತ್ರೀಪುರುಷರ ಸಮಾಗಮದಲ್ಲಿ ಸ್ತ್ರೀಯ ಗರ್ಭಾಶಯದೊಳಗೆ ಪುರುಷನ ಆ ಶುಕ್ರರೂಪಬೀಜವು ಇಳಿದು, ಅಲ್ಲಿಯ ಶೋಣಿತರೂಪಬೀಜದ ಸಂಪರ್ಕ ದಿಂದ ಪಿಂಡವಾಗುವದು. ಆಮೇಲೆ ಆ ಪಿಂಡವು ಅಲ್ಲಿ ಬೆಳೆಯಹತ್ತಿ ಯಥಾಕಾಲದಲ್ಲಿ ಹೊರಬಿತ್ತೆಂದರೆ, ಅದು ತಾಯಿಯ ಮೊಲೆಕುಡಿಯುವಲ್ಲಿ ಆಸಕ್ತವಾಗುತ್ತದೆ. ಸಾರಾಂಶ, ಎಲೈ ಲೋಕಪಾಲಕರೇ, ಎಲ್ಲವೂ ನೀವೇ ಇರುತ್ತೀರಿ; ಎಲ್ಲವನ್ನೂ ನೀವೇ ಮಾಡುತ್ತೀರಿ, ಇದರಲ್ಲಿ ಸಂಶಯವಿಲ್ಲ; ಆದ್ದರಿಂದ ನನ್ನ ದೇಹಯಾತ್ರೆಗಾಗಿ ನನಗೆ ನಿರ್ಮಲ ದೃಷ್ಟಿಯನ್ನು ಒದಗಿಸಿಕೊಡಿರಿ. ದೇವಾಧಿದೇವರೇ, ನಿಮ್ಮ ಅನಂತಗುಣ ಗಳನ್ನು ವರ್ಣಿಸಲು ನಾನು ಶಕ್ತನಲ್ಲ. ನಾನು ನೇತ್ರಹೀನನಾದದ್ದರಿಂದ ಹಾದಿಯತಪ್ಪಿ ಈ ಭಯಂಕರವಾದ ಬಾವಿಯಲ್ಲಿ ಕಡಕೊಂಡು ಬಿದ್ದಿರು ತ್ತೇನೆ. ಈ ವಿಪತ್ತಿನಿಂದ ನನ್ನನ್ನು ಮುಕ್ತಮಾಡಲು, ನಿಮ್ಮ ಹೊರತು ಬೇರೆಯವರು ಸಮರ್ಥರಲ್ಲ; ಆದ್ದರಿಂದ ನಾನು ನಿಮಗೆ ಶರಣುಬಂದಿ ದ್ದೇನೆ. ನನ್ನ ಕಾರ್ಯವನ್ನು ಮಾಡಿರಿ.

**ಅಶ್ವಿನೀಕುಮಾರರ ದರ್ಶನ**— ಉಪಮನ್ಯುವಿನ ಈ ಸ್ತೋತ್ರ ದಿಂದ ಅಶ್ವಿನೀಕುಮಾರರು ಪ್ರಸನ್ನರಾಗಿ ಆತನಿಗೆ ಒಂದು ಅಪೂಪವನ್ನು (ತುಪ್ಪದಲ್ಲಿ ಕರಿದ ಘಾರಗಿಯನ್ನು) ಕೊಟ್ಟು, "ಇದನ್ನು ಭಕ್ಷಣಮಾ ಡೆಂ"ದು ಹೇಳಿದರು. ಅದಕ್ಕೆ ಉಪಮನ್ಯುವು—"ದೇವಾಧಿದೇವರೇ, ಇದು ನನ್ನ ಮೇಲಿನ ನಿಮ್ಮ ಮಹದುಪಕಾರವು; ಆದರೆ ಗುರುವಿಗೆ ಅರ್ಪಿಸಿಪಹೊರತು ನಾನು ಈ ಅಪೂಪವನ್ನು ಭಕ್ಷಿಸಲಾರೆನು" ಎಂದು ಹೇಳಲು, ಅದಕ್ಕೆ ಅಶ್ವಿನೀದೇವತೆಗಳು—"ಉಪಮನ್ಯೋ, ಹಿಂದಕ್ಕೆ ನಿನ್ನ ಗುರುವು ನಮ್ಮನ್ನು ಸ್ತುತಿಸಿದಾಗ ಹೀಗೆಯೇ ನಾವು ಆತನಿಗೆ ಅಪೂಪವನ್ನು ಕೊಟ್ಟೆವು. ಆತನು ಆ ಅಪೂಪವನ್ನು ತನ್ನ ಗುರುವಿಗೆ ಕೊಡದೆ ಭಕ್ಷಿಸಿ

ದನು. ಅದರಂತೆ ನೀನಾದರೂ ಈಗ ಭಕ್ಷಿಸು " ಎಂದು ಹೇಳಿದರು ; ಆದರೆ ಉಪಮನ್ಯುವು ಅದಕ್ಕೆ ಒಪ್ಪಲಿಲ್ಲ. " ಗುರುಗಳಿಗೆ ಅರ್ಪಿಸಿದಹೊರತು ಭಕ್ಷಿಸುವಹಾಗೆ ನನಗೆ ಮನಸ್ಸು ಆಗುವದಿಲ್ಲವೆಂ"ದು ಸ್ಪಷ್ಟವಾಗಿ ಹೇಳಿದನು. ಅದಕ್ಕ ಅಶ್ವಿನೀದೇವತೆಗಳು ಮೆಚ್ಚಿ ಉಪಮನ್ಯುವಿಗೆ—" ಉಪಮನ್ಯೂ, ನಿನ್ನ ಗುರುಭಕ್ತಿಯನ್ನು ನೋಡಿ ನಮಗೆ ಬಹಳ ಆನಂದವಾಯಿತು. ಅಪ್ಪಾ, ಪ್ರತಿಒಬ್ಬನು ತನ್ನ ಗುರುವಿನಲ್ಲಿ ಹೀಗೆಯೇ ನಿಷ್ಠೆಯನ್ನಿಡಬೇಕು. ನಿನಗೆ ನಿನ್ನ ಗುರುವಿಗಿಂತಲೂ ಹೆಚ್ಚಿನ ಜ್ಞಾನವು ಪ್ರಾಪ್ತವಾಗುವದು. ನಿನ್ನ ಗುರುವು ಕೇವಲ ಕರ್ಮಗತನಿರುವದರಿಂದ, ಕರ್ಮದಿಂದ ಪ್ರಾಪ್ತವಾಗುವ ಫಲಗಳನ್ನು ಆತನು ಭೋಗಿಸಬೇಕಾಗುವದು ; ಆದರೆ ನಿನ್ನ ಅಧಿಕಾರವು ಅದಕ್ಕೂ ಹೆಚ್ಚು ಇರುವದರಿಂದ, ಕರ್ಮದ ಹಾಗು ಅದರಿಂದುಂಟಾಗುವ ಫಲೋಪಭೋಗದ ಸ್ಪರ್ಶವೂ ನಿನಗೆ ಉಂಟಾಗಲಾರದು ; ಮತ್ತು ನೀನು ಚಿನ್ಮಯ ಪದವನ್ನು ಹೊಂದುವೆ! ಉಪಮನ್ಯೂ, ನಿನಗೆ ದಿವ್ಯದೃಷ್ಟಿಗಳು ಪ್ರಾಪ್ತವಾಗಿ, ನಿನ್ನಲ್ಲಿ ಯಾವಾಗಲೂ ದಿವ್ಯಜ್ಞಾನವು ವಾಸಿಸುವದು " ಎಂದು ನುಡಿಯುತ್ತಿರಲು, ಉಪಮನ್ಯುವಿಗೆ ಉತ್ತಮ ಕಣ್ಣುಗಳು ಬಂದವು. ಬಳಿಕ ಆತನು ಗುರುಗಳ ಬಳಿಗೆ ಹೋಗಿ ಕೈಜೋಡಿಸಿ ನಿಂತುಕೊಂಡು ಎಲ್ಲ ವೃತ್ತಾಂತವನ್ನು ಹೇಳಿದನು. ಆಗ ಗುರುಗಳು ಅವನನ್ನು ಆಶೀರ್ವದಿಸಿ—"ಅಶ್ವಿನೀಕುಮಾರರು ಹೇಳಿದಂತೆ ಎಲ್ಲವೂ ಆಗುವದು " ಎಂದು ಅನುಗ್ರಹಿಸಿದರು.

**ವೇದನ ಗುರುನಿಷ್ಠೆ**—ಧೌಮ್ಯರು ವೇದನೆಂಬ ಹೆಸರಿನ ಮೂರನೆಯ ಶಿಷ್ಯನನ್ನು ಕೆಲಸಬೊಗಸೆಗಾಗಿ ಮನೆಯಲ್ಲಿಯೇ ಇಟ್ಟುಕೊಂಡಿದ್ದರು. ಅದರಂತೆ ವೇದನು ಗುರುಶುಶ್ರೂಷೆಮಾಡುತ್ತ, ಬಹುದಿವಸ ಗುರುಗೃಹದಲ್ಲಿ ವಾಸಿಸಿದನು. ಗುರುಗಳು ಹೇಳಿದ ಕೆಲಸವನ್ನು ಆತನು ಮನಃಪೂರ್ವಕವಾಗಿ ಮಾಡುತ್ತಿದ್ದನು. ಅವರು ಆತನನ್ನು ನೇಗಿಲಿಗೆಸಹ ಹೂಡುತ್ತಿದ್ದರು ; ಆದರೂ ಆತನಿಗೆ ಎಂದೂ ಖೇದವಾಗಲಿಲ್ಲ. ಚಳಿ, ಬಿಸಿಲು, ಹಸಿವೆ, ನೀರಡಿಕೆ ಮೊದಲಾದವುಗಳಿಂದಾಗುವ ಕ್ಲೇಶವನ್ನು ಆತನು ಆನಂದದಿಂದ ಸಹನಮಾಡುತ್ತಿದ್ದನು. ಎಂದೂ ಅಸಂತೋಷವನ್ನು ಪ್ರಕಟಿಸಲಿಲ್ಲ. ಅದರಿಂದ ಧೌಮ್ಯಗುರುಗಳು ಸಂತುಷ್ಟರಾಗಿ ಅನುಗ್ರಹಿಸಲು, ವೇದ

ನಿಗೆ ಸರ್ವಜ್ಞತೆಯು ಪ್ರಾಪ್ತವಾಗಿ, ಎಲ್ಲಬಗೆಯಿಂದಲೂ ಆತನ ಕಲ್ಯಾಣ ವಾಯಿತು. ಆತನು ಋಷಿಪದವಿಯನ್ನು ಹೊಂದಿ ಕುಲಪತಿಯಾದನು.

**ಉತ್ತಂಕನ ಕಥೆ**—ಮುಂದೆ ಒಂದಾನೊಂದು ಪ್ರಸಂಗದಲ್ಲಿ ಜನ ಮೇಜಯರಾಜನೂ, ಪೌಷ್ಯರಾಜನೂ ಆ ವೇದಋಷಿಗಳ ಬಳಿಗೆ ಬಂದು, ತಮ್ಮ ಪೌರೋಹಿತ್ಯವನ್ನು ಮಾಡಬೇಕೆಂದು ಪ್ರಾರ್ಥಿಸಿದರು. ಅಷ್ಟರ ಆ ಪ್ರಾರ್ಥನೆಯನ್ನು ಮನ್ನಿಸದಿರುವದು ವೇದಮುನಿಗಳಿಗೆ ಉಚಿತವಾಗಿ ತೋರದ್ದರಿಂದ, ಅವರು ಆ ರಾಜರ ಪೌರೋಹಿತ್ಯವನ್ನು ಸ್ವೀಕರಿಸಿದರು. ಮುಂದೆ ಕೆಲವು ದಿವಸಗಳಮೇಲೆ ವೇದಮುನಿಗಳು ಯಜಮಾನಕೃತ್ಯ ಕ್ಕಾಗಿ ಆ ರಾಜರ ಬಳಿಗೆ ಹೋಗುವ ಪ್ರಸಂಗವು ಬಂದಿತು. ಆಗ ವೇದ ಮುನಿಗಳು ತಮ್ಮ ಶಿಷ್ಯನಾದ ಉತ್ತಂಕನನ್ನು ಕರೆದು- 'ಅಪ್ಪಾ,' ಉತ್ತಂಕಾ, ಕಡಿಮೆಬಿದ್ದದ್ದನ್ನು ಪೂರ್ಣಮಾಡಿ, ಮನೆತನದ ವ್ಯವಸ್ಥೆ ಯನ್ನು ಸರಿಯಾಗಿ ಇಡು'' ಎಂದು ಹೇಳಿ, ಹೊರಟುಹೋದರು. ಇತ್ತ ಉತ್ತಂಕನು ಮನೆತನವನ್ನು ಉತ್ತಮರೀತಿಯಿಂದ ಸಾಗಿಸಿಕೊಂಡು ಹೋಗಹತ್ತಿದನು. ಹೀಗಿರುವಾಗ ಆಶ್ರಮದೊಳಗಿನ ಸ್ತ್ರೀಯರು ಉತ್ತಂಕ ನನ್ನು ಕರೆದು-''ಹೇ ಉತ್ತಂಕಾ, ನಿನ್ನ ಗುರುಪತ್ನಿಯು ಋತುಮತಿ ಯಾಗಿರುವಳು. ಈ ಕಾಲದಲ್ಲಂತು ವೇದಗುರುಗಳು ಊರಲ್ಲಿ ಇಲ್ಲವು; ಆದ್ದರಿಂದ ನಿನ್ನ ಗುರುಪತ್ನಿಯ ಋತುವು ವ್ಯರ್ಥವಾಗದಂತೆ ಮಾಡು; ಇಲ್ಲದಿದ್ದರೆ ಆಕೆಯು ದೊಡ್ಡಹಾನಿಯಾಗುವ ಹಾಗಿರುವದು" ಎಂದು ಹೇಳಿ ದರು. ಆಗ ಉತ್ತಂಕನು ಆ ಸ್ತ್ರೀಯರಿಗೆ-''ಎಲೈ ಸ್ತ್ರೀಯರೇ, ನೀವು ನನಗೆ ಅನುಚಿತಕರ್ಮ ಮಾಡಹೇಳುವದು ಸರಿಯಲ್ಲ. ಇಂಥ ನಿಂದ್ಯ ಕರ್ಮವನ್ನು ಮಾಡುವದಕ್ಕಾಗಿ ಗುರುಗಳು ನನಗೆ ಆಜ್ಞಾಪಿಸಿರುವದಿಲ್ಲವು; ಆದ್ದರಿಂದ ಇಂಥ ಅಯೋಗ್ಯಮಾತುಗಳನ್ನು ನನ್ನಮುಂದೆ ಆಡಬೇಡಿರಿ.''

ಶೌನಕಾದಿ ಋಷಿಗಳೇ, ಈ ಮೇರೆಗೆ ಉತ್ತಂಕನು ಸ್ತ್ರೀಯರ ಮಾತನ್ನು ನಿಷೇಧಿಸಿ, ಆ ಪ್ರಸಂಗದ ನಿವಾರಣವನ್ನು ಮಾಡಿದನು. ಮುಂದೆ ಕೆಲದಿನಗಳಮೇಲೆ ವೇದಮುನಿಗಳು ಯಜಮಾನಕೃತ್ಯಗಳನ್ನು ತೀರಿಸಿಕೊಂಡು ಮನೆಗೆ ಬಂದು ಎಲ್ಲಸಂಗತಿಯನ್ನು ಕೇಳಿ, ಉತ್ತಂಕನ ಮನೋನಿಗ್ರಹಕ್ಕಾಗಿ ಸಂತುಷ್ಟರಾದರು. ಅವರು ಉತ್ತಂಕನಿಗೆ-''ಅಪ್ಪಾ,

ಉತ್ತಂಕಾ, ನಿನ್ನ ಸದಾಚರಣೆಯನ್ನು ನೋಡಿ ನಾನು ಸಂತುಷ್ಟನಾಗಿದ್ದೇನೆ; ನಿನ್ನ ಮನಸ್ಸಿನ ಇಚ್ಛೆಯನ್ನು ಹೇಳು, ಕೂಡಲೆ ಅದನ್ನು ಪೂರ್ಣಮಾಡುವೆನು. ಎಲೈ ಸಚ್ಛಿಷ್ಯನೇ, ನೀನು ಯಥಾಶಾಸ್ತ್ರ ಗುರು ಸೇವೆಯನ್ನು ಮಾಡಿದೆ; ಆದ್ದರಿಂದ ನಮ್ಮಿಬ್ಬರಲ್ಲಿ ಅತ್ಯಂತಪ್ರೇಮವು ಉತ್ಪನ್ನವಾಗಿದೆ; ಆದರೆ ಬಾಲಕಾ, ಇನ್ನು ನೀನು ಮನೆಗೆ ಹೋಗು; ಅದಕ್ಕೆ ನನ್ನ ಅನುಮೋದನನಿರುವದು. ನಿನ್ನ ಯಾವತ್ತು ಇಚ್ಛೆಗಳು ಪೂರ್ಣವಾಗುವವು" ಎಂದು ನುಡಿದರು. ಆದರೆ ಗುರುದಕ್ಷಿಣೆಯನ್ನು ಕೊಡದೆ ಹೋಗುವದು ಉತ್ತಂಕನ ಮನಸ್ಸಿಗೆ ಬರಲಿಲ್ಲ. ಆತನು ಗುರು ಗಳಿಗೆ–"ಸ್ವಾಮಿ, ಗುರುದಕ್ಷಿಣೆಯನ್ನು ಕೊಡದೆ ನಾನು ಹಾಗೆಯೇ ಹೋದರೆ, ನನಗೆ ಗುರುದಕ್ಷಿಣೆ ಕೊಡದೆಯಿದ್ದ ದೋಷವೂ, ತಮಗೆ ಗುರು ದಕ್ಷಿಣೆ ತಕ್ಕೊಳ್ಳದೆಯಿದ್ದ ದೋಷವೂ ತಟ್ಟುವವು; ಆದ್ದರಿಂದ ತಮಗೆ ಯಾವ ದಕ್ಷಿಣೆಯನ್ನು ಕೊಡಬೇಕು?" ಎಂದು ಕೇಳಿದನು. ಆದಕ್ಕೆ ಗುರುಗಳು–"ಉತ್ತಂಕಾ, ಇರಲಿ. ಇನ್ನು ಕೆಲವುದಿನ ನಮ್ಮ ಮನೆಯ ಲ್ಲಿರು. ಆಮೇಲೆ ದಕ್ಷಿಣೆಯ ವಿಚಾರವನ್ನು ಮಾಡೋಣವಂತೆ" ಎಂದು ಹೇಳಿದರು. ಕೆಲವು ದಿನಗಳು ಹೋದಬಳಿಕ ಉತ್ತಂಕನು ಗುರುಗಳ ಮುಂದೆ ಮತ್ತೆ ದಕ್ಷಿಣೆಯ ಮಾತು ತೆಗೆದನು. ಅದಕ್ಕೆ ಗುರುಗಳು— "ಉತ್ತಂಕಾ, ಇನ್ನೂ ನಿನ್ನ ದಕ್ಷಿಣೆಯ ಆಗ್ರಹವು ಇರುವದಲ್ಲವೆ? ಆಗಲಿ, ಹೋಗು, ನಿನ್ನ ಗುರುಪತ್ನಿಯನ್ನು ಕೇಳಿ ಆಕೆಯು ಕೇಳಿದ ದಕ್ಷಿಣೆ ಯನ್ನು ಕೊಡು" ಎಂದು ಹೇಳಿದರು.

ಋಷಿಗಳೇ, ಬಳಿಕ ಉತ್ತಂಕನು ದಕ್ಷಿಣೆಕೊಡುವ ವಿಷಯದಲ್ಲಿ ಗುರು ಪತ್ನಿಯನ್ನು ಪ್ರಾರ್ಥಿಸಿ ಕೇಳಿಕೊಳ್ಳಲು, ಆಕೆಯು–"ಉತ್ತಂಕಾ, ನೀನು ಪೌಷ್ಯರಾಜನ ಬಳಿಗೆ ಹೋಗಿ ಆತನ ಹೆಂಡತಿಯು ಧರಿಸುವ ಕುಂಡಲ ಗಳನ್ನು ಇಂದಿನಿಂದ ನಾಲ್ಕನೆಯದಿವಸ ತಕ್ಕೊಂಡು ಬಾ. ಅಂದು "ಪುಣ್ಯಕ"ವೆಂಬ ಹೆಸರಿನ ವ್ರತನಿರುವದು. ಆಗ ನಾನು ಕುಂಡಲಗಳ ನ್ನಿಟ್ಟುಕೊಂಡು ಬ್ರಾಹ್ಮಣರಿಗೆ ಊಟಕ್ಕೆ ಬಡಿಸುವೆನು. ನೀನು ಈ ಕಾರ್ಯವನ್ನು ಮಾಡಿದರೆ, ನಿನ್ನ ಕಲ್ಯಾಣವಾಗುವದು, ಇಲ್ಲದಿದ್ದರೆ ಕಲ್ಯಾಣದ ಆಶೆಯನ್ನೇ ಬಿಟ್ಟುಬಿಡು" ಎಂದು ಹೇಳಿದಳು. ಗುರುಪತ್ನಿಯ

ಮಾತುಗಳನ್ನು ಕೇಳಿದಕೂಡಲೆ ಉತ್ತಂಕನು ಪೌಷ್ಯರಾಜನ ಬಳಿಗೆ ಹೊರಟನು. ಹಾದಿಯಲ್ಲಿ ಒಬ್ಬ ಎತ್ತುಹತ್ತಿದ ಮನುಷ್ಯನು ಉತ್ತಂಕನನ್ನು ಕಂಡು, ಆತನಿಗೆ ತನ್ನ ಎತ್ತಿನ ಸಗಣಿಯನ್ನು ತಿನ್ನಹೇಳಿದನು. ಅದಕ್ಕೆ ಉತ್ತಂಕನು ಒಪ್ಪಿಕೊಳ್ಳದಿರಲು, ಆ ಮನುಷ್ಯನು ಉತ್ತಂಕನಿಗೆ—"ನಿನ್ನ ಗುರುವೂ ಹಿಂದಕ್ಕೆ ಈ ಸಗಣಿಯನ್ನು ತಿಂದಿರುವನು" ಎಂದು ಹೇಳಿದ್ದರಿಂದ, ಉತ್ತಂಕನು ಅದನ್ನು ಸ್ವೀಕರಿಸಿದನು. ಬಳಿಕ ಉತ್ತಂಕನು ನಿಂತುಕೊಂಡೇ ಅವಸರದಿಂದ ಬಾಯಿ ತೊಳೆದುಕೊಂಡು, ಮುಂಚಿತ್ವಾಗಿ ಪೌಷ್ಯರಾಜನ ಬಳಿಗೆ ಹೋಗಿ ಆತನನ್ನು ಆಶೀರ್ವಾದದಿಂದ ಅಭಿನಂದಿಸಿದನು. ಆಗ ಪೌಷ್ಯರಾಜನು ಉತ್ತಂಕನನ್ನು ನಮಸ್ಕರಿಸಿ ವಿನಯದಿಂದ

ಪೌಷ್ಯರಾಜ—ಭಗವನ್, ಈ ಸೇವಕನಿಗೆ ಅಪ್ಪಣೆಯೇನು ?

ಉತ್ತಂಕ—ರಾಜಾ, ಗುರುದಕ್ಷಿಣೆಗಾಗಿ ನಾನು ನಿನ್ನ ಹೆಂಡತಿಯ ಕುಂಡಲಗಳನ್ನು ಕೇಳಲಿಕ್ಕೆ ಬಂದಿದ್ದೇನೆ, ಅವನ್ನು ನೀನು ನನಗೆ ಕೊಡಬೇಕು.

ಪೌಷ್ಯರಾಜ—ಎಲೈ ಬ್ರಾಹ್ಮಣಾ, ನೀನು ಅಂತಃಪುರಕ್ಕೆ ಹೋಗಿ ನನ್ನ ಹೆಂಡತಿಯನ್ನು ಕೇಳು.

ಆಮೇಲೆ ಉತ್ತಂಕನು ಅಂತಃಪುರಕ್ಕೆ ಹೋದನು ; ಆದರೆ ಪೌಷ್ಯರಾಜನ ಹೆಂಡತಿಯು ಅಲ್ಲಿ ಆತನ ಕಣ್ಣಿಗೆ ಬೀಳಲಿಲ್ಲ. ಕೂಡಲೆ ಉತ್ತಂಕನು ಪೌಷ್ಯರಾಜನ ಬಳಿಗೆ ಬಂದು

ಉತ್ತಂಕ—ರಾಜಾ, ಹೀಗೆ ನೀನು ನನ್ನನ್ನು ಮೋಸಗೊಳಿಸುವದು ಸರಿಯಲ್ಲ ; ನಾನು ನಿನ್ನ ಹೆಂಡತಿಯನ್ನು ಅಂತಃಪುರದಲ್ಲಿ ಕಾಣಲಿಲ್ಲ.

ಪೌಷ್ಯರಾಜ (ಒಂದುಕ್ಷಣ ವಿಚಾರಿಸಿ)—ಬ್ರಾಹ್ಮಣಾ, ನಿನ್ನಲ್ಲಿ ನಿಶ್ಚಯವಾಗಿ ಉಚ್ಛಿಷ್ಟದೋಷವಿರುವದು, ನೀನು ವಿಚಾರಮಾಡಿ ನೋಡು. ಉಚ್ಛಿಷ್ಟದೋಷದಿಂದ ಅಪವಿತ್ರರಾದವರ ಕಣ್ಣಿಗೆ ಆ ಪತಿವ್ರತೆಯು ಸರ್ವಥಾ ಬೀಳುವದಿಲ್ಲ.

ಉತ್ತಂಕ (ಒಂದುಕ್ಷಣ ವಿಚಾರಿಸಿ)—ರಾಜಾ, ನಾನು ಹಾದಿಯಲ್ಲಿ ನಿಂತನಿಂತಿರುತ್ತ ಬಾಯಿ ತೊಳಕೊಂಡದ್ದು ನಿಜವು.

ಪೌಷ್ಯರಾಜ—ಅಂದಬಳಿಕ ನಿನ್ನಲ್ಲಿ ಉಚ್ಛಿಷ್ಟದೋಷವು ಉಂಟಾಗಿರುವಲ್ಲಿ ಸಂಶಯವಿಲ್ಲ. ನಿಂತುಕೊಂಡು ಅಥವಾ ಓಡುತ್ತ ಬಾಯಿತೊಳಕೊಂಡದ್ದು, ತೊಳೆದುಕೊಂಡೂ ತೊಳೆದುಕೊಳ್ಳಲಿದ್ದಹಾಗೆಯೇ ಸರಿ.

ಉತ್ತಂಕನು ಪೌಷ್ಯರಾಜನ ಮಾತನ್ನು ಒಪ್ಪಿಕೊಂಡು, ಪೂರ್ವಾಭಿಮುಖವಾಗಿ ಕುಳಿತುಕೊಂಡು ಯಥಾವಿಧಿ ಮುಖಪ್ರಕ್ಷಾಲನಾದಿಗಳನ್ನು ಮಾಡಿಕೊಂಡು ಶುಚಿಯಾಗಿ ಪುನಃ ಪೌಷ್ಯರಾಜನ ಹೆಂಡತಿಯ ಬಳಿಗೆ ಹೋದನು. ಆಗ ಆ ಪತಿವ್ರತೆಯು ಉತ್ತಂಕನನ್ನು ನೋಡಿದಕೂಡಲೆ ಎದ್ದುನಿಂತು ನಮಸ್ಕರಿಸಿ-"ಏನು ಅಪ್ಪಣೆಯಾಗುವದು" ಎಂದು ಕೇಳಿದಳು. ಆಗ ಉತ್ತಂಕನು-"ಎಲೈ ಸುಶೀಲೆಯೇ, ಗುರುದಕ್ಷಿಣೆಯ ಸಲುವಾಗಿ ನಾನು ನಿನ್ನ ಕಿವಿಯೊಳಗಿನ ಕುಂಡಲಗಳನ್ನು ಕೇಳುವದಕ್ಕಾಗಿ ಬಂದಿದ್ದೇನೆ, ಅವನ್ನು ನೀನು ನನಗೆ ಕೊಡಬೇಕು" ಎಂದು ಕೇಳಿದನು. ಉತ್ತಂಕನ ಗುರುನಿಷ್ಠೆಯನ್ನು ನೋಡಿ ಆ ರಾಜಪತ್ನಿಯು ಸಂತುಷ್ಟಳಾದಳು. ಇಂಥ ಸತ್ಪಾತ್ರಬ್ರಾಹ್ಮಣನ ಕೇಳಿಕೆಯ ಅನಾದರಮಾಡುವದು ಪ್ರಶಸ್ತವಲ್ಲವೆಂದು ತಿಳಿದು, ಆಕೆಯು ತನ್ನ ಕುಂಡಲಗಳನ್ನು ತೆಗೆದು ಉತ್ತಂಕನ ಕೈಯಲ್ಲಿ ಕೊಟ್ಟು-"ಎಲೈ ಬ್ರಾಹ್ಮಣಾ, ಈ ಕುಂಡಲಗಳನ್ನು ಹರಣಮಾಡುವದಕ್ಕಾಗಿ ನಾಗರಾಜನಾದ ತಕ್ಷಕನು ಬಹುದಿವಸದಿಂದ ಹೊಂಚುಹಾಕಿ ಕುಳಿತಿರುವನು. ನನಗೆ ಹಲವುಸಾರೆ ಈ ಕುಂಡಲಗಳನ್ನು ಕೇಳಿ ಆತನು ನಿರಾಶೆಹೊಂದಿರುವನು; ಆದ್ದರಿಂದ ನೀನು ಹಾದಿಯಲ್ಲಿ ಬಹು ಜೋಕೆ" ಎಂದು ಹೇಳಲು, ಉತ್ತಂಕನು ಸಂತೋಷಪಟ್ಟು-"ರಾಜಸ್ತ್ರೀಯೇ, ಅದರ ಚಿಂತೆ ನಿನಗೆ ಬೇಡ. ನನ್ನಗೊಡವಿಗೆ ಬರುವದಕ್ಕೆ ಆ ನಾಗರಾಜನಿಗೆ ಧೈರ್ಯವಾಗಲಾರದು.

ಈ ಮೇರೆಗೆ ನುಡಿದು ಉತ್ತಂಕನು ಪೌಷ್ಯರಾಜನ ಬಳಿಗೆ ಹೋಗಿ, ಗಂಡಹೆಂಡಿರ ಔದಾರ್ಯಕ್ಕಾಗಿ ಆತನನ್ನು ಅಭಿನಂದಿಸಿ, ಗುರುಗೃಹಕ್ಕೆ ಹೋಗಲು ಅನುಮತಿಯನ್ನು ಕೇಳಿಕೊಂಡನು. ಆಗ ಪೌಷ್ಯರಾಜನು—"ಭಗವನ್, ನಿಮ್ಮಂಥ ಸತ್ಪಾತ್ರರ ಯೋಗವಾಗುವದೇ ಅಪರೂಪವು; ಆದ್ದರಿಂದ ಈದಿನ ಪಿತೃಶ್ರಾದ್ಧವನ್ನು ಮಾಡುವೆನು, ಕ್ಷಣವನ್ನು ಸ್ವೀಕರಿಸಬೇಕು" ಎಂದು ಪ್ರಾರ್ಥಿಸಿದನು. ಅದಕ್ಕೆ ಉತ್ತಂಕನು ಒಡಂಬಟ್ಟು,

"ನನಗೆ ಬಹಳ ಅವಸರವಿರುವದರಿಂದ ಇದ್ದದ್ದನ್ನು ಕೊಡು" ಎಂದು ಕೇಳಿಕೊಂಡನು. ಅದರಂತೆಯೇ ಅರಸನು ಮಾಡಲು, ಆತನು ಕೊಟ್ಟ ಅನ್ನವು ಆರಿಹೋಗಿದ್ದು, ಕೂದಲು ಮಿಶ್ರವಾಗಿತ್ತು. ಆಗ ಉತ್ತಂಕನು– "ರಾಜಾ, ನೀನು ಅಪವಿತ್ರಾನ್ನವನ್ನು ಬಡಿಸಿರುವದರಿಂದ ನೀನು ಕುರುಡ ನಾಗು" ಎಂದು ಶಾಪವನ್ನು ಕೊಟ್ಟನು. ಆಗ ಪೌಷ್ಯರಾಜನು— "ಬ್ರಾಹ್ಮಣಾ, ಈ ಅನ್ನವು ಪವಿತ್ರವಾಗಿದ್ದು, ನನಗೆ ವ್ಯರ್ಥವಾಗಿ ನೀನು ಶಾಪವನ್ನು ಕೊಟ್ಟೆ; ಆದ್ದರಿಂದ ನೀನು ಸಂತತಿಹೀನನಾಗು" ಎಂದು ರಾಜನು ತಿರುಗಿ ಶಾಪವನ್ನು ಕೊಟ್ಟನು. ಬಳಿಕ ಉತ್ತಂಕನ ಹೇಳಿಕೆ ಯಂತೆ ಪೌಷ್ಯರಾಜನು ಅನ್ನವನ್ನು ಪರೀಕ್ಷಿಸಲು, ಅದರಲ್ಲಿ ಕೂದಲು ಕಂಡಿತು. ಆಗ ಪೌಷ್ಯರಾಜನು ಅನ್ನದ ಅಪವಿತ್ರತೆಯನ್ನು ಒಪ್ಪಿ ಉತ್ತಂಕನಿಗೆ–"ನನ್ನ ಹೆಂಡತಿಯು ಕೂದಲು ಬಿಟ್ಟುಕೊಂಡು ಅಡಿಗೆ ಮಾಡಿದ್ದರಿಂದ ಪ್ರಮಾದದಮೂಲಕ ಹೀಗೆ ದೋಷವಾಗಿದೆ; ಕಾರಣ ದಯವಿಟ್ಟು ಶಾಪನಿವೃತ್ತಿಮಾಡಬೇಕೆಂ"ದು ಪ್ರಾರ್ಥಿಸಿದನು. ಅರಸನ ದೀನಮುದ್ರೆಯನ್ನು ನೋಡಿ ಉತ್ತಂಕನ ಕೋಪವು ಶಾಂತವಾಯಿತು. ಬಳಿಕ ಆತನು ರಾಜನನ್ನು ಕುರಿತು–"ರಾಜಾ, ನನ್ನ ಮಾತು ಸುಳ್ಳಾಗ ಲಾರದೆಂಬದು ನಿಜವು; ಆದರೆ ನೀನು ಕುರುಡನಾಗಿ ಬೇಗನೆ ನೆಟ್ಟ ಗಾಗುವೆ. ಈಗ ನೀನು ನನಗೆ ಕೊಟ್ಟಿರುವ ಶಾಪವನ್ನಾದರೂ ಇದರಂತೆ ತಿರುಗಿ ತೆಗೆದುಕೋ" ಎಂದು ಹೇಳಿದನು.

ಉತ್ತಂಕನ ಈ ಮಾತುಗಳನ್ನು ಕೇಳಿ ಪೌಷ್ಯರಾಜನು–"ಬ್ರಾಹ್ಮಣಾ, ನಾನು ನನ್ನ ಶಾಪವನ್ನು ತಿರುಗಿ ತಕ್ಕೊಳ್ಳಲು ಸಮರ್ಥನಲ್ಲವು; ನನ್ನ ಸಿಟ್ಟು ಇನ್ನೂ ಶಾಂತವಾಗಿರುವದಿಲ್ಲ. ಬ್ರಾಹ್ಮಣರ ಹೃದಯವು ಬೆಣ್ಣೆ ಯಂತೆ ಮೃದುವಿದ್ದು, ಅವರ ಮಾತು ತೀಕ್ಷ್ಣಶಸ್ತ್ರದಂತೆ ಕಠೋರವಿರುತ್ತ ದೆಂಬದೂ, ಕ್ಷತ್ರಿಯರದು ಇದರ ವಿರುದ್ಧ ವಿರುತ್ತದೆಂಬದೂ ನಿನಗೆ ಗೊತ್ತಿ ದ್ದಂತೆ ತೋರುವದಿಲ್ಲ. ಕ್ಷತ್ರಿಯರ ಮಾತು ಮಿದುವು, ಹೃದಯವು ತೀಕ್ಷ್ಣಶಸ್ತ್ರದಂತೆ ಕಠೋರವು; ಆದ್ದರಿಂದ ನಾನು ಒಮ್ಮೆ ಶಾಪಕೊಟ್ಟದ್ದು ಕೊಟ್ಟುಬಿಟ್ಟೆನು. ಅದನ್ನು ಉಪಸಂಹರಿಸಲು ನಾನು ಸರ್ವಥಾ ಸಮರ್ಥ ನಲ್ಲವು" ಅನ್ನಲು, ಉತ್ತಂಕನು–"ರಾಜಾ, ವಾಸ್ತವವಾಗಿ ಅವಿಚಾರ

ದಿಂದ ನೀನು ಶಾಪವನ್ನು ಕೊಟ್ಟಿರುವದರಿಂದ, ನಿನ್ನ ಆ ಶಾಪವು ನನ್ನನ್ನು ಬಾಧಿಸಲಾರದು. ಇರಲಿ, ಇನ್ನು ನಾನು ಹೋಗಿಬರುವೆನು" ಎಂದು ಹೇಳಿ ಹಾದಿಯುಹಿಡಿದನು. ಆ ಬ್ರಾಹ್ಮಣನು ಅವಸರದಿಂದ ಹೋಗು ತ್ತಿರುವಾಗ ಹಾದಿಯಲ್ಲಿ ಅವನಿಗೆ ಒಬ್ಬ ಪಾಖಂಡಿ ಬೌದ್ಧಭಿಕ್ಷುವು ಕಾಣಿಸಿ ಕೊಂಡನು. ಆ ಭಿಕ್ಷುವು ಒಮ್ಮೆ ಕಾಣುವನು, ಒಮ್ಮೆ ಗುಪ್ತನಾಗುವನು. ಆದರೆ ಆತನು ಉತ್ತಂಕನ ಬೆನ್ನುಬಿಡಲಿಲ್ಲ. ಮುಂದೆ ಉತ್ತಂಕನು ಜಲಾಶಯಕ್ಕೆ ಹೋಗಿ ಶುಚಿರ್ಭೂತನಾಗಿ ನೀರು ಕುಡಿಯುತ್ತಿರಲು, ಇತ್ತ ಆ ಬೌದ್ಧಭಿಕ್ಷುವು ಕುಂಡಲಗಳನ್ನು ತಕ್ಕೊಂಡು ಓಡಿದನು; ಆದರೆ ಉತ್ತಂಕನೂ ಆತನ ಬೆನ್ನುಬಿಡದೆ ತೀವ್ರ ಓಡಿಹೋಗಿ ಅವನನ್ನು ಹಿಡಿ ದನು. ಅಷ್ಟರಲ್ಲಿ ಆ ಬೌದ್ಧಭಿಕ್ಷು-ವೇಷಧಾರಿಯಾದ ತಕ್ಷಕನು ನಿಜರೂಪ ವನ್ನು ತಾಳಿ, ಒಂದು ಹೋರಿನ ದ್ವಾರದಿಂದ ಹೋಗಿ ನಾಗಲೋಕವನ್ನು ಸೇರಿದನು.

ಇದನ್ನು ನೋಡಿ ಉತ್ತಂಕನಿಗೆ ಪೌಷ್ಯರಾಜನ ಪತ್ನಿಯ ಮಾತಿನ ನೆನಪಾಯಿತು. ಆಗ ಆಕೆಗೆ ತಾನು ಕೊಟ್ಟಿದ್ದ ಉತ್ತರವನ್ನೂ ಆತನು ನೆನಿಸಿ, ಗುರುಸ್ಮರಣಮಾಡಿ ನಾಗಲೋಕಕ್ಕೆಹೋಗಲಿಚ್ಛಿಸಿ, ಒಂದು ಕಟ್ಟಿಗೆ ಯಿಂದ ಭೂಮಿಯನ್ನು ಅಗಿಯಹತ್ತಿದನು; ಆದರೆ ಇದರಿಂದ ನಾಗ ಲೋಕಕ್ಕೆ ಹಾದಿಯು ಹೇಗಾಗಬೇಕು? ಬ್ರಾಹ್ಮಣನ ಈ ಕೃತಿಯನ್ನು ನೋಡಿ ದೇವೇಂದ್ರನು ಕನಿಕರಪಟ್ಟು ತನ್ನ ವಜ್ರವನ್ನು ಬ್ರಾಹ್ಮಣನ ಸಹಾಯಕ್ಕಾಗಿ ಕಳಿಸಿದನು. ಆಗ ಆ ವಜ್ರವು ಬ್ರಾಹ್ಮಣನ ಕೋಲಲ್ಲಿ ಪ್ರವೇಶಿಸಲು, ನಾಗಲೋಕಕ್ಕೆ ಪ್ರಶಸ್ತಮಾರ್ಗ ಉಂಟಾಯಿತು. ಆಗ ಉತ್ತಂಕನು ನಾಗಲೋಕಕ್ಕೆ ಹೋಗಿ ಯಾವತ್ತು ನಾಗರನ್ನೂ, ಸರ್ಪ ರಾಜನಾದ ತಕ್ಷಕನನ್ನೂ ಬೇರೆ ಬೇರೆಯಾಗಿ ಸ್ತುತಿಸಿದನು; ಆದರೂ ಕುಂಡಲಗಳು ಆತನಿಗೆ ದೊರೆಯಲಿಲ್ಲ. ಅಷ್ಟರಲ್ಲಿ ಒಬ್ಬ ಪುರುಷನು ಉತ್ತಂಕನಿಗೆ ಒಂದು ಕುದುರೆಯನ್ನು ತೋರಿಸಿ-"ಈ ಕುದುರೆಯ ಅಪಾನ ದ್ವಾರದಲ್ಲಿ ಊದಹತ್ತು" ಎಂದು ಹೇಳಲು, ಉತ್ತಂಕನು ಹಾಗೆ ಮಾಡು ವಾಗ, ಹೊಗೆಯೂ, ಅಗ್ನಿಕಣಗಳೂ ನಾಗಲೋಕವನ್ನು ತುಂಬಿದವು. ಆಗ ತಕ್ಷಕನು ಉಪಾಯಗಾಣದೆ ಕುಂಡಲಗಳನ್ನು ಉತ್ತಂಕನಿಗೆ



ಉತ್ತಂಕನು ಗುರುಪತ್ನಿಗೆ ಕುಂಡಲಗಳನ್ನು ತಂದುಕೊಟ್ಟದ್ದು.

ಕೊಟ್ಟನು; ಆದರೆ ಗುರುಪತ್ನಿಯ ವ್ರತವು ಅಂದೇ ಆಗತಕ್ಕದ್ದಿದ್ದು, ತಾನು ಇನ್ನು ಹೇಗೆ ಹೋದೇನೆಂದು ಉತ್ತಂಕನು ಯೋಚಿಸತೊಡಗಿದನು. ಆಗ ಆ ಪುರುಷನು ಉತ್ತಂಕನಿಗೆ-"ಉತ್ತಂಕಾ, ಈ ಕುದುರೆಯನ್ನು ಹತ್ತು; ಕ್ಷಣದಲ್ಲಿ ನೀನು ನಿನ್ನ ಗುರುಪತ್ನಿಯ ಬಳಿಗೆ ಹೋಗುವೆ" ಎಂದು ಹೇಳಿದನು. ಉತ್ತಂಕನು ಅದರಂತೆ ಮಾಡಲು, ಗುರುಪತ್ನಿಯು ಹೆಳಲು ಹಾಕಿಕೊಳ್ಳುತ್ತಿರುವ ಸಮಯಕ್ಕೆ ಆತನು ಕುಂಡಲಗಳನ್ನು ತಕ್ಕೊಂಡು ಹೋಗಿ ಅವನ್ನು ಆಕೆಯಮುಂದೆ ಇಟ್ಟು ನಮಸ್ಕರಿಸಿದನು. ಆಗ ಗುರುಪತ್ನಿಯು-"ಉತ್ತಂಕಾ, ನೀನು ಒಳ್ಳೆಯಹೊತ್ತಿಗೆ ಬಂದೆ, ನಾನು ನಿನ್ನ ಸ್ವಾಗತಮಾಡುವೆನು. ಬಾಳಾ, ನೀನು ಹೊತ್ತಿಗೆ ಬಾರದಿದ್ದರೆ ನಿನ್ನನ್ನು ನಾನು ವ್ಯರ್ಥವಾಗಿ ಶಪಿಸುತ್ತಿದ್ದೆನು; ಆದರೆ ನೀನು ಮಹಾ ದೈವಶಾಲಿಯು! ನಿನಗೆ ಅಣಿಮಾದಿಕ ಸರ್ವಸಿದ್ಧಿಗಳೂ ಪ್ರಾಪ್ತವಾಗಿ, ನಿನ್ನ ದೇಹದ ಸಾರ್ಥಕ್ಯವಾಗುವದು" ಎಂದು ಹೇಳಿದಳು. ಬಳಿಕ ಉತ್ತಂಕನು ವೇದಗುರುಗಳಕಡೆಗೆ ಹೋದನು. ಅವರು ಯಾವತ್ತು ವೃತ್ತಾಂತವನ್ನು ಕೇಳಿ-"ಉತ್ತಂಕಾ, ನಿನಗೆ ಹಾದಿಯಲ್ಲಿ ಸಗಣಿಯನ್ನು ತಿನ್ನಿಸಿದವನೂ, ಕುದುರೆಯ ಅಪಾನದ್ವಾರವನ್ನು ಊದಹೇಳಿದವನೂ, ಕುದುರೆಯ ಹತ್ತ ಹೇಳಿದವನೂ ಇಂದ್ರನು. ಆತನು ನನ್ನ ಮಿತ್ರನಾಗಿರುವದರಿಂದ ನಿನ್ನ ವಿಷಯವಾಗಿ ಕನಿಕರಪಟ್ಟು, ನಿನ್ನಿಂದ ಎತ್ತಿನ ಸಗಣಿಯನ್ನು ತಿನಿಸಿದನು. ಆ ಸಗಣಿಯು ಅಮೃತವು; ಕುದುರೆಯು ಅಗ್ನಿಯು. ಅಮೃತಪಾನ ಮಾಡಿದ್ದರಿಂದಲೇ ನೀನು ನಾಗಲೋಕದಿಂದ ಪಾರಾಗಿ ಬಂದೆ. ಇಂದ್ರನು ಪ್ರತ್ಯಕ್ಷ ಜ್ಞಾನಮೂರ್ತಿ ಈಶ್ವರನೆಂತಲೂ, ಅಗ್ನಿಯು ಮಹಾ ಭೋಕ್ತೃವಾದ ಜೀವನೆಂತಲೂ ತಿಳಿದುಕೊಳ್ಳಲು ಬಾಧೆಯಿಲ್ಲ. ಬಾಲಕಾ, ಇನ್ನು ನೀನು ಹೋಗು. ನಿನಗೆ ನನ್ನ ಆಜ್ಞೆಯಿರುವದು. ಎಲ್ಲಬಗೆಯಿಂದಲೂ ನಿನ್ನ ಕಲ್ಯಾಣವಾಗುವದು.

ಉತ್ತಂಕನು ಗುರುಗಳ ಅಪ್ಪಣೆಯಂತೆ ಹೊರಟನು; ಆದರೆ ತಕ್ಷಕನ ಸೇಡುತೀರಿಸಿಕೊಳ್ಳದೆ ಆತನಿಗೆ ಸಮಾಧಾನವಾಗಲೊಲ್ಲದು. ಆಗ ಆತನು ನೆಟ್ಟಗೆ ಹಸ್ತಿನಾವತಿಗೆ ಹೋದನು. ಅಲ್ಲಿ ಜನಮೇಜಯರಾಜನು ಸಭೆಯಲ್ಲಿ ಮಂತ್ರಿಮಂಡಲದೊಡನೆ ಕುಳಿತಿದ್ದನು. ಉತ್ತಂಕಬ್ರಾಹ್ಮ

ಣನು ಮುಂದಕ್ಕೆ ಹೋಗಿ ಮೊದಲು ಅರಸನಿಗೆ ವಿಜಯಸೂಚಕವಾದ ಸಶಾಸ್ತ್ರ ಆಶೀರ್ವಾದಮಾಡಿದನು. ಬಳಿಕ ಅರಸನ ಮನಸ್ಸು ಸುಪ್ರಸನ್ನ ವಾಗಿರುವ ಸಂಧಿಯನ್ನು ನೋಡಿ ಆತನು—"ಅರಸನೇ, ನಿನ್ನ ನಿಜವಾದ ಕರ್ತವ್ಯವು ಬೇರೆಯಿದ್ದು, ಅಜ್ಞಾನಿಯಂತೆ ನೀನು ಯಾವದೋ ಒಂದು ಕೆಲಸದಲ್ಲಿ ತೊಡಗಿರುವೆಯಲ್ಲ, ಇದೇನು ?" ಎಂದು ಕೇಳಿದನು. ಆಗ ಅರಸನು ಮೊದಲು ಉತ್ತಂಕನನ್ನು ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ, ಆಮೇಲೆ ಒಳ್ಳೆಯ ವಿನಯದಿಂದ—"ವಿಪ್ರೋತ್ತಮನೇ, ನಾನು ಯಥಾ ನ್ಯಾಯ ಪ್ರಜಾಪಾಲನ ಮಾಡುತ್ತ ಕ್ಷಾತ್ರಧರ್ಮವನ್ನು ಪರಿಪಾಲಿಸುತ್ತಿ ರುವೆನು ; ಆದರೂ ಯಾವ ಕಾರ್ಯದ ಸಲುವಾಗಿ ತಾವು ಬಂದಿರುವಿರೆಂಬ ದನ್ನು ತಿಳಿಸಿದರೆ, ಅದನ್ನು ಮಾಡಲು ನಾನು ಸಿದ್ಧನಾಗಿರುವೆನು" ಎಂದು ಹೇಳಿದನು. ಅದಕ್ಕೆ ಉತ್ತಂಕನು ಆ ಧೀರೋದಾತ್ತನಾದ ಭೂಪತಿ ಯನ್ನು ಕುರಿತು—"ಜನಮೇಜಯಾ, ನಾನು ಹೇಳುವ ಕಾರ್ಯವು ನಿನ್ನದೇ ಇರುವದು ; ಆದ್ದರಿಂದ ನೀನು ಅದನ್ನು ಮೊದಲು ಮಾಡಬೇಕು. ನಿನ್ನ ತಂದೆಯಾದ ಪರೀಕ್ಷಿತಮಹಾರಾಜನ ಪ್ರಾಣಹರಣಮಾಡಿದ ತಕ್ಷಕನ ಸೇಡು ತೀರಿಸಿಕೊಳ್ಳುವದು ನಿನ್ನ ಕರ್ತವ್ಯವಾಗಿರುವದು. ದುಷ್ಟಶತ್ರು ವಿನ ಉಪೇಕ್ಷೆಮಾಡುವದು ಅತ್ಯಂತ ಗರ್ಹಣೀಯವೆಂದು ತಿಳಿಯಬೇಕು. ರಾಜಾ, ಏನು ಹೇಳಬೇಕು ? ಸಿಡಿಲುಬಡಿದ ಗಿಡವು ನೆಲಕ್ಕೆ ಬೀಳುವಂತೆ, ತಕ್ಷಕನು ಕಚ್ಚಿದಕೂಡಲೆ ನಿರಪರಾಧಿಯಾದ ನಿನ್ನ ತಂದೆ ಪರೀಕ್ಷಿತನು ದಪ್ಪನೆ ನೆಲಕ್ಕೆ ಬಿದ್ದನು. ಆ ದುಷ್ಟತಕ್ಷಕನು ಮಾಡಿದ ಇನ್ನೂ ಒಂದು ದುರಾಚಾರವನ್ನು ಹೇಳುವೆನು ಕೇಳು. ದೇವತೆಗಳಿಗೆ ಸಮಾನನಾದ ಆ ಪರೀಕ್ಷಿತರಾಜನನ್ನು ಬದುಕಿಸುವದಕ್ಕಾಗಿ ಕಶ್ಯಪಧನ್ವಂತರಿಯು ಬರು ತ್ತಿರಲು, ಆ ದುಷ್ಟ ತಕ್ಷಕನು ದುಡ್ಡುಕೊಟ್ಟು ಆ ಬ್ರಾಹ್ಮಣನನ್ನು ಹಿಂದಕ್ಕೆ ಕಳಿಸಿದನು; ಆದ್ದರಿಂದ ಎಲೈ ನರಾಧಿಪಾ, ಈಗ ನೀನು ಸರ್ಪ ಸತ್ರವನ್ನು ಮಾಡು. ಅದರಲ್ಲಿ ಪ್ರಜ್ವಲಿತ ಅಗ್ನಿಯೊಳಗೆ ದುಷ್ಟ ತಕ್ಷಕನ ಆಹುತಿಯನ್ನು ಕೊಡು ; ಇದರಿಂದ ನೀನು ತಂದೆಯ ಸೇಡುತೀರಿಸಿಕೊಂಡ ಹಾಗಾಗುವದಲ್ಲದೆ, ನನ್ನ ಪ್ರೀತಿಯ ಕಾರ್ಯವನ್ನು ಮಾಡಿದ ಹಾಗಾಗು ತ್ತದೆ. ಆ ಘಾತಕಿಯಾದ ತಕ್ಷಕನು ನನ್ನ ಕುಂಡಲಗಳನ್ನು ಕದ್ದು ಬಹಳ

ತಾಪಕೊಟ್ಟಿರುವನು "ಎಂದು ಹೇಳಿದನು. ಉತ್ತಂಕನ ಈ ಮಾತುಗಳನ್ನು ಕೇಳಿ ಜನಮೇಜಯನು ಸಿಟ್ಟಿನಿಂದ ಉರಿಯುತ್ತ, ಉತ್ತಂಕನ ಸಮಕ್ಷ ತನ್ನ ಮಂತ್ರಿಗಳಿಗೆ ಪಿತೃಮರಣದ ಸಾದ್ಯಂತ ವರ್ತಮಾನವನ್ನು ವಿಚಾರಿಸಿದನು.

## ಶ್ರೀ ಶೇಷಸದ್ಗುರು-ಸೂಕ್ತಿರೂಪ

## ರಹಸ್ಯಗಳು

**ಪೂರ್ವಾಪರಸಂಬಂಧ** — ಅನುಕ್ರಮಣಿಕೆಯನ್ನು ಹೇಳುವ ಹಿಂದಿನ ಎರಡುಪರ್ವಗಳಾದ ಬಳಿಕ, ಭಾರತದ ಕಥೆಯನ್ನು ಆರಂಭಿಸಬೇಕಾಗಿತ್ತು ; ಆದರೆ ಹಾಗೆಮಾಡದೆ, ಈ ಮೊದಲು ಪರ್ವಸಂಗ್ರಹಪರ್ವದಲ್ಲಿಯೇ ೩೩ನೇ ಪುಟದಲ್ಲಿ ಹೇಳಿರುವಂತೆ, ಧರ್ಮಿಷ್ಠ ಅರಸರ ಘನವಾಡಯೋಗ್ಯತೆಯನ್ನೂ, ಶ್ರೇಷ್ಠಗುರುಗಳಮಹಿಮೆಯನ್ನೂ, ಶಿಷ್ಯಸೇವೆಯ ಪಡಿಕಟ್ಟನ್ನೂ, ಅದರ ಶ್ರೇಷ್ಠಫಲವನ್ನೂ ತೋರಿಸುವದಕ್ಕಾಗಿ, ಭಾರತಕಥೆಗೆ ಸಂಬಂಧವಿಲ್ಲದ ಧೌಮ್ಯಋಷಿಗಳ ವೃತ್ತಾಂತವನ್ನೂ, ಆರುಣಿಯೇ ಮೊದಲಾದ ಸಚ್ಛಿಷ್ಯರ ಸೇವೆಯ ಪ್ರಕಾರವನ್ನೂ, ಆ ಶಿಷ್ಯರಿಗೆ ದೊರೆತ ಶ್ರೇಷ್ಠ ಫಲವನ್ನೂ, ಪೌಷ್ಯರಾಜನ ಕಥೆಯನ್ನೂ ಈ ಪರ್ವದಲ್ಲಿ ಹೇಳಿರುವರು ; ಅವುಗಳಲ್ಲಿ ಪೌಷ್ಯರಾಜನ ಕಥೆಯೇ ಮುಖ್ಯವಾಗಿರುವದರಿಂದ, ಈ ಉಪಪರ್ವಕ್ಕೆ ಪೌಷ್ಯಪರ್ವವೆಂಬ ಹೆಸರು ಬಂದಿರುತ್ತದೆ. ಈ ಉಪಪರ್ವದಲ್ಲಿ ಮುಂದೆ ಬರೆದಿರುವ ರಹಸ್ಯಗಳು ಪರಿಸ್ಫುಟವಾಗಿರುವವು.

**(೧) ಅಸ್ಪೃಶ್ಯತೆಯು ಅಪರಿಹಾರ್ಯ ಧಾರ್ಮಿಕ ತತ್ವವಾಗಿರುವದು** – ಅಸ್ಪೃಶ್ಯತೆಯೆಂದರೆ ಮುಟ್ಟದೆ ಇರೋಣವೆಂತಲೂ, ಸ್ಪೃಶ್ಯತೆಯೆಂದರೆ ಮುಟ್ಟೋಣವೆಂತಲೂ ಸಾಧಾರಣವಾಗಿ ಹೇಳಬಹುದು. ಜಗತ್ತಿನೊಳಗಿನ ಪ್ರತಿ ಒಂದು ಧರ್ಮದಲ್ಲಿ ವಿಧಿ-ನಿಷೇಧಗಳ, ಅಂದರೆ ಗ್ರಾಹ್ಯಾ-ಗ್ರಾಹ್ಯಗಳ ನಿಯಮಗಳು ಹೇಳಿರುವವು. ಗ್ರಾಹ್ಯಗಳು ಸ್ಪೃಶ್ಯಗಳು, ಅಗ್ರಾಹ್ಯಗಳು ಅಸ್ಪೃಶ್ಯಗಳು; ಆದ್ದರಿಂದ ಅಸ್ಪೃಶ್ಯತೆಯ ತತ್ವವು ಎಲ್ಲಧರ್ಮಗಳಿಗೂ ಸಮ್ಮತವಾಗಿರುವದರಿಂದ, ಅದರ ನಿವಾರಣಮಾಡು

ವೆವೆನ್ನುವದು ವ್ಯಾವಹಾರಿಕ ಮಾತು; ಅದು ಶಾಸ್ತ್ರೀಯುವಲ್ಲ. ನಮ ವೈದಿಕ ಧರ್ಮದಲ್ಲಿ, ವಿಶೇಷವಾಗಿ ಚಾತುರ್ವರ್ಣ್ಯದವರಲ್ಲಿ, ಅದರಲ್ಲಿಯೂ ವಿಶೇಷವಾಗಿ ಬ್ರಾಹ್ಮಣಜಾತಿಯಲ್ಲಿ ಅಸ್ಪೃಶ್ಯತೆಯ ನಿಯಮಗಳು ವಿಶೇಷ ವಾಗಿ ಹೇಳಿರುವವು. ಈ ಅಸ್ಪೃಶ್ಯತೆಯ ತತ್ವವೇ ಮಡಿ ಮೈಲಿಗೆಯ ಮೂಲವು.

ನಾಯಿಯು ಅಸ್ಪೃಶ್ಯವೆಂದು ವೈದಿಕಧರ್ಮದಲ್ಲಿ ಹೇಳಿರುವದರಿಂದ, ಅದು ಯಜ್ಞದಂಥ ಪವಿತ್ರ ವೈದಿಕಕಾರ್ಯಗಳಲ್ಲಿ ಅಸ್ಪೃಶ್ಯವಾಗಿರುವದು. ಆದ್ದರಿಂದಲೇ ಅದು ಯಜ್ಞ ಮಂಡಪದಲ್ಲಿ ಬರಲು, ಮುಟ್ಟೀತೆಂಬ ಸಂಶ ಯದಿಂದ ಜನಮೇಜಯರಾಜನ ತಮ್ಮಂದಿರು ಅದನ್ನು ಹೊಡೆದರೆಂದು ಹೇಳಿದೆ; ಆದರೆ ಅಸ್ಪೃಶ್ಯವೆಂದ ಮಾತ್ರದಿಂದ ನಾಯಿಯನ್ನು ತಿರಸ್ಕರಿಸ ಬೇಕೆಂದಾಗಲಿ, ಅದಕ್ಕೆ ಕೇಡುಬಗೆಯಬೇಕೆಂದಾಗಲಿ, ಅದರ ಕಲ್ಯಾಣ ಮಾಡಬಾರದೆಂದಾಗಲಿ ಧರ್ಮವು ಹೇಳುವದಿಲ್ಲ. ಅಸ್ಪೃಶ್ಯತೆಯು ದೈಹಿಕ ಶುಚಿರ್ಭೂತತನಕ್ಕೆ ಸಂಬಂಧಿಸಿರುವದು; ವ್ಯಕ್ತಿದ್ವೇಷವು ಅದರ ಉದ್ದೇ ಶವಲ್ಲ. ಪ್ರಸಂಗ ವಿಶೇಷದಲ್ಲ ಒಂದು ಕುಟುಂಬದೊಳಗಿನವರೇ ಪರಸ್ಪರ ಅಸ್ಪೃಶ್ಯರಾಗುತ್ತಿರುವಾಗ, ಅದರಲ್ಲಿ ವ್ಯಕ್ತಿದ್ವೇಷದ ಉದ್ದೇಶವು ಹೇಗಿರ ಬೇಕು? ಆದ್ದರಿಂದಲೇ ದೇವಶುನಿಯು ಧರ್ಮತಃ ತಮ್ಮ ಜಾತಿಯ ಅಸ್ಪೃ ಶ್ಯತೆಯನ್ನು ಒಪ್ಪಿಕೊಂಡರೂ, ಯಾವ ಯಜ್ಞೀಯ ಪದಾರ್ಥಗಳನ್ನೂ ಮುಟ್ಟದೆಯಿದ್ದ ತನ್ನ ಮಗನನ್ನು ಜನಮೇಜಯನ ತಮ್ಮಂದಿರು ಹೊಡೆದ ತಪ್ಪಿಗಾಗಿ ಜನಮೇಜಯನನ್ನು ಶಪಿಸಿತು. ನಾಯಿಯಂಥ ತಿರ್ಯಗ್‌ಯೋ ನಿಯ ಪ್ರಾಣಿಗೂ ಧರ್ಮಾಧರ್ಮ ವಿಚಾರವಿರುವದು ಮನನಮಾಡತಕ್ಕಂ ತಹದಿರುವದು.

ವೈದಿಕ ಧರ್ಮರಕ್ಷಣದ ಮುಖ್ಯ ಜವಾಬದಾರಿಯು ಬ್ರಾಹ್ಮಣರದೆಂದು ತಿಳಿಯುತ್ತ ಬಂದಿರುವಾಗ, ಈಗಿನ ಕಾಲದಲ್ಲಿ ಬ್ರಾಹ್ಮಣ್ಯದ ನಾಶಕ್ಕಾಗಿ ಅಸ್ಪೃಶ್ಯತಾ ನಿವಾರಣದ ನೆವದಿಂದ ಬ್ರಾಹ್ಮಣರೇ ಯತ್ನಿಸುತ್ತಿರುವದು ದುಃಖದ ಸಂಗತಿಯು. ಧರ್ಮಶಾಸ್ತ್ರದಲ್ಲಿ ಅಸ್ಪೃಶ್ಯತೆಯ ಸಂಬಂಧದ ನೂರಾರು ಆಧಾರಗಳಿರುತ್ತಿದ್ದು, ಮೂಲತಃ ಅಂತಹ ಆಧಾರಗಳೇ ಇಲ್ಲ ವೆಂದುಬ್ರಾಹ್ಮಣರು ಕುಳಿತು ಕೆಲವರು ಹೇಳುವದು ಅಸತ್ಯದ, ಹಾಗು ಅಧ

ರ್ಮದ ಸಾಹಸವಾಗಿರುವದು; ಆದರೆ ಇಂತಹ ಧರ್ಮಲಂಡರು ಎಂಥ ಘನವಾದ ಯೋಗ್ಯತೆಯವರಿದ್ದರೂ ಅವರ ಮಾತನ್ನು ಸಾತ್ವಿಕ ಧರ್ಮನಿಷ್ಠರು ನಂಬತಕ್ಕದ್ದಲ್ಲ. ಈಗಿನ ಕಾಲವು ಧರ್ಮಕ್ಕೆ ಪ್ರತಿಕೂಲವಾಗಿದ್ದರೂ, ಅದಕ್ಕೆ ಹೆದರದೆ ಧೈರ್ಯದಿಂದ ಧರ್ಮರಕ್ಷಣಮಾಡಬೇಕು. ಅಂಥವರನ್ನು ಧರ್ಮವೇ ರಕ್ಷಿಸುವದು. ಧರ್ಮವು ಜಗತ್ತನ್ನು ಧರಿಸುತ್ತಿರುವದರಿಂದಲೂ, ಅದು ಈಶ್ವರನ ಮೂರ್ತಿಯಾಗಿರುವದರಿಂದಲೂ ಅದರ ಸಂಪೂರ್ಣನಾಶವಾಗುವದು ಶಕ್ಯವಿಲ್ಲ. ಸಾತ್ವಿಕ ಪ್ರಜೆಗಳು ಧರ್ಮಕ್ಕೆ ಆಧಾರವು. ಜಗತ್ತು ತ್ರಿಗುಣಗಳ ಕಾರ್ಯವಾಗಿರುವದರಿಂದ, ಅದರಲ್ಲಿ ರಾಜಸ - ತಾಮಸ ಪ್ರಜೆಗಳ ಆಧಿಕ್ಯವು ತೋರಿದರೂ, ಸಾತ್ವಿಕ ಪ್ರಜೆಯ ಸಂಪೂರ್ಣನಾಶವಾಗಲಾರದು. ಇಂತಹ ಧರ್ಮಹಾನಿಯ ಕಾಲಗಳು ಹಿಂದಕ್ಕೆ ಎಷ್ಟೋ ಬಂದಿರುವವು; ಮುಂದೆಯೂ ಬರಬಹುದು. ಕಾಲವುಗಮನಶೀಲವಾದದ್ದರಿಂದ, ಹೀಗೆ ಧರ್ಮದ ಉತ್ಕರ್ಷಾಪಕರ್ಷದ ಕಾಲಗಳು ಬರತಕ್ಕವೇ ಹೋಗತಕ್ಕವೇ ; ಅದಕ್ಕೆ ಮಹತ್ವಕೊಟ್ಟು ಧರ್ಮಿಷ್ಠರು ಧರ್ಮತ್ಯಾಗವನ್ನು ಮಾಡಲಾಗದು.

ಧರ್ಮಕ್ಕೆ ಶರೀರಶುದ್ಧಿಯ ಆವಶ್ಯಕತೆಯಿರುವದರಿಂದ, ಮೇಲೆ ಹೇಳಿದಂತೆ ಅಸ್ಪೃಶ್ಯತೆಯು ಎಲ್ಲಧರ್ಮಕ್ಕೂ ಅವಶ್ಯವಾಗಿರುವದು ; ಆದ್ದರಿಂದ ಆಯಾಧರ್ಮದವರು ತಮ್ಮ ತಮ್ಮ ಧರ್ಮಾಚಾರ್ಯರು ತಮ್ಮ ತಮ್ಮ ಧರ್ಮಶಾಸ್ತ್ರದಲ್ಲಿ ಹೇಳಿದಂತೆ ಅಸ್ಪೃಶ್ಯತೆಯನ್ನು ಕಾಯ್ದುಕೊಳ್ಳಲೇಬೇಕು. ಒಬ್ಬರ ಅಸ್ಪೃಶ್ಯತೆಯ ನಿಯಮಗಳನ್ನು ಮತ್ತೊಬ್ಬರು ತಿರಸ್ಕರಿಸಿ ಆಡಿಕೊಳ್ಳಬಾರದು. "ಧರ್ಮಶಾಸ್ತ್ರಂತು ವೈಸ್ಮೃತಿಃ" ಎಂದು ಮನುವಿನ ವಚನವಿರುವದರಿಂದ, ವೈದಿಕರಾದ ನಮಗೆ ಮನ್ವಾದಿ ಸ್ಮೃತಿಗಳೇ ಧರ್ಮಶಾಸ್ತ್ರಗಳಾಗಿರುವದರಿಂದ, ಅವುಗಳಲ್ಲಿ ಹೇಳಿರುವಂತೆ ಸ್ಪೃಶ್ಯಾಸ್ಪೃಶ್ಯತೆಯ ನಿಯಮಗಳನ್ನು ಪಾಲಿಸತಕ್ಕದ್ದು. ಸ್ಮೃತಿಗಳು ವೇದಾನುಸಾರಿಗಳಾದದ್ದರಿಂದ, ಅವು ಪ್ರಮಾಣಗ್ರಂಥಗಳಾಗಿರುವವು. ಸ್ವಧರ್ಮದ ನಿಶ್ಚಿತಜ್ಞಾನವಿದ್ದವರು ಪರಿಸ್ಥಿತಿಗೆ ಅಂಜದೆ ತಮ್ಮ ಧರ್ಮವನ್ನು ಕಾಯ್ದುಕೊಳ್ಳಬೇಕು ; ಸ್ವಧರ್ಮದ ಸಂಶಯಜ್ಞಾನವುಳ್ಳವರು ಧರ್ಮಜ್ಞಾನದಿಂದ ತಮ್ಮ ಸಂಶಯವನ್ನು ದೂರಮಾಡಿಕೊಂಡು ಧರ್ಮ

ದಂತೆ ನಡೆಯಬೇಕು. ಧರ್ಮಾಚರಣೆಯು ಸ್ಥಿರವೂ, ಪುಣ್ಯಕರವೂ, ಪರಲೋಕಸಾಧಕವೂ ಆಗಿದ್ದರೆ, ಸ್ವಚ್ಛಂದಾಚರಣೆಯು ಅಸ್ಥಿರವೂ, ಪಾಪಕರವೂ, ನರಕಸಾಧಕವೂ ಆಗಿರುತ್ತದೆಂಬದನ್ನು ಲಕ್ಷದಲ್ಲಿಡಬೇಕು.

**(೯) ಬ್ರಾಹ್ಮಣರ ನಾಲ್ಕು ವರ್ಗಗಳು**— ಈ ಉಪಪರ್ವದೊಳಗಿನ ಸೋಮಶ್ರವ, ಧೌಮ್ಯ, ಉತ್ತಂಕ ಮೊದಲಾದ ಪೌರಾಣಿಕ ಋಷಿಗಳನ್ನು ಈಗಿನ ಬ್ರಾಹ್ಮಣರಿಗೆ ಹೋಲಿಸಿ ನೋಡಿದರೆ, ಆ ಋಷಿಗಳ ಮಹಿಮೆಯು ಕೇವಲ ಕಾಲ್ಪನಿಕವೆಂದು ಊಹಿಸಬಹುದಾಗಿದೆ; ಆದರೆ ಹೀಗೆ ಊಹಿಸುವದು ಯೋಗ್ಯವಲ್ಲವೆಂಬದರ ಕಲ್ಪನೆಯಾಗುವದಕ್ಕಾಗಿ, ಬ್ರಾಹ್ಮಣರಲ್ಲಿ ಆಗಬಹುದಾದ ನಾಲ್ಕುವರ್ಗಗಳನ್ನು ಹೇಳುವದು ಅವಶ್ಯವಾಗಿರುವದು. ಬ್ರಾಹ್ಮಣರ ಆ ನಾಲ್ಕು ವರ್ಗಗಳು—**೧ ಆರಣ್ಯಕ ೨ ನಾಗರಿಕ ೩ ಅಧಮ ೪ ಪತಿತ** ಎಂಬವಾಗಿರುವವು.

**ಆರಣ್ಯಕರು**—ಸರ್ವಸಂಗ ಪರಿತ್ಯಾಗಮಾಡಿ ದೇವರಿಗೆ ಶರಣು ಹೋಗಿ ತಪೋಬಲದಿಂದ ಆತನನ್ನು ಪ್ರಸನ್ನೀಕರಿಸಿಕೊಂಡು ಆತನ ಅನುಗ್ರಹದಿಂದ ಅದ್ಭುತ ಸಾಮರ್ಥ್ಯಪಡೆದವರು ಆರಣ್ಯಕರು, ಇವರೇ ಋಷಿಗಳು. ಇವರು ತಮ್ಮ ಮನಸ್ಸಿಗೆ ಬಂದರೆ, ತಮ್ಮ ಆತ್ಮಬಲದಿಂದ ಹೊಸ ಸೃಷ್ಟಿಯನ್ನಾದರೂ ಮಾಡಬಹುದು; ಅಂದಬಳಿಕ ಇಂಥವರಿಂದ ಅಲೌಕಿಕಕಾರ್ಯಗಳಾಗುವದೇನಾಶ್ಚರ್ಯವು? ವಶಿಷ್ಠ, ವಾಮದೇವ, ವಿಶ್ವಾಮಿತ್ರರಂಥ ಮಹಾತ್ಮರು ಈ ವರ್ಗದಲ್ಲಿ ಬರುವರು.

**ನಾಗರಿಕರು**—ತಮ್ಮ ವರ್ಣಾಶ್ರಮಗಳಿಗನುಸರಿಸಿ ನಿತ್ಯನೈಮಿತ್ತಿಕ ಕರ್ಮಗಳನ್ನು ಮಾಡುತ್ತ, ತಮ್ಮ ಧರ್ಮಕ್ಕೆ ಚ್ಯುತಿಬಾರದಂತೆ ವಿಷಯ ಸುಖಗಳನ್ನು ಭೋಗಿಸುತ್ತ, ದೇವರನ್ನು ಆರಾಧಿಸುವವರು ನಾಗರಿಕರು. ದ್ರೋಣ-ಕೃಪ-ಅಶ್ವತ್ಥಾಮರಂಥ ಮಹಾ ತೇಜಸ್ವಿಬ್ರಾಹ್ಮಣರು ಈ ವರ್ಗದಲ್ಲಿ ಬರುವರು.

**ಅಧಮರು**—ವಿಷಯಸುಖದ ಸಂಪಾದನದಲ್ಲಿ ಹಗಲು ರಾತ್ರಿ ತೆರಪಿಲ್ಲದೆ ದುಡಿಯುವಾಗ, ತಮ್ಮ ನಿತ್ಯ-ನೈಮಿತ್ತಿಕ ಕರ್ಮಗಳನ್ನು ಮಾಡಲಾರದೆ ಪಶ್ಚಾತ್ತಾಪದಿಂದ—"ದೇವರು ಧರ್ಮಹೀನರಾದ ನಮ್ಮನ್ನು

ಯಾವ ನರಕಕ್ಕೆ ಹಾಕುವನೋ" ಎಂದು ಚಡಪಡಿಸುವವರು ಅಧಮರು ; ಇವರಿಗೆ ದ್ವಿಜಬಂಧುಗಳೆಂತಲೂ ಅನ್ನುವರು. "ಸ್ತ್ರೀ ಶೂದ್ರದ್ವಿಜ ಬಂಧೂನಾಂ ತ್ರಯೀ ನಶ್ರುತಿಗೋಚರಾ" ಎಂಬ ಸ್ಮೃತ್ಯುಕ್ತಿಯಂತೆ, ಈ ಅಧಮಬ್ರಾಹ್ಮಣರಿಗೆ ವೇದಾಧಿಕಾರವಿಲ್ಲವು. ಈಗಿನ ಬ್ರಾಹ್ಮಣ ಸಮಾಜದಲ್ಲಿ ಈ ಅಧಮಬ್ರಾಹ್ಮಣರಿಗೆ ಕೊರತೆಯಿಲ್ಲ.

**ಪತಿತರು**—ದ್ರವ್ಯ, ಅಧಿಕಾರ, ವಿದ್ಯೆ ಮೊದಲಾದವುಗಳಿಂದ ಮತ್ತರಾಗಿ, ಸ್ವಧರ್ಮೋಕ್ತ ನಿತ್ಯ-ನೈಮಿತ್ತಿಕ ಕರ್ಮಗಳನ್ನು ಬಿಟ್ಟುಕೊಟ್ಟು ಮನಸ್ಸಿಗೆ ಬಂದಂತೆ ನಡೆಯುತ್ತ, ದೇವರು ದಿಂಡರ ಪರಿವೆಯಿಲ್ಲದೆ, ಪಶ್ಚಾತ್ತಾಪವಿಲ್ಲದೆ, ತಮ್ಮ ನಡತೆಯೂ, ತಮ್ಮ ವಿಚಾರಗಳೂ ಮಾತ್ರ ಯೋಗ್ಯವೆಂದು ಸಮರ್ಥಿಸುತ್ತ, ಧರ್ಮ-ಕರ್ಮಗಳನ್ನು ತಿರಸ್ಕರಿಸುವವರು ಪತಿತರು. ಇವರ ಸಂಖ್ಯೆಗಾದರೂ ಬ್ರಾಹ್ಮಣಸಮಾಜದಲ್ಲಿ ಈಗ ಕೊರತೆಯಿಲ್ಲ. ದಿನದಿನಕ್ಕೆ ಇವರ ಸಂಖ್ಯೆಯು ಹೆಚ್ಚುತ್ತಲೂ ಇರುವದು.

ಈಗಿನ ಇಂತಹ ಅಧಮ-ಪತಿತ ನಾಮಧಾರಿ ಬ್ರಾಹ್ಮಣರಕಡೆಗೆ ಬೆರಳುಮಾಡಿ, ಪ್ರಾಚೀನಋಷಿಗಳ ಅಲೌಕಿಕಸಾಮರ್ಥ್ಯದ ವಿಷಯವಾಗಿ ಶಂಕಿಸುವದು ಪಾಪಸಾಧನವಾಗಿರುವದು. ಶ್ರುತಶ್ರವನ ವೀರ್ಯದಿಂದ ಹಾವಿನಹೊಟ್ಟೆಯಲ್ಲಿ ಸೋಮಶ್ರವನು ಹುಟ್ಟಿದನೆಂಬದು, ನಮ್ಮಮನುಷ್ಯರ ದೃಷ್ಟಿಯಿಂದ ಅಶಕ್ಯವಾಗಿರುವದು ನಿಜವು ; ಆದರೆ ಬ್ರಹ್ಮಚರ್ಯಮೂಲವಾದ ಯೌಗಿಕ ತಪಶ್ಚರ್ಯದಿಂದ ಮನುಷ್ಯಕೋಟಿಯನ್ನು ಮೀರಿ ದೇವಕೋಟಿಗೆಹೋದ ಋಷಿಗಳ ದೃಷ್ಟಿಯಿಂದ ಈ ಮಾತು ಸರ್ವಥಾ ಅಶಕ್ಯವಲ್ಲವು. ಇಂಥ ಅಲೌಕಿಕ ಶಕ್ತಿಸಂಪನ್ನ ಮನುಷ್ಯರನ್ನೇ ಪುರಾಣಗಳು ಋಷಿಗಳೆಂದು ಕರೆಯುವವು. ಇಂಥ ಮಹಾತ್ಮರ ಸಂಕಲ್ಪಗಳೂ, ವಾಣಿಗಳೂ ಅಮೋಘವಾಗಿರುವಂತೆ, ಅವರ ವೀರ್ಯವೂ ಅಮೋಘವಾಗಿರುವದು ; ಆದ್ದರಿಂದ ಸ್ತ್ರೀರಜದ ಯೋಗವಿಲ್ಲದೆಯೂ ಇಂಥವರ ರೇತಸ್ಸು ಫಲಿಸುವದುಂಟು ! ಗೌತಮರ ದೊನ್ನೆಯೊಳಗಿನ ರೇತಸ್ಸಿನಿಂದ ದ್ರೋಣಾಚಾರ್ಯರ ಉತ್ಪತ್ತಿಯಾದದ್ದರ ವರ್ಣನವು ಮುಂದೆ ಸಂಭವಪರ್ವದಲ್ಲಿ ಬರುವದು. ಬಾಲಬ್ರಹ್ಮಚಾರಿಯಾದ ಮಹಾ ಭಗವದ್ಭಕ್ತ ಮಾರುತಿಯ ವೀರ್ಯವಂತು ಅತ್ಯಂತ ಅಮೋಘವಾದದ್ದು. ಆ ಮಹಾತ್ಮನ ಪ್ರತ್ಯಕ್ಷವೀರ್ಯ

ವಂತು ಇರಲಿ, ಆತನು ಕೇಕರಿಸಿ ಉಗುಳಿದ ಉಗುಳಿನೊಳಗಿನ ರೇತೋಂಶವು ಕೂಡ ಮತ್ಸ್ಯದ ಹೊಟ್ಟೆಯಿಂದ ಮತ್ಸ್ಯಹನುಮನನ್ನು ಹುಟ್ಟಿಸಿತಂತೆ! ಮನುಷ್ಯವೀರ್ಯವು ಶರೀರದ ಯಾವದೊಂದು ಭಾಗದಲ್ಲಿ ಇರದೆ, ಶರೀರದ ತುಂಬ ಪಸರಿಸಿರುವದರಿಂದ, ಮಾರುತಿಯ ಉಗುಳಿನೊಳಗಿನ ರೇತೋಂಶದ ಅಮೋಘತ್ವವು ಒಡೆದು ಕಾಣುವದು. "ಉಗುಳುತ್ತ ಉಗುಳುತ್ತ ರೋಗ" ವೆನ್ನುವ ಲೋಕೋಕ್ತಿಯು ವೀರ್ಯನಾಶವನ್ನೇ ತೋರಿಸುತ್ತಿರಬಹುದು. ಹೇಳುವ ತಾತ್ಪರ್ಯವಿಷ್ಟೆ, ಹೊಟ್ಟೆಬಟ್ಟೆಗಳ ಕೊಳೆಪಾಟದಲ್ಲಿ ಬಿದ್ದು ಕೊಳೆಯುವ ಕ್ರಿಮಿಗಳಂತೆ ಇದ್ದ ಈಗಿನ ಅಧಮ-ಪತಿತ ಬ್ರಾಹ್ಮಣರಿಗೆ ಋಷಿಗಳನ್ನು ಹೋಲಿಸಿ, ಋಷಿಗಳ ಅಲೌಕಿಕ ಸಾಮರ್ಥ್ಯದ ವಿಷಯವಾಗಿ ಶಂಕಿಸಿ ಪಾಪಕ್ಕೆ ಗುರಿಯಾಗಬಾರದು! ಈ ಋಷಿಗಳೇ ಮೊದಲಾದ ಅಲೌಕಿಕಪುರುಷರ ಅಲೌಕಿಕ ಸಾಮರ್ಥ್ಯದ ಸಂಬಂಧದಿಂದ ಇನ್ನು ಮುಂದೆ ಅಲ್ಲಲ್ಲಿ ಹಲವು ವರ್ಣನಗಳು ಬರುವವು.

(೧೦) **ಗುರುಸೇವೆಯ ಮಹತ್ವ**—ಅನ್ಯರಿಂದ ವಿದ್ಯೆಯನ್ನು ಸಂಪಾದಿಸುವ ಉಪಾಯಗಳು ಮೂರು ಇರುವವು—"ಗುರುಶುಶ್ರೂಷಯಾ ವಿದ್ಯಾ ಪುಷ್ಕಲೇನ ಧನೇನವಾ ॥ ಅಥವಾ ವಿದ್ಯಯಾ ವಿದ್ಯಾ ಚತುರ್ಥಂ ನೋಪಪದ್ಯತೇ॥" ಎಂಬ ಉಕ್ತಿಯಂತೆ, ವಿದ್ಯಾರ್ಥಿಯು ವಿದ್ಯೆಯನ್ನು ಗುರುಸೇವೆಯಿಂದ, ಅಥವಾ ಗುರುವಿಗೆ ಬಹಳ ದ್ರವ್ಯಕೊಡುವದರಿಂದ, ಇಲ್ಲವೆ ತನ್ನಲ್ಲಿರುವ ಒಂದು ವಿದ್ಯೆಯನ್ನು ಅನ್ಯರಿಗೆ ಕಲಿಸುವದರಿಂದ ಸಂಪಾದಿಸಬಹುದು. ಈ ಮೂರು ಉಪಾಯಗಳಲ್ಲಿ ಗುರುಸೇವಾರೂಪವಾದ ಉಪಾಯವು, ಗುರು-ಶಿಷ್ಯರಿಬ್ಬರ ನಿಸ್ಪೃಹತೆಯ ದ್ಯೋತಕವಾಗಿರುವದರಿಂದ, ಅದು ಅತ್ಯಂತ ಪವಿತ್ರವಾದದ್ದು, ಶ್ರೇಷ್ಠ ಫಲಕೊಡುವಂತಹದೂ, ಶೀಲಸಂವರ್ಧಕವೂ ಆಗಿರುವದು. ಎರಡನೆಯ ಉಪಾಯವಾದ ವಿದ್ಯಾವಿಕ್ರಯವು ದ್ರವ್ಯಲೋಭಮೂಲವಾಗಿರುವದರಿಂದ, ಅದು ಬಹುಶಃ ಗುರುಶಿಷ್ಯರ ತಾರತಮ್ಯ ವಿಘಾತಕವೂ, ಶ್ರದ್ಧಾವಿಹೀನವೂ, ಅಪವಿತ್ರವೂ, ಕ್ಷುದ್ರಫಲದಾಯಕವೂ, ಶೀಲನಾಶಕವೂ ಆಗಿರುವದು. ಇನ್ನು ವಿನಿಮಯರೂಪವಾದ ಮೂರನೆಯ ಉಪಾಯವು, ಸ್ವಾಭಾವಿಕವಾಗಿಯೇ ಸಮಾನಯೋಗ್ಯತೆಯನ್ನುಂಟು ಮಾಡುವಂತಹದಾದ್ದರಿಂದ, ಪರಸ್ಪರ ವಿದ್ಯಾಪ್ರಾ

ಪ್ತಿಯಾಗುವವರ ಹೊರತು ಶೀಲಘಟನಾದಿ ಮಹತ್ವದ ಲಾಭಗಳು ಅದ ರಿಂದ ಆಗುವದಿಲ್ಲ. ಈ ಮೂರು ಉಪಾಯಗಳಲ್ಲಿ ಮೊದಲನೆಯ ಗುರು ಸೇವಾರೂಪವಾದ ಪವಿತ್ರ ಉಪಾಯವು ಲೌಕಿಕ-ಪಾರಮಾರ್ಥಿಕ ವಿದ್ಯೆಗಳೆ ರಡರ ಪ್ರಾಪ್ತಿಗೂ ಕಾರಣವಾಗುವದು ; ಎರಡನೆಯ ಮೂರನೆಯ ಉಪಾ ಯಗಳು ಕೇವಲ ಲೌಕಿಕ ವಿದ್ಯಾಪ್ರಾಪ್ತಿಗೆ ಮಾತ್ರ ಕಾರಣವಾಗುವವು. ಗುರ್ವನುಗ್ರಹದ ಹೊರತು ಶ್ರೇಷ್ಠತರವಾದ ಪಾರಮಾರ್ಥಿಕ ವಿದ್ಯಾಫಲವು ಶಿಷ್ಯನಿಗೆ ದೊರೆಯುವದಿಲ್ಲ. ಶಿಷ್ಯನ ಗುರುನಿಷ್ಠೆ, ಗುರುವಿನ ಶಿಷ್ಯವಾತ್ಸ ಲ್ಯ ಇವು ಗುರುಸೇವೆಯಿಂದ ಅಭಿವೃದ್ಧಿ ಹೊಂದುತ್ತ ಹೊಂದುತ್ತ, ಗುರು ಶಿಷ್ಯರ ಹೃದಯಗಳು ಏಕರೂಪವಾಗಲು, ಆಗ ಶಿಷ್ಯನು ಗುರ್ವನುಗ್ರಹಕ್ಕೆ ಪಾತ್ರನಾಗುವನು ; ಅಂದರೆ ಗುರುವಿನ ಪ್ರಸನ್ನತೆಯ ಅಮೋಘವಾಣಿ ಯಿಂದ ಶಿಷ್ಯನು ಬೇಕಾದದ್ದು ಆಗುವನು ! ಇಂತಹ ಅಲಭ್ಯಯೋಗವು ಗುರುಸೇವೆಯಿಂದಲ್ಲದೆ, ಬೇರೆಯಾವ ಉಪಾಯಗಳಿಂದಲೂ ಉಂಟಾಗಲಾ ರದು. ಈ ಉಪಪರ್ವದಲ್ಲಿ ಆರುಣಿ, ಉಪಮನ್ಯು, ವೇದ, ಉತ್ತಂಕ ಇವರು ನಿಷ್ಠಾಮೂಲವಾದ ಕಠಿಣತರ ಗುರುಸೇವೆಯಿಂದ ಗುರ್ವನುಗ್ರಹರೂ ಪಶ್ರೇಷ್ಠಫಲ ಪಡೆದಿರುವ ರೀತಿಯನ್ನು ಮನಸ್ಸಿನಲ್ಲಿ ತರತಕ್ಕದ್ದು ; ಮತ್ತು ಗುರುಶಿಷ್ಯರಿಬ್ಬರ ಧನ್ಯತೆಗೆ ಗುರುಸೇವೆಯೇ ಕಾರಣವೆಂಬದನ್ನು ಲಕ್ಷದಲ್ಲಿಡತಕ್ಕದ್ದು. ಮೇಲಿನ ನಾಲ್ವರು ಶಿಷ್ಯರಲ್ಲಿಯ ಗುರುನಿಷ್ಠೆ, ವಿಷ ಯ ವೈರಾಗ್ಯ, ದೇಹದಂಡನ, ಅಹಂಕಾರರಾಹಿತ್ಯ, ಸದಾಚರಣೆ, ಇಂ ದ್ರಿಯ ನಿಗ್ರಹ, ಬ್ರಹ್ಮಚರ್ಯ ಇವು ಅಪೂರ್ವವಾಗಿರುವದರಿಂದಲೇ, ಆ ಮಹಾತ್ಮರಾದಶಿಷ್ಯರು ಗುರ್ವನುಗ್ರಹರೂಪ ಶ್ರೇಷ್ಠಫಲಕ್ಕೆ ಪಾತ್ರರಾದರು. ಇಂತಹ ಶ್ರೇಷ್ಠಫಲವು, ತಾಪದಾಯಕವಾದ ಈಗಿನ ಆಸುರೀನವ ನಾಗರಿಕತೆಯ ಕಾಲದಲ್ಲಿ ಅಪರೂಪವಾಗಿಹೋಗಿರುವದಲ್ಲದೆ, ಅದರ ಕಲ್ಪನೆಯೂ ಜನರಿಗೆ ಆಗದಹಾಗಾಗಿದೆ ! ಈಗಿನ ಶಿಷ್ಯರಲ್ಲಿ ಸರ್ವಸಾಮಾ ನ್ಯವಾಗಿ ಕಂಡು ಬರುವ ವಿಷಯಾಸಕ್ತಿ, ದುರಹಂಕಾರ, ಉದ್ಧತತನ, ಸ್ವಚ್ಛಂದವೃತ್ತಿ, ಶ್ರದ್ಧಾಶೂನ್ಯತೆ, ಬ್ರಹ್ಮಚರ್ಯಾಭಾವ ಮೊದಲಾದ ಆಸುರೀಗುಣಗಳ ಮೂಲಕ ಅವರಲ್ಲಿ ಆಸುರೀಭಾವದಬೆಳವಣಿಗೆಯಾಗುತ್ತ ಹೋದಂತೆ, ಜಗತ್ತಿನ ತಾಪವು ಹೆಚ್ಚುತ್ತಿರುವದು. ನಮ್ಮ ಋಷಿಕಾಲದ

ತಪೋಮೂಲವಾದ ಗುರುಕುಲಗಳು ನಷ್ಟವಾಗಿ, ಅಲ್ಲಲ್ಲಿ ಈಗ ಆಸುರೀಭಾವವನ್ನುಂಟುಮಾಡುವ ವಿದ್ಯಾವಿಕ್ರಯದ ಶಾಲೆಗಳು ಹೆಚ್ಚುತೊಡಗಿದವು. ವಿದ್ಯಾಹೀನರು, ಶೀಲಭ್ರಷ್ಟರು ಆದ ಗುರುಗಳ ವಿಪುಲತೆಯಿಂದ ವಿದ್ಯಾರ್ಥಿಗಳು ವಿದ್ಯಾವಂತರೂ, ಸಚ್ಛೀಲರೂ ಆಗುವದೊತ್ತಟ್ಟಿಗುಳಿದು, ಅವರು ದಿನದಿನಕ್ಕೆ ವಿದ್ಯಾವಿಹೀನರೂ, ಶೀಲಭ್ರಷ್ಟರೂ ಆಗುತ್ತ ನಡೆದಿರುವರು. ಯೋಗ್ಯಗುರುಗಳನ್ನು ಹುಡುಕಿ ಶಿಷ್ಯರಾಗುವ ಆರ್ಯರ ಪರಿಶುದ್ಧ ಪದ್ಧತಿಯು ಮುಣುಗಿಹೋಗಿ, ದ್ರವ್ಯಪ್ರಾಪ್ತಿಯ ವಿದ್ಯೆಗಳನ್ನು ಸಿಕ್ಕಲ್ಲಿ ಸಿಕ್ಕಹಾಗೆ ಸಂಪಾದಿಸುವ ಕೆಟ್ಟಚಾಳಿಯು ನಮ್ಮಲ್ಲಿ ಹೆಚ್ಚುತ್ತ ನಡೆದಿರುವದು; ಅಂದಬಳಿಕ ನಮ್ಮ ನಿಜವಾದ ಕಲ್ಯಾಣಕಾರಕ ಪ್ರಗತಿಯ ಆಶೆಯು ಹೇಗೆ ಉಳಿಯಬೇಕು ?

(೧೧) **ಧರ್ಮನಿಷ್ಠೆಯು ಸ್ವಾರ್ಥತ್ಯಾಗದ ಮೂಲವು** —ನಿಸ್ಪೃಹಿಗಳಾದ ಜ್ಞಾನಿಗಳು ಲೋಕಹಿತದಲ್ಲಿ ದೃಷ್ಟಿಯನ್ನಿಟ್ಟು ವ್ಯಕ್ತಿಗಳ ಪರಸ್ಪರ ಪ್ರೇಮಸಂಬಂಧವು ಕಡಿದು ಹೋಗದಂತೆ, ಅಥವಾ ಮನುಷ್ಯರಿಗೆ ಅಭ್ಯುದಯವೂ, ಮೋಕ್ಷವೂ ದೊರೆಯುವಂತೆ ಹಾಕಿಕೊಟ್ಟ ಶಾಶ್ವತನಿಯಮಗಳಿಗೆ ಧರ್ಮವೆನ್ನುವರು. ಧರ್ಮದಲ್ಲಿ ಲೌಕಿಕಧರ್ಮ, ಆಧ್ಯಾತ್ಮಿಕ ಧರ್ಮ ಎಂದು ಎರಡು ವಿಧಗಳಿದ್ದು, ಅಭ್ಯುದಯ ಕಾರಣವಾದ ಲೌಕಿಕ ಧರ್ಮವು ಹಲವು ವ್ಯಕ್ತಿಗಳ ಲೋಕವ್ಯವಹಾರಗಳಿಗೆ ಸಂಬಂಧಿಸಿರುವದರಿಂದ ಅದರಲ್ಲಿ-"ಮಾತೃಧರ್ಮ, ಪಿತೃಧರ್ಮ, ಪುತ್ರಧರ್ಮ, ಪತಿಧರ್ಮ, ಪತ್ನೀಧರ್ಮ, ಜಾತಿಧರ್ಮ, ಆಶ್ರಮಧರ್ಮ, ಕೌಟುಂಬಿಕಧರ್ಮ, ನೆರೆಹೊರೆಯಧರ್ಮ, ಸಾಮಾಜಿಕಧರ್ಮ, ರಾಷ್ಟ್ರೀಯಧರ್ಮ, ಮಿತ್ರಧರ್ಮ" ಇತ್ಯಾದಿ ಒಂದಲ್ಲ, ಎರಡಲ್ಲ ಹಲವುವಿಧದ ಧರ್ಮಗಳು ಬರುವವು ಆದರೆ ಮೋಕ್ಷಕಾರಣವಾದ ಆಧ್ಯಾತ್ಮಿಕಧರ್ಮವು ಸರ್ವೋತ್ತಮನಾದ ಪರಮಾತ್ಮನೊಬ್ಬನ ವ್ಯವಹಾರಕ್ಕೆ ಸಂಬಂಧಿಸಿರುವದರಿಂದ ಅದು ಭಕ್ತಧರ್ಮ, ಅಥವಾ ಸೇವಕಧರ್ಮ ಎಂಬದೊಂದೇ ವಿಧವಾಗಿರುವದು ಹಲವು ಲೌಕಿಕಧರ್ಮಗಳನ್ನು ಪಾಲಿಸುವದರ ಫಲವು ಈ ಲೋಕದ, ಹಾಗು ಸ್ವರ್ಗಾದಿ ಪರಲೋಕಗಳ ನಶ್ವರ ಸುಖವಾಗಿದ್ದರೆ, ಆಧ್ಯಾತ್ಮಿಕ ಧರ್ಮ ಪಾಲನದ ಫಲವು ಮೋಕ್ಷರೂಪವಾದ ಶಾಶ್ವತ ಸುಖವು, ಅಥವಾ

ಪರಮಾನಂದವು ಆಗಿರುವದು. ಲೌಕಿಕಧರ್ಮದಲ್ಲಿ ಅನ್ಯರ ಸುಖಕ್ಕಾಗಿ ತನ್ನ ಸುಖದಲ್ಲಿ ಕೊರತೆಯನ್ನುಂಟು ಮಾಡಿಕೊಳ್ಳಬೇಕಾಗಿದ್ದರೆ, ಆಧ್ಯಾತ್ಮಿಕ ಧರ್ಮದಲ್ಲಿ ಈಶ್ವರಪ್ರೀತ್ಯರ್ಥವಾಗಿ ಸರ್ವಸಂಗಗಳನ್ನು, ಅಥವಾ ಸರ್ವ ಲೌಕಿಕ ಧರ್ಮಗಳನ್ನು ಪರಿತ್ಯಜಿಸಬೇಕಾಗುವದು. ಅಂತೇ ಭಗವದ್ಗೀತೆಯಲ್ಲಿ ಭಗವಂತನು—"ಸರ್ವ ಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ" ಎಂದು ಹೇಳಿರುವನು. ಒಟ್ಟಿಗೆ, ಲೌಕಿಕ ಧರ್ಮಗಳಾಗಲಿ, ಪಾರಮಾರ್ಥಿಕ ಧರ್ಮವಾಗಲಿ ಸ್ವಾರ್ಥತ್ಯಾಗ ಮೂಲವಾಗಿರುವವೆಂದು ತಿಳಿಯತಕ್ಕದ್ದು. ಮಕ್ಕಳ ಹಿತಕ್ಕಾಗಿ ನಿಜವಾದ ತಂದೆಯೂ, ತಂದೆಯ ಹಿತಕ್ಕಾಗಿ ನಿಜವಾದ ಮಗನೂ, ರಾಷ್ಟ್ರಹಿತಕ್ಕಾಗಿ ನಿಜವಾದ ರಾಷ್ಟ್ರಭಕ್ತರೂ ತಮ್ಮ ಹಿತದಲ್ಲಿ ಕೊರತೆಯನ್ನುಂಟುಮಾಡಿಕೊಳ್ಳುವದು ಸ್ವಾರ್ಥತ್ಯಾಗದ ಉದಾಹರಣವೇ ಆಗಿರುವದು. ರಾಷ್ಟ್ರರೂಪ ವಿರಾಟಪುರುಷನ ಸಲುವಾಗಿಯಾಗಲಿ, ಮಾತೃ - ಪಿತೃ - ಗುರುರೂಪ ಪೂಜ್ಯ ವ್ಯಕ್ತಿಗಳ ಸಲುವಾಗಿಯಾಗಲಿ ಸರ್ವಸಂಗ ಪರಿತ್ಯಾಗಮಾಡುವದು ಮೋಕ್ಷಕ್ಕೆ ಸಾಧನವಾಗುವಲ್ಲಿ ಸಂಶಯವಿಲ್ಲ. ಈ ಉಪಪರ್ವದಲ್ಲಿ ಪೌಷ್ಯರಾಜನ ಹೆಂಡತಿಯು, ತನ್ನ ಕ್ಷಾತ್ರಧರ್ಮವನ್ನು ಪಾಲಿಸುವದಕ್ಕಾಗಿ ಸತ್ಪಾತ್ರ ಯಾಚಕ ಬ್ರಾಹ್ಮಣನಾದ ಉತ್ತಂಕನಿಗೆ ತನ್ನ ಶ್ರೇಷ್ಠ ಕುಂಡಲಗಳನ್ನು ಕೊಟ್ಟು, ತನ್ನ ಹಾನಿಯನ್ನು ಮಾಡಿಕೊಳ್ಳಬೇಕಾಯಿತು ಚಿತ್ತಶುದ್ಧಿಗೋಸ್ಕರ ಪಾಲಿಸತಕ್ಕ ಬ್ರಾಹ್ಮಣ-ಧರ್ಮಪಾಲನಕ್ಕಾಗಿಯೇ ಉತ್ತಂಕನು ಕೃತಘ್ನನಂತೆ ಪೌಷ್ಯರಾಜನಿಗೆ "ಕುರುಡನಾಗೆಂದು" ತಟ್ಟನೆ ಶಾಪಕೊಟ್ಟು ತನ್ನ ಪುಣ್ಯಕ್ಷಯಮಾಡಿಕೊಳ್ಳಬೇಕಾಯಿತು! ಅದರಂತೆ ಆರುಣಿ, ಉಪಮನ್ಯು, ಮೊದಲಾದ ಶಿಷ್ಯರು ತಮ್ಮ ಶಿಷ್ಯಧರ್ಮವನ್ನು ಪಾಲಿಸುವದಕ್ಕಾಗಿ ಗುರುವಿನ ಆಜ್ಞೆಯನ್ನು ಅಕ್ಷರಶಃ ಮನ್ನಿಸಿ ತಮ್ಮ ಐಹಿಕಸುಖದ ಆಶೆಯನ್ನು ಬಿಡಬೇಕಾಯಿತು; ಆದ್ದರಿಂದ, ತನ್ನ ನಿಜವಾದ ಹಿತವನ್ನು ಇಚ್ಛಿಸುವಪ್ರತಿಒಬ್ಬನು ಲೌಕಿಕ ಅಥವಾ ಪಾರಮಾರ್ಥಿಕ ಧರ್ಮಕ್ಕಾಗಿ ಪ್ರಾಣವನ್ನಾದರೂ ಕೊಡಬೇಕಾಗುವದು. ಧರ್ಮನಿಷ್ಠರಲ್ಲದ ಸ್ವಚ್ಛಂದವೃತ್ತಿಯವರು ಆತ್ಮಹಿತವನ್ನಾಗಲಿ, ಪರಹಿತವನ್ನಾಗಲಿ ಸಾಧಿಸಲು ಸಮರ್ಥರಾಗಲಾರರು. ಇದರಮೇಲಿಂದ— "ಹಿಂದೂಜನರು ನಾವು ಧರ್ಮ ಧರ್ಮ

ಎಂದು ಕುಳಿತುಕೊಂಡದ್ದರಿಂದ ಹಾಳಾದೆವೆಂ"ದು ಹೇಳುವ ಮಹಾ ಮೂರ್ಖರ ಮಾತು ಎಷ್ಟು ಘಾತಕವೆಂಬದನ್ನು ವಿಚಾರವಂತರು ತಿಳಿದು ನೋಡತಕ್ಕದ್ದು. ಈಗ ನಾವು ಧರ್ಮವನ್ನು ಬಿಟ್ಟು ಸ್ವಚ್ಛಂದವೃತ್ತಿಯಿಂದ ನಡೆಯಹತ್ತಿದ್ದರಿಂದಲೇ ಅತಂತ್ರರಾಗಿರುವೆವೆಂಬ ಮಾತನ್ನಾದರೂ ಲಕ್ಷದಲ್ಲಿಡತಕ್ಕದ್ದು.

(೧೨) **ಗುರುದಕ್ಷಿಣೆಯು ಪೌರುಷಪ್ರದರ್ಶಕವು** — ಶಿಷ್ಯನು ಶೀಲವಂತನೂ, ವಿದ್ಯಾವಂತನೂ, ತೇಜಸ್ವಿಯೂ, ಕರ್ತೃತ್ವಶಾಲಿಯೂ ಆದಬಳಿಕ ಆತನು ಗುರುವಿಗೆ ದಕ್ಷಿಣೆಯನ್ನು ಕೊಡಬೇಕೆಂತಲೂ, ಗುರುವು ಶಿಷ್ಯನ ಆ ದಕ್ಷಿಣೆಯನ್ನು ಸ್ವೀಕರಿಸಬೇಕೆಂತಲೂ ಶಾಸ್ತ್ರವಿರುವದು. ಅದರಂತೆ ಗುರುವು, ತನ್ನಿಂದ ಶಿಕ್ಷಿತನಾದ ಶಿಷ್ಯನ ಕೃತಾರ್ಥತೆಯನ್ನು ಪರೀಕ್ಷಿಸುವದಕ್ಕಾಗಿ ಆತನ ಯೋಗ್ಯತೆಯನ್ನರಿತು ದಕ್ಷಿಣೆಯನ್ನು ಕೇಳಲು, ಶಿಷ್ಯನು ಸ್ವಂತ ಪೌರುಷದಿಂದ ಅದನ್ನು ಸಂಪಾದಿಸಿ ತನ್ನ ಗುರುವಿಗೆ ಅರ್ಪಿಸಿ ಕೃತಕೃತ್ಯನಾಗಬೇಕಾಗುತ್ತಿತ್ತು. ಈ ಉಪಪರ್ವದಲ್ಲಿ ಉತ್ತಂಕನು ಗುರುದಕ್ಷಿಣೆಗಾಗಿ ಪಟ್ಟ ಸಾಹಸವು ಸಾಮಾನ್ಯವೆ? ಆತನ ಗುರುನಿಷ್ಠೆಯನ್ನು ನೋಡಿ ಪ್ರತ್ಯಕ್ಷ ದೇವೇಂದ್ರನು ಮನುಷ್ಯರೂಪವನ್ನು ಧರಿಸಿ ಆತನಿಗೆ ಸಹಾಯಮಾಡಬೇಕಾಯಿತು! ಅವತಾರಿಕರಾದ ಶ್ರೀಕೃಷ್ಣ - ಬಲರಾಮರು ಗುರುದಕ್ಷಿಣೆಗಾಗಿ ತಮ್ಮ ಗುರುಗಳಾದ ಸಾಂದೀಪರ ಸತ್ತ ಮಕ್ಕಳನ್ನು ಬದುಕಿಸಿಕೊಟ್ಟರಂತೆ! ಆದರೆ ಎರಡನೆಯವರ ಆಳಾಗುವದಕ್ಕಾಗಿ ವಿದ್ಯೆ ಕಲಿಯುತ್ತಿರುವ ಈಗಿನ ನಮ್ಮ ಭಾರತೀಯರಿಗೆ, ಇಂತಹ ಪೌರುಷವು ಎಲ್ಲಿಂದ ಬರಬೇಕು? ನೌಕರಿಯಿಂದ ತಿಂಗಳ ಸಂಬಳ ಪಡೆದು ಕೃತಕೃತ್ಯರಾಗುವ ಶ್ವವೃತ್ತಿಯವರಿಗೆ ಪೌರುಷದ ಗುರುದಕ್ಷಿಣೆಯ ಮಾತು ಹೇಗೆ ಸಂಬಂಧಿಸುವದು? ಅಂತೇ ಭಾರತೀಯರು ನಾವು ಈ ಮನೆಗೆ ಬಂದಿರುವೆವು.

**ಉಪಸಂಹಾರ**— ಈ ಉಪಪರ್ವದಲ್ಲಿ "ಉಚ್ಛಿಷ್ಟದ ರಹಸ್ಯ" "ಗುರೂಪದೇಶದ ಮಹತ್ವ" "ಪಂಚಗವ್ಯದ ಮಹತ್ವ" "ಕರ್ಮಶರೂ

ಜ್ಞಾನಿಗಳೂ''ಮುಂತಾದವುಗಳ ರಹಸ್ಯಗಳು ವಿಚಾರಿಸತಕ್ಕವಾಗಿವೆ; ಆದರೆ ಅವನ್ನು ಸ್ಥಳಸಂಕೋಚಕ್ಕಾಗಿ ಇಲ್ಲಿ ವಿವರಿಸಿರುವದಿಲ್ಲ. ಇಚ್ಛೆಯಿದ್ದವರು ಬಲ್ಲವರಿಂದ ಅವನ್ನು ಅರಿತುಕೊಳ್ಳಬೇಕು.



## ೪. ಪೌಲೋಮಪರ್ವ.

### ೪ ನೇ ೫ ನೇ ಅಧ್ಯಾಯಗಳು—ಕಥಾಪ್ರಸ್ತಾವ.

ನೈಮಿಷಾರಣ್ಯದಲ್ಲಿ ವಾರ್ಷಿಕ ಯಾಗದೀಕ್ಷಿತನಾದ ಶೌನಕಮುನಿಯು ಅಗ್ನಿಪೂಜಾ, ಬ್ರಹ್ಮಯಜ್ಞ, ಪಿತೃತರ್ಪಣ ಮೊದಲಾದ ತನ್ನ ಕರ್ಮಗಳನ್ನು ಯಥಾಸ್ಥಿತವಾಗಿ ನೆರವೇರಿಸಿ ಸಭಾಸ್ಥಾನಕ್ಕೆ ಬಂದು ಪುರಾಣಿಕನಾದ ಉಗ್ರಶ್ರವ ಸೌತಿಯನ್ನು ಕುರಿತು— "ಎಲೈ ಸೂತಪುತ್ರಾ, ನಾವು ಹಿಂದಕ್ಕೆ ನಿಮ್ಮ ತಂದೆಯ ಮುಖದಿಂದ ಹಲವು ಮಹಾತ್ಮರ ಕಥೆಗಳನ್ನೂ, ಶ್ರೇಷ್ಠ ವಂಶಗಳನ್ನೂ ಕೇಳಿದ್ದೇವೆ; ಆದರೆ ಈಗ ಆ ವಂಶಗಳಲ್ಲಿ ಮೊದಲು ಭೃಗುವಂಶವನ್ನು ಕೇಳಲು ನಾವು ಇಚ್ಛಿಸುವೆವು; ನಮ್ಮ ಆ ಇಚ್ಛೆಯನ್ನು ಪೂರ್ಣಮಾಡಬೇಕು" ಎಂದು ಕೇಳಿದರು. ಅದಕ್ಕೆ ಸೌತಿಯು— 'ಋಷಿಗಳೇ, ನಿಮ್ಮ ಇಚ್ಛೆಯಂತೆ ಅವಶ್ಯವಾಗಿ ಭೃಗುವಂಶವನ್ನು ಹೇಳುವೆನು ಕೇಳಿರಿ. ಆ ಭೃಗುವಂಶದ ಮೂಲಪುರುಷನಾದ ಭೃಗುವು ಸ್ವಯಂಭೂ ಬ್ರಹ್ಮದೇವನ ಮಗನು. ವರುಣನ ಯಜ್ಞದಲ್ಲಿ ಅಗ್ನಿಯಿಂದ ಈತನ ಉತ್ಪತ್ತಿಯಾಯಿತೆಂದು ನಾವು ಕೇಳಿದ್ದೇವೆ. ಈ ಭೃಗುವಿನ ಮಗನು ಭಾರ್ಗವನು. ಈತನಿಗೆ ಚ್ಯವನಭಾರ್ಗವನೆನ್ನುವರು. ಚ್ಯವನ ಭಾರ್ಗವನಿಂದ ಪ್ರಮತಿ, ಪ್ರಮತಿಯಿಂದ ರುರು, ರುರುವಿನಿಂದ ಪ್ರಮದ್ವರೆಯ ಹೊಟ್ಟೆಯಲ್ಲಿ ಧರ್ಮಾತ್ಮನಾದ ಶುನಕನು ಹುಟ್ಟಿದರು. ಶೌನಕರೇ, ನಿಮ್ಮ ತಂದೆಯಾದ ಶುನಕರು ಮಹಾ ಧರ್ಮಿಷ್ಠರೂ, ಸತ್ಯವಾದಿಗಳೂ ಇದ್ದರು. ಇವರು ಶಮದಮಾದಿ ಸಾಧನಗಳಿಂದ ಸಂಪನ್ನರಾಗಿದ್ದು, ಹಿತವೂ, ಮಿತವೂ, ಮೇಧ್ಯವೂ (ಪವಿತ್ರವೂ) ಆದ ಅನ್ನದಿಂದ ಉಪಜೀವಿಸುತ್ತಿದ್ದರು."

ಸೌತಿಯ ಈ ನಿರೂಪಣವನ್ನು ಕೇಳಿ ಶೌನಕರು — "ಸೂತಪುತ್ರಾ, ಭೃಗುಪುತ್ರನಿಗೆ ಚ್ಯವನಭಾರ್ಗವನೆಂಬ ಹೆಸರು ಯಾಕೆಬಂದಿತು ?" ಎಂದು ಪ್ರಶ್ನಮಾಡಲು, ಸೌತಿಯು—"ಶೌನಕರೇ, ಭೃಗುಋಷಿಗಳ ಹೆಂಡತಿಯು ಪುಲೋಮಾ ಎಂಬವಳು. ಆಕೆಯಮೇಲೆ ಗಂಡನಪ್ರೇಮ ಬಹಳ. ಆಕೆಯ ಹೊಟ್ಟೆಯಲ್ಲಿ ಯಥಾಕಾಲದಲ್ಲಿ ಭೃಗುವೀರ್ಯದಿಂದ ಗರ್ಭಸಂಭವ ವಾಯಿತು. ಒಮ್ಮೆ ಧರ್ಮಮೂರ್ತಿಗಳಾದ ಭೃಗುಋಷಿಗಳು ಜಲಾಶಯಕ್ಕೆ ಸ್ನಾನಮಾಡಲು ಹೋಗಿರುವಾಗ, ಅವರ ಆಶ್ರಮಕ್ಕೆ ಪುಲೋಮನೆಂಬ ಹೆಸರಿನ ಒಬ್ಬ ರಾಕ್ಷಸನು ಬಂದನು. ಆತನು ಭೃಗುಋಷಿಗಳ ಹೆಂಡತಿ ಯಾದ ಪುಲೋಮೆಯ ಮನೋಹರ ರೂಪವನ್ನು ನೋಡಿ ಕಾಮಪೀಡಿತ ನಾದನು. ಇತ್ತ ಪುಲೋಮೆಯು ಅತಿಥಿ ಅಭ್ಯಾಗತರ ಸತ್ಕಾರಮಾಡು ವದು ತನ್ನ ಕರ್ತವ್ಯವೆಂದು ತಿಳಿದು, ಪುಲೋಮ ರಾಕ್ಷಸನನ್ನು ಫಲ ಮೂಲಾದಿಗಳಿಂದ ಸತ್ಕರಿಸಿದಳು. ಅದರಿಂದಂತು ರಾಕ್ಷಸನ ಕಾಮಾ ಗ್ನಿಯು ಮತ್ತಿಷ್ಟು ಪ್ರಜ್ವಲಿಸಿತು. ಆತನು ಆ ಚಾರುಗಾತ್ರಿಯನ್ನು ಹರಣಮಾಡಬೇಕೆಂದು ನಿಶ್ಚಯಿಸಿದನು. ಹೀಗೆ ಆತನು ನಿಶ್ಚಯಿಸಲಿಕ್ಕೆ ಬೇರೊಂದು ಕಾರಣವೂ ಇತ್ತು. ಪುಲೋಮೆಯು ಸಣ್ಣವಳಿರುವಾಗ ಒಮ್ಮೆ ಆಕೆಯು ಅಳುತ್ತಿರಲು, ಆಕೆಯನ್ನು ಸುಮ್ಮನಿರಿಸುವದಕ್ಕಾಗಿ ಆಕೆಯ ತಂದೆಯು —"ಏ ರಾಕ್ಷಸಾ, ಈಕೆಯನ್ನು ಹಿಡಕೊಂಡು ಹೋಗೊ" ಎಂದು ಅಂಜಿಕೆಯನ್ನು ಹಾಕಿದ್ದನು. ಆಗ ಕರ್ಮಧರ್ಮ ಸಂಯೋಗ ದಿಂದ ಪುಲೋಮ ರಾಕ್ಷಸನು ಅಲ್ಲಿಯೇ ಸಮೀಪದಲ್ಲಿ ಇದ್ದನು. ಆತನು ಪುಲೋಮೆಯ ತಂದೆಯು ಈ ಶಬ್ದವನ್ನು ಕೇಳಿದಕೂಡಲೆ ಆಕೆಯನ್ನು ಮನ ಸ್ಸಿನಿಂದ ಲಗ್ನವಾಗಿ, "ಈಕೆಯು ನನ್ನ ಹೆಂಡತಿಯಾದಳು," ಎಂದು ತನ್ನೊಳಗೆ ಅಂದುಕೊಂಡನು. ಮುಂದೆ ಪುಲೋಮೆಯು ದೊಡ್ಡವಳಾದ ಬಳಿಕ ಆಕೆಯ ತಂದೆಯು ಭೃಗುಋಷಿಗಳಿಗೆ ಆಕೆಯನ್ನು ಕೊಟ್ಟು ಲಗ್ನ ಮಾಡಿದನು. ಅದರಿಂದ ಪುಲೋಮ ರಾಕ್ಷಸನು ಸಂತಾಪಗೊಂಡು ಭೃಗುಋಷಿಗಳಿಲ್ಲದಾಗ ಪುಲೋಮೆಯನ್ನು ಅಪಹರಿಸುವದಕ್ಕಾಗಿ ಈಗ ಅವರ ಆಶ್ರಮಕ್ಕೆ ಬಂದಿದ್ದನು.

ಹೀಗೆ ಪುಲೋಮ ರಾಕ್ಷಸನು ಪುಲೋಮೆಯನ್ನು ಅಪಹರಿಸುವ ನಿಶ್ಚಯಮಾಡಿದ್ದರೂ, ತನ್ನ ಕಾರ್ಯಕ್ಕೆ ಒಬ್ಬರ ಅನುಮತಿಯನ್ನಾದರೂ ಪಡೆಯಬೇಕೆಂದು ತಿಳಿದು, ಆತನು ಹೋಮಶಾಲೆಯಲ್ಲಿರುವ ಪ್ರದೀಪ್ತ ಅಗ್ನಿಯನ್ನು ಕುರಿತು—"ಎಲೈ ಅಗ್ನಿಯೇ, ಈ ಸ್ತ್ರೀಯು ಯಾರ ಹೆಂಡತಿ ಯೆಂಬದನ್ನು ನೀನು ಸತ್ಯವಾಗಿ ಹೇಳು. ಮೊದಲು ಈಕೆಯನ್ನು ಈಕೆಯ ತಂದೆಯು ನನಗೆ ಕೊಟ್ಟು, ಆಮೇಲೆ ನನ್ನ ವಿಶ್ವಾಸಘಾತಮಾಡಿ ಈಕೆ ಯನ್ನು ಭೃಗುಋಷಿಗೆ ಕೊಟ್ಟಿರುವನು. ಅದರಿಂದ ಈ ಸಂಗತಿಯು ಶಲ್ಯ ದಂತೆ ನನ್ನ ಹೃದಯದಲ್ಲಿ ಬಾಧಿಸುತ್ತಿರುವದು. ಎಲೈ ವೈಶ್ವಾನರನೇ, ನೀನು ದೇವತೆಗಳ ಮುಖವಾಗಿರುವದರಿಂದ ಅಸತ್ಯವನ್ನು ನುಡಿಯಲಾರೆ" ಎಂದು ನುಡಿದನು ; ಆದರೆ ತನ್ನ ಮಾತಿನ ಸತ್ಯತೆಯಬಗ್ಗೆ ಶಂಕಿತನಾಗಿ ಪುಲೋಮನು ಮತ್ತೆ ಅಗ್ನಿಯನ್ನು ಕುರಿತು—"ಎಲೈ ಅಗ್ನಿಯೇ, ಸರ್ವತ್ರ ದಲ್ಲಿ ನಿನ್ನ ವ್ಯಾಪ್ತಿಯು ಇರುವದರಿಂದ, ಎಲ್ಲರ ಹೃದಯಗಳನ್ನು ನೀನು ಬಲ್ಲೆ. ಪಾಪಪುಣ್ಯಗಳ ಸಾಕ್ಷಿಯಲ್ಲಿ ನಿನ್ನಹಾಗೆ ಮತ್ತೊಬ್ಬರಿಲ್ಲ. ನಾನು ಹೇಳುವದಿಷ್ಟೆ, ಪುಲೋಮೆಯ ತಂದೆಯು ಆಕೆಯನ್ನು ಮೊದಲು ನನಗೆ ಕೊಟ್ಟಿರುವದರಿಂದ, ಆಕೆಯಮೇಲೆ ಭೃಗುಋಷಿಯ ಯಾವಪ್ರಕಾರದ ಸತ್ತೆಯೂ ಉತ್ಪನ್ನವಾಗುವದಿಲ್ಲ ಭೃಗುಋಷಿಯ ಸರ್ವಜ್ಞತ್ವ-ಅಪ ರೋಕ್ಷಜ್ಞಾನಗಳ ಮೂಲಕ, ನನ್ನ ಲಗ್ನದ ಸಂಗತಿಯು ಆತನಿಗೆ ಗೊತ್ತಿರ ಲೇಬೇಕು ; ಅದ್ದರಿಂದ ಭೃಗುಋಷಿಯು ಪರಸ್ತ್ರೀಯ ಅಪಹಾರಮಾಡಿರು ವನೆಂತಲೂ ಹೇಳಬಹುದು ; ಆದ್ದರಿಂದ ಈ ಎಲ್ಲ ಸಂಗತಿಯ ವಿಚಾರ ಮಾಡಿ, ನೀನು ಯಾರದಾಕ್ಷಿಣ್ಯವನ್ನೂ ಇಡದೆ ಸತ್ಯವಾದದ್ದನ್ನು ಹೇಳು. ನನ್ನ ಮಾತು ನಿನಗೆ ಸತ್ಯವಾಗಿ ತೋರುತ್ತಿದ್ದರೆ, ಈಗ ಒಬ್ಬಳೇ ಇರುವ ಈ ಸುಂದರಿಯನ್ನು ನಿನ್ನ ಸಮಕ್ಷ ನಾನು ಅಪಹರಿಸುವೆನು"

ರಾಕ್ಷಸನ ಈ ಮಾತುಗಳನ್ನು ಕೇಳಿ ಅಗ್ನಿಯು ಒಳ್ಳೇ ಸಂಕಟದಲ್ಲಿ ಬಿದ್ದನು. ಆತನು ಮನಸ್ಸಿನಲ್ಲಿ—"ಕೇವಲ ಭೃಗುಋಷಿಗಳಂತೆ ಮಾತಾ ಡಿದರೆ, ಪುಲೋಮೆಯ ತಂದೆಯು ಆಕೆಯನ್ನು ಪುಲೋಮ ರಾಕ್ಷಸನಿಗೆ ಕೊಟ್ಟದ್ದು ನಿಜವಿರುವದರಿಂದ, ಸುಳ್ಳುಆಡಿದ ಪಾಪವು ನನಗೆ ಬರು ವದು. ಇನ್ನು ನಿಜವನ್ನು ಹೇಳಿದರೆ, ಭೃಗುಋಷಿಗಳು ಶಾಪವನ್ನು

ಕೊಡಬಹುದು,” ಎಂದು ಯೋಚಿಸಿದನು. ಆದರೂ ಸತ್ಯವಿದ್ದದ್ದನ್ನು ಹೇಳಿ ಮುಕ್ತನಾಗಬೇಕೆಂದು ಆತನು ಪುಲೋಮ ರಾಕ್ಷಸನನ್ನು ಕುರಿತು “ಎಲೈ ರಾಕ್ಷಸಾ, ನೀನು ಪೂರ್ವದಲ್ಲಿ ಪುಲೋಮೆಯನ್ನು ಮನಸ್ಸಿನಿಂದ ವರಿಸಿದ್ದು ನಿಜವು; ಆದರೆ ನಿನ್ನ ಲಗ್ನವು ವಿಧ್ಯುಕ್ತವಾಗಿ ಆಗಿರುವದಿಲ್ಲ. ಪುಲೋಮೆಯ ತಂದೆಯು ಭಾಗ್ಯಶಾಲಿನಿಯಾದ ಪುಲೋಮೆಯನ್ನು ಭೃಗುಋಷಿಗಳಿಗೆ ಯಥಾವಿಧಿ ಸಂಸ್ಕಾರಮಾಡಿ ಅರ್ಪಿಸಿರುವನು. ಒಟ್ಟಿಗೆ, ನೀನು ಮನಸ್ಸಿನಿಂದ ಲಗ್ನವಾದವಳನ್ನು ಭೃಗುಋಷಿಗಳು ನನ್ನ ಸಮಕ್ಷ ವಿಧಿಪೂರ್ವಕ ಲಗ್ನವಾಗಿರುವರು. ನಿಜವಾದ ಪ್ರಕಾರವು ಹೀಗಿರುವದು.”

---

## ೬ನೆಯ ಅಧ್ಯಾಯ — ಚ್ಯವನಜನ್ಮ

ಅಗ್ನಿಯ ಮಾತುಗಳು ಪುಲೋಮರಾಕ್ಷಸನಿಗೆ ಸಂಪೂರ್ಣ ಅನುಕೂಲವಾಗಿರದಿದ್ದರೂ “ನೀನು ಮೊದಲಿಗೆ ಪುಲೋಮೆಯನ್ನು ಮನಸ್ಸಿನಿಂದ ವರಿಸಿದೆ” ಎಂದು ಅಗ್ನಿಯು ಹೇಳಿದಕೂಡಲೆ, ಪುಲೋಮನು ವರಾಹರೂಪವನ್ನು ತಾಳಿ ಪುಲೋಮೆಯನ್ನು ಅಪಹರಿಸಿ ವಾಯುವೇಗ-ಮನೋವೇಗಗಳಿಂದ ಓಡಹತ್ತಿದನು. ಋಷಿಗಳೇ, ಆಗ ಪುಲೋಮೆಯ ಉದರದಲ್ಲಿ ಭೃಗುವಿನ ದೇದೀಪ್ಯಮಾನ ವೀರ್ಯವು ಗರ್ಭರೂಪದಿಂದ ಇತ್ತೆಂದು ಈ ಮೊದಲೇ ಹೇಳಿರುವೆನಷ್ಟೆ; ದುಷ್ಟರಾಕ್ಷಸನು ಹೀಗೆ ತನ್ನ ತಾಯಿಯನ್ನು ಅಪಹರಿಸಿಕೊಂಡು ಹೋಗುವದನ್ನು ನೋಡಿದಕೂಡಲೆ ಆ ಗರ್ಭವು ಸಿಟ್ಟಿನಿಂದ ಹೊರಬೀಳಲು, ಅದರ ಸೂರ್ಯನಂತಹ ಪ್ರಖರ ತೇಜದಿಂದ ರಾಕ್ಷಸನು ಸುಟ್ಟುಹೋಗಿ, ಕೂಡಲೆ ಪುಲೋಮೆಯ ಬಿಡುಗಡೆಯಾಯಿತು! ಶೌನಕಾದಿ ಋಷಿಗಳಿರಾ, ಪುಲೋಮೆಯ ಹೊಟ್ಟೆಯೊಳಗಿಂದ ಭಾರ್ಗವನಗರ್ಭವು ಹೀಗೆ ಚ್ಯುತಿಹೊಂದಿದ್ದರಿಂದ ಅದಕ್ಕೆ “ಚ್ಯವನ ಭಾರ್ಗವ” ಎಂಬ ಹೆಸರು ಉಂಟಾಯಿತು.

ಇಷ್ಟಾದಬಳಿಕ ಪುಲೋಮೆಯು ದುಃಖಿಸುತ್ತ ಶಿಶುವನ್ನು ಕಟ್ಟಿಕೊಂಡು ಆಶ್ರಮದ ಹಾದಿಯನ್ನು ಹಿಡಿದಳು. ಆಕೆಯ ಆ ದುಃಖವನ್ನು

ನೋಡಿ ಸರ್ವಲೋಕಪಿತಾಮಹನಾದ ಬ್ರಹ್ಮದೇವನು ಆ ಸ್ಥಳದಲ್ಲಿ ಅವತರಿಸಿ ಆಕೆಯನ್ನು ಸಮಾಧಾನಗೊಳಿಸಿದನು. ಆಗ ಪುಲೋಮೆಯು ಸುರಿಸಿದ ಕಣ್ಣೀರುಗಳಿಂದ ಒಂದು ಹೊಳೆಯು ಹರಿಯಲು, ಚ್ಯವನಾಶ್ರಮದ ಹತ್ತರ ಹರಿವ ಆ ಪ್ರವಾಹಕ್ಕೆ ಬ್ರಹ್ಮದೇವನು "ವಧೂಸರಾ" ಎಂಬ ಹೆಸರನ್ನು ಕೊಟ್ಟನು. ಮುಂದೆ ಭೃಗುಋಷಿಗಳು ಆಶ್ರಮಕ್ಕೆ ಬಂದ ಬಳಿಕ ಆ ಹೃದಯಭೇದಕ ಅವಸ್ಥೆಯನ್ನು ನೋಡಿ ಕೋಪಸಂತಪ್ತರಾಗಿ ತಮ್ಮ ಹೆಂಡತಿಗೆ-"ಭಾರ್ಯೆ, ನಿನ್ನ ವಿವಾಹದ ಗೂಢವೃತ್ತಾಂತವನ್ನು ಪುಲೋಮರಾಕ್ಷಸನಿಗೆ ಯಾರು ಹೇಳಿದರೆಂಬದನ್ನು ನಿಜವಾಗಿ ಹೇಳು; ಅಂದರೆ ಆ ಹೇಳಿದ ಅಧಮನನ್ನು ಶಪಿಸುವೆನು. ನನ್ನ ಶಾಪಕ್ಕೆ ಹೆದರದ ಪ್ರಾಣಿಯು ಈ ಜಗತ್ತಿನಲ್ಲಿ ಇಲ್ಲವು; ಆದ್ದರಿಂದ ನಿನಗೆ ದುಃಖಕೊಟ್ಟವನಿಗೆ ತಕ್ಕ ಶಾಸನಮಾಡುವದು ಯೋಗ್ಯವು" ಎಂದನು. ಆಗ ಪುಲೋಮೆಯು ಅಗ್ನಿಯ ಯಾವತ್ತು ವೃತ್ತಾಂತವನ್ನು ಹೇಳಲು, ಭೃಗುಋಷಿಗಳು ಸಿಟ್ಟಿನಿಂದ ಅಗ್ನಿಗೆ-"ನೀನು ಸರ್ವಭಕ್ಷಕನಾಗು" ಎಂದು ಶಾಪವನ್ನು ಕೊಟ್ಟರು.



## ೭ನೆಯ ಅಧ್ಯಾಯ—ಭೃಗುವಿನೊಡನೆ ಅಗ್ನಿಯ ಭಾಷಣ

ಮುನಿವರ್ಯರೇ, ಭೃಗುಋಷಿಯ ಶಾಪವಚನವನ್ನು ಕೇಳಿದ ಕೂಡಲೆ ಅಗ್ನಿಗೆ ಬಹಳ ಸಿಟ್ಟುಬಂದಿತು. ಆತನು ಭೃಗುವನ್ನು ಕುರಿತು- "ಎಲೈ ಬ್ರಾಹ್ಮಣಾ, ನೀನು ನನಗೆ ಶಾಪಕೊಟ್ಟದ್ದು ಎಂಥ ಸಾಹಸವು? ನಾನು ಧರ್ಮದಿಂದ ನಡೆಯುತ್ತಿದ್ದು, ನಿತ್ಯ ಸತ್ಯಭಾಷಣಮಾಡುತ್ತಿರಲು, ನನಗೆ ನೀನು ಹೀಗೆ ಶಾಪಕೊಡುವದು ಕೇವಲ ಅನುಚಿತವಲ್ಲವೇ! ಭಗವಂತಾ, ಸತ್ಯಧರ್ಮವನ್ನು ಕುರಿತು ಯಾರಾದರೂ ಪ್ರಶ್ನಮಾಡಿದರೆ, ಇದ್ದಕ್ಕಿದ್ದಹಾಗೆ ಹೇಳುವದು ನನ್ನ ಕರ್ತವ್ಯವಾಗಿರುವದು; ಅಂದಬಳಿಕ ಪುಲೋಮರಾಕ್ಷಸನಿಗೆ ನಾನು ಯಥಾರ್ಥಸಂಗತಿಯನ್ನು ಹೇಳಿದ್ದರಲ್ಲಿ ನನ್ನ ತಪ್ಪೇನು? ಮಹಾರಾಜ, ನಿಜವಾದ ಸ್ಥಿತಿಯು ಗೊತ್ತಿದ್ದು, ಅದನ್ನು ಹೇಳದಿದ್ದವನು ತನ್ನ ಹಿಂದಿನ ಹಾಗು ಮುಂದಿನ ಏಳೇಳು ತಲೆಯವರನ್ನು

ನರಕದಲ್ಲಿ ಹಾಕುವನೆಂದು ಶಾಸ್ತ್ರವಚನವಿರುವದು. ಇನ್ನು, ಈ ಪ್ರಸಂಗ ದಲ್ಲಿ ಮೌನಧಾರಣಮಾಡಬೇಕಾಗಿತ್ತೆಂದು ನೀನು ಅನ್ನಬಹುದು; ಆದರೆ ಸತ್ಯಸ್ವರೂಪವು ಗೊತ್ತಿದ್ದು ಸುಮ್ಮನಿರುವದೆಂದರೆ, ಅಸತ್ಯಾಚರ ಣೆಮಾಡಿದ ಹಾಗೆಯೇ ಸರಿ. ಬ್ರಾಹ್ಮಣಾ, ನಿನಗೆ ತಿರುಗಿ ಶಾಪಕೊಡಲು ನಾನು ಸಮರ್ಥನಿರುವೆನು ; ಆದರೆ ಬ್ರಾಹ್ಮಣರು ನನಗೆ ಪ್ರಿಯರಾಗಿರು ವದರಿಂದ ನಾನು ಹಾಗೆ ಮಾಡುವದಿಲ್ಲ. ಇದಲ್ಲದೆ, ನೀನು ಕೊಟ್ಟಿರುವ ಶಾಪವು ಅಷ್ಟು ಸುಸಂಬದ್ಧವಾದದ್ದಲ್ಲವೆಂಬದು ನಿನಗೂ ಗೊತ್ತಿರುವದು; ಆದರೂ ನಾನು ನಿನಗೆ ಮತ್ತೆ ಹೇಳುವೆನು ಕೇಳು.

ಭೃಗುಋುಷಿಯೇ, ನಾನು ಯೋಗಸಾಮರ್ಥ್ಯದಿಂದ ಗಾರ್ಹಪ ತ್ಯಾದಿ ವಿವಿಧರೂಪಗಳನ್ನು ಧರಿಸಿ, ಬಹುವಿಧ ಸ್ಥಳಗಳಲ್ಲಿ ವಾಸಿಸುವೆನು. ನನ್ನಲ್ಲಿ ಕೊಡುವ ಆಹುತಿಗಳನ್ನು ನಾನು ಸ್ವೀಕರಿಸಿದೆನೆಂದರೆ, ಅವು ಗಳಿಂದ ದೇವತೆಗಳೂ, ಪಿತೃಗಳೂ ತೃಪ್ತರಾಗುವರು. ನನ್ನಲ್ಲಿ ಮಾಡಿದ ಹವನ, ಹಾಗು ದೇವ-ಪಿತೃಗಣ ಇವುಗಳ ಅನ್ಯೋನ್ಯಸಂಬಂಧವು ತೀರ ಅಭಿನ್ನವಾಗಿರುವದು ; ಅಂದರೆ ಸೋಮರಸ, ತುಪ್ಪ, ಹಾಲು ಮೊದ ಲಾದ ಅಪರೂಪದ ಹೋಮದ್ರವ್ಯಗಳು ಪ್ರತ್ಯಕ್ಷದೇವತೆಗಳ ಹಾಗು ಪಿತೃ ಗಳ ರೂಪಗಳಾಗಿರುವವು ; ಆದ್ದರಿಂದ ಆ ಹೋಮದ್ರವ್ಯಗಳ ಹವನವಾದ ಕೂಡಲೆ, ಆ ದ್ರವ್ಯಗಳು ತಮ್ಮ ಮೂಲರೂಪವಾದ ದೇವ ಪಿತೃಗಳ ರೂಪದಲ್ಲಿ ಕೂಡಿಹೋಗುವವು ಅದರಂತೆ, ಪಿತೃಗಳ ದರ್ಶಮಾಸ ಯಾಗವೂ, ದೇವತೆಗಳ ಪೌರ್ಣಮಾಸಯಾಗವೂ ವಸ್ತುತಃ ಹವನೀಯ ಪದಾರ್ಥಾತ್ಮಗಳೇ ಆಗಿರುವವು ; ಆದ್ದರಿಂದ ದೇವತೆಗಳೂ, ಪಿತೃಗಳೂ ಪರ್ವಕಾಲಗಳಲ್ಲ ಭಿನ್ನವಾಗಿ ತೋರಿದರೂ, ನಿಜವಾಗಿ ಏಕರೂಪರೇ ಆಗಿ ರುವರು. ನನಗೆ ಅರ್ಪಣಮಾಡಿದ ದ್ರವ್ಯಗಳನ್ನೇ ದೇವಪಿತೃಗಳು ಸೇವಿ ಸುವದರಿಂದ, ನನಗೆ ಅವರ ಮುಖವೆನ್ನುವರು. ಅಮಾವಾಸ್ಯೆಯಲ್ಲಿ ಪಿತೃಗಳೂ, ಹುಣ್ಣಿವೆಯಲ್ಲಿ ದೇವತೆಗಳೂ ತಮ್ಮ ಅಗ್ನಿರೂಪಮುಖ ದಿಂದ, ಅಂದರೆ ನನ್ನ ದ್ವಾರದಿಂದಲೇ ಹವಿರ್ಭಾಗವನ್ನು ಗ್ರಹಿಸಿ ಸಂತುಷ್ಟ ರಾಗುವದರಿಂದ, ನಾನು ಸರ್ವಭಕ್ಷಕನು ಹೇಗಾಗಬೇಕು ? ”

**ಅಗ್ನಿಯ ಶಾಪವಿಮೋಚನವು** — ಶೌನಕಾದಿ ಋಷಿಗಳಿರಾ, ಆಮೇಲೆ ಅಗ್ನಿಯು ಸ್ವಲ್ಪಹೊತ್ತು ಮನನಮಾಡಿ ತನ್ನರೂಪವನ್ನು ಗುಪ್ತಮಾಡಿದನು; ಆದ್ದರಿಂದ ಬ್ರಾಹ್ಮಣರ ಅಗ್ನಿಹೋತ್ರಾದಿಗಳಲ್ಲಿಯು ಅಗ್ನಿಯು ಲೋಪವಾಯಿತು. ಅಗ್ನಿಯಿಲ್ಲದ್ದರಿಂದ ಯಾವತ್ತು ಪ್ರಜೆಗಳು ಅತ್ಯಂತದುಃಖಿತರಾದರು. ಇನ್ನು ಸರ್ವರ ನಾಶವಾಗುವದೆಂದು ನೋಡಿ ಋಷಿಗಳು ದೇವತೆಗಳ ಕಡೆಗೆ ಹೋಗಿ, ಈ ಎಲ್ಲ ಅನರ್ಥವನ್ನು ದೂರಿಕೊಂಡರು. ಬಳಿಕ ಋಷಿಗಳೂ, ದೇವತೆಗಳೂ ಕೂಡಿ ಬ್ರಹ್ಮದೇವನಬಳಿಗೆ ಹೋಗಿ ಯಾವತ್ತು ಸಂಗತಿಯನ್ನು ತಿಳಿಸಿದರು. ಆಗ ಬ್ರಹ್ಮದೇವನು ಅಗ್ನಿಯನ್ನು ಕೂಗಿ ಕರೆದು ಅತ್ಯಂತ ಗೌರವದಿಂದ ಆತನನ್ನು ಕುರಿತು- "ಅಗ್ನಿಯೇ, ಎಲ್ಲಲೋಕಗಳ ಉತ್ಪಾದಕನೂ, ರಕ್ಷಕನೂ, ಸಂಹರ್ತೃವೂ ನೀನೇ ಆಗಿರುವೆ; ನಿನ್ನಿಂದಲೇ ಯಜ್ಞಯಾಗಾದಿಗಳು ನಡೆಯುವವು; ನಿನ್ನಿಂದಲೇ ಮೂರುಲೋಕಗಳ ಯೋಗಕ್ಷೇಮವು ಸಾಗುವದು; ಆದ್ದರಿಂದ ಎಲೈ ಲೋಕನಾಯಕನೇ, ಯಜ್ಞಯಾಗಾದಿಗಳು ಅವಿಚ್ಛಿನ್ನವಾಗಿ ನಡೆಯುವಂತೆ ಮಾಡು. ಹುತಾಶನಾ, ನೀನು ಸ್ವತಃ ಜ್ಞಾನಸಂಪನ್ನನಿದ್ದು, ಹೀಗೆ ಮೋಹವಶನು ಹೇಗಾದೆ? ನೀನು ಸರ್ವಕಾಲಗಳಲ್ಲಿಯೂ ಪವಿತ್ರನಾಗಿರುವೆ. ಯಾವತ್ತು ಪ್ರಾಣಿಗಳ ಪರ್ಯವಸಾನವು ನಿನ್ನಲ್ಲಿಯೇ ಆಗುತ್ತದೆ ಅಂದಬಳಿಕ, ನೀನು ನಿನ್ನ ಇಡಿಯ ಶರೀರದಿಂದ ಸರ್ವಭಕ್ಷಕನು ಹೇಗಾಗುವೆ ಹೇಳು? ನಿನ್ನ ಕೆಳಭಾಗದಲ್ಲಿರುವ ಜ್ವಾಲೆಯುಮಾತ್ರ ಪವಿತ್ರ, ಅಥವಾ ಅಪವಿತ್ರವಸ್ತುಗಳ ಭಕ್ಷಣಮಾಡುವದು; ಆದ್ದರಿಂದ ನಿನ್ನ ಆಕ್ರವ್ಯಾದ ತನುವುಮಾತ್ರ ಸರ್ವಭಕ್ಷಕವಾಗುವದು. ಉಳಿದ ತನುವು ಹಾಗೆ ಸರ್ವಭಕ್ಷಕವಾಗಲಾರದು. ಸೂರ್ಯಕಿರಣಗಳ ಸ್ಪರ್ಶದಿಂದ ಎಲ್ಲಪದಾರ್ಥಗಳು ಶುದ್ಧವಾಗುವಂತೆ, ನಿನ್ನಿಂದ ದಗ್ಧವಾದ ಪ್ರತಿಒಂದು ಪದಾರ್ಥವು ಶುದ್ಧವಾಗುವದು. ಎಲೈ ವಿಶ್ವವ್ಯಾಪಕ ಅಗ್ನಿಯೇ, ನೀನು ಮಹಾ ತೇಜಸ್ವಿಯಾಗಿರುವೆ. ವಾಣಿಯ ದೇವತೆಯು ನೀನೇ ಆಗಿರುವದರಿಂದ, ಭೃಗುವಾಣಿಯಿಂದ ಹೊರಟಿರುವ ಶಾಪವಾಣಿಯೂ ವಾಸ್ತವವಾಗಿ ನಿನ್ನಿಂದಲೇ ಹೊರಟಿತೆಂದು ಹೇಳಬೇಕಾಗುವದು; ಆದ್ದರಿಂದ ಆ ಶಾಪವನ್ನು ನಿನ್ನ ತೇಜಸ್ಸಿನಿಂದ ಸತ್ಯವಾಗಿ

ಮಾಡು ” ಎಂದು ಹೇಳಿದನು. ಋಷಿಗಳೇ, ಬ್ರಹ್ಮದೇವನ ಈ ಬೋಧ ವಚನಗಳಿಗೆ ಮಾನ್ಯತೆಯಿತ್ತು, ಆತನ ಅಪ್ಪಣೆಯಂತೆ ನಡೆಯುವದಕ್ಕಾಗಿ ಅಗ್ನಿಯು ಹೊರಟುಹೋದನು. ಆಗ ಸರ್ವವ್ಯವಹಾರಗಳು ಸುಸೂತ್ರವಾಗಿ ನಡೆಯಹತ್ತಿದವು.



## ೮ನೇ ಅಧ್ಯಾಯ—ಪ್ರಮದ್ವರಾ-ರುರುಗಳ ವಿವಾಹ

ಮುನಿವರ್ಯರೇ, ಭೃಗುವಂಶದಲ್ಲಿ 'ರುರು' ಎಂಬ ಋಷಿಯು ಆದನೆಂದು ಈ ಮೊದಲೆ ಹೇಳಿದೆನಷ್ಟೆ? ಆ ರುರುವು ಪ್ರಮದ್ವರೆಯೆಂಬ ಸುಂದರಿಯನ್ನು ಲಗ್ನವಾದ ವೃತ್ತಾಂತವನ್ನು ಹೇಳುವೆನು ಕೇಳಿರಿ. ಪೂರ್ವದಲ್ಲಿ ಸ್ಥೂಲಕೇಶನೆಂಬ ಹೆಸರಿನ ಒಬ್ಬ ಮಹಾನ್ ಋಷಿಯು ಆಗಿಹೋದನು. ಆ ಪ್ರಖರತಪಸ್ವಿಯು, ಯಾವತ್ತು ಪ್ರಾಣಿಗಳ ಹಿತವು ಯಾತರಿಂದಾದೀತೆಂಬ ನಿಧಿಧ್ಯಾಸದಲ್ಲಿ ಯಾವಾಗಲೂ ಇರುತ್ತಿದ್ದನು. ಆ ಕಾಲದಲ್ಲಿ ಗಂಧರ್ವರಾಜನಾದ ವಿಶ್ವಾವಸುವಿನಿಂದ ಮೇನಕೆಯೆಂಬ ಅಪ್ಸರೆಯಲ್ಲಿ ಗರ್ಭಸ್ಥಾಪನೆಯಾಯಿತು. ಮುಂದೆ ಮೇನಕೆಯು ಯಥಾಕಾಲದಲ್ಲಿ ತನ್ನ ಆ ಗರ್ಭವನ್ನು ಸ್ಥೂಲಕೇಶಋಷಿಯ ಆಶ್ರಮದ ಬಳಿಯ ನದೀತೀರದಲ್ಲಿ ವಿಸರ್ಜನಮಾಡಿ, ಲೋಕಾಪವಾದವನ್ನೂ, ಭೂತದಯೆಯನ್ನೂ ಲಕ್ಷಿಸದೆ ತನ್ನ ಸ್ಥಾನಕ್ಕೆ ಹೊರಟುಹೋದಳು. ಇತ್ತ ಆ ಶಿಶುವು ಅಕಸ್ಮಾತ್ ಸ್ಥೂಲಕೇಶಋಷಿಗಳ ಕಣ್ಣಿಗೆ ಬೀಳಲು, ಅವರು ದಯಾಪರರಾಗಿ ಶಿಶುವನ್ನು ತಂದು ತಮ್ಮ ಆಶ್ರಮದಲ್ಲಿ ರಕ್ಷಿಸತೊಡಗಿದರು. ಆ ಹೆಣ್ಣುಕೂಸಿನ ಜಾತಕರ್ಮಾದಿ ಸಂಸ್ಕಾರಗಳನ್ನು ಆ ಸ್ಥೂಲಕೇಶಋಷಿಗಳೇ ಮಾಡಿದರು. ಮೇನಕೆಯ ಆ ಸುಂದರ ಅಪತ್ಯವು ಮೆಲ್ಲಮೆಲ್ಲನೆ ಬೆಳೆಯಹತ್ತಿತು. ಮುಂದೆ ಆ ಹುಡುಗೆಯು ದೊಡ್ಡದಾದಂತೆ ಅದರರೂಪವೂ, ಸತ್ವಾದಿ ಮೋಹಕಗುಣಗಳೂ ಪ್ರಕಟವಾಗತೊಡಗಿದವು ಆ ಹುಡುಗೆಯ ಅದ್ವಿತೀಯ ಲಾವಣ್ಯವನ್ನೂ, ಲೋಕೋತ್ತರ ಶೀಲವನ್ನೂ ನೋಡಿ, ಸ್ಥೂಲಕೇಶಋಷಿಗೆ ಬಹಳ ಸಂತೋಷವಾಯಿತು. ಆಕೆಯು

ಎಲ್ಲ ಪ್ರಮದೆಯರಲ್ಲಿ 'ವರ' ಅಂದರೆ ಶ್ರೇಷ್ಠಳಾದದ್ದರಿಂದ, ಆಕೆಗೆ ಸ್ಥೂಲಕೇಶನು 'ಪ್ರಮದ್ವರೆ' ಯೆಂಬ ಹೆಸರನ್ನಿಟ್ಟನು.

ಋಷಿಗಳೇ, ಮುಂದೆ ಆ ಮೇನಕಾತನಯೆಗೆ ಯೌವನವು ಪ್ರಾಪ್ತವಾಯಿತು. ಆ ಸ್ಥಿತಿಯಲ್ಲಿ ರುರುವು ಸ್ಥೂಲಕೇಶಾಶ್ರಮಕ್ಕೆ ಹೋಗಿ, ಪ್ರಮದ್ವರೆಯ ರೂಪವನ್ನು ನೋಡಿ ಮೋಹಿತನಾಗಿ, ಆ ಸಂಗತಿಯನ್ನು ತನ್ನ ಮಿತ್ರರ ಮುಖಾಂತರ ತನ್ನ ತಂದೆಗೆ ತಿಳಿಸಿದನು. ಆಗ ರುರುವಿನ ತಂದೆಯು, ಅಂದರೆ ಪ್ರಮತಿಯು ಸ್ಥೂಲಕೇಶನ ಬಳಿಗೆ ಹೋಗಿ ತನ್ನ ಮಗನಿಗಾಗಿ ಪ್ರಮದ್ವರೆಯನ್ನು ಕೇಳಿದನು. ಅದಕ್ಕೆ ಸ್ಥೂಲಕೇಶನು ಒಪ್ಪಿಕೊಳ್ಳಲು, ಮುಂದೆ ಉತ್ತರಾಫಾಲ್ಗುನೀ ನಕ್ಷತ್ರದಲ್ಲಿ ಅವರ ವಿವಾಹ ಮಾಡುವದನ್ನು ನಿಶ್ಚಯಿಸಿದರು; ಆದರೆ ಒಂದು ದಿನ ಪ್ರಮದ್ವರೆಯು ತನ್ನ ಸಖಿಯರೊಡನೆ ಕ್ರೀಡಿಸುತ್ತಿರುವಾಗ, ಆಕೆಯು ಕಾಲನಕಸಿಂದ ನೋಡದೆ ಒಂದು ಮಹಾಸರ್ಪವನ್ನು ತುಳಿಯಲು, ಆ ಭಯಂಕರಸರ್ಪವು ಒಳ್ಳೇ ಕಸುವಿನಿಂದ ಪ್ರಮದ್ವರೆಯನ್ನು ಕಚ್ಚಿತು. ಆಗ ಆ ಘೋರಸರ್ಪದ ವಿಷವು ಪ್ರಮದ್ವರೆಯ ಶರೀರದಲ್ಲಿ ವ್ಯಾಪಿಸಿ, ಆ ಸುಂದರಿಯು ಮೂರ್ಛಿತಳಾಗಿ ಬಿದ್ದಳು; ಆಕೆಯ ಸಖಿಯರು ದುಃಖಿತರಾದರು. ಈ ಅನರ್ಥವನ್ನು ಕೇಳಿ ಎಲ್ಲ ಋಷಿಗಳು ಕೂಡಿದರು. ಜನರ ದುಃಖವು ಹೆಚ್ಚಿತು. ಆಗ ರುರುವೂ ಅಲ್ಲಿಗೆ ಬಂದಿದ್ದನು. ಆತನಿಗಂತು ಮಹದ್ದುಃಖವು ಪ್ರಾಪ್ತವಾಗಿ, ಆತನು ಅಲ್ಲಿ ನಿಲ್ಲದೆ ಹೊರಗೆ ಹೊರಟುಹೋದನು. ಉಳಿದ ಋಷಿಗಳು ಮಾತ್ರ ಅಲ್ಲಿಯೇ ಕುಳಿತುಕೊಂಡರು.



## ೯ನೇ ಅಧ್ಯಾಯ—ಪ್ರಮದ್ವರೆಯ ಸಂಜೀವನ

ಋಷಿಗಳೇ, ಪ್ರಮದ್ವರೆಯು ಮರಣಹೊಂದಿದ್ದನ್ನು ನೋಡಿ ರುರುವು ಘೋರಾರಣ್ಯಕ್ಕೆ ಹೋಗಿ ಶೋಕಿಸತೊಡಗಿದನು. ಆತನು ಕಣ್ಣೀರು ಸುರಿಸುತ್ತ—"ಅಹಹ! ಎಂಥ ಕಷ್ಟದ ಪ್ರಸಂಗವಿದು! ಭಗವಂತಾ, ನಾನು ಈವರೆಗೆ ಸತ್ಪಾತ್ರದಲ್ಲಿ ದಾನಧರ್ಮಮಾಡಿದ್ದರೆ, ಈವರೆಗೆ ನಾನು ಭಕ್ತಿಪುರಸ್ಸರ ಸದ್ಗುರುವನ್ನು ಸೇವಿಸಿದ್ದರೆ, ಜನ್ಮದಾರಭ್ಯ

ನನ್ನಿಂದ ಉತ್ತಮಪ್ರಕಾರದ ತಪಶ್ಚರ್ಯವು ಘಟಿಸಿದ್ದರೆ, ಈವರೆಗೆ ನಾನು ಮನೋನಿಗ್ರಹದಿಂದ ವ್ರತಾನುಷ್ಠಾನಗಳನ್ನು ಆಚರಿಸಿದ್ದರೆ ಆ ಪುಣ್ಯಯೋಗದಿಂದ ನನ್ನ ವಲ್ಲಭೆಯು ಬದುಕಲಿ," ಎಂದು ಹಂಬಲಿಸುತ್ತಿರಲು, ಒಬ್ಬ ದೇವದೂತನು ಆ ಸ್ಥಳದಲ್ಲಿ ಪ್ರಾಪ್ತನಾಗಿ ರುರುವನ್ನು ಕುರಿತು—"ಎಲೈ ಆಯುಷ್ಮಂತನೇ, ಆಯುಷ್ಯತೀರಿದವರಿಗೆ ಎಷ್ಟು ಪುಣ್ಯ ಕೊಟ್ಟರೂ ಅವರು ಹೇಗೆ ಬದುಕಬೇಕು? ಪ್ರಮದ್ವರೆಯ ಆಯುಷ್ಯವು ತೀರಿರುವದರಿಂದ ವ್ಯರ್ಥ ಶೋಕಿಸಬೇಡ. ಇನ್ನು, ಇಂಥ ಆಪತ್ತನ್ನು ನಿವಾರಿಸಿಕೊಳ್ಳಲಿಕ್ಕೆ ಹಿಂದಕ್ಕೆ ಮಹಾನ್ ಮಹಾನ್ ದೇವತೆಗಳು ಒಂದು ಉಪಾಯವನ್ನು ಹೇಳಿರುವರು. ನಿನ್ನ ಆಯುಷ್ಯದಲ್ಲಿ ಅರ್ಧಆಯುಷ್ಯವನ್ನು ನೀನು ಪ್ರಮದ್ವರೆಗೆ ಕೊಟ್ಟರೆ, ಆಕೆಯು ಬದುಕಬಹುದು," ಅನ್ನಲು, ಅದಕ್ಕೆ ರುರುವು—"ನಾನು ಆ ಸುಂದರಿಗೆ ನನ್ನ ಅರ್ಧಆಯುಷ್ಯವನ್ನು ಕೊಡಲು ಸಿದ್ಧನಿರುವೆನು; ಅದರ ಯೋಗದಿಂದ ನನ್ನ ಭಾರ್ಯೆಯು ಪುನಃ ಜೀವಂತವಾಗಬೇಕು."

ಋಷಿಗಳೇ, ಬಳಿಕ ಆ ದೇವದೂತನು ವಿಶ್ವಾವಸುಗಂಧರ್ವನ ಕಡೆಗೆ ಹೋದನು. ಆಮೇಲೆ ಅವರಿಬ್ಬರೂ ಯಮಸಭೆಗೆ ಹೋಗಿ, ಆತನಿಗೆ ಎಲ್ಲಸಂಗತಿಯನ್ನು ಹೇಳಿ—"ಎಲೈ ಯಮಧರ್ಮರಾಜಾ, ಪ್ರಮದ್ವರೆಯು ನಿಜವಾಗಿಯೇ ಮರಣಹೊಂದಿದ್ದರೆ, ರುರುವಿನ ಅರ್ಧಆಯುಷ್ಯದಿಂದ ಆಕೆಯು ಬದುಕಬೇಕೆಂದು ನಾವು ಬೇಡಿಕೊಳ್ಳುವೆವು," ಎಂದು ನುಡಿದರು. ಅದಕ್ಕೆ ಯಮಧರ್ಮನು—"ಎಲೈ ದೇವದೂತನೇ, ಪ್ರಮದ್ವರೆಯು ಆಯುಷ್ಯತೀರಿ ಮರಣಹೊಂದಿರುವಳು; ಆದರೆ ಆಕೆಯ ಆಯುಷ್ಯತಂತುವಿಗೆ ರುರುವಿನ ಅರ್ಧಆಯುಷ್ಯತಂತುವನ್ನು ಕೂಡಿಸಿದರೆ ಮಾತ್ರ ಆಕೆಯು ಪುನಃ ಜೀವಿಸುವಳು; ಯಾಕಂದರೆ, ಪತಿಪತ್ನಿಯರು ವಸ್ತುತಃ ಒಂದೇ ಇರುವದರಿಂದ, ಪತಿಯ ಆಯುಷ್ಯದ ವಿನಿಯೋಗವನ್ನು ಪತ್ನಿಯ ಸಂಜೀವನಾರ್ಥ ಮಾಡಲಿಕ್ಕೆ ಪ್ರತ್ಯವಾಯವಿಲ್ಲ" ಎಂದು ಹೇಳಿದನು. ಅಷ್ಟರಲ್ಲಿ ರುರುವು ತನ್ನ ಅರ್ಧಆಯುಷ್ಯವನ್ನು ಕೊಟ್ಟದ್ದರಿಂದ, ನಿದ್ದೆಹತ್ತಿದವರು ಎದ್ದು ಕುಳಿತುಕೊಳ್ಳುವಂತೆ, ಪ್ರಮದ್ವರೆಯು ಎದ್ದು ಕುಳಿತುಕೊಂಡಳು. ರುರುವಿನ ಜಾತಕದಲ್ಲಿ ಆತನ ಅರ್ಧಆಯುಷ್ಯವು ಹೆಂಡತಿಯ ಸಲುವಾಗಿ

ವೆಚ್ಚವಾಗುವದು ಬರೆದಿತ್ತು. ಮುಂದೆ ಸ್ಥೂಲಕೇಶ-ಪ್ರಮತಿಗಳು ಆ ರುರು-ಪ್ರಮದ್ವರೆಯರ ಲಗ್ನಮಾಡಿದರು. ಬಳಿಕ ಆ ವಧೂವರರು ನಾನಾ ಪ್ರಕಾರದ ವಿಲಾಸಗಳನ್ನು ಭೋಗಿಸುತ್ತ, ಒಬ್ಬರ ಹಿತಕ್ಕಾಗಿ ಒಬ್ಬರು ಯತ್ನಿಸಹತ್ತಿದರು. ಬಳಿಕ ರುರುವು ಸರ್ಪಗಳನ್ನು ಕಂಡಲ್ಲಿ ಕೊಲ್ಲುವ ನಿಯಮಮಾಡಿದನು. ಆತನು ಒಂದುದಿನ ಗಹನವಾದ ಅರಣ್ಯಕ್ಕೆ ಹೋಗಿರಲು, ಅಲ್ಲಿ ಒಂದು ಮುದುಕ ಡುಂಡುಭವು (ಮಣ್ಣುಮುಕ್ಕಹಾವು) ಆತನ ಕಣ್ಣಿಗೆ ಬಿದ್ದಿತು. ಅದನ್ನು ನೋಡಿದಕೂಡಲೆ ರುರುವು ತನ್ನ ಕಾಲದಂಡವನ್ನು ಎತ್ತಿ ಅದರಮೇಲೆ ಹಾಕುವವನು ; ಅಷ್ಟರಲ್ಲಿ ಡುಂಡುಭವು ಆತನನ್ನು ಕುರಿತು—"ಎಲೈ ತಪೋಧನಾ, ನಾನು ನಿನ್ನ ಅಪರಾಧವನ್ನೇನೂ ಮಾಡದಿರುವಾಗ, ನೀನು ಸಿಟ್ಟಿನಿಂದ ನನ್ನನ್ನು ಕೊಲ್ಲತೊಡಗಿರುವೆಯಲ್ಲ, ಇದೇನು?"



## ೧೦-೧೧ನೇ ಅಧ್ಯಾಯುಗಳು—ರುರು-ಡುಂಡುಭಸಂವಾದ

ರುರು—"ಎಲೈ ಉರಗಾ, ನನ್ನ ಪ್ರಾಣ-ಪ್ರಿಯಭಾರ್ಯೆಯನ್ನು ಒಂದು ಭುಜಂಗವು ಕಡಿಯಿತು ; ಅಂದಿನಿಂದ ನಾನು ಕಣ್ಣಿಗೆ ಬಿದ್ದ ಹಾವುಗಳನ್ನು ಕೊಲ್ಲುವ ನಿಯಮಮಾಡಿದ್ದೇನೆ; ಆದ್ದರಿಂದ ಈಗ ನೀನು ಸಾಯಲಿಕ್ಕೆ ಸಿದ್ಧನಾಗು," ಎಂದು ಹೇಳಿದನು. ಅದಕ್ಕೆ ಡುಂಡುಭವು—"ಎಲೈ ಬ್ರಾಹ್ಮಣಾ, ಕಚ್ಚುವ ಹಾವುಗಳು ಬೇರೆ, ನಾನುಬೇರೆ. ನಾನು ಮಣ್ಣುಮುಕ್ಕಹಾವು ; ನನ್ನಲ್ಲಿ ವಿಷದ ಲೇಶವೂ ಇರುವದಿಲ್ಲ. ಹಾವಿನಹಾಗೆ ಕಂಡಮಾತ್ರದಿಂದ ನನ್ನನ್ನು ಕೊಲ್ಲುವದು ಯೋಗ್ಯವಲ್ಲ. ಬ್ರಾಹ್ಮಣಾ, ಒಂದರ ಅಪರಾಧಕ್ಕಾಗಿ ಅದರ ಜಾತಿಯನ್ನೇ ದ್ವೇಷಿಸುವದು ನ್ಯಾಯವೇ? ವ್ಯಕ್ತಿಸಮುದಾಯದಲ್ಲಿ, ಅಂದರೆ ಒಂದು ಜಾತಿಯಲ್ಲಿ ಒಬ್ಬ ವ್ಯಕ್ತಿಯು ಏನಾದರೂಅರ್ಥಸಂಪಾದಿಸಿದರೆ, ಆಅರ್ಥದಿಂದಾಗುವ ಸುಖೋಪಭೋಗವು ಆ ವ್ಯಕ್ತಿಗಷ್ಟೇ ದೊರೆಯಬೇಕು ; ಆದರೆ ಒಬ್ಬ ವ್ಯಕ್ತಿಯು ಏನಾದರೂ ಅನರ್ಥವನ್ನು, ಅಂದರೆ ಅಪರಾಧವನ್ನು ಮಾಡಿದರೆ, ಆ ಅನರ್ಥದ ದ್ವಾರದಿಂದಾಗುವ ದುಷ್ಪರಿಣಾಮವನ್ನುಮಾತ್ರ ವ್ಯಕ್ತಿಸಮುದಾಯವು, ಅಂದರೆ

ಎಲ್ಲ ಜಾತಿಯು ಭೋಗಿಸಬೇಕು; ಇದು ಎಲ್ಲಿಯ ನ್ಯಾಯವು? ಇದು ಸರ್ವಥಾ ಗರ್ಹಣೀಯವು; ಆದ್ದರಿಂದ ನೀನು ನ್ಯಾಯಾನ್ಯಾಯಗಳ ವಿಚಾರಮಾಡಿ ಆ ದುಷ್ಟಭುಜಂಗರ ಅಸದ್ವರ್ತನಕ್ಕಾಗಿ ನನ್ನಮೇಲೆ ಶಸ್ತ್ರಪ್ರಹಾರಮಾಡ ಬೇಡ. ಧರ್ಮಾಧರ್ಮ-ವಿವೇಕವಿದ್ದ ನಿನ್ನಿಂದ ಇಂಥ ಅಪರಾಧಘಟಿಸು ವದು ಪ್ರಶಸ್ತವಲ್ಲ.

ಋಷಿಗಳೇ, ಡುಂಡುಭದ ಈ ಮಾತುಗಳನ್ನು ಕೇಳಿ ರುರುವು ಮನ ಸ್ಸಿನಲ್ಲಿ-"ಇದು ನಿಜವಾಗಿಯೂ ಸರ್ಪವಲ್ಲ. ಇವನು ಯಾವನಾದರೂ ಭಯಾಕುಲನಾಗಿರುವ ಋಷಿಯಿರಬೇಕು" ಎಂದು ಯೋಚಿಸಿ, ತನ್ನ ದಂತ ವನ್ನು ಹಿಂದಕ್ಕೆ ತಕ್ಕೊಂಡು ಆ ಡುಂಡುಭರೂಪದ ಋಷಿಯನ್ನು ಸಮಾ ಧಾನಗೊಳಿಸಿ-"ಎಲೈ ಡುಂಡುಭನೇ, ನೀನು ವಾಸ್ತವವಾಗಿ ಡುಂಡುಭನಿ ರುವೆಯೆಂದು ನನಗೆ ತೋರುವದಿಲ್ಲ; ಆದ್ದರಿಂದ ಈ ವಿಪರೀತಸ್ಥಿತಿ ಯನ್ನು ಹೊಂದಿರುವ ನೀನು ಯಾರಿರುವೆಯೆಂಬದನ್ನು ನನಗೆ ಹೇಳು," ಎಂದು ಕೇಳಲು, ಡುಂಡುಭನು-"ಎಲೈ ರುರೋ, ನಾನು ಪೂರ್ವದಲ್ಲಿ "ಸಹಸ್ರಪಾತ್" ಎಂಬ ಹೆಸರಿನ ಒಬ್ಬ ಋಷಿಯಿದ್ದೆನು. 'ಖಗಮ' ಎಂಬ ಹೆಸರಿನ ಒಬ್ಬ ದ್ವಿಜನು ನನ್ನ ಮಿತ್ರನಾಗಿದ್ದನು ಅತ್ಯಂತ ತಪೋ ಬಲವುಳ್ಳ ಖಗಮನ ವಾಣಿಯು ಬಹು ತೀಕ್ಷ್ಣವಾಗಿತ್ತು. ಒಂದ ದಿನ ನಾನು ನನ್ನ ಆ ಮಿತ್ರನನ್ನು ಅಂಜಿಸುವದಕ್ಕಾಗಿ ಒಂದು ಹುಲ್ಲಿನ ಹಾವು ಮಾಡಿ, ಅಗ್ನಿಹೋತ್ರದ ಕಾರ್ಯದಲ್ಲಿ ಮಗ್ನನಾಗಿದ್ದ ಆ ನನ್ನ ಮಿತ್ರನ ಮೇಲೆ ಅದನ್ನು ಬಿಟ್ಟೆನು. ಕಾರ್ಯತತ್ಪರನಾಗಿದ್ದ ನನ್ನ ಮಿತ್ರನಿಗೆ ಅದು ಹುಲ್ಲಿನಹಾವು ಎಂಬದು ಗೊತ್ತಾಗದೆ, ಭಯದಿಂದ ಆತನು ಮೈ ಮರೆತು ಬಿದ್ದನು. ಮುಂದೆ ಎಚ್ಚತ್ತಮೇಲೆ ಆತನಿಗೆ ಎಲ್ಲಪ್ರಕಾರವು ಗೊತ್ತಾಗಲು, ಆತನು ಕ್ರೋಧಸಂತಪ್ತನಾಗಿ ನನಗೆ-"ಎಲೈ ಋಷಿಯೇ, ನೀನು ನನ್ನನ್ನು ಅಂಜಿಸಿದ ಸರ್ಪದಂತಹ ತೃಣತುಲ್ಯ (ದುರ್ಬಲ) ಸರ್ಪ ವಾಗು" ಎಂದು ಶಪಿಸಿದನು. ಆತನ ತಪೋಮಹಿಮೆಯನ್ನರಿತ ನಾನು ವಿನಯದಿಂದ ಕೈಜೋಡಿಸಿ ಆತನನ್ನು ಕುರಿತು-"ಎಲೈ ಋಷಿಯೇ, ನೀನು ನನ್ನ ಮಿತ್ರನೆಂದು ತಿಳಿದು ವಿನೋದಕ್ಕಾಗಿ ನಾನು ಈ ಅತಿಪ್ರಸಂಗವನ್ನು ಮಾಡಿದೆನು. ದಯಮಾಡಿ ನನ್ನನ್ನು ಈ ಶಾಪದಿಂದ ಮುಕ್ತಮಾಡು,"

ಎಂದು ಪ್ರಾರ್ಥಿಸಿದೆನು. ಎಲೈ ರುರೋ, ನನ್ನ ಪ್ರಾರ್ಥನೆಯಿಂದ ನನ್ನ ಮಿತ್ರನಿಗೆ ದಯೆಯು ಉತ್ಪನ್ನವಾಗಿ, ಆತನು ನನ್ನನ್ನು ಕುರಿತು—"ಮಿತ್ರ, ನನ್ನ ಮಾತು ಸುಳ್ಳಾಗದು ; ಆದರೆ ಭೃಗುಕುಲದಲ್ಲಿಯು ಪ್ರಮತಿಗೆ 'ರುರು' ಎಂಬ ಹೆಸರಿನ ಮಹಾಪವಿತ್ರನಾದ ಪುತ್ರನು ಜನಿಸುವನು. ಆತನ ಸಮಾಗಮವು ನಿನಗೊದಗಿದಾಗ ನಿನ್ನ ಶಾಪನಿವೃತ್ತಿಯಾಗುವದು" ಎಂದು ಹೇಳಿದನು. ಆದ್ದರಿಂದ ಎಲೈ ರುರೋ, ಆ 'ಖಗಮ'ಋಷಿಯು ಹೇಳಿದಂತೆ ಈಗ ನನ್ನ ನಿನ್ನ ಸಮಾಗಮವಾಗಿರುವದು; ಆದ್ದರಿಂದ ಇನ್ನು ನಾನು ನನ್ನ ಪೂರ್ವರೂಪವನ್ನು ಧರಿಸಿ, ನಿನ್ನ ಹಿತವು ಯಾತರಲ್ಲಿರುವದೆಂಬದನ್ನು ನಿನಗೆ ಹೇಳುವೆನು"

**ಡುಂಡುಭ ಶಾಪಮೋಕ್ಷ**—ಈಮೇರೆಗೆ ನುಡಿದು ಸಹಸ್ರಪಾತ್ ಋಷಿಯು ಡುಂಡುಭ ರೂಪಬಿಟ್ಟು ತನ್ನ ಮಹಾತೇಜಸ್ವಿಯಾದ ಬ್ರಾಹ್ಮಣರೂಪವನ್ನು ಧರಿಸಿ ರುರುವಿಗೆ—"ಎಲೈ ದ್ವಿಜಶ್ರೇಷ್ಠಾ, ಅಹಿಂಸೆಯು ಪರಮಧರ್ಮವಾಗಿರುವದು. ಶ್ರುತಿ-ಸ್ಮೃತಿಗಳಲ್ಲಿ ನಿಷೇಧಿಸಿದ ಹಿಂಸೆಯನ್ನು ಎಂದೂ ಮಾಡಬಾರದು. ಬ್ರಾಹ್ಮಣನು ಸೌಮ್ಯತನ ತಾಳಬೇಕೆಂದು ಶ್ರುತಿಯಲ್ಲಿಯೂ ಹೇಳಿರುವದು. ವೇದವೇದಾಂಗಗಳ ಅಧ್ಯಯನಮಾಡುವದು, ಪ್ರಾಣಿಮಾತ್ರಗಳಿಗೆ ಅಭಯನೀಯುವದು, ಹಿಂಸೆಮಾಡದಿರುವದು, ಸತ್ಯಮಾತಾಡುವದು, ಕ್ಷಮೆತಾಳುವದು, ವೇದಾರ್ಥದ ನಿದಿಧ್ಯಾಸಮಾಡುವದು ಬ್ರಾಹ್ಮಣರ ಕರ್ತವ್ಯಗಳಾಗಿರುವವು. ಕ್ರೋಧವಶವಾಗಿ ಸೇಡು ತೀರಿಸಿಕೊಳ್ಳುವದು ಬ್ರಾಹ್ಮಣರ ಧರ್ಮವಲ್ಲ; ಅದು ಕ್ಷತ್ರಿಯರಧರ್ಮವು. ಆಕ್ಷತ್ರಿಯಧರ್ಮವನ್ನು ನೀನು ಆಚರಿಸಬೇಡ ದಂಡಧಾರಣಮಾಡಿ ತನ್ನ ಅಧಿಕಾರವನ್ನು ಸತತವಾಗಿ ನಡಿಸುವದು, ಪ್ರಜಾಪಾಲನ ಮಾಡುವದು ಕ್ಷತ್ರಿಯರ ಧರ್ಮಗಳಾಗಿರುವವು. ಕ್ಷತ್ರಿಯರ ಈ ಧರ್ಮದಂತೆ, ಜನಮೇಜಯರಾಜನು ಸರ್ಪಯಾಗಮಾಡತೊಡಗಿ ಸರ್ಪಗಳ ಬೀಜವನ್ನೇ ಕಿತ್ತಿದು ಬಿಡಬೇಕೆಂದು ಮಾಡಿದ್ದನು ; ಆದರೆ ಆಸ್ತಿಕನೆಂಬ ಬ್ರಾಹ್ಮಣನು ಆ ಘೋರಕರ್ಮವನ್ನು ನಿಲ್ಲಿಸಿ ಸರ್ಪಗಳ ಸಂರಕ್ಷಣಮಾಡಿದನು.



## ೧೨ನೇ ಅಧ್ಯಾಯ—ಸರ್ಪಸತ್ರಪ್ರಸ್ತಾವ

ಸಹಸ್ರಪಾತ್‌ಋಷಿಯು ಈ ಮಾತುಗಳನ್ನು ಕೇಳಿ ರುರುವು ಆತನನ್ನು ಕುರಿತು—"ಎಲೈ ಋಷಿಯೇ, ಜನಮೇಜಯನ ಯಜ್ಞನಾಶವನ್ನು ಆಸ್ತಿಕನು ಯಾಕೆ ಮಾಡಿದನು?" ಎಂದು ಕೇಳಲು, "ಈ ವೃತ್ತಾಂತವು ಒಬ್ಬ ಬ್ರಾಹ್ಮಣನ ಮುಖದಿಂದ ನಿನಗೆ ತಿಳಿಯುವದು" ಎಂದು ಹೇಳಿ, ಸಹಸ್ರಪಾತ್‌ಋಷಿಯು ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು. ಬಳಿಕ ರುರುವು ಸಹಸ್ರಪಾತ್‌ಋಷಿಯನ್ನು ಎಷ್ಟು ಹುಡುಕಿದರೂ ಆತನು ಸಿಗಲಿಲ್ಲ. ಕಡೆಗೆ ರುರುವು ಹುಡುಕಿಹುಡುಕಿ ದಣಿದು ನಿಶ್ಚೇಷ್ಟಿತನಾಗಿಬಿದ್ದನು; ಮತ್ತು ಸಹಸ್ರಪಾತ್‌ಋಷಿಯ ಭಾಷಣದ ಮರ್ಮವೇನಿರಬಹುದೆಂಬವನ್ನು ಕುರಿತು ವಿಚಾರಿಸುವಾಗ ವೈಮನಸ್ಕನಾದನು. ಬಳಿಕ ಎಚ್ಚತ್ತಮೇಲೆ ಆತನು ಆಶ್ರಮಕ್ಕೆ ಹೋಗಿ ನಡೆದ ವೃತ್ತಾಂತವನ್ನೆಲ್ಲ ತನ್ನ ತಂದೆಗೆ ಹೇಳಿದನು. ಆಗ ಆತನ ತಂದೆಯು (ಪ್ರಮತಿಯು) ಆಸ್ತಿಕಋಷಿಯ ಸರ್ವಚರಿತ್ರವನ್ನು ರುರುವಿಗೆ ಹೇಳಿದನು.



## ಶ್ರೀ ಶೇಷಸದ್ಗುರು-ಸೂಕ್ತಿರೂಪ ರಹಸ್ಯಗಳು

**ಪೂರ್ವಾಪರಸಂಬಂಧ—** ಈ ಪರ್ವವು ಭಾರತಕಥೆಗೆ ಸಂಬಂಧಿಸಿದ್ದಲ್ಲ; ಈ ಪರ್ವದ ಹಿಂದಿನ ಪೌಷ್ಯಪರ್ವಕ್ಕೂ ಇದು ಸಂಬಂಧಿಸಿದ್ದಲ್ಲ; ಇದು ಇದರ ಮುಂದಿರುವ ಆಸ್ತಿಕಪರ್ವದ ಉಪೋದ್ಘಾತವಾಗಿರುವದು. ಈ ಉಪಪರ್ವದಲ್ಲಿ "ಪುಲೋಮಾ" ಎಂಬ ಭೃಗುಪತ್ನಿಯ ಚರಿತ್ರವು ಮುಖ್ಯವಾಗಿರುವದರಿಂದ, ಇದಕ್ಕೆ ಪೌಲೋಮಪರ್ವವೆಂಬ ಹೆಸರು ಬಂದಿರುತ್ತದೆ. ಇದರಲ್ಲಿ ಕೆಳಗಿನ ರಹಸ್ಯಗಳು ಪರಿಸ್ಫುಟವಾಗಿರುವವು.

**೧. ಜೀವರ ಯೋನಿಗಳು ವಿವಿಧವಾಗಿರುವವು** — ಈ ಸೃಷ್ಟಿಯಲ್ಲಿ ಮನುಷ್ಯಯೋನಿ, ಮೃಗ-ಪಕ್ಷಿ-ಕ್ರಿಮಿ-ಕೀಟ ಮೊದಲಾದ ತಿರ್ಯಗ್ಯೋನಿ, ದೇವ-ದೈತ್ಯ-ರಾಕ್ಷಸ-ಗಂಧರ್ವ-ಅಪ್ಸರಸ್, ಪಿಶಾಚ ಮೊದ

ಲಾದ ಉಚ್ಚ್ಯಯೋನಿ ಮೊದಲಾದ ವಿವಿಧ ಯೋನಿಗಳಿರುವವೆಂದು ನಮ್ಮ ಶಾಸ್ತ್ರಕಾರರೂ,ಪೌರಾಣಿಕರೂ ಹೇಳುತ್ತಿರುವರು. ಈ ಪೌಲೋಮಪರ್ವದಲ್ಲಿ ಪುಲೋಮರಾಕ್ಷಸನ ಚರಿತ್ರವು ಬಂದಿರುತ್ತದೆ. ರಾಕ್ಷಸರೆಂದರೆ ಮಂದಿಯ ಹಿತವನ್ನು ಮುಣುಗಿಸಿ ತಮ್ಮ ಹಿತವನ್ನು ಸಾಧಿಸಿಕೊಳ್ಳುವವರು. ಈ ರಾಕ್ಷಸ ಸ್ವಭಾವದವರು ಮನುಷ್ಯರಲ್ಲಿಯೂ ಇರುವರು ; ಅವರಿಗೆ ನರ ರಾಕ್ಷಸರೆಂಬ ಸಂಜ್ಞೆಯು. "ರಾಕ್ಷಸರು ಅಮಾನುಷಶಕ್ತಿಯುಳ್ಳವರು; ಮಾಯಾವಿಗಳು ; ಅವರು ಅದೃಶ್ಯರಾಗಬಲ್ಲರು ; ಬೇಕಾದ ರೂಪಗಳನ್ನು ಧರಿಸಬಲ್ಲರು." ಎಂದು ಪುರಾಣಗಳಲ್ಲಿ ವರ್ಣನವಿರುವದು. ಈ ದೇವ-ದಾನವ-ಪಿಶಾಚಾದಿ ಯೋನಿಗಳು ಕಾಲ್ಪನಿಕವೆಂದು ಈಗಿನ ಜಡವಾದಿಗಳು ಹೇಳುವದುಂಟು ; ಆದರೆ ಆತ್ಮವಾದಿಗಳಾದ ವೈದಿಕರು ನಾವು ಆ ಶಾಸ್ತ್ರ ಸಿದ್ಧಮಾತನ್ನು ಅಲ್ಲಗಳೆಯಲಾಗದು. ದೇವಗಂಧರ್ವಾದಿಕರ ಮೂಲ ರೂಪ ಗಳು ಸೂಕ್ಷ್ಮವಾಗಿರುವದರಿಂದ, ನಮ್ಮ ಸ್ಥೂಲೇಂದ್ರಿಯಗಳಿಗೆ ಅವುಗೋಚ ರವಾಗಲಾರವು. ಅಜ್ಞಾನಿಗಳಾದ ನಾವು ನಮ್ಮ ಅನುಭವಕ್ಕೆ ಬಾರದಿ ದ್ದರೂ, ತ್ರಿಕಾಲಜ್ಞರಾದ ನಮ್ಮ ವ್ಯಾಸಪ್ರಭೃತಿ ಮಹಾತ್ಮರು ಹೇಳುವ ಮಾತನ್ನು ಸುಳ್ಳೆಂದು ತಿಳಿಯಲಾಗದು. ಕಾಲಮಹಿಮೆಯಿಂದ ರಾಕ್ಷಸಾದಿ ಯೋನಿಗಳ ವಿಷಯದಲ್ಲಿ ನಮ್ಮ ನಂಬಿಗೆಯಾಗದಿದ್ದರೂ, ಅವರ ಚರಿತ್ರ ಗಳಿಂದ ಹೊರಡುವ ನೀತಿಗಳು ನಮಗೆ ಗ್ರಾಹ್ಯವಷ್ಟೆ ? ಅಂತಹ ನೀತಿಗ ಳನ್ನು ಗ್ರಹಿಸುವದಕ್ಕಾಗಿಯೇ ಮಾನವರ ಚರಿತ್ರದೊಡನೆ, ದೇವ-ರಾಕ್ಷ ಸಾದಿಕರ ಚರಿತ್ರಗಳನ್ನೂ ವ್ಯಾಸಮಹರ್ಷಿಗಳು ಭಾರತದಲ್ಲಿ ಹೇಳಿರುವರು. ಜಾತಿಗೆ ಭೇದವಾದರೂ ನೀತಿಗೆ ಭೇದವಿಲ್ಲವೆಂಬದನ್ನು ಮನಸ್ಸಿನಲ್ಲಿ ತಂದು, ರಾಕ್ಷಸರು ಇದ್ದರೋ ಇಲ್ಲವೋ, ಅವರು ಇಂಥ ಅಮಾನುಷಕೃತ್ಯಗಳನ್ನು ಮಾಡಿರಬಹುದೊ ಮಾಡಿರಲಿಕ್ಕಿಲ್ಲವೊ ಎಂದು ಊಹಾಪೋಹಮಾಡುವದ ಕ್ಕಿಂತ, ದೇವ-ರಾಕ್ಷಸರಂಥ ಸಮರ್ಥರಿಗೂ ಧರ್ಮ-ನೀತಿಗಳ ಸಂಬಂಧವು ತಪ್ಪಿಲ್ಲವೆಂದು ತಿಳಿದು, ನಾವು ಅವರವರ ಚರಿತ್ರಗಳಿಂದ ಪ್ರಕಟವಾಗುವ ಧರ್ಮ-ನೀತಿಗಳನ್ನು ಗ್ರಹಿಸಿ ನಮ್ಮ ಕಲ್ಯಾಣಮಾಡಿಕೊಳ್ಳತಕ್ಕದ್ದು.

**೧೪ ಶಾಪಾನುಗ್ರಹಗಳ ರಹಸ್ಯ** — ಪೌಷ್ಯ - ಪೌಲೋಮ ಪರ್ವಗಳಲ್ಲಿ ಶಾಪಾನುಗ್ರಹದ ಪ್ರಸಂಗಗಳು ಬಂದಿರುವವಷ್ಟೆ? ಧೌಮ್ಯರ

ಮೂವರುಶಿಷ್ಯರೂ, ವೇದಮುನಿಯ ಉತ್ತಂಕಶಿಷ್ಯನೂ ತಮ್ಮ ತಮ್ಮ ಗುರುಗಳಿಂದ ಜ್ಞಾನಸಂಪಾದಿಸಿದ್ದು, ಅವರವರ ಗುರುಗಳ ಅನುಗ್ರಹದ ಉದಾಹರಣಗಳಾಗಿರುವವು; ಉತ್ತಂಕನಿಂದ ಪೌಷ್ಯರಾಜನು ಕುರುಡನಾದದ್ದು, ಭೃಗುಋಷಿಯಿಂದ ಅಗ್ನಿಯು ಸರ್ವಭಕ್ಷಕನಾದದ್ದು ಶಾಪದ ಉದಾಹರಣಗಳಾಗಿರುವವು. ಶಾಪಾನುಗ್ರಹ-ಸಮರ್ಥರಾದ ಮಹಾತ್ಮರು ಪ್ರಸನ್ನಚಿತ್ತರಾಗಿರುವಾಗ ನುಡಿಯುವ ವಾಣಿಗಳು ಅನುಗ್ರಹವಾಣಿಗಳು ; ಕ್ಷುಬ್ಧಚಿತ್ತರಾಗಿರುವಾಗ ನುಡಿಯುವ ವಾಣಿಗಳು ಶಾಪವಾಣಿಗಳು. ತ್ರಿಕರಣಪೂರ್ವಕವಾಗಿ, ಅಂದರೆ ಕಾಯಿಕ-ವಾಚಿಕ-ಮಾನಸಿಕವಾಗಿ ಯಾವಾಗಲೂ ಸತ್ಯವನ್ನೇ ನುಡಿಯುವವರಿಗೆ ವಾಕ್‌ಸಿದ್ಧಿಯು ಉಂಟಾಗುವದು. ಅದರಲ್ಲಿ, ಕೇವಲ ಸತ್ಯದ ಮೂರ್ತಿಗಳಾದ ಋಷಿಗಳು ಬ್ರಹ್ಮಚರ್ಯಮೂಲವಾದ ತಮ್ಮ ಘೋರತಪಶ್ಚರ್ಯದಿಂದ ತ್ರಿಕಾಲಜ್ಞಾನವನ್ನು ಪಡೆದು ಸರ್ವಸಿದ್ಧಿಗಳನ್ನೂ, ದೇವತಾನುಗ್ರಹವನ್ನೂ ಪಡೆದವರು ; ಅಂದಬಳಿಕ ಅಂಥವರ ಶಾಪಾನುಗ್ರಹ-ವಾಣಿಗಳು ಹೇಗೆ ಸುಳ್ಳಾದಾವು ? ಆದರೆ ಅನ್ಯರಿಗೆ ಶಾಪಕೊಡುವದರಿಂದ, ಅಥವಾ ಅನುಗ್ರಹಮಾಡುವದರಿಂದ ತಪೋಹಾನಿಯಾಗುವಕಾರಣ ಶಮಪ್ರಧಾನರಾದ ಋಷಿಗಳು ಎರಡನೆಯವರಿಗೆ ಶಾಪವನ್ನೂ ಕೊಡುವದಿಲ್ಲ ; ಅನುಗ್ರಹವನ್ನೂ ಮಾಡುವದಿಲ್ಲ. ತಪಸ್ವಿಗಳಲ್ಲಿ ಶಾಪಕೊಡುವವರ ಯೋಗ್ಯತೆಯು ಕಡಿಮೆಯೆಂದು ತಿಳಿಯಲ್ಪಡುವದು.

ನಾವು ಸಂಸಾರದಲ್ಲಿ ಆಗಾಗ್ಗೆ ಕ್ಷೋಭಿಸಿ ಒಬ್ಬರನ್ನೊಬ್ಬರು ಶಪಿಸುವೆವು, ಬಯ್ಯುವೆವು ; ಆದರೆ ಹಾಗೆಮಾಡುವದು ಯೋಗ್ಯವಲ್ಲ ; ಯಾಕಂದರೆ "ತಥಾಸ್ತು" ಎಂಬ ದೇವತೆಗಳಸಂಚಾರವು ಎಲ್ಲಕಡೆಗೂ ಆಗುತ್ತಿರುತ್ತದೆ. "ತಥಾಸ್ತು" ಅಂದರೆ "ಹಾಗೇಆಗಲಿ" ಎಂದು ನುಡಿಯುವದಷ್ಟೇ ಆ ದೇವತೆಗಳ ಕೆಲಸವು. ನಾವು ಶಾಪವಾಣಿಯನ್ನು ನುಡಿಯುವದಕ್ಕೂ, ಅಥವಾ ಬೈಯ್ಯುವದಕ್ಕೂ ಆ ದೇವತೆಗಳು "ತಥಾಸ್ತು" ಎಂದು ನುಡಿಯುವದಕ್ಕೂ ಗಂಟುಬಿದ್ದರೆ, ನಮ್ಮ ಶಾಪವಾಣಿಗಳು, ಅಥವಾ ಬೈಗಳು ಸತ್ಯವಾಗುವವು. ದೊಡ್ಡವರು ಶಾಪವಾಣಿಯನ್ನು, ಅಥವಾ ಅನುಗ್ರಹವಾಣಿಯನ್ನು ನುಡಿದಕೂಡಲೆ "ತಥಾಸ್ತು" ದೇವತೆಗಳು "ತಥಾಸ್ತು" ಎಂದು ಉಚ್ಚರಿಸಿಯೇ ಉಚ್ಚರಿಸುವರು. ಹಾಗೆ ನಮ್ಮ ಸಾಂಸಾರಿಕರ

ವಾಣಿಗಳಿಗೆ ಆ ದೇವತೆಗಳ ಒಪ್ಪಿಗೆಯು ಯಾವಾಗಲೂ ದೊರೆಯದೆ, ಆಕಲ್ಪಿತವಾಗಿ ದೊರೆಯುತ್ತಿರುವದರಿಂದಲೇ ನಾವು ಸಾಂಸಾರಿಕರು ಪರಸ್ಪರ ಶಾಪದಿಂದ ನಾಶವಾಗದೆ ಉಳಿದಿರುತ್ತೇವೆ. ಎಷ್ಟೋ ಮೂರ್ಖಜನರು "ನಿನ್ನ ಮನೆ ಹಾಳಾಗಲಿ" "ನೀನು ಸುಡುಗಾಡಿಗೆ ಹೋಗು" "ನಿನ್ನ ಹೆಂಡತಿ ರಂಡೆಯಾಗಲಿ" "ನಿನ್ನ ವಂಶ ನಿರ್ವಂಶವಾಗಲಿ" "ರಂಡೆ" "ಮುಂಡೆ" ಇತ್ಯಾದಿ ಅಭದ್ರವಾಣಿಗಳನ್ನು ಆಗಾಗ್ಗೆ ನುಡಿಯುವರು. ಅವರ ಆ ವಾಣಿಗಳಿಗೆಲ್ಲ ತಥಾಸ್ತು ದೇವತೆಗಳಿಂದ "ತಥಾಸ್ತು" ಎಂಬ ಉತ್ತರವು ದೊರೆಯುತ್ತ ಬಂದರೆ ಅನರ್ಥ ಉಂಟಾಗುತ್ತಿತ್ತು. ಆದ್ದರಿಂದ ಸಾಂಸಾರಿಕರು ನಾವು ಯಾವಾಗಲೂ ಮಂಗಲವಾಣಿಯನ್ನೇ ನುಡಿಯುತ್ತಿರಬೇಕು. ಅಕಸ್ಮಾತ್ತಾಗಿ ನಮ್ಮ ಆ ಮಂಗಲವಾಣಿಗಳಿಗೆ "ತಥಾಸ್ತು" ಎಂಬ ಸಮ್ಮತಿವಾಕ್ಯವು ದೇವತೆಗಳಿಂದ ದೊರೆತರೆ, ನಮ್ಮ ಕಲ್ಯಾಣವೇ ಆಗುವದು.

**೧೫ ಧಾರ್ಮಿಕಹಿಂಸೆಯು ಪಾಪಕರವಲ್ಲ** — ಈ ಪರ್ವದಲ್ಲಿ ಸಹಸ್ರಪಾತ್ ಋಷಿಯು—"ಶ್ರುತಿ-ಸ್ಮೃತಿಗಳಲ್ಲಿ ನಿಷೇಧಿಸಿರುವ ಹಿಂಸೆಯನ್ನು ಮಾಡಬಾರದು" ಎಂದು ಹೇಳಿರುವದರಿಂದ, ಶ್ರುತಿ-ಸ್ಮೃತಿಗಳಲ್ಲಿ ಹೇಳಿದ ಯಜ್ಞಯಾಗದ ಹಿಂಸೆಯನ್ನು, ಅಂದರೆ ಧಾರ್ಮಿಕ ಹಿಂಸೆಯನ್ನು ಮಾಡಬೇಕೆಂದು ಹೇಳಿದ ಹಾಗಾಯಿತು. ಅಹಿಂಸೆಯು ಪರಮಧರ್ಮವೆಂದು ಎಲ್ಲಧರ್ಮಗಳಲ್ಲಿಯೂ ಹೇಳಿರುವದು ; ಆದರೆ ಅನುಭವವನ್ನು ನೋಡಿದರೆ, ಜಗತ್ತಿನಲ್ಲಿ ಹಿಂಸಕರೇ ತುಂಬಿರುವರೆಂದು ಗೊತ್ತಾಗುವದು. "ಜೀವೋ ಜೀವಸ್ಯ ಜೀವನಂ" ಎಂಬ ಸೃಷ್ಟಿಯಸಿದ್ಧಾಂತದಂತೆ, ಜೀವರ ಜೀವನಾರ್ಥ ಕಲಹದಮೂಲಕ ಹೀಗೆ ಜಗತ್ತು ಹಿಂಸಾಮಯವಾಗಿರುವದು ಸ್ವಾಭಾವಿಕವು. ಹಿಂಸೆಯು ಕಾಯಿಕಹಿಂಸೆ, ವಾಚಿಕಹಿಂಸೆ, ಮಾನಸಿಕ ಹಿಂಸೆ ಎಂದು ಮೂರುವಿಧವಾಗಿರುವದು. ಕಾಯಿಕಹಿಂಸೆಯಿಂದ ಪ್ರಾಣಿಗಳನ್ನು ಕೊಲ್ಲುವದು ವಾಚಿಕಹಿಂಸೆಯಿಂದ, ಅಂದರೆ ಕಠೋರಭಾಷಣದಿಂದ ಪ್ರಾಣಿಗಳ ಮನಸ್ಸನ್ನು ನೋಯಿಸುವದು, ಮಾನಸಿಕಹಿಂಸೆಯಿಂದ ಅಂದರೆ ಅನ್ಯರ ಮನಸ್ಸಿನ ವಿರುದ್ಧ ನಡೆದು ಅವರ ಮನಸ್ಸನ್ನು ನೋಯಿಸುವದು, ಎಂಬ ಈ ಮೂರು ಹಿಂಸೆಗಳು ಬಿಡತಕ್ಕವಾಗಿದ್ದರೂ, ಅವುಗಳಲ್ಲಿ ಶಾರೀರಕಹಿಂಸೆಯನ್ನು ಸರ್ವಥಾ ಬಿಡಬೇಕೆಂದು ಸಾಧಾಕ

ಣವಾಗಿ ಎಲ್ಲಧರ್ಮಗಳೂ ಹೇಳುವವು ; ಆದರೂ ಮಾಂಸಭಕ್ಷಕರ ಸಂಖ್ಯೆಯೇ ಜಗತ್ತಿನಲ್ಲಿ ಹೆಚ್ಚು ಇರುವದು. ಮಾಂಸತಿನ್ನುವ ಮನುಷ್ಯರ ಈ ಸ್ವಾಭಾವಿಕ ಅಭಿರುಚಿಗೆ ಉತ್ತೇಜನ ಕೊಡುವದಕ್ಕಾಗಿಯಲ್ಲ, ಪ್ರತಿಬಂಧಿಸುವದಕ್ಕಾಗಿಯೇ ಶ್ರುತಿಯು ಯಜ್ಞ-ಯಾಗಾದಿಗಳನ್ನು ಹೇಳಿರುವದು. ಒಂದು ಯಜ್ಞಕ್ಕೆ ಸಹಸ್ರಾವಧಿ ರೂಪಾಯಿಗಳು ವೆಚ್ಚವಾಗುವವು. ಇಷ್ಟು ವೆಚ್ಚಮಾಡಿ ಮಾಂಸಭಕ್ಷಣಮಾಡುವದು ಸರ್ವಸುಲಭವಲ್ಲದ್ದರಿಂದ, ಸ್ವಾಭಾವಿಕವಾಗಿಯೇ ಯಜ್ಞಗಳಿಂದ ಹಿಂಸೆಗೆ ಪ್ರತಿಬಂಧವುಂಟಾಗುವದು. ಹೀಗೆ ಯಜ್ಞರೂಪದಿಂದ ಪಿಷ್ಟಪಶುವನ್ನು ದೇವತೆಗಳಿಗೆ ಅರ್ಪಿಸಿದಹೊರತು, ಬ್ರಾಹ್ಮಣರಿಗೆ ಮಾಂಸತಿನ್ನಲಿಕ್ಕೆ ಬರುವಹಾಗಿಲ್ಲ. ಹೀಗೆ ಮಾಂಸಭಕ್ಷಣಕ್ಕೆ ಬಲವತ್ತರ ಪ್ರತಿಬಂಧವನ್ನು ಯಾವಧರ್ಮದವರೂ ಮಾಡಿರುವದಿಲ್ಲ. ಬೌದ್ಧರಲ್ಲಿ ಪ್ರಾಣಿಹಿಂಸೆಯು ಅತ್ಯಂತ ನಿಷೇಧವು; ಆದರೆ ಚೀನದವರು ಬೌದ್ಧಧರ್ಮದವರಿದ್ದು, ಅವರು ಸರ್ವಭಕ್ಷಕರೆನಿಸಿಕೊಳ್ಳುವವರೆಗೆ ಮಾಂಸಭಕ್ಷಕರಾಗಿರುವರೆಂದು ಹೇಳುವದುಂಟು. ಗೀತೆಯಲ್ಲಿ ಭಗವಂತನು ತನಗೆ ಅರ್ಪಿಸುವಸಂಬಂಧದಿಂದ "ಯದಶ್ನಾಸಿ....ತತ್ಕುರುಷ್ವಮದರ್ಪಣಂ" ಅಂದರೆ "ಏನುತಿನ್ನುವೆಯೋ ಅದನ್ನು ನನಗೆ ಕೊಡು" ಎಂದು ಮೊದಲಾಗಿ ಹೇಳಿರುವನಲ್ಲದೆ, ನನಗೆ ಹಾಲನ್ನು ಮಾತ್ರಕೊಡು, ಅನ್ನವನ್ನು ಮಾತ್ರಕೊಡು, ಮಾಂಸವನ್ನು ಬಿಟ್ಟು ಉಳಿದದ್ದನ್ನು ಕೊಡು ಇತ್ಯಾದಿರೀತಿಯಿಂದ ಹೇಳಿರುವದಿಲ್ಲ ; ಆದ್ದರಿಂದ ಬ್ರಾಹ್ಮಣರು ಸಹಸ್ರಾವಧಿರೂಪಾಯಿ ವೆಚ್ಚಮಾಡಿ, ಶ್ರುತಿಯಲ್ಲಿ ಹೇಳಿದ ವಿಧಿಯಿಂದ ಪರಮೇಶ್ವರನಿಗೆ ಮಾಂಸವನ್ನರ್ಪಿಸಿ ಪ್ರಸಾದರೂಪದಿಂದ ಅದನ್ನು ತಿಂದರೆ, ಹಿಂಸಾದೋಷವು ತಟ್ಟಲಾರದೆಂದು ಧರ್ಮಶಾಸ್ತ್ರವು ಹೇಳುವದು. ಅವ್ಯವಹಾರ್ಯಮಾತನ್ನು ಶ್ರುತಿಯು ಸಹಸಾಹೇಳುವದಿಲ್ಲ. ಇಂತಹ ಶಾಸ್ತ್ರೀಯವಾದ ಬ್ರಾಹ್ಮಣರ ಕ್ವಚಿತ್ ಹಿಂಸೆಗೆ, ಆಕಳುಗಳಂಥ ನಿರುಪದ್ರವೀ ಪ್ರಾಣಿಗಳನ್ನು ಯಂತ್ರಗಳ ಬಾಯಿಗೆಕೊಟ್ಟು ಅವುಗಳ ಮಾಂಸತಿಂದು ತೇಗುವ ತಾಮಸರು ಹೆಸರಿಡುವದು ನಿರ್ಲಜ್ಜೆಯ ಸಾಹಸವೇ ಸರಿ. ಇಷ್ಟು ಶ್ರೌತಹಿಂಸೆಯೂ ಸಹಿಸದ್ದರಿಂದ ಪಿಷ್ಟಪಶುವಿನ ಪಕ್ಷವೂ ಕೆಲವು ಪಂಗಡದ ಬ್ರಾಹ್ಮಣರಲ್ಲಿ ರೂಢವಾಗಿರುವದು. ಈಗಿನ ಕಾಲದಲ್ಲಿ

ದ್ವಿಜರು ಯಜ್ಞಯಾಗಾದಿಗಳಿಗಿಂತ ಅನ್ಯವಿಧದ ಅಹಿಂಸೆಯ ಉಪಾಸನಗಳಿಂದ ಕೃತಾರ್ಥರಾಗುವದೇ ಶ್ರೇಯಸ್ಕರವು. ಮಾಂಸತಿನ್ನುವ ಆಶೆಯಿಂದ ಯಜ್ಞಮಾಡುವದು ಸರ್ವಥಾ ಕಲ್ಯಾಣಕಾರಕವಲ್ಲ. ಶ್ರುತ್ಯುಕ್ತ ಕರ್ಮ ಮಾಡುವದು ಕರ್ತವ್ಯವೆಂದು ತಿಳಿದು, ಸಾಕ್ಷಾತ್ ಪಶುವಿನಿಂದ ಯಜ್ಞ ಮಾಡಿದರೂ ದೋಷವಿಲ್ಲ; ಆ ಯಥಾಸಾಂಗಕರ್ಮದಿಂದ ಶ್ರುತ್ಯುಕ್ತ ಫಲವು ದೊರತೇ ದೊರೆಯುವದು.

೧೬. **ಭೋಗದಿಂದಲೇ ಕರ್ಮಕ್ಷಯವು**-ಪ್ರಮದ್ವರೆಯು ಹಾವು ಕಚ್ಚಿ ಸತ್ತಾಗ ರುರುವು ತನ್ನ ತಪಶ್ಚರ್ಯದ, ಹಾಗು ಗುರುಸೇವೆ ಮೊದಲಾದ ಸತ್ಕರ್ಮಗಳ ಪುಣ್ಯವನ್ನು ಕೊಟ್ಟರೂ ಆಕೆಯು ಬದುಕದಿರಲು, ದುಃಖಪಟ್ಟಿರುವನು; ಇದರ ಮೇಲಿಂದ ಸತ್ಕರ್ಮಮಾಡುವದರ, ಅಥವಾ ಪುಣ್ಯ ಮಾಡುವದರ ಪ್ರಯೋಜನವಿಲ್ಲೆಂದು ಮನಸ್ಸಿನಲ್ಲಿ ಬರಬಹುದು; ಆದರೆ ವಿಚಾರದಿಂದ ಈ ಭ್ರಮವನ್ನು ದೂರಮಾಡಿಕೊಳ್ಳಬೇಕು. ಸಂಸಾರದಲ್ಲಿ ನಾವು ಬಹುಜನರಿರುವೆವು. ನಮ್ಮ ನಮ್ಮ ಕರ್ಮಗಳು ಭಿನ್ನ ಭಿನ್ನವಾಗಿರುವದರಿಂದ, ನಮ್ಮ ನಮ್ಮ ಭೋಗಗಳು ಭಿನ್ನ ಭಿನ್ನವಾಗಿರುವವು. ನಮ್ಮ ಕರ್ಮಭೋಗಕ್ಕಾಗಿ ಋಣಾನುಬಂಧದಿಂದ ನಾವು ಕುಟುಂಬಿಕರಾಗಿರುವೆವಲ್ಲದೆ, ಒಬ್ಬರ ಭೋಗವನ್ನು ಒಬ್ಬರು ತಪ್ಪಿಸುವದಕ್ಕಾಗಿ ಕುಟುಂಬಿಕರಾಗಿ ಹುಟ್ಟಿರುವದಿಲ್ಲ. ನಾವು ಮಾಡಿದ ಕರ್ಮವು ಭೋಗಿಸದೆ ಬೆನ್ನುಬಿಡುವದಿಲ್ಲ. ಕರ್ಮಾಸಕ್ತರಾದ ನಮಗೆ ಕರ್ಮದಂತೆ ಫಲ ಕೊಡುವದಷ್ಟೇ ದೇವರ ಕೆಲಸವು; ಯಾಕಂದರೆ ಆತನು ಸರ್ವಾಧಿಪತಿಯಾಗಿರುವನು. ಆತನು ತಟಸ್ಥ ವೃತ್ತಿಯಿಂದ ನ್ಯಾಯವಾಗಿ ಫಲ ಕೊಡುವವನು. ಆತನಿಗೆ ನಾವು ಅನನ್ಯಗತಿಕರಾಗಿ ಶರಣು ಹೋಗುವ ತನಕ, ಆತನು ನಮ್ಮ ಕರ್ಮಕ್ಕನುಸರಿಸಿಯೇ ಫಲ ಕೊಡುವನು. ಹಾಗೆ ಶರಣುಹೋಗುವವರನ್ನು ಮಾತ್ರ ಆ ಭಗವಂತನು ಸರ್ವ ಪಾಪಗಳಿಂದ ಮುಕ್ತರನ್ನಾಗಿ ಮಾಡುವನು.

ಹೀಗೆ ನಿಯಮವಿರುವದರಿಂದ, ಕುಟುಂಬದೊಳಗಿನ ನಾವು ಕೆಲವರು ಬಾಲ್ಯದಲ್ಲಿ ಸಾಯುವೆವು; ಕೆಲವರು ತಾರುಣ್ಯದಲ್ಲಿ ಸಾಯುವೆವು; ಕೆಲವರು ಮುದುಕರಾಗಿ ಸಾಯುವೆವು. ಅದರಂತೆ ಭಿನ್ನ ಭಿನ್ನರೋಗಗಳನ್ನು,

ಭಿನ್ನ ಭಿನ್ನ ಪರಿಸ್ಥಿತಿಗಳನ್ನು, ಭಿನ್ನ ಭಿನ್ನ ಸುಖ ದುಃಖಗಳನ್ನು ಭೋಗಿಸುವೆವು. ಅದರ ಕಾರಣವು ನಮ್ಮ ನಮ್ಮ ಭಿನ್ನ ಭಿನ್ನ ಕರ್ಮಗಳಾಗಿರುವವಲ್ಲದೆ, ದೇವರಾಗಲಿ, ಉಳಿದ ಕುಟುಂಬದ ಜನರಾಗಲಿ ಕಾರಣರಲ್ಲ; ಆದ್ದರಿಂದ ನಾವು ಸತ್ಕರ್ಮಮಾಡಿಯೂ ನಮಗೆ ದುಃಖಗಳೊದಗಿದವೆಂದು ದೇವರಿಗೂ ದೋಷ ಕೊಡಬಾರದು; ತಮ್ಮ ಪುಣ್ಯ ಕರ್ಮಗಳಿಗೂ ದೋಷ ಕೊಡಬಾರದು; ಯಾಕಂದರೆ ಒಂದು ಕರ್ಮದಫಲ-ಭೋಗವು ಮುಗಿಯುವವರೆಗೆ ಮತ್ತೊಂದು ಕರ್ಮದ ಫಲಭೋಗಕ್ಕೆ ಆರಂಭವಾಗುವದಿಲ್ಲವೆಂದು ಕರ್ಮಫಲ-ಭೋಗದ ಸಿದ್ಧಾಂತವಿರುವದು; ಆದ್ದರಿಂದ "ನಾವು ಹೀಗೆ ಮಾಡಲಿಲ್ಲ–ಹಾಗೆಮಾಡಲಿಲ್ಲ; ಹಾಗೆ ಮಾಡಿದರೆ ಹೀಗಾಗುತ್ತಿತ್ತು, ಹೀಗೆ ಮಾಡಿದರೆ ಹಾಗಾಗುತ್ತಿತ್ತು" ಎಂಬ ನಿರರ್ಥಕ ಕಲ್ಪನೆಗಳನ್ನು ಮಾಡುತ್ತ, ಶೋಕಕ್ಕೆ ಆಸ್ಪದಕೊಟ್ಟು, ಮಾಡತಕ್ಕ ಸತ್ಕರ್ಮಗಳ ವಿಷಯದಲ್ಲಿ ಉದಾಸೀನರಾಗಿ ಆಯುಷ್ಯದ ದುರುಪಯೋಗ ಮಾಡಿಕೊಳ್ಳಬಾರದು. ದೇವರು ಪರಮನ್ಯಾಯಿಯೂ, ದಯಾಳುವೂ ಆದದ್ದರಿಂದ, ನಮಗೊದಗಿದ ಪ್ರಸಂಗಗಳು ನ್ಯಾಯವಾಗಿಯೇ ಒದಗಿರುವವೆಂದು ಗಟ್ಟಿಮುಟ್ಟಿಯಾಗಿ ತಿಳಿದು ಸಮಾಧಾನ ತಾಳಬೇಕು ಹಾಗೆ ಮಾಡದೆ ನಿರರ್ಥಕವಾಗಿ ಶೋಕಿಸಿದರೆ, ದೇವರ ನ್ಯಾಯಬುದ್ಧಿಯನ್ನೂ, ದಯಾಲುತ್ವವನ್ನೂ ದುರ್ಲಕ್ಷಿಸಿದ ದ್ರೋಹಕ್ಕೆ ಗುರಿಯಾಗಿ, ಎಲ್ಲರ ಅಕಲ್ಯಾಣಕ್ಕೆ ಕಾರಣವಾದ ಶೋಕದಿಂದ ಕೊರಗಬೇಕಾಗುವುದು.

ಇನ್ನು, ರುರುವು ತನ್ನ ಅರ್ಧ ಆಯುಷ್ಯವನ್ನು ಕೊಟ್ಟು ತನ್ನ ಹೆಂಡತಿಯನ್ನು ಬದುಕಿಸಿಕೊಂಡಂತೆ ನಾವೂ ಯಾಕೆ ಬದುಕಿಸಿಕೊಳ್ಳಬಾರದೆಂದು ಕೇಳಬಹುದು; ಆದರೆ ರುರುವಿನಂತಹ ತ್ಯಾಗ ಗುಣವೂ, ಮಹಾಮಹಿಮೆಯೂ ಇದ್ದರೆ ನಾವೂ ನಮ್ಮ ಆಯುಷ್ಯವನ್ನು ಕೊಟ್ಟು ನಮ್ಮವರನ್ನು ಬದುಕಿಸಿಕೊಳ್ಳಬಹುದು; ಆದರೆ ಅಂತಹ ತ್ಯಾಗ ಗುಣವು ಬರುವದು ಸುಲಭವಲ್ಲ. ಎಷ್ಟೋ ಜನರು ತಮ್ಮವರ ಹಿತಕ್ಕಾಗಿ ತಮ್ಮ ಸರ್ವಸ್ವವನ್ನಂತು ಇರಲಿ, ಕೈಬಿಟ್ಟು ಹಣ ವೆಚ್ಚಮಾಡಲಿಕ್ಕೂ ಹಿಂದೆ ಮುಂದೆ ನೋಡುತ್ತಾರೆ; ಕೆಲವರು ಬೇನೆಯವರ ಆರೈಕೆ ಮಾಡಲಾರದೆ "ತಟ್ಟನೆ ಸತ್ತುಹೋದರೆ ನೆಟ್ಟಗಾದೀತೆಂದು" ಅನ್ನುತ್ತಿರುತ್ತಾರೆ; ಕೆಲವರಂತು

" ಇವರು ಸತ್ತರೆ ಇಂತಿಂತಹ ಲಾಭಗಳಾಗುವವೆಂದು " ಕಲ್ಪಿಸುತ್ತಾರೆ; ಕೆಲವರಂತು ಬುದ್ಧಿಪೂರ್ವಕ ತಮ್ಮವರನ್ನು ಕೊಲ್ಲುತ್ತಾರೆ; ಇಂತಹ ಅನುದಾರರು, ಅಂದರೆ ವಿಷಯಾಸಕ್ತರು, ಅನ್ಯರಿಗೆ ತಮ್ಮ ಆಯುಷ್ಯವನ್ನು ಕೊಡಲುಹೇಗೆ ಸಮರ್ಥರಾದಾರು ? ಕೊಡಲಿಕ್ಕೆಬರುವ ಜಡಪದಾರ್ಥಗಳನ್ನೇ ನಿಸ್ಪೃಹ ವೃತ್ತಿಯಿಂದ ಕೊಡಲಿಕ್ಕೆ ಬಾರದಿರಲು, ತನ್ನ ಆಯುಷ್ಯದಂತಹ ಸೂಕ್ಷ್ಮ ವಿಷಯುವನ್ನು ಕಂಡವರಿಗೆ ಹೇಗೆ ಕೊಡಲಿಕ್ಕೆ ಬಂದೀತು? ರುರುವಿನಂತೆ ಸರ್ವಸಂಗಪರಿತ್ಯಾಗಿಗಳು, ತಪಸ್ವಿಗಳು ಆದ ಮಹಾತ್ಮರು, ಮರಣಹೊಂದಿದವರಿಗೆ ಏಕಜೀವರಾಗಿದ್ದ ಪಕ್ಷದಲ್ಲಿ ಆಯುಷ್ಯವನ್ನು ಕೊಡಲಿಕ್ಕೆ ಬರಬಹುದು. ಬಾಬರನು ತನ್ನಮಗ ಹುಮಾಯೂನನಿಗೆ ತನ್ನ ಆಯುಷ್ಯವನ್ನು ಕೊಟ್ಟು ಬದುಕಿಸಿದ್ದು, ಅರ್ವಾಚೀನ ಇತಿಹಾಸದಲ್ಲಿಯೂ ಉಲ್ಲೇಖವಾಗಿರುವದು ; ಆದರೂ ಇದು ಕಂಡವರಿಂದ ಆಗತಕ್ಕ ಮಾತಲ್ಲ.

**ಉಪಸಂಹಾರ**—ಈ ಪರ್ವದಲ್ಲಿ ಇನ್ನಾವಾವರೂ ರಹಸ್ಯಗಳು ತೋರಡುತ್ತಿದ್ದರೆ, ವಿಚಾರದಿಂದ ಹುಡುಕಿ ಅವನ್ನು ಗ್ರಹಿಸತಕ್ಕದ್ದು.

---

## ೫. ಆಸ್ತಿಕಪರ್ವ

### ೧೭ ನೇ ಅಧ್ಯಾಯ—ಆಸ್ತಿಕಾಖ್ಯಾನ.

" ಎಲೈ ಸೂತನಂದನಾ, ನೀನು (೧೩, ೧೪, ೧೫ನೇ ಅಧ್ಯಾಯಗಳಲ್ಲಿ) ಆಸ್ತಿಕಾಖ್ಯಾನವನ್ನು ಸಂಕ್ಷೇಪವಾಗಿ ಹೇಳಿದೆ ; ಆದರೆ ಅವನ್ನು ನಮಗೆ ವಿಸ್ತಾರವಾಗಿ ಹೇಳು " ಎಂದು ಶೌನಕರು ಕೇಳಲು, ಸೂತನು—"ಮುನಿವರ್ಯರೇ, ಸಂತೋಷದಿಂದ ಹೇಳುವೆನು ಕೇಳಿರಿ. ಹಿಂದಕ್ಕೆ ಸತ್ಯಯುಗದಲ್ಲಿ ಪ್ರಾಚೇತಸ ದಕ್ಷಪ್ರಜಾಪತಿಗೆ ಅತ್ಯಂತ ಗುಣವತಿಯರೂ, ಮಹಾರೂಪವತಿಯರೂ ಆದ ಕದ್ರು, ವಿನತೆ ಎಂಬ ಹೆಸರಿನ ಇಬ್ಬರು ಹೆಣ್ಣುಮಕ್ಕಳು ಆದರು. ದಕ್ಷ ಪ್ರಜಾಪತಿಯು ಅವರನ್ನು ಕಶ್ಯಪ ಋಷಿಗೆ ಲಗ್ನಮಾಡಿಕೊಟ್ಟನು. ಆ ಇಬ್ಬರು ಅಕ್ಕತಂಗಿಯರ ಶುದ್ಧಶೀಲವನ್ನೂ, ಅಕೃತ್ರಿಮ ಪಾತಿವ್ರತ್ಯವನ್ನೂ ನೋಡಿ ಅವರ ಗಂಡನಾದ ಕಶ್ಯಪಮುನಿಗೆ ಪರಮ ಸಂತೋಷವಾಯಿತು. ಆತನು ಪ್ರಸನ್ನ ಮನಸ್ಸಿನಿಂದ ತನ್ನ

ಹೆಂಡರಿಗೆ—“ ಎಲೈ ಧರ್ಮಪತ್ನಿಯರಿರಾ, ನಾನು ನಿಮಗೆ ಪ್ರಸನ್ನನಾಗಿದ್ದೇನೆ, ಬೇಕಾದ ವರಗಳನ್ನು ಬೇಡಿಕೊಳ್ಳಿರಿ, ” ಎಂದು ಹೇಳಿದನು. ಅದನ್ನು ಕೇಳಿ ಆ ದಕ್ಷಪುತ್ರಿಯರಿಗೆ ಪರಮಾನಂದವಾಯಿತು. ಅವರಲ್ಲಿ ಕದ್ರುವು ಪತಿಯನ್ನು ಕುರಿತು–“ ಮಹಾರಾಜ, ನನ್ನ ಹೊಟ್ಟೆಯಲ್ಲಿ ಸಹಸ್ರ ಸರ್ಪಗಳು ಹುಟ್ಟಬೇಕು ; ಮತ್ತು ಅವೆಲ್ಲ ಸಮಾನ ಪರಾಕ್ರಮಿಗಳಾಗಿರಬೇಕು ” ಎಂದು ಬೇಡಿಕೊಂಡಳು. ಆದರಂತೆ ವಿನತೆಯು— “ ನನಗೆ ಕದ್ರುವಿನ ಮಕ್ಕಳಿಗಿಂತ ಮಹಾ ಬಲಿಷ್ಠರು, ಮಹಾ ತೇಜಸ್ವಿಗಳು, ಹೆಚ್ಚು ಸುಂದರರು ಆದ ಇಬ್ಬರು ಮಕ್ಕಳು ಹುಟ್ಟಬೇಕು ” ಎಂದು ಪ್ರಾರ್ಥಿಸಿದಳು. ಅದಕ್ಕೆ ಕಶ್ಯಪರು “ ನಿಮ್ಮ ಅಭೀಷ್ಟವು ಸಿದ್ಧಿಸುವದು, ” ಎಂದು ವರವೀಯಲು, ಆ ಸ್ತ್ರೀಯರು—“ ತಥಾಸ್ತು ” ಎಂದು ವರವನ್ನು ಸ್ವೀಕರಿಸಿ ಆನಂದಪಟ್ಟರು.

ಮುಂದೆ ಭಗವಾನ್ ಕಶ್ಯಪರ ಅಮೋಘ ವೀರ್ಯದಿಂದ ಆ ಇಬ್ಬರು ಸ್ತ್ರೀಯರ ಉದರದಲ್ಲಿಯೂ ಗರ್ಭ ಸ್ಥಾಪನೆಯಾಯಿತು. ಆಗ ಆ ಮಹಾತ್ಮರು ತಮ್ಮ ಹೆಂಡರಿಗೆ–“ಸ್ತ್ರೀಯರೇ, ಬಹು ಜೋಕೆಯಿಂದ ನಿಮ್ಮ ನಿಮ್ಮ ಗರ್ಭಗಳನ್ನು ರಕ್ಷಿಸಿರಿ ” ಎಂದು ಹೇಳಿ, ತಪಶ್ಚರ್ಯಕ್ಕಾಗಿ ಅರಣ್ಯವನ್ನು ಕುರಿತು ತೆರಳಿದರು. ಮುಂದೆ ಬಹಳ ದಿವಸಗಳಾದ ವೇಳೆ ಕದ್ರುವು ಸಾಸಿರ ತತ್ತಿಗಳನ್ನು ಇಟ್ಟಳು ; ವಿನತೆಯು ಎರಡು ತತ್ತಿಗಳನ್ನಿಟ್ಟಳು. ಅದನ್ನು ನೋಡಿ ಅವರ ದಾಸಿಯರಿಗೆ ಪರಮಾನಂದವಾಗಿ, ಅವರು ಆ ತತ್ತಿಗಳನ್ನು ಬೆಚ್ಚನ್ನ ಪಾತ್ರೆಗಳಲ್ಲಿಟ್ಟು ರಕ್ಷಿಸಹತ್ತಿದರು. ಋಷಿಗಳಿರಾ, ಮುಂದೆ ಐದುನೂರು ವರ್ಷಗಳಾದಬಳಿಕ ಕದ್ರುವಿನ ತತ್ತಿಗಳು ಒಡೆದು ಅವುಗಳೊಳಗಿಂದ ಸಹಸ್ರ ನಾಗಗಳು ಹೊರಬಿದ್ದವು ; ಆದರೆ ವಿನತೆಯ ತತ್ತಿಗಳು ಪರಿಪಕ್ವವಾಗದ್ದರಿಂದ ಅವು ಹಾಗೆಯೇ ಉಳಿದವು. ಅದನ್ನು ನೋಡಿ ವಿನತೆಗೆ ವಿಷಾದವಾಯಿತು. ತನ್ನ ಸವತಿಯ ಮಕ್ಕಳು ಅತ್ತಿತ್ತ ಓಡಾಡುತ್ತಿರಲು, ತನ್ನ ತತ್ತಿಗಳು ಇನ್ನೂ ಒಡೆಯಲಿಲ್ಲವಲ್ಲ, ಎಂದು ಆಕೆಯು ಹೊಟ್ಟೇಕಿಚ್ಚು ಪಡತೊಡಗಿದಳು. ಆಕೆಯ ವಿವೇಕ ಬುದ್ಧಿಯು ನಷ್ಟವಾಯಿತು. ಮನಸ್ಸು ನಿಲ್ಲದೆ ಆಕೆಯು, ತನ್ನ ಒಂದು ತತ್ತಿಯನ್ನು ಒಡೆದು ನೋಡಿದಳು. ಆಗ ಅದರಲ್ಲಿ ಟೊಂಕ

ದಿಂದ ಮೇಲೆ ಪೂರ್ಣವಾಗಿದ್ದ, ಹಾಗು ಟೊಂಕದಿಂದ ಕೆಳಗೆ ಅಪೂರ್ಣವಾಗಿದ್ದ ಒಂದು ಅಪತ್ಯವು ಆಕೆಯ ಕಣ್ಣಿಗೆ ಬಿದ್ದಿತು. ಆ ಗಂಡುಕೂಸು ತತ್ತಿಯಿಂದ ಹೊರಬಿದ್ದು ತಾಯಿಯನ್ನು ಕುರಿತು—"ಎಲೌ ತಾಯಿಯೇ, ನೀನು ಆಶೆಬುರಕತನದಿಂದ ಈ ತತ್ತಿಯನ್ನು ಅವಸರದಿಂದ ಒಡೆಯಲು, ನಾನು ಹೀಗೆ ಅಪೂರ್ಣಸ್ಥಿತಿಯಲ್ಲಿ ಹುಟ್ಟಬೇಕಾಯಿತು. ನಾನು ಜನ್ಮದ ಹೆಳವನಾದೆನು. ನಿನ್ನ ಸವತಿಮತ್ಸರದ ಈ ಘೋರ ಅನರ್ಥಕ್ಕಾಗಿ ನಾನು ನಿನಗೆ ಶಾಪ ಕೊಡುವೆನು. ನೀನು ೫೦೦ ವರ್ಷಗಳವರೆಗೆ ಆ ಕದ್ರುವಿನ ದಾಸಿಯಾಗು. ತಾಯಿಯೇ, ಇನ್ನುಳಿದಿರುವ ಒಂದು ತತ್ತಿಯನ್ನಾದರೂ ಹೀಗೆ ಅವಸರದಿಂದ ಒಡೆಯದೆ, ಇನ್ನು ೫೦೦ ವರ್ಷಗಳವರೆಗೆ ಅದನ್ನು ಜತನಮಾಡು. ಆ ಅವಧಿಯಲ್ಲಿ ಈ ತತ್ತಿಯೊಳಗಿನ ನಿನ್ನ ಮಗನಿಗೆ ಲೋಕೋತ್ತರ ಬಲವು ಪ್ರಾಪ್ತವಾಗಿ, ಅವನು ಕದ್ರುವಿನ ದಾಸ್ಯದಿಂದ ನಿನ್ನನ್ನು ಮುಕ್ತಮಾಡುವನು," ಎಂದು ಹೇಳಿ, ವಿನತೆಯ ಆ ಹಿರಿಯಮಗನು ಅಂತರಿಕ್ಷದಲ್ಲಿ ಹೊರಟುಹೋಗಿ, ಅರುಣನೆಂಬ ಹೆಸರಿನಿಂದ ಸೂರ್ಯನ ಸಾರಥ್ಯಕರ್ಮ ಮಾಡತೊಡಗಿದನು.

ಋಷಿಗಳಿರಾ, ಇತ್ತ ಐನೂರು ವರ್ಷಗಳು ಕ್ರಮಿಸಲು, ವಿನತೆಯ ಇನ್ನೊಂದು ತತ್ತಿಯು ಒಡೆದು ಅದರೊಳಗಿಂದ ಪಕ್ಷಿರಾಜನಾದ ಸರ್ಪಭಕ್ಷಕ ಗರುಡನು ಉತ್ಪನ್ನನಾದನು. ಹುಟ್ಟಿದ ಕೂಡಲೆ ಆತನು ಹಸಿದು, ವಿನತೆಯ ಮನೆಯನ್ನು ತ್ಯಜಿಸಿ, ಬ್ರಹ್ಮದೇವನು ತನಗಾಗಿ ನಿಯಮಿಸಿಟ್ಟಿದ್ದ ಅನ್ನವನ್ನು ಉಣ್ಣುವದಕ್ಕಾಗಿ ಆಕಾಶಕ್ಕೆ ಹಾರಿದನು. ಮುಂದೆ ಬೇಗನೆ ಕದ್ರು-ವಿನತೆಯರು ಉಚ್ಚೈಃಶ್ರವ ಎಂಬ ಸ್ವರ್ಗಲೋಕದ ಕುದುರೆಯನ್ನು ನೋಡುವದಕ್ಕಾಗಿ ಸೂರ್ಯಲೋಕಕ್ಕೆ ಹೋಗಿ ಅದನ್ನು ನೋಡಿದರು. ಎಲೈ ಋಷಿಗಳಿರಾ, ಆ ಉಚ್ಚೈಃಶ್ರವ ಕುದುರೆಯ ಯೋಗ್ಯತೆಯನ್ನೇನು ವರ್ಣಿಸುವದು ? ಅಮೃತವು ಸಿಗಬೇಕೆಂದು ದೇವದೈತ್ಯರು ಕೂಡಿ ಸಮುದ್ರವನ್ನು ಕಡೆಯುತ್ತಿರುವಾಗ, ಆ ದಿವ್ಯಾಶ್ವವು ಸಮುದ್ರದಲ್ಲಿ ಉತ್ಪನ್ನವಾಯಿತು. ಆ ಅಶ್ವದ ಪ್ರಸನ್ನ ಮುದ್ರೆಯನ್ನೂ, ಅದರ ದಿವ್ಯಕಾಂತಿಯನ್ನೂ ನೋಡಿ ದೇವತೆಗಳು ಅದನ್ನು ಒಂದೇಸವನೆ ಹೊಗಳಹತ್ತಿದರು. ಆ ದಿವ್ಯಾಶ್ವಕ್ಕೆ ಎಂದೂ ದಣುವಾಗದು ;

ಅದಕ್ಕೆ ಮುಪ್ಪು ಬಾರದು ; ಅದು ಎಂದೂ ಸೊರಗತಕ್ಕದ್ದಲ್ಲ" ಎಂದು ಹೇಳಲು, ಶೌನಕಾದಿ ಋಷಿಗಳು ಸೂತನನ್ನು ಕುರಿತು-"ಎಲೈ ಸೂತ ಪುತ್ರಾ, ನಮಗೆ ಸಮುದ್ರಮಥನದ ವೃತ್ತಾಂತವನ್ನು ಮೊದಲು ಹೇಳಿ, ಆ ಮೇಲೆ ಕದ್ರು-ವಿನತೆಯರ ಸಂಗತಿಯನ್ನು ಹೇಳು" ಎಂದು ಕೇಳಿ ಕೊಳ್ಳಲು, ಸೂತನು ಸಮುದ್ರ ಮಥನದ ವೃತ್ತಾಂತವನ್ನು ಹೇಳ ತೊಡಗಿದನು.



## ೧೭ನೇ ಅಧ್ಯಾಯ—ಸಮುದ್ರಮಥನ ವಿಚಾರ

ಶೌನಕಾದಿ ಋಷಿಗಳಿರಾ, ದೇವತೆಗಳು ತಮಗೆ ಅಮೃತವು ಹೇಗೆ ಪ್ರಾಪ್ತವಾದೀತೆಂದು ಶ್ರೇಷ್ಠವಾದ ಮೇರುಪರ್ವತದಲ್ಲಿ ಕುಳಿತು ಆಲೋಚಿಸತೊಡಗಿದರು. ಮುನಿಶ್ರೇಷ್ಠರೇ, ಮೇರುವಿನ ಯೋಗ್ಯತೆಯೇ ಅಂಥ ಅಪೂರ್ವವಾದದ್ದು. ಆ ಪರ್ವತದ ದಿವ್ಯಪ್ರಕಾಶಕಿರಣಗಳು ಸುತ್ತುಮುತ್ತು ಪಸರಿಸಿರುವದನ್ನು ನೋಡಿದರೆ, ಅದು ಭಗವಾನ್ ಸೂರ್ಯನಾರಾಯಣನಂತೆ ತೋರುವದು. ಆ ಪರ್ವತಾಧಿಪತಿಯ ಯೋಗ್ಯತೆಯಂತೆ ಅದರ ಮೇಲೆ ದೇವ-ಗಂಧರ್ವರ ವಸತಿಯಿರುವದು. ಮಹಾ ಪುಣ್ಯಶಾಲಿಗಳಿಗೆ ಮಾತ್ರ ಆ ಸ್ಥಳವು ಲಭಿಸುವದು. ಉಳಿದ ಸಾಮಾನ್ಯಜನರು ಅಲ್ಲಿಗೆ ಹೋಗುವದನ್ನು ಮನಸ್ಸಿನಲ್ಲಿಯೂ ತರಲಾಗದು. ಆ ಮಹಾನ್ ಪರ್ವತದ ಶಿಖರಗಳು ಸ್ವರ್ಗಲೋಕವನ್ನು ಮುಟ್ಟಿರುವವು. ಅಲ್ಲಿ ನದಿಗಳೂ, ವೃಕ್ಷಗಳೂ ಹಲವು ಇದ್ದು, ಸುಂದರಪಕ್ಷಿಗಳು ಅಲ್ಲಿ ಮಂಜುಲ ಶಬ್ದಮಾಡುತ್ತಿರುವವು. ಇಂಥ ಮೇರುಪರ್ವತದ ಶಿಖರಗಳಮೇಲೆ ಕುಳಿತು ಮಹಾ ಮಹಾ ತಪಸ್ವಿಗಳಾದ ಆ ದೇವತೆಗಳು ಅಮೃತಪ್ರಾಪ್ತಿಯ ಆಲೋಚನೆಯನ್ನು ಎಷ್ಟುಮಾಡಿದರೂ, ಅವರ ಒಂದೂ ಆಲೋಚನೆಯು ಬಗೆಹರಿಯಲೊಲ್ಲದು. ಆಗ ಭಗವಾನ್ ನಾರಾಯಣನು ಬ್ರಹ್ಮದೇವನನ್ನು ಕುರಿತು-"ಎಲೈ ಬ್ರಹ್ಮದೇವಾ, ಅಮೃತವನ್ನು ದೊರಕಿಸುವದಕ್ಕಾಗಿ ದೇವತೆಗಳೂ, ಅಸುರರೂ ಕೂಡಿ ಸಮುದ್ರವನ್ನು ಕಡೆಯಬೇಕು ; ಅದ್ದ

ರಿಂದ ನೀವು ಯಾವತ್ತು ಔಷಧಿಗಳನ್ನೂ, ರತ್ನಗಳನ್ನೂ ಸಮುದ್ರದಲ್ಲಿ ಕೂಡಿಸಿ ಅದರ ಮಂಥನಮಾಡಿರಿ'' ಎಂದು ಹೇಳಿದನು.



## ೧೮ನೇ ಅಧ್ಯಾಯ—ಅಮೃತಮಂಥನದ ಸಿದ್ಧತೆಯು

ಋಷಿಗಳಿರಾ, ನಾರಾಯಣನ ಈ ಅಭಿಪ್ರಾಯವನ್ನು ಕೇಳಿ ದೇವತೆಗಳು ಸಮುದ್ರವನ್ನು ಮಂಥಿಸಲು ನಿಶ್ಚಯಿಸಿದರು. ಅವರು ಈ ಸಂಗತಿಯನ್ನು ತಮ್ಮ ಬಂಧುಗಳಾದ ಅಸುರರಿಗೆ ತಿಳಿಸಲು, ಅವರು ಅದಕ್ಕೆ ಒಪ್ಪಿಕೊಂಡರು. ಬಳಿಕ ಅವರಿಬ್ಬರು ಮಂದರಪರ್ವತವನ್ನು ಕಿತ್ತುಕೊಂಡು ಬಂದು ಅದರಿಂದ ಸಮುದ್ರವನ್ನು ಕಡೆಯಬೇಕೆಂದು ನಿಶ್ಚಯಿಸಿ, ಆ ಪರ್ವತದ ಬಳಿಗೆ ಬಂದರು. ಮಂದರಪರ್ವತವು ಸಾಮಾನ್ಯವಾದದ್ದಲ್ಲ. ಅದರ ಎತ್ತರವು ಹನ್ನೊಂದು ಸಹಸ್ರಯೋಜನವು; ಭೂಮಿಯಲ್ಲಿ ಅದು ಹನ್ನೊಂದು ಸಹಸ್ರಯೋಜನ ಆಳವಾಗಿರುವದು. ವಿವಿಧ ವೃಕ್ಷ-ಲತೆ-ಮೃಗ-ಪಕ್ಷಿಗಳಿಂದ ಕೂಡಿದ ಇಂಥ ಪ್ರಚಂಡಪರ್ವತವನ್ನು ಎತ್ತಲಾರದೆ ದೇವಾಸುರರು ಶ್ರೀಮನ್ನಾರಾಯಣನನ್ನೂ, ಆತನ ಬಳಿಯಲ್ಲಿದ್ದ ಬ್ರಹ್ಮದೇವನನ್ನೂ ಶರಣುಹೋಗಿ, ಮಂದರಪರ್ವತವನ್ನು ಕಿತ್ತುಕೊಡಲು ಪ್ರಾರ್ಥಿಸಿದರು. ದೇವಾಸುರರ ಈ ಕರುಣಾಕರದ ಪ್ರಾರ್ಥನೆಯನ್ನು ಕೇಳಿ ಭಗವಾನ್ ವಿಷ್ಣುವೂ, ಬ್ರಹ್ಮದೇವನೂ ''ಹಾಗೇ ಆಗಲಿ'' ಎಂದು ಹೇಳಿ ಮಹಾಬಲಶಾಲಿಯಾದ ಅನಂತನಿಗೆ, ಮಂದರಪರ್ವತವನ್ನು ಕಿತ್ತಿ ಸಮುದ್ರದಲ್ಲಿ ಇಡಲು ಆಜ್ಞಾಪಿಸಿದರು. ಅದರಂತೆ ಆ ಶೇಷನು ಪರ್ವತವನ್ನು ಕಿತ್ತು ಸಮುದ್ರದಲ್ಲಿ ಇಡಲು, ದೇವಾಸುರರಿಗೆ ಬಹಳಸಂತೋಷವಾಯಿತು. ಆಗ ಅವರು ಸಮುದ್ರವನ್ನು ಕುರಿತು—''ಎಲೈ ಜಲನಿಧಿಯೇ, ಅಮೃತಪ್ರಾಪ್ತಿಗಾಗಿ ಈ ಮಂದರ ಪರ್ವತವನ್ನೇ ಕಡಗೋಲು ಮಾಡಿ ನಿನ್ನನ್ನು ನಾವು ಕಡೆಯುವೆವು,'' ಎಂದು ಹೇಳಲು, ಸಮುದ್ರನು—''ದೇವಾಸುರರೇ, ನೀವು ಕಡೆಯುವಾಗ ನನಗಾಗುವ ತಾಪವನ್ನು ನಾನು ಯಾಕೆ ಸಹಿಸಬೇಕು ? ನಿಮಗೆ ಪ್ರಾಪ್ತವಾಗುವ ಅಮೃತದ ಅಂಶವನ್ನು ನನಗೆ ಕೊಟ್ಟರೆ ನಾನು ಈ ಕ್ಲೇಶವನ್ನು ಸಹಿಸುವೆನು.''

ಎಂದು ಹೇಳಿದನು. ಅದಕ್ಕೆ ದೇವತೆಗಳು ಒಪ್ಪಿಕೊಂಡು ಮಂದರಪರ್ವತವನ್ನು ಎತ್ತಿ ಹಿಡಿಯುವದಕ್ಕಾಗಿ ಕೂರ್ಮರೂಪಿಯಾದ ಭಗವಾನ್‌ವಿಷ್ಣುವನ್ನು ಪ್ರಾರ್ಥಿಸಿದರು. ಅದಕ್ಕೆ ಕೂರ್ಮನುಒಡಂಬಟ್ಟು ಮಂದರಪರ್ವತವನ್ನು ತನ್ನ ಬೆನ್ನಮೇಲೆ ಧರಿಸಲು, ಇಂದ್ರನು ಆ ಪರ್ವತವನ್ನು ಮೇಲಕ್ಕೆ ಪುಟಿಯದಂತೆ ಅಮುಕಿ ಹಿಡಿದನು.

**ಸಮುದ್ರಮಥನ** - ಈ ಮೇರೆಗೆ ಎಲ್ಲಸಿದ್ಧತೆಯಾದಬಳಿಕ ದೇವದೈತ್ಯರು ವಾಸುಕಿಸರ್ಪವನ್ನು ಮಂದರಪರ್ವತಕ್ಕೆ ಸುತ್ತಿ ಸಮುದ್ರವನ್ನು ಕಡೆಯಹತ್ತಿದರು ಈ ಕಾಲದಲ್ಲಿ ದೈತ್ಯರು ವಾಸುಕೀಸರ್ಪದ ಮುಖವನ್ನೂ, ದೇವತೆಗಳು ಆ ಸರ್ಪದ ಬಾಲವನ್ನೂ ಹಿಡಿದಿದ್ದರು. ಹೀಗೆ ದೇವದೈತ್ಯರು ಭರದಿಂದ ಸಮುದ್ರವನ್ನು ಕಡೆಯುವಾಗ, ವಾಸುಕಿಯ ಮುಖದೊಳಗಿಂದ ಬೀಳುವ ವಿಷವನ್ನು ವಾಸುಕಿಯೇ ಭಕ್ಷಿಸುತ್ತಿದ್ದನು. ಆ ಸರ್ಪದ ಮುಖದಿಂದ ಹೊರಡುವ ಶ್ವಾಸೋಚ್ಛ್ವಾಸದಿಂದ ಬಿರುಗಾಳಿಯು ಉತ್ಪನ್ನವಾದದ್ದಲ್ಲದೆ, ಹೊಗೆಸುತ್ತಿದ ಉರಿಯು ಹೊರಬೀಳಹತ್ತಿತು. ಅದರಿಂದ ಆಕಾಶದಲ್ಲಿ ಸಿಡಿಲಿನೊಡನೆ ಮೇಘಪಂಕ್ತಿಗಳು ಉತ್ಪನ್ನವಾಗಿ, ದಣಿದಿದ್ದ ದೇವಾಸುರರಮೇಲೆ ಜಲವೃಷ್ಟಿಯಾಯಿತು. ಮಂದರಪರ್ವತವು ಸಮುದ್ರವನ್ನು ಕಡೆಯುತ್ತಿರುವಾಗ ಮೇಘಗರ್ಜನೆಯಂಥ ಗಂಭೀರ ಧ್ವನಿಯು ಉತ್ಪನ್ನವಾಗುತ್ತಿರಲು, ನೀರಿನ ಕ್ಷೋಭವಾಗಿ ಜಲಚರಗಳ ಸಂಹಾರವಾಗತೊಡಗಿತು. ಪರ್ವತದಮೇಲಿನ ಬಳ್ಳಿಗಿಡಗಳು ಬುಡಮೇಲಾಗಿ ಬಿದ್ದು, ಅವುಗಳ ಪರಸ್ಪರ ಘರ್ಷಣದಿಂದ ಅಗ್ನಿಯು ಉತ್ಪನ್ನವಾಗಿ, ಪರ್ವತಕ್ಕೆ ಪರ್ವತವೇ ಉರಿಯಹತ್ತಿತು. ಆ ಜ್ವಾಲೆಯಲ್ಲಿ ಆನೆ, ಸಿಂಹ ಮೊದಲಾದ ಅಸಂಖ್ಯಪ್ರಾಣಿಗಳ ಸಂಹಾರವಾಗತೊಡಗಿ, ಎಲ್ಲ ಕಡೆಗೂ ಹಾಹಾಕಾರವುಂಟಾಯಿತು! ಆಗ ಇಂದ್ರನು ಮಳೆಗರೆಯಲು, ಅಗ್ನಿಯು ಶಾಂತವಾಗಿ ಮಂಥನವ್ಯಾಪಾರವು ಸರಿಯಾಗಿ ಸಾಗತೊಡಗಿತು.

ಹೀಗೆ ಸಮುದ್ರಮಥನವು ನಡೆದಿರುವಾಗ, ಮಂದರಪರ್ವತದ ಮೇಲಿನ ಗಿಡಬಳ್ಳಿಗಳ ಹೂಎಲೆಗಳು ಸಮುದ್ರದಲ್ಲಿ ಸುರಿಯಹತ್ತಿದವು. ಅಂಟು-ಹಾಲುಗಳು ಒಂದೇಸವನೆ ಹರಿದುಬಂದು ಸಮುದ್ರಕ್ಕೆ ಕೂಡುತ್ತಿದ್ದವು. ಹೀಗೆ ಅಮೃತವೀರ್ಯದ ಆ ಔಷಧೀರಸಗಳು ಆ ಸಾಗರೋದಕದಲ್ಲಿ

ಮಿಶ್ರವಾಗಲು, ಆ ಮಿಶ್ರಣದ ಕಡೆಯುವಿಕೆಯಿಂದ ದುಗ್ಧವು (ಹಾಲು) ಉತ್ಪನ್ನವಾಯಿತು. ಋಷಿಗಳಿರಾ, ಆಕಳು ತಿಂದ ವನಸ್ಪತಿ; ಹಾಗು ಅದು ಕುಡಿದ ನೀರುಗಳಿಂದ ಹಾಲು ಆಗುವದು ಎಲ್ಲರಿಗೂ ಗೊತ್ತಿದ್ದ ಮಾತೇ ಆಗಿರುವದು. ಹೀಗೆ ಉತ್ಪನ್ನವಾದ ಸಮುದ್ರದುಗ್ಧರಸವನ್ನೂ, ಆ ಮಣಿಮಯವಾದ ಸುವರ್ಣಪರ್ವತದಿಂದ ಹುಟ್ಟಿಬರುವ ಜಲಪ್ರವಾಹಗಳನ್ನೂ ಕುಡಿದದ್ದರಿಂದಲೇ ದೇವತೆಗಳು ಅಮರರಾದರು. ಸಮುದ್ರೋದಕದಿಂದ ಹೀಗೆ ಹಾಲು ಉತ್ಪನ್ನವಾದಬಳಿಕ, ಮುಂದೆ ಆ ಹಾಲಿನಿಂದ ತುಪ್ಪವು ಉತ್ಪನ್ನವಾಯಿತು. ಋಷಿಗಳಿರಾ, ಹೀಗೆ ಸಮುದ್ರೋದಕವನ್ನು ಕಡೆಯುತ್ತಿರುವಾಗ ಆ ಸಮುದ್ರದ ಜಲದಮೇಲೆ ಹಾಲು, ತುಪ್ಪ ಮೊದಲಾದ ಭಿನ್ನಭಿನ್ನ ಪರಿಣಾಮಗಳಾಗಹತ್ತಿದವಲ್ಲದೆ, ಎಷ್ಟು ಕಡೆದರೂ ಅಮೃತವು ಉತ್ಪನ್ನವಾಗಲೊಲ್ಲದು. ಕಡೆದು ಕಡೆದು ದೇವ-ದಾನವರು ದಣಿದು ಬ್ರಹ್ಮದೇವನಿಗೆ ಶರಣುಹೋದರು. ಆಗ ಬ್ರಹ್ಮದೇವನು ಮಹಾವಿಷ್ಣುವನ್ನು ಪ್ರಾರ್ಥಿಸಲು, ಆತನ ಪ್ರಸಾದದಿಂದ ದೇವದೈತ್ಯರ ಬಲವು ಹೆಚ್ಚಿ, ಅವರಿಬ್ಬರೂ ಕಸುವಿನಿಂದ ಸಮುದ್ರವನ್ನು ಕಡೆಯಹತ್ತಿದರು

**ಅಮೃತೋತ್ಪತ್ತಿ**—ಹೀಗೆ ದೇವದೈತ್ಯರು ಉತ್ಸಾಹದಿಂದ ಸಮುದ್ರವನ್ನು ಕಡೆಯುತ್ತಿರುವಾಗ, ಅದರೊಳಗಿಂದ ತಂಪುಕಿರಣಗಳ ಚಂದ್ರನು ಉತ್ಪನ್ನನಾಗಿ, ನಾಲ್ಕೂದಿಕ್ಕುಗಳು ಬೆಳಗಿದವು. ಆಮೇಲೆ ಬಿಳಿಯ ವಸ್ತ್ರವನ್ನುಟ್ಟುಕೊಂಡಿದ್ದ ಲಕ್ಷ್ಮಿಯು ಉತ್ಪನ್ನವಾದಳು. ಆಮೇಲೆ ಸುರಾದೇವಿ, ಉಚ್ಚೈಃಶ್ರವಕುದುರೆ, ಕೌಸ್ತುಭರತ್ನ ಇವು ಉತ್ಪನ್ನವಾದವು. ಕೌಸ್ತುಭರತ್ನವು ಭಗವಾನ್ ನಾರಾಯಣನ ವಕ್ಷಸ್ಥಳವನ್ನು ಅಲಂಕರಿಸಿತು. ಲಕ್ಷ್ಮಿ, ಸುರೆ, ಸೋಮ, ಮನೋಜವಕುದುರೆ ಇವು ಆದಿತ್ಯಮಾರ್ಗವನ್ನು ಆಶ್ರಯಿಸಿ ದೇವಲೋಕದಕಡೆಗೆ ಹೊರಟುಹೋದವು. ಮುನಿವರ್ಯರೇ, ಆಮೇಲೆ ಬಿಳಿಯ ಅಮೃತಕಲಶವನ್ನು ಕೈಯಲ್ಲಿಹಿಡಕೊಂಡು ಮೂರ್ತಿಮಂತನಾದ ಧನ್ವಂತರಿಯು ಆ ಲವಣಾಂಬುಧಿಯಿಂದ ಪ್ರಕಟನಾದನು. ಆ ಚಮತ್ಕಾರವನ್ನು ನೋಡಿ ದೈತ್ಯರು "ಈ ವಸ್ತುವು ನಮ್ಮದು, ಈ ವಸ್ತುವು ನಮ್ಮದು" ಎಂದು ಕೂಗುತ್ತ

ಅಮೃತಕಲಶವನ್ನು ಬಲಾತ್ಕಾರದಿಂದ ಕಸಿದುಕೊಂಡು ಕುಳಿತರು. ಮುಂದೆ ಸಮುದ್ರದೊಳಗಿಂದ ಐರಾವತಗಜವು ಉತ್ಪನ್ನವಾಗಲು, ಅದನ್ನು ಇಂದ್ರನು ಹಿಡಿದನು. ಬಳಿಕ ದೇವ-ದೈತ್ಯರು ಮತ್ತೂ ಸಮುದ್ರವನ್ನು ಕಡೆಯಲು, ಕಾಲಕೂಟವಿಷವು ಉತ್ಪನ್ನವಾಗಿ, ಕೂಡಲೆ ಅದು ಬ್ರಹ್ಮಾಂಡವನ್ನು ವ್ಯಾಪಿಸಿತು. ಋಷಿಗಳಿರಾ, ಆ ಹಾಲಾಹಲ ವಿಷದ ಕೇವಲ ಉಗ್ರಗಂಧದಿಂದಲೇ ಯಾವತ್ತು ತ್ರೈಲೋಕ್ಯಗಳು ಮೂರ್ಛಿತವಾದವು. ಬಳಿಕ ವಿಶ್ವರಕ್ಷಕನಾದ ಬ್ರಹ್ಮದೇವನ ಅಪ್ಪಣೆಯಿಂದ ಮಂತ್ರಮೂರ್ತಿಯಾದ ಶ್ರೀ ಶಂಕರನು ಆ ವಿಷವನ್ನು ಕುಡಿದು ಕಂಠದಲ್ಲಿ ಧರಿಸಿ, "ನೀಲಕಂಠ" ನೆಂಬ ಹೆಸರು ಪಡೆದನು. ಋಷಿಗಳಿರಾ, ಹೀಗೆ ಬ್ರಹ್ಮಾಂಡವನ್ನೇ ಮೂರ್ಛಿತವಾಗಿ ಮಾಡುವ ವಿಷವನ್ನು ಭಗವಾನ್ ಶಂಕರನು ಅನಾಯಾಸವಾಗಿ ಕುಡಿದು ಕುಳಿತದ್ದನ್ನು ನೋಡಿ ದೈತ್ಯರು ನಿರಾಶರಾಗಿ, ಅಮೃತದ ಹಾಗೂ ಲಕ್ಷ್ಮಿಯ ಸಲುವಾಗಿ ದೇವತೆಗಳೊಡನೆ ಮತ್ಸರಿಸಹತ್ತಿದರು. ಅದರಿಂದ ಮುಂದೆ ಮಹಾ ಅನರ್ಥವು ಉಂಟಾಯಿತು. ಋಷಿಗಳಿರಾ, ಬಳಿಕ ಭಗವಾನ್ ವಿಷ್ಣುವು ಮಾಯೆಯ ಆಶ್ರಯದಿಂದ ಅದ್ಭುತ ಸ್ತ್ರೀರೂಪವನ್ನು ಧರಿಸಿ, ದೈತ್ಯರಕಡೆಗೆ ಹೋದನು. ಆಗ ಆ ಮೂರ್ಖದೈತ್ಯರು ಆ ಮೋಹಿನಿಯ ರೂಪಕ್ಕೆ ಮರುಳಾಗಿ ಅಮೃತಕಲಶವನ್ನು ಆಕೆಯ ಕೈಯಲ್ಲಿ ಕೊಟ್ಟರು.

---

## ೧೯ನೇ ಅಧ್ಯಾಯ — ಅಮೃತಮಂಥನ ಸಮಾಪ್ತಿ

ಈಮೇರೆಗೆ ದೈತ್ಯರೂ, ದಾನವರೂ ತಮ್ಮ ಕೈಯೊಳಗಿನ ಅಮೃತಕಲಶವು ಮೋಹಿನಿಯ ಕೈಸೇರಿದ್ದಕ್ಕಾಗಿ ವಿಷಾದಪಡತೊಡಗಿದರು. ಅವರು ಶಸ್ತ್ರಧಾರಿಗಳಾಗಿ ದೇವತೆಗಳಮೇಲೆ ಬಿದ್ದರು. ಇತ್ತ ನರನಿಂದ ಸಹಿತನಾದ ನಾರಾಯಣನು ಮೋಹಿನೀರೂಪವನ್ನು ಧರಿಸಿ, ಅಮೃತಕಲಶವನ್ನು ಅಪಹರಿಸಿದಮೇಲೆ ಅದನ್ನು ತಿರುಗಿ ದೈತ್ಯರ ಕೈಗೆ ಹತ್ತಗೊಡಲೇ ಇಲ್ಲ. ಭಗವಂತನು ಆ ಕಲಶವನ್ನು ದೂರ ಒತ್ತಟ್ಟಿಗೆ ಒಯ್ದು ಇಟ್ಟನು. ಅಷ್ಟರಲ್ಲಿ ದೇವ-ದೈತ್ಯರು ಅಲ್ಲಿ ನೆರೆದರು. ಅಷ್ಟು ಗದ್ದಲವಾದರೂ ಭಗ

ವಾನ್ ನಾರಾಯಣನಿಂದ ದೇವತೆಗಳು ಅಮೃತವನ್ನು ಇಸುಕೊಂಡು ಕುಡಿದರು. ಈ ಗದ್ದಲದಲ್ಲಿ ರಾಹುವು ದೇವತೆಗಳ ವೇಷದಿಂದ ಅಮೃತವನ್ನು ನಾರಾಯಣನಿಂದ ಇಸಕೊಂಡು ಕುಡಿಯುತ್ತಿರಲು, ಈ ಕಪಟವನ್ನು ಚಂದ್ರ-ಸೂರ್ಯರು ನಾರಾಯಣನಿಗೆ ತಿಳಿಸಿದರು. ಕೂಡಲೆ ಭಗವಂತನು ರಾಹುವಿನ ಗಂಟಲದಲ್ಲಿ ಅಮೃತವು ಇಳಿಯುವದರೊಳಗಾಗಿ ಅವನ ತಲೆಯನ್ನು ಕಡಿದನು. ಆಗ ಆ ದೈತ್ಯನ ಭಯಂಕರರುಂಡವು ಭೂಮಿಯ ಮೇಲೆ ಬಿದ್ದಿತು. ಇದರ ಸೇಡು ತೀರಿಸಿಕೊಳ್ಳುವ ಉದ್ದೇಶದಿಂದಲೇ ಆ ರಾಹುಮುಖವು ಈಗಲೂ ಚಂದ್ರಸೂರ್ಯರನ್ನು ನುಂಗುತ್ತ ಪೀಡಿಸುತ್ತಿರುವದು! ದೇವತೆಗಳು ಹೀಗೆ ಅಮೃತ ಪ್ರಾಶನಮಾಡಿದ್ದನ್ನು ನೋಡಿ ದೈತ್ಯರು ಅವರೊಡನೆ ಯುದ್ಧಕ್ಕೆ ಸಿದ್ಧರಾಗಲು, ಆ ಲವಣಸಮುದ್ರದ ದಂಡೆಯಮೇಲೆ ದೇವ-ದೈತ್ಯರ ಭಯಂಕರಯುದ್ಧವು ಉತ್ಪನ್ನವಾಯಿತು. ಆಗ ಧನುರ್ಧಾರಿಯಾಗಿ ನರದೇವನೂ, ಸುದರ್ಶನ ಚಕ್ರಧಾರಿಯಾಗಿ ನಾರಾಯಣದೇವನೂ ಮಾಡಿದ ದೈತ್ಯಸಂಹಾರಕ್ಕೆ ನೆಲೆಯಿಲ್ಲ! ಆಗ ದೈತ್ಯರು ಯುದ್ಧಮಾಡಲಾರದೆ ಪಾತಾಳಕ್ಕೆ ಓಡಿಹೋಗಿ ಅಡಗಿಕೊಂಡರು ಇತ್ತ ದೇವತೆಗಳು ಜಯಶಾಲಿಗಳಾಗಿ ಅಮೃತಕಲಶವನ್ನು ತಕ್ಕೊಂಡು ತಮ್ಮ ಸ್ಥಳಕ್ಕೆ ಹೋಗಿ, ಅದನ್ನು ಜೋಕೆಯಿಂದ ಕಾಯಬೇಕೆಂದು ನರದೇವನ ಕೈಯಲ್ಲಿಕೊಟ್ಟರು.



## ೨೦ನೇ ಅಧ್ಯಾಯ—ಸೌಪರ್ಣಾಖ್ಯಾನ

ಶೌನಕಾದಿ ಋಷಿಗಳಿರಾ, ಹೀಗೆ ಉಚ್ಚೈಃಶ್ರವಕುದುರೆಯು ಸಮುದ್ರಮಂಥನಕಾಲದಲ್ಲಿ ಪ್ರಾಪ್ತವಾಯಿತು. ಆ ಕುದುರೆಯ ವರ್ಣನವನ್ನು ಈ ಮೊದಲೆ ನೀವು ಕೇಳಿರುವಿರಿ. ಆ ಕುದುರೆಯ ಸುದ್ದಿಯನ್ನು ಕೇಳಿ ಕದ್ರುವು ತನ್ನ ಸವತಿಯಾದ ವಿನತೆಯನ್ನು ಕುರಿತು-"ಎಲೌ ಭದ್ರೇ, ಉಚ್ಚೈಃಶ್ರವಕುದುರೆಯ ಬಣ್ಣವು ಹೇಗಿದೆ, ಬೇಗನೆಹೇಳು ನೋಡೋಣ" ಅನ್ನಲು, ವಿನತೆಯು-"ಸಖೀ, ಕದ್ರೂ, ಆ ಅಶ್ವರಾಜನ ಬಣ್ಣವು ಬಿಳಿಯದೇ ಇರುವದು; ಅದು ಬೇರೆ ಬಣ್ಣದ್ದೆಂಬದು ನಿನಗೆ ಗೊತ್ತಿದ್ದರೆ,

ಹೇಳು, ನಾವಿಬ್ಬರೂ ಪಿದ್ದುಕಟ್ಟೋಣ," ಎಂದು ಹೇಳಿದಳು. ಅದಕ್ಕೆ ಕದ್ರುವು—"ಎಲೌ ಸುಂದರೀ, ಆ ಕುದುರೆಯು ಬಣ್ಣವು ಬಿಳಿಯದಿರುವದೇನೋ ನಿಜ ; ಆದರೆ ಅದರ ಬಾಲವುಮಾತ್ರ ಕಪ್ಪುಬಣ್ಣದ್ದೇ ಇರುವದು. ಬಾ, ನನ್ನಸಂಗಡ ಪಿದ್ದುಕಟ್ಟು. ಆ ತೇಜೋನಿಧಿಯಾದ ಅಶ್ವದಬಾಲವು ನಿಜವಾಗಿಯೇ ಕಪ್ಪುಬಣ್ಣದ್ದಾಗಿದ್ದರೆ, ನೀನು ನನ್ನ ದಾಸಿಯಾಗಬೇಕು ; ಆ ಕುದುರೆಯು ಎಲ್ಲಾ ಬಿಳಿಯಬಣ್ಣದ್ದೇ ಆಗಿದ್ದರೆ, ನಾನು ನಿನ್ನ ದಾಸಿಯಾಗುವೆನು." ಎಂದು ಹೇಳಿದಳು. ಬಳಿಕ ಅವರಿಬ್ಬರು "ನಾಳೆ ಬೆಳಗಾದಬಳಿಕ ಆ ಕುದುರೆಯನ್ನು ಪ್ರತ್ಯಕ್ಷ ನೋಡೋಣ" ವೆಂದು ಹೇಳಿ ತಮ್ಮ ತಮ್ಮ ಮನೆಗಳಿಗೆ ಹೋದರು.

**ಸರ್ಪಗಳಿಗೆ ತಾಯಿಯ ಶಾಪವು**—ಋಷಿಗಳಿರಾ, ಕದ್ರುವು ಮನೆಗೆ ಹೋದಬಳಿಕ ಸುಮ್ಮನೆ ಕುಳಿತುಕೊಳ್ಳಲಿಲ್ಲ. ಆಕೆಯು ಮೋಸದಿಂದ ವಿನತೆಯನ್ನು ತನ್ನ ದಾಸಿಯಾಗಿ ಮಾಡಿಕೊಳ್ಳಬೇಕೆಂದು ಯೋಚಿಸಿ, ತನ್ನ ಮಕ್ಕಳಾದ ಸಹಸ್ರಸರ್ಪಗಳನ್ನು ಕರೆದು—"ಮಕ್ಕಳಿರಾ, ನೀವು ಕಾಡಿಗೆಯಬಣ್ಣದ ಸೂಕ್ಷ್ಮರೋಮಗಳ ರೂಪತಾಳಿ, ಉಚ್ಚೈಶ್ರವ ಕುದುರೆಯ ಬಾಲಕ್ಕೆ ಅಂಟಿಕೊಂಡು ಅದನ್ನು ಕಪ್ಪುಬಣ್ಣದ್ದಾಗಿ ಮಾಡಿಬಿಡಿರಿ ; ಅಂದರೆ ನನ್ನಮಾತು ಸತ್ಯವಾಗಿ, ನನ್ನ ಸವತಿಯಾದ ವಿನತೆಯು ದಾಸಿಯಾಗುವ ಪ್ರಸಂಗವು ನನಗೆ ಬರಲಿಕ್ಕಿಲ್ಲ" ಎಂದು ಹೇಳಿದಳು ; ಆದರೆ ಕದ್ರುವಿನ ಈ ದುಷ್ಟವಿಚಾರವು ಕೆಲವು ಸರ್ಪಗಳಿಗೆ ಸೇರಲಿಲ್ಲ. ಅವು ತಮ್ಮ ತಾಯಿಯ ಮಾತನ್ನು ಮನ್ನಿಸದೆ ಹೋಗಲು, ಕದ್ರುವು ಸಂತಪ್ತಳಾಗಿ ಆ ವಿನಯಹೀನ ಮಕ್ಕಳನ್ನು ಕುರಿತು—"ಎಲೈ ಮಕ್ಕಳಿರಾ, ತಾಯಿಯ ಮಾತನ್ನು ಕೂಡಲೆ ಕೇಳುವದು ಸುಪುತ್ರರ ಕರ್ತವ್ಯವಾಗಿದ್ದು, ನೀವು ನನ್ನ ಅಪ್ಪಣೆಯನ್ನು ಮೀರಿದ್ದು ನಿಮ್ಮದೊಡ್ಡ ಅಪರಾಧವಾಗಿರುವದು ; ಆದ್ದರಿಂದ ಪಾಂಡವಕುಲೋತ್ಪನ್ನನಾದ ಬುದ್ಧಿವಂತ ಜನಮೇಜಯ ಭೂಪತಿಯ ಸರ್ಪಸತ್ರದೊಳಗಿನ ಅಗ್ನಿಯು ನಿಮ್ಮನ್ನು ಸುಟ್ಟು ಬೂದಿಮಾಡಲಿ" ಎಂದು ಶಪಿಸಿದಳು. ದೈವಯೋಗವು ವಿಲಕ್ಷಣವಾದದ್ದು. ಹಡೆದ ತಾಯಿಯು ಹೀಗೆ ಮಕ್ಕಳನ್ನು ಶಪಿಸಿದ್ದು ಆಶ್ಚರ್ಯವೇ ಸರಿ. ಕದ್ರುವು ಹೀಗೆ ಮಕ್ಕಳಿಗೆ ಶಾಪಕೊಟ್ಟದ್ದನ್ನು ಕೇಳಿ ಲೋಕರಕ್ಷಕನಾದ

ಬ್ರಹ್ಮದೇವನಿಗೆ ಸಂತೋಷವಾಯಿತು: ಭಯಂಕರ ವಿಷದ ಸರ್ಪಗಳ ಬಾಧೆಯು ಲೋಕಕ್ಕೆ ಕಡಿಮೆಯಾಗುವದೆಂದು ಆತನು ಸಮಾಧಾನಪಟ್ಟು ಕದ್ರುವಿನ ಶಾಪವನ್ನು ಸಮ್ಮತಿಸಿದನು. ಆತನು ಕಶ್ಯಪರನ್ನು ಕರೆದು-"ಎಲೈ ನಿಷ್ಪಾಪನೇ, ನಿನ್ನಿಂದ ಉತ್ಪನ್ನವಾಗಿರುವ ಈ ದೊಡ್ಡ ದೊಡ್ಡ ಸರ್ಪಗಳು ಕ್ರೂರವಿಷವುಳ್ಳವಾಗಿದ್ದು, ಕಡಿದು ಅನ್ಯರ ಪ್ರಾಣಹರಣ ಮಾಡುವಲ್ಲಿ ಒಳ್ಳೇ ನಿಷ್ಣಾತವಾಗಿರುವವು; ಆದ್ದರಿಂದ ಕದ್ರುವು ಶಾಪ ಕೊಟ್ಟದ್ದು ಒಳ್ಳೆಯದಾಯಿತು. ಅದಕ್ಕಾಗಿ ನೀನು ಕದ್ರುವಿನಮೇಲೆ ಸಿಟ್ಟಾಗಬೇಡ. ಯಜ್ಞದಲ್ಲಿ ಸರ್ಪಗಳ ನಾಶವಾಗುವದು ಇದೇ ಮೊದಲು ಅಲ್ಲ, ಈ ಮೊದಲು ಎಷ್ಟೋಸಾರೆ ಅವುಗಳ ನಾಶವು ಯಜ್ಞದಲ್ಲಿ ಆಗಿರುತ್ತದೆ. ಎಂದು ಹೇಳಿ, ವಿಷನಾಶಕ ವಿದ್ಯೆಯನ್ನು ಆ ಮಹಾತ್ಮನಿಗೆ ಅರ್ಪಿಸಿದನು.



## ೨೧, ೨೨, ೨೩ನೇ ಅಧ್ಯಾಯಗಳು — ಸೌಪರ್ಣಾಖ್ಯಾನ

ಋಷಿಗಳಿರಾ, ಬಳಿಕ ಆ ರಾತ್ರಿಯು ಕಳೆದು ಬೆಳಗಾಗಲು, ಭಗವಾನ್ ಆದಿತ್ಯನ ಕಿರಣಗಳು ಉದಯಾಚಲದಲ್ಲಿ ಪಸರಿಸಿದವು. ಆಗ ಕದ್ರು-ವಿನತೆಯರು ಒಬ್ಬರನ್ನೊಬ್ಬರು ದಾಸಿಯಾಗಿ ಮಾಡಿಕೊಳ್ಳಬೇಕೆಂಬ ಈರ್ಷೆಯಿಂದ ಉಚ್ಚೈಃಶ್ರವ ಕುದುರೆಯನ್ನು ಪ್ರತ್ಯಕ್ಷ ನೋಡುವದಕ್ಕಾಗಿ ಹೊರಟರು. ಇತ್ತ ತಾಯಿಯು ಶಾಪಕ್ಕಾಗಿ ಅಂಜಿಕೊಂಡಿದ್ದ ಸರ್ಪಗಳು ಒಟ್ಟುಗೂಡಿ ತಮ್ಮೊಳಗೆ-"ತಾಯಿಯ ಇಚ್ಛೆಯನ್ನು ಪೂರ್ಣ ಮಾಡುವದು ನಮ್ಮ ಕರ್ತವ್ಯವಾಗಿರುವದು. ನಾವು ಆಕೆಯ ಇಚ್ಛೆಯನ್ನು ಪೂರ್ಣಮಾಡದಿದ್ದರೆ, ಆಕೆಯು ನಿಷ್ಠುರತನದಿಂದ ನಮ್ಮನ್ನು ನಾಶಗೊಳಿಸುವಳು. ನಾವು ಆಕೆಯ ಇಚ್ಛೆಯನ್ನು ಪೂರ್ಣಮಾಡಿದರೆ ಕದಾಚಿತ್ ಆಕೆಯು ನಮ್ಮನ್ನು ಶಾಪದಿಂದ ಮುಕ್ತಮಾಡಬಹುದು; ಆದ್ದರಿಂದ ನಾವು ನಿಜವಾಗಿಯೇ ಆ ಕುದುರೆಯ ಬಾಲವನ್ನು ಕಪ್ಪುಮಾಡಿ ಬಿಡೋಣ ನಡೆಯಿರಿ" ಎಂದು ಹೇಳಿ, ಅಲ್ಲಿಂದ ಹೊರಟು ಅತಿಸೂಕ್ಷ್ಮರೂಪವನ್ನು ತಾಳಿ ತಾಯಿಯಇಚ್ಛೆಯಂತೆ ಉಚ್ಚೈಃಶ್ರವ ಕುದುರೆಯ ಬಾಲವನ್ನು

ಅಂಟಿಕೊಂಡು ಅದನ್ನು ಕಪ್ಪುಮಾಡಿಬಿಟ್ಟವು. ಅತ್ತ ಕದ್ರು-ವಿನತೆಯರಿಬ್ಬರು ತಮ್ಮ ಹಾದಿಯಲ್ಲಿ ಹತ್ತಿದ ಭಯಂಕರವಾದ ಸಮುದ್ರವನ್ನು ಅಂತರಿಕ್ಷಮಾರ್ಗದಿಂದ ದಾಟಿಹೋಗಿ, ಅದರ ಎರಡನೆಯ ದಂಡೆಯನ್ನು ಮುಟ್ಟಿದರು. ಅಲ್ಲಿ ಅವರಿಗೆ ಉಚ್ಚೈಃಶ್ರವದ ದರ್ಶನವಾಯಿತು. ಆ ದಿವ್ಯಾಶ್ವವನ್ನು ಸ್ವತಃ ಅವರು ಕಣ್ಣುಮುಟ್ಟ ನೋಡಿದರು. ಆ ವೇಗಶಾಲಿಯಾದ ಅಶ್ವದ ಮೈಯು ಬಿಳಿಯಬಣ್ಣದ್ದಾಗಿದ್ದು, ಅದರ ಬಾಲವು ಮಾತ್ರ ಕಪ್ಪುಬಣ್ಣದ್ದಾಗಿತ್ತು. ಅದನ್ನು ನೋಡಿ ಕದ್ರುವು ಸಂತೋಷಪಟ್ಟಳು ; ವಿನತೆಯು ವಿಷಾದಪಟ್ಟಳು. ಬಳಿಕ ಕದ್ರುವು ವಿನತೆಯನ್ನು ದಾಸಿಯಾಗಹೇಳಲು, ವಿನತೆಯು ಬಹು ಕಷ್ಟದಿಂದ ಅದಕ್ಕೆ ಒಪ್ಪಿಕೊಂಡಳು.



## ೨೩ನೇ ಅಧ್ಯಾಯ—ಗರುಡನ ಉತ್ಪತ್ತಿ

ಋಷಿಗಳಿರಾ, ಈಮೇರೆಗೆ ವಿನತೆಯು ಕದ್ರುವಿನ ದಾಸಿಯಾಗಿ ಆಕೆಯ ಮನೆಯಲ್ಲಿ ಇರುತ್ತಿರಲು, ಇತ್ತ ವಿನತೆಯ ಮನೆಯಲ್ಲಿ ಹಿಂದೆ ಹೇಳಿದಂತೆ ಮಹಾತೇಜಸ್ವಿಯಾದ ಗರುಡನು ತನ್ನ ತತ್ತಿಯನ್ನು ಒಡೆದು ಹೊರಬಿದ್ದನು. ಆಗ ಆತನ ತಾಯಿಯಾದ ವಿನತೆಯು ಆತನ ಬಳಿಯಲ್ಲಿದ್ದಿಲ್ಲ. ಆಕೆಯು ಕದ್ರುವಿನ ದಾಸಿಯಾಗಿ ಆಕೆಯ ಮನೆಯಲ್ಲಿ ವಾಸಿಸುತ್ತಿದ್ದಳು. ಆ ಗರುಡನ ದಿವ್ಯಸಾಮರ್ಥ್ಯವನ್ನೇನು ವರ್ಣಿಸುವದು ? ಹುಟ್ಟಿದ ಕೂಡಲೆ ಆ ಮಹಾ ವಿಭೂತಿಯ ಅಲೌಕಿಕ ಕಾಂತಿಯಿಂದ ದಶದಿಕ್ಕುಗಳು ಪ್ರಕಾಶಿಸಿದವು. ಆತನು ಧೈರ್ಯದ ನಿಧಿಯಾಗಿದ್ದನು. ಆತನ ಬಲವು ಮೇರೆಯಿಲ್ಲದ್ದು. ಆ ಪಕ್ಷಿರಾಜನು ಬೇಕಾದ ರೂಪವನ್ನು ಧರಿಸುವನು ; ಬೇಕಾದತ್ತ ಹೋಗುವನು. ಆತನು ನೋಡುವವರಿಗೆ ಭಯಂಕರವಾದ ಪ್ರಜ್ವಲಿತ-ಅಗ್ನಿಯಂತೆ ತೋರುವನು. ಋಷಿಗಳಿರಾ, ಆ ಅಪೂರ್ವವಾದ ವಿಹಂಗಮನು ತತ್ತಿಯಿಂದ ಹೊರಬಿದ್ದ ಕೂಡಲೆ ಬಡಬಡ ಬೆಳೆದು ವಿಶಾಲ ದೇಹವನ್ನು ಧರಿಸಿ ಆಕಾಶದಲ್ಲಿ ಉಡ್ಡಾಣಮಾಡಿದನು. ಆತನ ರೌದ್ರ ಧ್ವನಿಯನ್ನು ಕೇಳಿ ದಶದಿಕ್ಕುಗಳು ಗದಗಮಿಸಿದವು. ಆತನು ವಡವಾನಲ

ನಂತೆ ಯಾವತ್ತು ಬ್ರಹ್ಮಾಂಡವನ್ನು ಸುಡಹತ್ತಿದನು. ಆಗ ಸಾಕ್ಷಾತ್ ಅಗ್ನಿನಾರಾಯಣನೇ ನಮ್ಮನ್ನು ಸುಡುತ್ತಿರುವನೆಂದು ತಿಳಿದ; ಯಾವತ್ತು ದೇವತೆಗಳು ಅಗ್ನಿಗೆ ಶರಣುಹೋಗಿ, ನಮ್ಮನ್ನು ರಕ್ಷಿಸೆಂದು ಪ್ರಾರ್ಥಿಸಿದರು. ಆಗ ಅಗ್ನಿಯು ದೇವತೆಗಳಿಗೆ-"ಎಲೈ ದೇವತೆಗಳಿರಾ, ಹೆದರಬೇಡಿರಿ. ನಾನು ನಿಮ್ಮನ್ನು ಸುಡುವದಿಲ್ಲ. ಆಕಾಶದಲ್ಲಿ ವಿಹಾರಮಾಡುತ್ತಿರುವ ಈ ತೇಜೋನಿಧಿಯು ಭಗವಾನ್ ಗರುಡನು. ಈತನಲ್ಲಿ ನನ್ನಂತಹ ದಿವ್ಯತೇಜಸ್ಸೂ, ಅಮೋಘಶಕ್ತಿಯೂ ಇರುವದರಿಂದ, ನಿಮಗೆ ನನ್ನ ಭಾಸವಾಗುತ್ತಿರುವದು ನೀವು ಈತನನ್ನು ನೋಡಿ ಅಂಜುವ ಕಾರಣವಿಲ್ಲ. ಈತನು ಸರ್ಪಗಳನ್ನು ವಿಧ್ವಂಸಗೊಳಿಸುವನು. ದೈತ್ಯರನ್ನೂ, ರಾಕ್ಷಸರನ್ನೂ ಸಂಹರಿಸುವನು. ಜನರಿಗೆ ಅತ್ಯಂತ ಸುಖದಾಯಕನಾಗುವನು. ದೇವತೆಗಳ ಹಿತಮಾಡುವದರಲ್ಲಿಯೇ ಈ ಕಶ್ಯಪಸುತನು ಯಾವಾಗಲೂ ಉದ್ಯುಕ್ತನಾಗಿರುವನು. ನನ್ನೊಡನೆ ಈ ಲೋಕೋತ್ತರ ಪುರುಷನನ್ನು ನೋಡಿರಿ" ಎಂದುಹೇಳಿದನು.

**ಗರುಡನ ಸ್ತುತಿ** –ಅಗ್ನಿಯು ಈ ವಾತುಗಳನ್ನು ಕೇಳಿ ದೇವತೆಗಳು ಗರುಡನನ್ನು ಸ್ತುತಿಸತೊಡಗಿದರು. ಅವರು-"ಎಲೈ ಮಹಾಭಾಗಾ, ಪತಂಗೇಶ್ವರಾ, ನೀನು ಮೂರ್ತಿಮಂತ ಪ್ರಣವಮಂತ್ರವಿರುತ್ತೀ. ನೀನೇ ಯಾವತ್ತು ಯಜ್ಞಯಾಗಾದಿಗಳ ಭೋಕ್ತೃವಾಗಿರುವೆ. ನಿನ್ನ ದಿವ್ಯ ತೇಜಸ್ಸಿನಿಂದಲೇ ಜೀವರೂಪ ಪಕ್ಷಿಮಾತ್ರಗಳಿಗೆ ಚಲನೆಯುಂಟಾಗುತ್ತದೆ. ಬ್ರಹ್ಮಾಂಡದೊಳಗಿನ ಯಾವತ್ತು ಸ್ಥಾವರ-ಜಂಗಮ ಪದಾರ್ಥಗಳು ನಿನ್ನಲ್ಲಿಯೇ ಅಧಿಷ್ಠಿತವಾಗಿರುತ್ತವೆ. ಹಿರಣ್ಯಗರ್ಭರೂಪದಿಂದ ಯಾವತ್ತು ಸೃಷ್ಟಿಯ ಆದಿಬೀಜವು ನೀನೇ ಆಗಿರುತ್ತೀ. ದಕ್ಷಾದಿ ಪ್ರಜಾಪತಿಗಳ ರೂಪದಿಂದ ಸೃಷ್ಟಿಯ ನಿಮಿತ್ತಕಾರಣನು ನೀನೇ ಆಗಿರುತ್ತೀ; ಎಲೈ ದೇವಾಧಿದೇವನೇ, ಬ್ರಾಹ್ಮಣ, ಬ್ರಹ್ಮದೇವ, ಅಗ್ನಿ, ವಾಯು, ಚಿದಾತ್ಮ, ಮಾಯಾ ಇವು ನಿನ್ನ ಅಪರರೂಪಗಳೇ ಆಗಿರುವವು. ಯಾವಾಗಲೂ ಜಗತ್ತಿನಲ್ಲಿ ತುಂಬಿ ತುಳುಕುತ್ತಿರುವ ನಿರ್ಗುಣ ಪರಬ್ರಹ್ಮತತ್ವವು ನೀನೇ ಆಗಿರುತ್ತೀ. ಎಲೈ ನಾರಾಯಣನೇ, ಈ ಜಗತ್ತಿನಲ್ಲಿ ಕರ್ತುಮಕರ್ತುಮನ್ಯಥಾ ಕರ್ತುಂ ಶಕ್ತಿಯು ನಿನ್ನೊಬ್ಬನಲ್ಲಿಯೇ ಇರುತ್ತದೆ. ದೇವಾ,

ಈಗ ನಿನ್ನ ಈ ಅಪೂರ್ವ ತೇಜಸ್ಸನ್ನು ನಾವು ಸಹಿಸಲಾರೆವು; ನಿನಗೆ ನಾವು ಶರಣುಬಂದಿದ್ದೇವೆ. ನೀನು ಉದಾರಬುದ್ಧಿಯ ತಂದೆಯಂತೆ ಜಗತ್ತಿನಮೇಲೆ ಅಂತಃಕರಣಮಾಡಿ, ನಿನ್ನ ಕ್ರೋಧವನ್ನು ಶಾಂತಗೊಳಿಸಿ ನಮ್ಮನ್ನು ರಕ್ಷಿಸು; ಮತ್ತು ಅಗ್ನಿಸಮಾನವಾದ ನಿನ್ನ ಭಯಂಕರದೇಹದ ಸಂಕೋಚಮಾಡು." ಇತ್ಯಾದಿ ರೀತಿಯಿಂದ ಪ್ರಾರ್ಥಿಸಲು, ಆ ಭಗವಾನ್ ಗರುಡನು ತನ್ನ ದೇಹವನ್ನು ಸಂಕೋಚಮಾಡಿದನು; ಅದರಿಂದ ಎಲ್ಲರಿಗೂ ಆನಂದವಾಯಿತು.



## ೨೪ನೇ ಅಧ್ಯಾಯ-ಸೂರ್ಯರಥದಲ್ಲಿ ಅರುಣನ ಯೋಜನೆ

ಋಷಿಗಳಿರಾ, ಹೀಗೆ ಗರುಡನು ಎಲ್ಲರನ್ನೂ ಆನಂದಪಡಿಸಿ, ತನ್ನ ತಮ್ಮನಾದ ಹೆಳವ ಅರುಣನನ್ನು ಹೆಗಲಮೇಲೆ ಕುಳ್ಳಿರಿಸಿಕೊಂಡು ಹಾರಿ ಸಮುದ್ರವನ್ನು ದಾಟಿ ತನ್ನ ತಾಯಿಯಾದ ವಿನತೆಯ ಬಳಿಗೆ ಬಂದನು. ಅಲ್ಲಿ ಆತನು ಅರುಣನನ್ನು ಪೂರ್ವದಿಗ್ಭಾಗದಲ್ಲಿ ಕುಳ್ಳಿರಿಸಿ, ತನ್ನ ಉಗ್ರತೇಜದಿಂದ ಯಾವತ್ತು ಬ್ರಹ್ಮಾಂಡವನ್ನು ಸುಟ್ಟುಬಿಡಬೇಕೆಂದು ಯೋಚಿಸುತ್ತಿದ್ದ ಸೂರ್ಯನ ಯೋಚನೆಯನ್ನು ನಡೆಯಗೊಡಲಿಲ್ಲ. ಋಷಿಗಳಿರಾ, ಸೂರ್ಯನು ಬ್ರಹ್ಮಾಂಡವನ್ನು ಸುಡತೊಡಗಿದ ಕಾರಣವನ್ನು ಹೇಳುವೆನು ಕೇಳಿರಿ. ಹಿಂದಕ್ಕೆ ಅಮೃತಪ್ರಾಶನಕಾಲದಲ್ಲಿ ಚಂದ್ರ-ಸೂರ್ಯರು ರಾಹುವಿನಮೇಲೆ ಚಾಡಿಯಹೇಳಿ ಆತನ ಶಿರಸ್ಸನ್ನು ವಿಷ್ಣುವಿನ ಚಕ್ರದಿಂದ ತುಂಡರಿಸಿದ್ದನ್ನು ನೀವು ಕೇಳಿರುವಿರಷ್ಟೆ? ತಾವು ದೇವತೆಗಳ ಮೇಲೆ ಇಷ್ಟು ಉಪಕಾರಮಾಡಿದ್ದರೂ ರಾಹುವು ತಮ್ಮನ್ನು ನುಂಗುತ್ತಿರುವಾಗ, ಒಬ್ಬರೂ ತಮಗೆ ಸಹಾಯಮಾಡುವದಿಲ್ಲವೆಂದು ಚಂದ್ರಸೂರ್ಯರಿಬ್ಬರೂ ಸಿಟ್ಟಾದರು. ಚಂದ್ರನು ಸೌಮ್ಯನಾದದ್ದರಿಂದ ಸಿಟ್ಟನ್ನು ನುಂಗಿಕೊಂಡನು; ಆದರೆ ಮಹಾತೇಜಸ್ವಿಯಾದ ಸೂರ್ಯನು ಸಿಟ್ಟನ್ನು ತಡೆಯಲಾರದೆ ಬ್ರಹ್ಮಾಂಡವನ್ನು ಸುಟ್ಟುಬಿಡಬೇಕೆಂದು ಮಾಡಿದ್ದನು; ಆದರೆ ಗರುಡನ ಈ ಕೃತಿಯಿಂದ, ಅಂದರೆ ಅರುಣನನ್ನು ಪೂರ್ವದಿಗ್ಭಾಗದಲ್ಲಿ ಕುಳ್ಳಿರಿಸಿದ್ದರಿಂದ ಬ್ರಹ್ಮಾಂಡ ದಹನಕಾರ್ಯವು ಸೂರ್ಯ

ನಿಂದ ಆಗದಂತಾಯಿತು ; ಯಾಕಂದರೆ ಅರುಣನು ತನ್ನ ತೇಜಸ್ಸಿನಿಂದ ಸೂರ್ಯನ ತೇಜಸ್ಸಿನ ಉಗ್ರತೆಯನ್ನು ಹರಣಮಾಡಿ ಜಗತ್ತಿನ ಕಲ್ಯಾಣ ಮಾಡಿದನು. ಬ್ರಹ್ಮಸಂಕಲ್ಪದಂತೆ ಅರುಣನು ಅಂದಿನಿಂದ ಸೂರ್ಯನ ಸಾರಥ್ಯಕರ್ಮವನ್ನು ಮಾಡುತ್ತ ಜಗತ್ತನ್ನು ರಕ್ಷಿಸುತ್ತಿರುವನು.



## ೨೫, ೨೬ ನೇ ಅಧ್ಯಾಯಗಳು—ಸರ್ಪದಹನವೂ, ದಾಸ್ಯನಿರಸನೋಪಾಯವೂ.

ಈ ಮೇರೆಗೆ ಗರುಡನು ತನ್ನ ತಮ್ಮನಾದ ಅರುಣನನ್ನು ಸೂರ್ಯನ ಸಾರಥಿಯಾಗಮಾಡಿ, ತನ್ನ ತಾಯಿಯಾದ ವಿನತೆಯ ಬಳಿಗೆ ಬಂದನು. ವಿನತೆಯು ಕದ್ರುವಿನ ದಾಸಿಯಾಗಿ ದುಡಿಯುತ್ತಿದ್ದದ್ದರಿಂದ ಅತ್ಯಂತ ಖಿನ್ನಳಾಗಿದ್ದಳು. ಅಷ್ಟರಲ್ಲಿ ಕದ್ರುವು ವಿನತೆಯನ್ನು ಕರೆಯಲು, ವಿನತೆಯು ಕೈಜೋಡಿಸಿಕೊಂಡು ನಿಂತು ಕದ್ರುವನ್ನು ಕುರಿತು—" ಏನು ಅಪ್ಪಣೆ? " ಎಂದು ಕೇಳಿಕೊಂಡಳು. ಅದಕ್ಕೆ ಕದ್ರುವು—" ವಿನತೇ, ಸಮುದ್ರದ ಹೊಟ್ಟೆಯಲ್ಲಿ ನಾಗಗಳ ಮನೋಹರವಾದ ಏಕಾಂತ ಭವನ ವಿರುವದಲ್ಲ, ಅಲ್ಲಿಗೆ ನನ್ನನ್ನು ಕರೆದುಕೊಂಡು ಹೋಗು " ಎಂದು ಆಜ್ಞಾಪಿಸಿದಳು. ಕೂಡಲೆ ವಿನತೆಯು ಕದ್ರುವನ್ನು ತನ್ನ ಹೆಗಲಮೇಲೆ ಕುಳ್ಳಿರಿಸಿಕೊಂಡು, ಮಗನಾದ ಗರುಡನಿಗೆ—" ಯಾವತ್ತು ಸರ್ಪಗಳನ್ನು ನೀನು ಹೆಗಲಮೇಲೆ ಕುಳ್ಳಿರಿಸಿಕೋ " ಎಂದು ಹೇಳಿದಳು. ಬಳಿಕ ಆ ತಾಯಿ ಮಕ್ಕಳು ಆಕಾಶಮಾರ್ಗದಿಂದ ಹೋಗುತ್ತಿರುವಾಗ, ಸರ್ಪಗಳು ಸೂರ್ಯನ ಕಿರಣಗಳಿಂದ ಬೇಯಹತ್ತಿದವು. ತನ್ನ ಮಕ್ಕಳ ಈ ಸಂಕಟವನ್ನು ನಿವಾರಿಸುವದಕ್ಕಾಗಿ ಕದ್ರುವು ಇಂದ್ರನನ್ನು ಪ್ರಾರ್ಥಿಸಿದಳು. ಆಗ ಇಂದ್ರನು ಕನಿಕರಪಟ್ಟು ಮಳೆಗರೆಯಲು, ಸರ್ಪಗಳ ತಾಪವು ಶಾಂತವಾಯಿತು. ಬಳಿಕ ಯಾವತ್ತು ಸರ್ಪಗಳು ತಾಯಿಯೊಡನೆ ರಾಮಣೀಯಕವೆಂಬ ದ್ವೀಪಕ್ಕೆ ಹೋದವು. ಆ ಮನೋಹರವಾದ ದ್ವೀಪವು ವಿಶ್ವಕರ್ಮ ನಿರ್ಮಿತವಾಗಿದ್ದು, ಅದು ಮೊಸಳೆಗಳ ಮುಖ್ಯ

ವಸತಿ ಸ್ಥಾನವಾಗಿತ್ತು. ಅಲ್ಲದೆ, ಆ ದ್ವೀಪವು ಗಂಧರ್ವರಿಗೂ, ಅಪ್ಸರಿಯರಿಗೂ ಅತ್ಯಂತ ಪ್ರಿಯವಾಗಿತ್ತು. ಅಲ್ಲಿಯ ಮನೋಹರವಾದ ವನವನ್ನು ನೋಡಿ ಕದ್ರುಪುತ್ರರಿಗೆ ಬಹಳ ಸಂತೋಷವಾಯಿತು. ಆಗ ಸರ್ಪಗಳು "ಮತ್ತೊಂದು ರಮಣೀಯವಾದ ದ್ವೀಪಕ್ಕೆ ನಮ್ಮನ್ನು ಕರೆದುಕೊಂಡು ಹೋಗೆಂದು" ಗರುಡನನ್ನು ಆಜ್ಞಾಪಿಸಿದವು. ಆಗ ಗರುಡನು ವಿಚಾರಮಾಡಿ ತನ್ನ ತಾಯಿಯನ್ನು ಕುರಿತು—"ಅವ್ವಾ, ಈ ಸರ್ಪಗಳು ಹೇಳಿದಂತೆ ನಾನು ಯಾಕೆ ಕೇಳಬೇಕು?" ಎಂದು ಕೇಳಿದನು. ಆಗ ವಿನತೆಯು, ತಾನು ಕದ್ರುವಿನ ದಾಸಿಯಾದ ಯಾವತ್ತು ಸಂಗತಿಯನ್ನು ಮಗನಿಗೆ ಹೇಳಿದಳು ಅದನ್ನು ಕೇಳಿ ಗರುಡನಿಗೆ ಬಹಳ ಅಸಮಾಧಾನವಾಯಿತು. ಆತನು ಸರ್ಪಗಳನ್ನು ಕುರಿತು—"ಎಲೈ ಸರ್ಪಗಳಿರಾ, ನಾನು ನಿಮಗೆ ಏನು ತಂದುಕೊಟ್ಟರೆ, ಅಥವಾ ನಾನು ಎಂಥ ಪರಾಕ್ರಮವನ್ನು ಮಾಡಿದರೆ, ಅಥವಾ ನನಗೆ ಎಂಥ ಜ್ಞಾನವು ಪ್ರಾಪ್ತವಾದರೆ ನಾವು ನಿಮ್ಮ ದಾಸ್ಯದಿಂದ ಮುಕ್ತರಾಗುವೆವೆಂಬದನ್ನು ನಿಶ್ಚಯಾತ್ಮಕವಾಗಿ ಹೇಳಿಬಿಡಿರಿ." ಎಂದು ಕೇಳಲು, ಸರ್ಪಗಳು—'ಎಲೈ ಗರುಡಾ, ನೀನು ನಿನ್ನ ಶೌರ್ಯದಿಂದ ನಮಗೆ ಅಮೃತವನ್ನು ತಂದು ಕೊಟ್ಟರೆ, ನಮ್ಮ ದಾಸ್ಯದಿಂದ ನೀವು ಮುಕ್ತರಾಗುವಿರಿ." ಎಂದು ಹೇಳಿದನು.



## ೨೮, ೨೯ ನೇ ಅಧ್ಯಾಯಗಳು—ಗರುಡನ ಆಹಾರದ ವ್ಯವಸ್ಥೆ.

ಋಷಿಗಳಿರಾ, ಸರ್ಪಗಳ ಈ ಮಾತುಗಳನ್ನು ಕೇಳಿ ಗರುಡನು ತನ್ನ ತಾಯಿಗೆ—"ಅವ್ವಾ, ನಾನು ಇನ್ನು ಅಮೃತವನ್ನು ತರಲಿಕ್ಕೆ ಹೋಗುವೆನು; ಆದರೆ ನನಗೆ ಹಾದಿಯಲ್ಲಿ ತಿನ್ನಲಿಕ್ಕೆ ಆಹಾರವೇನು?" ಎಂದು ಕೇಳಲು, ವಿನತೆಯು ಅತ್ಯಂತ ವಾತ್ಸಲ್ಯದಿಂದ—"ಪುತ್ರಾ, ಸಮುದ್ರದ ದಂಡೆಯ ಏಕಾಂತ ಸ್ಥಾನದಲ್ಲಿ ನಿಷಾದರ ವಸತಿಯು ಇರುವದು, ಅಲ್ಲಿಯ

ಸಾವಿರಾರು ಜನ ನಿಷಾದರನ್ನು ನೀನು ತಿನ್ನು; ಆದರೆ ಬ್ರಾಹ್ಮಣನನ್ನು ತಿನ್ನುವ ದುರ್ಬುದ್ಧಿಯನ್ನು ಮಾತ್ರ ನೀನು ಎಂದೂ ಮಾಡಬೇಡ; ಯಾಕೆಂದರೆ, ಬ್ರಾಹ್ಮಣನು ಅಗ್ನಿಯಂತೆ ತೇಜಸ್ವಿಯಾಗಿರುವದರಿಂದ ಆತನನ್ನು ಯಾರೂ ವಧಿಸಲಾಗದು. ನಿನಗೆ ಬ್ರಾಹ್ಮಣನ ಗುರುತು ಸಿಗುವದಕ್ಕಾಗಿ ಕೆಲವು ಲಕ್ಷಣಗಳನ್ನು ಹೇಳುವೆನು ಕೇಳು; ಆತನು ನಿನ್ನ ಗಂಟಲಲ್ಲಿ ಇಳಿಯುವಾಗ ಬೆಂಕಿಯಂತೆ ಸುಡುವನು; ಮತ್ತು ಆತನು ನಿನ್ನ ಹೊಟ್ಟೆಯಲ್ಲಿ ಪಚನನಾಗಲಾರನು. ಈ ಲಕ್ಷಣಗಳುಳ್ಳವನನ್ನು ಬ್ರಾಹ್ಮಣನೆಂದು ತಿಳಿ. ಹೋಗು, ಅಮೃತವನ್ನು ತಂದು ನನ್ನನ್ನು ದಾಸ್ಯ ಮುಕ್ತಳನ್ನಾಗಿ ಮಾಡು ಹೋಗು. ವಾಯುವು ನಿನ್ನ ರೆಕ್ಕೆಗಳನ್ನು ರಕ್ಷಿಸಲಿ, ಚಂದ್ರ-ಸೂರ್ಯರು ನಿನ್ನ ಬೆನ್ನನ್ನು ರಕ್ಷಿಸಲಿ; ಅಗ್ನಿಯು ನಿನ್ನ ಮಸ್ತಕವನ್ನು ರಕ್ಷಿಸಲಿ; ಅಷ್ಟವಸುಗಳು ನಿನ್ನ ಸರ್ವ ಶರೀರವನ್ನು ರಕ್ಷಿಸಲಿ! ಎಲೈ ಪುತ್ರನೇ, ನಿನ್ನ ವಿಘ್ನಗಳು ದೂರವಾಗಬೇಕೆಂತಲೂ, ನಿನ್ನ ಕಲ್ಯಾಣವಾಗಬೇಕೆಂತಲೂ ನಾನು ಯಾವಾಗಲೂ ಇಚ್ಛಿಸುವೆನು. ಇನ್ನು ನೀನು ನಿನ್ನ ಇಷ್ಟಕಾರ್ಯವನ್ನು ಸಾಧಿಸುವದಕ್ಕಾಗಿ ಹೊರಡು.''

ತಾಯಿಯ ಅಪ್ಪಣೆಯಂತೆ ಗರುಡನು ನಿಷಾದರನ್ನು ಭಕ್ಷಿಸುವದಕ್ಕಾಗಿ ಸಮುದ್ರತೀರದಲ್ಲಿ ಭಯಂಕರವಾದ ಬಿರುಗಾಳಿಯನ್ನು ಉತ್ಪನ್ನ ಮಾಡಿ, ತನ್ನ ಬಾಯನ್ನು ತೆರೆದುಕೊಂಡು ಕುಳಿತನು. ಗಾಳಿಯ ಹೊಡತದಿಂದ ನಿಷಾದರು ಆ ಗರುಡನ ವಿಶಾಲ ಮುಖವನ್ನು ಪ್ರವೇಶಿಸತೊಡಗಿದರು. ಅಷ್ಟರಲ್ಲಿ ಗರುಡನ ಗಂಟಲು ಸುಡತೊಡಗಲು, ತನ್ನ ಗಂಟಲಲ್ಲಿ ಬ್ರಾಹ್ಮಣನ ಪ್ರವೇಶವಾಯಿತೆಂದು ತಿಳಿದು, ಗರುಡನು ತನ್ನ ಗಂಟಲು ಸುಡುತ್ತಿರುವ ಆ ವ್ಯಕ್ತಿಯನ್ನು ಹೊರಹೊರಡಿಸಿ ಆತನನ್ನು ಕುರಿತು—"ಬ್ರಾಹ್ಮಣಾ, ನಾನು ನನ್ನ ಬಾಯಿ ಮುಚ್ಚುವದರೊಳಗಾಗಿ ನೀನು ಹೊರಗೆಬಾ," ಎಂದು ಹೇಳಲು, ಬ್ರಾಹ್ಮಣನು—"ಎಲೈ ಗರುಡಾ, ನಿಷಾದಸ್ತ್ರೀಯು ನನ್ನ ಹೆಂಡತಿಯಾಗಿದ್ದಾಳೆ, ಆಕೆಯನ್ನು ನೀನು ಹೊರಗೆ ಬಿಡಬೇಕು'' ಎಂದು ಹೇಳಿದನು. ಗರುಡನು ಅದರಂತೆ ಮಾಡಲು, ಬ್ರಾಹ್ಮಣನು ಆತನ ಸ್ತೋತ್ರಮಾಡಿ ಹೆಂಡತಿಯೊಡನೆ ಹೊರಟುಹೋದನು. ಇತ್ತ ಗರುಡನು ಸಹಸ್ರಾವಧಿ ನಿಷಾದರನ್ನು ಭಕ್ಷಿಸಿದರೂ

ತೃಪ್ತಿಯಾಗಲೊಲ್ಲದು. ಆಗ ಆತನು ಆಕಾಶಕ್ಕೆ ಹಾರಿ ಸಂಚರಿಸುತ್ತಿರಲು, ಆತನಿಗೆ ತಂದೆಯಾದ ಕಶ್ಯಪರ ದರ್ಶನವಾಯಿತು. ಆಗ ಉದಾರಾಂತಃಕರಣದ ಆ ಋಷಿಶ್ರೇಷ್ಠನು ಮಗನನ್ನು ಕುರಿತು ಮಾತಾಡತೊಡಗಿದನು.

ಕಶ್ಯಪ— ಎಲೈ ಮಗನೇ, ಯಾಕೆ? ಕ್ಷೇಮದಿಂದಿರುವೆಯಾ? ನಿನಗೆ ಆಹಾರವು ಯಥೇಚ್ಛವಾಗಿ ದೊರಕುವದಷ್ಟೆ? ಮೃತ್ಯುಲೋಕದಲ್ಲಿ ನಿನ್ನ ಭಕ್ಷ್ಯವು ವಿಪುಲವಾಗಿರುವದಲ್ಲವೆ?

ಗರುಡ—ಅಪ್ಪಾ, ಅವ್ವನೂ, ತಮ್ಮನೂ, ನಾನೂ ಮೂವರೂ ಯಾವಾಗಲೂ ಸುಖದಿಂದ ಇರುವೆವು; ಆದರೆ, ನನಗೆ ಮಾತ್ರ ಸಾಕಷ್ಟು ಆಹಾರವು ದೊರೆಯದ್ದರಿಂದ ನನ್ನ ಗತಿಯು ನೆಟ್ಟಗಿಲ್ಲ. ಇಂದು ಸರ್ಪಗಳು ಉತ್ತಮವಾದ ಅಮೃತವನ್ನು ತರುವದಕ್ಕಾಗಿ ನನ್ನನ್ನು ಕಳಿಸಿರುವವು. ತಾಯಿಯನ್ನು ದಾಸ್ಯ ಮುಕ್ತಮಾಡುವದಕ್ಕಾಗಿ ನಾನೂ ಅದನ್ನು ತರಲು ಹೊರಟಿರುವೆನು. ಹೊಟ್ಟೆ ಹಸಿದರೆ ನಿಷಾದರನ್ನು ಭಕ್ಷಿಸೆಂದು ಅವ್ವನು ಹೇಳಿದ್ದಳು; ಆದರೆ ನಿಷಾದರೆಷ್ಟರವರು? ಸಾವಿರಾರು ಜನರನ್ನು ತಿಂದರೂ ನನ್ನ ಹೊಟ್ಟೆಯು ತುಂಬಲೊಲ್ಲದು ಆದ್ದರಿಂದ ಭಗವನ್, ನನಗೆ ತಿನ್ನಲಿಕ್ಕೆ ಏನಾದರೂ ಕೊಡಿರಿ. ಅದನ್ನು ತಿನ್ನುವದರಿಂದ ಅಮೃತ ತರುವ ಸಾಮರ್ಥ್ಯವು ನನ್ನಲ್ಲಿ ಉಂಟಾಗಬೇಕು.

ಕಶ್ಯಪ—ಬಾಲಕಾ, ನಿನಗೆ ವಿಪುಲವಾದ ಆಹಾರವನ್ನು ಒದಗಿಸಿ ಕೊಡುವೆನು ಕೇಳು. ಈ ಪವಿತ್ರವಾದ ಸರೋವರದಲ್ಲಿ ಒಂದು ಆವೆಯು ಇರುವದು. ಅದರ ಎತ್ತರವು ಮೂರುಯೋಜನವಿದ್ದು, ಅದರ ಬೆನ್ನ ಸುತ್ತಳತೆಯು ಹತ್ತು ಯೋಜನವಿರುತ್ತದೆ. ಈ ಆವೆಯ ವೈರಿಯಾದ ಆನೆಯು ಒಂದು ಇರುವದು. ಅದರ ಎತ್ತರವು ಆರುಯೋಜನವಿದ್ದು, ಉದ್ದಳತೆಯು ಹನ್ನೆರಡುಯೋಜನವಿರುತ್ತದೆ. ಅವುಗಳನ್ನು ನೀನು ತಿಂದು ನಿನ್ನ ಹಸಿವೆಯನ್ನು ಕಳೆದುಕೊಂಡು ಬಲಿಷ್ಠನಾಗಿ ಅಮೃತವನ್ನು ತೆಗೆದುಕೊಂಡುಬಾ ಬಾಳಾ, ಇನ್ನು ಈ ಆವೆ-ಆನೆಗಳ ಪೂರ್ವ ವೃತ್ತಾಂತವನ್ನು ಹೇಳುವೆನು ಕೇಳು. ಹಿಂದಕ್ಕೆ ವಿಭಾವಸು ಎಂಬ ಹೆಸರಿನ ಬಹು ಸಿಟ್ಟಿನ ಒಬ್ಬ ಮಹರ್ಷಿಯು ಇದ್ದನು. ಆತನಿಗೆ ಸುಪ್ರತೀಕನೆಂಬ ಚಿಕ

ತಮ್ಮನಿದ್ದನು. ಆ ತಮ್ಮನಾದರೂ ಅಣ್ಣನಂತೆ ಮಹಾ ತಪಸ್ವಿಯು. ಹೀಗಿರುವಾಗ, ತನ್ನ ಪಾಲಿನ ದ್ರವ್ಯವನ್ನು ತನಗೆ ಕೊಡಬೇಕೆಂದು ಸುಪ್ರತೀಕನು ತನ್ನ ಅಣ್ಣನನ್ನು ಕೇಳುತ್ತಾ, ದಿನಾಲು ಆತನಿಗೆ ತೊಂದರೆ ಕೊಡುತ್ತಲಿದ್ದನು ; ಆದರೆ ಅಣ್ಣನ ಮನಸ್ಸಿನಲ್ಲಿ ಬೇರೆಯಾಗುವ ದಿದ್ದಿಲ್ಲ. ಆತನು ತನ್ನ ತಮ್ಮನನ್ನು ಕುರಿತು—"ತಮ್ಮಾ, ದ್ರವ್ಯ ಲೋಭದಿಂದ ಎಷ್ಟೋಜನ ಅಣ್ಣತಮ್ಮಂದಿರು ಬೇರೆಯಾಗಲು ಇಚ್ಛಿಸು ತ್ತಾರೆ. ಹಾಗೆ ಅವರು ತಮ್ಮ ತಮ್ಮ ಭಾಗಗಳನ್ನು ತಕ್ಕೊಂಡು ಬೇರೆ ಬೇರೆ ಇರಹತ್ತಿದರೆಂದರೆ, ಅವರ ಶತ್ರುಗಳು ಮಿತ್ರರ ಸೋಗಿನಿಂದ ಆ ಅಣ್ಣ ತಮ್ಮಂದಿರಲ್ಲಿಯ ದ್ವೇಷವನ್ನು ಹೆಚ್ಚಿಸಿ ಅವರನ್ನು ಹಾಳುಮಾ ಡುವರು. ಹಿರಿಯರ ಮಾನ-ಮರ್ಯಾದೆಗಳನ್ನು ಕಾಯಲು ಬದ್ಧರಾದ ವರೂ, ಪರಸ್ಪರ ಅಪಮಾನವಾದೀತೆಂದು ಅಂಜಿ ನಡೆಯುವವರೂ ಬೇರೆಯಾಗಬಾರದೆಂದು ಸಜ್ಜನರು ಹೇಳಿರುವರು ; ಆದರೆ ಸುಪ್ರತೀಕಾ, ನೀನು ಹಿರಿಯನಾದ ನನ್ನ ಮರ್ಯಾದೆಯನ್ನು ಕಾಯದಾದೆ ; ದ್ರವ್ಯ ಲೋಭಿಯಾದ ನಿನ್ನನ್ನು ಅಂಕಿತದಲ್ಲಿಟ್ಟುಕೊಳ್ಳುವದು ನನಗೆ ಶಕ್ಯವಾಗಿ ರುವದಿಲ್ಲ. ನೀನು ನನ್ನಲ್ಲಿ ಪರಕೀಯ ಭಾವವನ್ನು ತಾಳಿ ದ್ರವ್ಯವನ್ನು ಇಚ್ಛಿಸುವದರಿಂದ, ನೀನು ಆನೆಯ ಜನ್ಮವನ್ನು ಹೊಂದುವೆ," ಎಂದು ಶಾಪವನ್ನು ಕೊಟ್ಟನು. ಅದಕ್ಕೆ ಸುಪ್ರತೀಕನೂ ಕ್ರೋಧಪರವಶನಾಗಿ ತನ್ನ ಅಣ್ಣನಿಗೆ—"ಹಾಗಾದರೆ ನೀನೂ ಆವೆಯಾಗಿ ಹುಟ್ಟು" ಎಂದು ತಿರುಗಿ ಶಾಪಕೊಟ್ಟನು. ಹೀಗೆ ಆ ಅಣ್ಣ ತಮ್ಮಂದಿರು ತಮ್ಮ ಸಿಟ್ಟಿನ ಮೂಲಕ ತಿರ್ಯಕ್-ಯೋನಿಗಳನ್ನು ಹೊಂದಿ, ಪ್ರಾಚೀನ ವೈರಸ್ಮರಣ ದಿಂದ ದಿನಾಲು ಈ ಸರೋವರದಲ್ಲಿ ಆನೆ-ಆವೆಗಳಾಗಿ ಭಯಂಕರ ರೀತಿ ಯಿಂದ ಕಾದುತ್ತಿರುವರು. ನೀನು ನಿಶ್ಯಂಕೆಯಿಂದ ಅವರನ್ನು ಭಕ್ಷಿಸಿ ಅಮೃತವನ್ನು ತಕ್ಕೊಂಡು ಬಾ. ಎಲೈ ಪಕ್ಷಿಯೇ, ದೇವತೆಗಳೊಡನೆ ಯುದ್ಧವುಂಟಾದಾಗ ನಿನಗೆ ವಿಜಯವು ಪ್ರಾಪ್ತವಾಗಲಿ. ತುಂಬಿದ ಕೊಡಗಳು, ಬ್ರಾಹ್ಮಣರು, ಆಕಳು, ಇಂಥವೇ ಬೇರೆ ಮಂಗಲ ವಸ್ತು ಗಳು ನಿನಗೆ ಎದುರಾಗಿ ಬಂದು, ನಿನಗೆ ಉತ್ತಮ ಶಕುನಗಳಾಗುವವು. ಎಲೈ ಬಲವಂತನೇ, ನೀನು ಸಮರಾಂಗಣದಲ್ಲಿ ದೇವತೆಗಳೊಡನೆ ಯುದ್ಧ

ಮಾಡಹತ್ತಿದೆಯೆಂದರೆ, ಋಕ್, ಯಜುಸ್, ಸಾಮ, ಪವಿತ್ರಹವಿಸ್ಸು, ಯಾವತ್ತು ಉಪನಿಷದಗಳು, ಎಲ್ಲ ವೇದಗಳು ನಿನಗೆ ಸಾಮರ್ಥ್ಯವನ್ನು ಕೊಡುವವು.

**ಅಮೃತಕ್ಕಾಗಿ ಗರುಡನು ಹೊರಟಿದ್ದು**—ಈಮೇರೆಗೆ ತಂದೆಯು ಆಶೀರ್ವದಿಸಿದ ಬಳಿಕ ಗರುಡನು ಸರೋವರಕ್ಕೆ ಹೋಗಿ, ಅಲ್ಲಿ ಕಾದುತ್ತಿರುವ ಆವೆಯನ್ನು ಒಂದು ಉಗುರಿನಿಂದ, ಆನೆಯನ್ನು ಮತ್ತೊಂದು ಉಗುರಿನಿಂದ ಹಿಡಿದುಕೊಂಡು ಆಕಾಶಕ್ಕೆ ಹಾರಿದನು. ಆತನು ಈ ಭಯಂಕರ ಪ್ರಾಣಿಗಳನ್ನು ಎಲ್ಲಿ ಕುಳಿತು ತಿನ್ನಬೇಕೆಂದು ಆಲೋಚಿಸತೊಡಗಿದನು. ಅಷ್ಟರಲ್ಲಿ ಬೆಳ್ಳಿ-ಬಂಗಾರದ ಹೂಗಳುಳ್ಳ, ಹಾಗು ವೈಡೂರ್ಯ ರತ್ನದ ಹರಿಗಳುಳ್ಳ ಕಲ್ಪವೃಕ್ಷಗಳನ್ನು ನೋಡಿ, ಅವುಗಳಲ್ಲಿಯ ಒಂದು ವೃಕ್ಷದ ಮೇಲೆ ಕುಳಿತುಕೊಳ್ಳಬೇಕೆಂದು ಮಾಡಿದನು ; ಆದರೆ "ಈತನು ತನ್ನ ರೆಕ್ಕೆಯ ಗಾಳಿಯಿಂದ ನಮ್ಮನ್ನು ಸಹ ಮೂಲವಾಗಿ ಎಲ್ಲಿ ನಾಶಮಾಡುವನೋ" ಎಂದು ಆ ವೃಕ್ಷಗಳು ಗದಗದ ನಡುಗಹತ್ತಿದವು. ಅದನ್ನು ನೋಡಿ ಗರುಡನು ದಯಾಪರನಾಗಿ ಇವನ್ನು ನಾಶಗೊಳಿಸಬಾರದೆಂದು ಮುಂದಕ್ಕೆ ಸಾಗುತ್ತಿರಲು, ಒಂದು ದೊಡ್ಡ ಆಲದಮರವು ಗರುಡನನ್ನು ಕುರಿತು—"ಎಲೈ ಪಕ್ಷಿರಾಜನೇ, ನನ್ನ ಈ ಟೊಂಗೆಯು ನೂರು ಯೋಜನ ಉದ್ದವಾಗಿರುವದು. ನೂರು ಎತ್ತುಗಳ ತೊಗಲಿನ ಬಾರು ಮಾಡಿದರೆ, ಅದು ನನ್ನ ಟೊಂಗೆಯ ಒಂದು ಸುತ್ತು ಆಗಲಾರದು ; ಆದ್ದರಿಂದ ನನ್ನ ಈ ಪ್ರಚಂಡವಾದ ಟೊಂಗೆಯ ಮೇಲೆ ಕುಳಿತು ಈ ಪ್ರಾಣಿಗಳನ್ನು ತಿನ್ನು," ಎಂದು ಹೇಳಿತು. ಆ ಪ್ರಚಂಡ ವಟವೃಕ್ಷದ ಹೂಗಳೂ ಬೆಳ್ಳಿ ಬಂಗಾರದವೇ ಇದ್ದು, ಟೊಂಗೆಗಳು ವೈಡೂರ್ಯ ರತ್ನದವಿದ್ದವು. ಗರುಡನು ಆ ವೃಕ್ಷದ ಸೂಚನೆಯಂತೆ ಅದರ ಪ್ರಚಂಡ ಹರಿಯ ಮೇಲೆ ಕಾಲಿಟ್ಟನೋ ಇಲ್ಲವೋ, ಅದು ಮುರಿದುಹೋಯಿತು ! ಆ ಹರಿಗೆ ವಾಲಖಿಲ್ಯಋಷಿಗಳು ತಲೆ ಕೆಳಗೆ ಕಾಲು ಮೇಲೆ ಮಾಡಿಕೊಂಡು ತೂಗಾಡುತ್ತಾ ತಪಶ್ಚರ್ಯಮಾಡುತ್ತಿದ್ದರು ! ಅದನ್ನು ನೋಡಿ ಗರುಡನು ಆ ಹರಿಯನ್ನು ಕೆಳಗೆ ಬೀಳಗೊಡದೆ, ಅದನ್ನು ತನ್ನ ಬಾಯಲ್ಲಿ ಹಿಡಿದುಕೊಂಡು ಆಕಾಶದಲ್ಲಿ ಮಂಡಲಾ



**ಗಜ-ಕೂರ್ಮಯುದ್ಧ**

ಕಾರವಾಗಿ ತಿರುಗಹತ್ತಿದನು. ಗರುಡನ ಈ ಅಗಾಧ ಸಾಮರ್ಥ್ಯವನ್ನು ನೋಡಿ ವಾಲಖಿಲ್ಯಋಷಿಗಳು ಆಶ್ಚರ್ಯಪಟ್ಟು "ಗುರು" ಅಂದರೆ ಜಡಪದಾರ್ಥವನ್ನು ಎತ್ತುವವನಾದ್ದರಿಂದ ಆ ಪಕ್ಷಿರಾಜನನ್ನು ಗರುಡನೆಂದು ಕರೆದರು. ಹೀಗೆ ಗರುಡನು ವಾಲಖಿಲ್ಯ ಋಷಿಗಳ ಹೃದಯದಲ್ಲಿ ದಯವನ್ನು ಉತ್ಪನ್ನಮಾಡುತ್ತ, ಕುಳಿತುಕೊಳ್ಳಲು ಯೋಗ್ಯಸ್ಥಳವನ್ನು ಹುಡುಕುತ್ತ ಗಂಧಮಾದನ ಪರ್ವತಕ್ಕೆ ಹೋದನು.

---

## ೩೦ನೇ ಅಧ್ಯಾಯ—ವಾಲಖಿಲ್ಯಋಷಿಗಳ ರಕ್ಷಣ.

ಆ ಗಂಧಮಾದನ ಪರ್ವತದಲ್ಲಿ ಗರುಡನ ತಂದೆಯಾದ ಭಗವಾನ್ ಕಶ್ಯಪರು ತಪಶ್ಚರ್ಯಮಾಡುತ್ತಿದ್ದರು. ದೇವ ದಾನವ-ರಾಕ್ಷಸರಿಗೂ ಅಸುಗೊಳ್ಳದ ತಮ್ಮ ಮಗನು ಬಂದದ್ದನ್ನು ನೋಡಿ, ಅವರು ಆತನ ಮನೋದಯವನ್ನು ಅರಿತು—"ಎಲೈ ಪುತ್ರಾ, ಹೀಗೆ ನೀನು ಸಾಹಸವನ್ನು ಮಾಡಬೇಡ; ಆಯಾಸವನ್ನೂ ಪಡಬೇಡ. ಸೂರ್ಯ ಕಿರಣಗಳನ್ನೇ ಪಾನಮಾಡಿ ತೃಪ್ತರಾಗಿರುವ ವಾಲಖಿಲ್ಯಋಷಿಗಳು ಸಿಟ್ಟಾಗಿ ನಿನ್ನನ್ನು ದಗ್ಧಮಾಡದೆ ಇರಲಿ" ಎಂದು ಹೇಳಿ, ತಮ್ಮ ಮಗನ ಸಲುವಾಗಿ ಆ ಕಶ್ಯಪಋಷಿಗಳು ತಪಶ್ಚರ್ಯದಿಂದ ನಿಷ್ಪಾಪರಾದ ವಾಲಖಿಲ್ಯ ಋಷಿಗಳನ್ನು ಕುರಿತು—"ಎಲೈ ತಪೋಧನರೇ, ಗರುಡನ ಜನ್ಮವು ಲೋಕಹಿತಕ್ಕಾಗಿ ಆಗಿದ್ದು, ಆತನು ಈಗ ಒಂದು ಮಹತ್ಕಾರ್ಯವನ್ನು ಮಾಡಲು ಇಚ್ಛಿಸುತ್ತಿರುವನು; ಆದ್ದರಿಂದ ತಾವು ಆತನಿಗೆ ಅಪ್ಪಣೆಯನ್ನು ಕೊಡಬೇಕು" ಎಂದು ಹೇಳಿಕೊಂಡರು. ಅದನ್ನು ಕೇಳಿ ತಪಸ್ಸನ್ನು ಇಚ್ಛಿಸುತ್ತಿರುವ ವಾಲಖಿಲ್ಯರು ಗಿಡದ ಆ ಹರಿಯನ್ನು ಬಿಟ್ಟು ಹಿಮಾಲಯಕ್ಕೆ ಹೊರಟುಹೋದರು. ಇತ್ತ ಉಗುರುಗಳಲ್ಲಿ ಆನೆ-ಆಮೆಗಳನ್ನು, ಬಾಯಲ್ಲಿ ಪ್ರಚಂಡ ಹರಿಯನ್ನು ಹಿಡಕೊಂಡಿದ್ದ ಗರುಡನು ತಂದೆಯ ಹೇಳಿಕೆಯಂತೆ ಅಲ್ಪಕಾಲದಲ್ಲಿ ಒಂದು ಲಕ್ಷಯೋಜನ ಹಾರಿ ಹೋಗಿ, ನಿರ್ಮಾನುಷವಾದ, ಹಾಗು ಬರ್ಫಮಯ ಗುಹೆಗಳುಳ್ಳ ಒಂದು ಪರ್ವತವನ್ನು ಮುಟ್ಟಿ, ತನ್ನ ಭಯಂಕರವಾದ ಗರ್ಜನೆಯಿಂದಲೂ, ರೆಕ್ಕೆ

ಗಳ ಆಘಾತದಿಂದಲೂ ಆ ಪರ್ವತವನ್ನು ನಡುಗಿಸುತ್ತ, ಆ ಪರ್ವತದ ರತ್ನಮಯ ಶಿಖರಗಳು ಪುಡಿಪುಡಿಯಾಗುತ್ತಿರಲು, ಆ ಪ್ರಚಂಡ ಹರಿಯನ್ನು ಅಲ್ಲಿ ಚಲ್ಲಿಕೊಟ್ಟನು. ಬಳಿಕ ಆ ಪರ್ವತದ ಮೇಲೆಯೇ ಕುಳಿತುಕೊಂಡು ಆ ಆನೆ-ಆನೆಗಳನ್ನು ಭಕ್ಷಿಸಿ, ಆತನು ಆಕಾಶದಲ್ಲಿ ಉಡ್ಡಾಣ ಮಾಡಿದನು.

**ದೇವತೆಗಳ ಯುದ್ಧದ ಸಿದ್ಧತೆ**—ಹೀಗೆ ಗರುಡನು ಉಡ್ಡಾಣ ಮಾಡಲು, ಸ್ವರ್ಗದಲ್ಲಿ ಹಲವು ಅಪಶಕುನಗಳು ಆಗತೊಡಗಿದವು. ಇಂದ್ರನ ವಜ್ರಾಯುಧವು ಪ್ರಜ್ವಲಿತವಾಯಿತು. ಭಯಂಕರ ಬಿರುಗಾಳಿ ಬಿಟ್ಟು, ದೇವತೆಗಳ ಕಿರೀಟಗಳ ಮೇಲೆ ಧೂಳಿಗಳ ಥರವು ಕುಳಿತುಕೊಂಡಿತು. ಮೋಡವಿಲ್ಲದೆ ಗುಡುಗುಗಳು ಉತ್ಪನ್ನವಾದವು. ರಕ್ತದಮಳೆ ಸುರಿಯಿತು. ಇಂಥ ಒಂದಲ್ಲ, ಎರಡಲ್ಲ ಹಲವು ಉತ್ಪಾತಗಳು ಆಗುವುದನ್ನು ನೋಡಿ ಇಂದ್ರನು ಅಂಜಿ, ಗುರುಗಳಾದ ಬೃಹಸ್ಪತ್ಯಾಚಾರ್ಯರನ್ನು ಕುರಿತು—"ಭಗವನ್, ಯುದ್ಧದಲ್ಲಿ ನಮ್ಮನ್ನು ಸೋಲಿಸುವಂಥ ಶತ್ರುಗಳಂತು ಎಲ್ಲಿಯೂ ಕಂಡುಬರುವದಿಲ್ಲ; ಅಂದಬಳಿಕ ಈ ಭಯಂಕರ ಉತ್ಪಾತಗಳಾಗುವ ಕಾರಣವೇನು ?" ಎಂದು ಕೇಳಲು, ಬೃಹಸ್ಪತಿಯು—"ದೇವೇಂದ್ರಾ, ನಿನ್ನ ಅಪರಾಧ-ಪ್ರಮಾದಗಳಿಂದಲೂ, ಮಹಾತ್ಮರಾದ ಋಷಿಶ್ರೇಷ್ಠ ವಾಲಖಿಲ್ಯರ ತಪಃ ಪ್ರಭಾವದಿಂದಲೂ ಕಶ್ಯಪ ಋಷಿಗಳ ವಿನತೆಯೆಂಬ ಹೆಂಡತಿಯಲ್ಲಿ ಹುಟ್ಟಿರುವ ಬಹು ಬಲಾಢ್ಯನೂ, ಬೇಕಾದ ರೂಪಗಳನ್ನು ಧರಿಸಲು ಸಮರ್ಥನೂ ಆದ ಗರುಡನೆಂಬ ಪಕ್ಷಿರಾಜನು ಅಮೃತವನ್ನು ಅಪಹರಿಸುವದಕ್ಕಾಗಿ ಬರುತ್ತಿರುವನು. ಆತನು ಯಾವತ್ತು ಬಲಶಾಲಿಗಳಲ್ಲಿ ಬಲಿಷ್ಠನಾಗಿದ್ದು, ಅಮೃತವನ್ನು ಒಯ್ಯಲು ಸಮರ್ಥನಿರುವನು. ಆತನಿಗೆ ಅಶಕ್ಯವಾದ ಕೆಲಸವು ತ್ರೈಲೋಕ್ಯದಲ್ಲಿ ಯಾವದೂ ಇಲ್ಲವು," ಎಂದು ಹೇಳಿದನು. ಅದನ್ನು ಕೇಳಿ ಇಂದ್ರನೇ ಮೊದಲಾದ ದೇವತೆಗಳಿಗೆ ಆಶ್ಚರ್ಯವಾಯಿತು. ಅವರು ರತ್ನಖಚಿತವಾದ ಕವಚಗಳನ್ನೂ, ಚಕ್ರ-ಪರಿಘ-ತ್ರಿಶೂಲ-ಪರಶು, ಹಲವು ಪ್ರಕಾರದ ತೀಕ್ಷ್ಣಶಕ್ತಿಗಳು, ಭಯಂಕರವಾದ ಗದೆ ಮೊದಲಾದ ಶಸ್ತ್ರಗ

ಳನ್ನೂ ಧರಿಸಿ, ಯುದ್ಧಕ್ಕೆ ಸಿದ್ಧರಾಗಿ ಅಮೃತವನ್ನು ರಕ್ಷಿಸತೊಡಗಿದರು. ಇಂದ್ರನು ತನ್ನ ವಜ್ರಾಯುಧವನ್ನು ಧರಿಸಿ ಯುದ್ಧಕ್ಕೆ ಸಿದ್ಧನಾದನು.

**ಗರುಡನಉತ್ಪತ್ತಿ**—ಹೀಗೆ ಸೂತನು ಗರುಡನ ವೃತ್ತಾಂತವನ್ನು ಹೇಳುತ್ತಿರುವಾಗ, ಶೌನಕರು ನಡುವೆ ಬಾಯಿಹಾಕಿ ಸೂತನನ್ನು ಕುರಿತು-"ಸೂತಾ, ಬೃಹಸ್ಪತ್ಯಾಚಾರ್ಯರು ಇಂದ್ರನಿಗೆ-"ನಿನ್ನ ಅಪರಾಧದಿಂದಲೂ, ಪ್ರಮಾದದಿಂದಲೂ ಗರುಡನು ಉತ್ಪನ್ನನಾದನೆಂ"ದು ಹೇಳಿದರಷ್ಟೆ? ಆದರೆ ಇಂದ್ರನು ಮಾಡಿದ ಅಪರಾಧ-ಪ್ರಮಾದಗಳೇನು? ಗರುಡನು ಇಂಥ ಸಮರ್ಥನು ಹೇಗಾದನು? ಇತ್ಯಾದಿ ವೃತ್ತಾಂತಗಳು ಪುರಾಣದಲ್ಲಿ ಹೇಳಿದ್ದರೆ ಅವನ್ನು ಹೇಳು," ಎಂದು ಕೇಳಿದರು. ಅದಕ್ಕೆ ಸೂತನು-"ಶೌನಕರೇ, ಈ ಸಂಗತಿಗಳು ಪುರಾಣದಲ್ಲಿಯೇ ಹೇಳಿರುವವು, ಅವನ್ನು ಸಂಕ್ಷೇಪವಾಗಿ ಹೇಳುವೆನು ಕೇಳಿರಿ. ಹಿಂದಕ್ಕೆ ಕಶ್ಯಪರು ಪುತ್ರಪ್ರಾಪ್ತಿಯ ಇಚ್ಛೆಯಿಂದ ಯಜ್ಞಮಾಡತೊಡಗಿದರು. ಅದಕ್ಕಾಗಿ ಋಷಿಗಳು, ದೇವತೆಗಳು, ಗಂಧರ್ವರು ಸಹಾಯಮಾಡಿದ್ದು ಪ್ರಸಿದ್ಧವಾಗಿರುವದು. ಯಜ್ಞದಲ್ಲ ಸಮಿಧೆತರುವ ಕೆಲಸವನ್ನು ಇಂದ್ರನಿಗೂ, ಬೇರೆ ದೇವತೆಗಳಿಗೂ, ವಾಲಖಿಲ್ಯಋಷಿಗಳಿಗೂ ನಿಯಮಿಸಿದ್ದರು. ಇಂದ್ರನು ತನ್ನ ಸಾಮರ್ಥ್ಯಕ್ಕನುಸರಿಸಿ ಸಮಿಧದ ಗುಡ್ಡದಂಥ ಒಂದು ಹೊರೆಯನ್ನು ಹೊತ್ತುಕೊಂಡು ವೇಗದಿಂದ ಬರುತ್ತಿದ್ದನು. ಹಾದಿಯಲ್ಲಿ ಸೂಕ್ಷ್ಮಕಾಯದ ಯಾವತ್ತು ವಾಲಖಿಲ್ಯಋಷಿಗಳು ಒಟ್ಟುಗೂಡಿ, ಒಂದು ಮುತ್ತಲ ಕಟ್ಟಿಗೆಯನ್ನು ಪ್ರಯಾಸದಿಂದ ಹೊತ್ತುಕೊಂಡು ಬರುತ್ತಿದ್ದದ್ದನ್ನು ಆ ಇಂದ್ರನು ನೋಡಿ ಉಪಹಾಸಮಾಡಿದನು. ವಾಲಖಿಲ್ಯರು ಹೆಬ್ಬೆರಳಿನ ಗಣ್ಣಿನ ಅಳತೆಯವರೂ, ನಿರಾಹಾರದ ತಪಸ್ಸಿನ ಮೂಲಕ ಅತ್ಯಂತ ಕೃಶರಾದವರೂ ಆಗಿದ್ದರು. ಅವರು ಆಕಳ ಹೆಜ್ಜೆಯಲ್ಲಿಯ ನೀರಲ್ಲಿಯೂ ಮುಣುಗತಕ್ಕವರು; ಆದರೆ ತಪೋಬಲದಿಂದ ಅವರು ಮಹಾಸಮರ್ಥರಾದವರು. ಅಂಥವರ ಉಪಹಾಸವನ್ನು ಇಂದ್ರನು ಮಾಡಲು, ಋಷಿಗಳು ಸಿಟ್ಟಿನಿಂದ ಕಾದು-"ಈ ಮದಾಂಧ ಇಂದ್ರನನ್ನು ಗೆಲ್ಲುವಂಥ ಬೇರೊಬ್ಬ ಇಂದ್ರನನ್ನು ಉತ್ಪನ್ನಮಾಡಬೇಕೆಂ"ಬ ಸಂಕಲ್ಪದಿಂದ ಅಗ್ನಿಯಲ್ಲಿ ಮಂತ್ರಪೂರ್ವಕ ಹವನಮಾಡತೊಡಗಿದರು. ಇದನ್ನು ಕೇಳಿ

ಇಂದ್ರನು ಸಿಟ್ಟಾಗಿ ಕಶ್ಯಪರ ಬಳಿಗೆ ಹೋಗಿ ಈ ಸುದ್ದಿಯನ್ನು ಹೇಳಲು, ಕಶ್ಯಪರು ವಾಲಖಿಲ್ಯರ ಬಳಿಗೆ ಹೋಗಿ—"ನನ್ನದೊಂದು ಕೆಲಸವಾದೀತೇನು" ಎಂದು ಕೇಳಿದರು. ಅದಕ್ಕೆ ಪರಮ ಸತ್ಯವಾದಿಗಳಾದ ವಾಲಖಿಲ್ಯರು—"ಆದೀತು" ಎಂದು ಉತ್ತರಕೊಟ್ಟರು. ಆಗ ಕಶ್ಯಪರು ವಾಲಖಿಲ್ಯರ ಸಿಟ್ಟು ಇಳಿಯುವಂತೆ ಅವರನ್ನು ಕುರಿತು—"ತಪೋಧನರೇ, ಇಂದ್ರನು ಬ್ರಹ್ಮದೇವನ ಅಪ್ಪಣೆಯಂತೆ ತ್ರಿಭುವನಗಳಮೇಲೆ ಅಧಿಕಾರನಡಿಸುವವನು ಆಗಿರುವನು. ಈಗ ನೀವು ಮತ್ತೊಬ್ಬ ಹೊಸ ಇಂದ್ರನನ್ನು ಉತ್ಪನ್ನಮಾಡಲು ಯತ್ನಿಸುತ್ತಿರುವಿರಿ; ಆದರೆ ಸಜ್ಜನಶ್ರೇಷ್ಠರೇ, ಆ ಬ್ರಹ್ಮದೇವನ ಮಾತನ್ನು ಸುಳ್ಳುಮಾಡುವದು ನಿಮಗೆ ಯೋಗ್ಯವಲ್ಲ; ಇನ್ನು ನಿಮ್ಮ ಯತ್ನವೂ ವ್ಯರ್ಥವಾಗಬಾರದು; ಆದ್ದರಿಂದ ಅತ್ಯಂತ ಬಲಾಢ್ಯನಾದ ಪಕ್ಷಿಗಳ ಇಂದ್ರನು ಉತ್ಪನ್ನವಾಗಬೇಕೆಂದು ದೇವೇಂದ್ರನು ಬೇಡಿಕೊಳ್ಳುತ್ತಿರುವನು; ಆತನನ್ನು ಅನುಗ್ರಹಿಸಬೇಕು," ಎಂದು ಹೇಳಿಕೊಂಡರು. ಆಗ ವಾಲಖಿಲ್ಯರು ಅತ್ಯಂತ ಪೂಜ್ಯಬುದ್ಧಿಯಿಂದ ಕಶ್ಯಪ ಪ್ರಜಾಪತಿಯನ್ನು ಕುರಿತು—"ಎಲೈ ಪ್ರಜಾಪತಿಯೇ, ನಮ್ಮ ಯತ್ನವೆಲ್ಲ ಕೇವಲ ಇಂದ್ರನ ಉತ್ಪತ್ತಿಗಾಗಿ ಇರುವದು. ನೀವಾದರೂ ಮಕ್ಕಳಾಗಬೇಕೆಂತಲೇ ಯತ್ನಮಾಡುತ್ತಿರುವಿರಿ; ಆದ್ದರಿಂದ ಈ ನಮ್ಮ ಕರ್ಮದ ಫಲವನ್ನು ನೀವೇ ಗ್ರಹಿಸಿರಿ; ಮತ್ತು ಸರ್ವರಿಗೂ ಕಲ್ಯಾಣಕರವಾದದ್ದನ್ನು ನೀವೇ ಮಾಡಿರಿ," ಎಂದು ಹೇಳಿದರು. ಇದೇಕಾಲದಲ್ಲಿ ಪುತ್ರಪ್ರಾಪ್ತಿಯ ಇಚ್ಛೆಯಿಂದ ವ್ರತಸ್ಥಳಾಗಿದ್ದ ಕಶ್ಯಪಪತ್ನಿ-ವಿನತೆಯು ಋತುಸ್ನಾತಳಾಗಿ ಶುಚಿಯಿಂದ ಪತಿಯ ಬಳಿಗೆ ಬರಲು, ಕಶ್ಯಪರು—"ಎಲೈ ದೇವೀ, ನಿನ್ನ ವ್ರತಾಚರಣೆಯು ಸಫಲವಾಯಿತು. ತ್ರೈಲೋಕ್ಯವಿಜಯಿಗಳಾದ ಇಬ್ಬರು ಮಕ್ಕಳು ನಿನ್ನ ಹೊಟ್ಟೆಯಲ್ಲಿ ಹುಟ್ಟುವರು. ವಾಲಖಿಲ್ಯರ ತಪಸ್ಸಿನಿಂದಲೂ, ನನ್ನ ಇಚ್ಛೆಯಿಂದಲೂ ಆ ನಿನ್ನ ಮಕ್ಕಳು ಪರಮಭಾಗ್ಯಶಾಲಿಗಳೂ, ಲೋಕಪೂಜ್ಯರೂ ಆಗುವವರಿರುವದರಿಂದ, ನೀನು ಗರ್ಭದಲ್ಲಿಯೂ ಅವರ ಸಂರಕ್ಷಣವನ್ನು ಜಾಗ್ರತೆಯಿಂದ ಮಾಡು," ಎಂದು ಹೇಳಿ, ಇಂದ್ರನನ್ನು ಕುರಿತು—"ಇಂದ್ರಾ, ನನ್ನ ಆ ಇಬ್ಬರು ಮಕ್ಕಳು ನಿನಗೆ ಸಹಾಯಮಾಡುವವರಾಗಿರುವದರಿಂದ ಅವರಿಗೆ ನೀನು ತೊಂದರೆ

ಕೊಡಬೇಡ. ಇಂದ್ರಪದವಿಯಲ್ಲಿ ನೀನೇ ಸ್ಥಿರವಾಗಿ ಇರುತ್ತೀ ; ಆದ್ದರಿಂದ ಮನಸ್ಸಿನೊಳಗಿನ ಸಿಟ್ಟನ್ನು ಬಿಡು. ಇನ್ನುಮೇಲೆ ಬ್ರಹ್ಮಜ್ಞಾನಿಗಳ ಉಪಹಾಸವನ್ನು ಎಂದೂ ಮಾಡಬೇಡ. ಶಾಪವಾಣಿಯ ಶಸ್ತ್ರವನ್ನು ಧರಿಸಿದ್ದ ಸಿಟ್ಟಿನ ಬ್ರಹ್ಮಜ್ಞಾನಿಗಳ ಅಪಮಾನವನ್ನು ಗರ್ವದಿಂದ ಮಾಡುವದು ನಿನಗೆ ಯೋಗ್ಯವಲ್ಲ.'' ಎಂದು ಹೇಳಿದರು. ಬಳಿಕ ಇಂದ್ರನು ನಿರ್ಭಯನಾಗಿ ಹೊರಟುಹೋದನು. ಇತ್ತ ವಿನತೆಯ ಹೊಟ್ಟೆಯಲ್ಲಿ ಅರುಣ-ಗರುಡರು ಹುಟ್ಟಿದರು. ಅರುಣನು ಸೂರ್ಯನ ಸಾರಥಿಯಾದನು. ಗರುಡನಿಗೆ ಬ್ರಹ್ಮದೇವನು ಪಕ್ಷಿಗಳ ಪ್ರಭುತ್ವದ ಅಭಿಷೇಕಮಾಡಿದನು. ಋಷಿಗಳಿರಾ, ಇನ್ನುಮೇಲೆ ಗರುಡನ ಮಹತ್ಕೃತ್ಯಗಳನ್ನು ಹೇಳುವೆನು ಕೇಳಿರಿ.

**ದೇವತೆಗಳ ಹಾಗು ಗರುಡನ ಯುದ್ಧ**—ಶೌನಕರೇ, ದೇವತೆಗಳು ಶಸ್ತ್ರಾಸ್ತ್ರಗಳನ್ನು ಧರಿಸಿ ಯುದ್ಧಕ್ಕೆ ಸಿದ್ಧರಾದದ್ದನ್ನು ಹೇಳಿರುವೆನಷ್ಟೆ? ಗರುಡನು ಆ ದೇವತೆಗಳ ಮುಂದೆ ಬಂದು ನಿಂತುಕೊಂಡನು. ಆತನನ್ನು ನೋಡಿ ಯಾವತ್ತು ದೇವತೆಗಳು ಭಯಗ್ರಸ್ತರಾದರು. ದೇವತೆಗಳಿಗೂ, ಗರುಡನಿಗೂ ಭಯಂಕರವಾದ ಯುದ್ಧವು ಆರಂಭವಾಯಿತು. ಅಮೃತರಕ್ಷಕನಾದ ವಿಶ್ವಕರ್ಮನು ಯುದ್ಧದಲ್ಲಿ ಮೂರ್ಛಿತನಾಗಿ ಬಿದ್ದನು. ಗರುಡನು ತನ್ನ ರೆಕ್ಕೆಗಳಿಂದ ಭಯಂಕರವಾದ ಗಾಳಿಯನ್ನು ಉತ್ಪನ್ನಮಾಡಿ, ಧೂಲಿಯನ್ನು ಎಬ್ಬಿಸಿದನು. ಅದರಿಂದ ದೇವತೆಗಳು ಕುರುಡರಾಗಿ ಹೋದರು ; ಕಗ್ಗತ್ತಲೆಯು ಮುಸುಕಿತು ; ದೇವತೆಗಳು ಮುಂದುಗಾಣದಾದರು. ಆಗ ದೇವೇಂದ್ರನು ವಾಯುವಿಗೆ—''ನೀನು ಈ ಧೂಲಿಯನ್ನು ಹಾರಿಸಿ ಬೈಲುಮಾಡು, ಇದು ನಿನ್ನ ಕೆಲಸವು'' ಎಂದು ಹೇಳಲು, ಬಲಶಾಲಿಯಾದ ವಾಯುವು ಯಾವತ್ತು ಧೂಲಿಯ ನಿವಾರಣ ಮಾಡಿದನು. ಮಹಾಬಲಿಷ್ಠನಾದ ಗರುಡನು ತನ್ನ ಚಂಚು, ಉಗುರು, ರೆಕ್ಕೆಗಳ ಹೊಡತದಿಂದ ದೇವತೆಗಳನ್ನು ಗಾಯಗೊಳಿಸಿ ರಕ್ತಪ್ರವಾಹವನ್ನು ಹರಿಸಿದನು. ಗರುಡನ ಈ ಉಪಟಲವನ್ನು ತಡೆಯಲಾರದೆ ದೇವತೆಗಳು ನಾಲ್ಕೂದಿಕ್ಕಿಗೆ ಓಡಿಹೋದರು. ಬಳಿಕ ನಿರ್ಬಾಧನಾದ ಗರುಡನು ಅಮೃತವನ್ನು ಅಪಹರಿಸುವದಕ್ಕಾಗಿ ನಡೆದನು. ಆಗ ಭೂಮ್ಯಾಕಾಶ

ಗಳನ್ನು ವ್ಯಾಪಿಸುವ ಅಗ್ನಿಜ್ವಾಲೆಯು ಉತ್ಪನ್ನವಾಗಿ, ಗರುಡನ ಗತಿಯು ಕುಂಠಿತವಾಯಿತು. ಅದನ್ನು ನೋಡಿ ಮಹಾತಪಸ್ವಿ-ಗರುಡನು ಅನಂತ ಮುಖಗಳನ್ನು ಧರಿಸಿ ಅವುಗಳಿಂದ ನದಿಗಳ ನೀರನ್ನು ಶೋಷಿಸಿ ಆ ನೀರಿನಿಂದ ಯಾವತ್ತು ಅಗ್ನಿಯನ್ನು ನಂದಿಸಿಬಿಟ್ಟು, ಅಮೃತದ ಬಳಿಗೆ ಹೋಗುವದಕ್ಕಾಗಿ ಸೂಕ್ಷ್ಮರೂಪವನ್ನು ಧರಿಸಿದನು.



## ೩೩ ನೇ ಅಧ್ಯಾಯ—ಅಮೃತಹರಣ.

ಈ ಮೇರೆಗೆ ಗರುಡನು ಸೂಕ್ಷ್ಮರೂಪವನ್ನು ಧರಿಸಿ ಅಮೃತದ ಬಳಿಗೆ ಹೋಗಲು, ಅಮೃತದ ಸುತ್ತುಮುತ್ತು ತೀಕ್ಷ್ಣಧಾರೆಯ ಒಂದು ಯಂತ್ರವು ಭರದಿಂದ ತಿರುಗುತ್ತಿತ್ತು. ಆ ಯಂತ್ರದ ತೀಕ್ಷ್ಣಧಾರೆಯ ಅಲಗುಗಳಿಂದ ಎಂತಹ ಬಲಿಷ್ಠಪ್ರಾಣಿಯೂ ಚೂರು ಚೂರಾಗಿ ಹೋಗಬಹುದಾಗಿತ್ತು. ಅದನ್ನು ನೋಡಿ ಗರುಡನು ಅತ್ಯಂತ ಸೂಕ್ಷ್ಮರೂಪವನ್ನು ಧರಿಸಿ, ಆ ಯಂತ್ರದ ಅಲಗುಗಳ ನಡುವಿನಿಂದ ಒಳಗೆ ಹೋಗಿ ಅಮೃತಕಲಶವನ್ನು ಕಂಡನು. ಅಲ್ಲಿ ಭಯಂಕರ ವಿಷದ ಎರಡು ಸರ್ಪಗಳು ಅಮೃತವನ್ನು ಬಹು ಜಾಗರೂಕತೆಯಿಂದ ಕಾಯುತ್ತಿದ್ದವು. ಆಗ ಗರುಡನು ಅದ್ಭುತವಾದ ಧೂಲಿಯನ್ನು ಉತ್ಪನ್ನಮಾಡಿ ಆ ಸರ್ಪಗಳ ಕಣ್ಣು ಕಳೆದು, ಆಕಸ್ಮಾತ್ ಅವುಗಳ ಮೇಲೆ ಬಿದ್ದು ಅವನ್ನು ತುಂಡರಿಸಿದನು. ಬಳಿಕ ಮಹಾ ಬಲಿಷ್ಠನಾದ ಗರುಡನು ಅಮೃತದ ಬಳಿಗೆ ಹೋಗಿ ಆ ಯಂತ್ರವನ್ನು ಮುರಿದುಬಿಟ್ಟು, ಅಮೃತಕಲಶವನ್ನು ತಕ್ಕೊಂಡು ಆಕಾಶದಲ್ಲಿ ಉಡ್ಡಾಣ ಮಾಡಿದನು. ಹೀಗೆ ಅಮೃತವು ಕೈಸೇರಿದರೂ ಅದರೊಳಗಿನ ಒಂದು ಹನಿಯನ್ನು ಗರುಡನು ಇಚ್ಛಿಸಲಿಲ್ಲ. ಇಷ್ಟು ಕೆಲಸ ಮಾಡಲಿಕ್ಕೆ ಆತನಿಗೆ ಸ್ವಲ್ಪವೂ ಆಯಾಸವಾಗಲಿಲ್ಲ. ಇದನ್ನೆಲ್ಲ ಆತನು ಲೀಲಾಮಾತ್ರದಿಂದ ಮಾಡಿದನು. ಹೀಗೆ ಗರುಡನು ಅಮೃತವನ್ನು ಅಪಹರಿಸಿ ಆಕಾಶಮಾರ್ಗದಲ್ಲಿ ಹೋಗುತ್ತಿರುವಾಗ, ಹಾದಿಯಲ್ಲಿ ಆತನಿಗೆ ಮಹಾವಿಷ್ಣುವಿನ ದರ್ಶನವಾಯಿತು. ಗರುಡನ ನಿರ್ಲೋಭವೃತ್ತಿಗಾಗಿ ವಿಷ್ಣುವು ಪ್ರಸನ್ನನಾಗಿದ್ದನು. ಅಧ್ಯಕ್ಷನಾದ ಆ ಭಗವಾನ್

ನಾರಾಯಣನು ಗರುಡನನ್ನು ಕುರಿತು—"ಗರುಡಾ, ನಿನ್ನ ನಿರ್ಲೋಭ ಸ್ವಭಾವಕ್ಕಾಗಿ ನಾನು ಪ್ರಸನ್ನನಾಗಿದ್ದೇನೆ, ಬೇಕಾದ ವರವನ್ನು ಬೇಡಿಕೋ," ಎಂದು ಹೇಳಲು, ಗರುಡನು—"ನಾನು ನಿನ್ನ ಮೇಲೆ ಇರಬೇಕೆಂ"ತಲೂ, "ಅಮೃತಪ್ರಾಶನ ಮಾಡದೆ ನಾನು ಅಮರನಾಗಬೇಕೆಂ"ತಲೂ ವರಗಳನ್ನು ಬೇಡಿಕೊಂಡನು. ಅವಕ್ಕೆ ಭಗವಾನ್ ವಿಷ್ಣುವು "ತಥಾಸ್ತು" ಎಂದು ಹೇಳಲು, ಗರುಡನು ವಿಷ್ಣುವಿಗೆ—"ನಾನೂ ನಿನಗೆ ವರಕೊಡಬೇಕೆಂದಿದ್ದೇನೆ. ನೀನು ಭಗವಂತನಾದರೂ ಅವನ್ನು ಗ್ರಹಿಸಬೇಕು," ಎಂದು ಬೇಡಿಕೊಳ್ಳಲು, ವಿಷ್ಣುವು—"ನೀನು ನನ್ನ ವಾಹನವಾಗಬೇಕೆಂ"ತಲೂ, "ನನ್ನ ಧ್ವಜದಲ್ಲಿರಬೇಕೆಂ"ತಲೂ ಕೇಳಿಕೊಂಡನು. ಅದಕ್ಕೆ ಗರುಡನು "ಹಾಗೆ ಆಗಲೆಂ"ದು ಹೇಳಿ, ವಾಯುವೇಗದಿಂದ ಆಕಾಶಮಾರ್ಗದಲ್ಲಿ ಮುಂದಕ್ಕೆ ಸಾಗಿದನು. ಹೀಗೆ ಗರುಡನು ಮುಂದಕ್ಕೆ ಹೋಗುತ್ತಿರುವಾಗ, ಇಂದ್ರನು ಸಿಟ್ಟಿನಿಂದ ಆತನಿಗೆ ವಜ್ರಪ್ರಹಾರ ಮಾಡಿದನು. ಆಗ ಗರುಡನು ಮುಗುಳು ನಗೆ ನಗುತ್ತ, ತನಗೆ ವಜ್ರಾಘಾತವೇ ಆಗಲಿಲ್ಲವೆಂಬಂತೆ ಸೌಮ್ಯಶಬ್ದಗಳಿಂದ ಇಂದ್ರನನ್ನು ಕುರಿತು—"ಎಲೈ ಇಂದ್ರಾ, ಯಾವ ಋಷಿಯ ಬೆನ್ನೆಲವುಗಳಿಂದ ಈ ವಜ್ರಾಯುಧವಾಗಿರುವದೋ, ಆ ದಧೀಚಿಋಷಿಯ ಮಾನವನ್ನೂ, ಈ ವಜ್ರಾಯುಧದ ಮಾನವನ್ನೂ, ನಿನ್ನ ಮಾನವನ್ನೂ ಕಾಯುವದಕ್ಕಾಗಿ, ಇಗೋ, ಈ ನನ್ನ ಒಂದು ಗರಿಯನ್ನು ನಿನ್ನ ವಜ್ರಾಯುಧದ ಹೊಡತಕ್ಕೆಂದು ಬಿಟ್ಟುಬಿಡುತ್ತೇನೆ ನೋಡು," ಎಂದು ಹೇಳಿ ತನ್ನ ಒಂದು ಗರಿಯನ್ನು ಚಲ್ಲಿ ಕೊಟ್ಟನು. ಆ ಸುಂದರವಾದ ಗರಿಯ ಯೋಗದಿಂದ ಗರುಡನಿಗೆ "ಸುಪರ್ಣ" ಎಂಬ ಹೆಸರು ಉಂಟಾಯಿತು. ಗರುಡನ ಈ ಅದ್ಭುತಬಲವನ್ನು ನೋಡಿ ಇಂದ್ರನು ಬೆರಗಾಗಿ ಮನಸ್ಸಿನಲ್ಲಿ—"ಇವನೇನು ಪಕ್ಷಿಯಲ್ಲ, ಮಹದ್ಭೂತವೇ ನಿರ್ಮಾಣವಾಗಿರುವದು," ಎಂದು ಯೋಚಿಸಿ, ಗರುಡನನ್ನು ಕುರಿತು—"ಎಲೈ ಪಕ್ಷಿಶ್ರೇಷ್ಠಾ, ನಿನ್ನ ಪರಮಾವಧಿಯಾದ ಬಲವನ್ನು ಅರಿಯಬೇಕೆಂತಲೂ, ನಿನ್ನೊಡನೆ ನಾನು ನಿರಂತರ ಸಖ್ಯಬೆಳಿಸಬೇಕೆಂತಲೂ ಇಚ್ಛಿಸುತ್ತೇನೆ," ಎಂದು ಕೇಳಿಕೊಂಡನು.



## ೩೪ ನೇ ಅಧ್ಯಾಯ—ಇಂದ್ರ-ಗರುಡ ಸಂವಾದ

ಇಂದ್ರನ ಈ ಮಾತುಗಳನ್ನು ಕೇಳಿ ಗರುಡನು—"ದೇವಾ, ಪುರಂದರಾ, ನಿನ್ನ ಇಚ್ಛೆಯಂತೆ ನಿನ್ನೊಡನೆ ನನ್ನ ಸಖ್ಯವುಂಟಾಗುವದು, ಆದರೆ ನನ್ನ ಅಸಹ್ಯವಾದ ಬಲವು ಎಷ್ಟಿರುವದೆಂಬದನ್ನು ನೀನು ಕೇಳಲಿಚ್ಛಿಸುವೆ, ಅದನ್ನು ಹೇಳುವೆನು ಕೇಳು. ಎಲೈ ನೂರು ಯಜ್ಞಮಾಡಿದ ಇಂದ್ರನೇ, ನಿಜವಾಗಿಯೆಂದರೆ ಸಜ್ಜನರಾದವರು ತಮ್ಮ ಶರೀರಸಾಮರ್ಥ್ಯವನ್ನು, ಅಥವಾ ಬುದ್ಧಿಸಾಮರ್ಥ್ಯವನ್ನು ಹೇಳಿಕೊಳ್ಳುವದಿಲ್ಲ! ಮತ್ತು ತಮ್ಮ ಗುಣವರ್ಣನ ಕೇಳುವದು ಅವರಿಗೆ ಸಹನವಾಗುವದಿಲ್ಲ; ಆದರೆ ಇಂದ್ರಾ, ಈಗ ನೀನು ನನ್ನನ್ನು ಮಿತ್ರನನ್ನಾಗಿ ಮಾಡಿಕೊಂಡಿರುತ್ತೀ; ಮತ್ತು ಮಿತ್ರನೆಂಬ ಸಂಬಂಧದಿಂದ ನನ್ನನ್ನು ಕೇಳುತ್ತೀ; ಆದ್ದರಿಂದ ನನ್ನ ಬಲವೆಷ್ಟೆಂಬದನ್ನು ಹೇಳುತ್ತೇನೆ ಕೇಳು. ಕಾರಣವಿಲ್ಲದೆ ಆತ್ಮಸ್ತುತಿಯನ್ನು ಮಾಡಿಕೊಳ್ಳುವದು ಯೋಗ್ಯವಲ್ಲ. ಇಂದ್ರಾ, ಬಹಳ ಹೇಳುವದರಿಂದೇನು? ಈ ಯಾವತ್ತು ಪರ್ವತಗಳು, ಯಾವತ್ತು ಅರಣ್ಯಗಳು, ತುಂಬಿದ ಈ ಯಾವತ್ತು ಸಮುದ್ರಗಳು, ಇಷ್ಟೇ ಏಕೆ, ನಿನ್ನಿಂದ ಸಹಿತವಾಗಿ ಯಾವತ್ತು ಪೃಥ್ವಿಯು ಇವನ್ನು ನಾನು ನನ್ನ ಒಂದೇ ರೆಕ್ಕೆಯಿಂದ ಹೊತ್ತುಕೊಂಡು ಹೋದೇನು! ಇಷ್ಟರಿಂದೇ ಆಯಿತೆಂದು ತಿಳಿಯಬೇಡ. ಸ್ಥಾವರಜಂಗಮಾತ್ಮಕವಾದ ಯಾವತ್ತು ಲೋಕಗಳನ್ನು ಒತ್ತಟ್ಟಿಗೆ ಒಟ್ಟುಗೂಡಿಸಿದರೂ ಅವನ್ನು ನಾನು ಎತ್ತಬಹುದು; ಹೀಗೆ ಎತ್ತುವಾಗ ನನಗೆ ಸ್ವಲ್ಪವೂ ಶ್ರಮವಾಗಲಾರದು.

ದೇವೇಂದ್ರ—ನಿನ್ನ ಮಾತು ಸತ್ಯವು. ನೀನು ಅಂತಹ ಬಲಿಷ್ಠನೇ ಸರಿ. ಈಗ ನೀನು ನನ್ನ ಅತ್ಯುತ್ತಮ ಮೈತ್ರಿಯನ್ನು ಸ್ವೀಕರಿಸು; ಮತ್ತು ನಿನಗೆ ಅಮೃತದ ಅವಶ್ಯವಿಲ್ಲದಿದ್ದರೆ ಅದನ್ನು ನನಗೆ ತಿರುಗಿಕೊಡು; ಯಾಕಂದರೆ, ಸರ್ಪಗಳಿಗೆ ಇದನ್ನು ನೀನು ಕೊಟ್ಟೆಯೆಂದರೆ ಅವು ನಮ್ಮನ್ನು ಬಹಳವಾಗಿ ಪೀಡಿಸಬಹುದು.

ಗರುಡ—ನಾನು ಈ ಅಮೃತವನ್ನು ಸ್ವಲ್ಪ ಕೆಲಸಕ್ಕಾಗಿ ಒಯ್ಯುವೆನು. ಅದನ್ನು ನಾನು ಯಾರಿಗೂ ಕುಡಿಯಲಿಕ್ಕೆ ಕೊಡುವದಿಲ್ಲ; ಆದರೆ

ಸ್ವರ್ಗಾಧಿಪತೇ, ನಾನು ಈ ಅಮೃತಕಲಶವನ್ನು ಇಟ್ಟ ಸ್ಥಳದಿಂದ ಇದನ್ನು ನೀನು ಜಾಗ್ರತೆಯಾಗಿ ಎತ್ತಿಕೊಂಡು ಹೋಗು.

ಇಂದ್ರ—ಗರುಡಾ, ನಿನ್ನ ಈ ಮಾತುಗಳನ್ನು ಕೇಳಿ ನನಗೆ ಬಹಳ ಸಂತೋಷವಾಯಿತು. ನಿನಗೆ ಬೇಕಾದ ವರವನ್ನು ಬೇಡಿಕೋ.

ಗರುಡ—ಇಂದ್ರಾ, ನಾನಾದರೂ ಸರ್ವಸಮರ್ಥನು. ನಾನು ಬೇಕಾದದ್ದನ್ನು ಮಾಡಬಲ್ಲೆನು ; ಆದರೆ ನೀನು ವರಗಳನ್ನು ಕೊಡಲು ಸಿದ್ಧನಾಗಿರುವದರಿಂದ ಕೇಳಿಕೊಳ್ಳುತ್ತೇನೆ, ಮದೋನ್ಮತ್ತವಾದ ಸರ್ಪಗಳು ನನ್ನ ಆಹಾರವಾಗಬೇಕು.

**ಸರ್ಪಗಳ ನಿರಾಶೆ** — ಶೌನಕಾ, ಇಂದ್ರನು ಮಹಾತ್ಮನಾದ ಯೋಗೇಶ್ವರ ಶ್ರೀಹರಿಯ ಅನುಮತಿಯಿಂದ ಗರುಡನ ಮಾತಿಗೆ ಒಪ್ಪಿಕೊಂಡು, ಆತನು ಕೇಳಿದ ವರವನ್ನು ಕೊಟ್ಟನು. ಬಳಿಕ ಗರುಡನು ಅಮೃತ ಕಲಶವನ್ನು ತಕ್ಕೊಂಡು ತನ್ನ ತಾಯಿಯ ಬಳಿಗೆ ಬಂದನು. ಆತನು ಸರ್ಪಗಳನ್ನು ನೋಡಿ ಆನಂದಪಟ್ಟವನಂತೆ ತೋರಿಸಿ ಅವನ್ನು ಕುರಿತು—"ಸರ್ಪಗಳಿರಾ, ಇಗೋ, ನೀವು ಹೇಳಿದಂತೆ ಅಮೃತಕಲಶವನ್ನು ತಂದಿದ್ದೇನೆ. ಈ ದರ್ಭೆಗಳ ಮೇಲೆ ಇದನ್ನು ಇಡುವೆನು. ನೀವು ಸ್ನಾನಮಾಡಿ ಪವಿತ್ರರಾಗಿ ಮಂಗಲದ್ರವ್ಯಗಳನ್ನು ಧರಿಸಿ ಈ ಅಮೃತವನ್ನು ಕುಡಿಯಿರಿ. ನಿಮ್ಮ ಹೇಳಿಕೆಯಂತೆ ನಮ್ಮ ತಾಯಿಯು ಇಂದಿನಿಂದ ದಾಸ್ಯಮುಕ್ತಳಾದಳು" ಎಂದು ಹೇಳಿದನು. ಅದಕ್ಕೆ ಸರ್ಪಗಳು ಒಪ್ಪಿ, ಸ್ನಾನಮಾಡಿಕೊಂಡು, ಜಪಾದಿಗಳನ್ನು ತೀರಿಸಿಕೊಂಡು, ಮಂಗಲದ್ರವ್ಯಗಳನ್ನು ಧರಿಸಿ ಅಮೃತಪ್ರಾಶನ ಮಾಡಬೇಕೆಂದು ಬಂದವು ; ಆದರೆ ಅಷ್ಟರಲ್ಲಿ ಇಂದ್ರನು ಅಮೃತಕಲಶವನ್ನು ಎತ್ತಿಕೊಂಡು ಹೋಗಿಬಿಟ್ಟಿದ್ದನು. ಆಗ ಸರ್ಪಗಳು—"ತಾವು ಹಿಂದಕ್ಕೆ ಮೋಸಮಾಡಿದಂತೆ ನಮ್ಮನ್ನು ಈಗ ಅನ್ಯರು ಮೋಸಮಾಡಿದರೆಂ"ದು ಅಂದುಕೊಂಡು, ಅಮೃತಕಲಶವಿಟ್ಟಿದ್ದ ದರ್ಭೆಯನ್ನು ಅವು ನೆಕ್ಕತೊಡಗಿದವು. ಆಗ ದರ್ಭೆಗಳ ತೀಕ್ಷ್ಣ ಅಗ್ರಗಳಿಂದ ಸರ್ಪಗಳ ನಾಲಿಗೆ ಇಬ್ಭಾಗವಾಯಿತು ! ಅಮೃತಕಲಶ ಸ್ಪರ್ಶದಿಂದ ದರ್ಭೆಗಳೂ ಅಮೃತಮಯವಾದವು. ಇಷ್ಟಾದಬಳಿಕ ತಾಯಿಯೊಡನೆ ಗರುಡನಿಗೆ ಪರಮಾನಂದವಾಯಿತು. ಆತನು ಅರಣ್ಯದಲ್ಲಿ ವಿಹರಿಸುತ್ತ

ಸರ್ಪಗಳನ್ನು ತಿಂದು ತನ್ನ ನಿರ್ವಾಹವನ್ನು ಸಾಗಿಸಹತ್ತಿದನು. ಬೇರೆ ಪಕ್ಷಿಗಳೂ ಆತನನ್ನು ಮನ್ನಿಸಹತ್ತಿದವು. ಆತನ ಕೀರ್ತಿಗೆ ಎಂದೂ ಕೊರತೆಯುಂಟಾಗಲಿಲ್ಲ. ಋಷಿಗಳಿರಾ, ಈ ಸುಪರ್ಣಾಖ್ಯಾನವನ್ನು ನಿರಂತರ ಶ್ರವಣಮಾಡುವ, ಹಾಗು ಬ್ರಾಹ್ಮಣ ಸಮಾಜದಲ್ಲಿ ಇದನ್ನು ಪಠಣ ಮಾಡುವ ಪುಣ್ಯಪುರುಷರು ಗರುಡನ ಗುಣಕೀರ್ತನದಿಂದ ನಿಸ್ಸಂಶಯ ಸ್ವರ್ಗಕ್ಕೆ ಹೋಗುವರು.



## ೩೫, ೩೬ನೇ ಅಧ್ಯಾಯಗಳು—ಸರ್ಪನಾಮಕಥನವೂ, ಶೇಷನ ವೃತ್ತಾಂತವೂ

ಋಷಿಗಳಿರಾ, ಮುಖ್ಯಮುಖ್ಯ ಸರ್ಪಗಳ ಹೆಸರುಗಳನ್ನು ಹೇಳುವೆನು ಕೇಳಿರಿ. ಮೊಟ್ಟಮೊದಲು ಶೇಷನು ಹುಟ್ಟಿದನು. ಆಮೇಲೆ ವಾಸುಕಿ, ಐರಾವತ, ತಕ್ಷಕ, ಕರ್ಕೋಟಕ, ಧನಂಜಯ, ಕಾಲಿಯ ಮೊದಲಾದ ಸರ್ಪಗಳು ಹುಟ್ಟಿದವು. ಈ ಸರ್ಪಗಳ ಸಂತತಿ ಪ್ರತಿಸಂತತಿಗಳನ್ನು ಗಣಿಸಿದರೆ, ಕೋಟ್ಯವಧಿ ಸರ್ಪಗಳಾಗುವವು ಅವು ತಮ್ಮ ಶಾಪನಿವೃತ್ತಿಗಾಗಿ ಯತ್ನಿಸತೊಡಗಿದವು ಅವುಗಳಲ್ಲಿ ಮಹಾಯಶಸ್ವಿಯಾದ ಭಗವಾನ್ ಶೇಷನು ತನ್ನ ತಾಯಿಯಾದ ಕದ್ರುವನ್ನು ತ್ಯಜಿಸಿ, ವಾಯುಭಕ್ಷಣಮಾಡುತ್ತ ಗಂಧಮಾದನಪರ್ವತ, ಬದರಿಕಾಶ್ರಮ, ಗೋಕರ್ಣ ಮೊದಲಾದ ಸ್ಥಳಗಳಲ್ಲಿ ಘೋರತಪಶ್ಚರ್ಯ ಮಾಡತೊಡಗಿದನು. ಜಿತೇಂದ್ರಿಯನೂ, ಏಕಾಂತವಾಸಪ್ರಿಯನೂ ಆದ ಶೇಷನ ತಪಶ್ಚರ್ಯಕ್ಕೆ ಮೆಚ್ಚಿ ಬ್ರಹ್ಮದೇವನು ಆತನನ್ನು ಕುರಿತು—

ಬ್ರಹ್ಮದೇವ—ಎಲಾ ಶೇಷಾ, ಈ ಘೋರತಪಶ್ಚರ್ಯವೇಕೆ? ಲೋಕಹಿತವನ್ನು ಕೆಲಮಟ್ಟಿಗೆ ನೋಡು. ಉಗ್ರ ತಪಸ್ಸಿನಿಂದ ಲೋಕಕ್ಕೆ ತಾಪ ಕೊಡುವೆಯಲ್ಲ? ನಿನ್ನ ಮನಸ್ಸಿನಲ್ಲಿ ಇರುವದಾದರು ಏನು?

ಶೇಷ—ದೇವಾ, ಒಂದೇ ಖನಿಯಲ್ಲಿ ಹುಟ್ಟಿರುವ ನಮ್ಮ ತಮ್ಮಂದಿರು ಮೂಢರಿರುವರು. ಅವರೊಡನೆ ಕೂಡಿ ನಡೆಯುವ ಮನಸ್ಸು ನನಗಿಲ್ಲ. ಭಗವನ್, ಇದಕ್ಕೆ ನಿನ್ನ ಅನುಮತಿಯು ಇರಬೇಕು. ವೈರಿಗಳಂತೆ ನನ್ನ

ತಮ್ಮಂದಿರು ಪರಸ್ಪರರಮೇಲೆ ಸಂತಾಪಗೊಳ್ಳುತ್ತಿರುವರು. ವಿನತೆಯನ್ನೂ ಆಕೆಯ ಮಕ್ಕಳನ್ನೂ ದ್ವೇಷಿಸುತ್ತಿರುವರು. ಆ ನನ್ನ ತಮ್ಮಂದಿರ ಮೋರೆಯನ್ನು ನೋಡಬಾರದೆಂದು ನಾನು ನಿಶ್ಚಯಿಸಿರುತ್ತೇನೆ. ತಂದೆಯಾದ ಕಶ್ಯಪರ ವರಪ್ರದಾನದಿಂದ ಗರುಡನು ಅತ್ಯಂತ ಬಲಿಷ್ಠನಾಗಿರುವನು. ಕಾರಣ ತಪಶ್ಚರ್ಯದಿಂದ ದೇಹತ್ಯಾಗ ಮಾಡಬೇಕೆಂದು ನಾನು ನಿಶ್ಚಯಿಸಿರುತ್ತೇನೆ.

ಬ್ರಹ್ಮದೇವ—ಶೇಷಾ, ನಿನ್ನ ತಮ್ಮಂದಿರ ನಡತೆಯು ನನಗೆ ಗೊತ್ತಿರುವದು. ನಿಮ್ಮ ತಾಯಿಯ ತಪ್ಪಿನಿಂದ ಒದಗಿದ ಅನರ್ಥವನ್ನು ನಾನು ಅರಿತಿರುವೆನು. ಅದಕ್ಕೆ ತಕ್ಕ ಉಪಾಯವಾದರೂ ಯೋಚಿಸಲ್ಪಟ್ಟಿರುತ್ತದೆ; ಆದರೆ ಶೇಷಾ, ನೀನು ತಮ್ಮಂದಿರ ವಿಷಯವಾಗಿ ಅಷ್ಟು ಮನಸ್ಸಿಗೆ, ಹಚ್ಚಿಕೊಳ್ಳಬೇಡ. ನಿನಗೆ ಬೇಕಾದ ವರಗಳನ್ನು ನನ್ನಿಂದ ಬೇಡಿಕೋ ಕೊಡುವೆನು. ನಿನ್ನ ಬುದ್ಧಿಯು ಧರ್ಮದಲ್ಲಿ ತೊಡಗಿರುವದು ಬಹಳ ಉತ್ತಮವು. ಹೀಗೆಯೇ ದಿನದಿನಕ್ಕೆ ನಿನ್ನ ಬುದ್ಧಿಯು ಧರ್ಮದಲ್ಲಿ ಸ್ಥಿರನಾಗಲಿ.

ಶೇಷ—ಎಲೈ ಪಿತಾಮಹನಾದ ಪ್ರಭುವೇ, ನಾನು ಒಂದೇ ವರವನ್ನು ಬೇಡಿಕೊಳ್ಳುವೆನು. ನನ್ನ ಮನಸ್ಸು ಯಾವಾಗಲೂ ಧರ್ಮ, ಶಾಂತಿ, ತಪಾಚರಣ ಇವುಗಳಲ್ಲಿಯೇ ತೊಡಗಿರಲಿ.

ಬ್ರಹ್ಮದೇವ—ಶೇಷಾ, ನಿನ್ನ ಇಂದ್ರಿಯದಮನವನ್ನೂ, ಮನಶ್ಶಾಂತಿಯನ್ನೂ ನೋಡಿ ನಾನು ಸಂತುಷ್ಟನಾಗಿರುವೆನು; ಆದ್ದರಿಂದ ನಿನಗೆ ಒಂದು ಲೋಕಕಲ್ಯಾಣದ ಮಾತನ್ನು ಹೇಳುವೆನು. ಪರ್ವತಗಳು, ಅರಣ್ಯಗಳು, ಉಪವನಗಳು, ಸಮುದ್ರಗಳು, ನಗರಗಳು ಇವನ್ನು ಧರಿಸಿರುವ ಪೃಥ್ವಿಯು ಅಲ್ಲಾಡುತ್ತಿರುವದು. ನೀನು ಅದಕ್ಕೆ ಆಸರ ಕೊಟ್ಟು ಅದನ್ನು ಸ್ಥಿರಗೊಳಿಸು.

ಶೇಷ—ಜಗತ್ಪತೇ, ನಿನ್ನ ಅಪ್ಪಣೆಯನ್ನು ನಾನು ಮೀರುವದು ಹೇಗೆ? ಈ ಪೃಥ್ವಿಯನ್ನು ನನ್ನ ತಲೆಯಮೇಲೆ ಇಡು, ಅದನ್ನು ನಾನು ಧರಿಸುವೆನು.

ಬ್ರಹ್ಮದೇವ—ಎಲೈ ಸರ್ಪ ಶ್ರೇಷ್ಠನೇ, ಪೃಥ್ವಿಯು ತಾನಾಗಿಯೇ ನಿನಗೆ ವಿವರವನ್ನು ಮಾಡಿಕೊಡುವಳು. ಆ ಮಾರ್ಗದಿಂದ ನೀನು ಪೃಥ್ವಿಯ ತಳಕ್ಕೆ ಹೋಗಿ, ಅದನ್ನು ತಲೆಯಮೇಲೆ ಧರಿಸು ; ಅಂದರೆ ನನಗೆ ಪ್ರಿಯವಾದದ್ದೊಂದು ಕೆಲಸವನ್ನು ನೀನು ಮಾಡಿದಂತಾಗುವದು.

ಋಷಿಗಳಿರಾ, ಬ್ರಹ್ಮದೇವನ ಅಪ್ಪಣೆಯಂತೆ ಶೇಷನು ತನ್ನ ಅಸಂಖ್ಯ ಹೆಡೆಗಳಮೇಲೆ ಪೃಥ್ವಿಯನ್ನು ಧರಿಸಲು, ಬ್ರಹ್ಮದೇವನು ಸಂತುಷ್ಟನಾಗಿ ಆತನಿಗೆ "ನೀನು ನನ್ನ ಅಪ್ಪಣೆಯಂತೆ ನಡೆದದ್ದರಿಂದ ನನ್ನಂತೆ, ಹಾಗು ಇಂದ್ರನಂತೆ ಧರ್ಮದ ಪ್ರಭುವಾಗು," ಎಂದು ಹೇಳಿ, ಆತನ ಸಹಾಯಕ್ಕಾಗಿ ಆ ಬ್ರಹ್ಮದೇವನು ಗರುಡನನ್ನು ನಿಯಮಿಸಿದನು.



## ೩೭, ೩೮ನೇ ಅಧ್ಯಾಯಗಳು—ಶಾಪನಿವಾರಣೋಪಾಯ

ಇತ್ತ ಸರ್ಪಶ್ರೇಷ್ಠನಾದ ವಾಸುಕಿಯು, ತನ್ನ ಮಾತೃ ಶಾಪ ವಿಮೋಚನವು ಹೇಗಾದೀತೆಂದು ಯಾವಾಗಲೂ ಚಿಂತಿಸುತ್ತಿದ್ದನು. ಆತನು ಯಾವತ್ತು ಸರ್ಪಗಳನ್ನು ಒಟ್ಟುಗೂಡಿಸಿ, ಇದಕ್ಕೆ ಉಪಾಯವೇನು ಮಾಡಬೇಕೆಂದು ಯೋಚಿಸತೊಡಗಿದನು. ಆಗ ಬೇರೆ ಬೇರೆ ಸರ್ಪಗಳು ತಮಗೆ ತೋಚಿದ ಬೇರೆ ಬೇರೆ ಉಪಾಯಗಳನ್ನು ಸೂಚಿಸಿದವು. ಕೆಲವು ಸರ್ಪಗಳು "ತಾವು ಬ್ರಾಹ್ಮಣ ವೇಷದಿಂದ ಜನಮೇಜಯರಾಜನ ಬಳಿಗೆ ಹೋಗಿ, ನೀನು ಯಜ್ಞವನ್ನೇ ಮಾಡಬೇಡವೆಂದು ಆತನಿಗೆ ಹೇಳಬೇಕೆಂ"ದು ಸೂಚಿಸಿದವು. ಕೆಲವು ಸರ್ಪಗಳು "ನಾವು ಸೇವಕರಾಗಿ ಜನಮೇಜಯರಾಜನ ಬಳಿಯಲ್ಲಿದ್ದು, ಆ ರಾಜನ ಮನಸ್ಸನ್ನೊಲಿಸಿಕೊಂಡು ಯಜ್ಞವಾಗದಂತೆ ಮಾಡಬೇಕೆಂ"ದು ನುಡಿದವು. ಕೆಲವು ಸರ್ಪಗಳು "ಋತ್ವಿಜರನ್ನು ಕಡಿದು ಕೊಲ್ಲಬೇಕೆಂದವು ; ಕೆಲವು" ಯಜ್ಞಕ್ಕಾಗಿ ಬಂದ ಜನರನ್ನೇ ಕಡಿದು ಕೊಲ್ಲಬೇಕೆಂದವು" ಕೆಲವು "ಜನಮೇಜಯ ರಾಜನನ್ನೇ ಕಡಿದು ಕೊಲ್ಲಬೇಕೆಂದವು" ಹೀಗೆ ತಮ ತಮಗೆ ತೋಚಿದಂತೆ ಹಲವು ಉಪಾಯ ಹೇಳಿದರೂ, ವಾಸುಕಿಯ ಮನಸ್ಸಿಗೆ ಅವರ ಯಾವ ಉಪಾಯವೂ ಯೋಗ್ಯವಾಗಿ ತೋರಲಿಲ್ಲ. ಆಗ "ಏಲಾಪತ್ರ" ವೆಂಬ ಸರ್ಪವು

ವಾಸುಕಿಯನ್ನು ಕುರಿತು "ವಾಸುಕೀ, ಆ ಯಜ್ಞವು ನಿಶ್ಚಯವಾಗಿ ಆಗ ತಕ್ಕದ್ದೇಸರಿ, ತಪ್ಪುವದಿಲ್ಲ. ದೈವಾಧೀನರಾದವರು ದೈವವನ್ನವಲಂಬಿಸಿಯೇ ನಡೆಯಬೇಕಾಗುವದು, ಅದಕ್ಕೆ ಬೇರೆ ಉಪಾಯವಿಲ್ಲ. ತಾಯಿಯು ಶಾಪಕೊಟ್ಟಾಗ ನಾನು ಆಕೆಯ ತೊಡೆಯಮೇಲೆಯೇ ಮಲಗಿಕೊಂಡಿದ್ದೆನು. ಆಕೆಯ ಉಗ್ರಶಾಪವನ್ನು ಕೇಳಿ ದೇವತೆಗಳು ಬ್ರಹ್ಮದೇವನನ್ನು ಕುರಿತು—"ಎಲೈ ದೇವಶ್ರೇಷ್ಠನೇ, ಸ್ತ್ರೀಯರು ಕಠೋರರು ಕಠೋರರು" ಎಂದು ನುಡಿದು "ದೇವಾ, ನೀನು ಆ ಕರ್ಕಶ ಕದ್ರುವಿನ ಶಾಪವನ್ನು ಅನುಮತಿಸಿದ್ದು ಆಶ್ಚರ್ಯವು" ಎಂದು ನುಡಿದರು, ಅದಕ್ಕೆ ಬ್ರಹ್ಮದೇವನು— "ದೇವತೆಗಳಿರಾ, ಭಯಂಕರ ವಿಷಧಾರಿಗಳಾದ ಕ್ರೂರ ಸರ್ಪಗಳಿಂದ ಜಗತ್ತಿಗೆ ಉಪದ್ರವವಾಗಬಾರದೆಂದು ನಾನು ಶಾಪವನ್ನು ಅನುಮತಿಸಿದ್ದೇನೆ. ಜನಮೇಜಯನ ಯಜ್ಞದಲ್ಲಿ ಧರ್ಮಹೀನ ಸರ್ಪಗಳ ಸಂಹಾರವು ಮಾತ್ರ ಆಗುವದು "ಯಯಾವರ" ಎಂಬ ಕುಲದ "ಜರತ್ಕಾರು" ಎಂಬ ಋಷಿಗೆ ವಾಸುಕಿಯು ತನ್ನ ತಂಗಿಯಾದ ಜರತ್ಕಾರುವನ್ನು ಕೊಟ್ಟು ಲಗ್ನಮಾಡಿದರೆ, ಅವರಿಂದ ಹುಟ್ಟುವ ಆಸ್ತಿಕನೆಂಬವನು ಜನಮೇಜಯನ ಯಜ್ಞಕ್ಕೆ ವಿಘ್ನವನ್ನುಂಟುಮಾಡಿ ಸರ್ಪಗಳನ್ನು ಬದುಕಿಸುವನು", ಎಂದು ಹೇಳಿದನು. ಎಲೈ ವಾಸುಕೀ, ಬ್ರಹ್ಮದೇವನ ಈ ಮಾತನ್ನು ನಾನು ಕಿವಿಮುಟ್ಟಿ ಕೇಳಿದ್ದೇನೆ; ಆದ್ದರಿಂದ ನೀನು ನಿನ್ನ ತಂಗಿಯಾದ ಜರತ್ಕಾರುವನ್ನು ಜರತ್ಕಾರು ಋಷಿಯು ಲಗ್ನವಾಗುವಂತೆಮಾಡು" ಎಂದು ಆ ಏಲಾಪತ್ರ ಸರ್ಪವು ಹೇಳಿತು. ಅದನ್ನು ಕೇಳಿ ಎಲ್ಲ ಸರ್ಪಗಳಿಗೂ ಸಂತೋಷವಾಯಿತು. ವಾಸುಕಿಯು ಜರತ್ಕಾರು ಋಷಿಯ ಶೋಧಕ್ಕಾಗಿ ಚತುರ ಸರ್ಪಗಳನ್ನು ನಿಯಮಿಸಿದನು. ಋಷಿಗಳಿರಾ, "ಜರತ್ಕಾರು" ಶಬ್ದದ ವ್ಯುತ್ಪತ್ತಿಯನ್ನು ಹೇಳುವೆನು ಕೇಳಿರಿ. 'ಜರಾ' ಅಂದರೆ ಕ್ಷಯ. 'ಕಾರು' ಅಂದರೆ ದಾರುಣ; ಆ ಋಷಿಯು ತನ್ನ ದಾರುಣ ಶರೀರವನ್ನು ತಪಸ್ಸಿನಿಂದ ಕ್ಷೀಣವಾಗಿ ಮಾಡಿದ್ದರಿಂದ ಆತನಿಗೂ, ವಾಸುಕಿಯ ತಂಗಿಗೂ 'ಜರತ್ಕಾರು' ಎಂಬ ಹೆಸರು ಬಂದಿರುವದು.



## ೩೯,೪೦ ನೇ ಅಧ್ಯಾಯಗಳು—ಪರೀಕ್ಷಿತನ ಉಪಾಖ್ಯಾನ

ಋಷಿಗಳಿರಾ, ವಾಸುಕಿಯು ತನ್ನ ತಂಗಿಯನ್ನು ಜರತ್ಕಾರುವಿಗೆ ಕೊಡಬೇಕೆಂದು ಆತನನ್ನು ಬಹಳವಾಗಿ ಹುಡುಕಿಸಿದನು; ಆದರೆ ಆ ತಪೋಮಗ್ನ ಋಷಿಯ ಗೊತ್ತು ಹತ್ತಲೊಲ್ಲದು. ಆ ವೇದಾಧ್ಯಯನ ನಿರತ ಋಷಿಯು ಊರ್ಧ್ವರೇತನಾದದ್ದರಿಂದ ವಿವಾಹದ ಇಚ್ಛೆಯಿಲ್ಲದೆ ಸಂಚರಿಸುತ್ತಿದ್ದನು. ಇರಲಿ, ಇನ್ನು ಜನಮೇಜಯನು ಸರ್ಪ ಯಜ್ಞವನ್ನು ಯಾಕೆ ಆರಂಭಿಸಿದನೆಂಬದು ನಿಮಗೆ ಗೊತ್ತಾಗುವದಕ್ಕಾಗಿ ಪರೀಕ್ಷಿತನ ಉಪಾಖ್ಯಾನವನ್ನು ಹೇಳುವೆನು ಕೇಳಿರಿ. ಅಭಿಮನ್ಯುವಿನ ಮಗನೂ, ಪಂಡುರಾಜನ ಮರಿಮಗನೂ ಆದ ಪರೀಕ್ಷಿತನು ಒಮ್ಮೆ ಬೇಟೆಗಾಗಿ ಹೋಗಿದ್ದನು. ಆಗ ಆತನ ಬಾಣದಿಂದ ಗಾಯಹೊಂದಿದ ಒಂದು ಚಿಗರೆಯು ಆತನ ಕೈಮೀರಿಹೋಯಿತು. ಈ ಆಶ್ಚರ್ಯದ ಸಂಗತಿಯೇ ಪರೀಕ್ಷಿತನ ನಾಶದ ಪೂರ್ವಚಿಹ್ನವಾಯಿತೆಂದು ಹೇಳಬಹುದು. ಮುಂದೆ ಪರೀಕ್ಷಿತನು ಆ ಮೃಗವನ್ನು ಬೆನ್ನಟ್ಟಿಪೋದನು. ಆದರೂ ಆ ಮೃಗವು ಆತನ ಕಣ್ಣಿಗೆ ಬೀಳಲಿಲ್ಲ. ಹೀಗೆ ಮೃಗವನ್ನು ಬೆನ್ನಟ್ಟಿದ ರಾಜನು, ಬಹು ದೂರ ಹೋದದ್ದರಿಂದ ಬಹಳವಾಗಿ ದಣಿದು, ವನದಲ್ಲಿ ಒಬ್ಬ ಋಷಿಯ ಸಮೀಪಕ್ಕೆ ಬಂದನು. ಆಗ ಆ ಋಷಿಯು, ಕರುವು ಆಕಳ ಮೊಲೆ ಕುಡಿಯುತ್ತಿರುವಾಗ ಬೀಳುತ್ತಿದ್ದ ಹಾಲ ನೊರೆಯನ್ನು ಕುಡಿಯುತ್ತಿದ್ದನು. ಆಗ ಆ ಘೋರ ತಪಸ್ವಿಯ ಬಳಿಗೆ ಹೋಗಿ ರಾಜನು—"ಇತ್ತ ಓಡಿ ಹೋದ ಒಂದು ಚಿಗರೆಯನ್ನು ನೋಡಿದಿರಾ" ಎಂದು ಕೇಳಿದನು; ಆದರೆ ಮೂಕವ್ರತವನ್ನು ತಾಳಿದ ಆ ಋಷಿಯು ಆ ರಾಜನಿಗೆ ಉತ್ತರವನ್ನು ಕೊಡಲಿಲ್ಲ, ಆತನನ್ನು ಸತ್ಕರಿಸಲೂ ಇಲ್ಲ. ಆಗ ಅರಸನು ಸಿಟ್ಟಾಗಿ ಅಲ್ಲಿಯೇ ಸತ್ತು ಬಿದ್ದಿದ್ದ ಹಾವನ್ನು ತನ್ನ ಕೈಯೊಳಗಿನ ಧನುಸ್ಸಿನ ಅಗ್ರದಿಂದ ಎತ್ತಿ ಋಷಿಯ ಕೊರಳಿಗೆ ಹಾಕಿದನು; ಆದರೂ ಆ ಋಷಿಯು ಮಾತಾಡಲಿಲ್ಲ, ರಾಜನ ಈ ಕೃತಿಯ ಊಹಾಪೋಹವನ್ನೂ ಮಾಡಲಿಲ್ಲ! ಆಗ ಆ ಋಷಿಯ ಈ ಶಾಂತ ವೃತ್ತಿಯನ್ನು ನೋಡಿ ಅರಸನ ಸಿಟ್ಟು ಇಳಿದು, ಆತನು ಉದಾಸೀನನಾಗಿ ತನ್ನ ಪಟ್ಟಣಕ್ಕೆ ಹೊರಟು ಹೋದನು.




ಮೃತಸರ್ಪ ಹಾಕಿದ್ದು.

ನಾವು ಆ ನರಪತಿಯ ರಾಜ್ಯದಲ್ಲಿರುತ್ತಿದ್ದು, ಆತನು ನ್ಯಾಯದಿಂದ ನಮ್ಮನ್ನು ಪರಿಪಾಲಿಸುತ್ತಿರುವಾಗ, ನಾವು ಹೀಗೆ ಆತನ ದ್ರೋಹಮಾಡುವದ ಯೋಗ್ಯವಲ್ಲ. ಆತನ ತಪ್ಪನ್ನು ನಾವು ಹೊಟ್ಟೆಯಲ್ಲಿ ಹಾಕಿಕೊಳ್ಳ ತಕ್ಕದ್ದು. ತವ್ಮಾ, ನಾವು ಧರ್ಮವನ್ನು ನಾಶಗೊಳಿಸಹತ್ತಿದರೆ ಧರ್ಮವು ನಮ್ಮನ್ನು ನಾಶಗೊಳಿಸುವಲ್ಲಿ ಸಂಶಯವಿಲ್ಲ. ಸದ್ಧರ್ಮದ ರಾಜರು ನಮ್ಮ ಸಂರಕ್ಷಣ ಮಾಡುವದರಿಂದಲೇ ನಮ್ಮ ಧರ್ಮಕಾರ್ಯ ಗಳು ನಡೆಯುತ್ತಿರುವವು. ಧಾರ್ಮಿಕ ದೃಷ್ಟಿಯಿಂದ ನೋಡಿದರೆ, ನಾವು ಮಾಡುವ ಧರ್ಮಾಚರಣೆಯಲ್ಲಿ ಅರಸನದೂ ಅಲ್ಪ ಸ್ವಲ್ಪ ಭಾಗವು ಇರು ತ್ತದೆ. ದೇಶದಲ್ಲಿ ಸ್ವಾಮಿಯು ಇಲ್ಲದಾದರೆ, ಅನರ್ಥಗಳುಂಟಾಗುವವು. ಹಸಿವೆ ನೀರಡಿಕೆಗಳಿಂದ ಕಂಗಾಲಾದದ್ದರಿಂದ, ನನ್ನ ಮೂಕವ್ರತವನ್ನ ರಿಯದ ರಾಜನು ಈ ತಪ್ಪು ಮಾಡಿರಬಹುದಾಗಿ ತೋರುತ್ತದೆ. ಅರಸನ ಶಾಸನ-ಭಯದಿಂದ ದುಷ್ಟರ ದುಷ್ಟತನವು ತಗ್ಗಿ, ದೇಶದಲ್ಲಿ ಶಾಂತತೆ ಯುಂಟಾಗುವದು. ನಿನ್ನಂಥ ಉದ್ವಿಗ್ನ ಮನಸ್ಸಿನವರಿಂದ ಯಾವ ಧರ್ಮವೂ ಆಗುವದಿಲ್ಲ, ಯಾವ ಕರ್ಮವೂ ಆಗುವದಿಲ್ಲ. ಅರಸನಿಂದ ಧರ್ಮದ, ಧರ್ಮದಿಂದ ಸ್ವರ್ಗದ ಪ್ರತಿಷ್ಠೆಯಾಗುವದು. ರಾಜನಿಂದ ಯಜ್ಞಕ್ರಿಯೆಗಳು, ಆ ಕ್ರಿಯೆಗಳಿಂದ ದೇವತೆಗಳ ಜೀವನವು, ಆ ದೇವ ತೆಗಳ ಸಂತುಷ್ಟತೆಯಿಂದ ವೃಷ್ಟಿಯು, ವೃಷ್ಟಿಯಿಂದ ಔಷಧಿಗಳು ಉತ್ಪ ನ್ನವಾಗಿ, ಆ ಔಷಧಿಗಳಿಂದ ರಾಜನು ನಿರಂತರ ಪ್ರಜೆಗಳ ಕಲ್ಯಾಣ ಮಾಡುತ್ತಿರುವನು. ರಾಜ್ಯಕರ್ತೃವಾದ ಅರಸನ ಯೋಗ್ಯತೆಯು, ವೇದಾಧ್ಯಯನ ಮಾಡಿದ ಹತ್ತು ಜನ ಬ್ರಾಹ್ಮಣರ ಯೋಗ್ಯತೆಗೆ ಸಮಾ ನವಾದದ್ದೆಂದು ಮನುವು ಹೇಳಿರುವನು ; ಆದ್ದರಿಂದ ರಾಜನಿಗೆ ನಾವು ಯಾವ ಬಗೆಯಿಂದಲೂ ಶಾಪ ಕೊಡಲಾಗದು ; ಯಾಕಂದರೆ, ಆತನ ಯೋಗ್ಯತೆಯೇ ಅಂತಹದು.



## ೪೨ನೇ ಅಧ್ಯಾಯ—ಶೃಂಗಿಗೆ ಶಮೀಕಮುನಿಯ ಉಪದೇಶ.

ತಂದೆಯ ಈ ಮಾತುಗಳನ್ನು ಕೇಳಿ ಶೃಂಗಿಯು—"ಅಪ್ಪಾ, ನಾನು ಮಾಡಿದ ಕೆಲಸವು ಸಾಹಸದ್ದಾಗಿರಲಿ, ದುಷ್ಕೃತ್ಯವಾಗಿರಲಿ; ಅದರಂತೆಯೇ ಅದು ತಮಗೆ ಯೋಗ್ಯವಾಗಿ ತೋರಲಿ, ಅಯೋಗ್ಯವಾಗಿ ತೋರಲಿ; ನನ್ನ ವಾಣಿಯು ಮಾತ್ರ ಎಂದೂ ಅಸತ್ಯವಾಗಲಾರದು. ಅಪ್ಪಾ, ನಾನು ಹುಡುಗಾಟಿಗೆಯಲ್ಲಿಯೂ ಸುಳ್ಳು ಮಾತಾಡದಿರುವಾಗ, ಶಾಪವಚನದಲ್ಲಿ ಹೇಗೆ ಸುಳ್ಳು ಆಡೇನು?" ಅನ್ನಲು, ಶಮೀಕನು— "ಎಲೈ ಮಹಾಮತಿಯೇ, ಇದನ್ನು ನಾನು ಅರಿತಿರುವೆನು; ಆದರೆ ನಿನಗೆ ಕೆಲವು ಮಾತುಗಳನ್ನು ಹೇಳಬೇಕೆಂದು ಇಚ್ಛಿಸುವೆನು; ಹಾಗೆ ಹೇಳುವದು ನನ್ನ ಕರ್ತವ್ಯವೂ ಆಗಿರುವದು. ಮಗನು ದೊಡ್ಡವನಾದರೂ, ಆತನು ಸದ್ಗುಣಿಯೂ, ಮಹಾ ಯಶಸ್ವಿಯೂ ಆಗಬೇಕೆಂದು ಆತನ ತಂದೆಯು ಹಾಗೆ ಉಪದೇಶ ಮಾಡುವದು ಅವನ ಧರ್ಮವಾಗಿರುವದು. ಅದರಲ್ಲ, ನೀನಂತೂ ಸಣ್ಣವನು. ನೀನು ಯಾವಾಗಲೂ ತಪಸ್ಸಿನಲ್ಲಿ ಮಗ್ನನಾಗಿರುತ್ತೀ. ಯೋಗಿಗಳಲ್ಲಿ ಯಾವಾಗಲೂ ಕ್ರೋಧದ ವೃದ್ಧಿಯಾಗುತ್ತಿರುತ್ತದೆ. ಕ್ರೋಧವಂತು ತಪಸ್ಸಿನ ನಾಶಮಾಡುವದಾಗಿರುವದು. ಎಲೈ ಪುತ್ರಾ, ನೀನು ಉತ್ತಮ ಪ್ರಕಾರದ ಧರ್ಮಾಚರಣೆಯುವನಾಗಿದ್ದರೂ, ಸಣ್ಣವನಾದದ್ದರಿಂದ ಅಜ್ಞಾನದ ಮೂಲಕ ಸಾಹಸಿಯಾಗಿರುತ್ತೀ; ಆದ್ದರಿಂದ ಪುತ್ರಪ್ರೇಮದಿಂದ ನಾನು ನಿನಗೆ ಹೇಳುವೆನೇನೆಂದರೆ—ನೀನು ಅರಣ್ಯದೊಳಗಿನ ಫಲಮೂಲಗಳಿಂದ ಉಪಜೀವನವನ್ನು ಸಾಗಿಸುತ್ತ, ಶಾಂತನಾಗಿ ಸಿಟ್ಟನ್ನು ಬಿಡು; ಅಂದರೆ ನಿನ್ನಿಂದ ಧರ್ಮತ್ಯಾಗವಾಗಲಿಕ್ಕಿಲ್ಲವು. ಎಲಾ, ಸ್ವರ್ಗ ಪ್ರಾಪ್ತಿಗಾಗಿ ಸಂಪಾದಿಸತಕ್ಕ ಪುಣ್ಯವು ಅತ್ಯಂತ ಕಷ್ಟ ಸಾಧ್ಯವಾಗಿರುವದು. ಇಂಥ ಕಷ್ಟಸಾಧ್ಯ ಪುಣ್ಯವನ್ನು ಸಂಪಾದಿಸಿದರೂ, ಅದು ಸಿಟ್ಟಿನ ಯೋಗದಿಂದ ನಾಶವಾಗುವದು; ಪುಣ್ಯ ನಾಶವಾಯಿತೆಂದರೆ, ಇಚ್ಛಿಸಿದ ಗತಿಯು ಸಿಗುವದಿಲ್ಲ; ಆದ್ದರಿಂದಲೇ ಯತಿಗಳಿಗೆ ಕ್ಷಮೆಯೂ, ಶಾಂತಿಯೂ ಸಿದ್ಧಿದಾಯಕಗಳಾಗಿರುವವು. ಇಂತಹ ಕ್ಷಮಾಶೀಲ

ನಿಗೆ ಇಹಪರಸುಖಗಳು ಪ್ರಾಪ್ತವಾಗುವವು ; ಆದ್ದರಿಂದ ನೀನು ಕ್ಷಮಾಶೀಲನೂ, ಇಂದ್ರಿಯ ನಿಗ್ರಹಿಯೂ ಆಗುವಂತೆ ಯಾವಾಗಲೂ ನಡೆದುಕೊಳ್ಳು ; ಯಾಕಂದರೆ ಕ್ಷಮೆಯಿಂದಲೇ ಕ್ರಮವಾಗಿ ಬ್ರಹ್ಮಲೋಕದ ವರೆಗೆ ಇರುವ ಯಾವತ್ತು ಲೋಕಗಳು ನಿನಗೆ ಪ್ರಾಪ್ತವಾಗುವವು. ಅಪ್ಪಾ, ನಾನಂತು ಶಾಂತಿಯನ್ನು ಅವಲಂಬಿಸಿ, ಈ ಸಂಬಂಧದಿಂದ ಶಕ್ಯವಾದ ಉಪಾಯವನ್ನು ಮಾಡುವೆನು. ನಿನ್ನ ಶಾಪ ವೃತ್ತಾಂತವನ್ನು ನಾನು ಅರಸನಿಗೆ ತಿಳಿಸುತ್ತೇನೆ. ಆತನು ಶಾಪ ಪರಿಹಾರಕ್ಕೆ ತಕ್ಕ ಉಪಾಯವನ್ನು ಮಾಡಿಕೊಳ್ಳಲಿ.

**ಶಾಪನಿವೇದನ**—ಈ ಮೇರೆಗೆ ನುಡಿದು ಶಮೀಕಮುನಿಯು ಗೌರಮುಖನೆಂಬ ಯೋಗ್ಯ ಶಿಷ್ಯನ ಮುಖಾಂತರವಾಗಿ ಶಾಪದ ವೃತ್ತಾಂತವನ್ನು ಪರೀಕ್ಷಿತರಾಜನಿಗೆ ತಿಳಿಸಿದನು. ಅದನ್ನು ಕೇಳಿ ಪರೀಕ್ಷಿತ ರಾಜನಿಗೆ, "ತಾನು ಅನ್ಯಾಯವಾಗಿ ಬ್ರಾಹ್ಮಣನಮಾನ ಮಾಡಿದೆನೆಂಬ" ವಿಚಾರವು ಮನಸ್ಸಿನಲ್ಲಿ ಬಂದು, ಬಹಳ ವ್ಯಸನವಾಯಿತು. ಆ ಋಷಿಯು ಅಪರಾಧ ಮಾಡಿದ ವರ್ತಮಾನದಿಂದ ಆತನಿಗಾದಷ್ಟು ದುಃಖವು, ತನ್ನ ಮರಣದ ವಾರ್ತೆಯನ್ನು ಕೇಳಿಯೂ ಆತನಿಗಾಗಲಿಲ್ಲ. "ಭಗವಾನ್ ಶಮೀಕ ಮುನಿಗಳು ತಿರುಗಿ ನನ್ನ ಮೇಲೆ ದಯಮಾಡಬೇಕೆಂದು" ಗೌರಮುಖನ ಮುಖಾಂತರ ಅರಸನು ಪ್ರಾರ್ಥಿಸಿ, ಆ ಗೌರಮುಖ ಶಿಷ್ಯನನ್ನು ಸತ್ಕರಿಸಿ ತಿರುಗಿ ಕಳಿಸಿದನು. ಬಳಿಕ ಉದ್ವಿಗ್ನ ಚಿತ್ತನಾದ ಪರೀಕ್ಷಿತರಾಜನು ತನ್ನ ಮಂತ್ರಿಗಳೊಡನೆ ಈ ಸಂಗತಿಯನ್ನು ಕುರಿತು ಆಲೋಚಿಸಿದನು. ಪರೀಕ್ಷಿತನು ಶ್ರೇಷ್ಠಮುತ್ಸದ್ದಿಯು ; ಆತನು ಮಂತ್ರಿಗಳ ಆಲೋಚನೆಯಿಂದ ತನಗೆ ಇರುವದಕ್ಕೆ ಸುರಕ್ಷಿತವಾದ ಒಂಟಿ ಕಂಬದ ಅರಮನೆಯನ್ನು ಕಟ್ಟಿಸಿ ಅಲ್ಲಿಯೇ ಮಂತ್ರಿಗಳೊಡನೆ ಯಾವತ್ತು ರಾಜ್ಯಕಾರಭಾರವನ್ನು ನಡೆಸಹತ್ತಿದನು. ಅಲ್ಲಿಗೆ ಹೋಗಿ ರಾಜ ದರ್ಶನ ಮಾಡಿಕೊಳ್ಳಲು ಯಾರೂ ಸಮರ್ಥರಿದ್ದಿಲ್ಲ. ಬಹಳ ಹೇಳುವದೇನು ? ಆ ದೇಶದಲ್ಲಿ ಸಂಚರಿಸುತ್ತಿದ್ದ ವಾಯುವಿಗೂ ಆ ಮಂದಿರದಲ್ಲಿ ಪ್ರವೇಶಿಸಲಿಕ್ಕೆ ಆಸ್ಪದವಿಲ್ಲದಷ್ಟು ಅದು ಉತ್ತಮ ವ್ಯವಸ್ಥೆ ಮಾಡಿದ್ದಾಗಿತ್ತು. ಇದರಂತೆ ಆರು ದಿವಸಗಳು ಕ್ರಮಿಸಿ, ಏಳನೆಯ ದಿವಸವು ಪ್ರಾಪ್ತವಾಯಿತು.

ಋಷಿಗಳಿರಾ, ಇತ್ತ ಕಾಶ್ಯಪನೆಂಬ ಮಂತ್ರಜ್ಞ-ಬ್ರಾಹ್ಮಣನಿಗೆ ಪರೀಕ್ಷಿತನ ಮರಣದ ಸುದ್ದಿಯು ಹತ್ತಲು, ತನ್ನ ಮಂತ್ರಸಾಮರ್ಥ್ಯದಿಂದ ಪರೀಕ್ಷಿತನನ್ನು ಬದುಕಿಸಬೇಕೆಂದು ಆತನು ಹಸ್ತಿನಾವತಿಗೆ ಹೊರಟನು. ರಾಜನನ್ನು ಬದುಕಿಸುವದರಿಂದ ಧರ್ಮ-ಅರ್ಥಗಳೆರಡೂ ಪ್ರಾಪ್ತವಾಗುವವೆಂದು ಆತನು ತಿಳಿದಿದ್ದನು. ದಾರಿಯು ನಡೆಯುತ್ತಿರುವಾಗ ಇದೇವಿಚಾರವು ಆತನ ಮನಸ್ಸಿನಲ್ಲಿ ಕಟಿಯುತ್ತಿತ್ತು. ಅಷ್ಟರಲ್ಲಿ ಈ ಏಕಾಗ್ರಚಿತ್ತದ ಬ್ರಾಹ್ಮಣನನ್ನು ತಕ್ಷಕನು ನೋಡಿದನು. ತಕ್ಷಕನು ಮುದುಕ ಬ್ರಾಹ್ಮಣನ ವೇಷದಿಂದ ಕಶ್ಯಪನ ಬಳಿಗೆ ಬಂದು—“ತಾವು ಇಷ್ಟು ಅವಸರದಿಂದ ಎಲ್ಲಿಗೆ ಹೊರಟಿರುವಿರಿ ? ಮನಸ್ಸಿನಲ್ಲಿ ಯಾವಕೆಲಸ ಮಾಡುವ ವಿಚಾರವಿದೆ?” ಎಂದು ಕೇಳಲು, ಕಶ್ಯಪನು—“ಎಲೈ ವೃದ್ಧ ಬ್ರಾಹ್ಮಣನೇ, ಕುರುಕುಲೋತ್ಪನ್ನನಾದ ಶತ್ರುಂಜಯ-ಪರೀಕ್ಷಿತರಾಜನನ್ನು ಸರ್ಪರಾಜನಾದ ತಕ್ಷಕನು ತನ್ನ ತೇಜದಿಂದ ಸುಟ್ಟುಬಿಡುವನಂತೆ ! ಆದ್ದರಿಂದ ಅಗ್ನಿಯಂತೆ ತೇಜಸ್ವಿಯಾದ ಆ ಪರೀಕ್ಷಿತರಾಜನನ್ನು ತಕ್ಷಕನು ಕಡಿದಕೂಡಲೆ, ಆ ರಾಜನನ್ನು ನಿರ್ಭಯನಾಗಮಾಡಲು ನಾನು ಅವಸರದಿಂದ ಹೊರಟಿದ್ದೇನೆ,” ಎಂದು ಹೇಳಿದನು. ಅದಕ್ಕೆ ಆ ವೃದ್ಧಬ್ರಾಹ್ಮಣನು—“ಎಲೈ ಬ್ರಾಹ್ಮಣಾ, ರಾಜನನ್ನು ದಗ್ಧಮಾಡುವ ತಕ್ಷಕನು ನಾನೆ ! ಇನ್ನು ನೀನು ತಿರುಗಿಹೋಗು; ಯಾಕಂದರೆ ನಾನು ಕಡಿದರೆ ಅದಕ್ಕೆ ಪ್ರತಿಕಾರಮಾಡಲು ನೀನು ಸಮರ್ಥನಲ್ಲವು,” ಎಂದು ಹೇಳಿದನು. ಅದಕ್ಕೆ ಕಶ್ಯಪನು—“ಎಲಾ, ನನ್ನ ವಿದ್ಯೆಯ ಪ್ರಭಾವವೇ ಅಂತಹದಿರುವದು ; ನೀನು ಕಡಿದಕೂಡಲೆ ನಾನು ರಾಜನನ್ನು ನಿಶ್ಚಯದಿಂದ ನಿರ್ಭಯನಾಗಮಾಡುವೆನು.”



## ೪೩ನೇ ಅಧ್ಯಾಯ—ಕಾಶ್ಯಪನ ಮಂತ್ರಪ್ರಭಾವ

ಈ ಮೇರೆಗೆ ಕಾಶ್ಯಪನು ನುಡಿದದ್ದನ್ನು ಕೇಳಿ ತಕ್ಷಕನು ಬಳಿಯಲ್ಲಿದ್ದ ಒಂದು ಆಲದಮರವನ್ನು ಕಚ್ಚಿದನು. ಕೂಡಲೆ ತಕ್ಷಕನ ಭಯಂಕರ ವಿಷವು ಗಿಡವನ್ನು ವ್ಯಾಪಿಸಿ ಅದನ್ನು ಸುಟ್ಟು ಬೂದಿಯಾಗಮಾಡಿತು !

ಆಗ ಆ ಗಿಡವನ್ನೇರಿದ್ದ ಒಬ್ಬ ಮನುಷ್ಯನೂ ಸುಟ್ಟು ಬೂದಿಯಾದನು. ಬಳಿಕ ಕಾಶ್ಯಪನು ತಕ್ಷಕನಿಗೆ—"ಇನ್ನು ನನ್ನ ಮಂತ್ರಪ್ರಭಾವವನ್ನು ನೋಡು," ಎಂದು ಹೇಳಿ, ಆ ಬೂದಿಯನ್ನೆಲ್ಲ ದುಂಡಗೆ ಮಾಡಿ, ತನ್ನ ಮಂತ್ರಸಾಮರ್ಥ್ಯದಿಂದ ಮೊದಲು ಆ ಬೂದಿಯಲ್ಲಿ ಆಲದ ಅಂಕುರವನ್ನು ಉತ್ಪನ್ನಮಾಡಿ, ಆಮೇಲೆ ಅದಕ್ಕೆ ಎರಡು ಎಲೆಗಳನ್ನು ಒಡಿಸಿದನು ಮುಂದೆ ಅದು ಕ್ರಮವಾಗಿ ದೊಡ್ಡವೃಕ್ಷವಾಗಿ, ಮೊದಲಿನಂತೆ ಮೇಲೆ ಹತ್ತಿದ್ದ ಮನುಷ್ಯನೊಡನೆ ಶೋಭಿಸಹತ್ತಿತು! ಅದನ್ನು ನೋಡಿ ತಕ್ಷಕನು ಕಶ್ಯಪನಿಗೆ—"ಬ್ರಾಹ್ಮಣಶ್ರೇಷ್ಠಾ, ನಿನ್ನ ಪರಾಕ್ರಮವು ಅದ್ಭುತವಾದದ್ದು ನಿಜವು. ನೀನು ಎಂತಹ ವಿಷವನ್ನಾದರೂ ನಿವಾರಿಸಬಲ್ಲೆ; ಆದರೆ ನೀನು ರಾಜನಬಳಿಗೆ ಯಾಕೆ ಹೋಗುವೆ? ನಿನಗೆ ದ್ರವ್ಯವು ಬೇಕಾಗಿದ್ದರೆ ನಾನು ಬೇಕಾದಷ್ಟು ದ್ರವ್ಯಕೊಡುವೆನು, ಅದನ್ನು ತಕ್ಕೊಂಡು ನೀನು ತಿರುಗಿ ಹೋಗು. ಇದರಮೇಲೆಯೂ ನೀನು ನನ್ನ ಮಾತುಮೀರಿ ಅರಸನಬಳಿಗೆ ಹೋದರೆ, ನಿನ್ನ ಹಾನಿಯಾಗುವ ಸಂಭವವಿರುತ್ತದೆ; ಯಾಕಂದರೆ, ಬ್ರಾಹ್ಮಣನ ಶಾಪದಿಂದ ಅರಸನ ಆಯುಷ್ಯವು ತೀರಿರಲು, ಕದಾಚಿತ್ ಆತನು ನಿನ್ನ ಮಂತ್ರಸಾಮರ್ಥ್ಯದಿಂದ ಬದುಕದಿದ್ದರೆ, ನಿನ್ನ ಅಪಕೀರ್ತಿಯಾಗಿ ದ್ರವ್ಯಲಾಭವೂ ತಪ್ಪುವದು," ಎಂದು ಹೇಳಿದನು. ಆಗ ಕಾಶ್ಯಪನು ಸ್ವಲ್ಪಹೊತ್ತು ಧ್ಯಾನಸ್ಥನಾಗಿ ಕುಳಿತು, ಅಂತರ್ದೃಷ್ಟಿಯಿಂದ ಪರೀಕ್ಷಿತನ ಆಯುಷ್ಯವು ತೀರಿರುವುದನ್ನರಿತು, ತಕ್ಷಕನಿಂದ ಹೇರಳ ದ್ರವ್ಯವನ್ನು ಪಡೆದು ಬಂದಹಾಗೆ ತಿರುಗಿ ಹೊರಟುಹೋದನು.

**ಪರೀಕ್ಷಿತನ ಮರಣ**—ಇತ್ತ ಪರೀಕ್ಷಿತನು ಮಾಂತ್ರಿಕರೊಡನೆಯೂ, ಔಷಧಗಳೊಡನೆಯೂ ಬಹುಜಾಗರೂಕತೆಯಿಂದ ಇರುವದನ್ನು ಕೇಳಿ, ತಕ್ಷಕನು ಚಿಂತೆಗೊಳಗಾದನು. ಆತನು ಕೆಲವುಹೊತ್ತು ಯೋಚಿಸಿ ಕೆಲ ಸರ್ಪಗಳಿಗೆ ತಪಸ್ವಿಗಳ ರೂಪ ಧರಿಸಹೇಳಿ, ಆ ಕಪಟತಪಸ್ವಿಗಳ ಕೈಯಲ್ಲಿ ರುಚಿಕರ ಫಲಗಳನ್ನೂ, ದರ್ಭವನ್ನೂ, ಉದಕವನ್ನೂ ಕೊಟ್ಟು, ಇವನ್ನು ಅರಸನು ಸ್ವೀಕರಿಸುವಂತೆ ಬಹುಗಾಂಭೀರ್ಯದಿಂದ ನಡೆದುಕೊಳ್ಳಿರೆಂದು ಹೇಳಿ, ಅವರನ್ನು ಪರೀಕ್ಷಿತರಾಜನ ಬಳಿಗೆ ಕಳಿಸಿದನು. ರಾಜನು ಕಾಲವಶನಾಗಿ ಆ ಫಲಗಳನ್ನು ಸ್ವೀಕರಿಸಿ, ಬ್ರಾಹ್ಮಣರನ್ನು ಸತ್ಕರಿಸಿ ಕಳಿಸಿ

ಕೊಟ್ಟನು. ಋಷಿಗಳಿರಾ, ಬ್ರಹ್ಮಲಿಖಿತವು ಎಂದೂ ತಪ್ಪುವದಿಲ್ಲವು. ಋಷಿಶಾಪದಿಂದಲೂ, ಪ್ರಾರಬ್ಧದಿಂದಲೂ ಬದ್ಧನಾದ ಪರೀಕ್ಷಿತರಾಜನಿಗೆ ಮಂತ್ರಿಗಳೊಡನೆ ಆ ಫಲಗಳನ್ನು ತಿನ್ನುವ ಇಚ್ಛೆಯು ಉಂಟಾಯಿತು. ಕಡೆಗೆ ತಕ್ಷಕನು ಸಣ್ಣಹುಳವಾಗಿ ಒಳಗೆ ಕುಳಿತುಕೊಂಡಿದ್ದ ಹಣ್ಣನ್ನೇ ರಾಜನು ತಾನು ತಕ್ಕೊಂಡು, ಉಳಿದ ಹಣ್ಣುಗಳನ್ನು ಮಂತ್ರಿಗಳಿಗೆ ಕೊಟ್ಟನು. ರಾಜನು ಹಣ್ಣನ್ನು ತಿನ್ನುತ್ತಿರಲು, ಅದರಲ್ಲಿ ಒಂದು ಹುಳವು ಕಣ್ಣಿಗೆ ಬಿದ್ದಿತು. ಅದು ಗಿಡ್ಡಇದ್ದು ಅದರ ಬಣ್ಣವು ಕೆಂಪುಇತ್ತು. ಅದರ ಕಣ್ಣುಗಳು ಕಪ್ಪಾಗಿದ್ದವು. ಅದನ್ನು ರಾಜನು ಕೈಯಲ್ಲಿಟ್ಟು ಕೊಂಡು ಮಂತ್ರಿಗಳನ್ನು ಕುರಿತು—"ಮಂತ್ರಿಗಳಿರಾ, ಇಂದು ಏಳನೆಯ ದಿವಸವು, ಸೂರ್ಯನು ಅಸ್ತವಾಗತೊಡಗಿರುವನು ; ಆದರೂ ನನಗೆ ವಿಷ ಬಾಧೆಯು ಉಂಟಾಗಿರುವದಿಲ್ಲ; ಆದ್ದರಿಂದ ಈ ಹುಳವೇ ತಕ್ಷಕನಾಗಿ ನನ್ನನ್ನು ಕಡಿದು ಮುನಿವಾಕ್ಯವನ್ನು ಸತ್ಯವಾಗಿ ಮಾಡಲಿ; ಅಂದರೆ ಬ್ರಾಹ್ಮಣನ ಅಪಮಾನಮಾಡಿದ ದೋಷದಿಂದ ನಾನು ಮುಕ್ತನಾಗುವೆನು," ಅಂದನು. ಅರಸನ ಈ ಮಾತುಗಳಿಗೆ ಕಾಲಪ್ರೇರಣೆಯಿಂದ ಮಂತ್ರಿಗಳೂ ಒಪ್ಪಿಕೊಂಡರು. ಋಷಿಗಳಿರಾ, ಪರೀಕ್ಷಿತರಾಜನು ಮರಣೋನ್ಮುಖನಾದದ್ದರಿಂದ ಆತನ ಮೈಮೇಲಿನ ಎಚ್ಚರವು ತಪ್ಪಿತ್ತು. ಆತನು ಆನಂದದಿಂದ ನಗನಗುತ್ತ ಆ ಹುಳವನ್ನು ಕೈಯಿಂದ ಹಿಡಿದು, ತನ್ನ ಕುತ್ತಿಗೆಯ ಮೇಲೆ ಇಟ್ಟನು. ಕೂಡಲೆ ಆ ಹುಳದ ರೂಪಧರಿಸಿದ್ದ ತಕ್ಷಕನು ತನ್ನ ಭಯಂಕರವಾದ ನಿಜರೂಪವನ್ನು ಧರಿಸಿ, ಅರಸನ ಮೈಗೆ ಸುತ್ತುಹಾಕಿ ಗರ್ಜಿಸಿ ಆ ಪೃಥ್ವೀಪಾಲಕ ಪರೀಕ್ಷಿತನನ್ನು ಯಥೇಚ್ಛವಾಗಿ ಕಡಿದನು. ಕೂಡಲೆ ಆ ಏಕಸ್ತಂಭದ ಮಂದಿರವು ಸುಡಹತ್ತಿ, ರಾಜನು ನೆಲಕ್ಕೆಬಿದ್ದನು. ಮಂತ್ರಿಗಳೂ, ಮಾಂತ್ರಿಕರೂ ಪಾರಿಸಿಕ್ಕತ್ತ ಓಡಿಹೋದರು.



## ೪೪ನೇ ಅಧ್ಯಾಯ—ಜನಮೇಜಯನಿಗೆ ರಾಜ್ಯಾಭಿಷೇಕ

ಪರೀಕ್ಷಿತನ ಮರಣದಿಂದ ಎಲ್ಲರೂ ದುಃಖಿತರಾದರು. ಬಳಿಕ ಆ ಮೃತರಾಜನಿಗೆ ಉತ್ತಮಲೋಕವು ಪ್ರಾಪ್ತವಾಗಬೇಕೆಂದು ರಾಜಪುರೋ

ಹಿತರೂ, ಬ್ರಾಹ್ಮಣರೂ, ಯಾವತ್ತು ಮಂತ್ರಿಗಳೂ ಉತ್ತಮ ಕರ್ಮಗಳನ್ನು ಮಾಡಿ, ಕರ್ತವ್ಯ ಮುಕ್ತರಾದರು. ಬಳಿಕ ಯಾವತ್ತು ನಗರವಾಸಿ ಜನರು ಏಕಮತದಿಂದ ಪರೀಕ್ಷಿತನ ಮಗನಾದ ಜನಮೇಜಯನಿಗೆ ಪಟ್ಟವನ್ನು ಕಟ್ಟಿದರು. ಜನಮೇಜಯನು ವಯಸ್ಸಿನಿಂದ ಸಣ್ಣವನಾಗಿದ್ದರೂ ಬುದ್ಧಿಯಿಂದ ದೊಡ್ಡವನಾಗಿದ್ದನು. ಆತನು ತನ್ನ ತಂದೆಯಕಾಲದ ಮಂತ್ರಿಗಳ ಸಹಾಯದಿಂದ ರಾಜ್ಯಕಾರ್ಭಾರವನ್ನು ನಡಿಸಿದನು. ಆತನು ಪ್ರೌಢನಾದಬಳಿಕ ಮಂತ್ರಿಗಳು ಕಾಶೀರಾಜನ ಮಗಳಾದ 'ವಪುಷ್ಟಮೆ' ಯೆಂಬ ಗುಣವತಿಯಾದ ಸುಂದರಿಯೊಡನೆ ಆತನ ವಿವಾಹವನ್ನು ಮಾಡಿದರು ಜನಮೇಜಯನು ಅತ್ಯಂತ ಸದಾಚಾರಿಯು. ಪರಸ್ತ್ರೀಯರನ್ನು ಪಾಪದೃಷ್ಟಿಯಿಂದ ನೋಡದವನು. ಪೂರ್ವದಲ್ಲಿ ಪುರೂರವರಾಜನು ಊರ್ವಶಿಯೊಡನೆ ವಿಹಾರಮಾಡಿದಂತೆ, ವಪುಷ್ಟಮೆಯೊಡನೆ ಜನಮೇಜಯನು ವಿಹಾರ ಮಾಡಿದನು.



## ೪೫ನೇ ಅಧ್ಯಾಯ—ಜರತ್ಕಾರು–ಪಿತೃಸಂವಾದ

ಹೀಗೆ ಜನಮೇಜಯನು ಪ್ರಜೆಗಳನ್ನು ಮಕ್ಕಳಂತೆ ಪಾಲಿಸುತ್ತ, ವಪುಷ್ಟಮೆಯೊಡನೆ ವಿಹರಿಸುತ್ತ ಸರ್ವಪ್ರಿಯನಾಗಿ ಕಾಲಹರಣ ಮಾಡುತ್ತಿರಲು, ಎರಡನೆಯಕಡೆಗೆ ಬೇರೆಯೊಂದು ಸಂಗತಿಯು ಒದಗಿತು. ಋಷಿಗಳಿರಾ, ಜರತ್ಕಾರು ಎಂಬ ಮಹಾತಪಸ್ವಿಗೆ ವಾಸುಕಿಯು ತನ್ನ ತಂಗಿಯನ್ನು ಕೊಡಬೇಕೆಂದು ನಿಶ್ಚಯಿಸಿ, ಆ ಜರತ್ಕಾರುವನ್ನು ಹುಡುಕಲಿಕ್ಕೆ ಸರ್ಪಗಳನ್ನು ನಿಯಮಿಸಿದನೆಂದು ಹಿಂದೆ ಹೇಳಿದ್ದು ನಿಮ್ಮ ಸ್ಮರಣದಲ್ಲಿರಬಹುದು. ಈಗ ಜರತ್ಕಾರುವಿನ ವೃತ್ತಾಂತವನ್ನು ನಿಮಗೆ ಹೇಳುವೆನು ಕೇಳಿರಿ. ಆ ಭಗವಾನ್ ಜರತ್ಕಾರುವಿನ ಅಧಿಕಾರವನ್ನೇನು ವರ್ಣಿಸುವದು ? ಆ ಊರ್ಧ್ವರೇತಸನಲ್ಲಿ ಬ್ರಹ್ಮದೇವನಂತಹ ಲೋಕೋತ್ತರ ಸಾಮರ್ಥ್ಯವು ಇತ್ತು. ಆತನು ಕಠಿಣತರ ಬ್ರಹ್ಮಚರ್ಯವನ್ನು ಪಾಲಿಸುತ್ತಿದ್ದನು. ಆತನು ಮಿತಾಹಾರಿಯು, ಸದಾ ತಪೋಮಗ್ನನು. ಒಂದು ಗ್ರಾಮದಲ್ಲಿ ಒಂದೇರಾತ್ರಿ ಇರುವ 'ಯಯಾವರ' ಎಂಬ ಹೆಸರಿನ ಬ್ರಾಹ್ಮಣ

ರಲ್ಲಿ ಆತನು ಪ್ರಮುಖನಾಗಿದ್ದನು. ಆತನು ವಾಯುಭಕ್ಷಣದಿಂದ ತನ್ನ ಚರಿತಾರ್ಥವನ್ನು ಸಾಗಿಸುತ್ತಿದ್ದದ್ದರಿಂದ, ಅತ್ಯಂತ ಕೃಶನಾಗಿದ್ದನು. ಹೊತ್ತುಮುಣುಗಿದಲ್ಲಿ ಇಳಿದುಕೊಳ್ಳುವದು ಆತನ ನಿಯಮವಾಗಿತ್ತು. ಹೀಗೆ ಆತನು ಪುಣ್ಯಕರ ತೀರ್ಥಕ್ಷೇತ್ರಗಳ ಪರ್ಯಟನಮಾಡುತ್ತ ಸಾಗಿರುವಾಗ, ಒಂದು ಭಯಂಕರವಾದ ತಗ್ಗು ಆತನ ಕಣ್ಣಿಗೆ ಬಿದ್ದಿತು. ಅದರಲ್ಲಿ ಆತನ ಪಿತೃಗಳು ಒಂದು ಕರಿಕೆಯ ಬೇರಿನ ಆಧಾರದಿಂದ ತಲೆಕೆಳಗಾಗಿ ಜೋತಾಡುತ್ತಿದ್ದರು. ಅಲ್ಲಿಯೇ ಹೋರಿನಲ್ಲಿದ್ದ ಒಂದು ಇಲಿಯು ಆ ಕರಿಕೆಯ ಬೇರನ್ನು ಮೆಲ್ಲಮೆಲ್ಲನೆ ಕತ್ತರಿಸುತ್ತಲಿತ್ತು. ಆಹಾರವಿಲ್ಲದ್ದರಿಂದ ಆ ಪಿತೃಗಳು ಅತ್ಯಂತಕೃಶರೂ, ತಗ್ಗಿನಲ್ಲಿ ಬೀಳುವೆನೆಂಬ ಅಂಜಿಕೆಯಿಂದ ಅತ್ಯಂತ ದೀನರೂ ಆಗಿದ್ದರು. ಅವರನ್ನು ನೋಡಿ ಜರತ್ಕಾರುವು ದಯಾಪರನಾಗಿ ಅವರಬಳಿಗೆ ಹೋಗಿ—“ ಅಹೋ! ನೀವು ಯಾರು? ನಿಮ್ಮನ್ನು ನೋಡಿ ನನಗೆ ಬಹಳ ಕಷ್ಟವಾಗುತ್ತದೆ. ನಿಮಗೆ ಒಂದೇ ಒಂದು ಕ್ಷುದ್ರ ಆಧಾರವಾಗಿರುವ ಈ ಕರಿಕೆಯಬೇರನ್ನು ಒಂದು ಇಲಿಯು ಕಡಿಯುತ್ತಿರುವದರಿಂದ, ನೀವು ಬೇಗನೆ ತಗ್ಗಿನಲ್ಲಿ ಬೀಳಬಹುದಾಗಿದೆ; ಆದ್ದರಿಂದ ನಿಮ್ಮನ್ನು ಈ ಸ್ಥಿತಿಯಿಂದ ಉದ್ಧರಿಸಲಿಕ್ಕೆ ನಾನು ಏನುಮಾಡಲಿ ಹೇಳಿರಿ. ನಿಮ್ಮ ಉದ್ಧಾರಕ್ಕಾಗಿ ನನ್ನ ತಪಸ್ಸಿನ ಭಾಗವನ್ನು, ಅಥವಾ ಎಲ್ಲ ತಪಸ್ಸನ್ನು ಕೊಡಲು ನಾನು ಸಿದ್ಧನಿದ್ದೇನೆ”

ಜರತ್ಕಾರುವಿನ ಈ ಮಾತುಗಳನ್ನು ಕೇಳಿ ಆತನ ಪಿತೃಗಳು-“ವಿಪ್ರಶ್ರೇಷ್ಠಾ, ನೀನು ಬ್ರಹ್ಮಚಾರಿಯಿದ್ದು ವೃದ್ಧನಾಗಿರುವೆ; ನಿನ್ನ ತಪಶ್ಚರ್ಯದ ಫಲವನ್ನೆಲ್ಲಕೊಟ್ಟು ನಮ್ಮನ್ನು ಮುಕ್ತಮಾಡಲಿಚ್ಛಿಸುವೆ; ಆದರೆ ತಪಸ್ಸಿನ ಫಲದಿಂದ ನಮ್ಮ ಉದ್ಧಾರವಾಗುವಹಾಗಿಲ್ಲ; ಯಾಕೆಂದರೆ ನಮ್ಮ ಘೋರತಪಸ್ಸೂ ನಮ್ಮನ್ನು ಉದ್ಧಾರಮಾಡದಾಗಿದೆ. ನಮ್ಮ ಸಂತತಿಯ ವೃದ್ಧಿಯಾಗದೆ ನಮ್ಮ ಉದ್ಧಾರವಾಗುವಹಾಗಿಲ್ಲ. ಅಗೋ, ಅಲ್ಲಿ ತಗ್ಗಿನ ದಂಡೆಯಮೇಲೆ ಒಂದು ಕರಿಕೆಯ ಗಡ್ಡೆ ಇರುವದಲ್ಲ, ಅದೇ ನಮ್ಮ ವಂಶವೃಕ್ಷವು. ಅದರ ಹರಿದ ಬೇರುಗಳೆಂದರೆ, ಕಾಲನಯೋಗದಿಂದ ಈವರೆಗೆ ನಾಶಹೊಂದಿರುವ ನಮ್ಮ ವಂಶಜರು. ಈಗ ಉಳಿದಿರುವ

ಒಂದು ಬೇರು, ನಮ್ಮ ವಂಶದ ಒಂದೇಒಂದು ಒಂದೇ ಆಧಾರವಾಗಿರುವ ಜರತ್ಕಾರು ಎಂಬ ಸಂತತಿಯು. ಆ ಸಂತತಿಯ ಆಧಾರದಿಂದಲೇ ಈಗ ನಾವು ತೂಗಾಡುತ್ತಿರುವೆವು. ಆ ಸಂತತಿಯ ಆಯುಷ್ಯವನ್ನು ಕಾಲ ರೂಪನಾದ ಆ ಇಲಿಯು ಮೆಲ್ಲಮೆಲ್ಲನೆ ಕ್ಷೀಣಮಾಡುತ್ತಿರುವದು; ಆದ್ದರಿಂದ ನಾವು ಯಾವಾಗ ತಗ್ಗಿನಲ್ಲಿ ಬಿದ್ದೇವೆಂಬದರ ನಿಯಮವಿಲ್ಲ. ಸಂತಾನವಿರುವದು ಅತ್ಯಂತ ಪುಣ್ಯಕಾರಕವೆಂದು ಬ್ರಹ್ಮದೇವನು ಹೇಳಿರುವನು. ಆ ಪುಣ್ಯವನ್ನು ಎಂತಹ ತಪಸ್ಸಿನ ಪುಣ್ಯವೂ ಸರಿಗಟ್ಟ ಲಾರದು. ಸಂತಾನಕ್ಷಯದ ಮೂಲಕ ನಮ್ಮ ಪುಣ್ಯವು ಕ್ಷೀಣವಾಗಿ, ನಾವು ಈ ಗತಿಯನ್ನು ಹೊಂದಿರುವೆವು. ನಮ್ಮ ವಂಶದ ಆಧಾರಸ್ತಂ ಭರೂಪ ಜರತ್ಕಾರುವಂತು ಮಂದನೂ, ಮೂಢಮತಿಯೂ, ತಪೋ ಲೋಭಿಯೂ, ವಿಚಾರಶೂನ್ಯನೂ ಆಗಿರುವನು. ಆತನು ಎಲ್ಲಿಯಾದರೂ ನಿನ್ನ ಕಣ್ಣಿಗೆ ಬಿದ್ದರೆ, ನಮ್ಮ ಸ್ಥಿತಿಯನ್ನು ಹೇಳಿ, ಬೇಗನೆ ಲಗ್ನವಾಗಿ ಸಂತತಿ ಪಡೆದು ನಮ್ಮನ್ನು ಉದ್ಧರಿಸೆಂದು ಆತನಿಗೆ ಬೋಧಿಸು; ಇಲ್ಲ ದಿದ್ದರೆ ನಮ್ಮೊಡನೆ ಜರತ್ಕಾರುವೂ ಘೋರ ನರಕದಲ್ಲಿ ಬೀಳಬೇಕಾಗು ವದು. ಅಪ್ಪಾ, ತಪಸ್ಸು, ಯಜ್ಞ, ಬೇರೆ ಪವಿತ್ರ ಕರ್ಮಗಳು ಉತ್ತ ಮವಿದ್ದರೂ ಅವು ಸಂತತಿಯನ್ನು ಸರಿಗಟ್ಟಲಾರವು; ಆದರೆ ಬ್ರಾಹ್ಮಣ ಶ್ರೇಷ್ಠಾ, ನಮ್ಮನ್ನು ಸಲುವಾಗಿ ಇಷ್ಟು ಕನಿಕರಪಡುವ ನೀನು ಯಾರೆಂಬ ದನ್ನು ನಮಗೆ ಹೇಳು ನಿಜವಾಗಿಯೂ ನೀನು ನಮ್ಮ ಬಂಧುವಾಗಿ ರಬಹುದೇನು?

ಪಿತೃಗಳ ಈ ಮಾತುಗಳನ್ನು ಕೇಳಿ ಜರತ್ಕಾರುವಿನ ಕಣ್ಣಲ್ಲಿ ನೀರು ಬಂದವು. ದುಃಖದಿಂದ ಆತನ ಕುತ್ತಿಗೆಯ ಶಿರಗಳುಬಿಗಿದು, ಗದ್ಗದ ವಾಣಿಯಿಂದ ಆತನು ತನ್ನ ಪಿತೃಗಳನ್ನು ಕುರಿತು—

ಜರತ್ಕಾರು—ಪಿತೃಗಳೇ, ನಿಮ್ಮ ವಂಶಜನಾದ ಪಾಪಿ ಜರತ್ಕಾ ರುವು ನಾನೇ. ನನ್ನ ಅಪರಾಧಕ್ಕಾಗಿ ತಾವು ಬೇಕಾದ ಶಾಸನಮಾಡಬ ಹುದು. ಈಗ ನಿಮಗೆ ಪ್ರಿಯವಾಗುವಂತೆ ಏನುಮಾಡಲಿ, ಅಪ್ಪಣೆ ಮಾಡಿರಿ.

ಪಿತೃಗಳು—ತಮ್ಮಾ, ಅಕಸ್ಮಾತ್ತಾಗಿ ನೀನು ಇಲ್ಲಿಗೆ ಬಂದದ್ದು ಬಹಳ ನೆಟ್ಟಗಾಯಿತು. ನೀನು ಈವರೆಗೆ ಲಗ್ನವನ್ನು ಯಾಕೆ ಮಾಡಿಕೊಂಡಿರುವದಿಲ್ಲ?

ಜರತ್ಕಾರು—ಪಿತೃಗಳೇ, ಊರ್ಧ್ವರೇತ ಸ್ಥಿತಿಯಿಂದಲೇ ಪರಲೋಕಪ್ರಾಪ್ತಿಯನ್ನು ಮಾಡಿಕೊಳ್ಳಬೇಕೆಂದು ತಿಳಿದು, ನಾನು ಈವರೆಗೆ ಲಗ್ನಮಾಡಿಕೊಂಡಿರುವದಿಲ್ಲ; ಆದರೆ ನಿಮ್ಮ ಈ ಸ್ಥಿತಿಯನ್ನು ನೋಡಿ ನನ್ನ ವಿಚಾರವು ತಿರುಗಿತು. ನಿಮ್ಮ ಸಲುವಾಗಿ ನಾನು ಲಗ್ನಮಾಡಿಕೊಳ್ಳುವೆನು, ಆದರೆ ನನ್ನ ಮೂರು ನಿಯಮಗಳಿರುವವು.—೧ ನನ್ನ ಹೆಸರಿನ ವಧುವೇ ನನಗೆ ಪ್ರಾಪ್ತವಾಗಬೇಕು. ೨ ಆ ವಧುವನ್ನಾದರೂ ಭಿಕ್ಷಾರೂಪದಿಂದ ನನಗೆ ಒಪ್ಪಿಸಬೇಕು. ೩ ಆ ವಧುವಿನ ಸಂರಕ್ಷಣದ ಭಾರವು ನನ್ನ ಮೇಲೆ ಬೀಳಬಾರದು. ಈ ಮೂರು ನಿಯಮಗಳಿಗನುಸರಿಸಿ ನನಗೆ ಕನ್ಯಾಪ್ರಾಪ್ತಿಯಾದರೆ, ನಾನು ಲಗ್ನಮಾಡಿಕೊಳ್ಳುವೆನು. ಇದರಂತೆ ಯೋಗವು ಒದಗಿಬಂದರೆ, ನನಗಾಗುವ ಸಂತತಿಯಿಂದ ನಿಮ್ಮ ಉದ್ಧಾರವಾಗುವದು. ಅಲ್ಲಿಯವರೆಗೆ ನೀವು ಸ್ವಸ್ಥವಾಗಿ ಇರಬೇಕು.

ಈ ಶೋಧೆಗೆ ನಡೆದು ಜರತ್ಕಾರುವು ಕನ್ಯಾರ್ಥಿಯಾಗಿ ಪೃಥ್ವಿಯಲ್ಲಿ ಸಂಚರಿಸತೊಡಗಿದನು. ಆದರೆ ನಾಮಧಾರಕನಾದ ಆತನಿಗೆ ಹೆಂಡತಿಯು ದೊರಕದಾದಳು. ಆಗ ಆತನು ಅತ್ಯಂತ ದುಃಖದಿಂದ ಅರಣ್ಯಮಧ್ಯದಲ್ಲಿ ಹೋಗುತ್ತ ಗಿಲ್ಲಿಸಿ ತನ್ನ ಆ ಮೂರು ನಿಯಮಗಳನ್ನು ಉಚ್ಚರಿಸಿ, "ಪಿತೃಗಳ ಹಿತಕ್ಕಾಗಿ ಲಗ್ನಮಾಡಿಕೊಳ್ಳುತ್ತಿರುವ ನನಗೆ ಯಾರಾದರೂ ಕನ್ಯೆಯನ್ನು ಕೊಡಿರಿ" ಎಂದು ಗಿಲ್ಲಿಸಿ ಮೂರುಸಾರೆ ನುಡಿದನು. ಆತನ ಆ ಮಾತುಗಳು ಅಕಸ್ಮಾತ್ತಾಗಿ ವಾಸುಕಿಯು ನಿಯಮಿಸಿದ್ದ ಸರ್ಪಗಳ ಕಿವಿಗೆ ಬೀಳಲು, ಅವು ಕೂಡಲೆ ವಾಸುಕಿಯ ಬಳಿಗೆ ಹೋಗಿ ಆ ಸುದ್ದಿಯನ್ನು ಹೇಳಿದವು. ಆಗ ಸರ್ಪರಾಜನಾದ ವಾಸುಕಿಯು ತನ್ನ ತಂಗಿಯನ್ನು ವಸ್ತ್ರಾಲಂಕಾರಗಳಿಂದ ಅಲಂಕರಿಸಿ, ಆಕೆಯನ್ನು ಸಂಗಡ ಕರೆಕೊಂಡು ಹೋಗಿ ಜರತ್ಕಾರು ಋಷಿಗೆ ಒಪ್ಪಿಸಿದನು. ಆದರೆ ತನ್ನ ನಿಯಮಗಳಿಗನುಸರಿಸಿ ಕನ್ಯಾಪ್ರಾಪ್ತಿಯಾಗಿರುವದೋ ಇಲ್ಲವೋ ಎಂಬ ಸಂಶಯದಿಂದ ಜರತ್ಕಾರುಋಷಿಯು ಕನ್ಯೆಯನ್ನು ಸ್ವೀಕರಿಸದಾದನು. ಆಗ

ವಾಸುಕಿಯು ಎಲ್ಲ ಸಂಗತಿಯನ್ನು ಸ್ಪಷ್ಟವಾಗಿ ಹೇಳಲು, ಜರತ್ಕಾರು ವಧುವಿನೊಡನೆ ಜರತ್ಕಾರುಋಷಿಯ ಲಗ್ನವಾಯಿತು ; ಆದರೆ ಲಗ್ನವಾಗುವ ಮೊದಲು ಜರತ್ಕಾರು ಋಷಿಯು ತನ್ನ ನಾಲ್ಕನೆಯದೊಂದು ನಿಯಮವನ್ನು ಹೇಳಿದ್ದನು. "ನನ್ನ ಹೆಂಡತಿಯಾದ ಜರತ್ಕಾರುವು ನನಗೆ ಸೇರದಂಥ ಕೆಲಸಮಾಡಿದಕೂಡಲೆ ನಾನು ಆಕೆಯನ್ನು ಬಿಟ್ಟುಹೋಗುವೆನೆಂ"ಬುದು ಆತನ ಆ ನಾಲ್ಕನೆಯ ನಿಯಮವಾಗಿತ್ತು. ಮೋಕ್ಷಾಪೇಕ್ಷಿಗಳಾದ ಮುಮುಕ್ಷುಗಳಿಗೆ ಸಂಸಾರವು ಬಂಧಕವಾದದ್ದರಿಂದ, ಜರತ್ಕಾರುವು ಹೀಗೆ ನಿರ್ಬಂಧಿಸಿದ್ದು ಆಶ್ಚರ್ಯವಲ್ಲ; ಅದರಂತೆ, ಕಾರ್ಯಾರ್ಥಿಯಾದ ವಾಸುಕಿಯು ಆ ನಿರ್ಬಂಧವನ್ನು ಸಮ್ಮತಿಸಿದ್ದೂ ಆಶ್ಚರ್ಯವಲ್ಲ !

ವಿವಾಹಾನಂತರ ಜರತ್ಕಾರು ಋಷಿಯು, ತನ್ನ ಹೆಂಡತಿಯೊಡನೆ ವಾಸುಕಿಯು ನಿಯಮಿಸಿಕೊಟ್ಟ ಮನೋಹರ ಮಂದಿರದಲ್ಲಿ ವಾಸಿಸ ಹತ್ತಿದನು. ಆತನು ತನ್ನ ಹೆಂಡತಿಯನ್ನು ಕುರಿತು—" ನಾನು ಇಲ್ಲಿ ಇರುವೆನು ನಿಜವು; ಆದರೆ ನನ್ನ ಇಚ್ಛೆಯ ವಿರುದ್ಧವಾಗಿ ನೀನು ಏನೂ ಮಾಡಲಾಗದು ; ಮತ್ತು ಮಾತಾಡಲೂ ಆಗದು. ನೀನು ಹಾಗೆ ಮಾಡಿದ ದಿವಸ ನಾನು ಮನೆ ಬಿಟ್ಟು ಹೋಗುವವನು. ಈ ಮಾತನ್ನು ನೀನು ಲಕ್ಷದಲ್ಲಿಡು, " ಎಂದು ಹೇಳಿದನು. ಪತಿಯ ಈ ಮಾತುಗಳನ್ನು ಕೇಳಿ ಜರತ್ಕಾರುವಿನ ಮನಸ್ಸು ದುಃಖಿತವಾಯಿತು ; ಆದರೂ ಆ ಪತಿವ್ರತೆಯು ಹಾಗೆಯೇ ಆಗಲೆಂದು ಹೇಳಿ, ಬಹು ಜಾಗರೂಕತೆಯಿಂದ ಪತಿಯನ್ನು ಸೇವಿಸತೊಡಗಿದಳು. ಋಷಿಗಳಿರಾ, ಪತಿಯು ದುಃಖದಾಯಕನಾಗಿದ್ದರೂ ಜರತ್ಕಾರುವು ತನ್ನ ಸೇವೆಯಲ್ಲಿ ಅಂತರಿಸುತ್ತಿದ್ದಿಲ್ಲ. ಆಕೆಯು ನಾಯಿಯಂತೆ ಪತಿ ಸೇವೆಯಲ್ಲಿ ಜಾಗರೂಕಳು, ಚಿಗರೆಯಂತೆ ಅಲ್ಪ ಸಂಗತಿಯಿಂದಲೂ ಭಯ ಚಕಿತಳು, ಕಾಗೆಯಂತೆ ಪತಿಯ ಇಂಗಿತವನ್ನು ತಿಳಿದುಕೊಳ್ಳುವವಳು ಆಗಿದ್ದಳು. ಹೀಗೆ ಆಕೆಯು ಉತ್ತಮ ರೀತಿಯಿಂದ ಪತಿಸೇವೆಯನ್ನು ಮಾಡುತ್ತಿರುವಾಗ, ಕೆಲವು ದಿವಸಗಳಮೇಲೆ ಆಕೆಗೆ ಋತುವು ಪ್ರಾಪ್ತವಾಯಿತು. ಯೋಗ್ಯದಿವಸದಲ್ಲಿ ಆಕೆಯು ಶುದ್ಧಳಾದ ಬಳಿಕ ಪತಿಸೇವಾತತ್ಪರಳಾಗಿರುವಾಗ, ಆಕೆಯಲ್ಲಿ ಜರತ್ಕಾರು ಋಷಿಯು ಅಗ್ನಿಯಂತೆ ಅತ್ಯಂತ ತೇಜಸ್ವಿಯಾದ ಗರ್ಭವನ್ನು ಸ್ಥಾಪಿಸಿದನು.

**ಜರತ್ಕಾರು ನಿರ್ಗಮನ**—ಮುಂದೆ ಒಂದಾನೊಂದು ದಿವಸ ಆ ಕೀರ್ತಿವಂತನಾದ ಜರತ್ಕಾರುವು ದಣಿದವನಾಗಿ ತನ್ನ ಹೆಂಡತಿಯ ತೊಡೆಯಮೇಲೆ ತಲೆಯಿಟ್ಟು ಮಲಗಿಕೊಂಡು ನಿದ್ದೆಹೋದನು. ಸಂಧ್ಯಾಕಾಲವು ಪ್ರಾಪ್ತವಾದರೂ ಆತನಿಗೆ ಎಚ್ಚರವಾಗಲೊಲ್ಲದು. ಆಗ ಆ ಪತಿವ್ರತೆಯು ಚಿಂತಿಸತೊಡಗಿದಳು ತನ್ನ ಪತಿಯು ಏನಾದರೂ ನೆವ ಮಾಡಿ ತನ್ನನ್ನು ಅಗಲಿ ಹೋಗುವ ನಿಶ್ಚಯ ಮಾಡಿರುವದರಿಂದ, ಈಗ ಹೇಗೆ ಮಾಡಬೇಕೆಂಬದು ಆಕೆಗೆ ತಿಳಿಯದಾಯಿತು. ಪತಿಯನ್ನು ಎಬ್ಬಿಸದಿದ್ದರೆ ಸಂಧ್ಯಾಕಾಲದ ಕರ್ಮಗಳು ನಡೆಯದೆ ಧರ್ಮಲೋಪವಾಗುತ್ತಿತ್ತು. ಪತಿಯನ್ನು ಎಬ್ಬಿಸಿದರೆ, ಯಾಕೆ ಎಬ್ಬಿಸಿದೆ ಯೆಂದು ಪತಿಯು ಸಿಟ್ಟಾಗುವ ಸಂಭವವಿತ್ತು. ಆದ್ದರಿಂದ ಆ ಸಾಧ್ವಿಯು, ಏನು ಮಾಡಿದರೆ ಪತಿಯು ಸಿಟ್ಟಾಗಲಿಕ್ಕಿಲ್ಲವೆಂದು ಯೋಚಿಸುವಾಗ, ಪತಿಯ ಕೋಪಕ್ಕಿಂತ ಪತಿಯ ಧರ್ಮ ಲೋಪವಾಗದಿರುವದೇ ಯೋಗ್ಯವೆಂದು ತಿಳಿದು, ಆಕೆಯು ಪತಿಯನ್ನು ಕುರಿತು—"ಮಹಾರಾಜ, ಭಗವನ್, ಸೂರ್ಯನಾರಾಯಣನು ಅಸ್ತಾಚಲವನ್ನು ಕುರಿತು ತೆರಳುತ್ತಿರುವನು. ಅಗ್ನಿಗೆ ಹೋಮವನ್ನು ಅರ್ಪಿಸುವ ಸಮಯವಾಗಿದ್ದು, ಅಲ್ಲಲ್ಲಿ ಅಗ್ನಿಯು ಕಾಣತೊಡಗಿರುವನು. ಈ ಕಾಲವು ಭೂತ ಪಿಶಾಚಗಳ ಸಂಚಾರದ್ದಾದ್ದರಿಂದ ಭಯಂಕರವಾಗಿದ್ದರೂ, ಧರ್ಮಸಾಧನಕ್ಕೆ ಯೋಗ್ಯವಾದದ್ದರಿಂದ ರಮ್ಯವಾಗಿ ತೋರುತ್ತಿರುವದು; ಆದ್ದರಿಂದ ಪ್ರಭೋ, ನೀವು ಜಾಗ್ರತರಾಗಿರಿ, ಸ್ನಾನಮಾಡಿ ಸಂಧ್ಯೋಪಾಸನೆಯನ್ನು ಮಾಡಿರಿ."

ಹೆಂಡತಿಯ ಈ ಮಾತುಗಳಿಂದ ಎಚ್ಚತ್ತ ಮಹಾ ತಪಸ್ವಿಯಾದ ಭಗವಾನ್ ಜರತ್ಕಾರುವು ತನ್ನ ನಿದ್ದೆಗೇಡು ಮಾಡಿದ್ದಕ್ಕಾಗಿ ಸಂತಾಪಗೊಂಡನು. ಸಿಟ್ಟಿನಿಂದ ಆತನ ತುಟಿಗಳು ನಡುಗಹತ್ತಿದವು. ಆತನು ತನ್ನ ಹೆಂಡತಿಯನ್ನು ಕುರಿತು.—

ಜರತ್ಕಾರು—ಎಲೈ ಸರ್ಪಿಣೀ, ನೀನು ನನ್ನನ್ನು ಅವಮಾನಗೊಳಿಸಿದೆ; ಆದ್ದರಿಂದ ಇನ್ನು ನಾನು ಇಲ್ಲಿ ನಿಲ್ಲುವದಿಲ್ಲ. ಸಂಧ್ಯಾ ಸಮಯವಾಗಿದ್ದರೂ ನಾನು ಅರ್ಘ್ಯ ಕೊಡುವವರೆಗೆ ಅಸ್ತಂಗತನಾಗುವ ಸಾಮ

ಧ್ಯರ್ಯವು ಸೂರ್ಯನಲ್ಲಿ ಇಲ್ಲವು. ಅಂದಬಳಿಕ ನೀನು ನನ್ನನ್ನು ಯಾಕೆ ಎಬ್ಬಿಸಿದೆ ?

ಜರತ್ಕಾರು (ಎದೆ ನಡಗುತ್ತಿರಲು)—ಮಹಾರಾಜ, ತಮ್ಮ ಅವಮಾನ ಮಾಡಬೇಕೆಂದು ನಾನು ತಮ್ಮನ್ನು ಎಬ್ಬಿಸಲಿಲ್ಲ; ತಮ್ಮ ಧರ್ಮಲೋಪವಾಗಬಾರದೆಂದು ನಾನು ಎಬ್ಬಿಸಿದೆನು.

ಜರತ್ಕಾರು— ನನ್ನ ವಾಣಿಯು ಅಸತ್ಯವಾಗಲಾರದು ; ಇನ್ನು ನಾನು ಹೋಗುವವನೆ ; ನಿನ್ನೊಡನೆ ನಾನು ಮೊದಲೇ ಮಾಡಿಕೊಂಡ ನಿಯಮದಂತೆ ನಾನು ನಡೆದುಕೊಳ್ಳತಕ್ಕವನೇ ಸರಿ. ಎಲೈ ಭೀರೂ, ಭದ್ರೇ, ಆ ಭಗವಂತನು ಹೋದನೆಂದು ನಿನ್ನ ಅಣ್ಣನಿಗೆ ಹೇಳು ; ನಾನು ಹೋದದ್ದಕ್ಕಾಗಿ ನೀನು ಶೋಕಿಸಬೇಡ.

ಜರತ್ಕಾರು (ಕಣ್ಣೀರು ಸುರಿಯುತ್ತಿರಲು, ಅಂಜುತ್ತಂಜುತ್ತ)—ಧರ್ಮಜ್ಞರೇ, ನಿರಪರಾಧಿಯೂ, ಧರ್ಮನಿಷ್ಠಳೂ ಆದ ನನ್ನನ್ನು ತಾವು ಹೀಗೆ ತ್ಯಜಿಸುವದು ಯುಕ್ತವಲ್ಲ. ನನ್ನ ಅಣ್ಣನು ತಮ್ಮೊಡನೆ ನನ್ನ ಲಗ್ನ ಮಾಡಿದ ಹೇತುವು ಇನ್ನೂ ಪೂರ್ಣವಾಗಿಲ್ಲ. ತಮ್ಮಿಂದ ನನ್ನಲ್ಲಿ ಆಗುವ ಸಂತತಿಯಿಂದ ನಮ್ಮ ಸರ್ಪಕುಲದ ಉದ್ಧಾರವಾಗ ಬೇಕಾಗಿದೆ. ಭಗವನ್, ತಾವು ನನ್ನಲ್ಲಿ ಗರ್ಭಸ್ಥಾಪನ ಮಾಡಿದ್ದರೂ ಹೀಗೆಯೇ ಆದೀತೆಂದು ನಿಶ್ಚಯದಿಂದ ಹೇಳುವದಾಗಿಲ್ಲ. ಸತ್ಪುರುಷರೇ, ತಮ್ಮೊಡನೆ ಆದ ಸಂಬಂಧವು ವ್ಯರ್ಥವಾಗಬಾರದೆಂದು ನಾನು ಬೇಡಿಕೊಳ್ಳುವೆನು.

ಜರತ್ಕಾರು—ಎಲೈ ಸುಭಗೇ, ಈ ನಿನ್ನ ಗರ್ಭವು ಅಗ್ನಿಯಂತೆ ತೇಜಸ್ವಿಯಾಗಿದ್ದು, ಪರಮ ಧರ್ಮ ನಿಷ್ಠವೂ, ವೇದ ವೇದಾಂಗ ಪಾರಗವೂ ಆದ ಋಷಿಯಾಗಿರುವದು.

ಹೀಗೆ ನುಡಿದು ಆ ಕೃತನಿಶ್ಚಯದ ಧರ್ಮಾತ್ಮನಾದ ಜರತ್ಕಾರು ಮಹರ್ಷಿಯು ಉಗ್ರತಪಶ್ಚರ್ಯಕ್ಕಾಗಿ ಹೊರಟು ಹೋದನು.



## ೪೮ ನೇಯ ಅಧ್ಯಾಯ—ಆಸ್ತಿಕಜನ್ಮ

ಇತ್ತ ಜರತ್ಕಾರುವು ತನ್ನ ಅಣ್ಣನಾದ ವಾಸುಕಿಗೆ ನಡೆದ ಸಂಗತಿಯನ್ನೆಲ್ಲ ಹೇಳಿದಳು. ತನ್ನ ತಂಗಿಯ ಹೊಟ್ಟೆಯಲ್ಲಿ ತೇಜಸ್ವಿಯಾದ ಋಷಿಕುಮಾರನು ಹುಟ್ಟುವದನ್ನು ಕೇಳಿ, ತನ್ನ ಸರ್ಪಕುಲದ ಉದ್ಧಾರವನ್ನು ನೆನಿಸಿ ಆತನು ಆನಂದಭರಿತನಾದನು. ಪತಿವಿಯೋಗದಿಂದ ದುಃಖಿತಳಾದ ತನ್ನ ತಂಗಿಯನ್ನು ವಸ್ತ್ರಾಲಂಕಾರಗಳಿಂದ ಸತ್ಕರಿಸಿ ಸಮಾಧಾನಗೊಳಿಸಿದನು. ಆಕೆಯ ಗರ್ಭವು ಶುಕ್ಲಪಕ್ಷದ ಚಂದ್ರನಂತೆ ದಿನ ದಿನಕ್ಕೆ ಬೆಳೆಯಹತ್ತಿತು. ಬಳಿಕ ಯೋಗ್ಯಕಾಲದಲ್ಲಿ ಉಭಯ ಕುಲದ ಭಯವನ್ನು ದೂರಮಾಡುವ ದಿವ್ಯಪುತ್ರನನ್ನು ಜರತ್ಕಾರುವು ಹಡೆದಳು. ಆ ಹುಡುಗನು ಸೋದರಮಾವನಾದ ವಾಸುಕಿಯ ಮನೆಯಲ್ಲಿಯೇ ಸಣ್ಣವನು ದೊಡ್ಡವನಾದನು. ಆತನು ಚ್ಯವನಭಾರ್ಗವಋಷಿಯಲ್ಲಿ ಸಾಂಗ ವೇದಾಧ್ಯಯನ ಮಾಡಿದನು. ಆತನು ಒಳ್ಳೇ ಸತ್ವಗುಣಿಯೂ, ಧರ್ಮಗಳಲ್ಲಿ ಒಳ್ಳೇ ನಿಷ್ಠೆಯುಳ್ಳವನೂ ಆಗಿದ್ದನು. ಚಿಕ್ಕವನಿರುವಾಗಲೇ ಆತನು ಹಲವು ವ್ರತಾನುಷ್ಠಾನಗಳನ್ನು ಮಾಡಿದನು. ಈ ಜ್ಞಾನ-ವೈರಾಗ್ಯಸಂಪನ್ನನಾದ ಜರತ್ಕಾರು ಪುತ್ರನ ಹೆಸರು 'ಆಸ್ತಿಕ' ಎಂದು ಇಟ್ಟಿದ್ದರು ಯಾಕೆಂದರೆ, ಆತನ ತಂದೆಯಾದ ಜರತ್ಕಾರುಮಹರ್ಷಿಯು ಸಂಸಾರತ್ಯಾಗಮಾಡಿ ಅರಣ್ಯಕ್ಕೆ ಹೋಗುವಾಗ ಆತನ ಹೆಂಡತಿ-ಜರತ್ಕಾರುವು ತನ್ನ ಗರ್ಭದ ವಿಷಯವಾಗಿ ಪ್ರಶ್ನೆಮಾಡಲು, "ಅಸ್ತಿ" ಎಂದು ಆ ಮಹರ್ಷಿಯು ಉತ್ತರಕೊಟ್ಟದ್ದರಿಂದ, ಮುಂದೆ ಹುಟ್ಟಿದ ಆ ಕುಮಾರನಿಗೆ "ಆಸ್ತಿಕ" ಎಂದು ನಾಮಕರಣ ಮಾಡಿದರು. ಪರಮ ಬುದ್ಧಿಶಾಲಿಯಾದ ಆ ಹುಡುಗನ ಸಂಗೋಪನವನ್ನು ವಾಸುಕಿಯು ಬಹು ಆಸ್ಥೆಯಿಂದ ಮಾಡಿದನು. ದೇವಾಧಿದೇವನಾದ ಭಗವಾನ್ ಶೂಲಪಾಣಿ ಶಂಕರನಂತೆ ಪ್ರಕಾಶಮಾನನಾದ ಆಸ್ತಿಕನು ದೊಡ್ಡವನಾಗುತ್ತ ಹೋದಂತೆ, ಸರ್ಪಗಳ ಆನಂದವು ಹೆಚ್ಚುತ್ತ ಹೋಯಿತು.



## ೪೯, ೫೦, ೫೧ನೇ ಅಧ್ಯಾಯಗಳು-ಸರ್ಪಸತ್ರೋಪಕ್ರಮ

ಋಷಿಗಳೇ, ಈ ಮೇರೆಗೆ ಯಾವತ್ತು ಸರ್ಪಗಳು ಆಸ್ತಿಕನ ಜನ್ಮದಿಂದ ಸಮಾಧಾನ ಪಡುತ್ತಿರಲು, ಅತ್ತ ಜನಮೇಜಯನು ತನ್ನ ತಂದೆಯಾದ ಪರೀಕ್ಷಿತನು ಹಾವುಕಡಿದು ಸತ್ತ ಸುದ್ದಿಯನ್ನು ಮಂತ್ರಿಗಳ ಮುಖದಿಂದ ಸಾದ್ಯಂತವಾಗಿ ಕೇಳಿ ಸಂತಾಪಗೊಂಡನು ; ಮತ್ತು ದುಷ್ಟ ತಕ್ಷಕನು ತನ್ನ ತಂದೆಯನ್ನು ಕೊಂದ ಸೇಡು ತೀರಿಸಲು ನಿಶ್ಚಯಿಸಿದನು. ಆತನು ಮಂತ್ರಿಗಳನ್ನು ಕುರಿತು- "ಮಂತ್ರಿಗಳೇ, ತಕ್ಷಕನು ಅತ್ಯಂತ ದುಷ್ಟನು ; ಶೃಂಗಿಯ ಶಾಪದ ನೆಪದಿಂದ ನನ್ನ ತಂದೆಯನ್ನು ಸುಟ್ಟು ಭಸ್ಮಮಾಡಿದನು. ಆತನು ಮಂತ್ರವಿದನಾದ ಕಾಶ್ಯಪನನ್ನು ದುಡ್ಡು ಕೊಟ್ಟು ಹಿಂದಕ್ಕೆ ಯಾಕೆ ಕಳಿಸಬೇಕಾಗಿತ್ತು ? ಕಾಶ್ಯಪನ ಮಂತ್ರಪ್ರಭಾವದಿಂದ ನನ್ನ ತಂದೆಯು ಬದುಕಿದ್ದರೆ, ತಕ್ಷಕನದೇನುಗಂಟು ಹೋಗುತ್ತಿತ್ತು ? ತಕ್ಷಕನಿಗೆ ನನ್ನ ಸಾಮರ್ಥ್ಯವು ಗೊತ್ತಿಲ್ಲವು. ಅವನ ದುಷ್ಟತನಕ್ಕೆ ತಕ್ಕ ಶಾಸನವಾಗಲೇಬೇಕು. ಅವನು ಉತ್ತಂಕನ ಕುಂಡಲಗಳನ್ನು ಕದ್ದು ಆತನನ್ನು ಕಷ್ಟಪಡಿಸಿದನು ; ನನ್ನ ತಂದೆಯನ್ನು ಕೊಂದನು ; ಆದ್ದರಿಂದ ಉತ್ತಂಕನಿಗೂ, ನನಗೂ, ನಿಮಗೂ ಪ್ರಿಯವಾಗುವದಕ್ಕಾಗಿ ನಾನು ತಕ್ಷಕನನ್ನು ಬೆಂಕಿಯಲ್ಲಿ ಸುಟ್ಟು ಕೊಲ್ಲುವೆನು. ಅದಕ್ಕಾಗಿ ಸರ್ಪಸತ್ರವನ್ನು ಆರಂಭಿಸಲೇಬೇಕು" ಎಂದು ನುಡಿದು, ಋತ್ವಿಜರನ್ನೂ, ಪುರೋಹಿತರನ್ನೂ ಕರೆಸಿ ತನ್ನ ಮನಸ್ಸಿನ ವಿಚಾರವನ್ನು ತಿಳಿಸಿದನು. ಆಗ ಅವರು ರಾಜನನ್ನು ಕುರಿತು—"ರಾಜಾ, ಈಶ್ವರನು ಮುಂದೆ ಆಗುವದನ್ನು ತಿಳಿದು ಸರ್ಪಸತ್ರವೆಂಬ ಹೆಸರಿನ ದೊಡ್ಡ ಯಜ್ಞವನ್ನು ನಿನ್ನ ಸಲುವಾಗಿಯೇ ನಿರ್ಮಾಣಮಾಡಿ ಇಟ್ಟಿರುವನು. ಅದರ ಮಹತ್ವವನ್ನು ಪುರಣಾಂತರದಲ್ಲಿ ವರ್ಣಿಸಿದ್ದು, ಆ ಕ್ರತುವನ್ನು ಮಾಡುವ ಅಧಿಕಾರವು ನಿನ್ನ ಹೊರತು ಬೇರೆ ಯಾರಿಗೂ ಇರುವದಿಲ್ಲೆಂದು ಪೌರಾಣಿಕರು ಹೇಳುತ್ತಿರುವರು. ಅದರ ವಿಧಾನವನ್ನು ನಾವು ಪೂರ್ಣವಾಗಿ ಅರಿತಿರುವೆವು," ಎಂದು ಹೇಳಿದರು. ಅವರ ಮಾತನ್ನು ಕೇಳಿ ಜನಮೇಜಯನಿಗೆ ಅತ್ಯಾನಂದವಾಯಿತು. ಪಿತೃಘಾತಕನಾದ ತಕ್ಷಕನು ಪ್ರದೀಪ್ತಾಗ್ನಿಯಲ್ಲಿ

ದನು. ಬಳಿಕ ಅಧಿಕಾರಿಗಳು ರಾಜಾಜ್ಞೆಯಿಂದ ಬುದ್ಧಿವಂತರಾದ ಬ್ರಾಹ್ಮಣರನ್ನು ನಾಲ್ಕೂ ಕಡೆಯಿಂದ ಕರೆಸಿ ಭೂಶುದ್ಧಿಯನ್ನು ಮಾಡಿ ಯಜ್ಞಮಂಡಪವನ್ನು ಹಾಕಿಸಿದರು. ಎಲ್ಲತರದ ಸಾಹಿತ್ಯಗಳು ಸಿದ್ಧ ವಾದವು; ಆದರೆ ಒಬ್ಬ ಬುದ್ಧಿವಂತನಾದ ಬಡಿಗನು ಯಜ್ಞಮಂಡಪದ ರಚನೆಯ ಕಾಲ-ಸ್ಥಳಗಳನ್ನು ನೋಡಿ, ಈ ಯಜ್ಞವು ಪೂರ್ಣವಾಗದೆ, ಅದಕ್ಕೆ ಒಬ್ಬ ಬ್ರಾಹ್ಮಣನಿಂದ ವಿಘ್ನವುಂಟಾಗುವದೆಂದು ಭವಿಷ್ಯವನ್ನು ಹೇಳಿದನು. ಆದ್ದರಿಂದ ರಾಜನು ಯಜ್ಞಮಂಡಪಕ್ಕೆ ಬಿಗಿಯಾದ ಕಾವಲಿಟ್ಟು ತನ್ನ ಅಪ್ಪಣೆಯ ಹೊರತು ಯಾರನ್ನೂ ಒಳಗೆ ಬಿಡಬಾರದೆಂದು ಕಟ್ಟಪ್ಪಣೆ ಮಾಡಿದನು.



## ೫೧, ೫೨ನೇ ಅಧ್ಯಾಯಗಳು—ಸರ್ಪಸತ್ರಾರಂಭ.

ಜನಮೇಜಯನು ಈ ಮೇರೆಗೆ ವ್ಯವಸ್ಥೆ ಮಾಡಿದಬಳಿಕ ಯಜ್ಞಮಂಡಪದಲ್ಲಿ ಸರ್ಪಸತ್ರಕ್ಕೆ ಆರಂಭವಾಯಿತು. ಋತ್ವಿಜರು ತಮ್ಮ ಕರ್ಮಗಳನ್ನು ಯಥಾವಿಧಿಯಾಗಿ ಮಾಡತೊಡಗಿದರು. ಅವರು ಕಪ್ಪುವಸ್ತ್ರಗಳನ್ನು ಉಟ್ಟಿದ್ದರು. ಹೋಮದ ಹೊಗೆಯಿಂದ ಅವರ ಕಣ್ಣುಗಳು ಕೆಂಪಾಗಿದ್ದವು. ಅವರು ಉಚ್ಚಸ್ವರದಿಂದ ಮಂತ್ರೋಚ್ಚಾರಮಾಡಿ, ಯಜ್ಞಕುಂಡದಲ್ಲಿ ಆಹುತಿಗಳನ್ನು ಹಾಕಹತ್ತಿದರು. ಆಗ ಅಂಜಿಕೆಯಿಂದ ಸರ್ಪಗಳ ಹೃದಯಗಳು ನಡುಗಿದವು. ಕೆಲಸರ್ಪಗಳು ಅತ್ಯಂತ ದೈನ್ಯಸ್ವರದಿಂದ ಒಂದನ್ನೊಂದು ಕರೆಯುತ್ತ, ಅಂಜಿಕೆಯಿಂದ ಮೂರ್ಛೆಹೋಗಿ ಅಗ್ನಿಕುಂಡದಲ್ಲಿ ದಡದಡ ಬೀಳಹತ್ತಿದವು. ಎಲೈ ಶ್ರೋತ್ರಿಯಶ್ರೇಷ್ಠನಾದ ಶೌನಕನೇ, ಆಗಿನ ಅನರ್ಥವನ್ನೇನು ವರ್ಣಿಸುವದು? ಒಂದೊಂದು ಹರದಾರಿ, ನಾಲ್ನಾಲ್ಕು ಹರದಾರಿ ಉದ್ದವಾದ ಸರ್ಪಗಳು ಕೂಡ ಆಕಳ ಕಿವಿಯಷ್ಟು ಕಿರಿದಾಗಿ ಯಜ್ಞಕುಂಡದಲ್ಲಿ ಬಂದು ಬೀಳತೊಡಗಿದವು. ಈ ಮೇರೆಗೆ ಹಲವು ಬಣ್ಣದ, ಹಲವು ಆಕಾರದ, ಬಾಲ್ಯದ, ತಾರುಣ್ಯದ, ವಾರ್ಧಕ್ಯದ ಲಕ್ಷಾವಧಿ-ಕೋಟ್ಯವಧಿ ಸರ್ಪಗಳು ಯಜ್ಞಕುಂಡದಲ್ಲಿ ಬೀಳತೊಡಗಿದವು. ಆಕಾಶದಿಂದ ಯಜ್ಞಕುಂಡದವರೆಗೆ ಸರ್ಪಗಳ ಸಾಲಿಗೆ ಸಾಲೇ ಉಂಟಾಗಿತ್ತು. ಅವುಗಳ ಮಜ್ಜಾಮೇದಗಳು

ಕೋಡಿಯಿಟ್ಟು ಹರಿಯತೊಡಗಿದವು. ಹೀಗೆ ಒಂದೇಸಮನೆ ಸರ್ಪಗಳ ದಹನವು ನಡೆದದ್ದರಿಂದ, ನಾಲ್ಕೂಕಡೆಗೆ ದುರ್ಗಂಧವು ಹಬ್ಬಿತು! ಸರ್ಪಗಳ ದುಃಖಧ್ವನಿಯಿಂದ ದಶದಿಕ್ಕುಗಳು ತುಂಬಿದವು. ಆ ಭಯಂಕರವಾದ ಯಜ್ಞದಲ್ಲಿ ಚಂಡಭಾರ್ಗವನೆಂಬ ಚ್ಯವನಕುಲದ ಬ್ರಾಹ್ಮಣನು ಹೋತೃವಿನ ಕೆಲಸವನ್ನು ಮಾಡುತ್ತಿದ್ದನು. ಕೌತ್ಸಕುಲದಲ್ಲಿ ಉತ್ಪನ್ನನಾಗಿದ್ದ ಜೈಮಿನಿಯೆಂಬ ವಯೋವೃದ್ಧ ವಿದ್ವಾಂಸ ಬ್ರಾಹ್ಮಣನು ಉದ್ಗಾತೃವಾಗಿದ್ದನು. ಶಾರ್ಙ್ಗರವನೆಂಬ ಹೆಸರಿನ ಬ್ರಾಹ್ಮಣನು ಬ್ರಹ್ಮತ್ವವನ್ನು ಅಂಗೀಕರಿಸಿದ್ದನು. ಪಿಂಗಲನೆಂಬ ಋಷಿಯು ಅಧ್ವರ್ಯುವಾಗಿದ್ದನು. ಅಲ್ಲದೆ, ಮಕ್ಕಳು-ಶಿಷ್ಯರೊಡನೆ ವ್ಯಾಸಮುನಿಯು, ಉದ್ದಾಲಕ, ಪ್ರಮತಕ, ಶ್ವೇತಕೇತು, ಪಿಂಗಲ, ಅಸಿತ, ದೇವಲ, ನಾರದ, ಪರ್ವತ, ಆತ್ರೇಯ ಮೊದಲಾದ ಹಲವು ವೇದಜ್ಞಬ್ರಾಹ್ಮಣರು ಆ ಸತ್ರದಲ್ಲಿ ಸದಸ್ಯರಾಗಿದ್ದರು.

**ತಕ್ಷಕನೂ–ವಾಸುಕಿಯೂ**—ಈ ಭಯಂಕರವಾದ ಸತ್ರದಲ್ಲಿ ಆಗುತ್ತಿರುವ ಸರ್ಪಗಳ ಸಂಹಾರವನ್ನು ಅರಿತು ತಕ್ಷಕನೂ, ವಾಸುಕಿಯೂ ಅಂಜಿ ನಡುಗಹತ್ತಿದರು. ತನ್ನ ಕೃತಿಯಿಂದಲೇ ಈ ಅನರ್ಥಕಾರಕ ಯಜ್ಞವು ಆರಂಭವಾಯಿತೆಂದು ತಿಳಿದು ತಕ್ಷಕನು ತನ್ನ ಪರಿಣಾಮ ಕಾಣದೆ, ಇಂದ್ರನಿಗೆ ಶರಣುಹೋಗಿ ಕನಿಕರದಿಂದ ಆತನನ್ನು ಪ್ರಾರ್ಥಿಸ ತೊಡಗಿದನು. ಇಂದ್ರನು ತಕ್ಷಕನ ಪ್ರಾರ್ಥನೆಯಿಂದ ಸಂತುಷ್ಟನಾಗಿ— "ತಕ್ಷಕಾ, ನೀನು ಭಯಪಡಬೇಡ. ಈ ಸತ್ರದಲ್ಲಿ ನಿನ್ನ ಸಂಹಾರವಾಗದಂತೆ ಬ್ರಹ್ಮದೇವನೊಡನೆ ಆಲೋಚಿಸಿ ನಾನು ಮೊದಲೇ ವ್ಯವಸ್ಥೆ ಮಾಡಿದ್ದೇನೆ; ಆದ್ದರಿಂದ ನೀನು ನಿಶ್ಚಿಂತನಾಗಿರು," ಎಂದು ಅಭಯವನ್ನಿತ್ತನು. ಇತ್ತ ವಾಸುಕಿಯು ವಂಶದ ಸರ್ಪಗಳೆಲ್ಲ ನಷ್ಟವಾಗಿ ಹೋದದ್ದರಿಂದ, ಆತನು ದುಃಖದಿಂದ ಜರ್ಜರನಾಗಿದ್ದನು. ಇನ್ನು ತನ್ನ ನಾಶವಾದರೂ ಬೇಗನೆ ಆಗುವದೆಂದು ಆತನು ಆಲೋಚಿಸತೊಡಗಿದ್ದನು. ಆತನು ತನ್ನ ತಂಗಿಯಾದ ಜರತ್ಕಾರುವನ್ನು ಕುರಿತು—"ತಂಗೀ, ನನ್ನ ಮೇಲೆ ಬಂದಿರುವ ಭಯಂಕರ ಪ್ರಸಂಗವನ್ನಂತು ನೀನು ಅರಿತೇ ಇರುವೆ. ಈಗ ನನ್ನ ಸಂಕಟವನ್ನು ದೂರಮಾಡುವ ಪ್ರಸಂಗವು ಒದಗಿದೆ. ಆದ್ದ

ರಿಂದ ನಿನ್ನ ಮಗನಾದ ವೇದಪದ್ವರಿಷ್ಠ ಆಸ್ತಿಕನಿಂದ ನಮ್ಮ ಕಲ್ಯಾಣ ವಾಗುವಂತೆ ಮಾಡು.

## ೫೪ನೇ ಅಧ್ಯಾಯ—ಆಸ್ತಿಕನು ಯಜ್ಞಮಂಡಪಕ್ಕೆ ಹೋದದ್ದು.

ಅಣ್ಣನ ಈ ಮಾತುಗಳನ್ನು ಕೇಳಿ ಜರತ್ಕಾರುವು ಆತನಮೇಲಿನ ತನ್ನ ಉತ್ಕಟ ಪ್ರೇಮದಮೂಲಕ ತನ್ನ ಮಗನಾದ ಆಸ್ತಿಕನನ್ನು ಕುರಿತು—"ಪುತ್ರಾ, ನನ್ನ ಅಣ್ಣನಾದ ವಾಸುಕಿಯು ನಿನ್ನ ತಂದೆ ಯೊಡನೆ ನನ್ನ ಲಗ್ನಮಾಡಿಕೊಟ್ಟ ಉದ್ದೇಶವನ್ನು ಸಫಲಗೊಳಿಸುವ ಪ್ರಸಂಗವು ಈಗ ಬಂದೊದಗಿರುತ್ತದೆ; ಆದ್ದರಿಂದ ನೀನು ನಿನ್ನ ಆ ಸೋದರಮಾವನ ಕೆಲಸವನ್ನು ಮಾಡು," ಎಂದು ಹೇಳಿ, ಕದ್ರುವಿನ ಶಾಪದಿಂದಾರಂಭಿಸಿ, ಕಡೆಯವರೆಗೆ ಒಂದು ಅಕ್ಷರ ಬಿಡದಂತೆ ಸರ್ಪಸತ್ರದ ಸಂಗತಿಯನ್ನು ಮಗನಮುಂದೆ ಹೇಳಿದಳು. ಅದನ್ನು ಕೇಳಿ ಆಸ್ತಿಕನು ವಾಸುಕಿಯ ಹಿತಮಾಡಲು ಒಪ್ಪಿ, ಆ ತನ್ನ ಸೋದರಮಾವನನ್ನು ಕುರಿತು—"ಎಲೈ ಸರ್ಪರಾಜನೇ, ನೀನು ಸರ್ವಥಾ ಚಿಂತಿಸಬೇಡ. ನನ್ನಿಂದ ನಿನ್ನ ಭಯವು ದೂರವಾಯಿತೆಂದು ತಿಳಿದು ಸಮಾಧಾನದಿಂದ ಇರು. ನನ್ನ ಸಹಜವಾದ ಮಾತುಗಳೂ ಸುಳ್ಳಾಗದಿರುವಾಗ, ನನ್ನ ಈ ಪ್ರತಿಜ್ಞೆಯ ಮಾತು ಹೇಗೆ ಸುಳ್ಳಾದೀತು?" ಎಂದು ಹೇಳಿ, ಕೂಡಲೆ ಆತನು ವಾಸುಕಿಯ ಸನ್ನಿಧಿಯಿಂದ ಹೊರಟು ಜನಮೇಜಯನ ಯಜ್ಞ ಶಾಲೆಗೆಹೋದನು. ಆ ಯಜ್ಞಮಂಡಪವು ಅಪ್ರತಿಮವಾಗಿದ್ದು, ಸೂರ್ಯಾ ಗ್ನಿಗಳಿಗೆ ಸಮಾನವಾದ ತೇಜಸ್ಸುಳ್ಳ ಅನೇಕ ಸದಸ್ಯರು ಅಲ್ಲಿ ಕುಳಿತಿ ದ್ದರು. ಆಸ್ತಿಕನು ಯಜ್ಞಮಂಡಪವನ್ನು ಪ್ರವೇಶಿಸತೊಡಗಲು, ರಾಜಾ ಜ್ಞೆಯಿಂದ ಮಂಡಪದ ರಕ್ಷಕರು ಆತನನ್ನು ನಿರ್ಬಂಧಿಸಿದರು; ಆದರೆ ಆಸ್ತಿಕನು ಒಳ್ಳೆಯ ಚತುರನಾದದ್ದರಿಂದ ಯಜ್ಞಪ್ರಶಂಸೆಯನ್ನು ಉತ್ತಮರೀತಿಯಿಂದ ಮಾಡಿ, ಅರಸನ ಪ್ರಸನ್ನತೆ ಪಡೆದು ಯಜ್ಞಮಂಡ ಪವನ್ನು ಪ್ರವೇಶಿಸಿದನು.

## ೫೫ ನೇ ಅಧ್ಯಾಯ—ಆಸ್ತಿಕಕೃತ ರಾಜಸ್ತುತಿ.

ಎಲೈ ಭರತರ್ಷಭಾ, ಜನಮೇಜಯರಾಜಾ, ಪ್ರಾಚೀನಕಾಲದಲ್ಲಿ ಸೋಮ, ವರುಣ, ಪ್ರಜಾಪತಿಗಳು ಪ್ರಯಾಗಕ್ಷೇತ್ರದಲ್ಲಿ ಮಾಡಿದ ಯಜ್ಞಗಳ ಯೋಗ್ಯತೆಯು ನಿನ್ನ ಯಜ್ಞಕ್ಕಿರುವದು. ಇದರಿಂದ ನಮ್ಮೆಲ್ಲರ, ಹಾಗು ನಮ್ಮ ಆಪ್ತೇಷ್ಟರ ಕಲ್ಯಾಣವಾಗಬೇಕು. ಇಂದ್ರನು ನೂರು ಅಶ್ವಮೇಧಯಜ್ಞಗಳನ್ನು ಮಾಡಿದನು; ಆದರೆ ಆತನ ನೂರುಪಟ್ಟು ಯಜ್ಞಗಳಿಗೆ ಸರಿಯಾದ ಯಜ್ಞವು ನಿನ್ನದಿರುವದು. ಈ ನಿನ್ನ ಯಜ್ಞದ ಯೋಗದಿಂದ, ನಿನ್ನ ಹಾಗು ನಿನ್ನ ಋತ್ವಿಜರ, ಹಾಗು ಅವರೆಲ್ಲರೊಡನೆ ನನ್ನ ಹಿತವೂ ಆಗಲಿ. ಇಂದ್ರನ ಯಜ್ಞದಲ್ಲಿಯಂತೆ ನಿನ್ನ ಯಜ್ಞದೊಳಗಿನ ಈ ಬ್ರಾಹ್ಮಣರು ಸೂರ್ಯನಂತೆ ತೇಜಸ್ವಿಗಳಾಗಿ ಅನುಷ್ಠಾನವನ್ನು ಮಾಡುತ್ತಿರುವರು. ಇವರು ಸರ್ವಜ್ಞರಿರುವದರಿಂದ ಇವರಿಗೆ ಗೊತ್ತಾಗದ ವಿಷಯವು ಒಂದೂ ಇಲ್ಲವು; ಆದ್ದರಿಂದ ಪರಬ್ರಹ್ಮಸ್ವರೂಪರಾಗಿದ್ದ ಈ ಬ್ರಾಹ್ಮಣರಿಗೆ ನೀನು ಅರ್ಪಣಮಾಡುವದು ಕೇವಲ ಬ್ರಹ್ಮಾರ್ಪಣವೇ ಆಗುವದರಿಂದ, ಆ ದಾನದಿಂದುಂಟಾಗುವ ಪುಣ್ಯವು ನಾಶಹೊಂದತಕ್ಕದ್ದಲ್ಲ. ರಾಜಾ, ವಿಲಕ್ಷಣ ತೇಜಸ್ಸೇ ಧನವಾಗಿ ಉಳ್ಳ, ಚಿತ್ರವಿಚಿತ್ರ ಕಿರಣಗಳುಳ್ಳ, ಸುವರ್ಣರೂಪ ತೇಜಸ್ಸಿನಿಂದ ಜಗತ್ತನ್ನು ವ್ಯಾಪಿಸಿರುವ, ಸರ್ವಭೂತಗಳಲ್ಲಿ ಅಂಶರೂಪದಿಂದ ವ್ಯಾಪ್ತನಾಗಿರುವ ಈ ಭಗವಾನ್ ಅಗ್ನಿನಾರಾಯಣನು ಯಜ್ಞಕುಂಡದಲ್ಲಿ ಪ್ರದೀಪ್ತನಾಗಿದ್ದು, ಬಲಸುತ್ತಿನ ಜ್ವಾಲೆಗಳಿಂದ ತನ್ನ ಪ್ರಸನ್ನತೆಯನ್ನು ವ್ಯಕ್ತಮಾಡಿ, ನಿನ್ನ ಹವನೀಯ ಹವ್ಯಗಳನ್ನು ಇಚ್ಛಿಸುತ್ತಿರುವನು. ರಾಜಾ, ನಿನ್ನ ಯೋಗ್ಯತೆಯ ರಾಜರು ಈಗಿನ ಕಾಲದಲ್ಲಿ ಇಲ್ಲ; ಹಿಂದಕ್ಕೆ ಆಗಿ ಹೋಗಿರುವದಿಲ್ಲ. ಸರ್ವಗುಣಸಂಪನ್ನತೆಯಲ್ಲಿ ದ್ವಾರಕಾಧಿಪತಿಯಾದ ಶ್ರೀಕೃಷ್ಣನೊಬ್ಬನು ನಿನ್ನನ್ನು ಸರಿಗಟ್ಟಬಹುದು.

---

## ೫೬ ನೇ ಅಧ್ಯಾಯ—ಆಸ್ತಿಕ-ವರಯಾಚನೆಯು

ಈ ಮೇರೆಗೆ ಆಸ್ತಿಕನು ಮಾಡಿದ ಸ್ತುತಿಯಿಂದ ತಾನೂ, ತನ್ನಂತೆ ಯಾವತ್ತು ಋತ್ವಿಜರೂ, ಸಭಾಸದರೂ ಪ್ರಸನ್ನರಾಗಿರುವದನ್ನು ಅವರ

ಮುಖಲಕ್ಷಣದಿಂದ ತಿಳಿದು, ಜನಮೇಜಯನು ಯಾವತ್ತು ಬ್ರಹ್ಮವೃಂದ ವನ್ನು ಕುರಿತು—“ವಿಪ್ರರೇ, ಈತನು ನೋಡಲಿಕ್ಕೆ ಹುಡುಗನಾದರೂ, ವೃದ್ಧಪಂಡಿತರಂತೆ ಮಾತಾಡುತ್ತಿರುವನು. ಈತನ ಇಚ್ಛೆಯನ್ನು ಪೂರ್ಣ ಮಾಡಲು ನನ್ನಮನಸ್ಸು ಆತುರಪಡುತ್ತಿರುವದು; ಆದ್ದರಿಂದ ನೀವು ಯೋಗ್ಯವಿಚಾರಮಾಡಿ ಏಕಮತದಿಂದ ನನಗೆ ಆಲೋಚನೆ ಹೇಳಿರಿ,” ಎಂದು ಕೇಳಿದನು. ಅದಕ್ಕೆ ಎಲ್ಲ ಬ್ರಾಹ್ಮಣರು ಆಸ್ತಿಕನಿಗೆ ಇಚ್ಛಿತ ವರಗಳನ್ನು ಕೊಡಬೇಕೆಂದು ಏಕಮತದಿಂದ ಹೇಳಿದರು. ಅದರಂತೆ ಜನಮೇಜಯನು ವರಬೇಡಿಕೊಳ್ಳೆಂದು ಆಸ್ತಿಕನಿಗೆ ಸೂಚಿಸತಕ್ಕವನು, ಅಷ್ಟರಲ್ಲಿ ಹೋತೃವಾದ ಚಂಡಭಾರ್ಗವನು ಅರಸನನ್ನು ಕುರಿತು— “ರಾಜಾ, ನಾವು ಇಷ್ಟುದಿವಸ ಯಜ್ಞಮಾಡುತ್ತಿರುವೆವು; ಆದರೂ ಮುಖ್ಯ ಅಪರಾಧಿಯಾದ ತಕ್ಷಕನು ಇನ್ನೂ ಬರಲೊಲ್ಲನು; ಆದ್ದರಿಂದ ತಕ್ಷಕನು ಬರುವವರೆಗೆ ಈ ಬ್ರಾಹ್ಮಣನಿಗೆ ವರಪ್ರದಾನ ಮಾಡಬಾರದು,” ಎಂದು ಹೇಳಿದನು. ಅದನ್ನು ಕೇಳಿ ಅರಸನು ಸ್ವಲ್ಪ ಖಿನ್ನನಾಗಿ ಬ್ರಾಹ್ಮಣರಿಗೆ—“ಬ್ರಾಹ್ಮಣರೇ, ಇದು ಯೋಗ್ಯವಿಚಾರವು. ನಮ್ಮ ಚಿರದ್ವೇಷಿಯಾದ ತಕ್ಷಕನು ಮೊದಲು ಯಜ್ಞಕುಂಡದಲ್ಲಿ ಬೀಳುವಂತೆ ಮಾಡಿರಿ. ಆಮೇಲೆ ಆಸ್ತಿಕನಿಗೆ ಬೇಕಾದ ವರಗಳನ್ನು ಕೊಡೋಣ” ಎಂದು ಹೇಳಿದನು. ಅದಕ್ಕೆ ಋತ್ವಿಜರು—“ರಾಜಾ, ಇಂದ್ರನು ತಕ್ಷಕನಿಗೆ ಅಭಯಕೊಟ್ಟಿರುವನೆಂದು, ನಮ್ಮ ಸ್ತುತಿಯಿಂದ ಪ್ರಸನ್ನರಾಗಿದ್ದ ಮಂತ್ರ ದೇವತೆಗಳೂ, ಯಜ್ಞನಾರಾಯಣನೂ ಹೇಳಿರುವರು. ಆದ್ದರಿಂದಲೇ ತಕ್ಷಕನು ಈ ವರೆಗೂ ಯಜ್ಞಕುಂಡದಲ್ಲಿ ಬಿದ್ದಿಲ್ಲವು. ಆ ಲೋಹಿತಾಕ್ಷನೆಂಬ ಬಡಗಿಯು ಮಹಾಜ್ಞಾನಿಯಾದದ್ದರಿಂದಲೇ ಇದನ್ನರಿತು, “ಒಬ್ಬ ಬ್ರಾಹ್ಮಣನ ಯೋಗದಿಂದ ಈ ಯಜ್ಞಕ್ಕೆ ವಿಘ್ನವುಂಟಾಗುವದೆಂ”ದು ಭವಿಷ್ಯ ಹೇಳಿದನು. ಅದರಂತೆಯೇ ಈಗ ಯೋಗವು ಒದಗಿ ಬಂದಿರುವದು,” ಎಂದು ಹೇಳಿದರು. ಆಗ ಜನಮೇಜಯನು ತನ್ನ ಯಜ್ಞಕ್ಕೆ ವಿಘ್ನವೆಲ್ಲಿಬರುವದೋ ಎಂದು ದುಃಖಿತನಾದನು; ಆದರೂ ಕರ್ಮವನ್ನು ಒತ್ತರದಿಂದ ನಡಿಸಬೇಕೆಂದು ಹೋತೃವಿಗೆ ರಾಜನು ಹೇಳಲು, ಸ್ವಕರ್ಮತತ್ಪರ ಚಂಡಭಾರ್ಗವನು ಹವನ ಮಾಡಹತ್ತಿದನು.

ಆಗ ಇಂದ್ರನು ವಿಮಾನದಲ್ಲಿ ಕುಳಿತು ದೇವಲೋಕವನ್ನು ಬಿಟ್ಟು ಭೂಲೋಕಕ್ಕೆ ಬರಬೇಕಾಯಿತು. ತಕ್ಷಕನು ಇಂದ್ರನ ಉತ್ತರೀಯವನ್ನು ಹಿಡಿದು ಬರುತ್ತಿದ್ದರೂ, ಆತನ ಅಂಜಿಕೆಯು ಹೋಗಿದ್ದಿಲ್ಲ. ಇತ್ತ ಜನಮೇಜಯನು ಋತ್ವಿಜರನ್ನು ಕುರಿತು—"ಬ್ರಾಹ್ಮಣ ಶ್ರೇಷ್ಠರೇ, ನಮ್ಮ ಶತ್ರುವಿಗೆ ಆಶ್ರಯಕೊಟ್ಟಿದ್ದ ಇಂದ್ರನೊಡನೆ ತಕ್ಷಕನು ಈ ಯಜ್ಞಕುಂಡದಲ್ಲಿ ಬೀಳುವಂತೆ ಮಾಡಿರಿ," ಎಂದು ಹೇಳಿದನು.

ಜನಮೇಜಯನು ಹೀಗೆ ಹೇಳಿದಕೂಡಲೆ ಹೋತಾರನು ಇಂದ್ರನೊಡನೆ ತಕ್ಷಕನು ಬರುವಂತೆ ಅಗ್ನಿಯಲ್ಲಿ ಹವನಮಾಡಹತ್ತಿದನು. ಕೂಡಲೆ ತಕ್ಷಕನು ವ್ಯಥಿತನಾಗಿ ಇಂದ್ರನೊಡನೆ ಆಕಾಶದಲ್ಲಿ ತೋರಹತ್ತಿದನು. ಇಂದ್ರನು ಕೆಳಗೆ ಯಜ್ಞದ ಉಗ್ರಸ್ವರೂಪವನ್ನು ನೋಡಿ ಅಂಜಿ ತಕ್ಷಕನನ್ನು ದೂಡಿಕೊಟ್ಟು ತಾನು ತಿರುಗಿ ಸ್ವರ್ಗಕ್ಕೆ ಹೊರಟುಹೋದನು. ಆಗ ತಕ್ಷಕನು ನಿರಾಶ್ರಿತನಾಗಿ ಭರದಿಂದ ಅಗ್ನಿಕುಂಡದ ಕಡೆಗೆ ಸಾಗಿಬರಹತ್ತಿದನು. ಅದನ್ನು ನೋಡಿ ಋತ್ವಿಜರು ಜನಮೇಜಯನಿಗೆ—"ರಾಜಾ, ಇನ್ನು ತಕ್ಷಕನು ಆಹುತಿಯಾಗಲು ವಿಲಂಬವಿಲ್ಲ. ನಮ್ಮ ಯಜ್ಞಕಾರ್ಯವು ಯಥಾಪ್ರಕಾರ ಸಾಗಿರುವದು. ನೀನು ಆಸ್ತಿಕಋಷಿಗೆ ಇಚ್ಛಿತವರಗಳನ್ನು ಕೊಡು," ಎಂದು ಹೇಳಿದರು. ಆಗ ಜನಮೇಜಯನು ಆಸ್ತಿಕನಿಗೆ ವರವನ್ನು ಬೇಡಿಕೊಳ್ಳಹೇಳಲು, ಆಸ್ತಿಕನು ಆತುರದಿಂದ— "ರಾಜಾ, ನಿನ್ನ ಯಜ್ಞವು ಇಲ್ಲಿಗೆ ನಿಲ್ಲಲಿ. ಇನ್ನುಮೇಲೆ ಒಂದು ಸರ್ಪದ ಸಂಹಾರವು ಕೂಡ ಆಗಲಾಗದು," ಎಂದು ಕೇಳಿಕೊಂಡನು. ಅದನ್ನು ಕೇಳಿ ಜನಮೇಜಯನು ಅಸಮಾಧಾನಪಟ್ಟನು. ಬೇರೆ ಬೇಕಾದ ವರವನ್ನು ಬೇಡಿಕೊಳ್ಳಬೇಕೆಂದು ಆಸ್ತಿಕನಿಗೆ ಬೇಕಾದಷ್ಟು ಹೇಳಿದರೂ ಆತನು ಕೇಳಲಿಲ್ಲ. "ನಿನ್ನ ಯಜ್ಞವು ನಿಂತರೆ ನನ್ನ ಸೋದರಮಾವನ ವಂಶವು ಸ್ಥಿರವಾಗಿ ಉಳಿಯುವದು ; ಅದೇ ನನಗೆ ಬೇಕಾದದ್ದು," ಎಂದು ಹೇಳಿದನು. ಇತ್ತ ತಕ್ಷಕನು ದುಃಖದಿಂದ ಮೂರ್ಛಿತನಾಗಿ ಯಜ್ಞಕುಂಡದಲ್ಲಿ ಬೀಳುವದಕ್ಕಾಗಿ ಭರದಿಂದ ಬರುತ್ತಿರಲು, ಆಸ್ತಿಕನು "ನಿಲ್ಲು-ನಿಲ್ಲು-ನಿಲ್ಲು" ಎಂದು ಮೂರುಸಾರೆ ಉಚ್ಚರಿಸಲು, ತಕ್ಷಕನು ಅಂತರಿಕ್ಷದಲ್ಲಿಯೇ ನಿಂತುಕೊಂಡನು.

**ಯಜ್ಞಸಮಾಪ್ತಿ**—ಇತ್ತ ಜನಮೇಜಯನು ನಿರುಪಾಯನಾಗಿ ಋತ್ವಿಜರನ್ನು ಕುರಿತು—"ಬ್ರಾಹ್ಮಣರೇ, ಇಲ್ಲಿಗೆ ಯಜ್ಞಸಮಾಪ್ತಿಯನ್ನು ಮಾಡಿರಿ. ಇನ್ನು ಉಳಿದಿರುವ ಸರ್ಪಗಳು ಸುಖದಿಂದ ಇರಲಿ; ಆಸ್ತಿಕ ಮುನಿಗೆ ಆನಂದವಾಗಲಿ; ಅದರಂತೆ ಆರಂಭಕ್ಕೆ ಭವಿಷ್ಯಹೇಳಿದ ಲೋಹಿತಾಕ್ಷ ಬಡಗಿಯ ಮಾತೂ ನಿಜವಾಗಲಿ," ಎಂದು ಹೇಳಿದನು. ಅರಸನ ಈ ಉದ್ಗಾರವನ್ನು ಕೇಳಿ ಎಲ್ಲರಿಗೂ ಆನಂದವಾಯಿತು. ಜನಮೇಜಯ ರಾಜನ ಕೋಪವೂ ಶಾಂತವಾಗಿ, ಆತನು ಸಂತುಷ್ಟನಾದನು. ಋತ್ವಿಜರಿಗೂ, ಬೇರೆ ಬ್ರಾಹ್ಮಣರಿಗೂ ಜನಮೇಜಯನು ವಿಪುಲದಕ್ಷಿಣೆಕೊಟ್ಟನು. ಅನ್ನದಾನಾದಿಗಳಿಂದ ಭೂತತೃಪ್ತಿಯಾಯಿತು. ರಾಜನು ಸಂತೋಷದಿಂದ ವಿಧಿಪೂರ್ವಕ ಅವಭೃತಸ್ನಾನಮಾಡಿ ಯಜ್ಞವನ್ನು ಮುಗಿಸಿದನು. ಬಳಿಕ ಆಸ್ತಿಕನನ್ನು ವಸ್ತ್ರಭೂಷಣಾದಿಗಳಿಂದ ಸತ್ಕರಿಸಿ, ಜನಮೇಜಯರಾಜನು ಆತನಿಗೆ—"ಎಲೈ ಋಷಿಶ್ರೇಷ್ಠನೇ, ಮುಂದೆನಾನು ಅಶ್ವಮೇಧವನ್ನು ಮಾಡುವೆನು, ಆಗ ಬರಬೇಕು" ಎಂದು ಆತನನ್ನು ಪ್ರಾರ್ಥಿಸಿದನು. ಅದಕ್ಕೆ ಆಸ್ತಿಕನು—"ಹಾಗೇ ಆಗಲಿ" ಎಂದು ಹೇಳಿ ಅರಸನ ಅನುಮತಿಯಿಂದ ಹೊರಟುಹೋದನು. ಹೀಗೆ ಆಸ್ತಿಕನು ಮಹಾಕಾರ್ಯವನ್ನು ಮಾಡಿ, ತನ್ನ ಸೋದರಮಾವನಾದ ವಾಸುಕಿಯನ್ನು ನಮಸ್ಕರಿಸಿ ಯಾವತ್ತು ವೃತ್ತಾಂತವನ್ನು ಹೇಳಲು, ಆತನಿಗೂ, ಉಳಿದ ಸರ್ಪಗಳಿಗೂ ಪರಮಾನಂದವಾಯಿತು. ಸರ್ಪಗಳು ಬೇಕಾದ ವರವನ್ನು ಬೇಡಿಕೊಳ್ಳಬೇಕೆಂದು ಆಸ್ತಿಕನಿಗೆ ಮುಂಬಾಲುಬಿದ್ದವು. ಆಗ ಆಸ್ತಿಕನು—"ನನ್ನ ಈ ಆಖ್ಯಾನವನ್ನು ಭೂತಲದಲ್ಲಿ ಸಂಜೆ ಮುಂಜಾವುಗಳಲ್ಲಿ ಭಕ್ತಿಯಿಂದ ಪಠಿಸುವವರಿಗೆ ನಿಮ್ಮಿಂದ ಬಾಧೆಯಾಗಬಾರದು," ಎಂದು ಕೇಳಿಕೊಂಡನು ಅದಕ್ಕೆ ವಾಸುಕಿಯೇ ಮೊದಲಾದ ಎಲ್ಲಸರ್ಪಗಳೂ ಒಪ್ಪಿಕೊಂಡವು. ಆಸ್ತಿಕನು ತನ್ನ ಉಳಿದ ಆಯುಷ್ಯವನ್ನು ಧರ್ಮಚಿಂತನದಲ್ಲಿ ಕಳೆದು, ಮಕ್ಕಳು ಮೊಮ್ಮಕ್ಕಳನ್ನು ಕಂಡನಂತರ ಯೋಗ್ಯಕಾಲದಲ್ಲಿ ಮೋಕ್ಷವನ್ನು ಹೊಂದಿದನು. ಋಷಿಗಳಿರಾ, ಈ ಆಸ್ತಿಕಪರ್ವವನ್ನು ಶ್ರವಣ ಮಾಡುವವರಿಗೆ ಸರ್ಪಗಳಿಂದ ಸರ್ವಥಾ ಭಯವು ಪ್ರಾಪ್ತವಾಗುವದಿಲ್ಲ.



## ಶ್ರೀ ಶೇಷಸದ್ಗುರು ಸೂಕ್ತಿರೂಪ

# ರಹಸ್ಯಗಳು

**ಉಪಕ್ರಮ**—ಈ ಆಸ್ತಿಕ ಪರ್ವವಾದರೂ ಮಹಾ ಭಾರತದ ಕಥೆಯೊಳಗಿನದಲ್ಲ; ಅದರಂತೆ, ಇದರ ಹಿಂದಿನ ಪೌಲೋಮ ಪರ್ವಕ್ಕೂ ಇದರ ಸಂಬಂಧವಿಲ್ಲ. ಗೃಹಸ್ಥಾಶ್ರಮದ ಅವಶ್ಯಕತೆ, ಮಾತಾಪಿತೃಗಳ ಮಹಿಮೆ, ನಿಸ್ಪೃಹರಾದ ಮಹರ್ಷಿಗಳ ಘನವಾದ ಯೋಗ್ಯತೆ ಮುಂತಾದವುಗಳನ್ನು ಸ್ಪಷ್ಟೀಕರಿಸುವದಕ್ಕಾಗಿಯೇ ಈ ಪರ್ವವು ಸ್ವತಂತ್ರವಾಗಿ ಬರೆಯಲ್ಪಟ್ಟದೆ. ಈ ಪರ್ವದಲ್ಲಿ ಆಸ್ತಿಕನೇ ಪ್ರಧಾನಪುರುಷನಾದದ್ದರಿಂದ, ಈ ಪರ್ವಕ್ಕೆ ಆಸ್ತಿಕಪರ್ವವೆಂಬ ಹೆಸರು ಬಂದಿದೆ. ಈ ಪರ್ವದಲ್ಲಿ ಕೆಳಗಿನ ರಹಸ್ಯಗಳ ಉಲ್ಲೇಖವಾಗಿರುವದು.

**೧೭ ಜೀವರು ತಂತ್ರಚತುಷ್ಟಯ ಬದ್ಧರು**—ತಂತ್ರವೆಂದರೆ ನಿಯಾಮಕತೆಯು, ಅಥವಾ ಅನ್ಯರನ್ನು ನಡಿಸಿಕೊಳ್ಳೋಣವು ಎಂದು ಹೇಳಬಹುದು. ಈ ಉಪಪರ್ವದಲ್ಲಿ ವಿನತೆಯು ಕದ್ರುವಿನ ದಾಸಿಯಾಗಿರುವಳೆಂಬ ಸಂಗತಿಯು ವಾಚಕರ ಸ್ಮರಣದಲ್ಲಿರಬಹುದು. ಇಲ್ಲಿ ಕದ್ರುವು ವಿನತೆಯನ್ನು ನಡಿಸಿಕೊಳ್ಳುವವಳಾಗಿದ್ದರೆ, ವಿನತೆಯು ಕದ್ರುವಿಗೆ ಅಧೀನಳಾಗಿ ನಡೆದುಕೊಳ್ಳುವವಳಾಗಿರುವಳು. ಹೀಗೆ ಅನ್ಯರನ್ನು ನಡಿಸಿಕೊಳ್ಳುವವರನ್ನು ಸ್ವತಂತ್ರರೆಂತಲೂ, ಅನ್ಯರಿಗೆ ವಿಧೇಯರಾಗಿ ನಡೆದುಕೊಳ್ಳುವವರನ್ನು ಪರತಂತ್ರರೆಂತಲೂ ಕರೆಯುವದು ವ್ಯವಹಾರದ ರೀತಿಯಾಗಿರುತ್ತದೆ. ಇದರಮೇಲಿಂದ ಜಗತ್ತಿನ ಜೀವರಾಶಿಯಲ್ಲಿ ಕೆಲವು ಜೀವರು ಸ್ವತಂತ್ರರೂ, ಕೆಲವು ಜೀವರು ಪರತಂತ್ರರೂ ಆಗಿರುವರೆಂದು ಸ್ಥೂಲಮಾನದಿಂದ ಹೇಳಬೇಕಾಗುವದು.

ಇಷ್ಟರಿಂದ ಸ್ವತಂತ್ರ-ಪರತಂತ್ರಗಳ ಸ್ಪಷ್ಟೀಕರಣವಾಗುವದಿಲ್ಲ. ಶ್ರೀಮದ್ಭಾಗವತದಲ್ಲಿ—" ಸ್ವಸ್ವರೂಪಜ್ಞಾನಿಯೊಬ್ಬನು ಸ್ವತಂತ್ರನು " ಎಂದು ಹೇಳಿದೆ. ಸ್ವರೂಪಜ್ಞಾನವನ್ನು ಹೊಂದಿದ ಜೀವನಿಗೆ ತನ್ನ ಆನಂದಕ್ಕಾಗಿ ಅನ್ಯವಿಷಯಗಳನ್ನು ಸಂಪಾದಿಸುವ ಪ್ರಯೋಜನವು ಉಳಿಯುವದಲ್ಲ; ಯಾಕಂದರೆ ಸ್ವರೂಪತಃ ಜೀವನು ಆನಂದಸ್ವರೂಪ

ನಾಗಿರುವನಂತೆ, ಸ್ವರೂಪಜ್ಞಾನವುಳ್ಳ ಜೀವನಿಗೆ ಈ ಜಗತ್ತು ಕಾರ್ಯ ದೃಷ್ಟಿಯಿಂದ ಅನಿತ್ಯವು, ಅಂತೇ ಹೇಯವಾಗಿಯೂ, ಕಾರಣದೃಷ್ಟಿಯಿಂದ ನಿತ್ಯವು, ಅಂತೇ ಸ್ವಸ್ವರೂಪವಾಗಿಯೂ ತೋರುವದೆಂದು ಜ್ಞಾನಿಗಳು ಹೇಳುವರು. ಅಂದಬಳಿಕ ಸ್ವಾತ್ಮಾರಾಮರಿಗೆ ತಮ್ಮ ಆನಂದಕ್ಕಾಗಿ ಏನನ್ನೂ ಸಂಪಾದಿಸುವ ಅವಶ್ಯವಿರುವದಿಲ್ಲ. ಅವರ ಸ್ವರೂಪಾವಲೋಕನವೇ ಅವರ ಆನಂದಕ್ಕೆ ಕಾರಣವಾಗುವದು. ಅಂತೇ ಅವರು ಸ್ವತಂತ್ರರು.

ದೇವರು ಜೀವರ ಇಂದ್ರಿಯಗಳನ್ನು ಬಹಿರ್ಮುಖವಾಗಿ ಮಾಡಿರುವದರಿಂದ, ಇಂತಹ ನಿಜವಾದ ಸ್ವಾತಂತ್ರ್ಯವುಳ್ಳ ಜೀವರು ಜಗತ್ತಿನಲ್ಲಿ ತೀರ ವಿರಲರಾಗಿರುವರೆಂದು ಹೇಳಬಹುದು; ಯಾಕಂದರೆ ಬಹುತರ ಜಗತ್ತಿನ ಜೀವರೆಲ್ಲ ತಮ್ಮ ಆನಂದಕ್ಕಾಗಿ ಬಾಹ್ಯವಿಷಯಗಳ ಸಂಪಾದನದಲ್ಲಿ ಪೇಚಾಡುತ್ತಿರುವರು. ಸ್ವಸ್ವರೂಪಜ್ಞಾನವಿಲ್ಲದ ಇಂಥ ಪಾಮರ ಜೀವರ ಆನಂದಕ್ಕೆ ಅನಿತ್ಯವಾದ ಬಾಹ್ಯವಿಷಯಗಳೇ ಆಧಾರವಾಗಿರುವದರಿಂದ ಅವರ ಆ ವಿಷಯಜನ್ಯವಾದ ಆನಂದವೂ ಅನಿತ್ಯವಾಗಿ, ಆ ಜೀವರು ವಿಷಯಲಂಪಟರಾಗಲು, ಅವರು ಸುಖದುಃಖಗಳ ಕತ್ತರಿಯ ಬಾಯಿಗೆ ಬಿದ್ದು ಒದ್ದಾಡುತ್ತಿರುವದು ಅನುಭವದ ಮಾತಾಗಿರುತ್ತದೆ. ಹೀಗೆ ಸ್ವಸ್ವರೂಪಜ್ಞಾನವಿಲ್ಲದೆ ವಿಷಯಾಧೀನರಾಗಿರುವ ಜೀವರು ಪರತಂತ್ರರಾಗಿರುವರು.

ಈ ಪರತಂತ್ರಜೀವರಲ್ಲಿಯೂ ತಾರತಮ್ಯವಿರುವದೆಂದು ವಿಚಾರದಿಂದ ಗೊತ್ತಾಗಬಹುದು. ದೇವರು ಸೃಷ್ಟಿಯನ್ನು ನಿರ್ಮಿಸುವಾಗ ಪ್ರಾಣಿಗಳನ್ನೂ, ಅವುಗಳ ಆಹಾರವಾದ ವಿಷಯಗಳನ್ನೂ, ಅವವುಗಳ ಧರ್ಮಗಳನ್ನೂ ಕೂಡಿಯೇ ರಚಿಸಿದನೆಂದು ಜ್ಞಾನಿಗಳು ಹೇಳುವರು. ಯಾವದೊಂದು ಪ್ರಾಣಿಯು ಹುಟ್ಟಿದಕೂಡಲೆ ಅದರ ಆಹಾರವೂ, ಅದರ ಧರ್ಮವೂ ಈಶ್ವರೀತಂತ್ರದಿಂದ ಸಿದ್ಧವಾಗಿಯೇ ಇರುವವು. ಕೇವಲ ಈಶ್ವರೀತಂತ್ರದಿಂದ, ಅಂದರೆ ಧರ್ಮದಿಂದ ಯಾವತ್ತು ಜೀವರು ನಡೆದುಕೊಂಡರೆ, ಯಾವ ಜೀವರಿಗೂ ಆಹಾರದ ಕೊರತೆಯಾಗಲಿಕ್ಕಿಲ್ಲ. ಮನುಷ್ಯರ ಸಂಬಂಧವಿಲ್ಲದ ಮನುಷ್ಯೇತರ ಪ್ರಾಣಿಗಳು ಹುಟ್ಟುಗುಣದಂತೆ

ಇದ್ದ ತಮ್ಮ ತಮ್ಮ ಧರ್ಮಗಳಂತೆ ನಡೆಯುತ್ತಿರುವದರಿಂದ, ಅವುಗಳಿಗೆ ಆಹಾರದ ಕೊರತೆಯಾಗದಿರುವದು ಸರ್ವತ್ರ ಅನುಭವಕ್ಕೆ ಬರುವದು ; ಆದರೆ ದೇವರು ಮನುಷ್ಯನಲ್ಲಿ ಪ್ರಮಾದಯುಕ್ತವಾದ ಕಿಂಚಿತ್ ಜ್ಞಾನವನ್ನೂ, ವಿಷಯಾಧೀನದೂಷಿತ ಕಿಂಚಿತ್‌ಸ್ವಾತಂತ್ರ್ಯವನ್ನೂ ಇಟ್ಟಿರುವದರಿಂದ, ಆತನು ಸಂಕಲ್ಪ-ವಿಕಲ್ಪಗಳ ಜಾಳಿಗೆಯಲ್ಲಿ ಸಿಕ್ಕು ಧರ್ಮಭ್ರಷ್ಟನಾಗಿ ಸುಖಾಭಿವೃದ್ಧಿಮಾಡಿಕೊಳ್ಳಲು ಹೆಣಗುತ್ತಾ ತಾನು ದುಃಖಕ್ಕೆ ಒಳಗಾಗುವನಲ್ಲದೆ, ಅನ್ಯಪ್ರಾಣಿಗಳ ಸುಖವನ್ನೂ ಹಾಳುಮಾಡತೊಡಗುವನು ; ಆದ್ದರಿಂದ ಕರುಣಾಳುಗಳಾದ ಜ್ಞಾನಿಗಳು ಇಂತಹ ಅನರ್ಥವು ಉಂಟಾಗಬಾರದೆಂದು ಜೀವರಿಗೆ ಧರ್ಮಸಮ್ಮತ ವಿಷಯಗಳನ್ನು ಮಾತ್ರ ಭೋಗಿಸಬಹುದೆಂತಲೂ, ಧರ್ಮಸಮ್ಮತವಲ್ಲದ ವಿಷಯಗಳನ್ನು ಭೋಗಿಸಲಾಗದೆಂತಲೂ ಬೋಧಿಸಬೇಕಾಗುವದು. ಜ್ಞಾನಿಗಳ ಈ ಹಿತಕಾರಕ ಬೋಧದಂತೆ ವಿವೇಕಿಗಳಾದ ಜೀವರು ನಡೆಯುವರು ; ಅಂದರೆ ಅವರು ಧರ್ಮಕ್ಕೆ ಶರಣುಹೋಗಿ ವಿಷಯಗಳನ್ನು ಭೋಗಿಸುತ್ತ, ತಮ್ಮ ಧರ್ಮಮಯ ಜೀವನವನ್ನು ಸಾಗಿಸುವರು. ಹೀಗೆ ಈ ಜೀವರು ಧರ್ಮಾಧೀನರಾಗಿ ನಡೆಯುವದರಿಂದ ಇವರನ್ನು ಧರ್ಮತಂತ್ರರೆಂದು ಕರೆಯಬೇಕಾಗುವದು. ಇವರು ಒಂದು ಬಗೆಯಿಂದ ಪರತಂತ್ರರಾಗಿದ್ದರೂ, ಸ್ವಾತಂತ್ರ್ಯದಕಡೆಗೆ ಜೋಲಿಯುಳ್ಳವರಾಗಿರುವರು.

ದೇವರು ಪ್ರಾಣಿಗಳೊಡನೆ ಸೃಷ್ಟಿಸಿದ ಆಹಾರ–ಧರ್ಮ ಇವುಗಳಲ್ಲಿ ಧರ್ಮವು ಜಗತ್ತಿನ ಧಾರಣೆಗೆ ಅವಶ್ಯವಾಗಿದ್ದರೂ, ಧರ್ಮಸೇವನಕ್ಕಿಂತ ಆಹಾರಸೇವನವು ಪ್ರಾಣಿಗಳಿಗೆ ಅತ್ಯವಶ್ಯವು, ಅಥವಾ ಅಪರಿಹಾರ್ಯವು ಆಗಿರುವದು. ಆದ್ದರಿಂದ ಸಂಕಲ್ಪ-ವಿಕಲ್ಪಗಳ ಜಾಳಿಗೆಯಲ್ಲಿ ಸಿಕ್ಕ ಮನುಷ್ಯನಿಗೂ ಕೂಡ ಉಳಿದ ಪ್ರಾಣಿಗಳಂತೆ ಆಹಾರವು ಅವಶ್ಯವಾಗಿ ಬೇಕಾಗುವದು. ಧರ್ಮತ್ಯಾಗಮಾಡಿದ ಜೀವಿಗಳು ಅಧರ್ಮಿಷ್ಠರಾಗಿಯಾದರೂ ಜೀವಿಸಬಹುದು ; ಆದರೆ ಎಲ್ಲಬಗೆಯ ಆಹಾರತ್ಯಾಗಮಾಡಿದ ಜೀವಿಗಳು ಸರ್ವಥಾ ಜೀವಿಸಲಾರರು ; ಆದ್ದರಿಂದ ಪ್ರಾಣಿಗಳಿಗೆ ಧರ್ಮಕ್ಕಿಂತ ಆಹಾರದ ಅಗತ್ಯವು ವಿಶೇಷವಾಗಿರುತ್ತದೆ ; ಅಂತೇ ಹುಟ್ಟಿದಕೂಡಲೆ ಪ್ರಾಣಿಗಳು ಆಹಾರಗ್ರಹಣಮಾಡಲು ಯತ್ನಿಸುವವು.

ಪ್ರಾಣಿಗಳ ಆ ಯತ್ನವು ಸಾಧ್ಯವಾಗುವಂತೆ ಕರುಣಾಳುವಾದ ದೇವರು ಆಯಾ ಪ್ರಾಣಿಗಳ ಆಹಾರವನ್ನು ಸಿದ್ಧಮಾಡಿಟ್ಟಿರುವನು. ಪರಮೇಶ್ವರನ ಈ ಸುವ್ಯವಸ್ಥೆಯ ಮೂಲಕವಾಗಿಯೇ—"ಹುಟ್ಟಿಸಿದ ದೇವರು ಹುಲ್ಲುಮೇಸುವದಿಲ್ಲವೆಂ"ಬ ಗಾದೆಯು ಲೋಕದಲ್ಲಿ ಪ್ರಸಿದ್ಧವಾಗಿರುತ್ತದೆ. ಹೀಗೆ ಹುಟ್ಟಿದ ಕೂಡಲೆ ಪ್ರಾಣಿಗಳಿಗೆ ತಮ್ಮ ತಮ್ಮ ಆಹಾರಗಳನ್ನು ಗ್ರಹಿಸುವ ಸ್ವಾತಂತ್ರ್ಯವನ್ನು, ಅಥವಾ ಹಕ್ಕನ್ನು ದೇವರು ಕೊಟ್ಟಿರುವದರಿಂದಲೇ, ವ್ಯವಹಾರ ದೃಷ್ಟಿಯಿಂದ—"ಸ್ವಾತಂತ್ರ್ಯವು ಜೀವರ ಜನ್ಮಸಿದ್ಧ ಹಕ್ಕು ಇರುತ್ತದೆಂ"ದು ಕೆಲಕೆಲವರು ಹೇಳುವದುಂಟು. ಒಟ್ಟಿಗೆ, ಜೀವರು ಧರ್ಮಾಧೀನರಾಗದಿದ್ದರೂ ವಿಷಯಾಧೀನರು ಆಗಿಯೇ ತೀರುವರು. ಧರ್ಮಾಧರ್ಮ ವಿವೇಕವಿಲ್ಲದ ಇಂಥ ವಿಷಯಾಧೀನಜೀವರನ್ನು ವಿಷಯತಂತ್ರರೆಂದು ಕರೆಯತಕ್ಕದ್ದು; ಇವರಾದರೂ ಒಂದು ಬಗೆಯಿಂದ ಪರತಂತ್ರರೇ. ಈ ಪಾರತಂತ್ರ್ಯವು ಜೀವರ ಪತನ ಹೇತುವಾದದ್ದರಿಂದ ಅದು ಧರ್ಮತಂತ್ರಕ್ಕಿಂತಲೂ ಹೀನವಾಗಿರುವದು.

ಮೇಲೆ ಹೇಳಿದಂತೆ ಕಿಂಚಿತ್ ಜ್ಞಾನ-ಕಿಂಚಿತ್ ಸ್ವಾತಂತ್ರ್ಯಗಳ ಮೂಲಕ ಸಂಕಲ್ಪ-ವಿಕಲ್ಪಗಳ ಜಾಳಿಗೆಗೆಸಿಕ್ಕಮನುಷ್ಯಪ್ರಾಣಿಗಳು ಧರ್ಮತಂತ್ರರಾಗದೆ, ಕೇವಲ ವಿಷಯತಂತ್ರರಾಗಿ ಮನಸ್ಸಿಗೆ ಬಂದಂತೆ ವಿಷಯಗಳನ್ನು ಭೋಗಿಸುತ್ತಹೋಗಲು, ಅವರ ಅಧಃಪತನವಾಗುತ್ತ ಹೋಗಿ, ಅಂದರೆ ಅವರು ಆತ್ಮಬಲಹೀನರೂ, ಶರೀರಬಲಹೀನರೂ ಆಗಿ ಬಲಿಷ್ಠರಾದ ಬೇರೆ ಧರ್ಮತಂತ್ರ ಜೀವರ, ವಿಶೇಷವಾಗಿ ವಿಷಯತಂತ್ರಜೀವರ ತಂತ್ರಕ್ಕೆ ಒಳಗಾಗಿ, ತಮ್ಮ ಈಶ್ವರದತ್ತವಾದ ವಿಷಯಭೋಗದ ಹಕ್ಕಿಗೂ ಎರವಾಗಿ ಪಶುಗಳಿಗಿಂತಲೂ ಕಡೆಯಾಗುವರು! ಇವರನ್ನು ಜೀವತಂತ್ರರೆಂದು ಕರೆಯತಕ್ಕದ್ದು. ಈ ಜೀವತಂತ್ರರ ಯಥೇಚ್ಛವಿಷಯಭೋಗಕ್ಕೂ ಅನ್ಯ ಜೀವರ ನಿಯಾಮಕತೆಯಿಂದ ಬಾಧೆಯುಂಟಾಗಿ, ಈ ಪತಿತಜೀವರು ಹೊಟ್ಟೆಬಟ್ಟೆಗಳ ಕೋಳೆಪಾಟಕ್ಕೂ ಗುರಿಯಾಗಬೇಕಾಗುತ್ತದೆ. ಇಂಥ ಹೀನಸ್ಥಿತಿಯು ಈ ಉಪಪರ್ವದಲ್ಲಿ ವಿನತೆಗೆ ಬಂದದ್ದರಿಂದ, ಆಕೆಯು ತನ್ನ ನಿಯಾಮಕಳಾದ ಕದ್ರುವಿಗೆ ಅಧೀನಳಾಗಿ ದುಃಖಪಟ್ಟಿರುವಳು. ಇಂಥ ಜೀವತಂತ್ರಜೀವರರಾಷ್ಟ್ರಕ್ಕೆ ಪರತಂತ್ರರಾಷ್ಟ್ರವೆನ್ನುವರು. ಈ ರಾಷ್ಟ್ರೀಯ

ಪಾರತಂತ್ರ್ಯದುಃಖವು ಕಾಲಗತಿಯಿಂದ ಯಾವರಾಷ್ಟ್ರಕ್ಕೂ ತಪ್ಪಿರುವದಿಲ್ಲ. ಈ ಜೀವತಂತ್ರಜೀವರು, ಈಶ್ವರೀತಂತ್ರಗಳೆನಿಸುವ ಧರ್ಮತಂತ್ರ-ವಿಷಯ ತಂತ್ರಗಳಿಂದ ಪತಿತರಾದದ್ದರಿಂದ ಪರತಂತ್ರರಲ್ಲಿ ಪರತಂತ್ರರಾಗಿರುವರು.

ಒಟ್ಟಿನಲ್ಲಿ ಹೇಳುವದೇನಂದರೆ, ಜೀವರಲ್ಲಿ ಸ್ವಸ್ವರೂಪಜ್ಞಾನಿಗಳು ಸ್ವತಂತ್ರರು. ಇವರು ಶ್ರೇಷ್ಠವರ್ಗದ ಜೀವರು. ಅಂಥವರಲ್ಲದ ಬೇರೆ ಜೀವರೆಲ್ಲ ಒಂದಿಲ್ಲೊಂದು ಬಗೆಯಿಂದ ಪರತಂತ್ರರು. ಆ ಪರತಂತ್ರಜೀವ ರಲ್ಲಿ ಶ್ರೇಷ್ಠತ್ವದ ತರಗತಿಯಿಂದ ಸ್ವತಂತ್ರಜೀವರ ಕೆಳಗೆ ಕ್ರಮವಾಗಿ— ಧರ್ಮತಂತ್ರರು, ವಿಷಯತಂತ್ರರು, ಜೀವತಂತ್ರರು ಬರುವರು. ಈಶ್ವರೀ ತಂತ್ರಗಳೆನಿಸುವ ಧರ್ಮತಂತ್ರ-ವಿಷಯತಂತ್ರಗಳನ್ನು ಕಳಕೊಂಡು ಹೀನ ತರವಾದ ಜೀವತಂತ್ರಕ್ಕೆ ಒಳಗಾದ ಜೀವರ ಉದ್ಧಾರವು ಹೇಗಾಗಬೇಕೆಂ ಬದನ್ನು ಈ ಉಪಪರ್ವದೊಳಗಿನ ಭಗವಾನ್ ಗರುಡನ ಚರಿತ್ರದಿಂದ ಕಲಿ ಯಬಹುದಾಗಿದೆ. ಮಹಾತ್ಮನಾದ ಗರುಡನು ಪ್ರಾಮುಖ್ಯವಾಗಿ ಮಾತಾ ಪಿತೃಭಕ್ತನೂ, ಧರ್ಮಿಷ್ಠನೂ, ದಯಾಲುವೂ, ನಿಸ್ಪೃಹಿಯೂ, ಪೌರು ಷಿಯೂ, ನಯ-ಭಯ-ಭಕ್ತಿಗಳುಳ್ಳವನೂ, ಪರಾಕ್ರಮಿಯೂ, ಬಲಿ ಷ್ಠನೂ ಆಗಿದ್ದನೆಂಬದನ್ನು ಆತನ ಉಜ್ವಲತರ ಚರಿತ್ರದ ಮಾರ್ಮಿಕಾವ ಲೋಕನದಿಂದ ಅರಿತುಕೊಳ್ಳಬಹುದಾಗಿದೆ; ಆದ್ದರಿಂದ ಜೀವತಂತ್ರಕ್ಕೊ ಳಗಾಗಿದ್ದ ಯಾವದೊಂದು ಪತಿತರಾಷ್ಟ್ರವು ದಾಸ್ಯಮುಕ್ತವಾಗಬೇಕೆಂದು ಇಚ್ಛಿಸುತ್ತಿದ್ದರೆ, ಆ ರಾಷ್ಟ್ರದೊಳಗಿನ ಜೀವರು, ಪ್ರಾಮುಖ್ಯವಾಗಿ ಮುಖಂಡರೆನಿಸಿಕೊಳ್ಳುವವರು ಡಾಂಭಿಕತನವನ್ನೂ, ಸ್ವಾರ್ಥವನ್ನೂ, ಹೇಡಿತನವನ್ನೂ, ಪ್ರತಿಷ್ಠಾಕಾಂಕ್ಷೆಯನ್ನೂ, ಲಂಡತನವನ್ನೂ, ದೈನ್ಯ ವನ್ನೂ, ಕ್ರೌರ್ಯವನ್ನೂ, ನಾಸ್ತಿಕತನವನ್ನೂ, ಹಟಮಾರಿತನವನ್ನೂ ಬಿಟ್ಟು ತೇಜಸ್ವಿ ಗರುಡನ ಗುಣಗಳನ್ನು ಅನುಕರಿಸಿ, ತಪಸ್ಸಿನಿಂದ ಅವನ್ನು ಸಂಪಾ ದಿಸಿ ಭಗವಾನ್ ಗರುಡನಂತೆ ದೀರ್ಘಪ್ರಯತ್ನಮಾಡತಕ್ಕದ್ದು. ಅಂದರೆ ಗರುಡನ ತಾಯಿಯು ದಾಸ್ಯಮುಕ್ತಳಾದಂತೆ, ಜೀವತಂತ್ರರ ರಾಷ್ಟ್ರಮಾ ತೆಯು ದಾಸ್ಯಮುಕ್ತಳಾಗುವಳು. ಹಾಗೆ ಮಾಡದೆ ಏನೇನೋ ಮಾಡಿದರೆ, ನೆಲವಿಗೆ ಹಾಕದ ಬೆಕ್ಕು ಸ್ವರ್ಗಕ್ಕೆ ಹಾರಹೋದಂತಾಗುವದು ! ಮುನೆತನ ಕೆಡಿಸಿ ರಾಷ್ಟ್ರಹಿತಮಾಡಹೋಗುವವರಿಗೆ ಹೀಗನ್ನದೆ ಏನುಮಾಡಬೇಕು?

೧೮. **ಸಹಕಾರವೇ ಮಹಾಕಾರ್ಯದ ಮೂಲವು**—ಸಹಕಾರವೆಂದರೆ ಅನುಕೂಲವಾಗಿ ನಡೆಯುವದೆಂತಲೂ, ಅಸಹಕಾರವೆಂದರೆ ಪ್ರತಿಕೂಲವಾಗಿ ನಡೆಯುವದೆಂತಲೂ ಸಾಧಾರಣವಾಗಿ ಕುರುಬಲೆಕ್ಕದಿಂದ ಹೇಳಬಹುದು. ಪಿಂಡಗಳಷ್ಟು ಪ್ರಕೃತಿಗಳೆಂಬ ಸಿದ್ಧಾಂತಕ್ಕನುಸರಿಸಿ, ಜಗತ್ತಿನಲ್ಲಿ ಭಿನ್ನಭಿನ್ನ ಸ್ವಭಾವದ ಜನರಿರುವದು ಅನುಭವಸಿದ್ಧವು; ಆದರೆ ಸರ್ವರಿಗೂ ಸಾಧಾರಣವಾಗಿರುವ ಯಾವದೊಂದು ಮಹಾಕಾರ್ಯವನ್ನು ಮಾಡಬೇಕಾದಾಗ, ಅವರೆಲ್ಲರೂ ಆ ಮಹಾಕಾರ್ಯದಿಂದಾಗುವಮಹಾಫಲವನ್ನು ಲಕ್ಷಿಸಿ ತಮ್ಮಲ್ಲಿಯ ಭಿನ್ನತ್ವವನ್ನು ಮರೆತು ಪರಸ್ಪರ ಸಹಕಾರವನ್ನು ಬಳಿಸಬೇಕಾಗುತ್ತದೆ; ಯಾಕಂದರೆ, ಮಹಾಕಾರ್ಯಸಾಧನಕ್ಕೆ ಮಹಾಶಕ್ತಿಯೇ ಬೇಕಾಗುವದು. ಸಹಕಾರದಿಂದ ಶಕ್ತಿಯ ವೃದ್ಧಿಯೂ, ಅಸಹಕಾರದಿಂದ ಶಕ್ತಿಯ ಕ್ಷಯವೂ ಆಗುವವೆಂಬ ಮಾತಂತು ಅನುಭವಸಿದ್ಧವು. ಈ ಉಪಪರ್ವದೊಳಗಿನ ಸಮುದ್ರಮಥನದ ಮಹಾಕಾರ್ಯಕ್ಕಾಗಿ ಜನ್ಮತಃ ವೈರಿಗಳಾಗಿದ್ದ ದೇವದೈತ್ಯರುಕೂಡ ಒಂದಾಗಿ ಪರಸ್ಪರ ಸಹಕಾರಬೆಳಿಸಿದ್ದು ಈ ಮಾತಿಗೆ ಸಾಕ್ಷಿಯಾಗಿರುತ್ತದೆ. ಸಮುದ್ರಮಥನದ ಕಾರ್ಯವು ದೇವತೆಗಳೊಬ್ಬರ ಶಕ್ತಿಗೂ ಮೀರಿದ್ದಾಗಿತ್ತು; ದೈತ್ಯರೊಬ್ಬರ ಶಕ್ತಿಗೂ ಮೀರಿದ್ದಾಗಿತ್ತು; ಆದ್ದರಿಂದ ಅದನ್ನು ಸಾಧಿಸುವದಕ್ಕಾಗಿ ಜಗತ್ಪಾಲಕನಾದ ಮಹಾವಿಷ್ಣುವಿನ ಉಪದೇಶದಂತೆ ದೇವತೆಗಳು ದೈತ್ಯರವಿಷಯದ ತಮ್ಮ ದ್ವೇಷಭಾವವನ್ನು ಮರೆತು, ಅವರೊಡನೆ ಸಹಕಾರಬಳಿಸಿ ಅಮೃತವನ್ನು ಸಂಪಾದಿಸಿದರು.

ಇದರಂತೆ ಇಡಿಯ ರಾಷ್ಟ್ರಕ್ಕೆ ಸಂಬಂಧಿಸಿದ ರಾಷ್ಟ್ರೀಯ ಸ್ವಾತಂತ್ರ್ಯಾದಿ ಮಹಾಕಾರ್ಯಗಳನ್ನು ಸಾಧಿಸಬೇಕಾದಾಗೂ, ರಾಷ್ಟ್ರದ ಘಟಕಗಳಾದ ಭಿನ್ನಭಿನ್ನಸ್ವಭಾವದ, ಭಿನ್ನಭಿನ್ನಮತದ, ಭಿನ್ನಭಿನ್ನಸಂಸ್ಕೃತಿಯ, ಭಿನ್ನಭಿನ್ನ ಜಾತಿಯವರೆಲ್ಲರೂ ಪರಸ್ಪರ ಸಹಕಾರವುಳ್ಳವರಾಗಬೇಕಾಗುವದು. ಹೀಗಾಗದೆ ನಿಜವಾದ ರಾಷ್ಟ್ರೀಯ ಸ್ವಾತಂತ್ರ್ಯವು ದೊರೆಯಲಾರದು; ಯಾಕಂದರೆ, ರಾಷ್ಟ್ರದ ಸ್ವಾತಂತ್ರ್ಯವನ್ನು ರಾಷ್ಟ್ರದೊಳಗಿನ ಜನರೆಲ್ಲರೂ ಅಲ್ಲದೆ, ರಾಷ್ಟ್ರದೊಳಗಿನ ಏಕದೇಶೀಯಜನರು ಸಂಪಾದಿಸುವದು ಹೇಗೆ ಶಕ್ಯವಾದೀತು? ರಾಷ್ಟ್ರಮುಖಂಡರು ರಾಷ್ಟ್ರಹಿತೋನ್ಮುಖರೂ,

ಸ್ವಾವಲಂಬಿಗಳೂ, ಪೌರುಷಪ್ರಿಯರೂ, ಧರ್ಮಶರಣರೂ ಆಗಿ, ನಿಸ್ವಾರ್ಥ ಬುದ್ಧಿಯಿಂದ ಮೊದಲು ತಮ್ಮತಮ್ಮೊಳಗೆ ರಾಷ್ಟ್ರೀಯಧರ್ಮವನ್ನು ಗೊತ್ತುಪಡಿಸಿಕೊಂಡು, ಆ ರಾಷ್ಟ್ರಧರ್ಮಕ್ಕೆ ಶರಣುಹೋಗಿ ಪರಸ್ಪರ ಅಕೃತ್ರಿಮ ಸಹಕಾರವುಳ್ಳವರಾಗಿ ದೀರ್ಘಪ್ರಯತ್ನದಿಂದ ರಾಷ್ಟ್ರೀಯ ಸ್ವಾತಂತ್ರ್ಯವನ್ನು ಸ್ವತಃ ಸಂಪಾದಿಸಬೇಕಾಗುವದು. ಹಾಗೆಮಾಡದೆ, ಸ್ವಾರ್ಥ ಲಂಪಟರಾದ ಭಿಕ್ಷೆಯಭಟ್ಟರಂತೆ, ಜೋಳಿಗೆಯ ಜಂಗಮರಂತೆ, ಪರಟೆಯ ಫಕೀರರಂತೆ ರಾಷ್ಟ್ರೀಯ ಸ್ವಾತಂತ್ರ್ಯಾಪಹಾರಕ ಮಹಾಶಕ್ತಿಯ ಮುಂದೆ ನೆರೆದು ತಮ್ಮಜೋಳಿಗೆ ಎಲ್ಲರಿಗಿಂತ ಹೆಚ್ಚಿಗೆ ಹೇಗೆ ತುಂಬೀತೆಂದು ಬಡಿದಾಡಹತ್ತಿದರೆ, ಸ್ವಾತಂತ್ರ್ಯದ ಗಂಧವಾದರೂ ಇವರಿಗೆ ಹತ್ತಬಹುದೋ ? ಈಜಗಳಗಂಟಮೂರ್ಖರನ್ನು ಆ ಸ್ವಾತಂತ್ರ್ಯಾಪಹಾರಕ ಪ್ರಬಲಶಕ್ತಿಯು ಉಪಹಾಸದಿಂದ ನೋಡುತ್ತಿರಲು, ಕಲಹದ ಮೂಲಕ ಬಲಹೀನರೂ, ಅಂತೇ ತಿರಸ್ಕರಣೀಯರೂ ಆಗಿಹೋಗಿದ್ದ ಈ ಭಿಕ್ಷುಕರು, ತಮ್ಮ ಜಗಳ ತೀರಿಸಲು ಆ ಪ್ರಬಲಶಕ್ತಿಗೆ ಶರಣುಹೋದಂತಾಗಿ, ನಾವು ಸ್ವಾತಂತ್ರ್ಯ ಭೋಗಕ್ಕೆ ಪಾತ್ರರಲ್ಲವೆಂತಲೂ, ನಮ್ಮ ಆ ಪ್ರೀತಿಯ ಪಾರತಂತ್ರ್ಯವೇ ನಮಗಿರಲೆಂತಲೂ ಪರ್ಯಾಯದಿಂದ ಹೇಳಿದ ಹಾಗಾಗುವದಿಲ್ಲವೋ ?

**೧೯ ಹುಟ್ಟುಗುಣವು ಹುಗಿದರೂ ಹೋಗುವದಿಲ್ಲ** - ಸ್ವಾರ್ಥ ಮೂಲವಾದದ್ವೇಷ, ಅಸೂಯಾ ಮೊದಲಾದಗುಣಗಳು ಸ್ವಾರ್ಥಪರಗಳಾದ ಪ್ರಾಣಿಮಾತ್ರಗಳ ಹುಟ್ಟುಗುಣಗಳಾಗಿರುವವೆಂದು ಹೇಳಬಹುದು. ಮನುಷ್ಯರಲ್ಲಿಯಂತು ಸ್ವಾರ್ಥವುಹೆಚ್ಚು; ಆ ಸ್ವಾರ್ಥವುಹೆಚ್ಚುಇದ್ದಮಾನದಿಂದ ಅವರಲ್ಲಿ ದ್ವೇಷಾಸೂಯೆಗಳೂ ಹೆಚ್ಚಾಗಿರುವವು. ಇದಕ್ಕೆ ಈ ಪರ್ವದೊಳಗಿನ ಕದ್ರು-ವಿನತೆಯರ ನಡತೆಯೇ ಉದಾಹರಣವಾಗಿರುವದು. ಕದ್ರು-ವಿನತೆಯರು ಮಹಾತ್ಮನಾದ ಪ್ರಾಚೇತಸ ದಕ್ಷಪ್ರಜಾಪತಿಯ ಹೊಟ್ಟೆಯಲ್ಲಿ ಹುಟ್ಟಿದವರು ; ಕಶ್ಯಪ ಪ್ರಜಾಪತಿಯಂತಹ ಮಹರ್ಷಿಯ ಕೈಯನ್ನು ಹಿಡಿದವರು ; ಅಂಥವರಲ್ಲಿ ದ್ವೇಷಾಸೂಯಗಳು ಕಂಡುಬರುವದರಿಂದ, ಹುಟ್ಟುಗುಣವು ಹುಗಿದರೂ ಹೋಗುವದಿಲ್ಲವೆಂಬದೇ ನಿಜವು. ಅದರಲ್ಲಿಯೂ ವಿನತೆಗಿಂತ ಕದ್ರುವಿನಲ್ಲಿಯ ಸ್ವಾಥ-ಬುದ್ಧಿಯು ಪ್ರಬಲವಾದದ್ದು. ಅಂತೇ ಆಕೆಯು ಮೋಸದಿಂದಾದರೂ ಸ್ವಾರ್ಥವನ್ನು ಸಾಧಿಸ

ಬೇಕೆಂದು ಹೋಗಿ, ಮಕ್ಕಳಾದ ಸರ್ಪಗಳೊಡನೆ ತಾನು ಅಪಕೀರ್ತಿಗೂ, ಹಾನಿಗೂ ಗುರಿಯಾದಳು. ವಿನತೆಯಾದರೂ ಮಾತ್ಸರ್ಯದ ಮೂಲಕವಾಗಿಯೇ ಹೆಳವಮಗನನ್ನು ಹಡೆದದ್ದಲ್ಲದೆ, ಆ ಹೆಳವಮಗ-ಅರುಣನ ಶಾಪದಿಂದ ಕದ್ರುವಿನ ದಾಸಿಯಾಗಬೇಕಾಯಿತು ; ಆದ್ದರಿಂದ ಹಿತಾಪೇಕ್ಷಿಗಳು ದ್ವೇಷಾಸೂಯಗಳ ಬೀಜವಾದ ಸ್ವಾರ್ಥಬುದ್ಧಿಯನ್ನು ಸತ್ಸಮಾಗಮಾದಿಗಳಿಂದ ಪ್ರಯತ್ನಪೂರ್ವಕ ಕಡಿಮೆಮಾಡುತ್ತ ಹೋಗಬೇಕು. ಅದರಲ್ಲಿ ನೀಚಸ್ವಾರ್ಥಕ್ಕಂತು ಸರ್ವಥಾ ಆಸ್ಪದಕೊಡಬಾರದು. ನೀಚಸ್ವಾರ್ಥವೆಂದರೆ, ಧರ್ಮವಿರುದ್ಧವಾದ ಸ್ವಾರ್ಥವು ಧರ್ಮಸಮ್ಮತವಾದ ಸ್ವಾರ್ಥವು ಅಷ್ಟು ಬಾಧಕವಲ್ಲವು.

**೨೦ ಅತ್ಯಾಶೆ ಗತಿಗೆಡಿಸಿತು**—ದೇವ ದೈತ್ಯರು ಅಮೃತ ಪ್ರಾಪ್ತಿಗಾಗಿ ಸಮುದ್ರವನ್ನು ಕಡೆದರಷ್ಟೆ? ಅಂದಬಳಿಕ ಅಮೃತಪ್ರಾಪ್ತಿಯಾದ ಮೇಲೆ ಅವರು ಸಮುದ್ರಮಥನದ ಕಾರ್ಯವನ್ನು ಯಾಕೆ ನಿಲ್ಲಿಸಬಾರದು? ಆದರೆ ಆ ದೇವದೈತ್ಯರು ಅತ್ಯಾಶೆಗೆ ಬಿದ್ದು ಮತ್ತೂ ಸಮುದ್ರವನ್ನು ಕಡೆಯಹತ್ತಿದ್ದರಿಂದ, ಕಡೆಗೆ ಕಾಲಕೂಟವಿಷವು ಹುಟ್ಟಿ ಅದರಿಂದ ದೇವದೈತ್ಯರಿಬ್ಬರೂ ಗತಿಗೆಟ್ಟರು. ಇದರಂತೆ ದ್ರವ್ಯಸಂಪಾದನ, ರಾಜ್ಯಸಂಪಾದನ, ಅಧಿಕಾರಸಂಪಾದನ ಇತ್ಯಾದಿ ಪರತೇಜೋಭಂಗದ ಪ್ರಸಂಗಗಳಲ್ಲಿ ಅತ್ಯಾಶೆಗೆ ಬಿದ್ದರೆ, ಆಶೆಬುರುಕರು ಕಡೆಗೆ ನಿಶ್ಚಯವಾಗಿ ಗತಿಗೆಡಬೇಕಾಗುವದು. ಕದಾಚಿತ್ ಆಶೆಬುರುಕರ ಪುಣ್ಯವಿಶೇಷದಿಂದ ಅವರು ಈ ಜನ್ಮದಲ್ಲಿ ಕಷ್ಟವನ್ನು ಭೋಗಿಸದಿದ್ದರೂ, ಜನ್ಮಾಂತರದಲ್ಲಿ ಅವರ ಕಷ್ಟವು ತಪ್ಪಿದ್ದಲ್ಲ ; ಮತ್ತು ಅವರ ಸಂತತಿಯವರು ನಿಶ್ಚಯವಾಗಿ ಅತ್ಯಾಶೆಯ ದುಷ್ಪರಿಣಾಮವನ್ನು ಅನುಭವಿಸಬೇಕಾಗುವದು.

**೨೧ ಮಾತಾಪಿತೃಗಳು ಶ್ರೇಷ್ಠದೈವತವು—ಈ** ನೀತಿಯನ್ನು ಶ್ರುತಿಯು "ಮಾತೃದೇವೋಭವ" "ಪಿತೃದೇವೋಭವ" ಎಂದು ಬೋಧಿಸುವದಲ್ಲದೆ, ಈ ಆಸ್ತಿಕ ಪರ್ವದೊಳಗಿನ ಗರುಡನ ಚರಿತ್ರವು ಈ ನೀತಿಯನ್ನು ಸ್ಪಷ್ಟವಾಗಿ ಬೋಧಿಸುತ್ತಿರುವದು. ಸರ್ಪಗಳು ತಾಯಿಯ ಮಾತುಮೀರಿ ಆಕೆಯ ಶಾಪದಿಂದ ವಿಪತ್ತು ಭೋಗಿಸಿದವು ; ಆದರೆ ಗರುಡನು ತಾಯಿ ತಂದೆಗಳಿಬ್ಬರ ಆಜ್ಞೆಯನ್ನು ಪಾಲಿಸಿ, ಅವರ

ಆಶೀರ್ವಾದದಿಂದ ಅಜಿಂಕ್ಯ ಇಂದ್ರನನ್ನೂ ಜಯಿಸಿ ಆತನ ಸ್ನೇಹವನ್ನು ಸಂಪಾದಿಸಿ ಅಮೃತವನ್ನು ತಂದನು. ಗರುಡನ ಬಲದ ಗುಟ್ಟು ತಾಯಿ ತಂದೆಗಳ ಆಶೀರ್ವಾದದಲ್ಲಿರುತ್ತದೆಂಬದನ್ನು ತಿಳಿದು, ಮಕ್ಕಳು ಮಾತಾ ಪಿತೃ ಭಕ್ತರಾಗತಕ್ಕದ್ದು. ಅದಕ್ಕಾಗಿ ಮಕ್ಕಳು ತಮ್ಮ ದ್ರವ್ಯ, ಅಧಿಕಾರಾದಿಗಳ ಅಹಂಕಾರವನ್ನು ಬಿಟ್ಟು ತಾಯಿ-ತಂದೆಗಳವಿಷಯದಲ್ಲಿ ವಿನಯ ಭಾವವನ್ನು ತಾಳತಕ್ಕದ್ದು ; ತಮ್ಮ ಜ್ಞಾನದ ಹೆಮ್ಮೆಯನ್ನು ಬದಿಗಿಟ್ಟು ತಾಯಿ - ತಂದೆಗಳ ಮುಂದೆ ವಿನಮ್ರರಾಗಿರತಕ್ಕದ್ದು. ಈ ಮಾತನ್ನು ಗರುಡನ ಚರಿತ್ರದಿಂದ ಕಲಿಯಬಹುದಾಗಿದೆ. ನಾವು ಎಂಥ ಲಾಭಪ್ರಸಂಗವಿದ್ದರೂ ತಾಯಿ ತಂದೆಗಳ ಮಾತು ಮೀರತಕ್ಕದ್ದಲ್ಲವೆಂಬದಿಷ್ಟೇ ಅಲ್ಲ, ನಮ್ಮ ಹಾನಿಯಾಗುವ ಪ್ರಸಂಗದಲ್ಲಿಯೂ ನಾವು ಅವರ ಅಪ್ಪಣೆಯನ್ನು ಪಾಲಿಸಬೇಕು ; ಯಾಕಂದರೆ, ಅವರಿಂದಲೇ ನಮ್ಮ ದೇಹವು ಉತ್ಪನ್ನವಾಗಿ ದೊಡ್ಡದಾಗಿರುವದು. ಅಂದಬಳಿಕ ಅವರದಾಗಿರುವ ದೇಹದ ವಿನಿಯೋಗವನ್ನು ಅವರ ಸೇವೆಯಲ್ಲಿ ಮಾಡುವದು ಸತ್ಪುತ್ರನ ಕರ್ತವ್ಯವಾಗಿರುವದು. ಆ ಕರ್ತವ್ಯ ಪಾಲನದಿಂದಲೇ ಮಕ್ಕಳ ನಿಜವಾದ ಕಲ್ಯಾಣವಾಗುತ್ತದೆ.

**೨೨ ದೊಡ್ಡವರ ನಿಗ್ರಹವೂ ಅನುಗ್ರಹವೇ**— ಈ ಪರ್ವದಲ್ಲಿ ವಿನತೆಯು ತನ್ನ ಮಗನಾದ ಗರುಡನಿಗೆ ವ್ಯಾಧರನ್ನು ತಿನ್ನೆಂತಲೂ, ಬ್ರಾಹ್ಮಣರನ್ನು ತಿನ್ನಬೇಡೆಂತಲೂ ಹೇಳಿದ್ದೂ, ಕಶ್ಯಪರು ಅದೇ ಗರುಡನಿಗೆ ಆನೆ-ಆವೆಗಳನ್ನು ನಿಃಶಂಕವಾಗಿತಿನ್ನೆಂದು ಹೇಳಿದ್ದೂ ವ್ಯವಹಾರತಃ ಅನ್ಯಾಯದವಾಗಿ ತೋರಬಹುದಾಗಿದೆ ; ಆದರೆ ತತ್ವತಃ ನೋಡಿದರೆ ವಿನತೆ—ಕಶ್ಯಪರು ತಮ್ಮ ಮಗನಿಗೆ ಆಹಾರ ಒದಗಿಸಿಕೊಡುವ ನೆವದಿಂದ ಜಗತ್ತಿನ ಕಲ್ಯಾಣಮಾಡಿದರೆಂತಲೇ ಹೇಳಬೇಕಾಗುವದು. ಮಹಾ ಸಮರ್ಥನಾದ ಜಗದ್ಭಕ್ಷಕ ಗರುಡನು ಜಗತ್ತನ್ನೆಲ್ಲ ವಿಧಿನಿಷೇಧವಿಲ್ಲದೆ ಭಕ್ಷಿಸಬಹುದಾಗಿತ್ತು ; ಆದರೆ ಸಜ್ಜನರನ್ನೂ, ದುರ್ಜನರನ್ನೂ ಕೂಡಿಯೇ ಭಕ್ಷಿಸಿ ಗರುಡನು ಜಗತ್ಕಂಟಕನಾಗುವ ಪ್ರಸಂಗವನ್ನು ತಪ್ಪಿಸುವದಕ್ಕಾಗಿ, ಧರ್ಮತಃ ತಮಗೆ ವಧ್ಯರಾಗಿ ತೋರಿದವರನ್ನೇ ಕೊಲ್ಲಲು ಗರುಡನನ್ನು ನಿಯಮಿಸಿ ಜಗತ್ತಿನ ಶಾಪವನ್ನು ತಪ್ಪಿಸಿದರು. "ಸರ್ವ

ನಾಶೇ ಸಮುತ್ಪನ್ನೇ ಅರ್ಧಂ ತ್ಯಜತಿಪಂಡಿತಃ'' ಎಂಬ ನ್ಯಾಯವನ್ನಾದರೂ ಇಲ್ಲಿ ಉಪಯೋಗಿಸಿಕೊಳ್ಳಬಹುದು. ಅಲ್ಲದೆ, ಪಾಪದಿಂದ ನೀಚಯೋನಿಯೂ, ಪುಣ್ಯದಿಂದ ಉಚ್ಚಯೋನಿಯೂ ಪ್ರಾಪ್ತವಾಗುವವೆಂದು ಶಾಸ್ತ್ರದ ಸಿದ್ಧಾಂತವಿರುವದು. ಮಹಾಪುರುಷರ ಸಂದರ್ಶನ-ಸಂಪರ್ಕಗಳಿಂದಲೂ, ಅವರಿಂದ ಮರಣ ಒದಗುವದರಿಂದಲೂ ಪಾಪಕ್ಷಯವಾಗುವ ಉದಾಹರಣಗಳು ಡುಂಡುಭ, ಅಹಲ್ಯೆ, ಶಿಶುಪಾಲರಂಥವರವು ಪುರಾಣಾಂತರದಲ್ಲಿ ಹಲವು ಇರುವವು. ಅದರಂತೆ, ಮಹಾತ್ಮನಾದ ಗರುಡನ ಆಹಾರವಾಗುವದರಿಂದ, ಆ ಆನೆ-ಆಮೆಗಳ ಜನ್ಮಹೊಂದಿದ ಇಬ್ಬರೂ ತಪಸ್ವಿ ಬ್ರಹ್ಮಋಷಿಗಳ, ಹಾಗು ವ್ಯಾಧರ ಪಾಪನಾಶವಾಗುವಲ್ಲಿ ಸಂಶಯವಿಲ್ಲ; ಆದ್ದರಿಂದ ದೊಡ್ಡವರ ಅನುಗ್ರಹದಿಂದ ಕಲ್ಯಾಣವಾದಂತೆ, ಅವರ ನಿಗ್ರಹದಿಂದಲೂ ಕಲ್ಯಾಣವೇ ಆಗುವದು. ಒಟ್ಟಿಗೆ, ಯಾವ ಬಗೆಯಿಂದಲೇ ಆಗಲಿ, ಮಹಾಪುರುಷಸಂಶ್ರಯವೇ ಕಲ್ಯಾಣಕಾರಕವಾಗಿರುವದು.

೨೩ **ಸದ್ಗುಣಿಯೆ ಶ್ರೇಯೋವಂತನು**—ಗರುಡನ ಶ್ರೇಯಸ್ಸಿಗೆ ಆತನಲ್ಲಿಯ ಸದ್ಗುಣಗಳೇ ಕಾರಣವಾಗಿರುವವು. ಗರುಡನು ತಾಯಿ ತಂದೆಗಳ ಮಾತನ್ನು ಮೀರದವನಾದದ್ದರಿಂದ ಮಾತಾ-ಪಿತೃಭಕ್ತನಾಗಿದ್ದನು; ಕಲ್ಪವೃಕ್ಷಗಳು ತನಗೆ ಅಂಜಿಕೊಂಡದ್ದನ್ನು ನೋಡಿ ಅವುಗಳ ಮೇಲೆ ಕೂಡದೆ ತಾನೇ ಕಷ್ಟಪಟ್ಟದ್ದರಿಂದ ಭೂತದಯಾಪರನಾಗಿದ್ದನು; ವಾಲಖಿಲ್ಯರ ಕ್ಷೋಭದ ಭಯದಿಂದ ಪ್ರಚಂಡವಾದ ಆಲದ ಹರಿಯನ್ನು ಚಲ್ಲದೆ ಬಾಯಲ್ಲಿ ಹಿಡಿದು ಆಕಾಶದಲ್ಲಿ ಸಂಚರಿಸಹತ್ತಿದ್ದರಿಂದ ಆತನು ಮಾನ್ಯರಲ್ಲಿ ನಯ–ಭಯಗಳುಳ್ಳವನಾಗಿದ್ದನು; ಅಮೃತವು ತನ್ನ ಬಾಹುಬಲದಿಂದ ಸಂಪಾದಿಸಿದ್ದಾಗಿದ್ದು, ಅದು ತನ್ನ ಕೈಯಲ್ಲಿದ್ದರೂ, ಅದರ ಒಂದು ಹನಿಯನ್ನೂ ಕುಡಿಯದ್ದರಿಂದ ಆತನು ನಿಸ್ಪೃಹಿಯಾಗಿದ್ದನು; ತನ್ನ ಅಗಾಧ ಬಲದಿಂದ ಸರ್ಪಗಳನ್ನು ಸಂಹರಿಸಿ, ತನ್ನ ತಾಯಿಯೊಡನೆ ದಾಸ್ಯಮುಕ್ತನಾಗಬಹುದಾಗಿದ್ದರೂ, ಸರ್ಪಗಳ ಇಚ್ಛೆಯಂತೆ ಅವುಗಳಿಗೆ ಅಮೃತವನ್ನು ತಂದುಕೊಟ್ಟು ದಾಸ್ಯ ಮುಕ್ತನಾದದ್ದರಿಂದ ಆತನು ಧರ್ಮಿಷ್ಠನಾಗಿದ್ದನು. ಹೀಗೆ ಗರುಡನು ಹಲವು ಸದ್ಗುಣಗಳುಳ್ಳವ

ನಾದದ್ದರಿಂದಲೇ ತ್ರೈಲೋಕ್ಯಾಧಿಪತಿಯಾದ ಇಂದ್ರನನ್ನು ಕೂಡ ಜಯಿಸಿದ ಶ್ರೇಯಸ್ಸನ್ನು ಸಂಪಾದಿಸಿದನು.

**೨೪ ನಿಸ್ಪೃಹಿಗೆ ಜಗತ್ತೇ ತೃಣವು**—ನಿಜವಾದ ಬ್ರಾಹ್ಮಣರ ಮುಖ್ಯಲಕ್ಷಣವು ನಿಸ್ಪೃಹವೃತ್ತಿಯು. ಈ ಗುಣದ ಮೂಲಕ ಸ್ವರ್ಗಾದಿ ಭೋಗಗಳನ್ನು ಕೂಡ ಅವರು ಹುಲ್ಲಿಗೆ ಸಮಾನವಾಗಿ ಎಣಿಸುವರು. ಇಂದ್ರನ ಅಹಂಕಾರಕ್ಕಾಗಿ ವಾಲಖಿಲ್ಯರು ಸಿಟ್ಟಾಗಿ ಪ್ರತಿ ಇಂದ್ರನನ್ನು ಉತ್ಪನ್ನಮಾಡಲು ಯತ್ನಿಸಿದರಲ್ಲದೆ, ತಾವು ಇಂದ್ರರಾಗಲು ಇಚ್ಛಿಸಲಿಲ್ಲ. ಅವರ ತಪೋಬಲದಿಂದ ಇಂದ್ರನನ್ನು ಸೋಲಿಸುವ ಸಾಮರ್ಥ್ಯವುಳ್ಳ ಗರುಡನು ಹುಟ್ಟಿದನು. ಈವರೆಗೆ ನಿಜವಾದ ಬ್ರಾಹ್ಮಣರು ಯೋಗ್ಯ ಅರಸನನ್ನು ಉತ್ಪನ್ನಮಾಡಲು ಯತ್ನಿಸಿರುವರಲ್ಲದೆ, ತಾವೇ ಅರಸರಾಗಿರುವದಿಲ್ಲ. ಪ್ರಾಚೀನ ಋಷಿಗಳ ಈ ನಿಸ್ಪೃಹವೃತ್ತಿಯ ಪುಣ್ಯ ಪ್ರಭಾವದಿಂದಲೇ ಬ್ರಾಹ್ಮಣರ ಗೌರವವು, ಇಂತಹ ಹೀನಕಾಲದಲ್ಲಿಯೂ ಪೂರಾ ನಷ್ಟವಾಗಿರುವದಿಲ್ಲ!; ಆದರೆ ಬ್ರಾಹ್ಮಣರಾದವರು ಹಿಂದೆ ೬೦ನೇ ಪುಟದ ೯ನೇ ರಹಸ್ಯದಲ್ಲಿ ಹೇಳಿದಂತೆ ತಾವು ಆರಣ್ಯಕ, ನಾಗರಿಕ, ಅಧಮ, ಪತಿತ ಎಂಬ ನಾಲ್ಕು ವರ್ಗಗಳಲ್ಲಿ ಯಾವ ವರ್ಗದವರಿರುವೆವೆಂಬದನ್ನು ಅರಿತುಕೊಂಡು, ಶ್ರೇಷ್ಠವರ್ಗದವರಾಗಲು ಆದಷ್ಟು ಯತ್ನಿಸಬೇಕು. ಬ್ರಾಹ್ಮಣರ ಮುಖ್ಯಲಕ್ಷಣವು ನಿಸ್ಪೃಹತೆಯು ಪರಹಿತ ತತ್ಪರತೆಯೆಂಬವನ್ನು ಲಕ್ಷದಲ್ಲಿಡತಕ್ಕದ್ದು. ಪ್ರಾಚೀನಕಾಲದ ಬ್ರಾಹ್ಮಣರಿಗೆ ಬ್ರಾಹ್ಮಣೇತರರು ಮಾನಕೊಡುತ್ತ ಬಂದಿರುವದು ಬ್ರಾಹ್ಮಣರ ಚಲುವಿಕೆಗಲ್ಲ; ಅವರ ದುಸ್ಸಹ ತಪೋಬಲಕ್ಕೆ! ಬ್ರಾಹ್ಮಣರ ನಿಸ್ಪೃಹವೃತ್ತಿಯ ತಪಸ್ಸಿನ ದರ್ಪವೇ ಅಂತಹದು.

**೨೫ ಅಹಂಕಾರವು ನಾಶಕರವು**—ಅಹಂಕಾರವೆಂದರೆ ಕರ್ತೃತ್ವಾಭಿಮಾನವೆಂದು ಹೇಳಬಹುದು. "ನಾನು ಹೀಗೆ ಮಾಡಬಲ್ಲೆನು, ನಾನು ಹಾಗೆ ಮಾಡಬಲ್ಲೆನು, ನಾನು ಇಂಥವನು, ನಾನು ಅಂಥವನು, ನನ್ನಹಾಗೆ ಯಾರಿದ್ದಾರೆ?" ಇತ್ಯಾದಿ ಭಾವನೆಗಳೂ, ಉದ್ಗಾರಗಳೂ ಅಹಂಕಾರದ ಲಕ್ಷಣಗಳಾಗಿರುವವು; ಸಂಕಲ್ಪ ವಿಕಲ್ಪಗಳು ಅಹಂಕಾರದ ಪರಿಣಾಮಗಳು; ದೇವರ ವಿಸ್ಮೃತಿಯು ಅಹಂಕಾರದ ಫಲವು.

ಇಂದ್ರನ ಅಹಂಕಾರವು, ಅಂದರೆ "ವಾಲಖಿಲ್ಯರಿಗಿಂತ ನಾನು ಸಮಿಧೆಯ ದೊಡ್ಡ ಹೊರೆಯನ್ನು ಹೊತ್ತಿರುವೆನೆಂ"ಬ ಭಾವನೆಯು ಅವನ ಅವನತಿಗೆ ಕಾರಣವಾಯಿತು. ಈ ಜಗತ್ತಿನ ಕರ್ತೃವೂ, ಚಾಲಕನೂ ದೇವರಿರುವನು. ಆತನ ತಂತ್ರದಿಂದಲೇ ಜಗದ್ರೂಪವಾದ ಆತನ ಕುಟುಂಬವು ನಡೆದಿರುವದು. ನಾವೆಲ್ಲರೂ ಆತನ ತಂತ್ರಕ್ಕೆ ಒಳಗಾಗಿರುವ ಕ್ಷುದ್ರಜೀವಿಗಳು. ಈ ಎಚ್ಚರಿಕೆಯನ್ನು ಕಾಯ್ದುಕೊಂಡ ಮಾನದಿಂದ ನಮ್ಮಲ್ಲಿ ಅಹಂಕಾರ ನಾಶವಾಗಿ, ನಯ-ಭಯ-ಭಕ್ತಿಗಳು ನಮ್ಮಲ್ಲಿ ಉತ್ಪನ್ನವಾಗುವವು. ನಾವು ಆಎಚ್ಚರ ಕಳಕೊಂಡ ಮಾನದಿಂದ ಅಹಂಕಾರಾಂಧರಾಗಿ ಸ್ವಚ್ಛಂದವೃತ್ತಿಗೆ ಬಿದ್ದು ನಾಶದ ಪಂಥವನ್ನು ಹಿಡಿಯುವೆವು. ಅಹಂಕಾರವು ಅಜ್ಞಾನದ ಲಕ್ಷಣವೆಂಬದನ್ನು ಚನ್ನಾಗಿ ಲಕ್ಷದಲ್ಲಿಡಬೇಕು. ಸತ್ಸಮಾಗಮವಾದ ಹೊರತು ಅಹಂಕಾರ ನಾಶವಾಗುವದಿಲ್ಲ; ಸಂಸಾರದಲ್ಲಿ ಪರಿತಾಪಗಳುಂಟಾದ ಹೊರತು ಸತ್ಸಮಾಗಮದಲ್ಲಿ ಮನಸ್ಸು ಉಂಟಾಗುವದಿಲ್ಲ ; ಆದ್ದರಿಂದ ಸಂಸಾರದಲ್ಲಿ ಆಗಾಗ್ಗೆ ಬರುವ ದುಃಖದ ಸಂಗತಿಗಳನ್ನು ಈಶ್ವರಕೃಪೆಯ ಲಕ್ಷಣಗಳೆಂದು ತಿಳಿದು, ಜಾಗರೂಕರಾಗಿ ಸತ್ಸಂಗಮಾಡಿ ನಾವು ಸನ್ಮಾರ್ಗವನ್ನು ಹಿಡಿಯತಕ್ಕದ್ದು.

೨೬. **ದೊಡ್ಡವರದೆಲ್ಲವೂ ದೊಡ್ಡದೆ** — ಈ ಪರ್ವದಲ್ಲಿಯ ಗರುಡ, ಪ್ರಚಂಡಆನೆ, ಪ್ರಚಂಡಆವೆ, ಅದ್ಭುತ ಸರ್ಪಗಳು, ಆಶ್ಚರ್ಯಕರ ಆಲದಗಿಡ, ಅಮಾನುಷ ಸಮುದ್ರಮಥನ ಮುಂತಾದವುಗಳ ಅದ್ಭುತ ವರ್ಣನಗಳನ್ನು ಓದಿ ಈ ಲೋಕದೊಳಗಿನ ಆಯಾಜಾತಿಯ ಒಡವೆಗಳಿಗೆ, ಹಾಗು ಅವುಗಳ ಕೃತಿಗಳಿಗೆ ಅವನ್ನು ಹೋಲಿಸಿ ನೋಡಿದರೆ, ಇಂತಹ ಅಶಕ್ಯಸಂಗತಿಗಳನ್ನು ಪುರಾಣಗಳಲ್ಲಿ ಯಾಕೆ ಬರೆದರೆಂಬ ಸಂಶಯವು ಉತ್ಪನ್ನವಾಗುತ್ತದೆ ; ಆದರೆ ಭಾವನಾರಹಿತರಾಗಿ ಲೌಕಿಕ ಒಡವೆಗಳಿಗೆ ಅಲೌಕಿಕ ಒಡವೆಗಳನ್ನು ಹೋಲಿಸಿ ನೋಡಿದರೆ, ಹೀಗೆ ಸಂಶಯವು ಉತ್ಪನ್ನವಾಗುವದೇ ಸರಿ. ಪುರಾಣಗಳು ಲೌಕಿಕ ಹಾಗು ಅಲೌಕಿಕ ಚರಿತ್ರಗಳ ಮಿಶ್ರಣಗಳಾಗಿರುತ್ತವೆ. ಹಿಂದೆ ೮ನೇ ಪುಟದ ೧೩ನೇ ರಹಸ್ಯದಲ್ಲಿ ಹೇಳಿರುವಂತೆ ದೇವ, ದೈತ್ಯ, ಗಂಧರ್ವ, ಅಪ್ಸರಸ್ ಮೊದಲಾದ ಯೋನಿ

ಗಳು ಅಲೌಕಿಕ ಯೋನಿಗಳು. ಋಷಿಗಳಾದರೂ ಅಲೌಕಿಕರೇ ಆಗಿರುವರು. ಅಂಥವರ ಅಲೌಕಿಕ ಕಾರ್ಯಗಳಿಗಾಗಿ ಆಶ್ಚರ್ಯಪಡುವ ಕಾರಣವಿಲ್ಲ. ನಮ್ಮಂಥ ಸಾಮಾನ್ಯಜನರು ಅಲೌಕಿಕ ಕಾರ್ಯಗಳನ್ನು ಮಾಡಿದರೆಂದು ಹೇಳಿದರೆ, ಅವುಗಳು ಅಶಕ್ಯವೆಂದು ಪುರಾಣಗಳಿಗೆ ಹೆಸರಿಡಬಹುದಾಗಿತ್ತು ; ಆದರೆ ಪುರಾಣಗಳಲ್ಲಿಯೇ ಅಲೌಕಿಕ ವ್ಯಕ್ತಿಗಳೆಂದು ವರ್ಣಿಸಿರುವ ದೇವ-ದಾನವ-ಋಷಿ ಮೊದಲಾದವರ ಅದ್ಭುತ ಚರಿತ್ರಗಳಿಗಾಗಿ ಯಾಕೆ ಆಶ್ಚರ್ಯಪಡಬೇಕು ? ಅಲೌಕಿಕ ವ್ಯಕ್ತಿಗಳು ಅಲೌಕಿಕ ಕಾರ್ಯ ಮಾಡುವದು ಆಶ್ಚರ್ಯವಲ್ಲವೆಂದು ತಿಳಿದು, "ದೊಡ್ಡವರದೆಲ್ಲ ದೊಡ್ಡದೇ" ಎಂಬ ಸಿದ್ಧಾಂತದಿಂದ ಸಮಾಧಾನತಾಳಿ, ಅವುಗಳ ಕಾರ್ಯಕಾರಣಗಳ ವಿಚಾರಕ್ಕೆ ಹೋಗದೆ, ಆ ಅಲೌಕಿಕ ಚರಿತ್ರಗಳಿಂದ ಹೊರಡುವ ಬೋಧಗಳನ್ನು ಮಾತ್ರ ನಾವು ಸ್ವೀಕರಿಸಿ ಅದರಂತೆ ನಡೆಯಬೇಕು. ಹಾಗೆ ಮಾಡದೆ ಅಶಕ್ಯವರ್ಣನಗಳ ಶಕ್ಯಾಶಕ್ಯತೆಯ ವಿಚಾರಕ್ಕೆ ಬಿದ್ದರೆ, ಅಡವಿಯಲ್ಲಿ ಕಣ್ಣುಕಟ್ಟಿ ಬಿಟ್ಟಂತಾಗಿ, ಪುರಾಣಗಳಿಂದಾಗುವ ಪ್ರಯೋಜನಗಳಿಗೆ ಎರವಾಗಬೇಕಾಗುವದು. ಉಂಡವರ ಎಂಜಲ ಬಳಿಯೆಂದು ಹೇಳಿದಾಗ, ಸುಮ್ಮನೆ ಎಂಜಲಬಳಿಯುವದನ್ನು ಬಿಟ್ಟು—"ಉಂಡವರು ಎಷ್ಟುಮಂದಿ ? ಅವರಲ್ಲಿ ಗಂಡಸರೆಷ್ಟು ಹೆಂಗಸರೆಷ್ಟು ? ಅವರು ಎಷ್ಟೆಷ್ಟು ಉಂಡರು ? ಅವರು ಕೆಂಪಗಿದ್ದರೋ ಕರ್‍ರಗಿದ್ದರೋ ?" ಇತ್ಯಾದಿಗಳ ಊಹಾಪೋಹಮಾಡುತ್ತ ಕುಳಿತುಕೊಳ್ಳುವದು ನಿರರ್ಥಕವಾಗುವಂತೆ, ಪುರಾಣದಲ್ಲಿಯ ಗ್ರಹಣಮಾಡತಕ್ಕ ನೀತಿ-ಧರ್ಮಗಳನ್ನು ಬಿಟ್ಟು, ಪುರಾಣದ ಸಂಗತಿಗಳ ಶಕ್ಯಾಶಕ್ಯತೆಯ ಹಾಗು ಕಾರ್ಯಕಾರಣ ಭಾವಗಳ ಉಪಪತ್ತಿಯನ್ನು ಹುಡುಕುತ್ತ ಕುಳಿತುಕೊಳ್ಳುವದು ನಿರರ್ಥಕವಾಗಿರುತ್ತದೆ. "ದೊಡ್ಡವರ ಕಾರ್ಯಗಳೆಲ್ಲ ದೊಡ್ಡವೇ. ಅವರು ಬೇಕಾದದ್ದು ಮಾಡಬಲ್ಲರು, ಬೇಕಾದಹಾಗೆ ಇರಬಲ್ಲರು." ಎಂದು ಸಮಾಧಾನಮಾಡಿಕೊಂಡು ಭಕ್ತಿಪ್ರಧಾನರಾಗಿ ಪುರಾಣಗಳಿಂದಾಗುವ ತಾತ್ವಿಕಪ್ರಯೋಜನವನ್ನು ಪಡೆಯತಕ್ಕದ್ದು.

**೨೭. ದೈವಾಧೀನರು ದೈವವನ್ನವಲಂಬಿಸಿಯೇ ನಡೆಯಬೇಕು**—ಯಾವದೊಂದು ಕಾರ್ಯಸಾಧನಕ್ಕೆ ದೈವಸಹಾಯವೂ, ಪುರುಷಪ್ರಯತ್ನವೂ ಬೇಕಾಗುವವು ; ಆದರೆ ದೈವಾನುಕೂಲತೆಯಿಲ್ಲದ ಪುರುಷ

ಪ್ರಯತ್ನವೂ, ಪುರುಷಪ್ರಯತ್ನವಿಲ್ಲದ ದೈವಾನುಕೂಲತೆಯೂ ಕಾರ್ಯಕ್ಷಮವಾಗಿಯೇ ತೀರುವವೆಂಬ ನಿಯಮವಿಲ್ಲ. ಈ ಜಗತ್ತು ದೇವರ ಅಧೀನವಾಗಿರುವದರಿಂದ, ಜಗತ್ತಿನೊಳಗಿನ ನಾವೂ ದೈವಾಧೀನರೇ ಸರಿ. ಅಂದಬಳಿಕ ದೇವರನ್ನು ಮರೆತು ನಾವು ಪ್ರಯತ್ನಮಾಡುವದು ಹೇಗೆ ಯೋಗ್ಯವಾದೀತು ? ದೈವಾನುಕೂಲತೆಯು ಗೂಢವಾಗಿರುವದರಿಂದ ಒಂದು ಪಕ್ಷದಲ್ಲಿ ದೈವಾವಲಂಬನವಿಲ್ಲದೆ ಕಾರ್ಯವುಸಾಧಿಸಿದಂತೆ ನಮಗೆ ಕಂಡುಬಂದರೂ, ದೇವರನ್ನು ಮರೆತ ದ್ರೋಹವು ನಮ್ಮಪಾಲಿಗೆ ಬರುವದು. ಇದೇಮಾತನ್ನೇ "ಏಲಾಪತ್ರ"ವೆಂಬ ಹೆಸರಿನ ಸರ್ಪವು, ಬೇರೆಬೇರೆ ಸರ್ಪಗಳ ಬೇರೆಬೇರೆ ಪುರುಷಪ್ರಯತ್ನಗಳನ್ನು ಧಿಕ್ಕರಿಸಿ ವಾಸುಕಿಸರ್ಪಕ್ಕೆ-"ದೈವಾಧೀನರು ದೈವವನ್ನವಲಂಬಿಸಿಯೇ ಕಾರ್ಯಮಾಡಬೇಕೆಂ"ಬ ನೀತಿಯನ್ನು ಹೇಳಿ, ಬ್ರಹ್ಮದೇವನ ಸಂಕೇತದಂತೆ ನಿನ್ನ ತಂಗಿಯನ್ನು ಜರತ್ಕಾರುಋಷಿಗೆ ಲಗ್ನಮಾಡಿಕೊಡೆಂದು ಹೇಳಿರುತ್ತದೆ ; ಆದರೆ ಅಹಂಕಾರಿಗಳಿಗೆ ದೇವರು, ಧರ್ಮ, ನೀತಿ ಮುಂತಾದವುಗಳ ಪ್ರತಿಬಂಧವು ಬೇಕಾಗುವದಿಲ್ಲ ; ಅವರು ಸ್ವಚ್ಛಂದವೃತ್ತಿಗೆ ಮೆಚ್ಚಿದವರಾಗಿರುವರು ; ಆದ್ದರಿಂದ ಬಿರುಗಾಳಿಗೆ ಸಿಕ್ಕ ಹಡಗದಂತೆ ಮನಸ್ಸಿನ ಎಳತಕ್ಕೆ ಸಿಕ್ಕಿ ಅವರು ಅತ್ತಿತ್ತ ಅಲೆದಾಡಿ ಪೆಟ್ಟುತಿಂದು ನುಗ್ಗಾಗಿ ಕಡೆಗೆ ನಾಶಕ್ಕೂ ಗುರಿಯಾಗಬೇಕಾಗುವದು ; ಆದ್ದರಿಂದ ವಿಚಾರವಂತರು, ದೇವರು-ಗುರುಗಳು-ಹಿರಿಯರು-ನೀತಿ-ಧರ್ಮ ಇವುಗಳನ್ನು ಲಕ್ಷಿಸಿ ನಯ-ಭಯಗಳಿಂದ ನಡೆದುಕೊಳ್ಳಬೇಕು ತಾತ್ಕಾಲಿಕ ಸುಖದಕಲ್ಪನೆಗೆ ಹರಿಬಿದ್ದು ಏನಾದರೂ ಮಾಡಿಬಿಡಬಾರದು.

೨೮. **ತೇಜಸ್ವಿಗಳ ಕಾರ್ಯಗಳೂ ತೇಜಸ್ವಿಗಳೇ**—ಜರತ್ಕಾರುಋಷಿಯು ತನ್ನ ಹೆಂಡತಿಯಾದ ಜರತ್ಕಾರುವಿನಸಂಗಡ ನಿಷ್ಠುರನಾಗಿ ನಡೆದುಕೊಂಡದ್ದನ್ನು ನೋಡಿ, ಕೋಮಲಹೃದಯದವರು (ಹೆಣ್ಣುಗರಳಿನವರು) ಮರಮರನೆ ಮರುಗಬಹುದಾಗಿದೆ ; ಆದರೆ ಆ ಮರುಗು ಜರತ್ಕಾರುಋಷಿಯಂಥ ಧರ್ಮನಿಷ್ಠುರ ತತ್ವಜ್ಞ ತೇಜಸ್ವಿಗಳನ್ನು ಸೋಂಕದು. ಸರ್ಪಗಳ ವಂಶವನ್ನು ಉದ್ಧರಿಸುವ ತೇಜಸ್ವಿಯಾದ ಆಸ್ತಿಕನೆಂಬ ಋಷಿಕುಮಾರನು, ಜರತ್ಕಾರುವಿನಂಥ ತೇಜಸ್ವಿಋಷಿಯ ಹೊಟ್ಟೆಯಲ್ಲಿಯೇ ಹುಟ್ಟಬಹುದಲ್ಲದೆ, ಹಂದಿಯಂತೆ ಮಕ್ಕಳನ್ನು ವರ್ಷವರ್ಷ ಹಡೆಯುವ

ಸಂಸಾರದೊಳಗಿನ ಹುಳಗಳಿಂದ ಹುಟ್ಟಲಾರನು. ತಪಸ್ತೇಜದಿಂದ ಪ್ರಕಾಶಿಸುವ ಜರತ್ಕಾರುವಿನ ಇಂದ್ರಿಯನಿಗ್ರಹವೂ ತೇಜಸ್ವಿಯೇ ; ಆತನ ಸಂತತ್ಯುತ್ಪಾದನವೂ ತೇಜಸ್ವಿಯೇ ; ತಟ್ಟನೆ ಮಾಡಿದ ಆತನ ಸಂಸಾರ ಪರಿತ್ಯಾಗವೂ ತೇಜಸ್ವಿಯೇ ; ಪಿತೃಗಳ ಉದ್ಧಾರಕ್ಕಾಗಿ ಆತನು ತಟ್ಟನೆ ಸಂಸಾರಿಯಾದದ್ದೂ ತೇಜಸ್ವಿಯೇ ; ಜರತ್ಕಾರುಸಾಧ್ವಿಯು ನೂರಾರುಜನ ಅಧನ್ಯರಾದ ಮಕ್ಕಳನ್ನು ಹಡೆಯುವದಕ್ಕಿಂತ ಕುಲದೀಪಕನಾದ ಆಸ್ತಿಕ ನಂಥ ಒಬ್ಬ ಮಗನನ್ನು ಹಡೆದ ಧನ್ಯತೆಯೂ ತೇಜಸ್ವಿಯೇ ಆಗಿರುವದು. ಜರತ್ಕಾರುಋಷಿಯಂಥ ತೇಜಸ್ವಿಋಷಿಯ ಸಹವಾಸದಿಂದಲೇ ಜರತ್ಕಾರು ಸಾಧ್ವಿಗೆ ಒಂದು ಸಂತತಿಯು ಪ್ರಾಪ್ತವಾದಕೂಡಲೆ ತಪೋಮೂಲವಾದ ಬ್ರಹ್ಮಚರ್ಯಪಾಲನದ ಭಾಗ್ಯವು ಪ್ರಾಪ್ತವಾಯಿತಲ್ಲದೆ, ವಿಷಯಾಸಕ್ತ ಪತಿಯಿಂದ ವಿಷಯಾಸಕ್ತ ಹೆಂಡತಿಗೆ ಆ ಭಾಗ್ಯವು ಹೇಗೆ ಪ್ರಾಪ್ತವಾದೀತು ? ಇಂಥ ತೇಜಸ್ವಿ ದಂಪತಿಗಳ ಸ್ಮರಣಮಾಡುವ ಯೋಗ್ಯತೆಯು ಕೂಡ ವಿಷಯಾಸಕ್ತ ದಂಪತಿಗಳಿಗೆ ಇರುವದಿಲ್ಲ ; ಅಂಥ ತೇಜಸ್ವಿಗಳ ಯೋಗ್ಯತೆಯ ಜ್ಞಾನವೂ ಅವರಿಗಾಗುವಹಾಗಿಲ್ಲ.

**ಉಪಸಂಹಾರ**—ಇಂತಹ ಉಜ್ವಲ ರಹಸ್ಯಗಳಲ್ಲದೆ, ಪರೀಕ್ಷಿತನ ಚರಿತ್ರದಿಂದ ಭವಿತವ್ಯತೆಯ ಅಪರಿಹಾರ್ಯತೆ, ಸರ್ಪಯಜ್ಞದ ಯೋಗ ದಿಂದ ಸೃಷ್ಟಿಯೊಳಗಿನ ಯಾವದೊಂದು ಪ್ರಾಣಿಜಾತಿಯ ಸಹಮೂಲ ನಾಶದ ಅಶಕ್ಯತೆ, ಅದರಂತೆ ಗೃಹಸ್ಥಾಶ್ರಮದ ಮಹತ್ವ, ಧರ್ಮಿಷ್ಠ ರಾಜರ ಗೌರವ ಮುಂತಾದ ಹಲವು ರಹಸ್ಯಗಳನ್ನು ಮನಸ್ಸಿನಲ್ಲಿ ತರಬಹು ದಾಗಿದೆ.



## ೬. ಅಂಶಾವತರಣ ಪರ್ವ

**೫೯, ೬೦ನೇ ಅಧ್ಯಾಯಗಳು—ಕಥಾನುಬಂಧ.**—ಶೌನಕಋಷಿ ಗಳು ಸೂತನನ್ನು ಕುರಿತು—"ಸೂತಾ, ನೀನು ಭೃಗುವಂಶದಿಂದ ಆರಂಭ ಮಾಡಿ ಹೇಳಿದ ಕಥೆಗಳನ್ನು ಕೇಳಿ ನಮಗೆ ಬಹಳ ಸಮಾಧಾನವಾಯಿತು. ಎಲೈ ಶ್ರೇಷ್ಠನೇ, ಮಹರ್ಷಿ ವ್ಯಾಸರು ಯೋಗಾಭ್ಯಾಸದಿಂದ ತಮ್ಮ

ಮನೋರೂಪವಾದ ಸಮುದ್ರವನ್ನು ಕಡೆಯಲು, ಹೊರಟ ಕಥಾರತ್ನಗಳನ್ನು ಕೇಳುವ ಇಚ್ಛೆಯು ನಮಗೆ ಆಗಿದೆ; ನಮ್ಮ ಆ ಇಚ್ಛೆಯನ್ನು ನೀನು ಪೂರ್ಣಮಾಡಬೇಕು,'' ಎಂದು ಕೇಳಲು, ಸೂತರು-''ಋಷಿಗಳಿರಾ, ಜನಮೇಜಯನ ಸರ್ಪಸತ್ರದಲ್ಲಿ ವಿಶ್ರಾಂತಿಯ ಕಾಲಕ್ಕೆ ವೇದಜ್ಞರಾದ ಬ್ರಾಹ್ಮಣರು ವೇದಮೂಲವಾದ ಶುನಃಶೇಪಾಖ್ಯಾನದಂಥ ಹಲವು ಆಖ್ಯಾನಗಳನ್ನು ಹೇಳಿದರು; ಆದರೆ ವಿಚಿತ್ರಾರ್ಥಗಳಿಂದ ತುಂಬಿದ ಅತಿ ವಿಸ್ತೃತವಾದ ಮಹಾ ಭಾರತಾಖ್ಯಾನದ ಯೋಗ್ಯತೆಯು ಅವಕ್ಕಿಂತ ಹೆಚ್ಚೆಂದು ತಿಳಿದೋ ಏನೋ, ಭಗವಾನ್ ವ್ಯಾಸಮುನಿಗಳು ವೈಶಂಪಾಯನನ ಮುಖಾಂತರ ಆ ಭಾರತಾಖ್ಯಾನವನ್ನು ಆ ಸರ್ಪಸತ್ರದಲ್ಲಿ ಹೇಳಿಸಿದರು. ಅದನ್ನೇ ನಾನು ಈಗ ಸಾದ್ಯಂತವಾಗಿ ನಿಮಗೆ ಹೇಳುವೆನು ಕೇಳಿರಿ.

**೬೧ನೇ ಅಧ್ಯಾಯ—ಸಂಕ್ಷಿಪ್ತಭಾರತ**: -ಶೌನಕರೇ, ವೈಶಂಪಾಯನರು ಹೇಳಿದಂತೆ ಭಾರತದ ಕಥೆಯನ್ನು ಮೊದಲು ಸಂಕ್ಷೇಪವಾಗಿ ನಿಮಗೆ ಹೇಳುವೆನು ಕೇಳಿರಿ ಪಂಡುರಾಜನು ಮರಣಹೊಂದಿದಬಳಿಕ ಆ ವೀರ್ಯಶಾಲಿಗಳಾದ ಪಾಂಡವರು ಅರಣ್ಯದಿಂದ ತಮ್ಮ ಮನೆಗೆಬಂದರು. ಅಲ್ಪಕಾಲದಲ್ಲಿಯೇ ಅವರು ವೇದವಿದ್ಯೆ-ಧನುರ್ವಿದ್ಯೆಗಳಲ್ಲಿ ಪ್ರವೀಣರಾದರು ಪಾಂಡವರ ಅಲೌಕಿಕ ಶರೀರಸಾಮರ್ಥ್ಯ, ಉತ್ಸಾಹ, ಚಿತ್ತದ ಹಾಗು ಇಂದ್ರಿಯಗಳ ಸ್ಥಿರತ್ವ ಮೊದಲಾದ ಸದ್ಗುಣಗಳನ್ನು ನೋಡಿ, ಪುರಜನರು ಅವರನ್ನು ಬಹಳವಾಗಿ ಪ್ರೀತಿಸತೊಡಗಿದರು. ಅವರ ವೈಭವವೂ, ಕೀರ್ತಿಯೂ ಹೆಚ್ಚುತ್ತಹೋದದ್ದರಿಂದ ಕೌರವರಿಗೆ ಅದು ಸಹನವಾಗಲಿಲ್ಲ. ಆಗ ದುರ್ಯೋಧನ, ಕರ್ಣ, ಶಕುನಿ ಮೊದಲಾದ ದುಷ್ಟರು ಪಾಂಡವರನ್ನು ನಿಗ್ರಹಿಸುವದಕ್ಕಾಗಿ ಗುಪ್ತವಾಗಿಯೂ, ವ್ಯಕ್ತವಾಗಿಯೂ ಮಾಡಬಾರದ ದುಷ್ಕೃತ್ಯಗಳನ್ನು ಮಾಡಿದರು. ಅವರು ಭೀಮನಿಗೆ ಊಟದಲ್ಲಿ ವಿಷವನ್ನು ಉಣಿಸಿದರು; ಭಯಂಕರವಿಷದ ಕೃಷ್ಣಸರ್ಪದಿಂದ ಆತನನ್ನು ಕಡಿಸಿದರು; ಪಾಂಡವರನ್ನು ಅರಗಿನಮನೆಯಲ್ಲಿ ಸುಡಿಸಲು ಯತ್ನಿಸಿದರು; ಆದರೆ ವಿದುರನ ಸಹಾಯದಿಂದಲೂ, ದೈವಾನುಕೂಲದಿಂದಲೂ ಎಲ್ಲ ಸಂಕಟಗಳಿಂದ ಪಾಂಡವರು ಪಾರಾದರು. ಅವರು ಅರಗಿನ ಮನೆಯಿಂದ ಪಾರಾಗಿ ಗುಪ್ತರೀತಿಯಿಂದ ಸಂಚರಿಸುತ್ತಿರುವಾಗ ಹಿಡಿಂಬ,

ಬಕ ಎಂಬ ರಾಕ್ಷಸರನ್ನು ಭೀಮನು ಕೊಂದನು. ಮುಂದೆ ಪಾಂಡವರು ದ್ರುಪದನಗರಿಗೆ ಹೋಗಿ ದ್ರೌಪದಿಯನ್ನು ಸ್ವಯಂವರದಲ್ಲಿ ಗೆದ್ದು, ಸ್ವಯಂವರಕ್ಕೆ ಬಂದಿದ್ದ ಯಾವತ್ತು ಅರಸರನ್ನು ಸೋಲಿಸಿದರು. ಆಗ ಪಾಂಡವರ ಗುರುತುಹತ್ತಲು, ಅವರು ಹಸ್ತಿನಾವತಿಗೆ ಮತ್ತೆ ಬಂದರು. ಆಗ ದುರ್ಯೋಧನನ ತಂದೆಯಾದ ಧೃತರಾಷ್ಟ್ರನು, ಪಾಂಡವರಿಗೆ ಖಾಂಡವಪ್ರಸ್ಥದ ರಾಜ್ಯವನ್ನು ಕೊಟ್ಟು, ಅವರನ್ನು ಬೇರೆಇಟ್ಟನು. ಆಗ ಪಾಂಡವರು ಸ್ವಸಾಮರ್ಥ್ಯದಿಂದ ಉತ್ಕರ್ಷಹೊಂದುತ್ತ ಕಡೆಗೆ ರಾಜಸೂಯಯಜ್ಞವನ್ನು ಮಾಡಿದರು! ಹೀಗೆ ಪಾಂಡವರು ಮತ್ತೂ ಉತ್ಕರ್ಷವನ್ನೇ ಹೊಂದಿದ್ದನ್ನು ನೋಡಿ ಕೌರವರು ಸಹಿಸಲಾರದೆ, ದುರಾಲೋಚನೆಮಾಡಿ ಧೃತರಾಷ್ಟ್ರನ ಅನುಮತಿಯಿಂದ ಪಾಂಡವರನ್ನು ಪಗಡೆಯ ಜೂಜಿನಲ್ಲಿ ಸೋಲಿಸಿ, ದುಷ್ಟತನದಿಂದ ಸಭೆಯಲ್ಲಿ ದ್ರೌಪದಿಯ ಸೀರೆಯನ್ನು ಸೆಳೆದು, ಕಡೆಗೆ, ಹನ್ನೆರಡುವರ್ಷ ವನವಾಸವನ್ನೂ, ಒಂದುವರ್ಷ ಅಜ್ಞಾತವಾಸವನ್ನೂ ಭೋಗಿಸಬೇಕೆಂದು ನಿರ್ಬಂಧಿಸಿ, ಪಾಂಡವರನ್ನು ಅಡವಿಗಟ್ಟಿದರು. ಈ ವಿಪತ್ತಿನೊಳಗಿಂದಲೂ ಪಾಂಡವರು ಶ್ರೀಕೃಷ್ಣನ ಕೃಪೆಯಿಂದ ಪಾರಾಗಿ ಬಂದು ತಮ್ಮ ರಾಜ್ಯದ ಭಾಗವನ್ನು ಕೇಳಿದರು ; ಆದರೆ ದುಷ್ಟರ ಆಲೋಚನೆಗೆ ಕಿವಿಗೊಟ್ಟು ದುರ್ಯೋಧನನು ಪಾಂಡವರ ರಾಜ್ಯಭಾಗವನ್ನು ಪಾಂಡವರಿಗೆ ಕೊಡದೆ ಹೋಗಲು, ಕುರುಕ್ಷೇತ್ರದಲ್ಲಿ ಪಾಂಡವರಿಗೂ ಕೌರವರಿಗೂ ಭಯಂಕರ ಯುದ್ಧವಾಗಿ ಕೌರವರ ನಾಶವಾಯಿತು! ಪಾಂಡವರಿಗೆ ರಾಜ್ಯವು ದೊರೆಯಿತು.

**೬೨ನೇ ಅಧ್ಯಾಯ –ಗ್ರಂಥವರ್ಣನ**:–ಜನಮೇಜಯರಾಜನು ವೈಶಂಪಾಯನರನ್ನು ಕುರಿತು–"ದ್ವಿಜೋತ್ತಮರೇ, ನೀವುಸಂಕ್ಷೇಪವಾಗಿ ಭಾರತ ಕಥೆ ಹೇಳಿದ್ದನ್ನುಕೇಳಿ. ಅದನ್ನು ವಿಸ್ತಾರವಾಗಿ ಕೇಳುವ ಇಚ್ಛೆಯು ನನಗೆ ಉಂಟಾಗಿದೆ! ಯಾಕಂದರೆ ಹೀಗೆ ನನಗೆ ಇಚ್ಛೆಯು ಉಂಟಾಗಲಿಕ್ಕೆ ತಕ್ಕ ಕಾರಣಗಳೂ ಇರುವವು. ನೋಡಿರಿ, ಪಾಂಡವರಿಗೆ ಧರ್ಮಾಧರ್ಮವಿಚಾರವಿದ್ದರೂ, ಕೊಲ್ಲಲು ತಕ್ಕವರಲ್ಲದ ಭೀಷ್ಮದ್ರೋಣಾದಿಗಳನ್ನು ಅವರು ಕೊಂದರು. ಹೀಗೆ ಅವರು ಧರ್ಮಸಮ್ಮತವಲ್ಲದ ಕೆಲಸಗಳನ್ನು ಮಾಡಿದ್ದರೂ, ಜನರು ಅವರನ್ನು ಹೊಗಳುತ್ತಲೇ ಇರುವರಲ್ಲ! ಅದರಂತೆ,

ತಮ್ಮದೇನೂ ತಪ್ಪಿಲ್ಲದೆ ಕೌರವರು ತಮ್ಮನ್ನು ನಾನಾಬಗೆಯಾಗಿ ಪೀಡಿಸಿದರೂ ಸಮರ್ಥರಾದ ಪಾಂಡವರು ಅದನ್ನೆಲ್ಲ ಸಹಿಸಿದ್ದು ಇದಕ್ಕೆ ಕಾರಣವೇನು? ಹತ್ತುಸಾವಿರ ಆನೆಯ ಬಲವುಳ್ಳ ಭೀಮಸೇನನು ತನಗೆ ಕೌರವರು ಮಾಡಿದ ಪೀಡೆಯನ್ನು ಹೇಗೆ ಸಹಿಸಿದನು? ಪಾಪಿಗಳಾದ ಕೌರವರು ತನ್ನ ಸೀರೆಯನ್ನು ಸೆಳೆಯುವಾಗ ಮಹಾಪತಿವ್ರತೆಯಾದ ದ್ರೌಪದಿಯು ತನ್ನ ಪಾತಿವ್ರತ್ಯದ ಪ್ರಭಾವದಿಂದ ಅವರನ್ನು ಸುಟ್ಟು ಬೂದಿಮಾಡಬಹುದಾಗಿದ್ದರೂ, ಹಾಗೆ ಅವಳು ಯಾಕೆ ಮಾಡಲಿಲ್ಲ? ಒಬ್ಬನೇ ಒಬ್ಬ ಅರ್ಜುನನು ಕೌರವಸೈನ್ಯವನ್ನು ಸೋಲಿಸಿ ಹೇಗೆ ಓಡಿಸಿದನು? ಎಂಬಿವೇ ಮೊದಲಾದ ಕೌತುಕದ ಪ್ರಶ್ನೆಗಳು ನನ್ನ ಮನಸ್ಸಿನಲ್ಲಿ ಉತ್ಪನ್ನವಾಗಿರುವವು; ಆದ್ದರಿಂದ ನನ್ನ ಈ ಎಲ್ಲಪ್ರಶ್ನೆಗಳಿಗೆ ನೀವು ಉತ್ತರಕೊಟ್ಟು ಹೇಳಿರಿ" ಎಂದು ಕೇಳಲು, ವೈಶಂಪಾಯನರು—"ರಾಜಾ, ಸ್ವಲ್ಪ ಸಾವಧಾನತಾಳು. ಭಾರತಗ್ರಂಥವು ಸಣ್ಣಪುಟ್ಟದಲ್ಲ, ಅದು ಒಂದುಲಕ್ಷ ಶ್ಲೋಕದ್ದಿರುವದು. ಶುಚಿರ್ಭೂತರೂ, ಮಹಾಸಮರ್ಥರೂ ಆದ ವ್ಯಾಸಮುನಿಗಳೇ ಅವರಿಗೂ ಆ ಪ್ರಚಂಡ ಗ್ರಂಥವನ್ನು ಮಾಗಿಸಲಿಕ್ಕೆ ಮೂರುವರ್ಷ ಬೇಕಾದವು. ಈ ಕಲ್ಯಾಣಪ್ರದ ಗ್ರಂಥವನ್ನು ಓದುವವರ ಕಾಯಿಕ ವಾಚಿಕ ಮಾನಸಿಕ ಪಾಪಗಳು ನಷ್ಟವಾಗಿ, ಸರ್ವಮನೋರಥಗಳು ಸಿದ್ಧಿಸುವವು. ಈ ಭಾರತದಲ್ಲಿ ಬಾರದವಿಷಯವು ಜಗತ್ತಿನಲ್ಲಿಯೇ ಇಲ್ಲವೆಂಬದು ನಿಯಮಿತಕ್ಕವು.

**೬೩ನೇ ಅಧ್ಯಾಯ—ಉಪರಿಚರರಾಜನ ಚರಿತ್ರ**—ಜನಮೇಜಯಾ, ಪ್ರಜೆಗಳ ರಂಜನಮಾಡುವ "ಉಪರಿಚರ" ಎಂಬ ಒಬ್ಬ ಧರ್ಮಿಷ್ಠ ರಾಜನು ಇದ್ದನು. ಆತನಿಗೆ ವಸುರಾಜನೆಂತಲೂ ಅನ್ನುತ್ತಿದ್ದರು. ಉಪರಿಚರನು ಶಸ್ತ್ರತ್ಯಾಗಮಾಡಿ ಆಶ್ರಮದಲ್ಲಿ ಉತ್ತಮಪ್ರಕಾರದ ತಪಶ್ಚರ್ಯ ಮಾಡುತ್ತಿರುವಾಗ, ಇಂದ್ರನೇ ಮೊದಲಾದ ದೇವತೆಗಳು ಗುಪ್ತರೀತಿಯಿಂದ ಆತನ ಎದುರಿಗೆ ಬಂದು ನಿಂತುಕೊಂಡರು. ಆ ದೇವತೆಗಳು ಉಪರಿಚರನ ದಿವ್ಯಪ್ರಭಾವವನ್ನರಿತು—"ಈತನು ತನ್ನ ತಪಸ್ಸಿನಿಂದ ಇಂದ್ರಪದವಿಗೂ ಯೋಗ್ಯನಾಗಿರುವನೆಂ"ದು ತಿಳಿದು, ಆತನಿಗೆ ಪ್ರತ್ಯಕ್ಷರಾದರು. ಆಗ ಇಂದ್ರನು ವಸುರಾಜನನ್ನು ಕುರಿತು—"ಉಪರಿಚರಾ, ಸದ್ಯಕ್ಕೆ ಭೂಮಿಯಲ್ಲಿ ಅರಸರು ಯಾರೂ ಇಲ್ಲದ್ದರಿಂದ, ಅಲ್ಲಿ ಧರ್ಮಸಂಕರವಾಗುವ

ಸಂಭವವಿರುತ್ತದೆ ; ಆದ್ದರಿಂದ ನೀನು ತಪಶ್ಚರ್ಯವನ್ನು ಬಿಟ್ಟು ರಾಜ್ಯ ಭಾರವನ್ನು ಮಾಡು. ಧರ್ಮಕ್ಕೆ ನಿನ್ನ ಬೆಂಬಲವು ದೊರೆತರೆ, ಅದು ಸಂಪೂರ್ಣ ಜಗತ್ತನ್ನು ಧರಿಸುವದು. ನೀನು ಭೂಮಿಯನ್ನು ಆಸಕ್ತಿಯಿಂದ ಪಾಲಿಸು. ಈ ಭೂಲೋಕದಲ್ಲಿ ನೀನು ಪುಣ್ಯವನ್ನು ಆಚರಿಸಿದ ಬಳಿಕ, ಅದರ ಯೋಗದಿಂದ ನಿನಗೆ ಸನಾತನಗಳಾದ ಪುಣ್ಯಲೋಕಗಳು ಪ್ರಾಪ್ತವಾಗುವವು. ಸ್ವರ್ಗಲೋಕದಲ್ಲಿರುವ ನನಗೆ ಭೂಲೋಕದಲ್ಲಿರುವ ನೀನೊಬ್ಬನು ಪ್ರಿಯಮಿತ್ರನಾಗಿರುವೆ. ಎಲೈ ನರಾಧಿಪನೇ, ಈ ಪೃಥ್ವೀತಲದಲ್ಲಿ ಅತಿರಮಣೀಯವಾದ ಚೇದಿದೇಶವಿರುವದು ; ಅಲ್ಲಿ ನೀನು ವಾಸ ಮಾಡು. ಈ ದೇಶವು ಎಲ್ಲಬಗೆಯಿಂದಲೂ ಸಮೃದ್ಧವಾದದ್ದು. ಇಲ್ಲಿಯ ಜನರು ಧರ್ಮಿಷ್ಠರು, ಸಾಧುಗಳು, ಶಾಂತರು, ಸತ್ಯವಾದಿಗಳು ಇರುವರು. ಎಲೈ ರಾಜನೇ, ಆತ್ಮಜ್ಞಾನಿಯಾದ ನಿನಗೆ ತ್ರೈಲೋಕ್ಯದಲ್ಲಿ ಅರಿಯದ್ದು ಒಂದೂ ಇಲ್ಲವು. ದೇವತೆಗಳ ಉಪಭೋಗಕ್ಕೆ ಯೋಗ್ಯವಾದ ಸ್ಫಟಿಕ ಮಯ ವಿಮಾನವು ನನ್ನ ಪ್ರಸಾದದಿಂದ ನಿನಗೆ ಪ್ರಾಪ್ತವಾಗುವದು. ಭೂಲೋಕದೊಳಗಿನ ಎಲ್ಲಜನರಲ್ಲಿ ನೀನೊಬ್ಬನೇ ಈ ಶ್ರೇಷ್ಠವಿಮಾನದಲ್ಲಿ ಕುಳಿತು ಉನ್ನತವಾದ ಆಕಾಶದಲ್ಲಿ ಸಂಚರಿಸಹತ್ತಿದೆಯೆಂದರೆ, ಯುದ್ಧಕ್ಕೆ ಹೊರಟಿದ್ದ ಒಬ್ಬಾನೊಬ್ಬ ದೇವತೆಯಂತೆ ನೀನು ಕಾಣುವೆ. ಇದಲ್ಲದೆ, ಎಂದೂ ಬಾಡದ ಕಮಲಗಳ ಈ ವೈಜಯಂತೀ ಮಾಲೆಯನ್ನು ನಿನಗೆ ನಾನುಕೊಡುವೆನು. ಯುದ್ಧದಲ್ಲಿ ಇದು ಕೊರಳಲ್ಲಿರುವಾಗ ನಿನಗೆ ಶಸ್ತ್ರಗಳ ಗಾಯವಾಗುವ ಭಯವಿಲ್ಲ.

ಹೀಗೆ ಹೇಳಿ ಇಂದ್ರನು ಆ ದಿವ್ಯವಸ್ತುಗಳನ್ನು ಕೊಟ್ಟದ್ದಲ್ಲದೆ, ತನ್ನ ಪ್ರೇಮದ ಗುರುತೆಂದು ತಿಳಿದು, ಸಾಧುಗಳ ಸಂರಕ್ಷಣಕ್ಕಾಗಿ ಒಂದು ಬಿದರಿನಕೋಲನ್ನು ವಸುರಾಜನಿಗೆ ಕೊಟ್ಟನು. ವಸುರಾಜನು ಇಂದ್ರನ ಈ ಉಪಕಾರವನ್ನು ಸ್ಮರಿಸುವದಕ್ಕಾಗಿ, ವರ್ಷವು ಮುಗಿಯುವದಿವಸ ಆ ಬಿದರಕೋಲನ್ನು ಭೂಮಿಯಲ್ಲಿ ನಿಲ್ಲಿಸಿ, ವರ್ಷಪ್ರತಿಪದೆಯದಿವಸ ವಸ್ತ್ರಾಭರಣ-ಗಂಧಪುಷ್ಪಾದಿಗಳಿಂದ ಅದನ್ನು ಅಲಂಕರಿಸಿ, ಅದರ ನೆವದಿಂದ ಹಂಸರೂಪ ಪರಮಾತ್ಮನನ್ನು ಪೂಜಿಸಿದನು. ಈ ಪದ್ಧತಿಯು ಈಗಲೂ ಅರಸರಲ್ಲಿಯೂ, ಬೇರೆಜನರಲ್ಲಿಯೂ ಇರುವದು. ಈ ಪೂಜಾಪದ್ಧತಿಯನ್ನು

ಬಳಿಕೆಯಲ್ಲಿ ತಂದದ್ದಕ್ಕಾಗಿ ಆ ಚಕ್ರವರ್ತಿ ವಸುರಾಜನಮೇಲೆ ಇಂದ್ರನ ಅನುಗ್ರಹವಾಗಿ, ಆ ಇಂದ್ರನು ವಸುರಾಜನಿಗೆ–"ಉಪರಿಚರಾ, ಈ ಉತ್ಸವ ಮಾಡುವ ಅರಸರಿಗೂ, ಬೇರೆ ಜನರಿಗೂ ಯಾವಾಗಲೂ ಜಯವುಂಟಾಗುತ್ತ ಹೋಗುವದು. ಅಂಥ ಅರಸರ ರಾಜ್ಯದಲ್ಲಿ ಲಕ್ಷ್ಮಿಯು ಅಖಂಡವಾಗಿ ವಾಸಿಸಿ, ಅವರ ಪ್ರಜೆಗಳ ಕಲ್ಯಾಣವಾಗಿ ಅವರು ಯಾವಾಗಲೂ ಸಂತುಷ್ಟರಾಗಿರುವರು" ಎಂದು ವರಪ್ರದಾನ ಮಾಡಿದನು. ಜನಮೇಜಯಾ, ಈ ವಸುರಾಜನಿಗೆ ಬೃಹದ್ರಥ, ಪ್ರತ್ಯಗ್ರಹ, ಕುಶಾಂಬ, ಮಾವೇಲ್ಲ, ಯದು ಎಂಬ ಐದುಜನ ಮಕ್ಕಳಿದ್ದರು. ಅವರಿಗೆ ವಸುರಾಜನು ಬೇರೆಬೇರೆ ರಾಜ್ಯಗಳ ಪಟ್ಟಾಭಿಷೇಕ ಮಾಡಿದನು. ಅವರು ತಮ್ಮ ಹೆಸರುಗಳನ್ನು ಆಯಾ ರಾಷ್ಟ್ರಗಳಿಗೂ, ನಗರಗಳಿಗೂ ಕೊಟ್ಟು ಅವನ್ನು ಚಿರಸ್ಥಾಯಿಯಾಗಮಾಡಿದರು.

ಹೀಗಿರುವಾಗ ಒಂದು ಚಮತ್ಕಾರದ ಸಂಗತಿಯು ಒದಗಿತು. ವಸುರಾಜನ ಪಟ್ಟಣದಹತ್ತರ ಹರಿಯುತ್ತಿರುವ "ಶುಕ್ತಿಮತಿ" ಎಂಬ ಹೆಸರಿನ ನದಿಯನ್ನು "ಕೋಲಾಹಲ"ವೆಂಬ ಹೆಸರಿನ ಒಂದು ಪರ್ವತವು ಕಾಮುವಾಸನೆಯಿಂದ ಅಡ್ಡಗಟ್ಟಿತು. ಇದನ್ನು ನೋಡಿ ವಸುರಾಜನು ಪರ್ವತವನ್ನು ಒದ್ದು, ಒಂದು ಖಿಂಡಿಯನ್ನು ಕೆಡವಿ ನದಿಗೆ ಹಾದಿಯನ್ನು ಮಾಡಿಕೊಟ್ಟನು ; ಆದರೆ ಪರ್ವತದ ಸಂಗದಿಂದ ನದಿಗೆ ಒಂದು ಗಂಡು, ಒಂದು ಹೆಣ್ಣು ಹೀಗೆ ಎರಡು ಅವಳಿ-ಜವಳಿ ಮಕ್ಕಳಾದವು. ನದಿಯು ಕೃತಜ್ಞತೆಯಿಂದ ವಸುರಾಜನಿಗೆ ಪ್ರಸನ್ನಳಾಗಿ, ತನ್ನ ಆ ಇಬ್ಬರು ಮಕ್ಕಳನ್ನು ಆತನಿಗೆ ಕೊಟ್ಟಳು. ರಾಜನು ಹುಡುಗನನ್ನು ತನ್ನ ಸೇನಾಪತಿಯಾಗಿ ನಿಯಮಿಸಿಕೊಂಡು, ಹುಡುಗೆಯ ಪಾಣಿಗ್ರಹಣವನ್ನು ಸ್ವತಃ ತಾನು ಮಾಡಿದನು. ಈ ನೂತನಸ್ತ್ರೀಯ ಹೆಸರು "ಗಿರಿಕಾ". ಈಕೆಯು ಬೇಗನೆ ಋತುಸ್ನಾತಳಾದಳು. ಹೀಗೆ ಸ್ನಾನದಿಂದ ಶುದ್ಧಳಾದ ತನ್ನ ಸ್ತ್ರೀಗೆ ವಸುರಾಜನು ಋತುದಾನವನ್ನು ಕೊಡಬೇಕೆಂದಿರುವಾಗ, ಆ ರಾಜನ ಪಿತೃಗಳು ಅದೇದಿವಸ ಬೇಟೆಗೆ ಹೋಗೆಂದು ಆತನನ್ನು ಆಜ್ಞಾಪಿಸಿದರು. ಪಿತೃಗಳ ಅಪ್ಪಣೆಯಂತೆ ರಾಜನು ಬೇಟೆಗೆ ಹೋದನು ; ಆದರೆ ಅತಿಸುಂದರಿಯಾದ ಗಿರಿಕೆಯ ಸ್ಮರಣವು ಆತನಿಗೆ ಮೇಲಿಂದ ಮೇಲೆ ಆಗಿ, ಆ ಮನೋಹರ ವನದಲ್ಲಿ ಆ ಅರಸನ ರೇತಸ್ಖಲನವಾಯಿತು. ಆಗ

ತನ್ನ ಆ ತಪೋಬಲದ ರೇತಸ್ಸು ವ್ಯರ್ಥವಾಗಬಾರದೆಂದು ತಿಳಿದು, ಅದನ್ನು ಒಂದು ಗಿಡದ ಎಲೆಯಲ್ಲಿ (ದೊನ್ನೆಯಲ್ಲಿ) ಹಿಡಿದು ಅಭಿಮಂತ್ರಿಸಿ, ತನ್ನ ಋತುಸ್ನಾತೆಯಾದ ಪತ್ನಿಯ ಸಂತತಿಗೆ ಶುಭಮುಹೂರ್ತದಲ್ಲಿ ಮುಟ್ಟಿಸುವದಕ್ಕಾಗಿ ಒಂದು ಶ್ಯೇನಪಕ್ಷಿಗೆ ಒಪ್ಪಿಸಿದನು. ಆಗ ಆ ಶ್ಯೇನಪಕ್ಷಿಯು ಆ ರೇತಸ್ಸನ್ನು ರಾಜನ ಪತ್ನಿಯ ಬಳಿಗೆ ಒಯ್ಯುತ್ತಿರುವಾಗ, ಹಾದಿಯಲ್ಲಿ ಅದಕ್ಕೆ ಮತ್ತೊಂದು ಶ್ಯೇನಪಕ್ಷಿಯೊಡನೆ ಕಾದುವ ಪ್ರಸಂಗಬರಲು, ಆ ರೇತಸ್ಸಿನ ದೊನ್ನೆಯು ಆ ಪಕ್ಷಿಯ ಕಾಲೊಳಗಿಂದ ಜಾರಿ ಯಮುನಾನದಿಯಲ್ಲಿ ಬಿದ್ದಿತು. ಆಗ ಆ ನದಿಯಲ್ಲಿ "ಅದ್ರಿಕಾ" ಎಂಬ ಹೆಸರಿನ ಅಪ್ಸರೆಯು ಬ್ರಹ್ಮ ಶಾಪದಿಂದ ಹೆಣ್ಣು ಮೀನವಾಗಿ ವಾಸಿಸುತ್ತಿದ್ದಳು. ಆ ಹೆಣ್ಣುಮೀನವು ವಸುರಾಜನ ಆ ರೇತಸ್ಸನ್ನು ಭಕ್ಷಿಸಿತು. ಮುಂದೆ ಹತ್ತುತಿಂಗಳಾದ ಬಳಿಕ ಒಬ್ಬ ಮೀನಬಲೆಗಾರನು ಆ ಮೀನವನ್ನು ಹಿಡಿದು ಸೀಳಲು, ಅದರ ಹೊಟ್ಟೆಯಲ್ಲಿ ಒಂದು ಗಂಡು, ಒಂದು ಹೆಣ್ಣು ಹೀಗೆ ಎರಡು ಕೂಸುಗಳು ಸಿಕ್ಕವು. ಅವನ್ನು ಆ ಮೀನಬಲೆಗಾರನು ಉಪರಿಚರರಾಜನಿಗೆ ತಂದು ಕೊಟ್ಟನು. ಆ ರಾಜನು ಆ ಹುಡುಗರನ್ನು ಸ್ವೀಕರಿಸಿ, ಹುಡುಗನಿಗೆ ಮತ್ಸ್ಯನೆಂದು ಹೆಸರಿಟ್ಟನು. ಈ ಮತ್ಸ್ಯನು ಮುಂದೆ ಧರ್ಮಯುದ್ಧದಲ್ಲಿ ಹೆಸರಾದನು. ರಾಜನು ಹೆಣ್ಣುಹುಡುಗೆಯನ್ನು ಒಬ್ಬ ಅಂಬಿಗನಿಗೆ ಕೊಟ್ಟು, ಈಕೆಯನ್ನು ಮಗಳಂತೆ ಸಂರಕ್ಷಣಮಾಡೆಂದು ಹೇಳಿದನು. ಆಕೆಯ ಹೆಸರು "ಸತ್ಯವತಿ". ಅಂಬಿಗರ ಸಹವಾಸದಲ್ಲಿದ್ದದ್ದರಿಂದ ಸತ್ಯವತಿಯ ಮೈಗೆ ಮೀನದ ವಾಸನೆಯುಂಟಾದದ್ದರಿಂದ ಆಕೆಯನ್ನು "ಮತ್ಸ್ಯಗಂಧಿ"ಯೆಂತಲೂ ಕರೆಯುತ್ತಿದ್ದರು. ಅತ್ಯಂತ ರೂಪವತಿಯಾದ ಸತ್ಯವತಿಯು ತನ್ನ ತಂದೆಯ ನಾವು ನಡೆಸುವ ಕೆಲಸದಲ್ಲಿ ಸಹಾಯಮಾಡತೊಡಗಿದಳು. ಜನಮೇಜಯರಾಜಾ, ಈ ಸತ್ಯವತಿಯ ಹೊಟ್ಟೆಯಲ್ಲಿಯೇ ಭಗವಾನ್ ಪರಾಶರರ ಯೋಗದಿಂದ ವ್ಯಾಸರು ಜಗತ್ಕಲ್ಯಾಣಕ್ಕಾಗಿ ಅವತಾರಮಾಡಿದರು. ಅದರಂತೆ, ಶ್ರೀಕೃಷ್ಣ, ಭೀಷ್ಮ, ದ್ರೋಣ, ಪಾಂಡವರು ಮೊದಲಾದವರು ಭೂಭಾರಹರಣಕ್ಕಾಗಿ ಬೇರೆ ಬೇರೆಕಡೆಯಲ್ಲಿ ಅಂಶಾವತಾರಮಾಡಿದರು ; ಅವರೆಲ್ಲರ ವರ್ಣನವನ್ನು ಮುಂದೆ ಸಂಭವಪರ್ವದಲ್ಲಿ ನಾನು ನಿನಗೆ ಹೇಳುವೆನು.

**೬೪ನೇ ಅಧ್ಯಾಯ ಅವತಾರನಿಶ್ಚಯ** - ಜನಮೇ[illegible] ದೇವತೆಗಳು ಹೀಗೆ ಅಂಶಾವತಾರ ತಾಳಿದ್ದರ ಕಾರಣವನ್ನೂ, [illegible] ದೈತ್ಯ-ದಾನವರು ಅಂಶಾವತಾರತಾಳಿದ ಕಾರಣವನ್ನೂ ಹೇಳಿ[illegible]ರು. ಇದೆಲ್ಲ ದೇವತೆಗಳ ರಹಸ್ಯವೆಂದು ಕೇಳಿದ್ದೇನೆ. ಹಿಂದೆ [illegible]ರಾವನು ಇಪ್ಪತ್ತೊಂದುಸಾರೆ ನಿಃಕ್ಷತ್ರಿಯಾಪೃಥ್ವಿಯನ್ನು [illegible]ಕ, ಆತನು ಪೃಥ್ವಿಯನ್ನು ಬ್ರಾಹ್ಮಣರಿಗೆ ದಾನಮಾಡಿ, ಮಹೇ[illegible]ಪರ್ವತಕ್ಕೆ ತಪಸ್ಸನ್ನಾಚರಿಸಲು ಹೋದನು. ಆಮೇಲೆ ಮುಂದೆ ಎ[illegible]ಕ್ಷತ್ರಿಯಸ್ತ್ರೀಯರು ವಂಶವೃದ್ಧಿಯಾಗಬೇಕೆಂದು ಪುತ್ರಪ್ರಾಪ್ತ್ಯ[illegible] ಸ್ವಾಧ್ಯಾಯಶೀಲ ಬ್ರಾಹ್ಮಣರ ಸಮಾಗಮವನ್ನು ಋತುಕಾಲದಲ್ಲಿ [illegible]ಮಾಡಿದರು. ಆದರಿಂದ ಹೆಚ್ಚು ಬಲಿಷ್ಠರಾದ ಕ್ಷತ್ರಿಯಪುತ್ರರೂ [illegible]ಸ್ವರೂಪಿಗಳಾದ ಕ್ಷತ್ರಿಯ ಕನ್ಯೆಯರೂ ಹುಟ್ಟಿದರು. ಒಟ್ಟಿಗೆ, [illegible]ಕಾಲದಲ್ಲಿಯ ಕ್ಷತ್ರಿಯ ಸ್ತ್ರೀ-ಪುರುಷರು ಬ್ರಹ್ಮಬೀಜದಿಂದ ಉತ್[illegible]ದರು. ಈ ಕ್ಷತ್ರಿಯವರ್ಣವು ಧರ್ಮಾಚರಣೆಯಿಂದ ವೃದ್ಧಿಂಗತ[illegible] ಆಗ ನಾಲ್ಕೂವರ್ಣಗಳೊಳಗಿನಸ್ತ್ರೀ—ಪುರುಷರೂ, ಪಶುಪಕ್ಷಿ[illegible]ಗಳಲ್ಲಿಯ ಗಂಡು ಹೆಣ್ಣುಗಳೂ ಋತುಕಾಲದಲ್ಲಿ ಮಾತ್ರ ಸಂಭೋಗ[illegible]ಪ್ಪದ್ದರಿಂದ, ಆಗಿನ ಯಾವತ್ತು ಪ್ರಜೆಯು ದೀರ್ಘಾಯುಷಿಯಾಗಿ[illegible] ಆಗಿನ ಪ್ರಜೆಗಳು ಧರ್ಮಾಚರಣೆಯಮೂಲಕ ಆಧಿ-ವ್ಯಾಧಿಗಳ ಶಾ[illegible]ಕ-ಮಾನಸಿಕ ತ್ರಾಸದಿಂದ ಮುಕ್ತರಾಗಿದ್ದರು. ಹೀಗೆ ಈ ಭೂಮಿಯು [illegible]ಧರ್ಮಶೀಲ ಕ್ಷತ್ರಿಯರ ವಶವಾಯಿತು ಆಗ ಬ್ರಾಹ್ಮಣಾದಿ ವರ್ಣ[illegible] ಉತ್ತಮ ಸುಖವು ಪ್ರಾಪ್ತವಾಯಿತು. ಅರಸರು ಕಾಮಕ್ರೋಧಾದಿಗ[illegible]ಗಳಿಂದ ಉತ್ಪನ್ನವಾಗುವ ದೋಷಗಳಿಗೆ ಒಳಗಾಗದೆ, ನ್ಯಾಯದಿಂದ [illegible]ವನ್ನಾಳುತ್ತಿದ್ದರು. ಅವರು ಅಪರಾಧಿಗಳಿಗೆಯೋಗ್ಯವಾದ ಶಿಕ್ಷೆಯನ್ನು [illegible]ತ್ತಿದ್ದರು. ಈ ಧರ್ಮಶೀಲತೆಗಾಗಿ ಇಂದ್ರನು ಹೊತ್ತುಹೊತ್ತಿಗೆಮಳೆಗ[illegible]ತ್ತಿದ್ದನು. ಈ ಕಾಲದಲ್ಲಿ ಹುಡುಗರು ಸಾಯುತ್ತಿದ್ದಿಲ್ಲ. ಯೌವನಕಾ[illegible] ಪ್ರಾಪ್ತವಾಗದೆ ಸ್ತ್ರೀ-ಪುರುಷರ ಸಂಗವಾಗುತ್ತಿದ್ದಿಲ್ಲ. ಜನರಿಗೆ ಅಪಮೃತ್ಯುವು ಇಲ್ಲದಹಾಗಾದದ್ದರಿಂದ, ಎಲ್ಲಕಡೆಗೂ ಪ್ರಜಾವೃದ್ಧಿಯಾಯಿತು. ಕ್ಷತ್ರಿಯರು ಮಹಾಯಜ್ಞಗಳನ್ನುಮಾಡಿ, ಬ್ರಾಹ್ಮಣರಿಗೆ ವಿಪುಲ ದಕ್ಷಿಣೆಯನ್ನು ಕೊಡು

ತ್ತಿದ್ದರು ಬ್ರಾಹ್ಮಣರು ಉಪನಿಷತ್ತುಗಳಿಂದ ಸಹಿತವಾಗಿ ಸಾಂಗವೇದಾ ಧ್ಯಯನ ಮಾಡುತ್ತಿದ್ದರು. ಅವರು ಜ್ಞಾನದ ಕ್ರಯ ವಿಕ್ರಯ ಮಾಡುತ್ತಿದ್ದಿಲ್ಲ. ಅವರು ಶೂದ್ರರ (ಅನಾರ್ಯರ) ಎದುರಿನಲ್ಲಿ ವೇದಗಳನ್ನು ಉಚ್ಚರಿಸುತ್ತಿದ್ದಿಲ್ಲ. ವೈಶ್ಯರು ಎತ್ತುಗಳಿಂದ ಒಕ್ಕಲತನವನ್ನು ಮಾಡುತ್ತಿದ್ದರು; ಆದರೆ ಅಶಕ್ತವಾದ ಎತ್ತುಗಳಿಂದ ದುಡಿಸುತ್ತಿದ್ದಿಲ್ಲ ; ಅಲ್ಲದೆ, ಅವನ್ನು ಧಷ್ಟ ಪುಷ್ಟವಾಗಿ ಮಾಡುತ್ತಿದ್ದರು. ಆಕಳ ಕರುಗಳು ಹಾಲು ಕುಡಿಯುತ್ತಿರುವವರೆಗೆ ಅವನ್ನು ಜಗ್ಗಿಕೊಂಡು ಆಕಳನ್ನು ಹಿಂಡಿಕೊಳ್ಳುತ್ತಿದ್ದಿಲ್ಲ ; ಕರುಗಳು ತಾಯಿಯ ಮೊಲೆಕುಡಿದು ಸಾಕಾಗಿ ಬಿಟ್ಟಬಳಿಕ ಹಿಂಡಿಕೊಳ್ಳುತ್ತಿದ್ದರು. ಅದರಂತೆ, ಈ ವೈಶ್ಯರು ಖೊಟ್ಟಿಕಲ್ಲುಗಳಿಂದ ವ್ಯಾಪಾರವನ್ನು ಮಾಡುತ್ತಿದ್ದಿಲ್ಲ. ಒಟ್ಟಿಗೆ, ಆರ್ಯರ ಮೂರುವರ್ಣದವರೂ ತಮ್ಮ ತಮ್ಮ ಧರ್ಮದಂತೆ ನಡೆಯುತ್ತಿದ್ದದ್ದರಿಂದ, ಧರ್ಮವು ಪೂರ್ಣಸ್ಥಿತಿಯಲ್ಲಿತ್ತು. ಇದು ಕೃತಯುಗದ ಸ್ಥಿತಿಯಾಗಿರುವದು.

ಜನಮೇಜಯಾ, ಧರ್ಮವು ಜೀವಂತವಾಗಿರುವವರೆಗೆ ಭೂಮಿಯಲ್ಲಿ ಯಾವತ್ತು ಜೀವರ ಉತ್ಕರ್ಷವಾಗುವದು ; ಆದರೆ ಮುಂದೆ ಬರಬರುತ್ತ ಧರ್ಮವು ಕುಂದಹತ್ತಿತು. ಸಂತತಿಸಂಪತ್ತುಗಳ ಉನ್ಮಾದವು ಉತ್ಪನ್ನವಾಗಲು, ಎಷ್ಟೋ ಕ್ಷತ್ರಿಯರಾಜರ ವಂಶದಲ್ಲಿ ರಾಕ್ಷಸೀಪುರುಷರು ಉತ್ಪನ್ನರಾದರು. ಸ್ವರ್ಗಲೋಕದಲ್ಲಿ ದೇವದೈತ್ಯರ ಯುದ್ಧವಾಗಿ ದೇವತೆಗಳು ಜಯಶಾಲಿಗಳಾಗಲು, ದೈತ್ಯರು ತಮಗೆ ಭೂಲೋಕದಲ್ಲಾದರೂ ದೇವತ್ವವು, ಅಂದರೆ ಶ್ರೇಷ್ಠತ್ವವು ಪ್ರಾಪ್ತವಾಗಬೇಕೆಂದು ಮನುಷ್ಯಯೋನಿಯಲ್ಲಿಯೂ, ಆಕಳು, ಕುದುರೆ, ಕತ್ತೆ, ಆನೆ ಮೊದಲಾದ ಅನೇಕ ಯೋನಿಗಳಲ್ಲಿಯೂ ಹುಟ್ಟಿಬಂದರು. ಹೀಗೆ ಸಹಸ್ರಾವಧಿರಾಜರು ಪೃಥ್ವಿಯಲ್ಲಿ ಹುಟ್ಟಿಬಂದದ್ದರಿಂದ,ಪೃಥ್ವಿಗೆ ತನ್ನ ಭಾರವು ತನಗೇ ಸಹನವಾಗದಂತಾಯಿತು. ಯಾಕಂದರೆ, ಎಷ್ಟೋ ಮದೋನ್ಮತ್ತರಾಜರು ತಮ್ಮ ಬಲ, ಶೌರ್ಯ, ದೀರ್ಘಪ್ರಯತ್ನಗಳಯೋಗದಿಂದ ಯಾವತ್ತು ಸಮುದ್ರವಲಯಾಂಕಿತ ಪೃಥ್ವಿಯಲ್ಲಿ ತಾಪವನ್ನುಂಟುಮಾಡಿದರು. ಇವರು ಋಷಿಗಳ ಆಶ್ರಮವನ್ನು ದೂಷಿತವಾಗಿ ಮಾಡಿದರು ; ಜಗತ್ತಿನ ಈ ತಾಪದಮೂಲಕ ಶೇಷಾದಿ ನಾಗರಿಗೆ ಪೃಥ್ವಿಯನ್ನು ಧರಿಸುವ ಸಾಮರ್ಥ್ಯವು ಉಳಿಯಲಿಲ್ಲ ; ಆದ್ದ

ರಿಂದ ಪೃಥ್ವಿಯು ತನ್ನನ್ನು ಉದ್ಧರಿಸಬೇಕೆಂದು ಜಗತ್ಕರ್ತೃವಾದ ಬ್ರಹ್ಮ ದೇವನಿಗೆ ಶರಣುಹೋಗಲು, ಆ ಭಗವಂತನು ಪೃಥ್ವಿಯಮನಸ್ಸಿನಲ್ಲಿದ್ದದ್ದನ್ನು ಮೊದಲೇ ಅರಿತು ಆಕೆಯನ್ನು ಕುರಿತು—"ದೇವೀ, ನಿನ್ನ ಮನಸ್ಸಿನಲ್ಲಿದ್ದದ್ದು ನನಗೆ ಮೊದಲೇಗೊತ್ತಾಗಿದೆ; ಆದ್ದರಿಂದ ನಿನ್ನ ಭಾರಹರಣಕ್ಕಾಗಿ ಅಂಶತಃ ಅವತಾರಮಾಡಬೇಕೆಂದು ಯಾವತ್ತು ದೇವತೆಗಳಿಗೂ, ಗಂಧರ್ವರಿಗೂ ನಾನು ಹೇಳುವೆನು; ನೀನು ನಿಶ್ಚಿಂತಳಾಗಿರು," ಎಂದು ಹೇಳಿ, ಅದರಂತೆ ದೇವತೆಗಳಿಗೂ, ಗಂಧರ್ವಾದಿಗಳಿಗೂ ಲೋಕಕಲ್ಯಾಣಕ್ಕಾಗಿ ಅವತರಿಸಲು ಅಪ್ಪಣೆಮಾಡಿದನು. ಬಳಿಕ ಬ್ರಹ್ಮ, ಇಂದ್ರರೇ ಮೊದಲಾದ ದೇವತೆಗಳೂ, ಗಂಧರ್ವಾದಿಗಳೂ ಭಗವಾನ್ ವಿಷ್ಣುವಿನ ಬಳಿಗೆ ಹೋದರು ಆಗ ಬ್ರಹ್ಮನು ಆ ಭಗವಂತನಿಗೆ—"ಭೂಭಾರಹರಣಕ್ಕಾಗಿ ನೀನೂ ಅವತರಿಸಬೇಕೆಂ"ದು ಪ್ರಾರ್ಥಿಸಲು, "ತಥಾಸ್ತು" ಎಂದು ಮಹಾವಿಷ್ಣುವು ಒಪ್ಪಿಕೊಂಡನು.

---

## ಶ್ರೀ ಶೇಷಸದ್ಗುರು - ಸೂಕ್ತಿರೂಪ

# ರಹಸ್ಯಗಳು

**ಉಪಕ್ರಮ**—ಈ ಅಂಶಾವತರಣಪರ್ವವು ಮಹಾಭಾರತದ ಕಥೆಯ ಪೀಠಿಕೆಯೆಂದು ಹೇಳಬಹುದು. ದೇವದೈತ್ಯರು ಅಂಶತಃ ಈ ಭೂತಲದಲ್ಲಿ ಅವತಾರಮಾಡಿದರೆಂಬ ಸಂಗತಿಯನ್ನು ಈ ಪರ್ವದಲ್ಲಿ ಹೇಳಿರುವದರಿಂದ, ಈ ಪರ್ವಕ್ಕೆ ಅಂಶಾವತರಣಪರ್ವವೆಂಬ ಹೆಸರು ಬಂದಿದೆ. ಮಹಾಭಾರತವನ್ನು ಬರೆದವರೂ, ನಷ್ಟವಾಗುತ್ತಿದ್ದ ಕುರುವಂಶವನ್ನು ಸಂತತಿಪ್ರದಾನಮಾಡಿ ಉದ್ಧರಿಸಿದವರೂ ಭಗವಾನ್ ವೇದವ್ಯಾಸರಷ್ಟೆ? ಭಾರತದ ತಾಯಿಬೇರಿನಂತೆ ಇದ್ದ ಆ ವೇದವ್ಯಾಸರಿಗೆ ಪರಾಶರ ಋಷಿಶ್ರೇಷ್ಠರ ಯೋಗದಿಂದ ಜನ್ಮಕೊಟ್ಟಿದ್ದ ಸತ್ಯವತಿಯ ಅಲೌಕಿಕ ಜನ್ಮವೃತ್ತಾಂತವು ಈ ಪರ್ವದೊಳಗಿನ ಉಪರಿಚರರಾಜನ ಚರಿತ್ರದಲ್ಲಿ ಬಂದಿರುವದರಿಂದ, ಈ ಉಪರಿಚರರಾಜನ ಚರಿತ್ರದಿಂದಲೇ ಭಾರತದ ಆರಂಭವಾಯಿತೆಂದು ಹೇಳಬಹುದುಂಟು. ಈ ಪರ್ವದಲ್ಲಿ ಕೆಳಗಿನ ರಹಸ್ಯಗಳು ನೆನಪಿಡತಕ್ಕವಾಗಿವೆ.



ದುಷ್ಯಂತನು ಕಣ್ವಾಶ್ರಮಕ್ಕೆ ಬಂದದು.

ಸಾಧಿಸಿದ್ದ ವಿವಿಧ ಆಸನಗಳನ್ನು ನೋಡಿ ರಾಜನು ಆಶ್ಚರ್ಯಮಗ್ನ ನಾದನು. ಬ್ರಾಹ್ಮಣರು ಅಲ್ಲಲ್ಲಿ ದೇವತಾರ್ಚನಗಳನ್ನು ಮಾಡುತ್ತ ಲಿದ್ದರು. ಹೀಗೆ ಧರ್ಮಕರ್ಮಮಗ್ನರಾದ ಸಾವಿರಾರು ಜನ ಋಷಿಗ ಳನ್ನು ನೋಡುವ ಆ ದುಷ್ಯಂತರಾಜನಿಗೆ ಆ ಆಶ್ರಮವು ಆಗಲೆ ಹೇಳಿ ದಂತೆ, ಎರಡನೆಯ ಬ್ರಹ್ಮಲೋಕವಾಗಿ ತೋರಿದ್ದು ಆಶ್ಚರ್ಯವಲ್ಲ. ಆ ಆಶ್ರಮವನ್ನು ಎಷ್ಟು ನೋಡಿದರೂ ಅರಸನಿಗೆ ತೃಪ್ತಿಯಾಗಲೊ ಲ್ಲದು.

**೭೧ನೇ ಅಧ್ಯಾಯ— ಶಕುಂತಲಾದರ್ಶನ:**—ಜನಮೇಜಯಾ, ಆಮೇಲೆ ಆಜಾನುಬಾಹುವಾದ ಆ ರಾಜನು ಅಮಾತ್ಯಾದಿಕರನ್ನು ಹಿಂದೆ ಬಿಟ್ಟು, ತಾನೊಬ್ಬನೇ ಕಣ್ವರ ಮುಖ್ಯವಾದ ಆಶ್ರಮವನ್ನು ಪ್ರವೇಶಿಸಿ ದನು. ಅಲ್ಲಿ ಪುಣ್ಯಶ್ಲೋಕರಾದ ಕಣ್ವಋಷಿಗಳು ಎಲ್ಲಿಯೂ ಕಾಣಲೊ ಲ್ಲರು. ಆಗ ರಾಜನು—"ಇಲ್ಲಿ ಯಾರಾದರೂ ಇರುವರೋ?" ಎಂದು ಗರ್ಜಿಸಿಕೇಳಲು, ರಾಜನ ಆ ಮಹಾಶಬ್ದವನ್ನು ಕೇಳಿದಕೂಡಲೆ ಮೂರ್ತಿ ಮಂತ ಲಕ್ಷ್ಮಿಯಂತೆ ಒಬ್ಬ ತಾಪಸೀ ವೇಷಧಾರಿಯಾದ ಕನ್ಯೆಯು ಆಶ್ರಮದಿಂದ ಹೊರಗೆಬಂದಳು. ಆಕೆಯು ಅರಸನನ್ನು ನೋಡಿದಕೂ ಡಲೆ—"ತಮಗೆ ಸ್ವಾಗತವು" ಎಂದು ಶಿಷ್ಟಸ್ವರದಿಂದ ನುಡಿದು, ಆ ಕೃಷ್ಣನಯನೆಯು ಆಸನ, ಪಾದ್ಯ, ಅರ್ಘ್ಯ ಮೊದಲಾದವುಗಳಿಂದ ದುಷ್ಯಂತನನ್ನು ಪೂಜಿಸಿ—"ತಮ್ಮ ರೋಗರಹಿತವಾದ ರಾಷ್ಟ್ರಕ್ಕೆ ಕ್ಷೇಮವೆ? ನಿಮಗೆ ಕುಶಲವೆ?" ಎಂದು ಮಮತ್ವಪೂರ್ವಕವಾಗಿ ಕೇಳಿ ದಳು. ಆಮೇಲೆ ಮುಗುಳುನಗೆಯಿಂದ ಆಕೆಯು - "ಏನು ಅಪ್ಪಣೆಯಾ ಗುವದು?" ಎಂದು ಕೇಳಲು, ಆ ಸರ್ವಾಂಗಸುಂದರಿಯು ಈ ಸವಿ ಮಾತಿನ ಪ್ರಶ್ನವನ್ನು ಕೇಳಿ, ಆಕೆಯ ಅತಿಥಿಸತ್ಕಾರದ ಈ ಉತ್ತಮ ರೀತಿಯನ್ನು ನೋಡಿ ರಾಜನು ಆಕೆಯನ್ನು ಕುರಿತು—"ಮಹಾಭಾಗ ಕಣ್ವಋಷಿಗಳ ದರ್ಶನಮಾಡಿಕೊಳ್ಳುವದಕ್ಕಾಗಿಯೂ, ಅವರನ್ನು ಸೇವಿ ಸುವದಕ್ಕಾಗಿಯೂ ನಾನು ಬಂದಿರುವೆನು. ಎಲೈ ಭದ್ರೇ, ಅವರು ಎಲ್ಲಿ ಹೋಗಿರುವರೆಂಬದನ್ನು ನನಗೆ ಕೃಪೆಮಾಡಿ ಹೇಳುವೆಯಾ?" ಎಂದು ಪ್ರಶ್ನಮಾಡಲು, ಶಕುಂತಲೆಯು—"ನನ್ನ ತಂದೆಯವರು ಹಣ್ಣುಗಳನ್ನು

ತರುವದಕ್ಕಾಗಿ ಹೊರಗೆಹೋಗಿರುವರು. ತಾವು ಒಂದುಗಳಿಗೆ ಕುಳಿತು ಕೊಂಡರೆ, ತಮ್ಮನ್ನು ಅವರು ಇಲ್ಲಿಯೇ ಕಾಣುವರು.''

ಜನಮೇಜಯಾ, ಆಶ್ರಮದಲ್ಲಿ ಋಷಿಗಳಿಲ್ಲದ್ದನ್ನು ನೋಡಿ, ಶಕುಂತಲೆಯೂ ಹಾಗೆಯೇ ಹೇಳುತ್ತಿದ್ದದ್ದನ್ನು ಕೇಳಿ ದುಷ್ಯಂತನು ಕ್ಷಣ ಹೊತ್ತು ಸುಮ್ಮನೆ ನಿಂತುಕೊಂಡನು. ಆಗ ಅತ್ಯಂತ ಚಲುವೆಯೂ, ಕಳೆ ಉಕ್ಕುವವಳೂ, ನಗೆಮೊಗದವಳೂ ಆದ ಚಾರುಗಾತ್ರಿ ಶಕುಂತಲೆಯ ಸ್ವಾಭಾವಿಕವಾದ ಅಂಗಕಾಂತಿಗೆ. ಆಕೆಯ ತಪಸ್ತೇಜದ, ಹಾಗು ಇಂದ್ರಿಯನಿಗ್ರಹ ಮೂಲವಾದ ಬ್ರಹ್ಮಚರ್ಯ ತೇಜದ ಜೋಡು ದೊರೆತದ್ದರಿಂದ ಆಕೆಯು ಅತ್ಯಂತತೇಜಸ್ವಿಯಾಗಿ ತೋರುತ್ತಲು, ಆ ಲೋಕೋತ್ತರ ಸುಂದರಿಯ ಸರ್ವಾಂಗ-ಸುಂದರಸ್ವರೂಪವು ಅರಸನ ಕಣ್ಣಿಗೆ ಒಡೆದು ಕಾಣಿಸಿತು. ಆಗ ರೂಪ ಯೌವನ ಸಂಪನ್ನಳಾದ ಆ ಕುಲೀನ ಕನ್ಯೆಯನ್ನು ಕುರಿತು ದುಷ್ಯಂತನು--

ದುಷ್ಯಂತ—ಎಲೈ ಸಿಂಹಕಟಿಯೇ, ನೀನು ಯಾರು ? ಯಾರವಳು ? ನೀನು ವನದಲ್ಲಿ ಬಂದ ಕಾರಣವೇನು ? ಇಂಥ ಈ ನಿನ್ನ ಅದ್ವಿತೀಯ ಲಾವಣ್ಯವು ಈ ವನದಲ್ಲಿಯ ತಪಶ್ಚರ್ಯಕ್ಕೆ ಯೋಗ್ಯವಾದದ್ದಲ್ಲ. ನಿನ್ನನ್ನು ಸುಮ್ಮನೆ ಒಮ್ಮೆ ನೋಡಿದ ನೆವದಿಂದ ನನ್ನ ಮನಸ್ಸು ನಿನ್ನ ಆಳಾಗಿರುವದರಿಂದ ಕೇಳುತ್ತೇನೆ ನನ್ನ ಪ್ರಶ್ನೆಗಳಿಗೆ ಉತ್ತರಕೊಡು.

ಶಕುಂತಲೆ (ನಗನಗುತ್ತ)—ರಾಜಾ, ನಾನು ಭಗವಾನ್ ಕಣ್ವಋಷಿಗಳ ಮಗಳು. ಆ ಮಹಾತ್ಮರು–ಮಹಾತಪಸ್ವಿಗಳೂ, . ಮಹಾಬುದ್ಧಿಶಾಲಿಗಳೂ, ಧರ್ಮಜ್ಞರೂ, ಉದಾರರೂ ಇರುವರೆಂಬದು ಲೋಕಪ್ರಸಿದ್ಧವು.

ದುಷ್ಯಂತ—ಸುಂದರೀ, ಸರ್ವವಂದ್ಯರಾದ ಭಗವಾನ್ ಕಣ್ವಋಷಿಗಳು ಬ್ರಹ್ಮಚಾರಿಗಳೆಂಬದನ್ನು ನಾನು ಬಲ್ಲೆನು. ಪ್ರತ್ಯಕ್ಷ ಧರ್ಮವೂ ತನ್ನ ವ್ರತವನ್ನು ಬಿಟ್ಟೀತು ; ಆದರೆ ಸದ್ಧರ್ಮದಿಂದ ಕಣ್ವಋಷಿಗಳು ಎಂದೂ ಹಿಂದಿರುಗಲಾರರು. ಅಂದಬಳಿಕ ಎಲೈ ವರಾರೋಹೇ, ನೀನು ಅವರ ಮಗಳು ಹೇಗಾದೀ ? ನಿನ್ನ ಮಾತು ಕೂಡುವದಿಲ್ಲ. ನನ್ನ ಮನಸ್ಸಿನ ಸಂಶಯವನ್ನು ದಯಮಾಡಿ ದೂರಮಾಡು.

ಶಕುಂತಲಾ—ಮಹಾರಾಜ, ಆ ನನ್ನ ತಂದೆಯವರೇ ಒಬ್ಬಾ ಸೊಬ್ಬ ಋಷಿಯಮುಂದೆ ಹೇಳುವಾಗ ನಾನು ಕೇಳಿದ್ದನ್ನು ನಿಮಗೆ ಹೇಳು ವೆನು ಕೇಳಿರಿ. ನನ್ನ ತಂದೆಯವರು ಆ ಋಷಿಯನ್ನು ಕುರಿತು—"ಋಷಿ ಶ್ರೇಷ್ಠಾ, ಎಷ್ಟೋವರ್ಷಗಳಹಿಂದೆ ವಿಶ್ವಾಮಿತ್ರಋಷಿಯು ಘೋರ ತಪ ಶ್ಚರ್ಯ ಮಾಡುತ್ತಿರುವಾಗ, ಇಂದ್ರನು ಆತನ ತಪಶ್ಚರ್ಯಕ್ಕೆ ಅಂಜಿ, ಅದನ್ನು ಭಂಗಪಡಿಸುವದಕ್ಕಾಗಿ ಅವರಬಳಿಗೆ ಹೋಗೆಂದು ಮೇನಕೆಗೆ ಹೇಳಿದನು. ಆಗ ಮೇನಕೆಯು ಅಂಜಿ ಇಂದ್ರನನ್ನು ಕುರಿತು--"ಮಹಾ ರಾಜ, ವಿಶ್ವಾಮಿತ್ರನು ಮೊದಲೇ ಮಹಾತೇಜಸ್ವಿಯು! ಅದರಲ್ಲಿ ಈಗ ಉಗ್ರತಪಶ್ಚರ್ಯಮಾಡುತ್ತಿರುವನು ಮೇಲಾಗಿ ಆ ಮಹಾಕೋಪಿಷ್ಠ ಮಹಾಮುನಿಗೆ ನೀವೂ ಅಂಜುತ್ತಿರುವಿರಿ; ಅಂದಬಳಿಕ ಅಂಥವರಬಳಿಗೆ ಹೋಗುವ ನನ್ನಂಥ ಅಬಲೆಯ ಗತಿಯು ಏನಾಗಬೇಕು? ಯಾವ ವಿಶ್ವಾಮಿತ್ರನು ಮಹಾಭಾಗ ವಶಿಷ್ಠರ ಪ್ರೀತಿಯ ನೂರುಜನ ಮಕ್ಕಳನ್ನು ಕೊಂದನೋ, ಯಾವನು ಜಾತಿಯಿಂದ ಕ್ಷತ್ರಿಯನಿದ್ದು, ತಪೋಬಲದಿಂದ ಬ್ರಾಹ್ಮಣನಾದನೋ, ಯಾವನು ಸಿಟ್ಟಿನಿಂದ ಹೊಸಸೃಷ್ಟಿಯನ್ನು ಮಾಡಿದನೋ, ತಂದೆಯ ಅಪಮಾನ, ಗೋಹತ್ಯ, ಗೋಮಾಂಸ ಭಕ್ಷಣ ಗಳಂಥ ಮೂರು ಮಹಾ ಪಾತಕಗಳನ್ನು ಮಾಡಿದ್ದರಿಂದ ತ್ರಿಶಂಕು ಎಂಬ ಹೆಸರುಪಡೆದ ಮಹಾಪಾಪಿ ರಾಜನಿಂದ ಯಜ್ಞಮಾಡಿಸಿ, ಸೋಮಪಾನ ಕ್ಕಾಗಿ ನಿಮ್ಮನ್ನು ಯಾವನು ಪ್ರತ್ಯಕ್ಷ ಬರಮಾಡಿಕೊಂಡನೋ ಅಂಥ ವಿಶ್ವಾಮಿತ್ರನಬಳಿಗೆ ನನ್ನನ್ನು ಕಳಿಸುವಿರಾ? ತನ್ನ ತಪಸ್ಸಾಮರ್ಥ್ಯದಿಂದ ತ್ರೈಲೋಕ್ಯಗಳನ್ನು ಸುಟ್ಟು ಸೂರೆಗೊಳ್ಳುವ ಆ ತಾಮಸಿಋಷಿಯ ಸ್ಪರ್ಶ ನದಿಂದ ನಾನು ಸುಟ್ಟುಬೂದಿಯಾಗದೆ ಜೀವದಿಂದ ಉಳಿಯಬಹುದೆ? ಆದರೆ ತಮ್ಮ ಆಜ್ಞೆಯನ್ನಾದರೂ ಮೀರುವದು ಹೇಗೆ? ನಾನು ನೃತ್ಯ ಗಾಯನಾದಿಗಳಿಂದ ಆ ಕೋಪಿಷ್ಠಮುನಿಯ ತಪೋಭಂಗಮಾಡಲು ಯತ್ನಿ ಸುತ್ತಿರುವಾಗ, ತಮ್ಮ ಅಪ್ಪಣೆಯಂತೆ ವಾಯುವು ನನ್ನ ಉಟ್ಟವಸ್ತ್ರ ವನ್ನು ಕಳೆದು ಹಾರಿಸುವಂತೆ ಮಾಡಿರಿ; ಮನ್ಮಥದೇವನು ನನಗೆ ಎಲ್ಲ ಬಗೆಯಿಂದ ಸಹಾಯಮಾಡಲಿ," ಎಂದು ಪ್ರಾರ್ಥಿಸಲು, ಇಂದ್ರನು ವಾಯು–ಮನ್ಮಥರನ್ನು ಆಕೆಯ ಸಹಾಯಕ್ಕಾಗಿ ಕಳಿಸಿದನು.

**೭೧ನೇ ಅಧ್ಯಾಯ — ಶಕುಂತಲಾಜನ್ಮ:** -- ರಾಜಾ, ಹೀಗೆ ಮೇನಕೆಯು ವಾಯು-ಮನ್ಮಥರೊಡನೆ ವಿಶ್ವಾಮಿತ್ರಾಶ್ರಮವನ್ನು ಹೊಕ್ಕಳು. ಅಲ್ಲಿ ತಪಸ್ಸಿನಿಂದ ಅಂತರ್ಬಹಿಶ್ಶುದ್ಧನಾದ ಆ ಋಷಿಯು ತಪಸ್ಸಂಗ್ರಹ ಮಾಡುತ್ತಿದ್ದನು. ಆಗ ಮೇನಕೆಯು ಅಂಜುತ್ತಂಜುತ್ತ ಆ ಋಷಿವರ್ಯನನ್ನು ನಮಸ್ಕರಿಸಿ, ಆತನ ಎದುರಿಗೇ ಜಲದಲ್ಲಿ ಕ್ರೀಡಿಸ ತೊಡಗಿದಳ. ಅಷ್ಟರಲ್ಲಿ ಜಲಾಶಯದ ದಂಡೆಯಮೇಲಿಟ್ಟಿದ್ದ ಆಕೆಯ ವಸ್ತ್ರವನ್ನು ವಾಯುವು ಹಾರಿಸಿಕೊಂಡು ಹೋಗತೊಡಗಿದನು. ಆಗ ಆ ವಸ್ತ್ರವನ್ನು ಹಿಡಿಯುವದಕ್ಕಾಗಿಯೋ ಅನ್ನುವಂತೆ ಆ ಸುಂದರಿಯು ಜಲಾಶಯದಿಂದ ಹೊರಗೆ ಬರುವದಕ್ಕಾಗಿ ಧಾವಿಸಿದಳು. ಬತ್ತಲೆ ಹೊರಗೆ ಬರಬೇಕಾದದ್ದರಿಂದ, ಆಕೆಯಲ್ಲ ಸ್ವಾಭಾವಿಕವಾಗಿಯೂ, ಈಶ ಸಂಕಲ್ಪ ದಂತೆಯೂ ಮನೋಹರವಾದ ಲಜ್ಜೆಯು ಉತ್ಪನ್ನವಾಗಿ, ಆಕೆಯ ಮುಖ ದಲ್ಲ ಮನಸ್ಸಿಗೆ ನಡುವ ಮುಗುಳು ನಗೆಯು ತೋರಿತು. ಇದನ್ನೆಲ್ಲ ನೋಡಿದ ವಿಶ್ವಾಮಿತ್ರನು ಮೋಹಿತನಾಗಿ ಮೊದಲು ಕರುಣೆಯ, ಆಮೇಲೆ ಮದನನ ಸ್ವಾಧೀನವಾದನು. ಆತನು ಮೇನಕೆಯನ್ನು ಪ್ರೇಮದಿಂದ ಕರೆಯಲು, ಆಕೆಯು ಒಳ್ಳೇ ಔತ್ಸುಕ್ಯದಿಂದಲೂ, ಶುದ್ಧಸ್ವಭಾವದಿಂದಲೂ ಆ ಋಷಿಯ ಆಮಂತ್ರಣವನ್ನು ಮನ್ನಿಸಿದಳು. ಮುಂದೆ ಬಹುಕಾಲ ಅವರಿಬ್ಬರು ಮಾಲಿನೀತೀರದಲ್ಲಿ ಹಿಮವತ್ಪರ್ವತದಮೇಲೆ ಕಾಮಕ್ರೀಡಾ ಸಕ್ತರಾಗಿ ವ್ಯವಹರಿಸಿದರು. ಆಗ ಮೇನಕೆಯ ಹೊಟ್ಟೆಯಲ್ಲಿ ಒಂದು ಕನ್ಯಾರತ್ನವು ಜನಿಸಿತು! ಆ ಕೂಸನ್ನು ಮೇನಕೆಯು ಮಾಲಿನೀ ನದಿಯ ತೀರದಲ್ಲಿಟ್ಟು ಕೃತಕೃತ್ಯಳಾಗಿ ದೇವಲೋಕಕ್ಕೆ ಹೋಗಿ ಇಂದ್ರನನ್ನು ಕಂಡಳು. ಇತ್ತ ಆ ಕೂಸನ್ನು ಶಕುಂತಗಳು, ಅಂದರೆ ಪಕ್ಷಿಗಳು ಸುತ್ತು ಮುತ್ತು ಕುಳಿತು ಹಿಂಸ್ರಪಶುಗಳಿಂದ ರಕ್ಷಿಸತೊಡಗಿದವು. ಪಕ್ಷಿಗಳಿಂದ ಈ ಕೂಸಿನ ರಕ್ಷಣವಾಗದೆಂದು ತಿಳಿದು, ಋಷಿಶ್ರೇಷ್ಠಾ, ನಾನು ಅದನ್ನು ನನ್ನ ಆಶ್ರಮಕ್ಕೆ ತಂದು ರಕ್ಷಿಸಿದೆನು. ದೇಹಕೊಡುವವನು, ಪ್ರಾಣದಾನ ಮಾಡುವವನು, ಅನ್ನಕೊಡುವವನು ಅನುಕ್ರಮದಿಂದ ಪಿತೃತ್ವವನ್ನು ಹೊಂದುವರೆಂದು ಧರ್ಮಶಾಸ್ತ್ರದಲ್ಲ ಸ್ಪಷ್ಟವಾಗಿ ಹೇಳಿರುವದರಿಂದ, ಶಕುಂತಲೆಯು ನನ್ನ ಮಗಳೇ ಆಗಿರುವಳು. ಶಕುಂತಗಳು ಈಕೆಯನ್ನು

ರಕ್ಷಿಸಿದ್ದರಿಂದ ಈಕೆಗೆ ನಾನು ಶಕುಂತಲೆ ಎಂದು ಹೆಸರನ್ನಿಟ್ಟಿರುವೆನು.'' ರಾಜಾ, ಹೀಗೆಂದು ನನ್ನ ತಂದೆಯು ಆ ಋಷಿಯಮುಂದೆ ಹೇಳಿದ್ದನ್ನೇ ನಾನು ನಿನ್ನಮುಂದೆ ಹೇಳಿರುವೆನು.

## ೭೩ನೇ ಅಧ್ಯಾಯ — ದುಷ್ಯಂತ ಶಕುಂತಲಾವಿವಾಹಃ—

ದುಷ್ಯಂತ—ಎಲೈ ಕಲ್ಯಾಣೀ, ನಿನ್ನ ಈ ವೃತ್ತಾಂತದಿಂದ ನೀನು ರಾಜ ಕನ್ಯೆಯಿರುವೆಯೆಂಬದು ಸ್ಪಷ್ಟವಾಗುತ್ತದೆ; ಆದ್ದರಿಂದ ಎಲೈ ಸುಂದರಿಯೇ, ನೀನು ಗಾಂಧರ್ವವಿವಾಹದಿಂದ ನನ್ನ ಹೆಂಡತಿಯಾಗು. ನೀನು ಬೇಡಿದ್ದನ್ನು ನಾನುಕೊಡುವೆನು. ಬಹಳ ಹೇಳುವದೇನು ? ನನ್ನ ಯಾವತ್ತೂ ರಾಜ್ಯವನ್ನೂ ನಿನಗೆ ಒಪ್ಪಿಸುವೆನು.

ಶಕುಂತಲೆ—ರಾಜನ್, ಹಣ್ಣು ತರುವದಕ್ಕಾಗಿ ಹೋಗಿರುವ ನನ್ನ ತಂದೆಯು ಬರುವವರೆಗೆ ಒಂದು ಗಳಿಗೆ ಹಾದಿಯು ನೋಡಿರಿ, ಅವರು ಬಂದ ಬಳಿಕ ನನ್ನನ್ನು ನಿಮಗೆ ಅರ್ಪಿಸುವರು.

ದುಷ್ಯಂತ—ಎಲೈ ಸುಂದರೀ, ನಿನ್ನಲ್ಲಿ ನನ್ನ ಮನಸ್ಸು ನಟ್ಟಿರುವ ದರಿಂದ, ನೀನು ನನ್ನನ್ನು ಅಂಗೀಕರಿಸಬೇಕೆಂದು ನಾನು ಇಚ್ಛಿಸುವೆನು. ನಿಜವಾಗಿ ನೋಡಿದರೆ, ತಾನೇ ತನ್ನ ಹಿತಕರ್ತೃವಾಗಿರುವದರಿಂದ, ಧರ್ಮ ದೃಷ್ಟಿಯಿಂದಲೂ ನೀನೇ ನಿನ್ನ ದಾನಮಾಡಲು ಸ್ವತಂತ್ರಳಾಗಿರುವೆ. ೧ ಬ್ರಾಹ್ಮ, ೨ ದೈವ, ೩ ಪ್ರಾಜಾಪತ್ಯ, ೪ ಆರ್ಷ, ೫ ಆಸುರ, ೬ ಗಾಂಧರ್ವ, ೭ ಪೈಶಾಚ, ೮ ರಾಕ್ಷಸ, ಎಂಬ ಎಂಟು ಪ್ರಕಾರದ ವಿವಾಹಗಳಲ್ಲಿ ಗಾಂಧರ್ವ, ಆಸುರ ವಿವಾಹವಿಧಿಗಳು ಕ್ಷತ್ರಿಯರಿಗೆ ಉಚಿತವಾಗಿರುವವು; ಆದ್ದರಿಂದ ಗಾಂಧರ್ವವಿವಾಹದಿಂದ ನೀನು ನನ್ನ ಲಗ್ನವಾಗು

ಶಕುಂತಲೆ—ರಾಜಾ, ಈಗಾಗುವ ನಮ್ಮ ವಿವಾಹವು ಧರ್ಮಸಮ್ಮತವಿದ್ದು, ನನ್ನ ದಾನಮಾಡಲು ನಾನು ಸ್ವತಂತ್ರಳಿದ್ದಪಕ್ಷದಲ್ಲಿ, ನೀವು ನನ್ನದೊಂದು ಮಾತನ್ನು ನಡಿಸುವೆನೆಂದು ನನಗೆ ವಚನಕೊಡಬೇಕು. ನನ್ನ ಹೊಟ್ಟೆಯಲ್ಲಿ ಹುಟ್ಟುವ ಮಗನು ರಾಜನಾಗುವನೆಂದು ಪೌರವಕುಲದ ನೀನು ನನಗೆ ವಚನಕೊಟ್ಟರೆ, ನಮ್ಮಿಬ್ಬರ ವಿವಾಹವು ಅವಶ್ಯವಾಗಿ ಆಗಲಿ ;

ಜನಮೇಜಯಾ, ಶಕುಂತಲೆಯು ಈ ಮಾತುಗಳನ್ನು ಕೇಳಿ ದುಷ್ಯಂತನು ವಿಚಾರಮಾಡದೆ "ಹಾಗೇಆಗಲಿ," ಎಂದು ನುಡಿದುಬಿಟ್ಟನು. ಆತನು ಮತ್ತೆ ಶಕುಂತಲೆಯನ್ನು ಕುರಿತು—"ಎಲೈ ಸರ್ವಾಂಗಸುಂದರೀ, ನೀನು ಅತ್ಯಂತ ಯೋಗ್ಯಳಾಗಿರುವದರಿಂದ, ನಾನು ನಿನ್ನನ್ನು ನನ್ನ ಪಟ್ಟಣಕ್ಕೆ ಕರೆದುಕೊಂಡು ಹೋಗುವೆನು," ಎಂದು ಮತ್ತೊಂದು ವಚನಕೊಟ್ಟನು. ಬಳಿಕ ಗಾಂಧರ್ವ ವಿವಾಹದಿಂದ ಅವರಿಬ್ಬರ ಪಾಣಿಗ್ರಹಣ ವಿಧಿಯು ಆಗಿ, ಗರ್ಭಾಧಾನಸಂಸ್ಕಾರವೂ ಆಯಿತು. ಬಳಿಕ ರಾಜನು ಆಕೆಯ ಅನುಮತಿಯಿಂದ ತನ್ನ ಪಟ್ಟಣಕ್ಕೆ ಹೊರಟುಹೋದನು. ಕಣ್ವಋಷಿಗಳ ಸ್ಮರಣಾವಾಗಿ ಆತನ ಹೃದಯವು ಭಯದಿಂದಕಂಪಿಸುತ್ತಿತ್ತು. "ಆ ತಪೋಧನನು ಈಸುದ್ದಿಯನ್ನು ಕೇಳಿದಬಳಿಕ ಏನುಮಾಡಬಹುದು ? ನನ್ನಗತಿಯು ಏನಾದೀತು?" ಎಂಬ ಚಿಂತೆಯಲ್ಲಿಯೇ ಆತನು ತನ್ನ ಪಟ್ಟಣವನ್ನು ಮುಟ್ಟಿದನು.

ಇತ್ತ ರಾಜನು ಹೋದ ಬಳಿಕ ಒಂದು ಗಳಿಗೆಯ ಮೇಲೆ ಕಣ್ವಋಷಿಗಳು ಆಶ್ರಮಕ್ಕೆ ಬಂದರು ; ಆವರೆ ದಿನದಂತೆ ಎದುರು ಬರುವ ಶಕುಂತಲೆಯು ಲಜ್ಜೆಯ ಮೂಲಕ ಅಂದು ಹೊರಗೆ ಬರಲಿಲ್ಲ. ಜ್ಞಾನದೃಷ್ಟಿಯಿಂದ ತಮ್ಮ ಪಶ್ಚಾತ್ ನಡೆದ ಸಂಗತಿಯನ್ನೆಲ್ಲ ಕಣ್ವಋಷಿಗಳು ತಿಳಿದುಕೊಂಡು, ಸಮಾಧಾನ ಸೂಚಕವಾದ ಧ್ವನಿಯಿಂದ ಮಗಳನ್ನು ಕರೆದು— "ಎಲೆ ಕಲ್ಯಾಣೀ, ನನ್ನನ್ನು ಕೇಳದೆ, ನನ್ನದಾರಿಯನ್ನು ನೋಡದೆ ಇಂದು ಏಕಾಂತದಲ್ಲಿ ಮಾಡಿದ ವಿವಾಹ ವಿಧಿಯು ಧರ್ಮನಿಷಿದ್ಧವಾದದ್ದಲ್ಲ ; ಯಾಕಂದರೆ, ಕ್ಷತ್ರಿಯರಿಗೆ ಗಾಂಧರ್ವ ವಿಧಿಯೇ ಶ್ರೇಷ್ಠವಾದದ್ದು. ಪರಸ್ಪರರ ಪ್ರೀತಿಕೂಡಿದ ಸ್ತ್ರೀಪುರುಷರು ಏಕಾಂತದಲ್ಲಿ ಐಕಮತ್ಯವನ್ನು ಹೊಂದಿ ಮಾಡಿಕೊಳ್ಳುವ ಮಂತ್ರವಿಹೀನ ವಿವಾಹ ವಿಧಿಗೇ ಗಾಂಧರ್ವವಿವಾಹವೆನ್ನುವರು. ನೀನು ಲಗ್ನವಾಗಿರುವ ದುಷ್ಯಂತರಾಜನು ಧರ್ಮಜ್ಞನೂ, ಉದಾರನೂ ಆಗಿರುವನು. ಶಕುಂತಲೇ, ನಿನಗಾದರೂ ಮಹಾಪರಾಕ್ರಮಿಯೂ, ಮಹಾತ್ಮನೂ ಆದ ಪುತ್ರನು ಆಗುವನು. ಆತನು ಸಮುದ್ರವಲಯಾಂಕಿತ ಪೃಥ್ವಿಯ ರಾಜ್ಯವನ್ನು ಭೋಗಿಸುವನು. ಆ ಚಕ್ರವರ್ತಿರಾಜನ ಸೈನ್ಯವು ಸದಾ ವಿಜಯಿಯಾಗಿರುವದು. ಆತನನ್ನು ನಿರ್ಬಂಧಿಸಲಿಕ್ಕೆ ಪೃಥ್ವಿ

ಯಲ್ಲಿ ಯಾರೂ ಸಮರ್ಥರಾಗಲಾರರು ಇದು ನನ್ನ ಆಶೀರ್ವಾದವೆಂದು ತಿಳಿ" ಎಂದು ಹೇಳಿದರು. ಅವನ್ನು ಕೇಳಿ ಶಕುಂತಲೆಗೆ ಪರಮಾನಂದ ವಾಯಿತು. ಆಕೆಯು ಹೊರಗೆ ಬಂದು ಶ್ರೀ ಕಣ್ವಋಷಿಗಳ ಕಾಲುತೊಳೆದು, ಅವರ ಹೆಗಲಮೇಲಿನ ಹೊರೆಯನ್ನು ಇಳಿಸಿಕೊಂಡಳು. ಬಳಿಕ ಆಕೆಯು- "ಅಪ್ಪಾ, ನಾನು ಪುರುಷಶ್ರೇಷ್ಠ ದುಷ್ಯಂತರಾಜನನ್ನು ಲಗ್ನವಾಗಿರುವೆನು ತಾವು ಆತನಮೇಲೆಯೂ, ಆತನ ಸಚಿವಾದಿ ಪ್ರಧಾನರಮೇಲೆಯೂ ಕೃಪೆ ಮಾಡಿ ಪ್ರಸನ್ನರಾಗಬೇಕು" ಎಂದು ಪ್ರಾರ್ಥಿಸಿದಳು! ಅದಕ್ಕೆ ಕಣ್ವರು—"ಎಲೈ ಸುಮಂಗಲೇ, ನಿನ್ನಮೇಲೆ ನನ್ನಪ್ರೀತಿಯು ಇರುವದ ರಿಂದ ದುಷ್ಯಂತನಮೇಲೆ ನಾನು ಪ್ರಸನ್ನನಾಗಿರುವೆನು ಮಗಳೇ, ನಿನಗೆ ಬೇಕಾದ ವರವನ್ನು ಬೇಡಿಕೋ," ಎಂದು ಹೇಳಲು, ಶಕುಂತ ಲೆಯು—"ಪೌರವಕುಲದೊಳಗಿನ ಎಲ್ಲರಾಜರೂ ಧರ್ಮಪರರಾಗಿರಬೇಕು; ಹಾಗು ಅವರು ಎಂದೂ ರಾಜ್ಯಭ್ರಷ್ಟರಾಗಬಾರದು," ಎಂದು ವರವನ್ನು ಬೇಡಿಕೊಂಡಳು.

**೭೪ನೇ ಅಧ್ಯಾಯ—ಭರತಜನ್ಮ:**—ಜನಮೇಜಯಾ, ಶಕುಂತ ಲೆಯು ಮೂರುವರ್ಷ ಗರ್ಭಧಾರಣಮಾಡಿದಬಳಿಕ ಪ್ರದೀಪ್ತ ಅಗ್ನಿಯಂತೆ ತೇಜಸ್ವಿಯೂ, ರೂಪ-ಔದಾರ್ಯಾದಿ ಗುಣಗಳಿಂದ ಕೂಡಿದವನೂ ಆದ ಮಹಾ ತೇಜೋವಂತ ಪುತ್ರನು ಆಕೆಗೆ ಜನಿಸಿದನು! ಆ ಬುದ್ಧಿವಂತ ಹುಡುಗನ ಜಾತಕರ್ಮಾದಿ ಸಂಸ್ಕಾರಗಳನ್ನು ಪುಣ್ಯವಂತರಾದ ಕಣ್ವಋ ಷಿಗಳು ವಿಧಿಪೂರ್ವಕವಾಗಿ ಮಾಡಿದರು. ಆ ಕುಮಾರನು ಸಿಂಹನಂತೆ ಬಲಿಷ್ಠನಾಗಿದ್ದನು. ಆತನ ಹಸ್ತದಲ್ಲಿ ಮಹತ್ವ ಸೂಚಕವಾದ ಚಕ್ರ ರೇಷೆಯು ಇತ್ತು. ವೈಭವಶಾಲಿಯೂ, ಪರಾಕ್ರಮಿಯೂ ಆದ ಆ ಹುಡು ಗನ ತಲೆಯೂ ಒಳ್ಳೇ ದೊಡ್ಡದಾಗಿತ್ತು. ಆ ಕುಮಾರನು ದೇವಪುತ್ರ ನಂತೆ ಬೇಗಬೇಗ ಬೆಳೆಯುತ್ತಿದನು. ಆ ಹುಡುಗನು ಆರುವರ್ಷದವ ನಾಗುವದರೊಳಗೆ ತನ್ನ ಅಜ್ಜಂದಿರಾದ ಕಣ್ವರ ಆಶ್ರಮದ ಬಳಿಯಲ್ಲಿರುವ ಗಿಡಗಳಿಗೆ ಸಿಂಹ, ಹುಲಿ, ಕಾಡಹಂದಿ ಮೊದಲಾದವನ್ನು ಹಿಡಿದುತಂದು ಕಟ್ಟುತ್ತಿದ್ದನು. ಅವನು ಆ ಹಿಂಸ್ರಪಶುಗಳನ್ನು ಕುದುರೆಮಾಡಿ ಹತ್ತಿ ತಿರುವುತ್ತ ಅವುಗಳೊಡನೆ ನಿರ್ಭಯದಿಂದ ಆಡುತ್ತ ಅವನ್ನು ಹಣ್ಣು

ಹಣ್ಣು ಮಾಡುತ್ತಿದ್ದನು. ಹೀಗೆ ಯಾವತ್ತು ಕ್ರೂರಪಶುಗಳ ದಮನವಮಾ ಡುತ್ತಿದ್ದದ್ದರಿಂದ, ಕಣ್ವಾಶ್ರಮದೊಳಗಿನ ಋಷಿಗಳು ಆತನನ್ನು "ಸರ್ವ ದಮನ"ನೆಂದು ಕರೆಯುತ್ತಿದ್ದರು.

ಜನಮೇಜಯಾ, ಈ ಮೇರೆಗೆ ಕುಮಾರನು ಪರಾಕ್ರಮ-ತೇಜ-ಬಲ ಗಳಿಂದ ಯುಕ್ತನಾಗಿರುವದನ್ನೂ, ಆತನ ಕರ್ಮಗಳು ಅಮಾನುಷವಾಗಿ ರುವದನ್ನೂ ಅರಿತು, ಈತನು ಇನ್ನು ಯೌವರಾಜ್ಯಾಭಿಷೇಕಕ್ಕೆ ತಕ್ಕವ ನಾಗಿರುವನೆಂದು ಭಾವಿಸಿ, ಕಣ್ವರು ತಮ್ಮ ವಿಚಾರವನ್ನು ಶಕುಂತಲೆಗೆ ತಿಳಿಸಿ ತಮ್ಮ ಶಿಷ್ಯರನ್ನು ಕುರಿತು—"ಶಿಷ್ಯರೇ, ನಮ್ಮ ಈ ಸುಲಕ್ಷಣೆ ಯಾದ ಶಕುಂತಲೆಯನ್ನು ಆಕೆಯ ಮಗನೊಡನೆ ಆಕೆಯ ಗಂಡನಮನೆಗೆ ಕರೆದುಕೊಂಡು ಹೋಗಿರಿ ; ಯಾಕಂದರೆ ಹೆಂಗಸರು ಬಹುದಿವಸ ತವರ ಮನೆಯಲ್ಲಿರುವದು ನೆಟ್ಟಗಲ್ಲ. ಅದರಿಂದ ಕೀರ್ತಿಗೂ, ಚರಿತ್ರಕ್ಕೂ, ಶೀಲಕ್ಕೂ, ಧರ್ಮವ್ರತಕ್ಕೂ ಅಪಾಯವಾಗುವದು;" ಎಂದು ಹೇಳಿದರು. ಬಳಿಕ ಶಕುಂತಲೆಯು ಋಷಿಯ ಆಶೀರ್ವಾದವನ್ನು ಗ್ರಹಿಸಿ ಗಂಡನ ಬಳಿಗೆ ಹೋಗಿ, ಯಥಾವಿಧಿ ಆತನನ್ನು ಪೂಜಿಸಿ—"ರಾಜನ್, ಈ ದೇವ ತುಲ್ಯನಾದ ಕುಮಾರನು ನಿನ್ನಿಂದ ನನ್ನಲ್ಲಿ ಹುಟ್ಟಿರುವನು ; ಆದ್ದರಿಂದ ನೀನು ಮೊದಲು ವಚನಕೊಟ್ಟಂತೆ ಈತನಿಗೆ ಯೌವರಾಜ್ಯಾಭಿಷೇಕವನ್ನು ಮಾಡು. ಕಣ್ವಋಷಿಗಳ ಆಶ್ರಮದಲ್ಲಿ ನೀನು ನನಗೆ ಕೊಟ್ಟವಚನವು ನಿನ್ನ ಸ್ಮರಣದಲ್ಲಿರಬಹುದು," ಎಂದು ಹೇಳಿದಳು. ಆಕೆ ಹೇಳಿದ್ದೆಲ್ಲ ಸ್ಮರಣದಲ್ಲಿದ್ದರೂ ದುಷ್ಯಂತನು ಏನೂ ಅರಿಯದವನಂತೆ—"ಎಲೈ ದುಷ್ಟತಪಸ್ವಿನಿಯೇ, ಧರ್ಮಾರ್ಥಕಾಮಗಳ ವಿಷಯವಾಗಿ ನಿನಗೆ ನಾನು ವಚನಕೊಟ್ಟಿದ್ದು ಸರ್ವಥಾ ನನಗೆ ನೆನಪಿಗೆ ಬರುವದಿಲ್ಲ ; ಆದ್ದರಿಂದ ನೀನು ಇಲ್ಲಿ ಇರು, ಅಥವಾ ಹೋಗು, ಬೇಕಾದದ್ದು ಮಾಡು. ನಿನ್ನೊಡನೆ ನನ್ನ ಯಾವಬಗೆಯ ಧಾರ್ಮಿಕಸಂಬಂಧವೂ ಇರುವದಿಲ್ಲ."

**ಶಕುಂತಲೆಯು ಭಾಷಣ**— ಅರಸನ ಈ ನಿಷ್ಠುರವಾದ ಲಜ್ಜಾಸ್ಪದ ಮಾತುಗಳನ್ನು ಕೇಳಿ ಆ ದುರ್ದೈವಿನಿಯಾದ ಸುಂದರಿಯು ದುಃಖದಿಂದ ವಿಹ್ವಲಳಾಗಿ, ಕೆಲಹೊತ್ತು ಕಂಬದಂತೆ ಸುಮ್ಮನೆ ನಿಂತುಕೊಂಡಳು. ಆಗ ಸಿಟ್ಟಿನಿಂದ ಆಕೆಯ ಕಣ್ಣುಗಳು ಕೆಂಡದಂತಾಗಿದ್ದವು. ಕೆಳದುಟಿಯು

ಥರಥರ ನಡುಗುತ್ತಿತ್ತು. ಇಂತಹ ಆ ಪತಿವ್ರತೆಯು ತನ್ನ ಕಟಾಕ್ಷಗಳಿಂದ ಅರಸನನ್ನು ಸುಡುವಳೋ ಎಂಬಂತೆ ತೋರುತ್ತಿತ್ತು; ಆದರೂ ಆಕೆಯು ಅಂತರಂಗದಲ್ಲಿ ಉಕ್ಕುವ ಸಿಟ್ಟನ್ನು ತನ್ನ ತಪಸ್ಸಾಮರ್ಥ್ಯದಿಂದ ನುಂಗಿ ಕೊಂಡು, ನೋಡಿಯೂ ನೋಡದವಳಂತೆ ಕ್ಷಣಹೊತ್ತು ಸುಮ್ಮನೆ ನಿಂತು ಕೊಂಡು, ಬಳಿಕ ರಾಜನನ್ನು ನೋಡುತ್ತ ಆತನನ್ನು ಕುರಿತು—"ಮಹಾ ರಾಜ, ನಿಮಗೆ ಎಲ್ಲಸಂಗತಿಗಳ ನೆನಪು ಇದ್ದರೂ, ನನಗೆ ಗೊತ್ತಿಲ್ಲವೆಂದು ಮೋಸಗಾರರಂತೆ ನಿಶ್ಶಂಕೆಯಿಂದ ಹೇಗೆ ಅನ್ನುವಿರಿ ? ಹೀಗೆ ಆತ್ಮವನ್ನು ವಂಚಿಸುವದು ಸರಿಯಲ್ಲ. ನಿಮ್ಮ ಅಂತರಾತ್ಮನನ್ನು ಸ್ಮರಿಸಿ ನಿಜವನ್ನು ಹೇಳಿರಿ. ಆತ್ಮವಂಚಕನಾದ ಕಳ್ಳನು ಯಾವ ಪಾಪಮಾಡಲಿಕ್ಕೂ ಹೇಸು ವದಿಲ್ಲ. ರಾಜಾ, ಪಾಪಸಾಕ್ಷಿಯು ನೀನು ಒಬ್ಬನೇ ಎಂದು ತಿಳಿಯಬೇಡ; ಅಂತರಂಗದಲ್ಲಿ ಯಾವಾಗಲೂ ವಾಸಿಸುವ ಭಗವಾನ್ ನಾರಾಯಣನು ಸರ್ವಸಾಕ್ಷಿಯಾಗಿರುವನು. ಅವನಿಗೆ ನಮ್ಮ ಎಲ್ಲಪಾಪಗಳೂ ತಿಳಿಯು ವವು. ಸೂರ್ಯ, ಚಂದ್ರ, ಅಗ್ನಿ, ವಾಯು, ಆಕಾಶ, ಭೂಮಿ, ಜಲ, ತನ್ನಹೃದಯ, ಯಮ, ದಿವಸ, ರಾತ್ರಿ, ಪ್ರಾತಃಕಾಲ,ಸಾಯಂಕಾಲ, ಧರ್ಮ ಎಂಬ ಈ ಯಾವತ್ತು ದೇವತೆಗಳಿಗೆ, ಯಾವಪ್ರಾಣಿಯು ಏನು ಮಾಡುವದೆಂಬದೆಲ್ಲವೂ ಸರಿಯಾಗಿ ಗೊತ್ತಾಗುತ್ತದೆ. ಆತ್ಮತುಷ್ಟನಾ ದವನ ಪಾತಕಗಳನ್ನುಮಾತ್ರ ಯಮನು ನಿವಾರಣಮಾಡುವನು. ಮನ ಸ್ಸಿನಲ್ಲಿ ಕಟಿಯುತ್ತಿರುವ ಪಾಪಿಯ ದುರ್ಗತಿಯನ್ನು ಏನು ಹೇಳುವದು ? ಆತ್ಮವಂಚಕನಿಗೆ ಯಮಲೋಕದಲ್ಲಿ ಭಯಂಕರ ಯಾತನೆಗಳಾಗುವವು ಆ ಆತ್ಮವಂಚಕನ ಕಲ್ಯಾಣವನ್ನು ಆತ್ಮನಂತು ಮಾಡುವದೇ ಇಲ್ಲ; ಆದರೆ ದೇವತೆಗಳೂ ಮಾಡುವದಿಲ್ಲ. ರಾಜಾ, ನಾನಾಗಿ ನಿನ್ನ ಮನೆಗೆ ಬಂದಿರುವೆನೆಂದು ತಿಳಿದು ಹೀಗೆ ನನ್ನ ಅಪಮಾನಮಾಡಬೇಡ. ಇಂತಹ ಭಾರ್ಯಾರೂಪಲಕ್ಷ್ಮಿಯನ್ನು ನೀನು ಪೂಜಿಸದೆ ಅಪಮಾನಮಾಡುವೆಯ ಲ್ಲವೆ ? ಒಬ್ಬ ಕಗ್ಗಮನುಷ್ಯನಂತೆ ನನ್ನನ್ನು ನೀನು ನಿರಾಕರಿಸುವೆಯಾ ? ನಾನು ಹೇಳುವದೆಲ್ಲ ಅರಣ್ಯರೋದನವಾಯಿತೇನು ? ರಾಜಾ, ನಾನು ಇಷ್ಟು ಹೇಳಿಕೊಳ್ಳುತ್ತಿದ್ದರೂ ನೀನು ನನ್ನ ಉಪೇಕ್ಷೆಮಾಡಿದರೆ ನಿನ್ನ ತಲೆಯು ಸಹಸ್ರಹೋಳು ಆದೀತೆಂಬದನ್ನು ನೆನಪಿನಲ್ಲಿಡು. ಧರ್ಮ

ಪತ್ನಿಯೊಡನೆ ರತನಾಗಲು, ಗರ್ಭಧಾರಣವಾದಾಗ ತಂದೆಯೇ ಮಗನ ರೂಪದಿಂದ ಹೆಂಡತಿಯಲ್ಲಿ ಹುಟ್ಟುವದರಿಂದ, ಹೆಂಡತಿಯು ಒಂದುಬಗೆ ಯಿಂದ ಗಂಡನಿಗೆ ತಾಯಿಯಾಗುವಳು! ನಿನ್ನ ವಂಶವನ್ನು ವಿಸ್ತರಿಸುವ ಈ ದುರ್ಲಭವಾದ ಅಪತ್ಯವನ್ನು ನೀನು ನಿರಾಕರಿಸಬೇಡ. "ಪುತ್" ನಾಮಕ ನರಕದಿಂದ ತಂದೆಯನ್ನು ಉದ್ಧರಿಸುವದರಿಂದಲೇ ಮಗನಿಗೆ ಪುತ್ರನೆಂಬ ಹೆಸರನ್ನು ಸ್ವಯಂಭುವು ಸ್ವತಃ ಕೊಟ್ಟಿರುವನು. ಮೊಮ್ಮ ಗನು ಅಜ್ಜನಿಗೆ ಬ್ರಹ್ಮಲೋಕವನ್ನು ಒದಗಿಸಿಕೊಡುವನು ಮರಿಮಗ ನಿಂದ ಮೋಕ್ಷವು ಪ್ರಾಪ್ತವಾಗುವದು. ಹೆಂಡತಿಯು ಧರ್ಮಾರ್ಥಕರ್ಮಗಳ, ಹಾಗು ಮೋಕ್ಷದ ಸಾಧನವಾಗಿರುವಳು. ಆಕೆಯಿಲ್ಲದೆ ಯಾವ ಧರ್ಮ ಕಾರ್ಯಗಳೂ ಆಗುವದಿಲ್ಲ ದೇವ, ಪಿತೃ, ಋಷಿ ಮೊದಲಾದವರ ಋಣ ಗಳಿಂದ ಹೆಂಡತಿಯೇ ದಾಟಿಸುವಳು. ಹೆಂಡಿರು ಧರ್ಮಕಾರ್ಯದಲ್ಲಿ ಹಿರಿ ಯರಂತೆ ಹಿತಕಾರಕವಾದ ಉಪದೇಶವನ್ನು ಮಾಡುವರು ; ಸಂಕಟಕಾಲ ದಲ್ಲಿ ತಾಯಿಯಂತೆ ರಕ್ಷಣಮಾಡುವರು ; ಹಾದಿನಡೆಯುವಾಗ ಅರಣ್ಯದಲ್ಲಿ ಕೂಡ ವಿಶ್ರಾಂತಿಯನ್ನುಂಟುಮಾಡುವರು. ಹೆಂಡತಿಯಿದ್ದವನೇ ವಿಶ್ವಾ ಸಕ್ಕೆ ಪಾತ್ರನು. ಹೆಂಡತಿಯು ಇಹಲೋಕದಲ್ಲಿಯೂ, ಪರಲೋಕದ ಲ್ಲಿಯೂ ಪರಮಮಿತ್ರಳಾಗಿರುವಳು. ಆಕೆಯು ಮೊದಲು ಮರಣಹೊಂದಿ ದರೆ ಗಂಡನ ಹಾದಿಯನ್ನು ನೋಡುತ್ತಲಿರುವಳು ; ಹಿಂದುಗಡೆ ಮರಣ ಹೊಂದಿದರೆ ಪತಿಯನ್ನು ಹಿಂಬಾಲಿಸಿ ಹೋಗುವಳು. ತನ್ನ ಹೆಂಡತಿಯಲ್ಲಿ ಹುಟ್ಟಿದ ತನ್ನ ಮಗನ ಮೋರೆಯನ್ನು ನೋಡುವದರಿಂದಾಗುವ ಸುಖ ವನ್ನು, ಸ್ವರ್ಗಸುಖವೂ ಸರಿಗಟ್ಟಲಾರದು ಧೂಲಿನಿಂದ ಮುಸುಗಿದ ಮೈಯಿಂದ ಮಗನು ಅಪ್ಪಿಕೊಳ್ಳುವಾಗ ಆಗುವ ಸುಖವನ್ನು ಅನುಭವಿಸುವವರೇ ಬಲ್ಲರು! ಸುಖವೂ, ಪ್ರೀತಿಯೂ, ಧರ್ಮವೂ ಸ್ತ್ರೀಯರ ಅಧೀನದಲ್ಲಿರುವ ವೆಂದು ತಿಳಿದು, ಸಿಟ್ಟಿಗೆದ್ದ ಪುರುಷನುಕೂಡ ಸ್ತ್ರೀಯರಿಗೆ ಅಪ್ರಿಯವಾದ ದ್ದನ್ನು ಮಾಡಬಾರದು ಸ್ತ್ರೀಯರು ಸನಾತನದ ಪರಮಪವಿತ್ರ ಕ್ಷೇತ್ರ ಜನ್ಮಸ್ಥಾನವಾಗಿರುವರು. ಸ್ತ್ರೀಯರಿಲ್ಲದೆ ಪ್ರಜೆಗಳನ್ನು ಉತ್ಪ ನ್ನಮಾಡುವದು ಋಷಿಗಳಿಗೂ ಸಾಧ್ಯವಿಲ್ಲ ; ಅಂದಬಳಿಕ ನಿನ್ನಂಥವರ ಪಾಡೇನು? ರಾಜಾ, ನಿರಾಕರಿಸಬೇಡ ಈ ನೇತ್ರಮನೋಹರನಾದ

ಮಗನನ್ನು ಆಲಿಂಗಿಸಿ ಸುಖವನ್ನು ಹೊಂದು ಮೂರುವರ್ಷ ಗರ್ಭಭಾರವನ್ನು ಹೊತ್ತ ಬಳಿಕ ಶೋಕವಿನಾಶಕನಾದ ಈ ನಿನ್ನ ಪುತ್ರನು ಹುಟ್ಟಿರುವನು. ಈತನು ಹುಟ್ಟಿದಕೂಡಲೆ ಆಕಾಶವಾಣಿಯು—"ಈತನು ನೂರು ಅಶ್ವಮೇಧಗಳನ್ನು ಮಾಡುವನು" ಎಂದು ಆಗಿರುವದು. ನಿನ್ನ ಪ್ರತಿಬಿಂಬವಾಗಿರುವ ನಿನ್ನ ಈ ಮಗನನ್ನು ಸ್ವೀಕರಿಸು. ರಾಜಾ, ನಾನು ಕಣ್ವಾಶ್ರಮದಲ್ಲಿ ನಿನಗೆ ಎಲ್ಲ ವೃತ್ತಾಂತವನ್ನು ಹೇಳಲಿಲ್ಲವೆ? ಹರಹರ! ನಾನು ಎಂಥ ಪಾಪಿಯು! ಹುಟ್ಟಿದಕೂಡಲೆ ತಂದೆತಾಯಿಗಳು ನನ್ನನ್ನು ಚೆಲ್ಲಕೊಟ್ಟರು. ತಾರುಣ್ಯದಲ್ಲಿ ನನ್ನ ಪತಿಯು ನೀನು ಹೀಗೆ ತ್ಯಜಿಸುವೆ! ರಾಜಾ, ಬೆದರಬೇಡ, ನಾನು ನಿನಗೆ ಬೇಡಾಗಿದ್ದರೆ ನನ್ನ ತಂದೆಯಾದ ಕಣ್ವರ ಆಶ್ರಮದಲ್ಲಿರುವೆನು. ಈ ನಿನ್ನ ಮಗನನ್ನಾದರೂ ಸ್ವೀಕರಿಸು."

ಶಕುಂತಲೆಯ ಈ ಮಾತುಗಳನ್ನು ಕೇಳಿ ದುಷ್ಯಂತನು—"ಶಕುಂತಲೇ, ನಿನ್ನಿಂದ ನನಗೆ ಮಗನಾಗಿರುವನೆಂಬದು ನನಗೆ ಗೊತ್ತೇ ಇಲ್ಲವು. ಹೆಂಗಸರು ನೀವು ದಿನಾಲು ಸುಳ್ಳು ಆಡುವವರು. ನಿಮ್ಮ ನಾಲಿಗೆಯನ್ನು ಯಾರು ನಂಬಬೇಕು? ಹೇಳಿಕೇಳಿ ನಿನ್ನ ತಾಯಿಯಾದ ಮೇನಕೆಯು ಯಾವತ್ತು ವಿಶ್ವದ ಹೆಂಡತಿಯು; ವಿಶ್ವಾಮಿತ್ರನು ಅತ್ಯಂತ ಕಠಿಣಹೃದಯದವನು; ತಾನು ಕ್ಷತ್ರಿಯನಿದ್ದು ಬ್ರಾಹ್ಮಣನಾಗುವ ಹವ್ಯಾಸದವನು; ಕಡೆಗೆ ಕಾಮಪಾಶಕ್ಕೆ ಸಿಗುವಹಾಗೆ ಸಿಕ್ಕುಬಿಟ್ಟನು. ಇನ್ನು ಮೇನಕೆಯು ಅಪ್ಸರೆಯರಲ್ಲಿ ಶ್ರೇಷ್ಠಳು, ವಿಶ್ವಾಮಿತ್ರನು ಋಷಿಗಳಲ್ಲಿ ಶ್ರೇಷ್ಠನು ಸರಿ! ಆದರೆ ಪಾತರದವಳಾದ ನಿನ್ನ ತಾಯಿ ಮೇನಕೆಯು ನಿನ್ನನ್ನು ಯಾರಿಗೆ ಹಡೆದಿರುವಳೋ ಯಾರಿಗೆ ಗೊತ್ತು! ನನ್ನ ಮುಂದೆ ಇಷ್ಟು ಉದ್ಧ ಮಾತಾಡಲಿಕ್ಕೆ ನಿನಗೆ ನಾಚಿಕೆಯಾದರೂ ಹೇಗೆ ಬರುವದಿಲ್ಲ? ಎಲ್ಬೆ ತಪಸ್ವಿನೀ, ಹೊರಟು ಹೋಗು ಇಲ್ಲಿಂದ! ಮಹರ್ಷಿ ವಿಶ್ವಾಮಿತ್ರನೆತ್ತ, ಮೇನಕಾ ಅಪ್ಸರೆಯತ್ತ, ತಾಪಸವೇಷದಿಂದ ತಿರುಗುತ್ತಿರುವ ತಿರುಕಜಾರಿಣಿ ನೀನೆತ್ತ! ಈತನು ಆರುವರ್ಷದ ಮಗನಂತೆ! ಆರುವರ್ಷದ ಮಗನು ಇಂತಹ ವಿಶಾಲದೇಹಿಯೂ, ಇಷ್ಟು ಬಲಿಷ್ಠನೂ ಇರಬಹುದೇನು? ಆರೇವರ್ಷದಲ್ಲಿ ಈತನು ಇಷ್ಟು ದೊಡ್ಡವನು ಹೇಗಾದನೋ? ಬಹಳ ಹೇಳುವದೇನು? ನನಗೆ ಯಾವ ನೆನಪೂ ಇಲ್ಲ, ನನಗೆ ನಿನ್ನ ಗುರುತೂ ಇಲ್ಲ, ಹಾದಿ ಹಿಕ್ಕತ್ತ

ನೀನು ಹೊರಟು ಹೋಗು,'' ಅನ್ನಲು ಶಕುಂತಲೆಯು—''ರಾಜಾ, ನಿನ್ನ ಎಲೆಯಲ್ಲಿ ಕತ್ತೆ ಸತ್ತಿರಲು, ಮಂದಿಯ ಎಲೆಯ ನೊಣ ಜಾಡಿಸಲಿಕ್ಕೆ ಹೋಗಬೇಡ ಮೇನಕೆಯು ದೇವಲೋಕದವಳು, ದೇವತೆಗಳು ಆಕೆಯನ್ನು ಆರಾಧಿಸುವರು. ನೀನು ಮರ್ತ್ಯನು. ಎಷ್ಟೆ ಗರ್ವಿಷ್ಠ ರಾಜನೇ, ನಾನು ಮನಸ್ಸಿನಲ್ಲಿ ತಂದರೆ ಇಂದ್ರ, ಕುಬೇರ ಮೊದಲಾದವರ ಲೋಕಗಳಿಗೆ ಹೋಗಬಲ್ಲೆನು. ನಮ್ಮ ದೇವಯೋನಿಯನ್ನು ನಿಮ್ಮ ಮನುಷ್ಯಯೋನಿಯು ಸರಿಗಟ್ಟಲಾರದು. ಪರರ ಗುಣಗಳಿಂದ ಸಜ್ಜನರಿಗೆ ಆನಂದವೂ, ದುರ್ಜನರಿಗೆ ದುಃಖವೂ ಆಗುವವು ; ಅದರಂತೆ ಪರರ ನಿಂದೆಯಿಂದ ಸಜ್ಜನರಿಗೆ ದುಃಖವೂ, ದುರ್ಜನರಿಗೆ ಆನಂದವೂ ಆಗುವವು. ಇದರಿಂದ ನಿನ್ನ ಸ್ವರೂಪವಾವುದೆಂಬದನ್ನು ತಿಳಿದುಕೋ. ಮಗನು ತನ್ನ ಕುಲದ ಪ್ರತಿಷ್ಠೆಯಾಗಿರುವದರಿಂದ ಆತನನ್ನು ಪಾಲಿಸುವದೂ, ಆತನನ್ನು ಸುಸಂಸ್ಕೃತನನ್ನಾಗಿ ಮಾಡುವದೂ ತಂದೆಯ ಶ್ರೇಷ್ಠ ಕರ್ತವ್ಯವಾಗಿರುವದು ಮನು ಋಷಿಯ ಮತದಂತೆ ಐದು ಬಗೆಯ ಪುತ್ರರಿರುವರು. ಅವರು—೧ ತನ್ನ ತನ್ನ ಧರ್ಮಪತ್ನಿಯಲ್ಲಿ ಹುಟ್ಟಿದವನು ೨ ತನಗೆ ಸಿಕ್ಕವನು. ೩ ತಾನು ಕೊಂಡುಕೊಂಡವನು ೪ ತಾನು ಸಂರಕ್ಷಿಸಿದವನು. ೫ ಉಪನಯನಾದಿ ಸಂಸ್ಕಾರಗಳನ್ನು ಮಾಡಿದವನು. ಈ ಐದು ಬಗೆಯ ಮಕ್ಕಳು ಧರ್ಮಸಂಗ್ರಹಮಾಡುವವರೂ, ಕೀರ್ತಿಯನ್ನು ಹೆಚ್ಚಿಸುವವರೂ, ಮನಸ್ಸಿಗೆ ಆಹ್ಲಾದವನ್ನುಂಟುಮಾಡುವವರೂ ಆಗಿದ್ದರೆ, ಇವರು ತಂದೆಯನ್ನು ನರಕದಿಂದ ಉದ್ಧರಿಸುವರು ರಾಜಾ, ಸತ್ಯವನ್ನು ತ್ಯಜಿಸಬೇಡ. ಸತ್ಯಕ್ಕಿಂತ ಶ್ರೇಷ್ಠಧರ್ಮವಿಲ್ಲ. ಸುಳ್ಳಿನಂಥ ಸರ್ವನಾಶಕರವಾದ ಪಾಪವಿಲ್ಲ; ಆದ್ದರಿಂದ ಸತ್ಯವನ್ನು ಸ್ಮರಿಸಿ ಈ ಪುತ್ರನನ್ನು ಸ್ವೀಕರಿಸು. ರಾಜಾ, ದುಷ್ಯಂತಾ, ಕಟ್ಟಕಡೆಗೆ ನಾನು ಸ್ಪಷ್ಟವಾಗಿ ಹೇಳುತ್ತೇನೆ, ಈ ನನ್ನ ಮಗನು ನಿನ್ನ ಆಶ್ರಯವಿಲ್ಲದೆ, ಅದೇಕೆ, ನಿನ್ನ ವೈರಸಂಪಾದಿಸಿಯೂ ಸಮುದ್ರವಲಯಾಂಕಿತ ಪೃಥ್ವಿಯ ಚಕ್ರವರ್ತಿಯಾಗುವನೆಂಬದನ್ನು ನೆನಪಿನಲ್ಲಿಡು. ನಿನ್ನಂಥ ಅಸತ್ಯವಾದಿಯೊಡನೆ ನನ್ನ ಕೆಲಸವಿಲ್ಲ,'' ಎಂದು ನುಡಿದು, ಶಕುಂತಲೆಯು ಅಲ್ಲಿಂದ ಹೊರಡಲುದ್ಯುಕ್ತಳಾದಳು.

**ಶಕುಂತಲಾಸ್ವೀಕಾರ**—ಜನಮೇಜಯಾ, ಈ ಮೇರೆಗೆ ನುಡಿದು ಶಕುಂತಲೆಯು ದುಷ್ಯಂತನಕಡೆಗೆ ಬೆನ್ನು ಮಾಡಲು, ಎಲ್ಲರ ಸಮಕ್ಷ ಹೀಗೆ ಆಕಾಶವಾಣಿಯಾಯಿತು — "ರಾಜಾ ದುಷ್ಯಂತಾ, ಶಕುಂತಲೆಯ ಮಾತನ್ನು ತ್ರಿವಾರ ಸತ್ಯವೆಂದುತಿಳಿ. ಯಾರಿಂದ ಗರ್ಭಧಾರಣವಾಗುವದೋ ಆತನೇ ತಂದೆಯು. ತಾಯಿಯು ಕೇವಲ ಗರ್ಭವನ್ನು ಧರಿಸುವ ಚರ್ಮಕೋಶವಾಗಿರುವಳು. ತಂದೆಯ ಜಾತಿ, ಕುಲ, ಗೋತ್ರಗಳೇ ಮಗನಿಗೆ ಪ್ರಾಪ್ತವಾಗುವವು. ನೀನು ಶಕುಂತಲೆಯನ್ನು ನಿರಾಕರಿಸಬೇಡ. ನಿನ್ನ ಮಗನನ್ನು ಸ್ವೀಕರಿಸಿ ರಕ್ಷಿಸು. ಈತನ ಭರಣವನ್ನು, ಅಂದರೆ ಪೋಷಣವನ್ನು ಮಾಡೆಂದು ನಾವು ಹೇಳುವದರಿಂದ, ನಿನ್ನ ಈ ಮಹಾತ್ಮನಾದ ಪುತ್ರನಿಗೆ ಇಂದಿನಿಂದ "ಭರತ"ನೆಂಬ ಹೆಸರು ಪ್ರಾಪ್ತವಾಗುವದು."

ಈ ಮೇರೆಗೆ ಆದ ಆಕಾಶಸ್ಥದೇವತೆಗಳ ಸ್ಪಷ್ಟವಾಣಿಯನ್ನು ಕೇಳಿ ರಾಜನಿಗೆ ಆನಂದವಾಯಿತು. ಆತನು ಪುರೋಹಿತನನ್ನೂ, ಅಮಾತ್ಯರನ್ನೂ ಕುರಿತು—"ನೀವೆಲ್ಲರೂ ಈ ದೇವವಾಣಿಯನ್ನು ಕೇಳಿದಿರಷ್ಟೆ? ಶಕುಂತಲೆಯ ಮಾತು ಅಕ್ಷರಶಃ ನಿಜವಿದ್ದರೂ, ನಿಮಗೆ ಸಂಶಯುಂಟಾದೀತೆಂದು ನಾನು ಬೇಕಂತ ಸುಳ್ಳು ಆಡಿದೆನು. ಈಗ ನಿಮ್ಮ ಸಂಶಯಪರಿಹಾರವಾದದ್ದರಿಂದ ನಾನು ಹೆಂಡತಿಯನ್ನೂ, ಮಗನನ್ನೂ ಸ್ವೀಕರಿಸುವೆನು," ಎಂದು ನುಡಿದು, ಭರತನನ್ನು ಅಪ್ಪಿಕೊಂಡು ಆತನ ನೆತ್ತಿಯನ್ನು ಮೂಸಿ ನೋಡಿದನ. ಮತ್ತು ಶಕುಂತಲೆಯನ್ನು ಪ್ರೇಮಪೂರ್ವಕವಾಗಿ ಸತ್ಕರಿಸಿ ಕ್ಷಮೆಬೇಡಿ ಸಮಾಧಾನಪಡಿಸಿಭರತನಿಗೆ ಯೌವರಾಜ್ಯಾಭಿಷೇಕವನ್ನುಮಾಡಿದನು. ಮುಂದೆ ಭರತನು ಎಷ್ಟೋ ಅರಸರನ್ನು ಗೆದ್ದು ಅವರನ್ನು ತನ್ನ ಮಾಂಡಲಿಕರನ್ನಾಗಿ ಮಾಡಿಕೊಂಡನು. ಈತನಿಂದಲೇ ಭಾರತಕುಲದ ಸ್ಥಾಪನೆಯಾಯಿತು. ಶ್ರೀಮಾನ್ ಕಣ್ವಋಷಿಗಳು ಆತನಿಂದ"ಗೋವಿತಸ" ಎಂಬ ಹೆಸರಿನ ಅಶ್ವಮೇಧಯಜ್ಞವನ್ನು ಯಥಾವಿಧಿಯಾಗಿ ಮಾಡಿಸಿದರು. ಈ ಯಜ್ಞದಲ್ಲಿ ದಕ್ಷಿಣೆಯನ್ನು ವಿಪುಲವಾಗಿ ಕೊಡಬೇಕಾಗುವದು. ಕಣ್ವರಿಗೇ ಸಹಸ್ರಕೋಟಿ ಶತದಕ್ಷಿಣೆಯು ಸಿಕ್ಕಿತು!

**೭೫, ೭೬ನೇ ಅಧ್ಯಾಯಗಳು — ಯಯಾತಿಯ ಆಖ್ಯಾನ**— ಜನಮೇಜಯನು ವೈಶಂಪಾಯನರನ್ನು ಕುರಿತು—"ಎಲೈ ಮಹರ್ಷೇ,

ನಮ್ಮ ವಂಶದಲ್ಲಿ ದುಷ್ಯಂತನಂತೆ ಪ್ರಸಿದ್ಧನಾದ ಇನ್ನೊಬ್ಬ ರಾಜನ ಚರಿತ್ರವನ್ನು ನನಗೆ ವಿಸ್ತಾರವಾಗಿಹೇಳಬೇಕು'' ಎಂದು ಕೇಳಲು, ವೈಶಂಪಾಯನರು—''ರಾಜಾ, ನಿನಗೆ ಯಯಾತಿಯ ಆಖ್ಯಾನವನ್ನು ಹೇಳುವೆನು ಕೇಳು ; ಆದರೆ ಆ ಆಖ್ಯಾನಕ್ಕೆ ಕಚನ ಆಖ್ಯಾನದ ಸಂಬಂಧವಿರುವದರಿಂದ, ಕಚೋಪಾಖ್ಯಾನವನ್ನು ನಿನಗೆ ಮೊದಲು ಹೇಳುತ್ತೇನೆ.

**ಕಚೋಪಾಖ್ಯಾನ** — ಚರಾಚರ ತ್ರೈಲೋಕ್ಯದ ಆಧಿಪತ್ಯವು ದೊರೆಯಬೇಕೆಂದು ದೇವತೆಗಳೂ, ದೈತ್ಯರೂ ಪರಸ್ಪರ ಕಾದತೊಡಗಿದರು. ''ಜಯಪ್ರಾಪಕ''ಯುದ್ಧದ ದೇವತೆಗಳ ಪೌರೋಹಿತ್ಯವು ಬೃಹಸ್ಪತ್ಯಾಚಾರ್ಯರಕಡೆಗೆ, ದೈತ್ಯರ ಪೌರೋಹಿತ್ಯವು ಶುಕ್ರಾಚಾರ್ಯರಕಡೆಗೆ ಇದ್ದವು ; ಆದ್ದರಿಂದ ಅವರಿಬ್ಬರು ಆಚಾರ್ಯರೂ ನಿತ್ಯಪ್ರತಿಸ್ಪರ್ಧಿಗಳಾದರು. ಶುಕ್ರಾಚಾರ್ಯರು ಸಂಜೀವನಿ ವಿದ್ಯೆಯನ್ನು ಬಲ್ಲವರಾದದ್ದರಿಂದ, ಯುದ್ಧದಲ್ಲಿ ಸತ್ತ ದೈತ್ಯರನ್ನು ಅವರು ತಮ್ಮ ವಿದ್ಯೆಯ ಬಲದಿಂದ ಬದುಕಿಸುತ್ತಿದ್ದರು ; ಆದರೆ ಆ ವಿದ್ಯೆಯು ಬೃಹಸ್ಪತ್ಯಾಚಾರ್ಯರಿಗೆ ಗೊತ್ತಿಲ್ಲದ್ದರಿಂದ ದೇವತೆಗಳು ಖಿನ್ನರಾದರು. ಆಗ ಅವರು ಗುರುಪುತ್ರನಾದ ಕಚನನ್ನು ಕುರಿತು—''ಗುರುಪುತ್ರಾ, ದೇವತೆಗಳಾದ ನಮ್ಮದೊಂದು ಕಾರ್ಯವನ್ನು ಮಾಡಬೇಕೆಂದು ನಿನ್ನನ್ನು ಪ್ರಾರ್ಥಿಸುತ್ತೇವೆ. ನೀನು ಶುಕ್ರಾಚಾರ್ಯರಬಳಿಯಲ್ಲಿ ಶಿಷ್ಯನಾಗಿ ನಿಂತು, ಅವರ ಸೇವೆಯಿಂದಲೂ, ಅವರ ಮಗಳಾದ ದೇವಯಾನಿಯ ಅನುವರ್ತನದಿಂದಲೂ ಅವರಿಬ್ಬರ ಮನಸ್ಸನ್ನು ಒಲಿಸಿಕೊಂಡು ಶುಕ್ರಾಚಾರ್ಯರಿಗೆ ಬರುತ್ತಿದ್ದ ಸಂಜೀವನೀ ವಿದ್ಯೆಯನ್ನು ಸಂಪಾದಿಸು. ಮುಖ್ಯವಾಗಿ ದೇವಯಾನಿಯ ಮನಸ್ಸನ್ನು ಒಲಿಸಿಕೊಂಡರೆ, ನಿನ್ನ ಕಾರ್ಯವು ನಿಶ್ಚಯವಾಗಿ ಆಗುವದು. ಆಕೆಯ ಮನಸ್ಸನ್ನು ಪ್ರಸನ್ನವಾಗಿ ಮಾಡುವದಕ್ಕಾಗಿ ತಕ್ಕ ಸುಸ್ವಭಾವ, ಸೌಂದರ್ಯ, ಮಾಧುರ್ಯ, ಮನೋನಿಗ್ರಹ, ಸದಾಚರಣ ಇವು ನಿನ್ನಲ್ಲಿರುವವು. ದೇವಸಮೂಹದಲ್ಲಿ ನಿನ್ನಂಥವರು ಬೇರೆ ಯಾರೂ ಇರುವದಿಲ್ಲ.

ಜನಮೇಜಯಾ, ದೇವತೆಗಳ ಈ ಮಾತಿಗೆ ಕಚನು ಒಪ್ಪಿಕೊಂಡು ಅವರನ್ನು ನಮಸ್ಕರಿಸಿ ಅವರ ಆಶೀರ್ವಾದವಪಡೆದು ಅವರ ಅಪ್ಪಣೆಯಿಂದ ವೃಷಪರ್ವದೈತ್ಯನ ರಾಜಧಾನಿಗೆ ಹೋಗಿ ಶುಕ್ರಾಚಾರ್ಯರ ಚರಣಗಳ

ಮೇಲೆ ಮಸ್ತಕವಿಟ್ಟು—"ಭಗವನ್, ನಾನು ಭಗವಾನ್ "ಅಂಗಿರಸ" ಪುತ್ರನಾದ ಬೃಹಸ್ಪತಿಯ ಮಗನು. ನನ್ನ ಹೆಸರು ಕಚ. ನಿಮ್ಮಲ್ಲಿ ಬ್ರಹ್ಮಚರ್ಯದಿಂದ ಸಹಸ್ರವರ್ಷವಿದ್ದು ವಿದ್ಯಾಭ್ಯಾಸಮಾಡುವದಕ್ಕಾಗಿ ಬಂದಿದ್ದೇನೆ; ಆದ್ದರಿಂದ ನನ್ನನ್ನು ಶಿಷ್ಯನಾಗಿ ಪರಿಗ್ರಹಿಸಬೇಕು" ಎಂದು ಪ್ರಾರ್ಥಿಸಿದನು. ಅದಕ್ಕೆ ಶುಕ್ರಾಚಾರ್ಯರು—"ಎಲೈ ಬೃಹಸ್ಪತಿ ಪುತ್ರಾ ಕಚಾ, ನಿನಗೆ ಸ್ವಾಗತವಿರಲಿ. ನಿನ್ನ ಪ್ರಾರ್ಥನೆಯನ್ನು ಮನ್ನಿಸಿ, ಅತಿಥಿಯೂ, ಗುರುಪುತ್ರನೂ ಆದ ನಿನ್ನನ್ನು ಆದರಿಸಿ ಆತಿಥ್ಯ ಮಾಡುವೆನು. ನನ್ನ ಈ ಕೃತಿಯಿಂದ ಬೃಹಸ್ಪತಿಯು ತುಷ್ಟನಾಗಲಿ. ಇನ್ನು ನಿನಗೆ ಶಿಷ್ಯಯೋಗ್ಯವಾದ ಬ್ರಹ್ಮಚರ್ಯದ ದೀಕ್ಷೆಯನ್ನು ಕೊಡುವೆನು" ಎಂದು ಹೇಳಿ, ಅವರು ಕಚನಿಗೆ ಸ್ವತಃ ಬ್ರಹ್ಮಚರ್ಯದೀಕ್ಷೆಯನ್ನು ಕೊಟ್ಟರು ಕಚನು. ಯಾವಕಾಲದಲ್ಲಿ ಯಾವಕೆಲಸಮಾಡಬೇಕೆಂಬದನ್ನು ತಿಳಿದುಕೊಂಡು, ಬ್ರಹ್ಮಚರ್ಯವ್ರತವನ್ನು ಪಾಲಿಸುತ್ತಾ, ಗುರುಸೇವೆಯನ್ನೂ, ಗುರುಪುತ್ರಿ ದೇವಯಾನಿಯ ಸೇವೆಯನ್ನೂ ಮಾಡತೊಡಗಿದನು ಆ ತರುಣನಾದ ಕಚನು, ಅದೇ ತಾರುಣ್ಯವು ಪ್ರಾಪ್ತವಾಗುತ್ತಿರುವ ದೇವಯಾನಿಯ ಮನೋರಂಜನಕ್ಕಾಗಿ ಯಾವಾಗ ವಾದ್ಯಗಳನ್ನು ಬಾರಿಸುವನು, ಯಾವಾಗ ಕುಣಿಯುವನು. ಅದರಂತೆ ಹೂ-ಹಣ್ಣುಗಳನ್ನು ತಂದುಕೊಟ್ಟು, ಆಕೆಯು ಹೇಳಿದ ಕೆಲಸಗಳನ್ನು ಮಾಡಿ, ಆ ತರುಣನಾದ ಆದರೆ ವಿಕಾರರಹಿತನಾದ ಕಚನು ತನ್ನ ಶೀಲದ ವಿಷಯವಾಗಿ ದೇವಯಾನಿಯ ಉತ್ತಮ ಅಭಿಪ್ರಾಯವನ್ನು ಸಂಪಾದಿಸಿದನು! ದೇವಯಾನಿಯಾದರೂ ಕಚನ ಮನಸ್ಸನ್ನು ಪ್ರಸನ್ನಮಾಡುವದಕ್ಕಾಗಿ ಯಾರೂ ಇಲ್ಲದಾಗ ಹಾಡುವಳು, ಹಲವುಬಗೆಯ ಮನೋಹರವಾದ ಆಟಗಳನ್ನು ಆಡುವಳು. ಈ ಮೇರೆಗೆ ಕಚನು ವ್ರತವನ್ನು ಆಚರಿಸುತ್ತಿರುವಾಗ ಐದುನೂರು ವರ್ಷಗಳು ಕ್ರಮಿಸಿದವು.

ಹೀಗಿರುವಾಗ ಅಲ್ಲಿಯ ರಾಕ್ಷಸರಿಗೆ ಕಚನ ವಿಷಯವಾಗಿ ವೈಷಮ್ಯವುಂಟಾಯಿತು. ಬೃಹಸ್ಪತಿಯಮೇಲೆ ಅವರ ದ್ವೇಷವು ಬಹಳ. ಬೃಹಸ್ಪತಿಯ ಮಗನಾದ ಕಚನು ತಮ್ಮ ಗುರುಗಳಾದ ಶುಕ್ರಾಚಾರ್ಯರಲ್ಲಿಯ ಸಂಜೀವನೀ ವಿದ್ಯೆಯನ್ನು ಕಲಿತುಕೊಂಡು ಹೋಗುವನೆಂಬ

ಭಯವು ಅವರಲ್ಲಿ ಉತ್ಪನ್ನವಾಗಿತ್ತು. ಹೀಗಿರುವಾಗ ಒಂದುದಿನ ಕಚನು ಒಬ್ಬನೇ ಅಡವಿಯಲ್ಲಿ ಆಕಳು ಕಾಯುತ್ತಿರುವಾಗ, ರಾಕ್ಷಸರ ಆ ಕ್ರೋಧ-ಭಯಗಳು ಒಟ್ಟುಗೂಡಲು, ಅವರು ಕ್ರೋಧಾವೇಶದಿಂದ ಕಚನನ್ನು ಕಡಿದು ಚೂರುಚೂರುಮಾಡಿ, ಆ ಚೂರುಗಳನ್ನು ತೋಳಗಳಿಗೆ ತಿನಿಸಿದರು. ಇತ್ತ ಹೊತ್ತು ಮುಣುಗಿ ಕತ್ತಲಾದರೂ ಕಚನು ಬಾರದ್ದನ್ನು ನೋಡಿ ದೇವಯಾನಿಯು ಅಸಮಾಧಾನದಿಂದ ತಂದೆಯಾದ ಶುಕ್ರಾಚಾರ್ಯರ ಬಳಿಗೆ ಹೋಗಿ — "ಅಪ್ಪಾ, ನಿಮ್ಮ ಹೋಮವಾಯಿತು; ಹೊತ್ತು ಮುಣುಗಿತು; ಆಕಳುಗಳೂ ಬಂದವು; ಆದರೆ ಕಚನು ಮಾತ್ರ ಬರಲಿಲ್ಲ; ಆದ್ದರಿಂದ ಆತನನ್ನು ಯಾರಾದರೂ ದುಷ್ಟರು ಕೊಂದಿರಬಹುದು; ಅಥವಾ ಆತನು ಏನಾದರೂ ಆಗಿ ಸತ್ತಿರಬಹುದು; ಆದರೆ ಅಪ್ಪಾ, ಕಚನಿಲ್ಲದೆ ನಾನು ಒಂದು ಗಳಿಗೆಯಾದರೂ ಬದುಕಿ ಇರಲಾರೆನು, ಆತನನ್ನು ಕರತರಬೇಕು" ಎಂದು ಪ್ರಾರ್ಥಿಸಿದಳು. ಆಗ ಶುಕ್ರಾಚಾರ್ಯರು ಸಂಜೀವನೀ ವಿದ್ಯೆಯ ಪ್ರಯೋಗಮಾಡಿ ಕಚನನ್ನು ಕರೆದರು. ಆಗ ಕಚನು ತೋಳಗಳ ಹೊಟ್ಟೆಗಳನ್ನು ಒಡೆದು ಹೊರಬಿದ್ದು, ಆ ತಂದೆ-ಮಕ್ಕಳ ಮುಂದೆ ಬಂದು ನಿಂತುಕೊಂಡನು! ಆಗ ದೇವಯಾನಿಯು—"ಕಚಾ, ಇಷ್ಟು ಹೊತ್ತು ಯಾಕಾಯಿತು?" ಎಂದು ಕೇಳಲು, ಕಚನು —"ನಾನು ಆಲದಮರವನ್ನು ಹತ್ತಿ ಕುಳಿತು ಆಕಳು ಕಾಯುತ್ತಿರುವಾಗ ರಾಕ್ಷಸರು ನನ್ನನ್ನು ಕೊಂದರು; ಆದರೆ ನಿನ್ನ ತಂದೆಯ ಮಂತ್ರಪ್ರಭಾವದಿಂದ ನಾನು ಬದುಕಿದೆನು," ಎಂದು ಹೇಳಿ, ಆಕೆಯನ್ನು ಅಭಿನಂದಿಸಿದನು. ಮುಂದೆ ಒಂದು ದಿನ ದೇವಯಾನಿಯು ಹೇಳಿಕೆಯಂತೆ ಕಚನು ಹೂಗಳನ್ನು ತರಲಿಕ್ಕೆ ಹೋದಾಗ, ರಾಕ್ಷಸರು ಕಚನನ್ನು ಪುನಃ ಕೊಂದು ಚೂರುಚೂರುಮಾಡಿ, ಆ ಚೂರುಗಳನ್ನು ಸಮುದ್ರದಲ್ಲಿ ಚೆಲ್ಲಿಕೊಟ್ಟುಬಿಟ್ಟರು. ಆಗೂ ಮಗಳ ಹೇಳಿಕೆಯಂತೆ ಶುಕ್ರಾಚಾರ್ಯರು ಕಚನನ್ನು ಬದುಕಿಸಿ ಕರತಲು, ಕಚನು ಯಾವತ್ತು ವೃತ್ತಾಂತವನ್ನು ಹೇಳಿದನು. ಮೂರನೆಯುಸಾರೆಯಂತು ರಾಕ್ಷಸರು ಕಚನನ್ನು ಕೊಂದು ಸುಟ್ಟು ಬೂದಿಮಾಡಿ, ಆ ಬೂದಿಯನ್ನು ಮದ್ಯದಲ್ಲಿ ಕೂಡಿಸಿ ಅದನ್ನು ಶುಕ್ರಾಚಾರ್ಯರಿಂದ ಕುಡಿಸಿಬಿಟ್ಟರು. ಆಗ ಮಗಳು ಕಚನ ಸಲುವಾಗಿ ಪ್ರಾಣಕೊಡಲು ಸಿದ್ಧಳಾಗಲು, ಶುಕ್ರಾಚಾರ್ಯರು—

ಶುಕ್ರಾಚಾರ್ಯ—ದೇವಯಾನೀ, ಸತ್ತ ಕಚನನ್ನು ನಾನು ಎರಡು ಸಾರೆ ಬದುಕಿಸಿದೆನು; ಆದರೆ ಆತನು ಪುನಃ ಸತ್ತಿರುವನು, ಅದಕ್ಕೆ ನಾನೇನುಮಾಡಲಿ? ನೀನು ಹೀಗೆ ಸಾಮಾನ್ಯ ಸ್ತ್ರೀಯಂತೆ ಅಳಬಾರದು. ಯಾವತ್ತು ಜಗತ್ತು ನನ್ನ ಪ್ರಭಾವದಿಂದ ಮೂರೂ ಸಂಧ್ಯಾಕಾಲಗಳಲ್ಲಿ ನಿನ್ನನ್ನು ನಮಸ್ಕರಿಸುತ್ತಿರುವದು! ಇಂಥ ನೀನು ಅಳುವರೆ? ಆದರೆ ಆ ಬೃಹಸ್ಪತಿ ಪುತ್ರ ಕಚನನ್ನು ಜೀವದಿಂದಿಡುವದು ಅಶಕ್ಯವಾಗಿರುವದು.

ದೇವಯಾನಿ—ಅಪ್ಪಾ, ನನ್ನ ಕಚನ್-ಬ್ರಹ್ಮಚಾರಿಯು, ನಿಜವಾದ ತಪಸ್ವಿಯು, ಸೇವಾತತ್ಪರನು ಇರುವನು. ಇಂಥ ಕಚನು ಬಾರದೆ ನಾನು ಪ್ರಾಣವಿಡುವದಿಲ್ಲ!

ಜನಮೇಜಯಾ, ಮಗಳ ಈಮಾತುಗಳನ್ನು ಕೇಳಿ ಶುಕ್ರಾಚಾರ್ಯರು ದುಃಖಿತರಾಗಿ ದೈತ್ಯರನ್ನು ಕರೆಸಿ ಅವರನ್ನು ಕುರಿತು—"ಎಲೈ ದುಷ್ಟತಾಪು ಸಿಗಳಿರಾ, ನನ್ನ ಬಳಿಯಲ್ಲಿ ವಿದ್ಯಾಭ್ಯಾಸಕ್ಕಾಗಿ ಬಂದಿರುವ ಕಚಬ್ರಾಹ್ಮಣನನ್ನು ಕೊಂದು ನನ್ನನ್ನು ಅಬ್ರಾಹ್ಮಣನಾಗಮಾಡಲು ಯತ್ನಿಸುವಿರಾ? ಮೂರ್ಖರಿರಾ, ನಿಮ್ಮ ನಾಶಕಾಲವುಬಂದಗಿತು. ಬ್ರಹ್ಮಹತ್ಯವು ಪ್ರತ್ಯಕ್ಷಇಂದ್ರನ ನಾಶಮಾಡಲಿಕ್ಕೆ ತಪ್ಪುವದಿಲ್ಲ; ಅಂದಬಳಿಕ ನಿಮ್ಮಂಥವರ ಕಥೆಯೇನು?" ಎಂದು ತಿರಸ್ಕರಿಸಿ—"ಬಾಳಾ, ಕಚಾ," ಎಂದು ಕರೆದರು. ಆಗ ಆಚಾರ್ಯರ ವಿದ್ಯಾಪ್ರಭಾವದಿಂದ ಆಚಾರ್ಯರ ಹೊಟ್ಟೆಯಲ್ಲಿ ಬದುಕಿದ ಕಚನು ಹೊಟ್ಟೆಯಲ್ಲಿಯೇ ಮಾತಾಡತೊಡಗಿದನು. ಆಗ ಶುಕ್ರಾಚಾರ್ಯರು—"ಎಲಾ, ನೀನು ನನ್ನ ಹೊಟ್ಟೆಯಲ್ಲಿ ಹೇಗೆ ಬಂದೆ?" ಎಂದು ಕೇಳಲು, ಕಚನು—"ಭಗವನ್, ತಮ್ಮ ಅನುಗ್ರಹದಿಂದಲೇ ನನ್ನ ಸ್ಮರಣ ಶಕ್ತಿಯು ನಷ್ಟವಾಗಿರುವದಿಲ್ಲ. ಮಹಾರಾಜ, ತಾವು ನನ್ನನ್ನು ಹೊರಗೆ ಕರೆಯಬಾರದು; ಯಾಕಂದರೆ, ನಾನು ನಿಮ್ಮ ಹೊಟ್ಟೆಯನ್ನು ಒಡೆದು ಹೊರಗೆ ಬರಬೇಕಾಗುವದರಿಂದ ಗುರುಹತ್ಯೆಯ ಮೂಲಕ ನನ್ನ ತಪೋಹಾನಿಯಾದೀತು. ಅದಕ್ಕಿಂತ ಇಲ್ಲಿ ನನಗಾಗುತ್ತಿರುವ ದುಃಖಗಳನ್ನು ನಾನು ಸುಖದಿಂದ ಸಹನಮಾಡುವೆನು. ಭಗವನ್, ತಮ್ಮಮುಂದೆ ಬ್ರಾಹ್ಮೀ ಅಥವಾ ಆಸುರೀ ಮಾಯೆಗಳ ಪ್ರಭಾವವನ್ನು ತೋರಿಸಲಿಕ್ಕೆ ಯಾರಿಗೂ ಶಕ್ಯವಿಲ್ಲದ್ದರಿಂದ, ತಮ್ಮ ಹೊಟ್ಟೆಯನ್ನು ಒಡೆದು ಬರುವದು ನನಗೆ ಕಠಿಣವಾದೀತು. ತಾವು

ಜೀವದಿಂದಿದ್ದರೆ, ತಮ್ಮ ಸಾಮರ್ಥ್ಯದಿಂದಲೇ ಆ ಬ್ರಾಹ್ಮೀ-ಆಸುರೀ ಮಾಯೆಗಳನ್ನು ನಾನು ನಿಮ್ಮ ಮುಂದೆ ಅತಿಕ್ರಮಿಸಬಹುದು! ನೀವು ಸತ್ತರೆ ನನ್ನ, ತಮ್ಮ, ದೇವಯಾನಿಯ, ಹಾಗು ಯಾವತ್ತು ವಿಶ್ವದ ಅಹಿತವಾದೀತು; ಆದ್ದರಿಂದ ನನಗೆ ಗರ್ಭವಾಸವೇ ಇರಲಿ," ಎಂದು ಹೇಳಿ, ದೈತ್ಯರು ಮದ್ಯದಲ್ಲಿ ತನ್ನ ಬೂದಿಯು ಕೂಡಿಸಿ ಕುಡಿಸಿದ ಸಂಗತಿಯನ್ನು ಹೇಳಿದನು. ಆಗ ಶುಕ್ರಾಚಾರ್ಯರು ದೇವಯಾನಿಯನ್ನು ಕುರಿತು—

ಶುಕ್ರಾಚಾರ್ಯ— ದೇವಯಾನೀ, ನಾನು ಇನ್ನೇನು ಮಾಡಲಿ ಹೇಳು.? ನಿನಗೆ ಕಚನು ಬೇಕೋ, ನಾನು ಬೇಕೊ ?

ದೇವಯಾನಿ—ಅಪ್ಪಾ, ನನಗೆ ಇಬ್ಬರೂ ಬೇಕು. ನಿಮ್ಮಿಬ್ಬರಲ್ಲಿ ಒಬ್ಬರ ವಿರಹವೂ ನನ್ನನ್ನು ಅಗ್ನಿಯಂತೆ ಸುಟ್ಟುಬಿಡುವದು. ಅಪ್ಪಾ, ಕಚನಿಲ್ಲದಿದ್ದರೆ ನನ್ನ ಜನ್ಮದ ಸುಖವು ನಷ್ಟವಾಗುವದು; ನೀನಿಲ್ಲದಿದ್ದರೆ ನನ್ನ ಪ್ರಾಣಗಳು ಹೊರಟುಹೋಗುವವು.

ಶುಕ್ರಾಚಾರ್ಯ—ಎಲೈ ಗುರುಪುತ್ರಾ ಕಚಾ, ನನ್ನ ಮಗಳು ನಿನ್ನ ಕಲ್ಯಾಣದ ವಿಷಯವಾಗಿ ಇಷ್ಟು ತತ್ಪರಳಾಗಿರುವದರಿಂದ, ನೀನು ಯೋಗ್ಯ ಪುರುಷನಿರುವಲ್ಲಿ ಸಂಶಯವಿಲ್ಲ. ವಿದ್ಯಾದಾನಕ್ಕೆ ನೀನು ಯೋಗ್ಯನಾಗಿರುವೆಯೆಂಬುದು ಮೇಲೆಯೇ ಕಾಣುತ್ತದೆ. ನೀನು ಇಂದ್ರನಿದ್ದು ಕಚನ ವೇಷದಿಂದ ಬಂದಿರದಿದ್ದರೆ ನಿನಗೆ ಸಂಜೀವನೀ ವಿದ್ಯೆವನ್ನು ಅರ್ಪಿಸುವೆನು. ಬ್ರಾಹ್ಮಣನಲ್ಲದೆ ಬೇರೆ ಯಾವನೂ ನನ್ನ ಹೊಟ್ಟೆಯೊಳಗಿಂದ ಸಜೀವ ಹೊರಬೀಳಲಾರನು; ಅವನು ಅಲ್ಲಿಯೇ ಸತ್ತುಹೋಗುತ್ತಿದ್ದನು. ನೀನು ಬ್ರಾಹ್ಮಣನು, ಬ್ರಹ್ಮಹತ್ಯೆ ಮಾಡುವದು ನನ್ನ ಶೀಲವಲ್ಲ. ನನ್ನ ಹೊಟ್ಟೆಯಲ್ಲಿದ್ದದ್ದರಿಂದ ನೀನು ನನ್ನ ಮಗನಾದೆ; ಆದ್ದರಿಂದ ನೀನು ನನ್ನ ಹೊಟ್ಟೆಯನ್ನು ಒಡೆದು ಹೊರಗೆ ಬಂದಬಳಿಕ, ಕೃತಜ್ಞತೆಯಿಂದ ನನ್ನ ಮೇಲೆ ಸಂಜೀವನೀ ಮಂತ್ರವನ್ನು ಪ್ರಯೋಗಿಸಿ ನನಗೆ ಪುನರ್ಜನ್ಮ ಕೊಡು.

ಜನಮೇಜಯಾ, ಬಳಿಕ ಕಚನು ಗುರುಗಳ ಹೊಟ್ಟೆಯನ್ನು ಒಡೆದು ಹೊರಬಿದ್ದು ಪುನಃ ತನ್ನ ಮಂತ್ರಸಾಮರ್ಥ್ಯದಿಂದ ಅವರನ್ನು ಬದುಕಿಸಿ ಅವರನ್ನು ಕುರಿತು—"ಭಗವನ್, ನನಗೆ ಬಾರದೆಯಿದ್ದ ಸಂಜೀವನೀ ವಿದ್ಯೆ

ಯನ್ನು ನನಗೆ ಕೊಟ್ಟು ನನ್ನ ಮೇಲೆ ಅನಂತ ಉಪಕಾರ ಮಾಡಿರುವಿರಿ. ನನ್ನ ತಾಯಿತಂದೆಗಳಿಗೆ ನಾನು ಕೊಡುತ್ತಿರುವ ಮಾನಕ್ಕೆ ತಾವು ಪಾತ್ರರಾಗಿರುವಿರಿ. ನಾನು ತಮಗೆ ಎಂದೂ ಕೃತಘ್ನನಾಗಲಾರೆನು; ತಮ್ಮನ್ನು ಎಂದೂ ದ್ವೇಷಿಸಲಾರೆನು. ಸರ್ವವಿದ್ಯಾಪಾರಾಂಗತನೂ, ಉತ್ತಮೋತ್ತಮವಾದ ಸತ್ಯವಿದ್ಯೆಯ ದಾನಮಾಡುವವನೂ ಆದ ಪೂಜ್ಯಗುರುವನ್ನು ಮನ್ನಿಸದ ಲಬ್ಧವಿದ್ಯಾಪಂಡಿತನ ವಿದ್ಯೆಯು ನಿಷ್ಫಲವಾಗಿ, ಆ ಮೂರ್ಖನು ಪಾಪಿಗಳ ಲೋಕವನ್ನು ಹೊಂದುವನು.''

ಜನಮೇಜಯಾ, ಸರ್ವಜ್ಞರಾದರೂ ಸುರಾಪಾನದಿಂದ ಹೇಗೆ ಮೋಸಹೋಗಿ ಅನರ್ಥವುಂಟಾಗುವದೆಂಬದನ್ನು ಶುಕ್ರಾಚಾರ್ಯರು ತಮ್ಮ ಉದಾಹರಣದಿಂದಲೇ ಮನಸ್ಸಿನಲ್ಲಿ ತಂದು, ಅಸಮಾಧಾನಪಟ್ಟರು ; ಮತ್ತು ಸುರಾದೇವಿಯಮೇಲೆ ಸಿಟ್ಟು ಬೆಂಕಿಯಾದರು. ಶುಕ್ರಾಚಾರ್ಯರು ಬ್ರಾಹ್ಮಣರು, ಬ್ರಾಹ್ಮಣರ ಹಿತೈಷಿಗಳು ; ಆದ್ದರಿಂದ ತಮ್ಮ ವ್ಯಸನವು ನಷ್ಟವಾಗಬೇಕೆಂತಲೂ, ಯಾವ ಬ್ರಾಹ್ಮಣನೂ ವ್ಯಸನಾಧೀನನಾಗಬಾರದೆಂತಲೂ ಸಿಟ್ಟಿನ ಭರದಲ್ಲಿ ಸುರಾದೇವಿಗೆ ಶಾಪವನ್ನು ಕೊಟ್ಟರು. ''ಇಂದಿನಿಂದ ಯಾವ ಬ್ರಾಹ್ಮಣನು ವ್ಯಸನಿಗಳಮಾತು ಮೀರಲಾರದೆ, ಅಥವಾ ಸ್ವೇಚ್ಛೆಯಿಂದ, ಸುರಾಪಾನಮಾಡುವನೋ, ಅವನು ಧರ್ಮಭ್ರಷ್ಟನಾಗಿ ಬ್ರಹ್ಮಹತ್ಯೆಯ ಪಾಪಕ್ಕೆ ಗುರಿಯಾಗುವನು ; ಮತ್ತು ಈ ಲೋಕದಲ್ಲಿ ಅವನಿಗೆ ಅಪ್ರತಿಷ್ಠೆಯುಂಟಾಗಿ ಪರಲೋಕದಲ್ಲಿ ಆತನು ಅನಂತಯಾತನೆಗಳನ್ನು ಭೋಗಿಸಬೇಕಾಗುವದು. ಈ ಮರ್ಯಾದೆಯನ್ನು ನಾನು ಇಂದಿನಿಂದ ಸ್ಥಾಪಿಸುವೆನು. ಗುರುಗಳ ಅಪ್ಪಣೆಯನ್ನು ಮೀರದಿರುವ ಸಾಧು-ಸಜ್ಜನರೂ, ದೇವತೆಗಳೂ, ಯಾವತ್ತು ಜನರೂ ಈ ಮರ್ಯಾದೆಯನ್ನು ಲಕ್ಷದಲ್ಲಿಡತಕ್ಕದ್ದು.''

ಬಳಿಕ ಶುಕ್ರಾಚಾರ್ಯರು ಅಲ್ಲಿಯೇ ನಿಂತಿದ್ದ, ಹಾಗು ದೈವದುರ್ವಿಪಾಕದಿಂದ ಮೂರ್ಖರಾಗಿದ್ದ ದೈತ್ಯರಕಡೆಗೆ ತಿರುಗಿ—''ಎಲೈ ಬಾಲಿಶರಾದ ದೈತ್ಯರೇ, ನಿಮ್ಮ ಮೂರ್ಖತನದಿಂದಲೇ ಕಚನಿಗೆ ಸಂಜೀವನೀ ವಿದ್ಯೆಯು ಪ್ರಾಪ್ತವಾಯಿತು. ಮೂರ್ಖರಿರಾ, ವಿದ್ಯೆಯನ್ನು ಸಂಪಾದಿಸಿರುವ ಈ ಕಚಬ್ರಾಹ್ಮಣನು ಸಾಕ್ಷಾತ್ ವೇದೋನಾರಯಣನಾಗಿರು

ವನು. ಈತನ ಸಾಮರ್ಥ್ಯವಾದರೂ ಈಗ ನನ್ನ ಸಾಮರ್ಥ್ಯಕ್ಕೆ ಸಮಾನವಾಗಿರುವದು. ಈ ಮಹಾತ್ಮನು ಉದಾರನಿರುವನು, ಇನ್ನೂ ಐದುನೂರು ವರ್ಷ ಈತನು ನನ್ನಬಳಿಯಲ್ಲಿರುವನು. ಇನ್ನು ನಿಮ್ಮಿಂದ ಈತನಿಗೆ ಸ್ವಲ್ಪವೂ ಪೀಡೆಯಾಗಬಾರದು.'' ಎಂದು ನುಡಿದು ಸುಮ್ಮನಾದರು. ಮೂರ್ಖರೂ, ತಾಮಸಿಗಳೂ ಆದ ಶತ್ರುಗಳು ಮಾಡಿದ ಅಪಕಾರವು ಸಜ್ಜನರಿಗೆ ಉಪಕಾರವೇ ಹೇಗಾಗುವದೆಂಬದನ್ನರಿತು ದೈತ್ಯರು ಆಶ್ಚರ್ಯಪಟ್ಟು ತಮ್ಮತಮ್ಮ ಮನೆಗೆ ಹೊರಟುಹೋದರು.

**೭೭ನೇ ಅಧ್ಯಾಯ — ಕಚ-ದೇವಯಾನೀ ಸಂವಾದ** —ಜನಮೇಜಯಾ, ಬಳಿಕ ಕಚನು ಒಂದುಸಾವಿರ ವರ್ಷ ಗುರುಕುಲವಾಸಮಾಡಿ ಗುರುಗಳ ಅಪ್ಪಣೆಯಿಂದ ದೇವಲೋಕಕ್ಕೆ ಹೊರಟನು. ಆಗ ದೇವಯಾನಿಯು—

ದೇವಯಾನಿ—ಎಲೈ ಅಂಗಿರಸನ ಪೌತ್ರನೇ, ನನ್ನ ತಂದೆಯು ನಿನ್ನ ಅಜ್ಜನಾದ ಅಂಗಿರಸಋಷಿಯನ್ನು ಮನ್ನಿಸುವನು. ನಿನ್ನ ತಂದೆಯಾದ ಬೃಹಸ್ಪತಿಯುವರು ನನಗೆ ಪೂಜ್ಯರೂ, ಮಾನ್ಯರೂ ಇರುವರು. ನೀನು ಕುಲ-ಶೀಲಗಳಿಂದಲೂ, ಸಾತ್ವಿಕಾಚರಣೆಯಿಂದಲೂ, ವಿದ್ಯಾ, ತಪಸ್ಸು, ಮನೋನಿಗ್ರಹ ಇವುಗಳ ಯೋಗದಿಂದಲೂ ಜಗದ್ರತ್ನವಾಗಿರುವೆ. ನಿನ್ನ ವಿದ್ಯಾಭ್ಯಾಸಂಗವು ಪೂರ್ಣವಾಗಿರುವದರಿಂದ, ನಿನ್ನ ಬ್ರಹ್ಮಚರ್ಯವನ್ನು ಮುಗಿಸಿ ನನ್ನ ಪಾಣಿಗ್ರಹಣಮಾಡು ; ಅಂದರೆ ವಿಧಿಮಂತ್ರ-ಪುರಸ್ಸರವಾಗಿ ನನ್ನ ತಂದೆಯ ಅನುಮತಿಯಿಂದ ನಿನ್ನೊಡನೆ ನನ್ನ ಲಗ್ನವಾಗುವದು.

ಕಚ—ದೇವಯಾನೀ, ನಿನ್ನತಂದೆಯುವರು ನಿನ್ನಂತೆ ನನಗೂ ಪೂಜ್ಯರೂ, ನನಗೆ ತಂದೆಯುಸಮಾನರೂ ಆಗಿರುವರು. ನೀನಂತು ನನಗೆ ಗುರುಗಳಿಗಿಂತಲೂ ಪೂಜ್ಯಳಾಗಿರುವೆ. ಧರ್ಮದೃಷ್ಟಿಯಿಂದ ನೋಡಿದರೆ, ನೀನು ನನಗೆ ಗುರುಭಗಿನಿಯಾದೆ ; ಆದ್ದರಿಂದ ನೀನು ಹೀಗೆ ಮಾತಾಡುವದು ಯೋಗ್ಯವಲ್ಲ

ದೇವಯಾನಿ—ಕಚಾ, ನೀನು ಬೃಹಸ್ಪತಿಯುಮಗನು, ನನ್ನ ತಂದೆಯುಮಗನಲ್ಲ ; ಆದ್ದರಿಂದ ನಾನು ನಿನ್ನನ್ನು ಪತಿಯಾಗಿ ವರಿಸಬೇಕೆಂದಿ

ರುವೆನು. ನಾನು ನಿನ್ನಮೇಲೆ ಮಾಡಿದ ಉಪಕಾರಗಳನ್ನು ಸ್ಮರಿಸು. ಸುಂದರಾ, ನಿನ್ನೊಡನೆ ನಾನು ಸ್ನೇಹದಿಂದ ನಡೆದುಕೊಂಡದ್ದನ್ನು ಮರೆಯಬೇಡ. ಎಲೈ ಧರ್ಮಜ್ಞನೇ, ನಿನ್ನಲ್ಲಿ ಭಕ್ತಿಯಿಟ್ಟಿರುವ, ಹಾಗು ಶುದ್ಧಾಚರಣೆಯು ನಾನು, ಹೀಗೆ ನಿನ್ನನ್ನು ಪ್ರಾರ್ಥಿಸುತ್ತಿರಲು, ನಿನ್ನಂಥ ದಯಾಳುವೂ, ಗುಣಜ್ಞನೂ ಆದ ಪುರುಷನು ತಿರಸ್ಕರಿಸುವದು ಯೋಗ್ಯ ವಲ್ಲ.

ಕಚ—ತಂಗೀ, ದೇವಯಾನೀ, ಎಲೈ ಮಂಗಲವ್ರತಧಾರಿಣಿಯೇ, ಯಾರೂ ಮಾಡದೆಯಿದ್ದ ಕೆಲಸವನ್ನು ಮಾಡಲಿಕ್ಕೆ ನನಗೆ ಯಾಕೆ ಹೇಳುವೆ? ನೀನು ವಾಸಿಸಿದ ಶುಕ್ರಾಚಾರ್ಯರ ಗರ್ಭದಲ್ಲಿಯೇ ನಾನೂ ವಾಸಿಸಿರುವದರಿಂದ, ನೀನು ನನಗೆ ತಂಗಿಯಾಗಲಿಲ್ಲವೆ? ಆದ್ದರಿಂದ ಹೀಗೆ ಧರ್ಮವಿರುದ್ಧ ಮಾತುಗಳನ್ನು ಆಡಬೇಡ. ಈ ದಿನನು ನಾನು ನಿಮ್ಮ ಮನೆಯಲ್ಲಿ ಶಿಷ್ಯವೃತ್ತಿಯಿಂದ ಸುಖವಾಗಿ ವಾಸಿಸಿರುವೆನು. ನೀವಿಬ್ಬರು ನನ್ನಮೇಲೆ ಪ್ರೀತಿಮಾಡಿದ್ದು ಪರಮಸೌಭಾಗ್ಯವು. ನಿನ್ನಮಾತಿಗೆ ನಾನು ಸಿಟ್ಟಾಗುವದಿಲ್ಲ, ನನ್ನ ದುರ್ಭಾಗ್ಯವನ್ನು ಮಾತ್ರ ದೂಷಿಸುವೆನು. ನೀನು ನನ್ನನ್ನು ಆಶೀರ್ವದಿಸು. ಇನ್ನು ನಾನು ಹೋಗಿಬರುತ್ತೇನೆ. ಕೆಲಕಾರಣಗಳಿಂದ ನಿನಗೆ ನನ್ನ ನೆನಪುಆದರೆ, ನನ್ನ ಈಗಿನ ನಡತೆಯನ್ನು ಧರ್ಮದೃಷ್ಟಿಯಿಂದ ವಿಚಾರಿಸಿ ಸಮಾಧಾನಮಾಡಿಕೊಳ್ಳೆಂದು ಬೇಡಿಕೊಳ್ಳುವೆನು.

ದೇವಯಾನಿ (ಸಿಟ್ಟಿನಿಂದ)—ಎಲಾ, ಕೃತಘ್ನಾ ಕಚಾ, ಧರ್ಮ-ಕಾಮಗಳನ್ನು ಸಾಧಿಸುವದಕ್ಕಾಗಿ ನಾನು ನಿನ್ನನ್ನು ಪ್ರಾರ್ಥಿಸುತ್ತಿರಲು, ನೀನು ನನ್ನನ್ನು ಧಿಕ್ಕರಿಸುವದರಿಂದ, ನನ್ನ ತಂದೆಯಲ್ಲಿ ಸಂಪಾದಿಸಿರುವ ವಿದ್ಯೆಯು ನಿನಗೆ ನಿಷ್ಫಲವಾಗಲಿ.

ಕಚ—ದೇವೀ, ನೀನು ಹೀಗೆ ಶಾಪಕೊಡುವದು ಯೋಗ್ಯವಲ್ಲ. ನೀನು ದೋಷಿಯೆಂದು ನಾನು ನಿನ್ನನ್ನು ತಿರಸ್ಕರಿಸಿಲ್ಲ, ತಂಗಿಯೆಂದು ತಿರಸ್ಕರಿಸಿರುವೆನು. ಮೇಲಾಗಿ ನನ್ನ ನಿನ್ನ ಲಗ್ನಕ್ಕೆ ನಿನ್ನ ತಂದೆಯ ಅನುಮತಿಯೂ ಇರುವದಿಲ್ಲ. ಗುರುಪುತ್ರಿಯಾದ ನಿನಗೆ ನಾನು ಪ್ರತಿಶಾಪವನ್ನು ಕೊಡುವದಿಲ್ಲ. ನಿನ್ನ ಶಾಪವು ಕಾಮವಿಕಾರಜನ್ಯವಾದ ಅಧರ್ಮ

ವೃತ್ತಿಯಿಂದ ಆದದ್ದು ; ಆದ್ದರಿಂದ ಯಾವಬ್ರಾಹ್ಮಣಪುತ್ರನೂ ನಿನ್ನ ಪಾಣಿಗ್ರಹಣಮಾಡಲಿಕ್ಕಿಲ್ಲ. ನಿನ್ನ ಶಾಪದಿಂದ ನನ್ನ ವಿದ್ಯೆಯು ಫಲಿಸಲಿಕ್ಕಿಲ್ಲ ಸರಿ! ಆದರೆ ನಾನು ಉಪದೇಶಿಸಿದವರಿಗೆ ಅದು ಫಲಿಸುವದಷ್ಟೆ? ಅಂದಬಳಿಕ ನನ್ನ ಕೆಲಸವಾಯಿತು.

**೭೮ನೇ ಅಧ್ಯಾಯ — ದೇವಯಾನೀ-ಶರ್ಮಿಷ್ಠೆಯರ ಕಲಹ:—** ಈ ಮೇರೆಗೆ ಕಚನು ವಿದ್ಯೆಯನ್ನು ಸಂಪಾದಿಸಿ ದೇವಲೋಕಕ್ಕೆಹೋಗಲು, ದೇವತೆಗಳಿಗೆ ಪರಮಾನಂದವಾಯಿತು. ಅವರು ಕಚನಿಂದ ಆ ವಿದ್ಯೆಯನ್ನು ಗ್ರಹಿಸಿ ಕೃತಾರ್ಥರಾದರು. ಆಮೇಲೆ ಯಾವತ್ತು ದೇವತೆಗಳು ಆಲೋಚಿಸಿ, ಇದು ದೈತ್ಯರೊಡನೆ ಯುದ್ಧಮಾಡಲು ತಕ್ಕ ಸಮಯವೆಂದು ತಿಳಿದು, ಯುದ್ಧಕ್ಕೆ ಹೊರಟರು. ಆಗ ಹಾದಿಯಲ್ಲಿ ಒಂದು ಮನೋಹರ ವನದೊಳಗೆ ಕೆಲ ಕುಮಾರಿಕೆಯರು ಜಲಕ್ರೀಡೆಯನ್ನು ಆಡುತ್ತಿದ್ದರು. ಅವರಲ್ಲಿ ಶುಕ್ರಪುತ್ರಿಯಾದ ದೇವಯಾನಿಯೂ, ವೃಷಪರ್ವದೈತ್ಯಪುತ್ರಿಯಾದ ಶರ್ಮಿಷ್ಠೆಯೂ ಇದ್ದರು. ಅದನ್ನುನೋಡಿ ಇಂದ್ರನು, ಶುಕ್ರನಿಗೂ-ದೈತ್ಯರಿಗೂ ಕಲಹವು ಉತ್ಪನ್ನವಾಗಲಿಕ್ಕೆ ಕಾರಣವಾಗಬೇಕೆಂದು ತಿಳಿದು, ತಾನು ವಾಯುರೂಪವನ್ನು ತಾಳಿ ಆ ಕುಮಾರಿಕೆಯರ ಎಲ್ಲ ಸೀರೆಗಳನ್ನು ಕಲಿಸಿಬಿಟ್ಟನು. ಮುಂದೆ ಸೀರೆಯುಟ್ಟುಕೊಳ್ಳುವ ಗದ್ದಲದಲ್ಲಿ ದೇವಯಾನಿ-ಶರ್ಮಿಷ್ಠೆಯರ ಸೀರೆಗಳು ಅದಲುಬದಲು ಆದವು. ತನ್ನ ಸೀರೆಯನ್ನು ಶರ್ಮಿಷ್ಠೆಯು ಉಟ್ಟುಕೊಂಡದ್ದಕ್ಕಾಗಿ ದೇವಯಾನಿಯು ಸಿಟ್ಟಾಗಲು, ಶರ್ಮಿಷ್ಠೆಯೂ ಸಿಟ್ಟಾದಳು. ಆಗ ಅವರಿಬ್ಬರಲ್ಲಿ ನಿಗ್ಗರದ ಜಗಳವಾಯಿತು.

ದೇವಯಾನಿ—ಎಲೈ ದೈತ್ಯಕನ್ಯೇ, ನನ್ನ ಸೀರೆಯನ್ನು ನೀನು ಯಾಕೆಉಟ್ಟುಕೊಂಡೆ? ಇದರಿಂದ ಎಂದೂ ನಿನ್ನ ಹಿತವಾಗಲಿಕ್ಕಿಲ್ಲ!

ಶರ್ಮಿಷ್ಠೆ—ದೇವಯಾನೀ, ನಿನ್ನ ತಿರುಕನಮಗಳ ಸಿಟ್ಟನ್ನು ಯಾರು ಕೇಳಬೇಕು? ನಾನು ರಾಜಪುತ್ರಿಯು. ನನ್ನ ತಂದೆಯು ಕುಳಿತಿರುವಾಗ, ಮಲಗಿರುವಾಗ ನಿನ್ನತಂದೆಯು ಕೈಜೋಡಿಸಿ ವಿನಯದಿಂದ ಆತನನ್ನು ಬೇಡಿಕೊಳ್ಳುತ್ತಿರುವನು. ಹೋಗು, ನೀನು ಸಿಟ್ಟಾದರೆ ಆದಿ; ಆದರಿಂದ ನನಗೇನಾಗಬೇಕಾಗಿದೆ?

ಜನಮೇಜಯಾ, ಈ ಮೇರೆಗೆ ಅವರು ವಾದಿಸುತ್ತಾ, ಒಬ್ಬರಸೀರೆಯನ್ನೊಬ್ಬರು ಕೊಸರುತ್ತಾ ಗುದ್ದಾಡುತ್ತಿರಲು, ದುಷ್ಟ ಶರ್ಮಿಷ್ಠೆಯು ದೇವಯಾನಿಯನ್ನು ಒಂದು ಹಾಳುಬಾವಿಯಲ್ಲಿ ನೂಕಿ, ಆಕೆಯು ಸತ್ತಳೆಂದು ತಿಳಿದು ಮನೆಗೆ ಹೊರಟುಹೋಗಿಬಿಟ್ಟಳು. ಇತ್ತ ಬೇಟೆಗಾಗಿ ಬಂದಿದ್ದ ನಹುಷಪುತ್ರನಾದ ಯಯಾತಿರಾಜನು ನೀರಡಿಸಿ ನೀರುಹುಡುಕುತ್ತ ಕರ್ಮಧರ್ಮಸಂಯೋಗದಿಂದ ಆ ದೇವಯಾನಿಯು ಬಿದ್ದಿದ್ದ ಬಾವಿಗೇ ಬಂದನು. ಆತನು ಬಾವಿಯಲ್ಲಿ ಹಣಿಕಿನೋಡಲು, ಅದರಲ್ಲಿ ನೀರು ಇದ್ದಿಲ್ಲ. ಸುಂದರಿಯಾದ ದೇವಯಾನಿಯು ಆತನ ಕಣ್ಣಿಗೆಬಿದ್ದಳು. ಆಗ ಆ ರಾಜನು–"ನೀನು ಯಾರಮ್ಮಾ," ಎಂದು ಕೇಳಲು, ದೇವಯಾನಿಯು– "ನಾನು ಶುಕ್ರಾಚಾರ್ಯರ ಮಗಳಾದ ದೇವಯಾನಿಯು, ನನ್ನ ತಂದೆಗೆ ನನ್ನ ಈ ಅವಸ್ಥೆಯು ಗೊತ್ತಾಗಿರುವದಿಲ್ಲ. ರಾಜಾ, ಸುಶೀಲನಾದ ನೀನು ನನಗೆ ಮಾನ್ಯವಾಗಿರುವೆ, ನನ್ನ ಈ ಬಲಗೈಯನ್ನು ಹಿಡಿದು ನನ್ನನ್ನು ಈ ದುಃಖದಿಂದ ಮುಕ್ತಮಾಡು," ಎಂದು ಹೇಳಲು, "ದೇವಯಾನಿಯು ಬ್ರಾಹ್ಮಣಪುತ್ರಿಯೆ"ಂದು ತಿಳಿದು, ಯಯಾತಿಯು ಆಕೆಯ ಕೈಯನ್ನು ಹಿಡಿದು ಮೇಲಕ್ಕೆ ಕರಕೊಂಡು, ಆಕೆಯ ಅನುಮತಿಯಿಂದ ತನ್ನ ಪಟ್ಟಣಕ್ಕೆ ಹೊರಟುಹೋದನು. ಅಷ್ಟರಲ್ಲಿ ಆಕೆಯನ್ನು ಹುಡುಕುತ್ತ ಘೂರ್ಣಿಕೆಯೆಂಬ ಆಕೆಯ ದಾಸಿಯು ಅಲ್ಲಿಗೆ ಬಂದು, ದೇವಯಾನಿಯ ಈ ಸ್ಥಿತಿಯನ್ನು ನೋಡಿ ದುಃಖಪಟ್ಟಳು. ಆಗ ದೇವಯಾನಿಯು ಘೂರ್ಣಿಕೆಗೆ–"ಘೂರ್ಣಿಕೇ, ಇನ್ನು ನಾನು ವೃಷಪರ್ವನ ಪಟ್ಟಣದಲ್ಲಿ ಕಾಲಿಡುವದಿಲ್ಲವೆಂದು ನನ್ನ ತಂದೆಗೆ ಹೇಳುಹೋಗು," ಎಂದು ಆಕೆಯನ್ನು ಕಳಿಸಿಕೊಟ್ಟಳು. ಅದನ್ನು ಕೇಳಿ ಶುಕ್ರಾಚಾರ್ಯರು ಮಗಳಬಳಿಗೆ ಬಂದು ಪ್ರೇಮಭರದಿಂದ ಆಕೆಯನ್ನು ಅಪ್ಪಿಕೊಂಡು–"ದೇವಯಾನೀ, ಪ[illegible]ಯಿಂದಾಗುವ ದುಃಖಕ್ಕೆ ತನ್ನ ಸ್ವಂತದ ಅಪರಾಧವೇ ಕಾರಣವಾಗಿರುತ್ತದೆ. ನಿನ್ನ ಪೂರ್ವಜನ್ಮದ ಪಾಪದ ಶೇಷದಿಂದ ನಿನಗೆ ಈ ದುಃಖವು ಒದಗಿರಬಹುದೆಂದು ನನಗೆ ತೋರುತ್ತದೆ."

ಈ ಮೇರೆಗೆ ತಂದೆಯಾಡಿದ ಮಾತುಗಳನ್ನು ಕೇಳಿ ದೇವಯಾನಿಯು–"ಅಪ್ಪಾ, ನನಗೆ ಪ್ರಾಯಶ್ಚಿತ್ತವಾದರೂ ಒದಗಿರಲಿ, ಏನು

ಬೇಕಾದಷ್ಟು ಆಗಿರಲಿ; ಆದರೆ ವೃಷಪರ್ವನ ಶರ್ಮಿಷ್ಠೆಯು ಆಡಿದ ಮಾತುಗಳನ್ನು ನೀವು ನೆಟ್ಟಗೆ ಕೇಳಿಕೊಳ್ಳಿರಿ. ಆ ಗರ್ವಿಷ್ಠ ಶರ್ಮಿಷ್ಠೆಯು ನನಗೆ--"ನೀನು ನಿತ್ಯಸ್ತುತಿಮಾಡಿ ಯಾಚನೆಮಾಡುವವನ ಮಗಳು, ನಿನ್ನ ತಂದೆಯು ಸ್ತುತಿಪಾಠಕನು; ನಾನು ಸ್ತುತ್ಯನೂ, ದಾನ ಕೊಡುವವನೂ ಆದವನ ಮಗಳು." ಎಂದು ನುಡಿದಳು. ಅಪ್ಪಾ, ಈ ಮಾತು ನಿಜವಿದ್ದರೆ, ನಿನ್ನ ಕ್ಷಮೆಬೇಡುವೆನೆಂದು ನಾನು ನನ್ನ ಆ ಸಖಿಗೆ ಹೇಳಿದ್ದೇನೆ; ಆದರೆ ಅಪ್ಪಾ, ಈ ಮಾತುನಿಜವೇ?" ಎಂದು ಕೇಳಲು, ಶುಕ್ರಾಚಾರ್ಯರು--"ದೇವಯಾನೀ, ನೀನು ಸ್ತುತಿ-ಯಾಚನಾ-ಪ್ರತಿಗ್ರಹಗಳನ್ನು ಮಾಡುವವನ ಮಗಳಲ್ಲ ಯಾವನು ಯಾರಸ್ತುತಿಯನ್ನೂ ಮಾಡದವನಿದ್ದಾನೋ ಅಂಥ ಯಾವನ ಸ್ತುತಿಯನ್ನು ಎಲ್ಲರೂ ಮಾಡುವರೋ, ಅಂಥವನ ಮಗಳು ನೀನು ಇರುತ್ತೀ! ಯಾರಕಲ್ಪನೆಗೂ ನಿಲುಕದ ನನ್ನ ಬ್ರಹ್ಮಸ್ವರೂಪದ ಈಶ್ವರೀಬಲವು, ವೃಷಪರ್ವ, ಇಂದ್ರ, ಯಯಾತಿ, ಇವರಿಗೆಮಾತ್ರ ಪೂರ್ಣಗೊತ್ತಿರುವದು. ಪೃಥ್ವಿಯಲ್ಲಿ ಹಾಗು ಸ್ವರ್ಗದಲ್ಲಿ ಇರುವ ವಸ್ತುಗಳಿಗೆಲ್ಲ ನಾನೇ ಅಧಿಪತಿಯಾಗಿರುವೆನೆಂದು ಸ್ವತಃ ಬ್ರಹ್ಮದೇವನು ಸಂತುಷ್ಟನಾಗಿ ನನಗೆ ಹೇಳಿರುವನು. ಪ್ರಜೆಗಳ ಹಿತಕ್ಕಾಗಿ ನಾನೇ ಮಳೆಗರೆಯುತ್ತಿದ್ದು, ಯಾವತ್ತೂ ಓಷಧಿಗಳ ಪೋಷಣವನ್ನೂ ನಾನೇ ಮಾಡುವೆನು," ಎಂದು ಹೇಳಿ, ದುಃಖಿತಳೂ, ಕ್ರೋಧಸಂತಪ್ತಳೂ ಆದ ಮಗಳನ್ನು ಶುಕ್ರಾಚಾರ್ಯರು ಸಮಾಧಾನ ಪಡಿಸಿದರು.

**೭೯, ೮೦ನೇ ಅಧ್ಯಾಯಗಳು—ದೇವಯಾನೀಕೋಪಶಾಂತಿ**–ಜನಮೇಜಯಾ, ಶುಕ್ರಾಚಾರ್ಯರು ಮತ್ತೆ ದೇವಯಾನಿಯನ್ನು ಕುರಿತು--"ದೇವಯಾನೀ, ಎರಡನೆಯವರು ಮಾಡಿದ ನಿಂದೆಯನ್ನು ಸಹಿಸುವವನು ಎಲ್ಲವನ್ನೂ ಗೆದ್ದನೆಂದು ತಿಳಿಯಬೇಕು. ಬಂದ ಸಿಟ್ಟನ್ನು ಕ್ಷಮೆಯ ಯೋಗದಿಂದ ಸಹಿಸುವವನನ್ನೇ ಜ್ಞಾನಿಗಳು "ನಿಗ್ರಹಿ' ಎಂದು ಕರೆಯುವರು ಸಣ್ಣಹುಡುಗರಿಗೆ ಒಳ್ಳೆಯ–ಕೆಡಕುಗಳ ಜ್ಞಾನವಿರದಿರುವದರಿಂದ, ಅವು ಜಗಳಾಡುವಂತೆ ತಿಳಿದವರು ಜಗಳಾಡಬಾರದು. ಅಜ್ಞಾನದಿಂದ ಶರ್ಮಿಷ್ಠೆಯು ಮಾಡಿದ ತಪ್ಪನ್ನು ಕ್ಷಮಿಸುವದೇ ಯೋಗ್ಯವು,"

ಅನ್ನಲು, ದೇವಯಾನಿಯು—"ಅಪ್ಪಾ, ನಾನು ಚಿಕ್ಕವಳಿದ್ದರೂ ಸಹನಶೀಲತೆಯ ಯೋಗ್ಯತೆಯನ್ನು ಅರಿತಿರುವೆನು ; ಆದರೆ ಮಹತ್ವಾಕಾಂಕ್ಷಿ ಪುರುಷನು ಅಮರ್ಯಾದೆಯಿಂದ ನಡೆಯುವ ಶಿಷ್ಯನನ್ನು ಕ್ಷಮಿಸುವದು ಯೋಗ್ಯವಲ್ಲ. ಮನಸ್ಸಿಗೆ ಬಂದಂತೆ ನಡೆಯುವವರಲ್ಲಿ ಇರುವದು ಸಲ್ಲದು. ತನ್ನ ನಡತೆಯನ್ನೂ, ತನ್ನ ಕುಲವನ್ನೂ ದೂಷಿಸುವ ದುರ್ಬುದ್ಧಿಯುವರ ಬಳಿಯಲ್ಲಿ ಕಲ್ಯಾಣೇಚ್ಛುವು ಸರ್ವಥಾ ಇರಲಾಗದು. ವೃಷಪರ್ವನ ಮಗಳು ಭಯಂಕರ ಮರ್ಮಭೇದಕ ಮಾತುಗಳಿಂದ ನನ್ನ ಮನಸ್ಸನ್ನು ನೋಯಿಸಿರುವಳು. ಶತ್ರುವಿನ ಕಣ್ಣುಕುಕ್ಕುವಂತಹ ವೈಭವದ ಉಪಾಸನೆಯನ್ನು ಮಾಡುವವನಿಗೆ ಮರಣಬರುವದ ಉತ್ತಮವೆಂದು ವಿದ್ವಾಂಸರು ಹೇಳುವರು" ಎಂದು ನುಡಿದಳು. ಅದನ್ನು ಕೇಳಿ ಶುಕ್ರಾಚಾರ್ಯರು ಸಿಟ್ಟಿನಿಂದ ವೃಷಪರ್ವನಬಳಿಗೆ ಹೋಗಿ ಏನೂ ವಿಚಾರಮಾಡದೆ ಆತನನ್ನು ಕುರಿತು—"ರಾಜಾ, ಅಧರ್ಮದ ದುಷ್ಫಲವು ಇಂದಿಲ್ಲ ಎಂದಾದರೂ ಅದರ ಕರ್ತೃವನ್ನು ಬಾಧಿಸದೆ ಬಿಡದು. ಒಂದುಪಕ್ಷದಲ್ಲಿ ಕರ್ತೃವನ್ನು ಬಾಧಿಸದಿದ್ದರೂ, ಅವನ ಮಕ್ಕಳು-ಮೊಮ್ಮಕ್ಕಳನ್ನಾದರೂ ಬಾಧಿಸುತ್ತದೆ. ಒಟ್ಟಿಗೆ, ಉಂಡ ಅನ್ನವು ತನ್ನ ಗುಣವನ್ನು ತೋರಿಸಿಯೇ ತೋರಿಸುವಂತೆ, ಮಾಡಿದ ಅಧರ್ಮವು ತನ್ನ ದುಷ್ಫಲವನ್ನು ಕೊಟ್ಟೇತೀರುತ್ತದೆ ದೈತ್ಯರು ನೀವು, ಬ್ರಾಹ್ಮಣಪುತ್ರನಾದ ನಿರಪರಾಧಿ ಕಚನನ್ನು ಕೊಂದಿರಿ ; ನನ್ನ ಮಗಳ ಮನಸ್ಸನ್ನು ನೋಯಿಸಿದಿರಿ ; ಆದ್ದರಿಂದ ನಾನು ನಿಮ್ಮ ಊರಲ್ಲಿಯಷ್ಟೇ ಅಲ್ಲ, ನಿಮ್ಮ ರಾಜ್ಯದಲ್ಲಿಯೂ ಇರುವದಿಲ್ಲ.

ವೃಷಪರ್ವ—ಭಾರ್ಗವರೇ, ತಮ್ಮಮುಖದಿಂದ ಧರ್ಮಸಮ್ಮತವಲ್ಲದ, ಅಥವಾ ಸುಳ್ಳಾದ ಮಾತನ್ನು ನಾನು ಎಂದೂ ಕೇಳಿರುವದಿಲ್ಲ. ತಾವು ನಮ್ಮನ್ನು ಬಿಟ್ಟುಹೋದಪಕ್ಷದಲ್ಲಿ ನಾವು ಸಮುದ್ರದಲ್ಲಿ ಹಾರಿ ಪ್ರಾಣಕೊಡುವೆವು.

ಶುಕ್ರಾಚಾರ್ಯ—ನೀವು ಏನಾದರೂ ಮಾಡಿರಿ ; ನನ್ನ ಮಗಳು ನನಗೆ ಅತ್ಯಂತಪ್ರಿಯಳಾಗಿರುವದರಿಂದ, ಆಕೆಯ ದುಃಖವು ನನಗೆ ಸಹನವಾಗುವದಿಲ್ಲ. ನಾನು ನಿಮ್ಮ ಯೋಗಕ್ಷೇಮ ನೋಡಿಕೊಳ್ಳಬೇಕೆಂದಿದ್ದರೆ, ನೀನು ನನ್ನ ಮಗಳ ಸಮಾಧಾನಮಾಡು.

ವೃಷಪರ್ವ—ಭಾರ್ಗವಾ, ತ್ರೈಲೋಕ್ಯದೊಳಗಿನ ನಮ್ಮ ಅಸುರರ ಯಾವತ್ತು ಸಂಪತ್ತಿಯೇ ನಿನ್ನದಿರುವದು. ಬಹಳವೇಕೆ, ನಮ್ಮ ಪ್ರಾಣಗಳ ಒಡೆಯನು ನೀನು ಇರುತ್ತೀ ; ಆದ್ದರಿಂದ ನಿನ್ನ ಅಪ್ಪಣೆಮೀರಿ ನಾವು ಹೋಗುವವರಲ್ಲ.

ಶುಕ್ರಾಚಾರ್ಯ—ಅಸುರೇಶ್ವರಾ, ದೇವಯಾನಿಯನ್ನು ನೀನು ಸಮಾಧಾನಪಡಿಸಿದರೆ, ನಾನು ನಿನ್ನ ಮಾತನ್ನು ನಿಜವೆಂದು ನಂಬುವೆನು.

ಜನಮೇಜಯಾ, ಶುಕ್ರಾಚಾರ್ಯರ ಈ ಮಾತಿಗೆ ವೃಷಪರ್ವನು "ಹಾಗೇ ಆಗಲಿ" ಎಂದು ಒಪ್ಪಿಕೊಂಡನು. ಆಗ ಶುಕ್ರಾಚಾರ್ಯರು ಮಗಳ ಬಳಿಗೆ ಹೋಗಿ ಯಾವತ್ತು ಸಂಗತಿಯನ್ನು ತಿಳಿಸಲು, ಆಕೆಯು-"ಅಪ್ಪಾ, ಕೇವಲ ನಿಮ್ಮ ಮಾತಿನಿಂದ ನನ್ನ ಸಮಾಧಾನವಾಗುವದಿಲ್ಲ. ವೃಷಪರ್ವನು ನನ್ನ ಮುಂದೆ ಹಾಗೆ ಹೇಳಬೇಕು," ಎಂದು ನುಡಿದಳು. ಆಗ ವೃಷಪರ್ವನು ದೇವಯಾನಿಯ ಬಳಿಗೆ ಹೋಗಿ-"ಎಲೈ ಸುಹಾಸ್ಯವದನೇ, ದೇವಯಾನೀ, ನಿನ್ನ ಇಚ್ಛೆಯು ಎಷ್ಟು ದುರ್ಲಭವಾಗಿದ್ದರೂ ಅದನ್ನು ನಾನು ಪೂರ್ಣಮಾಡುವೆನು" ಎಂದು ಹೇಳಿದನು. ಅದಕ್ಕೆ ದೇವಯಾನಿಯು-"ರಾಜಾ, ನಿನ್ನ ಮಗಳಾದ ಶರ್ಮಿಷ್ಠೆಯು ತನ್ನ ಸಾವಿರ ತೊತ್ತುಗಳೊಡನೆ ನನ್ನ ತೊತ್ತಾಗಬೇಕು ; ಮತ್ತು ನನ್ನ ತಂದೆಯು ನನ್ನನ್ನು ಯಾರಿಗೆ ಲಗ್ನಮಾಡಿ ಕೊಡುವನೋ, ಅವರ ಬಳಿಗೆ ಆ ನಿನ್ನ ಮಗಳು ತನ್ನ ತೊತ್ತುಗಳೊಡನೆ ನನ್ನ ಬೆನ್ನಹತ್ತಿ ಬರಬೇಕು."

ಇದನ್ನು ಕೇಳಿ ವೃಷಪರ್ವನು ದಾಸಿಯ ಮುಖಾಂತರವಾಗಿ ಶರ್ಮಿಷ್ಠೆಯನ್ನು ಕರೆಸಿದನು. ಶರ್ಮಿಷ್ಠೆಯು ದಾಸಿಯ ಬಾಯಿಂದ ಎಲ್ಲ ಸಂಗತಿಯನ್ನು ಕೇಳಿ, ಅದರಂತೆ ನಡೆಯಲು ಒಪ್ಪಿಕೊಂಡು ಪಲ್ಲಕ್ಕಿಯಲ್ಲಿ ಕುಳಿತು ತಂದೆಯ ಬಳಿಗೆ ಬಂದಳು. ಆಕೆಯು ದೇವಯಾನಿಯ ಬಳಿಗೆ ಹೋಗಿ-"ದೇವಯಾನೀ, ನಾನು ನನ್ನ ಸಹಸ್ರ ದಾಸಿಯರೊಡನೆ ನಿನ್ನ ತೊತ್ತಾಗಿರುವೆನು. ನಿನ್ನ ತಂದೆ ಶುಕ್ರಾಚಾರ್ಯನು ನಿನ್ನನ್ನು ಯಾರಿಗೆ ಕೊಡುವನೋ ಅವರಬಳಿಗೆ ನಾನು ನಿನ್ನ ಬೆನ್ನುಹತ್ತಿ ಬರುವೆನು."

ದೇವಯಾನಿ—ಶರ್ಮಿಷ್ಠೇ, ನಾನು ನಿನ್ನ ಸ್ತುತಿಪಾಠಕನ ಮಗಳಲ್ಲವೆ ? ನನ್ನ ತಂದೆಯು ನಿನ್ನ ಬಳಿಯಲ್ಲಿ ಬಿಕ್ಕೆಬೇಡುವವನು ; ನೀನಂತು

ವೃಷಪರ್ವರಾಜನ ಮಗಳು ; ಅಂದಬಳಿಕ ನೀನು ನನ್ನ ದಾಸಿಯು ಹೇಗಾಗುವೆ ?

ಶರ್ಮಿಷ್ಠೆ—ಅವ್ವಾ ದೇವಯಾನೀ, ನನ್ನ ದಾಸ್ಯವು ಹೀನ-ದೀನರಾದ ನನ್ನ ಜಾತಿ ಬಾಂಧವರಿಗೆ ಸುಖಕೊಡುತ್ತಿದ್ದರೆ, ನಾನು ಸುಖದಿಂದ ನಿನ್ನ ತೊತ್ತಾಗುವೆನು.

ಈ ಮೇರೆಗೆ ಶರ್ಮಿಷ್ಠೆಯು ದೇವಯಾನಿಯ ದಾಸಿಯಾಗಲು, ಆ ಚಂಡಿಯು ಸಮಾಧಾನವಾಯಿತು. ಆಕೆಯು ಶುಕ್ರಮುನಿಗಳನ್ನು ಕುರಿತು—"ಅಪ್ಪಾ, ಈಗ ನನಗೆ ಸಮಾಧಾನವಾಯಿತು ! ಇನ್ನು ನಾನು ಸಂತೋಷದಿಂದ ನಗರವನ್ನು ಪ್ರವೇಶಿಸುವೆನು. ಅಪ್ಪಾ, ನಿಮ್ಮ ಜ್ಞಾನವೂ, ವಿದ್ಯಾಸಾಮರ್ಥ್ಯವೂ ಅರ್ಥವುಳ್ಳವೂ, ಅಲೌಕಿಕಗಳೂ ಆಗಿರುವವು. ನಿಮ್ಮ ಕೃಪೆಯಿಂದ ನನಗೆ ಐಶ್ವರ್ಯವು ಪ್ರಾಪ್ತವಾಗಿ ರಾಜಪುತ್ರಿಯು ಪರಾಭವವಾಯಿತು," ಎಂದು ನುಡಿದಳು.

**೮೧ನೆಯ ಅಧ್ಯಾಯ – ಯಯಾತಿ-ದೇವಯಾನೀಸಂವಾದ**—ಮುಂದೆ ಬಹಳ ದಿವಸಗಳಾದಮೇಲೆ ದೇವಯಾನಿಯು ತನ್ನ ಆ ಸಾವಿರ ತೊತ್ತುಗಳನ್ನೂ, ಶರ್ಮಿಷ್ಠೆಯನ್ನೂ ಕೂಡಿಕೊಂಡು ಅದೇ ಆ ಮೊದಲಿನ ಅರಣ್ಯಕ್ಕೆ ಜಲಕ್ರೀಡೆಗಾಗಿ ಹೋಗಿ ಯಥೇಚ್ಛವಾಗಿ ಕ್ರೀಡಿಸತೊಡಗಿದಳು. ತನ್ನ ಸಹಸ್ರದಾಸಿಯರೊಡನೆ ಶರ್ಮಿಷ್ಠೆಯು ಆಕೆಯನ್ನು ಸೇವಿಸುತ್ತಿದ್ದಳು. ಹೀಗೆ ಅವರ ಚಕ್ಕಂದವು ನಡೆದಿರುವಾಗ, ಅದೇವನಕ್ಕೆ ಅಕಸ್ಮಾತ್ ಬೇಟೆಗಾಗಿ ಬಂದಿದ್ದ ಯಯಾತಿರಾಜನು ಹಸಿದು ನೀರಡಿಸಿ ಆ ತರುಣಿಯರು ಜಲಕ್ರೀಡೆಯಾಡುತ್ತಿರುವಲ್ಲಿಗೆ ಬಂದನು. ಆತನು ದೇವಯಾನಿ-ಶರ್ಮಿಷ್ಠೆಯರ ಸೌಂದರ್ಯವನ್ನೂ, ಅವರ ಚಕ್ಕಂದದ ಕ್ರೀಡೆಯನ್ನೂ, ಗರ್ಭಶ್ರೀಮಂತಳಾದ ಶರ್ಮಿಷ್ಠೆಯು ದೇವಯಾನಿಯ ಸೇವೆ ಮಾಡುತ್ತಿರುವದನ್ನೂ ಬೆರಗಾಗಿ ನೋಡುತ್ತ, ಕೆಲಹೊತ್ತು ಸುಮ್ಮನೆ ನಿಂತುಕೊಂಡನು. ಬಳಿಕ ಆತನು ಮುಂದಕ್ಕೆ ಹೋಗಿ ಅವರನ್ನು ಕುರಿತು—

**ಯಯಾತಿ**—ಎಲೈ ದಿವ್ಯಕುಮಾರಿಯರೇ, ಸಹಸ್ರದಾಸಿಯರ ಮಧ್ಯದಲ್ಲಿ ಅಲೌಕಿಕ ಸೌಂದರ್ಯದಿಂದ ವನವನ್ನು ಅಲಂಕರಿಸುವ ನೀವಿಬ್ಬರು

ಯಾರಿರುವಿರಿ ? ಕ್ಷಮಿಸಿ ಕೃಪೆಮಾಡಿ ನಿಮ್ಮ ಕುಲಗೋತ್ರಗಳನ್ನು ಹೇಳಿರಿ. ನಿಮ್ಮ ಸೌಂದರ್ಯವನ್ನು ನೋಡಿ ನಾನು ಮುಗ್ಧನಾಗಿರುವೆನು.

ದೇವಯಾನಿ—ನಾನು, ರಾಕ್ಷಸರ 'ಕುಲಗುರುಗಳಾದ ಶುಕ್ರಾಚಾರ್ಯರ ಮಗಳು, ನನ್ನ ಹೆಸರು ದೇವಯಾನಿ. ನನ್ನ ಸಖಿಯೂ, ದಾಸಿಯೂ ಆದ ಈ ಶರ್ಮಿಷ್ಠೆಯು ವೃಷಪರ್ವರಾಜನ ಮಗಳು. ನಾನು ಹೋದತ್ತ ಈಕೆಯು ನನ್ನ ದಾಸಿಯಾಗಿ ನನ್ನ ಸಂಗಡ ಬರತಕ್ಕವಳು.

ಯಯಾತಿ—ಸುಂದರೀ, ನನ್ನನ್ನು ಕ್ಷಮಿಸು. ರಾಜಪುತ್ರಿಯಾದ ಶರ್ಮಿಷ್ಠೆಯು ನಿನ್ನ ದಾಸಿಯು ಹೇಗಾದಳು ?

ದೇವಯಾನಿ—ಇದೆಲ್ಲ ಆ ಅವರ್ಣನೀಯವಾದ ದುರ್ದೈವದ ಆಟವು! ರಾಜಾ, ನಿನ್ನ ಸ್ವರೂಪವು ರಾಜರದಿದ್ದು ; ನಿನ್ನ ವಾಣಿಯು ಸಾತ್ವಿಕವೂ, ಸುಸಂಸ್ಕೃತವೂ ಆದ ವೇದಜ್ಞ ಬ್ರಾಹ್ಮಣನ ವಾಣಿಯಂತೆ ಇರುತ್ತದೆ ; ಆದ್ದರಿಂದ ನೀನುಯಾರು ? ನಿನ್ನ ಕುಲಗೋತ್ರವೇನು ? ದಯಮಾಡಿ ಹೇಳಬೇಕು.

ಯಯಾತಿ—ಸುಂದರೀ, ಬ್ರಹ್ಮಚರ್ಯದಿಂದ ವಿದ್ಯಾಭ್ಯಾಸಮಾಡುತ್ತಿರುವಾಗ ನಾನು ಯಾವತ್ತು ವೇದಗಳ ಪಾರಾಯಣ ಮಾಡಿರುವೆನು. ಯಯಾತಿ ಎಂಬ ಹೆಸರಿನ ರಾಜನು ನಾನೇ. ನಹುಷನು ನನ್ನ ತಂದೆಯು.

ದೇವಯಾನಿ—ತಾವು ಇತ್ತಕಡೆಗೆ ಬಂದ ಕಾರಣವೇನು ? ಬೇಟೆಗಾಗಿ ಬಂದಿರುವಂತೆ ತೋರುತ್ತದೆ.

ಯಯಾತಿ—ಎಲೈ ಭದ್ರೇ, ಹೌದು. ಬೇಟೆಗಾಗಿ ಬಂದಿದ್ದ ನಾನು, ನೀರಡಿಕೆಯಾದದ್ದರಿಂದ ಇಲ್ಲಿಗೆ ಬಂದೆನು. ಇನ್ನು ನನಗೆ ಅನುಜ್ಞೆಯನ್ನು ಕೊಡಬೇಕು.

ದೇವಯಾನಿ—ಮಹಾರಾಜ, ನನ್ನ ಈ ಎರಡು ಸಾವಿರ ದಾಸೀಗಣದೊಡನೆ, ಹಾಗು ಈ ಶರ್ಮಿಷ್ಠೆಯೊಡನೆ ನಾನು ನನ್ನ ತನುಮನೋಧನಗಳನ್ನು ತಮಗೆ ಅರ್ಪಿಸಿದ್ದೇನೆ ನನ್ನನ್ನು ಸ್ವೀಕರಿಸಿ ತಮ್ಮ ಸಖಿಯನ್ನಾಗಿಯೂ, ಹೆಂಡತಿಯನ್ನಾಗಿಯೂ ಮಾಡಿಕೊಳ್ಳಬೇಕು.

ಯಯಾತಿ—ಎಲೈ ಶುಕ್ರಕನ್ಯೇ, ನಿನಗೆ ಮಂಗಲವಾಗಲಿ. ನಿನ್ನ ಪತಿಯಾಗಲು ನಾನು ಯೋಗ್ಯನಲ್ಲ. ಬ್ರಾಹ್ಮಣಕನ್ಯೆಯರಿಗೆ ಕ್ಷತ್ರಿಯರೊಡನೆ ವಿವಾಹವಾಗಲಿಕ್ಕೆ ಬರುವದಿಲ್ಲ.

ದೇವಯಾನಿ—ರಾಜನ್, ಪರಶುರಾಮನಿಂದ ಕ್ಷತ್ರಿಯರ ಸಂಹಾರವಾದನಂತರ ಬ್ರಾಹ್ಮಣರ ವೀರ್ಯದಿಂದಲೇ ಕ್ಷತ್ರಿಯರ ಉತ್ಪತ್ತಿಯಾಗಲಿಲ್ಲವೆ? ಲೋಪಾಮುದ್ರಾದಿ ಕ್ಷತ್ರಿಯಕುಮಾರಿಯರು ಅಗಸ್ತ್ಯಾದಿ ಬ್ರಾಹ್ಮಣರನ್ನು ಲಗ್ನವಾಗಲು, ಅವರಿಂದ ಋಷಿಸಂತತಿಯು ಉತ್ಪನ್ನವಾಗಲಿಲ್ಲವೆ? ಒಟ್ಟಿಗೆ, ಬ್ರಾಹ್ಮಣ-ಕ್ಷತ್ರಿಯರು ಒಬ್ಬರಲ್ಲೊಬ್ಬರು ಕೂಡಿ ಹೋಗಿರುವರು. ತಮ್ಮ ಪೂರ್ವಪೀಠಿಕೆಯನ್ನು ನೋಡಿದರೆ, ತಾವು ಋಷಿಗಳಿದ್ದು, ಋಷಿಪುತ್ರರೂ ಇರುವದರಿಂದ ನನ್ನನ್ನು ಲಗ್ನವಾಗಲು ಯಾವತೊಂದರೆಯೂ ಇಲ್ಲವು

ಯಯಾತಿ—ಸುಂದರೀ, ನಾಲ್ಕೂವರ್ಣಗಳು ಒಬ್ಬ ವಿರಾಟಪುರುಷನಿಂದ ಉತ್ಪನ್ನವಾಗಿದ್ದರೂ, ಆಯಾ ವರ್ಣದವರ ಧರ್ಮಗಳು ಬೇರೆ ಬೇರೆಯಾಗಿರುವವು; ಆಚರಣೆಗಳು ಸ್ವತಂತ್ರವಾಗಿರುವವು; ಆದ್ದರಿಂದ ನಿನ್ನ ಮಾತಿನಂತೆ ನಡೆಯಲಾಗುವದಿಲ್ಲ.

ದೇವಯಾನಿ—ರಾಜನ್, ಮೊದಲು ಯಾರಕೈಯನ್ನೂ ಹಿಡಿಯದಿರುವ ನನ್ನ ಕೈಯನ್ನು ನೀವು ಹಿಡಿದು ಹಿಂದಕ್ಕೆ ನನ್ನನ್ನು ಬಾವಿಯೊಳಗಿಂದ ತೆಗೆದಿರುವಿರಿ. ನನ್ನ ನಿಮ್ಮ ಸಂಬಂಧಯೋಗವಿದ್ದದ್ದರಿಂದಲೇ ನೀವು ನನ್ನ ಪಾಣಿಗ್ರಹಣ ಮಾಡಿರುವಿರಿ. ಶುದ್ಧಾಚರಣೆಯ ಸ್ತ್ರೀಯರ ಕೈಯನ್ನು ಬೇರೆಯವರು ಹಿಡಿಯಬಹುದೆ? ಆದ್ದರಿಂದ ತಾವು ತಿರುತಿರುಗಿ ಸಂಶಯಪಡಬಾರದು.

ಯಯಾತಿ (ಅಂಜಿಕೆಯಿಂದ)—ದೇವಯಾನೀ, ವಿಚಾರವಂತರಿಗೆ ಬ್ರಹ್ಮಕ್ಷೋಭದ ಭಯವು ಬಹಳ; ಆದ್ದರಿಂದ ನಿನ್ನ ತಂದೆಯ ಅನುಮತಿಯಿಲ್ಲದೆ ನಾನು ನಿನ್ನನ್ನು ಲಗ್ನವಾಗಲಾರೆನು.

ದೇವಯಾನಿ—ಹಾಗೇ ಆಗಲಿ, ನನ್ನತಂದೆಯು ನನ್ನನ್ನು ನಿಮಗೆ ಕೊಟ್ಟರೆ ನೀವು ನನ್ನ ಲಗ್ನಮಾಡಿಕೊಳ್ಳಿರಿ.

ಈ ಮೇರೆಗೆ ನುಡಿದು ದೇವಯಾನಿಯು ಎಲ್ಲ ವರ್ತಮಾನವನ್ನು ತಂದೆಗೆ ಹೇಳುವದಕ್ಕಾಗಿ ದಾಸಿಯನ್ನು ಮುಂದೆ ಕಳಿಸಿ, ತಾನು ಹಿಂದಿನಿಂದ ಹೋಗಿ ತಂದೆಯನ್ನು ನಮಸ್ಕರಿಸಿದಳು. ಯಯಾತಿಯು ಶುಕ್ರಾಚಾರ್ಯರಬಳಿಗೆ ಹೋಗಿ ಅವರನ್ನು ನಮಸ್ಕರಿಸಿ ಕೈಜೋಡಿಸಿ ನಿಂತುಕೊಂಡನು. ಆಗ ದೇವಯಾನಿಯು ತಂದೆಯನ್ನು ಕುರಿತು—"ಅಪ್ಪಾ, ಈತನೇ ಆ ನಹುಷಪುತ್ರನಾದ ಯಯಾತಿಯು. ಬಾವಿಯಲ್ಲಿ ಬಿದ್ದಿದ್ದ ನನ್ನನ್ನು ಕೈಹಿಡಿದು ಮೇಲಕ್ಕೆ ಜಗ್ಗಿಕೊಂಡವನು ಈತನೇ; ಆದ್ದರಿಂದ ಈತನೊಡನೆ ನನ್ನ ಲಗ್ನವನ್ನು ಮಾಡಿಕೊಡಬೇಕು," ಎಂದು ಬೇಡಿಕೊಂಡಳು. ಆಗ ಶುಕ್ರಾಚಾರ್ಯರು ಯಯಾತಿರಾಜನಿಗೆ—"ಎಲೈ ಶೂರರಾಜನೇ, ನನ್ನ ಮಗಳು ನಿನ್ನನ್ನು ಪತಿಯಾಗಿ ವರಿಸಿರುವದರಿಂದ ನಾನು ಈಕೆಯನ್ನು ನಿನಗೆ ದಾನವಾಗಿ ಕೊಡುವೆನು. ಈಕೆಯನ್ನು ನೀನು ಸ್ವೀಕರಿಸಿ ಪಟ್ಟರಾಣಿಯಾಗಿ ಮಾಡಿಕೋ. ಈ ಬ್ರಾಹ್ಮಣ-ಕ್ಷತ್ರಿಯರ ವಿವಾಹದಿಂದ ವರ್ಣಸಂಕರದ ಮಹಾಪಾತಕವು ಉಂಟಾದೀತೆಂದು ನೀನು ಭಯಪಡುವ ಕಾರಣವಿಲ್ಲೆಂದು ನಾನು ಅಭಯವನ್ನು ಕೊಡುವೆನು. ಈಗ ಪ್ರಚಾರದಲ್ಲಿಲ್ಲದ ಈ ವಿವಾಹದಿಂದ ಏನಾದರೂ ಅಧರ್ಮವಾದರೆ, ನಾನು ಅದರ ಕ್ಷಾಲನಮಾಡುವೆನು. ನೀನು ಇನ್ನೇನಾದರೂ ವರಗಳನ್ನು ಬೇಡಿಕೊಳ್ಳುವದಿದ್ದರೆ ಬೇಡಿಕೊಳ್ಳು. ಈ ವೃಷಪರ್ವನ ಮಗಳು ದಾಸಿಯಾಗಿದ್ದರೂ, ಈಕೆಯು ರಾಜಪುತ್ರಿಯಿರುವದನ್ನರಿತು ಈಕೆಯ ಯೋಗಕ್ಷೇಮವನ್ನು ನೀನು ಸರಿಯಾಗಿ ನೋಡಿಕೋ; ಆದರೆ ಶಯನೀಯ ಕರ್ಮಕ್ಕಾಗಿ ಮಾತ್ರ ಈಕೆಯನ್ನು ಕರೆಯಬೇಡ.

ಈ ಮೇರೆಗೆ ಶುಕ್ರಾಚಾರ್ಯರು ಹೇಳಿದ ಬಳಿಕ ದೇವಯಾನೀ-ಯಯಾತಿಯರ ವಿವಾಹವು ಯಥಾವಿಧಿಯಾಗಿ ಆಯಿತು. ಶುಕ್ರಾಚಾರ್ಯರೂ ವಿಪುಲದ್ರವ್ಯವನ್ನು ಯಯಾತಿಗೆ ಕೊಟ್ಟರು.

**೮೨ನೆಯ ಅಧ್ಯಾಯ— ದೇವಯಾನೀ ಶರ್ಮಿಷ್ಠೆಯರಿಗೆ ಪುತ್ರಪ್ರಾಪ್ತಿಯು:**—ಜನಮೇಜಯಾ, ಯಯಾತಿರಾಜನು ಎಲ್ಲ ಪರಿವಾರದೊಡನೆ ಮಹಾ ಸಮಾರಂಭದಿಂದ ಪಟ್ಟಣವನ್ನು ಪ್ರವೇಶಿಸಿ, ದೇವಯಾನಿಯನ್ನು ಅಂತಃಪುರದ ಒಡೆಯಳನ್ನಾಗಿ ಮಾಡಿದನು; ಮತ್ತು ಆಕೆಯ

ಅನುಮತಿಯಿಂದ ಶರ್ಮಿಷ್ಠೆಗೆ ಒಂದು ಮಂದಿರವನ್ನು ಕಟ್ಟಿಸಿ, ಅಲ್ಲಿ ಎಲ್ಲ ಅನುಕೂಲತೆಮಾಡಿಕೊಟ್ಟು ಆಕೆಯನ್ನು ಅಲ್ಲಿ ಇಟ್ಟನು. ಇತ್ತ ದೇವಯಾನಿಯೊಡನೆ ಯಯಾತಿಯು ವಿವಿಧ ಸುಖಗಳನ್ನು ಭೋಗಿಸುತ್ತಿರುವಾಗ, ಆಕೆಗೆ ಒಬ್ಬ ಗಂಡುಮಗನು ಹುಟ್ಟಿದನು ; ಆದರೆ ಶರ್ಮಿಷ್ಠೆಯು ಇನ್ನೂ ತನ್ನ ಲಗ್ನವೂ ಆಗದಿರುವದನ್ನು ನೆನಿಸಿ, ಮುಂದೆ ತನ್ನ ಗತಿಯೇನೆಂದು ಚಿಂತಿಸತೊಡಗಿದಳು. ತಾನೂ ದೇವಯಾನಿಯೊಡನೆ ಯಯಾತಿಯ ಬಳಿಗೆ ಬಂದಿರುವದರಿಂದ, ದೇವಯಾನಿಯು ಯಯಾತಿಯನ್ನು ಲಗ್ನವಾದಂತೆ, ತಾನೂ ಆತನನ್ನೇ ಲಗ್ನವಾಗಬೇಕೆಂದು ನಿಶ್ಚಯಿಸಿ, ಆ ರಾಜನು ಒಬ್ಬನೇ ತನ್ನ ಬಳಿಗೆ ಬರುವ ಹಾದಿಯನ್ನು ಆಕೆಯು ನೋಡತೊಡಗಿದಳು. ಹೀಗಿರುವಾಗ ದೈವಸಂಕಲ್ಪದಿಂದ ಯಯಾತಿಯು ಒಬ್ಬನೇ ಅರಮನೆಯಿಂದ ಹೊರಟು ಶರ್ಮಿಷ್ಠೆಯಬಳಿಗೆ ಬಂದನು. ಆಗ ಶರ್ಮಿಷ್ಠೆಯು ರಾಜನನ್ನು ಕುರಿತು—

ಶರ್ಮಿಷ್ಠೆ — ಮಹಾರಾಜ, ನಿಮ್ಮ ಮನೆಯಲ್ಲಿರುವ ನನ್ನನ್ನು ಕಣ್ಣೆತ್ತಿನೋಡಲಿಕ್ಕಾದರೂ ಯಾರು ಸಮರ್ಥರಾದಾರು ? ನಾನು ಪವಿತ್ರಳಿರುವೆನು ; ರೂಪವತಿಯಿರುವೆನು ; ಕುಲೀನಳಿರುವೆನು. ಈ ಮಾತು ತಾವು ಅರಿಯದ್ದಲ್ಲ ; ಆದ್ದರಿಂದ ತಾವು ಪ್ರಸನ್ನರಾಗಿ ಧರ್ಮವಿಧಿಯಿಂದ ನನಗೆ ಋತುದಾನವನ್ನು ಕೊಡಬೇಕು.

ಯಯಾತಿ— ಎಲೈ ಅಭಿನವಸುಂದರೀ, ನಿನ್ನಮಾತು ನಿಜವು ; ಆದರೆ ನಿನ್ನೊಡನೆ ನಾನು ಎಂದೂ ರಮಮಾಣನಾಗಲಾಗದೆಂದು ಶುಕ್ರಮುನಿಯ ಅಪ್ಪಣೆಯಾಗಿರುವದು ನಿನಗೆ ಗೊತ್ತಿರುತ್ತದೆ ; ಅಂದಬಳಿಕ ನಾನು ವಚನಭಂಗವನ್ನು ಹೇಗೆಮಾಡಲಿ ?

ಶರ್ಮಿಷ್ಠೆ—ರಾಜನ್, ಹುಡಗಾಟಿಗೆಯಲ್ಲಿ ಆಡಿದ ಸುಳ್ಳುಮಾತೂ, ಅದರಂತೆ, ಗಮನಯೋಗ್ಯಸ್ತ್ರೀಯೊಡನೆ ಲಗ್ನವಾಗುವಾಗ, ಪ್ರಾಣಹೋಗುವಾಗ, ಎಲ್ಲಧನವು ಹೋಗುತ್ತಿರುವಾಗ ಆಡಿದ ಸುಳ್ಳುಮಾತೂ ಬಾಧಕವಾಗುವದಿಲ್ಲವೆಂದು ಶಾಸ್ತ್ರವಚನವಿರುವದು. ಅದೇಮೇರೆಗೆ ಆಕಳು, ಬ್ರಾಹ್ಮಣ, ಸ್ತ್ರೀ, ದೀನರು, ಅನಾಥರು ಇವರ ಸಂರಕ್ಷಣಕ್ಕಾಗಿ ಹೇಳಿದ ಸುಳ್ಳುಸಾಕ್ಷಿಯೂ ಮನುಷ್ಯನಿಗೆ ಪತಿತತ್ವವನ್ನುಂಟುಮಾಡುವದಿಲ್ಲ ;

ಆದರೆ ಒಂದೇ ಅರ್ಥವನ್ನು ಅಥವಾ ಹೇತುವನ್ನು ಸಾಧ್ಯಮಾಡಿಕೊಳ್ಳುವದಕ್ಕಾಗಿ ಪ್ರಾಪ್ತವಾಗಿದ್ದ ಎರಡು ಅಥವಾ ಹಲವು ವಸ್ತುಗಳೊಳಗಿನ ಒಂದುವಸ್ತುವು ಮಾತ್ರ ಉಪಯುಕ್ತವಾಗಿರುವದು, ಉಳಿದ ವಸ್ತುವು ಅಥವಾ ವಸ್ತುಗಳು ಉಪಯುಕ್ತವಲ್ಲವು ಎಂದು ಸುಳ್ಳುಹೇಳುವವನು ಮಾತ್ರ ಅನೃತದ ಪಾತಕದಲ್ಲಿ ಸಿಕ್ಕಿ ನಾಶಹೊಂದುವನು. ರಾಜನ್, ದೇವಯಾನಿಯನ್ನೂ, ನನ್ನನ್ನೂ ಒಮ್ಮಲೆ ನಿಮಗೆ ಅರ್ಪಿಸಿದ್ದು, ದೇವಯಾನಿಯುಮಾತ್ರ ಹೆಂಡತಿಯು, ನಾನು ಹೆಂಡತಿಯಲ್ಲ ಎಂಬದು ಮಿಥ್ಯಾಚರಣವಾಗಿರುವದು ; ಅದೇ ತಮಗೆ ಘಾತಕವಾದೀತು.

ಯಯಾತಿ--ಸುಂದರೀ, ಅರಸನು ತನ್ನ ಆಚರಣೆಯಿಂದ ಪ್ರಜೆಗಳಿಗೆ ಮೇಲುಪಂಗ್ತಿಯನ್ನು ಹಾಕಿಕೊಡತಕ್ಕವನಾದದ್ದರಿಂದ, ನೀನು ಹೇಳುವ ಮಾತು ನಿಜವಿದ್ದರೂ ನಿನ್ನನ್ನು ನಾನು ಲಗ್ನವಾಗಲಾರೆನು.

ಶರ್ಮಿಷ್ಠೆ—ಇದರಲ್ಲಿ ಸುಳ್ಳೇನಿರುವದು ? ದೇವಯಾನಿಯೂ, ನಾನೂ ಕುಮಾರಿಕೆಯರೂ, ಸಖಿಯರೂ ಆಗಿದ್ದು, ಇಬ್ಬರೂ ಒತ್ತಟ್ಟಿಗಿರುವವರಾದದ್ದರಿಂದ ದೇವಯಾನಿಯ ಪತಿಯೇ ನನ್ನ ಪತಿಯಾಗುವದು ಲೋಕರೂಢಿಯಾಗಿರುವದು ; ಆದ್ದರಿಂದ ತಾವು ನನ್ನ ಪತಿಯಾಗಿರುವಿರಿ ಉದಾರಮನಸ್ಸಿನಿಂದ ನನಗೆ ಋತುಭಿಕ್ಷೆಯನ್ನು ಕೊಡಬೇಕು.

ಯಯಾತಿ (ಕಾಮುಕತೆಯಿಂದ ನಿರುತ್ತರನಾಗಿ)—ಬೇಡಿದ್ದನ್ನು ಕೊಡುವದು ನನ್ನ ವ್ರತವಾಗಿರುವದು ; ಆದ್ದರಿಂದ ಸುಂದರೀ, ಯಾಚಕಳಾದ ನಿನಗೆ ನಾನು ಏನುಮಾಡಿದರೆ ನಿನಗೆ ಹಿತವಾದೀತು ?

ಶರ್ಮಿಷ್ಠೆ—ಮಹಾರಾಜ, ನನ್ನನ್ನು ಅಧರ್ಮದಿಂದ ರಕ್ಷಿಸಿ, ಧರ್ಮಾಚರಣೆಯಿಂದ ನನ್ನನ್ನು ಧರ್ಮಮಾರ್ಗಕ್ಕೆ ಹಚ್ಚಿರಿ. ಹೆಂಡತಿಯು, ದಾಸಿಯು, ಮಗನು ಇವರು ಜಾತ್ಯಾ ಸತ್ವಹೀನರಾಗಿರುವರು. ಅವರು ಸಂಪಾದಿಸಿದ್ದೆಲ್ಲ ಅವರವರ ಯಜಮಾನನ ಧನವಾಗುವದು. ನಾನಂತು ದೇವಯಾನಿಯ ಎಂಜಲತಿನ್ನುವ ದಾಸಿಯು. ದೇವಯಾನಿಯು ಸರ್ವಥಾ ಸರ್ವಸ್ವದಿಂದ ನಿಮ್ಮ ಅಧೀನಳಾಗಿದ್ದಾಳೆ ; ಅಂದಬಳಿಕ ಆಕೆಯಂತೆ ನಾನೂ ತಮ್ಮ ಉಪಭೋಗ್ಯಳಾಗಿರುವೆನು ; ಆದ್ದರಿಂದ ತಾವು ನನ್ನನ್ನು ಸ್ವೀಕರಿಸಬೇಕು.

ಶರ್ಮಿಷ್ಠೆಯ ಈ ಮಾತುಗಳನ್ನು ಕೇಳಿ ವಿಲಾಸ ಪ್ರಿಯನಾದ ರಾಜನು ಗಾಂಧರ್ವವಿಧಿಯಿಂದ ಶರ್ಮಿಷ್ಠೆಯ ಪಾಣಿಗ್ರಹಣಮಾಡಿ, ಆಕೆಯೊಡನೆ ಯಥೇಚ್ಛ ವಿಲಾಸವನ್ನು ಭೋಗಿಸಿದನು. ಯಯಾತಿಯಿಂದ ಶರ್ಮಿಷ್ಠೆಯ ಹೊಟ್ಟೆಯಲ್ಲಿ ಕಮಲಗಳಂತೆ ಕಣ್ಣುಳ್ಳ ದೇವತುಲ್ಯನಾದ ಒಬ್ಬ ಮಗನು ಹುಟ್ಟಿದನು.

**೮೩ನೇ ಅಧ್ಯಾಯ — ದೇವಯಾನಿಯ ಕೋಪ:—** ಜನಮೇಜಯಾ, ಈ ಸಂಗತಿಯು ದೇವಯಾನಿಗೆ ತಿಳಿಯಲು, "ಶರ್ಮಿಷ್ಠೆಯು ಧರ್ಮಭ್ರಷ್ಟಳಾದಳೆಂ"ಬ ಚಿಂತೆಯಿಂದ ಆಕೆಯಬಳಿಗೆ ಬಂದು—

ದೇವಯಾನಿ—ಅವ್ವಾ, ಕಾಮಲೋಲುಪಳಾಗಿ ನೀನು ಇದೇನು ಅಧರ್ಮದ ಕೆಲಸಮಾಡಿದೆ?

ಶರ್ಮಿಷ್ಠೆ—ಸಖೀ, ನನ್ನಿಂದ ಅಧರ್ಮವು ಹೇಗಾದೀತು ಹೇಳು? ಧರ್ಮಾತ್ಮನೂ, ವೇದಜ್ಞನೂ, ದಯಾಳುವೂ ಆದ ಒಬ್ಬ ಋಷಿಯನ್ನು ಧರ್ಮೋಕ್ತವಿಧಿಯಿಂದ ನಾನು ಕಾಮಭಿಕ್ಷೆಯನ್ನು ಬೇಡಲು, ಆ ಋಷಿಯಿಂದ ನನಗೆ ಈ ಮಗನು ಹುಟ್ಟಿರುವನು.

ದೇವಯಾನಿ—ಹಾಗಿದ್ದರೆ ನೆಟ್ಟಗಾಯಿತು; ಆದರೆ ಆ ಬ್ರಾಹ್ಮಣನ ಕುಲಗೋತ್ರಗಳೇನು?

ಶರ್ಮಿಷ್ಠೆ—ಆ ಸೂರ್ಯನಂತೆ ತೇಜಸ್ವಿಯಾದ ತಪಸ್ವಿಯನ್ನು ಕೇಳುವ ಬುದ್ಧಿಯೇ ನನಗೆ ಆಗಲಿಲ್ಲ. ಆಗ ನನ್ನ ಮೈಮೇಲೆ ಎಚ್ಚರವಿದ್ದಿಲ್ಲ.

ದೇವಯಾನಿ—ಹಾಗಿದ್ದರೆ ನನ್ನ ಮಾತಿಲ್ಲ. ಸರ್ವಶ್ರೇಷ್ಠ ಬ್ರಾಹ್ಮಣನಿಂದ ನಿನಗೆ ಈ ಸಂತಾನವಾಗಿದ್ದರೆ, ನಾನೇಕೆ ನಿನ್ನಮೇಲೆ ಸಿಟ್ಟಾಗಲಿ?

ಹೀಗೆ ನುಡಿದು ದೇವಯಾನಿಯು ಸಮಾಧಾನದಿಂದ ಮನೆಗೆ ಹೋದಳು. ಮುಂದೆ ದೇವಯಾನಿಗೆ ಮತ್ತೊಬ್ಬ ಮಗನು ಹುಟ್ಟಿ, ಆಕೆಗೆ ಯದು, ತುರ್ವಸು ಎಂಬ ಇಬ್ಬರು ತೇಜಸ್ವಿಗಳಾದ ಮಕ್ಕಳಾದರು. ಇತ್ತ ಶರ್ಮಿಷ್ಠೆಗೆ ಮತ್ತೆ ಇಬ್ಬರು ಮಕ್ಕಳಾಗಿ ಆಕೆಗೆ ದ ಹ್ಯು, ಅನು, ಪುರು ಎಂಬ ಮೂವರು ಮಕ್ಕಳಾದರು. ಒಂದುದಿನ ದೇವಯಾನಿಯು ಶರ್ಮಿಷ್ಠೆಯ ಮನೆಯಿದ್ದ ಅಶೋಕವನಕ್ಕೆ ಬಂದಾಗ, ಯಯಾತಿಯನ್ನು

ಹೋಲುವ ಶರ್ಮಿಷ್ಠೆಯ ಆ ಮೂವರು ಮಕ್ಕಳನ್ನು ನೋಡಿ ಆ ಕುಮಾರ ಕರನ್ನು ಕುರಿತು—“ನೀವು ಯಾರಮಕ್ಕಳು ?” ಎಂದು ಕೇಳಲು, ಅವರು ಯಯಾತಿಯಕಡೆಗೆ ಬೆರಳುಮಾಡಿ ತೋರಿಸಿ, ನಮ್ಮ ತಾಯಿಯು ಶರ್ಮಿಷ್ಠೆಯು ಎಂದು ಹೇಳಿ ಸಲಿಗೆಯಿಂದ ರಾಜನಬಳಿಗೆ ಹೋದರು. ಆಗ ರಾಜನು ದೇವಯಾನಿಯ ಅಂಜಿಕೆಯಿಂದ ಆ ಹುಡುಗರನ್ನು ಕರೆದುಕೊಳ್ಳ ದಾದನು. ಇದರಿಂದ ದೇವಯಾನಿಗೆ ಎಲ್ಲ ಸಂಗತಿಯು ಗೊತ್ತಾಗಿ, ಆಕೆಯು ಶರ್ಮಿಷ್ಠೆಯನ್ನು ಕುರಿತು ಸಿಟ್ಟಿನಿಂದ—

ದೇವಯಾನಿ—ನನ್ನ ತಂದೆಯೂ, ನಿನ್ನ ತಂದೆಯೂ ನಿನ್ನನ್ನು ನನಗೆ ಒಪ್ಪಿಸಿದ್ದು, ನೀನು ಹೀಗೆ ನನ್ನ ಘಾತಮಾಡಬಹುದೆ ?

ಶರ್ಮಿಷ್ಠೆ (ಅಂಜದೆ)—ನಾನೇನು ಘಾತಮಾಡಿದ್ದೇನೆ ? ನೀನು ಮಹಾರಾಜನನ್ನು ವರಿಸಿದಾಗಲೇ ನಾನೂ ಮನಸ್ಸಿನಿಂದ ಆತನನ್ನು ವರಿಸಿದೆನು. ನಿನ್ನ ಗಂಡನು, ನಿನ್ನ ಸಖಿಯ ಗಂಡನೂ ಆಗುವನೆಂಬ ನ್ಯಾಯ್ಯವನ್ನು ನೀನು ಮರೆತೆಯೆಂಬಂತೆ ತೋರುತ್ತದೆ. ನೀನು ಹಿರಿಯಳೂ, ಬ್ರಾಹ್ಮಣಪುತ್ರಿಯೂ ಇರುವದರಿಂದ ನನಗೆ ಪೂಜ್ಯಳಾಗಿರುವೆ ; ನಿನಗಿಂತಲೂ ರಾಜರ್ಷಿಯು ನನಗೆ ಹೆಚ್ಚುಮಾನ್ಯನೂ, ಪೂಜ್ಯನೂ ಆಗಿರುವನು.

ಶರ್ಮಿಷ್ಠೆಯ ಈ ಮಾತುಗಳನ್ನು ಕೇಳಿದಕೂಡಲೆ ದೇವಯಾನಿಯು ಸಿಟ್ಟಿನಿಂದ ಕಣ್ಣು ಕೆಂಪಗೆ ಮಾಡಿಕೊಂಡು ಕಣ್ಣೀರು ಸುರಿಸುತ್ತ, ಹಾಗೆಯೇ ತನ್ನ ತಂದೆಯಬಳಿಗೆ ಹೋಗಿ ಆತನನ್ನು ನಮಸ್ಕರಿಸಿ ನಿಂತುಕೊಂಡಳು. ಆ ಚಂಡಿಯ ಮನಸ್ಸನ್ನು ಒಲಿಸುವದಕ್ಕಾಗಿ ಆಕೆಯ ಬೆನ್ನುಹತ್ತಿ ಹೋಗಿದ್ದ ಯಯಾತಿರಾಜನೂ ತನ್ನ ಮಾವನಾದ ಶುಕ್ರಾಚಾರ್ಯರ ಚರಣಕ್ಕೆರಗಿ ನಿಂತುಕೊಂಡನು. ಆಗ ದೇವಯಾನಿಯು ತನ್ನ ತಂದೆಯನ್ನು ಕುರಿತು—“ಅಪ್ಪಾ, ಅಧರ್ಮದಿಂದ ಧರ್ಮದ ಅಪಜಯವಾಯಿತು ನೀಚರಪೆಚ್ಚಳವಾಗಿ ಉತ್ತಮರ ಕೊರತೆಯಾಯಿತು ನಿಮ್ಮ ಧರ್ಮಿಷ್ಠ ಅಳಿಯನಾದ ಈ ರಾಜನು ಪಟ್ಟರಾಣಿಯಾದ ನನಗೆ ಎರಡು ಸಂತತಿಯನ್ನು ಕೊಟ್ಟು, ಶರ್ಮಿಷ್ಠೆಗೆ ಮೂರು ಸಂತತಿಯನ್ನು ಕೊಟ್ಟಿರುವನು. ಈತನು ಶರ್ಮಿಷ್ಠೆಯನ್ನು ಮುಟ್ಟಲಿಕ್ಕಿಲ್ಲವೆಂದು ವಚನಕೊಟ್ಟಿದ್ದನಲ್ಲವೆ ?” ಅನ್ನಲು, ಶುಕ್ರಾಚಾರ್ಯರು—“ರಾಜಾಧಿರಾಜನೇ, ನಿನಗೆ ಧರ್ಮಾಧರ್ಮದ

ಜ್ಞಾನಸಿದ್ಧರೂ, ನೀನು ಅಧರ್ಮವನ್ನು ಆಚರಿಸಿರುವದರಿಂದ ನಿನಗೆ ಈಗಲೇ ಮುಪ್ಪುಬರಲಿ,'' ಎಂದು ಶಾಪಕೊಟ್ಟನು ಆಗ ಯಯಾತಿಯು– ''ಭಗವನ್, ನಾನು ಅಪರಾಧಿಯಂತು ಸರಿಯೆ ; ಆದರೆ ರಾಕ್ಷಸಕನ್ಯೆಯು ಋತುದಾನಬೇಡಿದ್ದರಿಂದ ಮಾತ್ರ ಧರ್ಮವಿಹಿತ ಭೋಗದಾನ ಮಾಡಿದೆ ನಲ್ಲದೆ, ಬೇರೆ ಮನೋವೃತ್ತಿಯಿಂದ ಅಥವಾ ಕಾಮುಕನಾಗಿ ಭೋಗದಾನ ಮಾಡಿರುವದಿಲ್ಲ. ಮುನಿರಾಜ, ಋತುದಾನಬೇಡಬಂದ ಧರ್ಮಯೋಗ್ಯ ಸ್ತ್ರೀಯನ್ನು ನಿರಾಕರಿಸಿದರೆ ಭ್ರೂಣಹತ್ಯೆಯ ಪಾಪವು ಬರುವದೆಂದು ಧರ್ಮಶಾಸ್ತ್ರವನ್ನರಿತ ಬ್ರಹ್ಮಜ್ಞರು ಹೇಳುವರೆಂಬದನ್ನು ನಾನು ತಮಗೆ ಹೇಳಬೇಕೆ? ಆದ್ದರಿಂದ ಮಹಾರಾಜ, ಧರ್ಮವನ್ನು ಅತಿಕ್ರಮಿಸದ ನನ್ನನ್ನು ಕ್ಷಮಿಸಬೇಕು.

ರಾಜನ ಈ ಮಾತುಗಳನ್ನು ಕೇಳಿ ಶುಕ್ರಮುನಿಯು ಸಿಟ್ಟಿನಿಂದ- ''ಹಾಗಿದ್ದರೆ ಆಗ ನೀನು ನನ್ನನ್ನು ಯಾಕೆ ಕೇಳಲಿಲ್ಲ? ನೀನು ನನ್ನ ಅಧೀನನಲ್ಲವೇ? ಧಾರ್ಮಿಕರ ಸೂಕ್ಷ್ಮಧರ್ಮದ ಸಂಬಂಧದ ಆಚರಣೆಯು ಹೀಗೆ ಕಳ್ಳತನದಿಂದಲೇ ಆಗುವದು ; ಆದ್ದರಿಂದ ಅಂಥವರಿಗೆ ಧರ್ಮಚೌರ್ಯದ ಪಾತಕವು ತಟ್ಟುವದು.'' ಎಂದು ನುಡಿದರು. ಆ ಋಷಿಯ ಶಾಪವು ಯಯಾತಿಯನ್ನು ಮುದುಕನನ್ನಾಗಿ ಮಾಡಿ ಹೊರಟುಹೋಯಿತು. ಆಗ ದುಃಖಿತನಾದ ಯಯಾತಿಯು ವಿನಯದಿಂದ– ''ಭಗವನ್, ತಮ್ಮ ಮಗಳ ಸಂಬಂಧದ ವಿಷಯಶಾಂತಿಯು ನನಗೆ ಇನ್ನೂ ಆಗಿರುವದಿಲ್ಲ ; ಆದ್ದರಿಂದ ಆಕೆಯ ಮೇಲಾದರೂ ಕೃಪೆಮಾಡಿ ನನಗೆ ಈಗೇ ಮುಪ್ಪುಬಾರದಂತೆ ಅನುಗ್ರಹಿಸಬೇಕು,'' ಎಂದು ಪ್ರಾರ್ಥಿಸಿದನು. ಆಗ ಶುಕ್ರಮುನಿಯು ಸ್ವಲ್ಪಶಾಂತನಾಗಿ–''ರಾಜಾ, ಋಷಿಯ ವಾಣಿಯು ವ್ಯರ್ಥವಾಗಲಾರದು ; ಆದರೆ ನಿನ್ನ ಇಚ್ಛೆಯಿದ್ದರೆ ನಿನ್ನ ಮುಪ್ಪನ್ನು ಎರಡನೆಯವರಿಗೆ ಕೊಡ ಲಿಕ್ಕೆ ಬರುವಹಾಗೆ ನಿನಗೆ ಸಾಮರ್ಥ್ಯವನ್ನು ಕೊಡುವೆನು.''

ರಾಜ (ಸಮಾಧಾನಪಟ್ಟು)—ನನ್ನ ಮಕ್ಕಳಲ್ಲಿ ನನ್ನ ಮುಪ್ಪನ್ನು ತಕ್ಕೊಂಡು ತನ್ನ ಪ್ರಾಯವನ್ನು ಕೊಡುವವನಿಗೆ ನನ್ನ ಯಾವತ್ತು ರಾಜ್ಯವೂ, ಯಾವತ್ತು ಪುಣ್ಯವೂ, ಯಾವತ್ತು ಕೀರ್ತಿಯೂ ಪ್ರಾಪ್ತವಾಗು ವಂತೆ ಮಾಡಲು ನನಗೆ ಅಪ್ಪಣೆಯಾಗಬೇಕು.

ಶುಕ್ರಾಚಾರ್ಯ—ರಾಜಾ, ಭಕ್ತಿಪುರಸ್ಸರ ನನ್ನ ಸ್ಮರಣಮಾಡಿದೆ ಯೆಂದರೆ, ಬೇಕಾದವರಿಗೆ ನಿನ್ನ ಮುಪ್ಪನ್ನು ಕೊಡಲಿಕ್ಕೆ ನಿನಗೆ ಬರುವದು. ಇದರಿಂದ ನಿನಗೆ ಯಾವಪ್ರಕಾರದ ಪಾಪವೂ ಬರುವದಿಲ್ಲ. ನಿನಗೆ ತಾರುಣ್ಯವನ್ನು ಕೊಡುವ ಮಗನು ಹಿರಿಯನಿರಲಿ, ಕಿರಿಯನಿರಲಿ ಆತನಿಗೆ ನೀನು ರಾಜ್ಯವನ್ನು ಕೊಡು ; ಪಾಪವು ನಿನ್ನನ್ನು ಮುಟ್ಟುವದಿಲ್ಲ. ಆ ನಿನ್ನ ಮಗನು ದೀರ್ಘಾಯುಷ್ಯ, ಕೀರ್ತಿವಂತನೂ, ಹಲವು ಮಕ್ಕಳ ತಂದೆಯೂ ಆಗುವನು. ಆ ನಿನ್ನ ಪುತ್ರನ ವಂಶವು ಪ್ರಸಿದ್ಧವಾಗುವದು. ರಾಜಾ, ಇನ್ನು ನೀನು ನಿನ್ನ ಪಟ್ಟಣಕ್ಕೆ ನಡೆ.

**೮೪ನೇ ಅಧ್ಯಾಯ—ಯಯಾತಿಗೆ ಯೌವನಪ್ರಾಪ್ತಿ:—** ಈ ಮೇರೆಗೆ ಯಯಾತಿಯು ಮುಪ್ಪನ್ನು ಪಡೆದು ತನ್ನ ಪಟ್ಟಣಕ್ಕೆ ಬಂದು ತನ್ನ ಹಿರಿಯಮಗನಾದ ಯದುವನ್ನು ಕುರಿತು—

ಯಯಾತಿ—ಬಾಲಾ, ನನ್ನ ಭೋಗತೃಪ್ತಿಯು ಆಗದಿರುವದರಿಂದ ನೀನು ನನ್ನ ಮುಪ್ಪಿನೊಡನೆ ನನ್ನ ಚಿತ್ತದೌರ್ಬಲ್ಯವನ್ನು ತಕ್ಕೊಂಡು ನಿನ್ನ ಪ್ರಾಯವನ್ನು ನನಗೆ ಕೊಡು. ಒಂದು ಸಾವಿರವರ್ಷಗಳವರೆಗೆ ವಿಷಯಭೋಗಮಾಡಿ ಆಮೇಲೆ ನಿನ್ನ ಪ್ರಾಯವನ್ನು ನಿನಗೆ ಕೊಡುವೆನು.

ಯದು—ಅಪ್ಪಾ, ನೀವು ಬೇಕಾದದ್ದನ್ನು ಬೇಡಿರಿ ; ಆದರೆ ಕೆಟ್ಟ ಮುಪ್ಪುಮಾತ್ರ ನನಗೆ ಬೇಡ. ಮುಪ್ಪಿನಲ್ಲಿ ತಿನ್ನುಣ್ಣುವದು ಕಟ್ಟಾಗುತ್ತದೆ ; ಶಾರೀರಕ-ಮಾನಸಿಕ ವಿವಿಧರೋಗಗಳು ಗಂಟುಬೀಳುತ್ತವೆ ; ರೂಪವು ಕೆಡುತ್ತದೆ ; ಸ್ತ್ರೀಯರ ತಿರಸ್ಕಾರಕ್ಕೆ ಪಾತ್ರನಾಗಬೇಕಾಗುತ್ತದೆ! ಆ ಬಿಳಿಯಕೂದಲು, ಆ ಖಿನ್ನತೆ, ಆ ದುರ್ಗಂಧಿ! ಅಪ್ಪಾ, ಬೇಡ, ಆ ಮುಪ್ಪು ಸರ್ವಥಾ ನನಗೆ ಬೇಡ. ನಿಮ್ಮ ಪ್ರೀತಿಯ ಬೇರೆ ಮಕ್ಕಳಿರುವರು ಅವರಿಗೆ ಅದನ್ನು ಕೊಡಿರಿ.

ಯಯಾತಿ (ಸಿಟ್ಟಿನಿಂದ)—ಎಲಾ, ನನ್ನ ರಕ್ತಮಾಂಸದಿಂದುಂಟಾಗಿರುವ ನಿನ್ನನ್ನು ನಾನು ಕಷ್ಟಪಟ್ಟು ಸಣ್ಣವನನ್ನು ದೊಡ್ಡವನಾಗಮಾಡಿರಲು, ನನ್ನ ಇಷ್ಟುಮಾತನ್ನು ನಡೆಸುವದಿಲ್ಲವೆ? ಆಗಲಿ, ನಿನ್ನ ಮಕ್ಕಳಿಗೆ ನನ್ನ ರಾಜ್ಯದ ಪಾಲನ್ನು ಕೊಡುವದಿಲ್ಲ. ಇನ್ನು ನಿನ್ನ ತಮ್ಮನಾದ ತುರ್ವಸುವನ್ನು ಕೇಳುತ್ತೇನೆ ; ತುರ್ವಸೂ, ನೀನು ನನ್ನ ಮುಪ್ಪನ್ನು ತಕ್ಕೊಂಡು ನಿನ್ನ ಪ್ರಾಯವನ್ನು ಕೊಡುವೆಯಾ?

ತುರ್ವಸು (ಕಿವಿಯಮೇಲೆ ಕೈಯಿಟ್ಟುಕೊಂಡು) — ಕಾಮಭೋಗಗಳನ್ನು ನಾಶಮಾಡುವ, ಹಾಗು ಬಲ-ರೂಪಗಳನ್ನು ಕೆಡಿಸುವ, ಬುದ್ಧಿ-ಪ್ರಾಣಗಳನ್ನು ನಷ್ಟಪಡಿಸುವ ನಿಮ್ಮ ಮುಪ್ಪು ನನಗೆ ಬೇಡ.

ಯಯಾತಿ (ಸಂತಾಪಗೊಂಡು)—ಚಾಂಡಾಲಾ, ನೀನು ನನ್ನ ಹೊಟ್ಟೆಯ ಮಗನಲ್ಲವೆ? ಮೂಢಪಶುವೇ, ಅವ್ಯವಸ್ಥಿತ ಆಚಾರ-ಧರ್ಮಗಳುಳ್ಳ, ಹಾಗು ಉಚ್ಚವರ್ಣದ ಸ್ತ್ರೀಯರೊಡನೆ ನೀಚವರ್ಣದ ಪುರುಷರು ಲಗ್ನವಾಗುವ, ಅದರಂತೆ ಅಭಕ್ಷ್ಯ ಭಕ್ಷಣಮಾಡುವ ಅಂತ್ಯಜರ ಅರಸನಾಗು ನೀನು; ಮತ್ತು ಗುರುದಾರಗಮನಮಾಡುವ ಪಶುಗಳಂತೆ ಆಹಾರ ವಿಹಾರಗಳುಳ್ಳ ಮ್ಲೇಂಛಜಾತಿಯಲ್ಲಿ ನೀನು ಇರಬೇಕಾಗುವದು. ಎಲೈ ಶರ್ಮಿಷ್ಠೆಯ ಹಿರಿಯಮಗನಾದ ದ್ರುಹ್ಯೂ, ನೀನೇನೆನ್ನುವೆ?

ದ್ರುಹ್ಯು—ಆನೆ, ರಥ, ಕುದುರೆ, ಸ್ತ್ರೀಯರು ಮೊದಲಾದ ಭೋಗ್ಯ ವಸ್ತುಗಳ ಭೋಗಕ್ಕೆ ಅಸಮರ್ಥವಾಗಿರುವ ನಿಮ್ಮ ಮುಪ್ಪು ನನಗೆಬೇಡ.

ಯಯಾತಿ—ಎಲೈ ನರಾಧಮನೇ, ಎಂದೂ ನಿನ್ನ ಕಲ್ಯಾಣವಾಗುವದಿಲ್ಲ; ನಿನ್ನ ಭೋಗೇಚ್ಛೆಯೂ ತೃಪ್ತವಾಗುವದಿಲ್ಲ. ಎಲೈ ರಾಕ್ಷಸಾ, ಆನೆ-ಕುದುರೆ-ರಥಾದಿಗಳ ಸಂಚಾರಕ್ಕೆ ಆಸ್ಪದವಿಲ್ಲದ, ಡೋಣಿ-ನಾವೆಗಳಲ್ಲಿ ವ್ಯವಹಾರನಾಗಿರುತ್ತಿರುವ ಸ್ಥಳದಲ್ಲಿ ನೀನು ವಾಸಿಸು; ಅಲ್ಲಿಯೂ ನಿನಗೆ ಅಥವಾ ನಿನ್ನವಂಶಜರಿಗೆ ರಾಜ್ಯವು ದೊರೆಯಲಾರದು! ಎಲಾ ಶರ್ಮಿಷ್ಠೆಯ ದ್ವಿತೀಯಪುತ್ರಾ, ಅನೂ, ನೀನು ನನ್ನ ಇಚ್ಛೆಯನ್ನು ಪೂರ್ಣ ಮಾಡುವೆಯಾ?

ಅನು (ಅಂಜುತ್ತಂಜುತ್ತ)—ಅಶುದ್ಧ ಪುರುಷರಂತೆ, ಹುಡುಗರಂತೆ ಅನ್ನಪಾನಗಳನ್ನು ಸ್ವೀಕರಿಸುವ, ಹಾಗು ಮುಂಜಾವು ಸಂಜೆಗಳಲ್ಲಿ ಅಗ್ನಿಗೆ ಆಹುತಿಯನ್ನು ಕೊಡಿಸದಿರುವ ಮುಪ್ಪು ನನಗೆ ಬೇಡ.

ಯಯಾತಿ—ಎಲಾ ಮೂರ್ಖಾ, ನಿನಗೆ ಬೇಡಾಗಿರುವ ಮುಪ್ಪು ಈಗೇ ನಿನಗೆ ಬರಲಿ. ನಿನ್ನಿಂದ ಶ್ರೌತಸ್ಮಾರ್ತಕರ್ಮಗಳು ನಡೆಯದೆ ನೀನು ನಾಸ್ತಿಕನಾಗುವೆ ಹೋಗು.

ಈ ಮೇರೆಗೆ ತನ್ನ ಎಲ್ಲಮಕ್ಕಳೂ ತನ್ನ ಮಾತನ್ನು ಅಲ್ಲಗಳೆದದ್ದರಿಂದ ವ್ಯಥಿತನಾದ ಯಯಾತಿಯು, ಶರ್ಮಿಷ್ಠೆಯ ಕಡೆಹುಟ್ಟಿದ ಮಗನಾದ

ತನ್ನ ಪ್ರೀತಿಯ ಪುರುವನ್ನು ಕುರಿತು ದೈನ್ಯದಿಂದ ಅದೇಪ್ರಶ್ನವನ್ನು ಮಾಡಿದನು ಆಗ ಪುರುವು ಒಳ್ಳೇವಿನಯದಿಂದ–"ಮಹಾರಾಜಾ, ನಿಮ್ಮ ಅಪ್ಪಣೆಯು ನನಗೆ ಮಾನ್ಯವಾಗಿರುವದು. ನಿಮ್ಮ ಮುಪ್ಪನ್ನೂ, ಚಿತ್ತ ದೌರ್ಬಲ್ಯವನ್ನೂ ಆನಂದದಿಂದ ನಾನು ಸ್ವೀಕರಿಸುವೆನು, ತಾವು ಖೇದ ಪಡಬಾರದು. ನನ್ನ ಪ್ರಾಯವನ್ನು ತಕ್ಕೊಂಡು ತಾವು ಬೇಕಾದಷ್ಟು ದಿವಸ ವಿಷಯಗಳನ್ನು ಭೋಗಿಸಬೇಕು. ಇದಕ್ಕೆ ಸಾವಿರವರ್ಷದ್ದೇ ಮರ್ಯಾದೆ ಏಕೆ! ಬದುಕಿರುವವರೆಗೆ ನನ್ನ ಪ್ರಾಯವನ್ನು ತಾವು ತಕ್ಕೊಳ್ಳಬೇಕು. ತಮ್ಮ ಅಪ್ಪಣೆಗೆ ನಾನು ಹೊರಗಾದವನಲ್ಲ," ಅನ್ನಲು, ಯಯಾತಿಯ ಆನಂದವು ಗಗನದಲ್ಲಿ ಹಿಡಿಸದಾಯಿತು. ಆ ರಾಜನು ಹರ್ಷಭರದಿಂದ ಪುರುವನ್ನು ಕುರಿತು–"ಪುರೋ, ನಾನು ಪ್ರಸನ್ನನಾಗಿದ್ದೇನೆ! ನಿನ್ನ ಮಕ್ಕಳ, ನಿನ್ನ ಪ್ರಜೆಗಳ ಇಚ್ಛೆಗಳು ಪೂರ್ಣವಾಗುವವು. ನನ್ನ ರಾಜ್ಯವೆಲ್ಲ ಪಿತೃಭಕ್ತರಾದ ನಿನ್ನ ಮಕ್ಕಳಿಗೇ ದೊರೆಯುವದು. ಪುತ್ರಾ, ನೀನು ತ್ರೈಲೋಕ್ಯದಲ್ಲಿ ಧನ್ಯನಾಗುವೆ," ಎಂದು ಆಶೀರ್ವದಿಸಿ, ಭಕ್ತಿಯಿಂದ ಶುಕ್ರಾಚಾರ್ಯರ ಸ್ಮರಣಮಾಡಿ, ತನ್ನ ಮುಪ್ಪನ್ನು ಪುರುವಿಗೆ ಕೊಟ್ಟು, ಪುರುವಿನ ತಾರುಣ್ಯವನ್ನು ತಾನು ಸ್ವೀಕರಿಸಿದನು.

**೮೫ನೇ ಅಧ್ಯಾಯ— ಪುರುವಿನ ರಾಜ್ಯಾಭಿಷೇಕ** — ಜನಮೇಜಯಾ, ಈ ಮೇರೆಗೆ ಯಯಾತಿಯು ಪುರುವಿನ ಪ್ರಾಯವನ್ನು ಸ್ವೀಕರಿಸಿ, ಧರ್ಮಸಮ್ಮತವಾಗಿ ಯಥೇಚ್ಛ ವಿಷಯಸುಖವನ್ನು ಭೋಗಿಸತೊಡಗಿದನು. ಆ ರಾಜನು ಹಲವು ಯಜ್ಞಗಳನ್ನುಮಾಡಿ ದೇವತೆಗಳನ್ನು ಸಂತೋಷಪಡಿಸಿದನು. ಶ್ರಾದ್ಧಕರ್ಮಗಳಿಂದ ಪಿತೃಗಳನ್ನು ಸಂತೋಷಪಡಿಸಿದನು ಅನುಗ್ರಹಿಸಿ ಅಸಾಧರ ಧನ್ಯವಾದವನ್ನೂ, ಬೇಡಿದ್ದನ್ನು ಕೊಟ್ಟು ಬ್ರಾಹ್ಮಣರ ಆಶೀರ್ವಾದವನ್ನೂ ಪಡೆದನು. ಯಥೇಚ್ಛ ಅನ್ನಪಾನಾದಿಗಳನ್ನು ಕೊಟ್ಟು ಅತಿಥಿಗಳನ್ನೂ, ಉತ್ತಮಪ್ರಕಾರದಿಂದ ಪಾಲಿಸಿ ವೈಶ್ಯರನ್ನೂ, ಪ್ರಜೆಗಳನ್ನೂ, ದಯೆಯಿಂದ ಶೂದ್ರರನ್ನೂ, ದಂಡಾದಿಸಾಧನಗಳನ್ನು ಯೋಜಿಸಿ ಕಳ್ಳರನ್ನೂ ಸಂತುಷ್ಟರಾಗಿ ಮಾಡಿದನು ಒಟ್ಟಿಗೆ ಅವರವರ ಯೋಗ್ಯತೆಯಂತೆ ಧರ್ಮತಃ ಸತ್ತೆಯನ್ನು ಸ್ಥಾಪಿಸಿ ಎಲ್ಲರಿಗೂ ಉತ್ತಮಸುಖವಿತ್ತನು. ಈತನು ಇಂದ್ರನ ಎರಡನೆಯ ಅವ

ತಾರವೆಂದು ಜನರು ಸ್ತುತಿಸಹತ್ತಿದರು ಯಯಾತಿಯು ವಿಶ್ವಾಚಿ ಎಂಬ ಹೆಸರಿನ ಅಪ್ಸರೆಯೊಡನೆ ದಿವ್ಯ ನಂದನವನದಲ್ಲಿಯೂ, ಮೇರುಪರ್ವತವಲ್ಲಿಯ ಅಲಕಾ ಎಂಬ ಹೆಸರಿನ ಕುಬೇರನ ನಗರದಲ್ಲಿಯೂ ಅನೇಕ ಪ್ರಕಾರದ ವಿಲಾಸ-ಸುಖಗಳನ್ನು ಸಹಸ್ರವರ್ಷ ಭೋಗಿಸಿದನು ; ಆದರೂ ಆತನಿಗೆ ಭೋಗತೃಪ್ತಿಯಾಗಲಿಲ್ಲ ; ಆದ್ದರಿಂದ ಆತನು ವಿಷಯಸುಖದ ನಿಸ್ಸಾರತೆಗಾಗಿ ಬೇಸತ್ತು ತನ್ನ ಮಗನಾದ ಪುರುವನ್ನು ಕುರಿತು— "ವತ್ಸಾ, ನಿನ್ನ ಅನುಗ್ರಹದಿಂದ ಸಹಸ್ರವರ್ಷ ವಿಷಯಸುಖವನ್ನು ಭೋಗಿಸಿದೆನು ; ಆದರೆ ವಿಷಯಸುಖವನ್ನು ಭೋಗಿಭೋಗಿಸಿದಂತೆ, ಅಗ್ನಿಯಲ್ಲಿ ತುಪ್ಪ ಹಾಕಿದ ಚಂದದಿಂದ ಸುಖೇಚ್ಛೆಯು ಮತ್ತೂ ಹೆಚ್ಚುತ್ತಲೇ ಇರುವದು ಆಶಾರೂಪವಾದ ಸಣ್ಣ ತಗ್ಗನ್ನು ತುಂಬುತ್ತ ಹೋದಂತೆ ಅದು ದೊಡ್ಡದಾಗುತ್ತ ಹೋಗುವದು. ಅಜ್ಞಾನಿಗಳು ಈ ತೃಷ್ಣಾರೂಪ ನದಿಯನ್ನು ದಾಟಿಹೋಗಲಾರರು. ಆಶೆ ತಾಳುವದು ಪ್ರಾಣವಿಘಾತಕವಾಗಿರುವದು ದೇಹತ್ಯಾಗವಾದರೂ ಈ ಆಶೆಯು ಜೀವನ ಬೆನ್ನುಬಿಡುವದಿಲ್ಲ ಇದಕ್ಕೆ ಯಥೇಚ್ಛ ಹೊಟ್ಟೆಗೆ ಹಾಕುವದರಿಂದ ಇದು ಶಾಂತವಾಗುವದಿಲ್ಲ, ಆದರೆ ಇದನ್ನು ಉಪವಾಸಕೆಡವುವದರಿಂದ ಇದು ಶಾಂತವಾಗುತ್ತದೆ! ಜ್ಞಾನಿಪುರುಷನು ಆಶೆಯನ್ನು ತ್ಯಜಿಸುವದೇ ಜಾಣತನವು ; ಆದ್ದರಿಂದ ನಾನು ಈ ಆಶೆಯನ್ನು ತ್ಯಜಿಸಿ ಬ್ರಹ್ಮಚಿಂತನ ಮಾಡಬೇಕೆಂತಲೂ, ದ್ವಂದ್ವಾತೀತನೂ, ಮಾಯಾತೀತನೂ ಆಗಿ ಶೇಷಾಯುಷ್ಯವನ್ನು ವನ್ಯಮೃಗಗಳೊಡನೆ ಕಳೆಯಬೇಕೆಂತಲೂ ನಿಶ್ಚಯಿಸಿದ್ದೇನೆ. ನನ್ನ ಹೊರತು ಅನ್ಯವಸ್ತುವು ಇರುತ್ತದೆಂಬ ಜ್ಞಾನವಾದ ಕೂಡಲೆ ಆ ಎರಡನೆಯ ವಸ್ತುವಿನ ಪ್ರಾಪ್ತಿಯ ಆಶೆಯೂ, ಅದು ನನ್ನದೆಂಬ ಅಭಿಮಾನವೂ ಕುತ್ತಿಗೆಯಮೇಲೆ ಕುಳಿತವೆಂದು ತಿಳಿಯಬೇಕು ; ಆದ್ದರಿಂದ ದ್ವಂದ್ವಾತೀತವೂ, ಮಾಯಾತೀತವೂ, ನಿರ್ವಿಕಾರವೂ, ನಿರ್ವಿಕಲ್ಪವೂ ಆದ ಬ್ರಹ್ಮದ ಚಿಂತನವನ್ನು ಏಕನಿಷ್ಠೆಯಿಂದ ಮಾಡುವೆನು. ಕರ್ಮದಿಂದ, ವಾಣಿಯಿಂದ, ಮನಸ್ಸಿನಿಂದ ಭೂತಮಾತ್ರಗಳ ವಿಷಯದ ಪಾಪವನ್ನು ಮಾಡದವನಿಗೆ ಬ್ರಹ್ಮಪ್ರಾಪ್ತಿಯಾಗುವದು. ಅದರಂತೆ, ಎರಡನೆಯವರಿಂದ ಭಯಪಡದವನ, ಹಾಗು ಎರಡನೆಯವರಿಗೆ ಭಯ

ವನ್ನುಂಟುಮಾಡದವನ ಇಚ್ಛಾದ್ವೇಷಗಳ ಲಯವಾಗಿ ಆತನಿಗೆ ಬ್ರಹ್ಮ ಪ್ರಾಪ್ತಿಯಾಗುವದು. ಪುತ್ರಾ, ನಿನ್ನ ಸ್ವಾರ್ಥತ್ಯಾಗದಮೂಲಕ ನಾನು ಸಂತುಷ್ಟನಾಗಿದ್ದೇನೆ. ಇನ್ನು ನಿನ್ನ ಪ್ರಾಯವನ್ನು ನೀನು ತಕ್ಕೊಂಡು ನನ್ನ ಮುಪ್ಪನ್ನು ನನಗೆಕೊಡು. ಕುಲದೀಪಕನಾದ ನೀನು ಸುಖದಿಂದಲೂ, ಧರ್ಮವೃತ್ತಿಯಿಂದಲೂ ಈ ರಾಜ್ಯಕಾರಭಾರವನ್ನು ಬಹುಕಾಲಮಾಡು," ಎಂದುಹೇಳಿ, ಆ ಪಿತೃಭಕ್ತ ಪುರುವಿಗೆ ಪಟ್ಟಾಭಿಷೇಕ ಮಾಡಲು ನಿಶ್ಚಯಿಸಿದನು.

ಹೀಗೆ ಯಯಾತಿಯು ಹಿರಿಯ ಮಕ್ಕಳನ್ನು ಬಿಟ್ಟು ಎಲ್ಲಕ್ಕೂ ಚಿಕ್ಕವನಿಗೆ ರಾಜ್ಯಾಭಿಷೇಕಮಾಡುವದನ್ನು ನೋಡಿ, ಸರ್ವವರ್ಣಗಳ ಪ್ರತಿನಿಧಿಗಳಾದ ಬ್ರಾಹ್ಮಣರು, ಇದು ಅಧರ್ಮವೆಂದು ನಿಷೇಧಿಸಲು, ಯಯಾತಿಯು ಬ್ರಾಹ್ಮಣರನ್ನು ಕುರಿತು—"ಎಲೈ ಪ್ರಮುಖವರ್ಣದವರಾದ ಬ್ರಾಹ್ಮಣರೇ, ನಾನು ಚಿಕ್ಕಮಗನಿಗೆ ರಾಜ್ಯಕೊಡುವ ಕಾರಣವನ್ನು ಹೇಳುವೆನು ಕೇಳಿರಿ. ತಂದೆಯ ಮಾತನ್ನು ಕೇಳದವರು ಮಕ್ಕಳಲ್ಲೆಂದು ಸಂತರ ವಚನವಿರುವದು. ತಾಯಿತಂದೆಗಳ ಮಾತು ಕೇಳುವವನೂ, ಅವರು ಹೇಳಿದಂತೆ ನಡೆಯುವವನೂ, ತಂದೆಯ ಹಿತಮಾಡುವವನೂ, ತಂದೆಯ ಹೊತ್ತಿಗೆ ಬೀಳುವವನೂ ಮಾತ್ರ ನಿಜವಾದಮಗನು. ತಾಯಿತಂದೆಗಳನ್ನು ನರಕದಿಂದ ಉದ್ಧರಿಸುವವನೇ ನಿಜವಾದ ಪುತ್ರನೆಂದು ಸಂತರು ಹೇಳುವದಿಲ್ಲವೆ? ಪುರುವು ಒಬ್ಬನುಮಾತ್ರ ನನ್ನ ಅಪ್ಪಣೆಯನ್ನು ಭಕ್ತಿಯಿಂದ ಪಾಲಿಸಿದ್ದರಿಂದ, ಆತನು ಚಿಕ್ಕವನಾದರೂ ನನ್ನ ತರುವಾಯ ಪಟ್ಟಕ್ಕೆ ಬಾಧ್ಯಸ್ಥನಾಗಿರುವನು. "ನಿನ್ನಮಾತನ್ನು ಕೇಳುವವರಿಗೇ ರಾಜ್ಯವನ್ನು ಕೊಡೆಂ"ದು ಶುಕ್ರಮುನಿಗಳು ನನಗೆ ವರವನ್ನು ಕೊಟ್ಟಿರುವರು; ಆದ್ದರಿಂದ ಎಲ್ಲರೂ ಒಮ್ಮನಸ್ಸಿನಿಂದ ಪುರುವಿಗೇ ರಾಜ್ಯಾಭಿಷೇಕ ಮಾಡಬೇಕೆಂದು ನಿಮಗೆ ನಮ್ರನಾಗಿ ಹೇಳುವೆನು," ಎಂದು ನುಡಿಯಲು, ಎಲ್ಲರೂ ಆತನಮಾತಿಗೆ ಒಪ್ಪಿ ಪುರುವಿಗೆ ರಾಜ್ಯಾಭಿಷೇಕಮಾಡಿದರು. ಬಳಿಕ ಯಯಾತಿಯು ತಾನು ವಾನಪ್ರಸ್ಥಾಶ್ರಮದ ದೀಕ್ಷೆಯನ್ನು ಹೊಂದಿ ತಪಸ್ವಿಗಳಾದ ಬ್ರಾಹ್ಮಣರೊಡನೆ ಅರಣ್ಯಕ್ಕೆ ತೆರಳಿದನು. ಜನಮೇಜಯಾ, ಯದುವಿನಿಂದ ಯಾದವರೂ, ತುರ್ವಸು

ವಿನಿಂದ ಯವನರೂ, ದ್ರುಹ್ಯುವಿನಿಂದ ಭೋಜರೂ, ಅನುವಿನಿಂದ ಮ್ಲೇಂಛರೂ ಉತ್ಪನ್ನರಾದರು. ಪುರುವಿನಿಂದ ಪೌರವರಾದರು. ಇದೇ ಪೌರವಕುಲದಲ್ಲಿ ನಿನ್ನ ಜನ್ಮವಾಗಿರುವದು.

**೮೬ನೇ ಅಧ್ಯಾಯ — ಯಯಾತಿಯತಪಸ್ಸೂ, ಸ್ವರ್ಗಗಮನವೂ:**— ಜನಮೇಜಯಾ, ಯಯಾತಿಯು ಅರಣ್ಯದಲ್ಲಿ ಫಲಮೂಲಗಳನ್ನು ತಿನ್ನುತ್ತ ಬಹುದಿವಸ ವಾನಪ್ರಸ್ಥಾಶ್ರಮದಿಂದ ಇದ್ದು, ಕ್ರೋಧವನ್ನು ಜಯಿಸಿದನು. ಆತನು ವಾನಪ್ರಸ್ಥರಂತೆ ದೇವತೆಗಳನ್ನೂ, ಪಿತೃಗಳನ್ನೂ ತರ್ಪಣದಿಂದಲೂ, ಅಗ್ನಿಯನ್ನು ಆಹುತಿದಾನದಿಂದಲೂ ಸಂತುಷ್ಟರಾಗಮಾಡಿ, ಅತಿಥಿಗಳನ್ನು ವನ್ಯಪದಾರ್ಥಗಳಿಂದ ಸಂತೋಷಪಡಿಸುವನು. ಆ ವನ್ಯಪದಾರ್ಥಗಳನ್ನಾದರೂ ಶಿಲೋಂಛವೃತ್ತಿಯಿಂದ ರಾಜನು ಸಂಪಾದಿಸುತ್ತಿದ್ದನು ಶಿಲವೃತ್ತಿಯೆಂದರೆ, ಪೈರುಕೊಯ್ದುಬಳಿಕ ಹೊಲದಲ್ಲಿ ಬಿದ್ದ ತೆನೆಗಳನ್ನು ಆರಿಸುವದು, ಉಂಛವೃತ್ತಿಯೆಂದರೆ, ಕಣವನ್ನುಮಾಡಿದಬಳಿಕ ಅಲ್ಲಿಬಿದ್ದ ಕಾಳುಗಳನ್ನು ಆರಿಸುವದು. ಈಮೇರೆಗೆ ಆತನು ಒಂದುಸಹಸ್ರವರ್ಷಗಳನ್ನು ಕಳೆದನು. ಆ ಮೇಲೆ ವಾಣಿ ಮನಸ್ಸುಗಳ ನಿಗ್ರಹದಿಂದ ಆತನು ಮೂವತ್ತುವರ್ಷ ಜಲಭಕ್ಷಣ ಮಾಡಿದನು; ಮನಸ್ಸು ಏಕನಿಷ್ಠಮಾಡಿ ಒಂದುವರ್ಷ ವಾಯುಭಕ್ಷಣ ಮಾಡಿದನು; ಬಳಿಕ ಒಂದುವರ್ಷ ಪಂಚಾಗ್ನಿಸಾಧನರೂಪವಾದ ತಪಸ್ಸನ್ನು ಮಾಡಿದನು. ಆರುತಿಂಗಳು ಒಂಟಿಗಾಲಿನಿಂದ ನಿಂತು ವಾಯುಭಕ್ಷಣಮಾಡಿದನು. ಹೀಗೆ ಆ ಪುಣ್ಯಕೀರ್ತಿಯಾದ ರಾಜನು ತನ್ನ ಕೀರ್ತಿದುಂದುಭಿಯ ಧ್ವನಿಯು ಅಂತರಿಕ್ಷ ಪೃಥ್ವಿಗಳನ್ನು ತುಂಬುತ್ತಿರಲು, ಸ್ವರ್ಗಕ್ಕೆ ತೆರಳಿದನು.

**೮೭, ೮೮ನೇ ಅಧ್ಯಾಯಗಳು—ಇಂದ್ರ-ಯಯಾತಿ ಸಂವಾದವೂ, ಯಯಾತಿಪತನವೂ**—ಜನಮೇಜಯಾ, ಹೀಗೆ ತನ್ನ ಪುಣ್ಯದಿಂದ ಸ್ವರ್ಗಲೋಕಕ್ಕೆ ಹೋದ ಯಯಾತಿಯು ದೇವಲೋಕದಲ್ಲಿ ದೇವತೆಗಳಿಂದ ಬಹುಮಾನಿತನಾಗಿ ಇರತೊಡಗಿದನು ಒಮ್ಮೆ ಆತನು ಇಂದ್ರನ ಸಭೆಯಲ್ಲಿ ಕುಳಿತಿರುವಾಗ ಇಂದ್ರನು ಆತನನ್ನು ಕುರಿತು ಸಹಜ ಪ್ರಶ್ನೆಮಾಡುವವನಂತೆ ತೋರಿಸಿ—''ರಾಜಾ, ನೀನು ಪುರುವಿಗೆ ರಾಜ್ಯ

ವನ್ನು ಕೊಟ್ಟ ಬಳಿಕ ಆತನಿಗೆ ಏನು ಉಪದೇಶಮಾಡಿದೆ? ನೀನು ವಿದ್ವಾಂಸನಾದದ್ದರಿಂದ ಅದನ್ನು ಕೇಳುವ ಇಚ್ಛೆಯು ನನಗೆ ಆಗಿದೆ" ಎಂದು ಕೇಳಿದನು. ಇಂದ್ರನ ಇಂಗಿತವನ್ನು ಅರಿಯದೆ ಸ್ವಾಭಿಮಾನದಿಂದ ಪುಷ್ಟನಾದ ಯಯಾತಿಯು, ತಾನು ಮಗನಿಗೆ ಮಾಡಿದ ಉಪದೇಶವನ್ನು ಇಂದ್ರನಮುಂದೆ ಹೀಗೆ ಹೇಳಿದನು—"ಪುತ್ರಾ, ಪುರೂ, ಗಂಗಾ-ಯಮುನೆಗಳ ನಡುವಿನ ಪ್ರದೇಶವು ಭರತಭೂಮಿಯ ಮಧ್ಯವಾಗಿದ್ದು, ಅದನ್ನು ನಾನು ನಿನಗೆ ಕೊಟ್ಟಿರುವೆನು. ನಿನ್ನ ರಾಜ್ಯದ ಸುತ್ತಮುತ್ತಲಿರುವ ರಾಜ್ಯಗಳನ್ನು ನಿನ್ನ ಅಣ್ಣತಮ್ಮಂದಿರು ಆಳುವರು. ಬಾಳಾ, ತಾಪಟ ಸ್ವಭಾವದವರಿಗಿಂತ ಶಾಂತಸ್ವಭಾವದವರು ಶ್ರೇಷ್ಠರು. ಅದರಂತೆ, ತಾಮಸಿಗಳಿಗಿಂತ ಸಹನಶೀಲರು ಶ್ರೇಷ್ಠರು ಅಜ್ಞಾನಿಗಳಿಗಿಂತ ವಿದ್ವಾಂಸರು ಹೆಚ್ಚು ಮಾನ್ಯರಾಗಿರುವರು. ಪ್ರಿಯಪುತ್ರಾ, ತನ್ನಮೇಲೆ ಯಾರಾದರೂ ಸಿಟ್ಟಾದರೆ, ಅಥವಾ ತನ್ನನ್ನು ನಿಂದಿಸಿದರೆ, ತಾನು ತಿರುಗಿ ಒದರಾಡಬಾರದು, ತಿರುಗಿ ನಿಂದಿಸಲೂಬಾರದು; ಯಾಕಂದರೆ, ಸಹನಶೀಲನು ನುಂಗಿಕೊಂಡಸಿಟ್ಟೇ ನಿಂದಕರನ್ನು ಸುಟ್ಟು, ನಿಂದಕರ ಯಾವತ್ತು ಪುಣ್ಯವನ್ನು ಸಂಪಾದಿಸುವದು. ಎರಡನೆಯವರ ಮನಸ್ಸಿಗೆ ಹತ್ತುವಂಥ ಮಾತುಗಳನ್ನು ಆಡಬಾರದು. ಮಂತ್ರ-ತಂತ್ರಗಳ ಯೋಗದಿಂದ ಶತ್ರುಗಳನ್ನು ವಶಮಾಡಿಕೊಳ್ಳುವ ಗೊಡವಿಗೆ ಹೋಗಬಾರದು. ಕಠೋರ ಭಾಷಣಮಾಡುವವನ ಮುಖದಲ್ಲಿ ಸದಾ ಅರಿಷ್ಟವು ವಾಸಿಸುತ್ತಿದ್ದು, ಅಂಥವನ ಮುಖಾವಲೋಕನ ಮಾಡುವದು ಅಮಂಗಲವೆಂದು ತಿಳಿದು, ಅಂಥವರನ್ನು ಕಂಡರೆ ಸಜ್ಜನರು ಬೇಸರಿಯುವರು. ದುಷ್ಟಜನರು ದುರ್ಭಾಷಣದಿಂದ ತನ್ನ ಮಾನಭಂಗ ಮಾಡಿದರೆ ಅದನ್ನು ಸಹಿಸಬೇಕು ಸಾಧು-ಸಂತರ ಆಚರಣೆಯಂತೆ ನಡೆಯಲು ಯತ್ನಿಸಬೇಕು. ತನಗೆ ಅನ್ಯರು ಕಠೋರಭಾಷಣ ಮಾಡಿದಾಗ ಆಗುವ ವ್ಯಥೆಯು, ತಾನು ಅನ್ಯರಿಗೆ ಕಠೋರ ಭಾಷಣಮಾಡಿದಾಗ ಆಗುವದೆಂದು ತಿಳಿದು, ಎರಡನೆಯವರನ್ನು ಬಿರಸು ಮಾತುಗಳಿಂದ ನೋಯಿಸಬಾರದು. ಪರಮೇಶ್ವರನನ್ನು, ಹಾಗು ಜಗತ್ತನ್ನು ವಶಮಾಡಿಕೊಳ್ಳುವ ಇದಕ್ಕಿಂತ ಹೆಚ್ಚಿನ ಸಾಧನವು ಮತ್ತೊಂದಿಲ್ಲ. ಮಾನ್ಯರನ್ನು ಮನ್ನಿಸಬೇಕು; ಯಥಾಶಕ್ತಿ ದಾನ

ಮಾಡಬೇಕು ; ಯಾರನ್ನೂ ಯಾಚಿಸಬಾರದು. ಇದೇ ಸಾತ್ವಿಕ ಮಾರ್ಗವು." ಎಲೈ ದೇವೇಂದ್ರಾ, ನಾನು ಇಂಥ ಒಳ್ಳೆಯ ಉಪದೇಶ ವನ್ನು ನನ್ನ ಮಗನಿಗೆ ಮಾಡಿದೆನು.

ಇಂದ್ರ—ರಾಜಾ, ನೀನು ಗೃಹಸ್ಥಾಶ್ರಮವನ್ನು ಮುಗಿಸಿ, ವಾನ ಪ್ರಸ್ಥದೀಕ್ಷೆಯನ್ನು ಹೊಂದಿ ಅರಣ್ಯಕ್ಕೆ ಹೋಗಿ ತಪಸ್ಸು ಮಾಡತೊಡಗಿ ದೆಯಲ್ಲ ? ಆದರೆ ತಪಸ್ಸಿನಲ್ಲಿ ನೀನು ಯಾರನ್ನು ಸರಿಗಟ್ಟುವೆ ?

ಯಯಾತಿ—ದೇವರಾಜನೇ, ತಪಶ್ಚರ್ಯದಲ್ಲಿ ನನ್ನನ್ನು ಸರಿಗಟ್ಟು ವವರು ದೇವತೆಗಳಲ್ಲಿ, ಮನುಷ್ಯರಲ್ಲಿ, ಗಂಧರ್ವರಲ್ಲಿ, ಮಹರ್ಷಿಗಳಲ್ಲಿ ನನಗೆ ಯಾರೂ ತೋರುವದಿಲ್ಲವು

ಇಂದ್ರ—ರಾಜಾ, ಯಯಾತೀ, ಯಾವತ್ತು ಜೀವಗಳ ಶಕ್ತಿಯ ಯಥಾರ್ಥಜ್ಞಾನವು ನಿನಗಿಲ್ಲದೆ, ನಿನಗಿಂತ ಶ್ರೇಷ್ಠರೂ, ನಿನಗೆ ಸರಿಯಾ ದವರೂ ಆದವರನ್ನು ನಿನಗಿಂತ ಕಡಿಮೆಯವರೆಂದು ಕ್ಷುದ್ರಬುದ್ಧಿಯಿಂದ ತಿಳಿದು, ಅವರ ಅಪಮಾನಮಾಡಿದ್ದರಿಂದ ನಿನ್ನ ಪುಣ್ಯಕ್ಷಯವಾಗಿ ನೀನು ಪತಿತನಾದೆ. ಸ್ವರ್ಗದಲ್ಲಿರುವ ನಿನ್ನ ಮರ್ಯಾದೆಯು ಮುಗಿಯಿತು.

ಯಯಾತಿ (ದುಃಖದಿಂದ)--ದೇವರಾಜನೇ, ದೇವರ್ಷಿ, ಗಂಧರ್ವ, ಮನುಷ್ಯ ಇವರ ಅವಹೇಲನ ಮಾಡಿ ನಾನು ಸ್ವರ್ಗಲೋಕಕ್ಕಂತು ಎರ ವಾದೆನು ; ಆದರೆ ಸಜ್ಜನರ ಲೋಕನಲ್ಲಿಯಾದರೂ ನನ್ನನ್ನು ಇಡಬೇ ಕೆಂದು ಪ್ರಾರ್ಥಿಸುವೆನು.

ಇಂದ್ರ—ರಾಜಾ, ನಿನ್ನ ಇಚ್ಛೆಯಂತೆ ನಿನಗೆ ಸಾಧುಗಳ ಲೋಕವು ಪ್ರಾಪ್ತವಾಗಿ, ಅಲ್ಲಿಯೂ ಮೊದಲಿನಂತೆ ನಿನಗೆ ಪ್ರತಿಷ್ಠೆಯು ಪ್ರಾಪ್ತವಾ ಗುವದು ; ಆದರೆ ಇಲ್ಲಿ ನಡೆದ ಸಂಗತಿಯನ್ನು ಮರೆಯದೆ, ನಿನಗೆ ಸಮಾ ನರಾದವರ, ಹಾಗು ನಿನಗಿಂತ ಹೆಚ್ಚಿನವರ ನಿಂದೆಯನ್ನು ಮಾಡಬೇಡ.

ಬಳಿಕ ಯಯಾತಿಯು ಪವಿತ್ರವಾದ ಇಂದ್ರಲೋಕವನ್ನು ಬಿಟ್ಟು ಕೆಳಗೆ ಇಳಿಯುತ್ತಿರುವಾಗ ಅಷ್ಟಕನೆಂಬ ಧರ್ಮಾತ್ಮನಾದ ಮಹರ್ಷಿಯು ಆತನನ್ನು ಕುರಿತು—"ಎಲೈ ಶ್ರೇಷ್ಠಪುರುಷಾ, ಪ್ರತ್ಯಕ್ಷ ಸೂರ್ಯನಂತೆ ಕೆಳಗೆ ಇಳಿದು ಬರುವವನು ನೀನು ಯಾರು ? ನೀನು ಈಗ ಸಜ್ಜನರ ಸನ್ನಿ ಧಿಯಲ್ಲಿ ಬಂದಿರುತ್ತೀ. ನಿನ್ನ ಮನಸ್ಸಿನಲ್ಲಿ ಅಂಜಿಕೆಯಿದ್ದರೆ ಅದನ್ನು

ಬಿಟ್ಟುಬಿಡು. ಇಲ್ಲಿ ಪ್ರತ್ಯಕ್ಷ ಇಂದ್ರನುಕೂಡ ನಿನ್ನ ಕೂದಲನ್ನು ಕೊಂಕಿಸಲಾರನು. ಅಷ್ಟಾ, ಸಜ್ಜನರ ಯೋಗ್ಯತೆಯು ಬಹುದೊಡ್ಡದು. ಅವರು ಚರಾಚರಸೃಷ್ಟಿಯ ನಿಯಮನಮಾಡುವವರಿರುವರು. ಸ್ವರ್ಗವು ಸುಖಸಾಧನವೆಂಬದು ನಿಜವು; ಆದರೆ ಅದರಪ್ರಾಪ್ತಿಯು ಸಜ್ಜನರಿಗೆ ಆಗದಿದ್ದರೂ, ಅವರು ನಿರಾಧಾರರಾಗುವದಿಲ್ಲ. ತಿರುಗಿ ಸಜ್ಜನರೇ ಸ್ವರ್ಗದ ಜನರಿಗೆ ಆಧಾರಭೂತರಾಗುವರು. ನೀನು ನಮಗೆ ಅತಿಥಿಯಾಗಿರುವದರಿಂದ ಪೂಜ್ಯನಾಗಿರುತ್ತೀ. ತಾಪಕೊಡುವವರಲ್ಲಿ ಅಗ್ನಿಯು ಶ್ರೇಷ್ಠನಾಗಿರುವಂತೆ, ಸಜ್ಜನಸಮುದಾಯದಲ್ಲಿ ಅತಿಥಿಯು ಶ್ರೇಷ್ಠನಾಗಿರುವನು,'' ಅನ್ನಲು ಯಯಾತಿಯು—

ಯಯಾತಿ—ನಾನು ನಹುಷರಾಜನ ಮಗನೂ, ಪುರುರಾಜನ ತಂದೆಯೂ ಆಗಿರುವೆನು. ನನ್ನ ಹೆಸರು ಯಯಾತಿ. ಪ್ರಾಣಿಗಳ ಅಪಮಾನ ಮಾಡಿದ್ದರಿಂದ ಸ್ವರ್ಗದಿಂದ ಪತನಹೊಂದಿ ನಾನು ಕೆಳಗೆ ಇಳಿಯುತ್ತಿರುವೆನು. ನಿಮಗಿಂತ ನಾನು ವಯಸ್ಸಿನಿಂದ ಹೆಚ್ಚಿನವನಾದದ್ದರಿಂದ ನಾನು ನಿಮಗೆ ನಮಸ್ಕಾರಮಾಡಲಿಲ್ಲ. ವಿದ್ಯೆಯಿಂದ, ತಪಶ್ಚರ್ಯದಿಂದ, ವಯಸ್ಸಿನಿಂದ ದೊಡ್ಡವನಾದವನನ್ನು ಬ್ರಾಹ್ಮಣರು ಪೂಜ್ಯನೆಂದು ತಿಳಿಯುವರು.

ಅಷ್ಟಕ—ಕೇವಲ ವಯಸ್ಸಿನಿಂದ ಪೂಜ್ಯತೆಯುಂಟಾಗುವದಿಲ್ಲ ವಿದ್ಯಾ-ತಪಸ್ಸುಗಳು ಹೆಚ್ಚಿದ್ದವನೇ ಬ್ರಾಹ್ಮಣರಿಗೆ ಪೂಜ್ಯನಾಗುವನು.

ಯಯಾತಿ—ಪಾಪದ ಮೂಲವು ಗರ್ವವು. ಗರ್ವವು ನರಕಕ್ಕೆ ಒಯ್ಯುವದರಿಂದ ಸಜ್ಜನರು ಗರ್ವವನ್ನು ತಾಳುವದಿಲ್ಲ. ಅಷ್ಟಕಾ, ನನ್ನ ಬಳಿಯಲ್ಲಿ ಎಷ್ಟೋಂದು ಪುಣ್ಯವಿತ್ತು; ಆದರೆ ಅದೆಲ್ಲ ಗರ್ವದಮೂಲಕ ನಷ್ಟವಾಯಿತು. ಈಗ ಏನು ಮಾಡಿದರೂ ಆ ಪುಣ್ಯವು ತಿರುಗಿ ಬರುವ ಹಾಗಿಲ್ಲ. ಹಿತೇಚ್ಛುವು ನನ್ನ ಈ ಉದಾಹರಣವನ್ನು ಲಕ್ಷದಲ್ಲಿಟ್ಟು ನಡೆಯತಕ್ಕದ್ದು. ಯಜ್ಞಯಾಗಾದಿ ಪುಣ್ಯಕರ್ಮಗಳನ್ನು ಮಾಡಿ ದೇವರನ್ನು ಆರಾಧಿಸುವವನೂ, ಸರ್ವವಿದ್ಯಾಪಾರಂಗತನಾಗಿದ್ದು ವಿನಯಸಂಪನ್ನನಾಗಿರುವವನೂ ನಿಜವಾದ ಧನಿಕರು. ಸುಖದುಃಖಗಳು ದೈವಾಧೀನವಾಗಿರುವದರಿಂದ ಅವುಗಳಿಗಾಗಿ ಹಿಗ್ಗಲೂಬಾರದು, ಕುಗ್ಗಲೂಬಾರದು; ಯಾವಾಗಲೂ ಉದಾಸೀನನಾಗಿರಬೇಕು. ಜರಾಯುಜ, ಸ್ವೇದಜ, ಅಂಡಜ, ಉದ್ಭಿಜ್ಜ

ಮೊದಲಾದ ಪ್ರಾಣಿಗಳೂ, ಕಲ್ಲುಕಟ್ಟಿಗೆ ಮೊದಲಾದ ಜಡಪದಾರ್ಥಗಳೂ ತಮ್ಮ ಪೂರ್ವಜನ್ಮದ ಪಾಪಪುಣ್ಯಗಳು ತೀರಿದಕೂಡಲೆ ತಮ್ಮ ಸ್ಥಿತಿಯಿಂದ ಮುಕ್ತವಾಗುವವು. ಸುಖದುಃಖಗಳು ಸ್ಥಿರವಲ್ಲವೆಂಬದು ನನಗೆ ಗೊತ್ತಿದ್ದದ್ದರಿಂದ, ಅವಕ್ಕಾಗಿ ನನ್ನ ಮನಸ್ಸು ತಳಮಳಿಸುವದಿಲ್ಲ. ಬರಿಯ ಚಿಂತೆಮಾಡುತ್ತ ಕುಳಿತುಕೊಳ್ಳುವದರಿಂದ ಏನೂ ಪ್ರಯೋಜನವಾಗದಿರುವ ಕಾರಣ, ಚಿಂತೆಯ ಪ್ರಸಂಗದಲ್ಲಿ ಎಚ್ಚರದಿಂದಿದ್ದು ಮನಸ್ಸಿಗೆ ಸಂತಾಪವನ್ನು ಆಗಗೊಡಬಾರದು.

ಅಷ್ಟಕ—ಯಯಾತಿರಾಜಾ, ಈ ಜಗತ್ತಿನಲ್ಲಿ ಅನೇಕ ಲೋಕಗಳಿರುವವು. ನೀನು ಯಾವಯಾವ ಲೋಕಗಳಲ್ಲಿ ಎಷ್ಟೆಷ್ಟುದಿವಸ ವಾಸಿಸಿದೆ?

ಯಯಾತಿ—ನಾನು ಮೊದಲು ಈ ಮೃತ್ಯುಲೋಕದಲ್ಲಿ ಸಾರ್ವಭೌಮನಾಗಿದ್ದೆನು. ಆಮೇಲೆ ನಾನು ಎರಡನೆಯ ಲೋಕವನ್ನು ಸಂಪಾದಿಸಿ, ಅಲ್ಲಿ ಒಂದುಸಾವಿರ ವರ್ಷವಿದ್ದೆನು. ಆಮೇಲೆ ಅದಕ್ಕೂ ಶ್ರೇಷ್ಠವಾದ ಇಂದ್ರಲೋಕದಲ್ಲಿ ಒಂದುಸಾವಿರ ವರ್ಷವಿದ್ದೆನು. ಅದಕ್ಕೂ ಶ್ರೇಷ್ಠವಾದ ಬ್ರಹ್ಮಲೋಕದಲ್ಲಿ ಒಂದುಸಾವಿರವರ್ಷವಿದ್ದು ಆಮೇಲೆ ಅವೆಲ್ಲಕ್ಕೂ ಶ್ರೇಷ್ಠವಾದ ದೇವಲೋಕಕ್ಕೆ ಹೋದೆನು. ಅಲ್ಲಿ ದೇವತೆಗಳಂತೆ ನನಗೆ ರೂಪವು ಪ್ರಾಪ್ತವಾಗಲು, ನಂದನವನದಲ್ಲಿ ಇಚ್ಛಿತಭೋಗಗಳನ್ನು ಭೋಗಿಸುತ್ತ, ಬೇಕಾದ ರೂಪಗಳನ್ನು ಧರಿಸುತ್ತ, ಅಪ್ಸರೆಯರೊಡನೆ ವಿಹರಿಸುತ್ತ ಮನಸ್ಸಿಗೆಬಂದಂತೆ ಸುಖಗಳನ್ನು ಭೋಗಿಸುತ್ತಿರಲು, ಹತ್ತುಲಕ್ಷ ವರ್ಷಗಳು ಕಳೆದುಹೋದವು. ಹೀಗೆ ಸುಖಗಳ ಸವಿಹತ್ತಿ ನಾನು ರಮಿಸುತ್ತಿರಲು, ಭಯಂಕರಾಕಾರಧರಿಸಿದ ಒಬ್ಬ ದೇವದೂತನು ಬಂದು-"ನೀನು ಇಲ್ಲಿಂದ ಹೊರಡು" ಎಂದು ಗದ್ದರಿಸಿದನು. ಆಗ ನಾನು ಅಲ್ಲಿಂದ ಹೊರಟುಬರುವಾಗ, "ಸಜ್ಜನರ ಭೂಮಿಯಲ್ಲಾದರೂ ನಾನು ಬೀಳಬಾರದೇ," ಎಂದು ಯೋಚಿಸುತ್ತಿದ್ದೆನು. ಹೋಮಧೂಮದ ವಾಸನೆಯನ್ನು ನೋಡಿದರೆ, ಆ ಸಜ್ಜನರ ಭೂಮಿಯು ಇದೇ ಎನ್ನುವಂತೆ ಕಾಣುತ್ತದೆ. ಈ ಭೂಮಿಗೆ ನಾನು ಆನಂದದಿಂದ ಬಂದೆನು.

ಅಷ್ಟಕ—ಆ ಶ್ರೇಷ್ಠ ದೇವಲೋಕವನ್ನು ಬಿಟ್ಟು ನೀನೇಕೆಬಂದೆ.

ಯಯಾತಿ— ಈ ಲೋಕದಲ್ಲಿ ದ್ರವ್ಯತೀರಿದವನನ್ನು ಆಪ್ತೇಷ್ಟರು ಪೂಜಿಸುವಂತೆ, ಈಶ್ವರಸಿಂದ ಸಹಿತವಾದ ದೇವಗಣವೂ ಮನುಷ್ಯನ ಪುಣ್ಯವು ತೀರಿದಕೂಡಲೆ ಅವನನ್ನು ಸ್ವರ್ಗದಿಂದ ದೂಡುವದು !

ಅಷ್ಟಕ— ಅಲ್ಲಿ ಪುಣ್ಯಕ್ಷಯವು ಯಾತರಿಂದಾಗುತ್ತದೆ ?

ಯಯಾತಿ— ಆತ್ಮಸ್ತುತಿ-ಪರನಿಂದೆಗಳನ್ನು ಕುರಿತು ಯಾವಾಗಲೂ ಒಟಗುಟ್ಟುವವರ ಪುಣ್ಯವು ಕ್ಷೀಣವಾಗಿ ಅವರು ಭೌಮವೆಂಬ ನರಕದಲ್ಲಿ ಬೀಳುವರು. ಈ ಭೂಮಿಯಲ್ಲಿ ನರಿ ಹದ್ದು ಮೊದಲಾದವು ಹರಿದು ತಿನ್ನುವದಕ್ಕಾಗಿಯೇ ಬಹುತರ ಅವರಶರೀರದ ವ್ಯಯವಾಗುತ್ತಿದ್ದು, ಅವರ ಆ ದೇಹದ ಬೆಳವಣಿಗೆಯಾದರೂ ಹದ್ದು ಮೊದಲಾದವು ಹರಿದು ತಿನ್ನುವದಕ್ಕಾಗಿಯೇ ಆಗುತ್ತಿರುತ್ತದೆ.

ಅಷ್ಟಕ— ಹದ್ದು-ನರಿಗಳು ದೇಹವನ್ನು ಹರಿದು ತಿನ್ನುತ್ತಿರುವಾಗ ಅವರು ಬದುಕುವದು ಹೇಗೆ ? ಅವರ ಅಸ್ತಿತ್ವವಾದರೂ ಹೇಗೆ ಉಳಿಯುವದು ?

ಯಯಾತಿ— ಪಶುಪಕ್ಷಿಗಳ ಭಕ್ಷ್ಯಸ್ಥಾನದಲ್ಲಿ ಬಿದ್ದು ದೇಹದ ನಾಶವಾದರೂ, ಆ ದೇಹದೊಡನೆ ಆತ್ಮದ ನಾಶವಾಗದಿರುವದರಿಂದ, ಪೂರ್ವಸಂಚಿತಕರ್ಮದಂತೆ ಹೊಸದೇಹಪ್ರಾಪ್ತಿಯಾಗುವದು ಬಳಿಕ ತಾಯಿಯ ಹೊಟ್ಟೆಯಲ್ಲಿ ಆ ದೇಹದ ಬೆಳವಣಿಗೆಯು ಪೂರ್ಣವಾದನಂತರ ಯಾವತ್ತು ಜನರ ಕಣ್ಣಿಗೆ ವ್ಯಕ್ತವಾಗಿ ಕಾಣುವಂತೆ ಭೂಮಿಯಲ್ಲಿ ಜೀವರು ಸಂಚರಿಸತೊಡಗುವರ ಕರ್ಮಭೂಮಿಯೆನಿಸುವ ಈ ಭೂಲೋಕದಲ್ಲಿ ಸತ್ಕರ್ಮಮಾಡಲಿಕ್ಕೆ ಅನುಕೂಲವಿದ್ದರೂ ಜೀವರು ತಮ್ಮ ಹಿತವನ್ನು ಮಾಡಿಕೊಳ್ಳದೆ, ದುಷ್ಕರ್ಮಮಾಡುತ್ತ ವರ್ಷಗಟ್ಟಲೆ ವ್ಯರ್ಥಕಾಲಹರಣಮಾಡಲು, ಪುನಃ ಭೌಮನಾಮಕ ನರಕವು ಅವರಿಗೆಪ್ರಾಪ್ತವಾಗುವದು. ಸ್ವರ್ಗಕ್ಕೆಹೋದರೂ ಈ ಭೂಲೋಕವಾಸರೂಪನರಕವು ತಪ್ಪುವದಿಲ್ಲ. ಯಾಕಂದರೆ, ಅಲ್ಲಿ ಸ್ವರ್ಗದಲ್ಲಿ ಒಂದುಲಕ್ಷ ನಲವತ್ತುಸಾವಿರ ವರ್ಷವಿದ್ದಬಳಿಕ ಪುನಃ ಈ ಭೂಲೋಕಕ್ಕೆ, ಅಂದರೆ ಭೌಮವೆಂಬ ನರಕಕ್ಕೆ ತಿರುಗಿ ಬರಬೇಕಾಗುತ್ತದೆ. ಇಲ್ಲಿ ಪುನಃ ಹೆಂಡಿರುಮಕ್ಕಳು ಮೊದಲಾದ ರೂಪಗಳನ್ನು ಧರಿಸಿದ ತೀಕ್ಷ್ಣಕೋರೆದಾಡೆಯ ಭಯಂಕರ ರಾಕ್ಷಸರು—"ನನಗೆ ಅದುಬೇಕು, ನನಗೆ ಇದುಬೇಕು" ಎಂದು ತೊಂದರೆಕೊಡುತ್ತ ಹರಿಯತೊಡಗುವರು.

ಅಷ್ಟಕ—ಅಷ್ಟುಮೇಲಿಂದ ಬೀಳುವಾಗ ಛಿನ್ನವಿಚ್ಛಿನ್ನವಾಗದೆ ಜೀವರು ಬದುಕುವದಾದರೂ ಹೇಗೆ? ಅವರ ಇಂದ್ರಿಯಗಳು ನಷ್ಟವಾಗದೆ ಹೇಗೆ ಉಳಿಯುವವು? ಗರ್ಭವಾಸವು ಹೇಗೆ ಪ್ರಾಪ್ತವಾಗುವದು?

ಯಯಾತಿ—ಆಕಾಶದಿಂದ ಬೀಳುತ್ತಿರುವವರ ದೇಹವು ಜಲರೂಪವಾಗುವದು. ಆ ಜಲರೂಪಕ್ಕೆ "ಅಸ್ರ"ವೆನ್ನುವರು. ಈ ಅಸ್ರವು ಪುನರ್ಜನ್ಮತಾಳುವ ಜೀವರ ಪೂರ್ವರೂಪವು. ಮುಂದೆ ಪೂರ್ವಕರ್ಮಸಂಚಿತವಿದ್ದಂತೆ, ಹೂಗಳಿಂದ ಕಾಯಿಗಳಾಗುವ ಚಂದದಿಂದ ಆ ಅಸ್ರವು ರೇತಸ್ಸು ಆಗುವದು. ಆ ರೇತಸ್ಸು ಆಕಾಶದಿಂದ ವಾಯುವಿನಲ್ಲಿ, ವಾಯುವಿನಿಂದ ಅಗ್ನಿಯಲ್ಲಿ, ಅಗ್ನಿಯಿಂದ ಜಲದಲ್ಲಿ, ಜಲದಿಂದ ಪೃಥ್ವಿಯಲ್ಲಿ, ಪೃಥ್ವಿಯಿಂದ ವನಸ್ಪತಿಯಲ್ಲಿ ಹೀಗೆ ಪರಂಪರೆಯಿಂದ ಪುರುಷಪ್ರಾಣಿಗೆ ಸಂಬಂಧಿಸುತ್ತದೆ ಮುಂದೆ ಆ ಪುರುಷನ ದ್ವಾರದಿಂದ ಆ ರೇತಸ್ಸು ಸ್ತ್ರೀಯರ ಗರ್ಭಾಶಯದಲ್ಲಿ ಸೇರಿತೆಂದರೆ, ಅದರ ಗರ್ಭವು ಉಂಟಾಗುವದು. ಈ ಮೇರೆಗೆ ಮನುಷ್ಯ, ಪಶು, ಕ್ರಿಮಿ, ಕೀಟ ಮೊದಲಾದ ಎಲ್ಲ ಪ್ರಾಣಿಗಳ ಗರ್ಭೋತ್ಪತ್ತಿಯ ಸಂಗತಿಯು ಇರುವದು.

ಅಷ್ಟಕ—ರಾಜಾ, ಈ ಜೀವನು ಮನುಷ್ಯಯೋನಿಯಲ್ಲಿ ಹುಟ್ಟುವಾಗ ತನ್ನ ಪೂರ್ವದ ಶರೀರದಿಂದಲೇ ಹುಟ್ಟುವನೋ, ಅಥವಾ ಬೇರೆ ಶರೀರದಿಂದ ಹುಟ್ಟುವನೋ ನನಗೆಹೇಳು. ಬೇರೆಬೇರೆ ಪ್ರಕಾರದ ದೇಹಗಳನ್ನು ಧರಿಸುತ್ತಿದ್ದರೆ ಅವು ಅವನಿಗೆ ಹೇಗೆ ಪ್ರಾಪ್ತವಾಗುವವು? ಇಂದ್ರಿಯಗಳು ಅವನಿಗೆ ಹೇಗೆ ಅಂಟಿಕೊಳ್ಳುವವು?

ಯಯಾತಿ—ಪೂರ್ವಕರ್ಮಸಂಚಿತವಿದ್ದಂತೆ ಬೇರೆಬೇರೆ ಶರೀರಗಳು ಜೀವನಿಗೆ ಪ್ರಾಪ್ತವಾಗುವವು. ಪುಷ್ಪರಸದ ಚಂದದಿಂದ ಕಾರ್ಯಕಾರಣಸಂಬಂಧವು ಒದಗಿ, ಪುರುಷನ ರೇತಸ್ಸನ್ನು ವಾಯುವು ಸ್ತ್ರೀಯ ಗರ್ಭಾಶಯದೊಳಗಿನ ರಜದಕಡೆಗೆ ಎಳೆದೊಯ್ಯುವದು. ಅಲ್ಲಿ ಆ ವಾಯುವಿಗೆ ಸೂಕ್ಷ್ಮತತ್ವಗಳ ಸಂಬಂಧವುಂಟಾಗುವದರಿಂದ, ಗರ್ಭವನ್ನು ಮೆಲ್ಲಮೆಲ್ಲನೆ ಬೆಳಿಸುವ ಸಾಮರ್ಥ್ಯವು ಅದರಲ್ಲಿ ಉಂಟಾಗುತ್ತದೆ. ಹೀಗೆ ಪೂರ್ಣ ಬೆಳವಣಿಗೆ ಹೊಂದಿದ ಗರ್ಭವು, ಗರ್ಭಾಶಯದಿಂದ ಹೊರಬಿದ್ದಕೂಡಲೆ ಪೂರ್ವದ ವಾಸನಾ ಸಂಬಂಧವಿರುವದರಿಂದ "ನಾನು ದೇಹಧಾರಿಮನು

ಷ್ಯನು'' ಎಂಬ ಅಭಿಮಾನವು ಉತ್ಪನ್ನವಾಗುತ್ತದೆ. ಬಳಿಕ ಆ ದೇಹಧಾರೀ ಜೀವನಿಗೆ ಆತನ ಕಿವಿಗಳಿಂದ ಶಬ್ದದ, ಕಣ್ಣುಗಳಿಂದ ರೂಪದ, ಮೂಗಿನಿಂದ ವಾಸನೆಯ, ನಾಲಿಗೆಯಿಂದ ರುಚಿಯ, ಚರ್ಮದಿಂದ ಸ್ಪರ್ಶದ, ಮನಸ್ಸಿನಿಂದ ಭಾವದ ಜ್ಞಾನವಾಗುವದು ; ಆದರೆ ಅಷ್ಟಕಾ, ಜೀವನಿಗೆ ಇಂದ್ರಿಯಗಳಿಂದ ಬಾಹ್ಯವಸ್ತುಗಳ ಜ್ಞಾನವಾಗುತ್ತದೆನ್ನುವ ಹಾಗೆ ತೋರುವದು ಕೇವಲ ಭ್ರಾಂತಿಯೆಂಬದನ್ನು ಚನ್ನಾಗಿ ಲಕ್ಷದಲ್ಲಿಡು ; ಯಾಕಂದರೆ ಸರ್ವವ್ಯಾಪಿಯಾದ ಜೀವನಿಗೆ ಕಣ್ಣು ಕಿವಿ ಮೊದಲಾದ ಉಪಕರಣಗಳ ಅವಶ್ಯವಿಲ್ಲ

ಅಷ್ಟಕ—ಮನುಷ್ಯನು ಸತ್ತನೆಂದರೆ ಅವನ ದೇಹವನ್ನು ಸುಡುವರು, ಅಥವಾ ಹುಗಿಯುವರು, ಅಥವಾ ಆ ದೇಹವು ಪಶು-ಪಕ್ಷಿಗಳ ಭಕ್ಷ್ಯಸ್ಥಾನದಲ್ಲಿ ಬೀಳುವದು. ಹೀಗೆ ದೇಹದ ಸಮೂಲ ನಾಶವಾದಬಳಿಕ ಜೀವನು ತನ್ನ ಅಸ್ತಿತ್ವವನ್ನು ಯಾವ ಸಾಧನದಿಂದ ತನ್ನ ಅನುಭವಕ್ಕೆ ತಂದುಕೊಳ್ಳುವನು ?

ಯಯಾತಿ—ಎಲೈ ಪುರುಷಶ್ರೇಷ್ಠಾ, ದೇಹದ ನಾಶವಾದರೂ, ನಿದ್ದೆ ಹೋದಮನುಷ್ಯನಂತೆ ಜೀವನ ಪ್ರಾಣಗಳು, ಹಾಗು ಶಬ್ದವು ಅವನಸಂಗಡ ಇದ್ದೇ ಇರುವವು. ಆಮೇಲೆ ಆ ಜೀವನು ತನ್ನ ಪುಣ್ಯವು ಹೆಚ್ಚಿಇದ್ದರೆ ಪುಣ್ಯವಂತಕುಲದಲ್ಲಿ, ಪಾಪವು ವಿಶೇಷವಿದ್ದರೆ ಪಾಪಿಷ್ಠಕುಲದಲ್ಲಿ, ಕೇವಲ ಪಾಪಿಯಾಗಿದ್ದರೆ ಹುಳ ಹುಪ್ಪಡಿ ಮೊದಲಾದವುಗಳಲ್ಲಿ ಹುಟ್ಟುವನು.

ಅಷ್ಟಕ—ರಾಜಶ್ರೇಷ್ಠಾ, ಏನುಮಾಡಿದರೆ ಮನುಷ್ಯನಿಗೆ ಉತ್ತಮ ಲೋಕವು ಪ್ರಾಪ್ತವಾಗುತ್ತದೆ? ತಪಸ್ಸುಮಾಡಬೇಕೋ ಉಪಾಸನೆ ಮಾಡಬೇಕೋ ?

ಯಯಾತಿ—ತಪಸ್ಸು, ದಾನ, ಶಮ, ದಮ, ಲಜ್ಜಾ, ಸರಳತನ, ದಯಾ, ಇವು ಏಳು ಸ್ವರ್ಗಲೋಕದ ಬಾಗಿಲುಗಳಾಗಿರುವವು, ಆದರೆ ಮನುಷ್ಯರು ಅಜ್ಞಾನದ ಹೊಡತಕ್ಕೆಸಿಕ್ಕಿ, ಅಹಂಕಾರವಶರಾಗಿ ತಮ್ಮ ನಾಶಮಾಡಿಕೊಳ್ಳುವರೆಂದು ಸಜ್ಜನರು ಹೇಳುವರು. ಅಹಂಕಾರದ ಮೂಲಕ ಮನುಷ್ಯನ ಅಧ್ಯಯನದ ಪರ್ಯವಸಾನವು ಗರ್ವದಲ್ಲಿ ಆಗು

ವದು. ಆಮೇಲೆ ಆತನು, ತಾನು ಸರ್ವಜ್ಞಪಂಡಿತನೆಂದು ತಿಳಿದು ವಾದದಿಂದ ಅನ್ಯರ ಮಾನಖಂಡನಮಾಡಿ ಅಪಕೀರ್ತಿಪಡೆದು ಸ್ವರ್ಗಕ್ಕೆ ಎರವಾಗುವನು. ಅಗ್ನಿಹೋತ್ರ, ಮೌನ, ಅಧ್ಯಯನ, ಯಜ್ಞ ಎಂಬ ಈ ನಾಲ್ಕುಪ್ರಕಾರದ ಕರ್ಮಗಳನ್ನು ಅಭಿಮಾನರಹಿತರಾಗಿ ಮಾಡಿದರೆ, ಅವು ಮನುಷ್ಯನನ್ನು ಭವಸಾಗರದ ಭಯದಿಂದ ಮುಕ್ತಮಾಡುವವು ಅವನ್ನೇ "ನಾನು ಮಾಡುವವನು" ಎಂಬ ಅಭಿಮಾನದಿಂದ ಮಾಡಿದರೆ, ಅವು ಭವಬಂಧನಕ್ಕೆ, ಅಂದರೆ ಪುನರ್ಜನ್ಮಕ್ಕೆ ಕಾರಣವಾಗಿ ಭಯವನ್ನುಂಟುಮಾಡುವವು; ಆದ್ದರಿಂದ ಅನ್ಯರು ತನ್ನನ್ನು ಮನ್ನಿಸಿದರೆ ಆನಂದಪಡಬಾರದು, ಅವಮಾನಪಡಿಸಿದರೆ ಸಂತಾಪಪಡಬಾರದು. ಈ ಲೋಕದಲ್ಲಿ ಸಜ್ಜನರೇ ಸಜ್ಜನರನ್ನು ಮನ್ನಿಸುವರು; ಯಾಕಂದರೆ ಅವರಿಗೆ ಅವರ ಯೋಗ್ಯತೆಯು ಗೊತ್ತಾಗುವದು. ದುಷ್ಟರಿಗೆ ಒಳ್ಳೆಯ ಬುದ್ಧಿಯು ಆಗುವದೇ ಇಲ್ಲ. "ನೋಡಿರಿ, ನಾನು ದಾನಮಾಡುವೆನು" "ನೋಡಿರಿ, ನಾನು ಯಜ್ಞಮಾಡುವೆನು" "ನೋಡಿರಿ, ನಾನು ಅಧ್ಯಯನಮಾಡುವೆನು" "ನೋಡಿರಿ, ನಾನು ವ್ರತಮಾಡುವೆನು." ಎಂಬ ದಾಂಭಿಕವೃತ್ತಿಯಿಂದ ಮಾಡಿದ ಕರ್ಮಗಳು ಭಯಪ್ರದಗಳಾಗುವವು. ವಿಚಾರಿಗಳೂ, ಜಾಣರೂ ಆದವರು ಅನಾದಿಪರಮಾತ್ಮನನ್ನು ಸರ್ವಜಗತ್ತಿನ ಆಧಾರವೆಂದು ತಿಳಿದು, ಆತನನ್ನು ತಮ್ಮ ಮನೋರೂಪಮಾರ್ಗದಲ್ಲಿ ತರುಬಿ ನಿಲ್ಲಿಸಿ, ಆತನನ್ನು ಯಾವಾಗಲೂ ಚಿಂತಿಸಿದರೆ, ಅವರು ಆ ಪರಮಾತ್ಮನ ಸ್ವರೂಪದಲ್ಲಿ ಕೂಡಿಹೋಗುವರು. ಅವರಿಗೆ ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ಉತ್ತಮಪ್ರಕಾರದ ಶಾಂತಿಯು ದೊರೆಯುವದು; ಆದ್ದರಿಂದ ಇದೇವೃತ್ತಿಯಿಂದ ನೀನು ನಡೆದುಕೊಳ್ಳಬೇಕು.

ಅಷ್ಟಕ--ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಿ ಇವರ ಧರ್ಮಗಳು ಯಾವವು?

ಯಯಾತಿ—ಗುರುವು ಕರೆದಾಗ ಕಾರ್ಯಗಳನ್ನು ಹೇಳಿಸಿಕೊಳ್ಳುವದು, ಗುರುವು ಹೇಳುವ ಮೊದಲೇ ಕೆಲಸಮಾಡಿಬಿಡುವದು, ಗುರುವಿಗಿಂತ ಮೊದಲೇ ಮಲಗಿ ಏಳುವದು, ಗುರುವು ಮಲಗಿದಬಳಿಕ ಮಲಗುವದು, ವೃತ್ತಿಯನ್ನು ಸೌಮ್ಯವಾಗಿ ಇಟ್ಟುಕೊಳ್ಳುವದು, ಇಂದ್ರಿಯಗಳನ್ನು

ಸ್ವಾಧೀನದಲ್ಲಿಟ್ಟುಕೊಳ್ಳುವದು, ನಿಶ್ಚಯದಿಂದ ಚಲಿಸದಿರುವದು, ಎಚ್ಚರ ದಿಂದ ಇರುವದು, ತನ್ನ ವ್ಯಾಸಂಗತತ್ಪರನಾಗಿರುವದು ಇವು ಬ್ರಹ್ಮಚರ್ಯಧರ್ಮಗಳು. ಇವುಗಳಂತೆ ನಡೆಯುವ ಬ್ರಹ್ಮಚಾರಿಯು ತನ್ನ ಧರ್ಮದ ಫಲವನ್ನು ಪಡೆಯುವನು. ನಿಜವಾದ ಹಾದಿಯಿಂದ ದ್ರವ್ಯ ಸಂಪಾದಿಸಿ, ಅದನ್ನು ಯಜ್ಞಕ್ಕಾಗಿ ವೆಚ್ಚಮಾಡುವದು, ಸತ್ಕಾರಪೂರ್ವಕವಾಗಿ ಅತಿಥಿಗೆ ಊಟಕ್ಕೆಹಾಕುವದು, ಎರಡನೆಯವರ ವಸ್ತುವನ್ನು ಅವರು ಕೊಟ್ಟಹೊರತು ತಕ್ಕೊಳ್ಳದಿರುವದು ಇವು ಗೃಹಸ್ಥಾಶ್ರಮದ ಧರ್ಮಗಳು. ತನ್ನ ಕಷ್ಟದಿಂದ ಸಂಪಾದಿಸಿದ ದ್ರವ್ಯದಿಂದ ತನ್ನ ನಿರ್ವಾಹ ಸಾಗಿಸುವದು, ಪಾಪದಿಂದ ನಿರ್ಲಿಪ್ತವಾಗಿರುವದು, ಎರಡನೆಯವರಿಗೆ ಸಹಾಯಮಾಡುವದು, ಎರಡನೆಯವರನ್ನು ನೋಯಿಸದಿರುವದು, ಆಹಾರ-ಉದ್ಯೋಗಗಳನ್ನು ಮಿತಿಯಿಂದ ಮಾಡುವದು ಇವು ವಾನಪ್ರಸ್ಥರ ಧರ್ಮಗಳು. ಮಸಾಲೆಹಾಕಿದ ಅನ್ನವನ್ನೂ, ಪಲ್ಲಂಗ. ಗಾದಿ ಮೊದಲಾದ ಪದಾರ್ಥಗಳ ಉಪಭೋಗವನ್ನೂ ಸ್ವೀಕರಿಸದಿರುವದು, ಸಾತ್ವಿಕ ಗುಣವನ್ನು ತಾಳುವದು, ಇಂದ್ರಿಯಗಳನ್ನು ಸ್ವಾಧೀನದಲ್ಲಿಟ್ಟುಕೊಳ್ಳುವದು, ಯಾತರ ಲೋಭವನ್ನೂ ತಾಳದಿರುವದು, ಮನೆಯಲ್ಲಿ ಮಲಗದಿರುವದು, ಒಬ್ಬನೇ ಇದ್ದು ನಿತ್ಯ ಅಲ್ಪಸ್ವಲ್ಪ ಪ್ರವಾಸಮಾಡುತ್ತ ಅನೇಕ ದೇಶಗಳನ್ನು ತಿರುಗುವದು ಇವು ಸನ್ಯಾಸಧರ್ಮಗಳು. ಐಹಿಕ ವಿಷಯಗಳು ತುಚ್ಛನಾಗಿ ತೋರಿ, ಅವುಗಳ ಸುಖೇಚ್ಛೆಯು ಉಂಟಾಗದಾಗಲೇ ಸನ್ಯಾಸವನ್ನು ಗ್ರಹಣಮಾಡಿ ಅರಣ್ಯವಾಸಮಾಡಲು ಯತ್ನಿಸಬೇಕು. ಸನ್ಯಾಸಾಶ್ರಮದ ಯೋಗ್ಯತೆಯು ಬಹುದೊಡ್ಡದು ; ಯಾಕಂದರೆ, 'ಸನ್ಯಾಸಿಯು ಅರಣ್ಯದಲ್ಲಿ ಹೋದನೆಂದರೆ, ಅವನ ಶರೀರದೊಳಗಿನ ಎಲ್ಲ ಧಾತುಗಳು ತಮ್ಮ ತಮ್ಮ ಸೂಕ್ಷ್ಮಸ್ವರೂಪದಲ್ಲಿ ಕೂಡಿಕೊಂಡು, ಅವೆಲ್ಲವುಗಳ ಪರ್ಯವಸಾನವು ಸುಕೃತದಲ್ಲಿ, ಅಂದರೆ ಚಿದಾನಂದಸ್ವರೂಪದಲ್ಲಿ ಆಗುತ್ತದೆ. ಅದರ ಯೋಗದಿಂದ ಆತನು ತನ್ನ ಮೊದಲಿನ ಹತ್ತು ಪೀಳಿಗೆಗಳನ್ನೂ, ತನ್ನ ತರುವಾಯದ ಹತ್ತು ಪೀಳಿಗೆಗಳನ್ನೂ, ತನ್ನನ್ನೂ ಹೀಗೆ ಇಪ್ಪತ್ತೊಂದು ಪೀಳಿಗೆಗಳನ್ನು ಮುಕ್ತಮಾಡುವನು.

ಅಷ್ಟಕ— ಮೋಕ್ಷಾಧಿಕಾರಿಯಾದ ನಿಜವಾದ ಸನ್ಯಾಸಿಯ ಲಕ್ಷಣಗಳನ್ನು ನನಗೆ ಹೇಳು.

ಯಯಾತಿ— ಸನ್ಯಾಸಿಯು ಅರಣ್ಯದಲ್ಲಿದ್ದು ಊರೊಳಗಿನ ಪದಾರ್ಥಗಳನ್ನು ಇಚ್ಛಿಸಬಾರದು, ಅಂದರೆ ಆತನು ಅರಣ್ಯದಲ್ಲಿದ್ದರೂ ಊರು ಆತನ ಸನಿಯದಲ್ಲಿದ್ದ ಹಾಗಾಯಿತು. ಊರಲ್ಲಿದ್ದ ಸನ್ಯಾಸಿಯು ಬೆಂಕಿಯನ್ನು ಇಚ್ಛಿಸದಿದ್ದರೆ, ಮನೆಯಲ್ಲಿರದಿದ್ದರೆ, ತನ್ನ ಮನೆತನದ ಅಥವಾ ತನ್ನ ಗುರುಗಳ ಮನೆತನದ ಸಾಂಪ್ರದಾಯಗಳನ್ನು ಪಾಲಿಸದಿದ್ದರೆ, ಗುಪ್ತಸ್ಥಳವು ಮುಚ್ಚುವಮಟ್ಟಿಗೆ ವಸ್ತ್ರಗಳನ್ನು ಧರಿಸುತ್ತಿದ್ದರೆ, ಪ್ರಾಣಧಾರಣದ ಮಟ್ಟಿಗೆ ಅನ್ನಗ್ರಹಣಮಾಡುತ್ತಿದ್ದರೆ ಆತನು ಊರಲ್ಲಿದ್ದರೂ ಅರಣ್ಯವು ಆತನ ಸನಿಯದಲ್ಲಿದ್ದ ಹಾಗಾಯಿತು. ಯಾವತ್ತು ವಾಸನೆಗಳನ್ನೂ, ಕರ್ಮಗಳನ್ನೂ ಬಿಟ್ಟುಕೊಟ್ಟು, ಇಂದ್ರಿಯಗಳನ್ನು ಸ್ವಾಧೀನದಲ್ಲಿಟ್ಟುಕೊಳ್ಳುವವನೂ, ಬ್ರಹ್ಮಚಿಂತನದಲ್ಲಿ ಮಗ್ನನಾಗಿರುವದರಿಂದ ಮೌನಧಾರಣಮಾಡಿದವನೂ ಮೋಕ್ಷರೂಪಸಿದ್ಧಿಯನ್ನು ಸಂಪಾದಿಸುವನು. ಶುದ್ಧವಾದ ಆಹಾರ, ಅಹಿಂಸೆ, ಚಿತ್ತಶುದ್ಧಿ, ದಮೆ, ವಾಸನಾಕ್ಷಯ, ಪವಿತ್ರಕರ್ಮ ಇವುಗಳುಳ್ಳ ಮುನಿಯು ಯಾರಿಗೆ ಮಾನ್ಯನಾಗಲಿಕ್ಕಿಲ್ಲ? ತಪಸ್ಸಿನಿಂದ ಸೊರಗಿದವನೂ, ಸುಖ-ದುಃಖಗಳ ಭೇದಭಾವವಿಲ್ಲದಾಗಿ ಬ್ರಹ್ಮಚಿಂತನ ನಿಮಗ್ನನಾದದ್ದರಿಂದ ಮೌನಿಯಾಗಿರುವವನೂ ಆದ ಮುನಿಯು ಈ ಲೋಕವನ್ನೇ ಏಕೆ, ಸ್ವರ್ಗಲೋಕವನ್ನೂ ಗೆಲ್ಲುವನು! ಸವಿರುಚಿನೋಡದೆ ದೊರೆತ ಅನ್ನವನ್ನು ಉಣ್ಣುವವನಿಗೆ ಯಾವತ್ತು ಲೋಕವು ಆತ್ಮಸ್ವರೂಪವಾಗಿ ತೋರುವದು.

ಅಷ್ಟಕ—ರಾಜಾ, ಮೋಕ್ಷವನ್ನು ಯೋಗಿಗಳು ಮೊದಲು ಸಂಪಾದಿಸುವರೋ, ಜ್ಞಾನಿಗಳು ಮೊದಲು ಸಂಪಾದಿಸುವರೋ?

ಯಯಾತಿ— ಜ್ಞಾನಸಂಪನ್ನ ಭಿಕ್ಷುವಿಗೆ ಮೋಕ್ಷವು ಮೊದಲು ದೊರೆಯುವದು; ಯಾಕಂದರೆ, ಯಥಾಸಾಂಗ ಯಾವತ್ತು ಕರ್ಮಗಳನ್ನು ಮಾಡುವ ಗೃಹಸ್ಥರಲ್ಲಿ ಆತನು ಇರುತ್ತಿದ್ದರೂ, ಆತನ ವೃತ್ತಿಯು ಯಾವತ್ತು ಐಹಿಕ ವಿಷಯಸುಖಗಳಿಂದ ಅಲಿಪ್ತವಾಗಿರುವ ಕಾರಣ, ಆತನಿಗೆ ಮನೆಯು ಇದ್ದೂ ಇಲ್ಲದಾಗೆಯೇ ಸರಿ. ಮನೆಯ ಸಂಬಂಧದ ಯಾವ ಸುಖದುಃಖದ ಪರಿಣಾಮವೂ ಆತನ ಮೇಲೆ ಆಗುವದಿಲ್ಲ. ಜಗತ್ತಿನ ಎಲ್ಲ

ಸುಖದುಃಖಗಳು ಅಶಾಶ್ವತವೆಂಬ ಜ್ಞಾನವು ಆತನಿಗೆ ಆಗಿರುತ್ತದೆ ; ಆದರೆ ಯೋಗಿಯಮಾತು ಹಾಗಲ್ಲ. ಯೋಗಾಭ್ಯಾಸಕ್ಕೆ ಬೇಕಾಗುವಷ್ಟು ಕಾಲವು ಯೋಗಿಗೆ ಒಂದುಜನ್ಮದಲ್ಲಿ ದೊರೆತೀತೆಂಬ ನಿಯಮವಿಲ್ಲ ; ದೊರೆತರೂ ಯೋಗಭ್ರಷ್ಟವಾಗುವ ಅಂಜಿಕೆಯು ಆತನಿಗಿರುತ್ತದೆ ಯೋಗಭ್ರಷ್ಟ ನಾಗಿ ಆತನು ಐಹಿಕಸುಖಗಳ ಬೆನ್ನುಹತ್ತಿದನೆಂದರೆ, ಪುನಃ ದುಃಖವಾಗು ವದು ; ಆದರೂ ಆತನು ಕೃತಕರ್ಮಕ್ಕಾಗಿ ಪಶ್ಚಾತ್ತಾಪಪಡುವದರಿಂದ, ಎರಡನೆಯ ಜನ್ಮದಲ್ಲಿಯೂ ಆತನು ಪೂರ್ವಾಭ್ಯಾಸಂಗವನ್ನೇ ಸಾಗಿಸುವನು; ಆದ್ದರಿಂದ ಯೋಗಿಗೆ ಎಂದಿಲ್ಲೊಂದುದಿನ ಮೋಕ್ಷವುದೊರೆಯುವದು. ಇನ್ನು ಜ್ಞಾನಸಂಪನ್ನನ ಸ್ಥಿತಿಯನ್ನು ನೋಡು. ಆತನು ಐಹಿಕಸುಖವನ್ನು ಭೋ ಗಿಸುತ್ತಿರುವಾಗ ಒಂದುಪಕ್ಷದಲ್ಲಿ ಆತನಿಂದ ಪಾಪಕರ್ಮವು ಘಟಿಸಿದರೂ, ಆತನು ಯಾವಾಗಲೂ ಬ್ರಹ್ಮರೂಪದಲ್ಲಿನಿಮಗ್ನನಾಗಿರುವದರಿಂದ, ಆ ಪಾಪ ಕರ್ಮದ ಅಧಿಕಾರಿಯು ಆತನು ಆಗುವದಿಲ್ಲ. ಪರಮಾರ್ಥದಲ್ಲಿ ಬುದ್ಧಿಯಿಲ್ಲ ದವನ ಧರ್ಮಾಚರಣೆಯು ನಿಜವಾದದ್ದಲ್ಲದ್ದರಿಂದ ಅದು ನಿಂದ್ಯವಾಗಿರು ವದು. ಇಂದ್ರಿಯಗಳ ಮೇಲೆ ಸ್ವಾಮಿತ್ವವಿಲ್ಲದವನದ್ರವ್ಯವು ನಿಂದ್ಯವಾದದ್ದ ರಿಂದ, ಸದ್ಬುದ್ಧಿಯಿಂದ ಮಾಡಿದ ಧರ್ಮಾಚರಣೆಯೇ ಫಲದಾಯಕವಾಗಿ, ಜ್ಞಾನದ ಮಾರ್ಗವು ಸುಗಮವಾಗುವದು; ಆದರೆಅಷ್ಟಕಾ, ಬ್ರಹ್ಮಲೋಕ ದಿಂದ ನನ್ನ ಸಂಗಡ ಬಂದಿದ್ದ ಲೋಕಪಾಲಕರು ನನಗೆ ಅವಸರಮಾಡು ತ್ತಿರುವರು ; ಆದ್ದರಿಂದ ನಿಮ್ಮ ಅಪ್ಪಣೆಪಡೆದು ನಾನು ಅತ್ತಹೋಗುವೆನು.

ಅಷ್ಟಕ—ಯಯಾತೀ, ನಿಲ್ಲು, ನೀನು ಅನಕಾ ಕೆಳಗೆ ಬೀಳಬೇಡ. ನೀನು ಸರ್ವಜ್ಞನಾದದ್ದರಿಂದ ಕೇಳುತ್ತೇನೆ ; ನಾನು ಈವರೆಗೆ ಮಾಡಿದ ಪುಣ್ಯಕರ್ಮಗಳಿಂದ ನನಗೇನಾದರೂ ಪುಣ್ಯಲೋಕಗಳು ಪ್ರಾಪ್ತವಾಗಿರು ವವೋ ಹೇಗೆ ಹೇಳು.

ಯಯಾತಿ—ಅಷ್ಟಕಾ, ಈ ಪೃಥ್ವಿಯಲ್ಲಿ ಎಷ್ಟು ಆಕಳುಗಳು, ಎಷ್ಟು ಕುದುರೆಗಳು, ಎಷ್ಟು ಪಶುಗಳು ಇರುವವೋ, ಅವುಗಳ ಸಂಖ್ಯೆಯಷ್ಟು ಪುಣ್ಯಲೋಕಗಳು ನಿನಗಾಗಿ ಸಿದ್ಧವಾಗಿರುತ್ತವೆ.

ಅಷ್ಟಕ—ಹಾಗಿದ್ದರೆ, ರಾಜಾ, ನೀನು ಈಗ ಪತನಹೊಂದಬೇಡ ನನಗಾಗಿ ಇರುವ ಸುಖದ ಸ್ಥಾನಗಳನ್ನೆಲ್ಲ ನಿನಗೆ ಕೊಡುತ್ತೇನೆ, ನೀನು ಅಲ್ಲಿ ಸುಖವಾಗಿ ಇರು.

ಯಯಾತಿ—ದಾನತಕ್ಕೊಳ್ಳುವ ಅಧಿಕಾರವು ವೇದಾಧ್ಯಯನ ಮಾಡಿದ ಬ್ರಾಹ್ಮಣನಿಗೆ ಮಾತ್ರ ಇರುತ್ತದೆ. ನನ್ನಂಥವನಿಗೆ ಆ ಅಧಿಕಾರವಿಲ್ಲ. ಬ್ರಾಹ್ಮಣೇತರರು ಭಿಕ್ಷಾವೃತ್ತಿಯನ್ನು ತಾಳುವದಕ್ಕಿಂತ ಸಾಯುವದು ಲೇಸು.

**೯೪ನೆಯ ಅಧ್ಯಾಯ — ಪ್ರತರ್ದನ, ವಸುಮಾನ್, ಶಿಬಿ, ಯುಯಾತಿಯರ ಸಂವಾದ**—ಜನಮೇಜಯಾ, ಈಮೇರೆಗೆ ಯಯಾತಿಯು ಧರ್ಮತಃ ತ್ಯಾಗಿಯಾದದ್ದನ್ನು ನೋಡಿ, ಪ್ರತರ್ದನ, ವಸುಮಾನ್, ಶಿಬಿ ಎಂಬ ರಾಜರ್ಷಿಗಳು ಒಬ್ಬೊಬ್ಬರೇ ಮುಂದಕ್ಕೆ ಬಂದು, ತಮ್ಮ ತಮ್ಮ ಪರಿಚಯವನ್ನು ಯುಯಾತಿಗೆ ಮಾಡಿಕೊಟ್ಟು, ತಮ್ಮ ಪುಣ್ಯದಿಂದ ತಮ್ಮ ಸಲುವಾಗಿ ಯಾವಾದರೂ ಪುಣ್ಯಲೋಕಗಳು ಸಿದ್ಧವಾಗಿದ್ದರೆ, ಅವನ್ನು ನಾವು ಕೊಡುತ್ತೇವೆ, ನೀನು ಪತನಹೊಂದದೆ, ನಮ್ಮ ಆ ಪುಣ್ಯಲೋಕಗಳಲ್ಲಿ ಸುಖವಾಗಿ ಇರು, ಎಂದು ಒಬ್ಬೊಬ್ಬರೇ ಬೇರೆಬೇರೆಯಾಗಿ ಹೇಳಿದರು. ಆದಕ್ಕೆ ಯಯಾತಿಯು ಆ ರಾಜರ್ಷಿಗಳನ್ನು ಕುರಿತು—"ರಾಜರ್ಷಿಗಳೇ, ನಿಮ್ಮ ಸಲುವಾಗಿ ಹಲವು ಪುಣ್ಯಲೋಕಗಳು ಸಿದ್ಧವಾಗಿರುವವು; ಆದರೆ ರಾಜ್ಯಪದವನ್ನು ಹೊಂದಿದ, ಹಾಗು ರಾಜ್ಯವಾಳುವ ಯೋಗ್ಯತೆಯುಳ್ಳ ಮನುಷ್ಯನು ಎರಡನೆಯವರ ಪುಣ್ಯಫಲದ ಇಚ್ಛೆಯನ್ನು ಎಂದೂ ಮಾಡಬಾರದು. ಒಂದುವೇಳೆ ವಿಪತ್ತು ಒದಗಿದರೂ ಜಾಣನಾದ ರಾಜನು ಇಂತಹ ನಿಂದ್ಯಕರ್ಮಗಳನ್ನು ಮಾಡಲಾಗದು; ತಮ್ಮ ಧರ್ಮದಂತೆಯೇ ನಡೆಯಬೇಕು. ಅದರಲ್ಲಿಯೂ ಬುದ್ಧಿಯು ಒಲವು ಪರಮಾರ್ಥದ ಕಡೆಗಿದ್ದು, ರಾಜಧರ್ಮದ ಸಂಪೂರ್ಣಜ್ಞಾನವಿದ್ದ ನನ್ನಂಥ ರಾಜನಿಂದಂತು ನಿಂದ್ಯಕರ್ಮವು ಹೇಗೆ ಘಟಿಸೀತು? ಇಂಥ ಕರ್ಮಗಳು ಘಟಿಸಲಿಕ್ಕೆ ಪರಂಪರೆಯ ಆಧಾರವಾದರೂ ಇರಬೇಕಾಗಿತ್ತು; ಆದರೆ ಅದೂ ಇಲ್ಲ; ಆದ್ದರಿಂದ ಪವಿತ್ರಕರ್ಮಮಾಡುವ ಇಚ್ಛೆಯುಳ್ಳ ನನ್ನಿಂದ ನಿಂದ್ಯಕರ್ಮವು ಎಂದೂ ಆಗಲಾರದು," ಅನ್ನಲು, ವಸುಮಾನನು—

"ರಾಜಾ, ನಮ್ಮ ಪುಣ್ಯಲೋಕಗಳನ್ನು ತಕ್ಕೊಳ್ಳುವದು ನಿನಗೆ ಅಧರ್ಮವಾಗಿ ತೋರಿದರೆ, ನಾನು ಕೊಡುವ ಪುಣ್ಯಲೋಕಗಳ ಬೆಲೆಯೆಂದು ಒಂದು ಕಡ್ಡಿಯನ್ನು ನನಗೆ ಕೊಡು," ಎಂದು ಕೇಳಿದನು. ಅದಕ್ಕೆ ಯಯಾತಿಯು—"ಇಂಥ ಸುಳ್ಳು ಕೊಡಕೊಳ್ಳುವ ವ್ಯವಹಾರಮಾಡಿದ್ದು ನನ್ನ ನೆನಪಿನಲ್ಲಿಲ್ಲ. ಅದರಂತೆ, ಪುಕ್ಕಟೆಯಾಗಿ ಸಿಗುತ್ತದೆಂದು ನಾನು ಎಂದೂ ಏನನ್ನೂ ತಕ್ಕೊಂಡಿರುವದಿಲ್ಲ. ನನಗೆ ಕಾಲಚಕ್ರದ ಭಯವಿರುವದು. ಎರಡನೆಯವರಾರೂ ನೋಡದಿದ್ದರೂ ಈ ಕಾಲಚಕ್ರದ ಹಗಲು ರಾತ್ರಿ, ಸಂಜೆ-ಮುಂಜಾವು ಇವು ಮನುಷ್ಯನ ಎಲ್ಲಕರ್ಮಗಳನ್ನು ನೋಡುತ್ತಿರುವವು. ಇಂಥ ನಿಂದ್ಯಕರ್ಮವು ನನ್ನಿಂದ ಎಂದೂ ಆಗದು," ಎಂದು ಹೇಳಿದನು.

ಇದನ್ನು ಕೇಳಿ ಅಷ್ಟಕನು ಯಯಾತಿಗೆ—"ಒಳ್ಳೇದು ಹಾಗಾದರೆ, ನಾವು ಒಬ್ಬೊಬ್ಬರೇ ಕೊಟ್ಟದ್ದನ್ನು ನೀನು ತಕ್ಕೊಳ್ಳದಿದ್ದರೆ ನಾವೆಲ್ಲರೂ ಕೂಡಿ ನಿನಗೆ ನಮ್ಮ ಪುಣ್ಯಲೋಕಗಳನ್ನೆಲ್ಲ ಕೊಡುತ್ತೇವೆ, ತೆಗೆದುಕೋ. ಪುಣ್ಯಸಂಪಾದನಕ್ಕಾಗಿ ನಾವು ಪುನಃ ಭೂಲೋಕಕ್ಕೆ ಹೋಗುವೆವು" ಎಂದು ಹೇಳಿದನು. ಅದಕ್ಕೆ ಯಯಾತಿಯು—"ಸಜ್ಜನರು ಸತ್ಯವಿದ್ದದ್ದನ್ನೇ ಸ್ವೀಕರಿಸುವರು. ನನ್ನ ಪಾತ್ರತೆನೋಡಿ ನೀವು ಏನುಮಾಡತಕ್ಕದ್ದನ್ನು ಮಾಡಿರಿ. ದಾನವನ್ನಂತು ನಾನು ಸ್ವೀಕರಿಸುವದಿಲ್ಲ," ಅನ್ನಲು, ಅವರೆಲ್ಲರ ತ್ಯಾಗಗುಣದಮೂಲಕ ಕೂಡಲೆ ಅಲ್ಲ ಬಂಗಾರದ ಐದುರಥಗಳು ಕಾಣಹತ್ತಿದವು. ಅವನ್ನು ನೋಡಿ ಅಷ್ಟಕನು—

ಅಷ್ಟಕ—ಈ ರಥಗಳು ಯಾವವು ?

ಯಯಾತಿ—ಈ ಐದುರಥಗಳು ನಿಮ್ಮನ್ನು ಸ್ವರ್ಗಕ್ಕೆ ಕರೆದೊಯ್ಯುವದಕ್ಕಾಗಿ ಬಂದಿರುತ್ತವೆ.

ಅಷ್ಟಕ—ರಾಜಾ, ಇನ್ನು ನೀನು ರಥದಲ್ಲಿ ಕುಳಿತು ಸ್ವರ್ಗಕ್ಕೆ ಹೋಗು ನಮಗೆ ಸಮಯ ಒದಗಿದಕೂಡಲೆ ನಿನ್ನಹಿಂದೆ ನಾವೂ ಬರುವೆವು

ಯಯಾತಿ—ನೀವೆಲ್ಲರೂ ಸ್ವರ್ಗವನ್ನು ಗೆದ್ದಿರುತ್ತೀರಿ ; ಆದ್ದರಿಂದ ನಾವೆಲ್ಲರೂ ಕೂಡಿಯೇ ಸ್ವರ್ಗಕ್ಕೆ ಹೋಗೋಣ.

ಅಷ್ಟಕ—ಯಯಾತಿರಾಜಾ, ನಾನು ಇಂದ್ರನ ಮಿತ್ರನಾದದ್ದ ರಿಂದ ನಾನೊಬ್ಬನೇ ಸ್ವರ್ಗಕ್ಕೆ ಹೋಗುವೆನೆಂದು ತಿಳಿದಿದ್ದೆನು ; ಆದರೆ ಈಗ ನೋಡಿದರೆ, ಉಶೀನರನ ಮಗನಾದ ಶಿಬಿಯು ನಮ್ಮೆಲ್ಲರಮುಂದೆ ಒಬ್ಬನೇ ಹೊರಟಿರುವನಲ್ಲ ! ಇದರ ಕಾರಣವೇನು ?

ಯಯಾತಿ—ಇವನು ಸಂಪಾದಿಸಿದ ದ್ರವ್ಯವೆಲ್ಲ ಪರಮಾರ್ಥದಲ್ಲಿ ವೆಚ್ಚವಾಗಿರುವದರಿಂದ, ನಿಮ್ಮೆಲ್ಲರಿಗಿಂತಲೂ ಈತನು ಶ್ರೇಷ್ಠನಾಗಿರುವನು. ಅಲ್ಲದೆ, ಬುದ್ಧಿವಂತಿಕೆಯಲ್ಲಿ ಈತನನ್ನು ಸರಿಗಟ್ಟುವವರು ಯಾರೂ ಇಲ್ಲ. ಇದೂ ಅಲ್ಲದೆ, ದಾನ, ತಪ, ಸತ್ಯ, ಧರ್ಮಾಚರಣ, ವಿನಯ, ತೇಜ, ಕ್ಷಮಾ, ಸೌಮ್ಯತನ, ಪವಿತ್ರ ಕರ್ಮಮಾಡುವ ಇಚ್ಛೆ ಇವುಗಳಲ್ಲಿಯೂ ಈತನನ್ನು ಯಾರೂ ಸರಿಗಟ್ಟಲಾರರು. ಇಂಥ ಗುಣಗಳು ಈತನಲ್ಲಿದ್ದರೂ, ಈತನು ನಮ್ರನಾಗಿರುವದರಿಂದ ಈತನ ರಥವು ಮುಂದೆ ಸಾಗಿರುವದು. ಅಷ್ಟಕಾ, ನಾನು ನಿನ್ನ ಅಜ್ಜನಾಗಬೇಕು. ನೀನು ನಮ್ಮವನೇ ಇರುತ್ತೀ. ಅಂತೇ ಈ ಎಲ್ಲ ಗುಪ್ತಸಂಗತಿಗಳನ್ನು ನಿನಗೆ ಹೇಳಿರುತ್ತೇನೆ ದೇವತೆಗಳ ಕೃಪೆಯು ಸುಮ್ಮನೆ ಆಗುವದಿಲ್ಲ. ಅದನ್ನು ಸಂಪಾದಿಸಬೇಕಾದರೆ ದಾನ ಯಜ್ಞ ಮೊದಲಾದ ಹಲವು ಪುಣ್ಯಕೆಲಸಗಳನ್ನು ಮಾಡಬೇಕಾಗುವದು. ಸತ್ಯವನ್ನು ಬಿಡಲಾಗದು. ನಿಮ್ಮೆಲ್ಲರೊಡನೆ ನನ್ನ ಸಂಭಾಷಣ ವಾಗುತ್ತಿರುವದು ಸತ್ಯದ ಮೂಲಕವಾಗಿಯೆ. ಸತ್ಯದ ಮೂಲಕವಾಗಿಯೇ ಯಾವತ್ತು ಜನರೂ, ಋಷಿಗಳೂ, ದೇವತೆಗಳೂ ಆದರಕ್ಕೆ ಪಾತ್ರರಾಗಿರುವರು. ನಾವು ಸ್ವರ್ಗವನ್ನು ಸಂಪಾದಿಸಿದ ಈ ಸಂಗತಿಯನ್ನು ಮತ್ಸರರಹಿತರಾಗಿ ಶ್ರೇಷ್ಠ ಬ್ರಾಹ್ಮಣರಿಗೆ ಹೇಳುವವರಿಗೆ ನಮ್ಮಂತೆಯೇ ಒಳ್ಳೆಯ ಲೋಕಗಳು ದೊರಕುವವು.

**೯೪ನೇ ಅಧ್ಯಾಯ — ಪುರುವಂಶಕಥನ:**—ಜನಮೇಜಯನು ವೈಶಂಪಾಯನರನ್ನು ಕುರಿತು—"ಎಲೈ ಬ್ರಾಹ್ಮಣೋತ್ತಮಾ, ನಮ್ಮ ಪುರುವಂಶದ ಅರಸರ ವಂಶಪರಂಪರೆಯನ್ನು ಆರಂಭದಿಂದ ಕ್ರಮವಾಗಿ ಹೇಳಬೇಕು ಈಗ ನೀನು ದುಷ್ಯಂತ-ಯಯಾತಿ ಎಂಬ ಇಬ್ಬರು ಪುರುವಂಶದ ಅರಸರ ಚರಿತ್ರವನ್ನು ಹೇಳಿದೆ; ಆದರೆ ಇವರಲ್ಲಿ ದುಷ್ಯಂತನು ಮೊದಲೋ ಯಯಾತಿಯು ಮೊದಲೋ? ಇದು ನನಗೆ ಸ್ಪಷ್ಟವಾಗಿತಿಳಿಯ

ಲಿಲ್ಲ; ಆದ್ದರಿಂದ ಆರಂಭದಿಂದ ಇಲ್ಲಿಯವರೆಗೆ ಪುರುವಂಶದ ಅರಸರ ಹೆಸರನ್ನು ಹೇಳಿದರೆ ನನಗೆ ಸ್ಪಷ್ಟವಾಗಿ ತಿಳಿಯುವದು," ಎಂದು ಕೇಳಲು, ವೈಶಂಪಾಯನನು—"ರಾಜಾ, ಕೇಳು. ನಿನ್ನ ಮೂಲಪುರುಷನು ದಕ್ಷನೆಂಬವನು. ಆತನಿಂದ ಕ್ರಮವಾಗಿ ಅದಿತಿ, ವಿವಸ್ವಾನ, ಮನು, ಇಲೆ, ಪುರೂರವ, ಆಯು, ನಹುಷ, ಯಯಾತಿ ಇವರು ಹುಟ್ಟಿದರು. ಯಯಾತಿಗೆ ದೇವಯಾನಿ, ಶರ್ಮಿಷ್ಠೆ ಎಂಬವರಿಬ್ಬರು ಹೆಂಡಿರು. ದೇವಯಾನಿಯಿಂದ ಯದು, ತುರ್ವಸು ಎಂಬವರು ಹುಟ್ಟಿದರು. ಶರ್ಮಿಷ್ಠೆಯಿಂದ ದ್ರುಹ್ಯು, ಅನು, ಪುರು ಎಂಬವರು ಹುಟ್ಟಿದರು. ಇವರಲ್ಲಿ ಯದು ಎಂಬವನಿಂದ ಯಾದವವಂಶವು ಆರಂಭವಾಯಿತು. ಪುರುವಿನಿಂದ ಪುರುವಂಶವು ಆರಂಭವಾಯಿತು. ಪುರುವಿನಿಂದ ಆದ ಅರಸರ ಹೆಸರುಗಳನ್ನು ಕ್ರಮವಾಗಿ ಹೇಳುವೆನು ಕೇಳು—ಜನಮೇಜಯಾ, ಪ್ರಾಚಿನ್ವಾನ, ಸಂಯಾತಿ, ಅಹಂಯಾತಿ, ಸಾರ್ವಭೌಮ, ಜಯತ್ಸೇನ, ಅವಾಚೀನ, ಅರಿಹ, ಮಹಾಭೌಮ, ಅಯುತನಾಯಿ, ಅಕ್ರೋಧ, ದೇವಾತಿಥಿ, ಅರಿಹ, ಋಕ್ಷ, ಮತಿನಾರ, ತಂಸು, ಇಲೀ, ದುಷ್ಯಂತ ಎಂಬವರು ಆದರು. ಎಲೈ ಜನಮೇಜಯಾ, ಈ ದುಷ್ಯಂತನಿಂದಲೇ ಶಕುಂತಲೆಯಲ್ಲಿ ಭರತನು ಹುಟ್ಟಿದನು. ಮುಂದೆ ಭರತನಿಂದ-ಭುಮನ್ಯು, ಸುಹೋತ್ರ, ಹಸ್ತಿ, [ಈತನೇ ಹಸ್ತಿನಾವತಿಯನ್ನು ಸ್ಥಾಪಿಸಿದನು.] ವಿಕುಂಠ, ಅಜಮಿಢ, ಸಂವರಣ, ಕುರು, ವಿದುರ, ಅನಶ್ವ, ಪರೀಕ್ಷಿತ್, ಭೀಮಸೇನ, ಪ್ರತಿಶ್ರವ, ಪ್ರತೀಪ, ಶಾಂತನು, ಶಾಂತನುವಿನಿಂದ ಭಾಗೀರಥಿಯಲ್ಲಿ ದೇವವ್ರತನು ಆದರು. ಈ ದೇವವ್ರತನಿಗೇ ಭೀಷ್ಮನೆನ್ನುವರು. ಶಾಂತನುವಿನಿಂದ ಸತ್ಯವತಿಯಲ್ಲಿ ವಿಚಿತ್ರವೀರ್ಯ-ಚಿತ್ರಾಂಗದರು ಆದರು. ವಿಚಿತ್ರವೀರ್ಯನ ಹೆಂಡಿರಾದ ಅಂಬಿಕೆ, ಅಂಬಾಲಿಕೆಯರಲ್ಲಿ ವ್ಯಾಸರಿಂದ ಕ್ರಮವಾಗಿ ಧೃತರಾಷ್ಟ್ರ-ಪಂಡುಗಳೂ, ದಾಸಿಯಲ್ಲಿ ವಿದುರನೂ ಹುಟ್ಟಿದರು. ಧೃತರಾಷ್ಟ್ರನಿಂದ ಗಾಂಧಾರಿಯಲ್ಲಿ ವ್ಯಾಸಪ್ರಸಾದದಿಂದ ನೂರುಜನ ಮಕ್ಕಳಾದರು. ಅವರಲ್ಲಿ ದುರ್ಯೋಧನ, ದುಶ್ಯಾಸನ, ವಿಕರ್ಣ, ಚಿತ್ರಸೇನ ಇವರು ಮುಖ್ಯರು. ಪಂಡುವಿಗೆ ಕುಂತಿಯಲ್ಲಿ ಧರ್ಮ-ಭೀಮ-ಅರ್ಜುನರೂ, ಮಾದ್ರಿಯಲ್ಲಿ ನಕುಲ-ಸಹದೇವರೂ ಹುಟ್ಟಿದರು; ಆದರೆ ಈ ಐವರ ಹೆಂಡಿರಾದ ದ್ರೌಪದಿ, ಸುಭದ್ರೆ, ಹಿಡಿಂಬಾ ಮೊದಲಾದವ

ರಲ್ಲಿ ಹನ್ನೊಂದುಜನ ಮಕ್ಕಳಾದರು ; ಆದರೆ ಅರ್ಜುನನಿಂದಸುಭದ್ರೆಯಲ್ಲಿ ಹುಟ್ಟಿದ ಅಭಿಮನ್ಯುವೇ ವಂಶವರ್ಧಕನಾದನು. ಅಭಿಮನ್ಯುವಿನಿಂದ ಉತ್ತರೆಯಲ್ಲಿ ಪರೀಕ್ಷಿತನು ಹುಟ್ಟಿದನು. ಜನಮೇಜಯಾ, ಪರೀಕ್ಷಿತನ ಲಗ್ನವು ನಿನ್ನ ತಾಯಿಯಾದ ಮದ್ರವತಿಯೊಡನೆ ಆಗಿ, ಆಕೆಯ ಹೊಟ್ಟೆಯಲ್ಲಿ ನೀನು ಹುಟ್ಟಿದೆ. ನಿನ್ನಿಂದ ವಪುಷ್ಟಮೆಯಲ್ಲಿ ಶತಾನೀಕ, ಶಂಕುಕರ್ಣ ಎಂಬ ಹೆಸರಿನ ಇಬ್ಬರು ಮಕ್ಕಳಾಗಿರುವರು. ಶತಾನೀಕನಿಂದ ವಿದೇಹರಾಜ ಪುತ್ರಿಯಲ್ಲಿ ಅಶ್ವಮೇಧದತ್ತನೆಂಬ ಹುಡುಗನು ಹುಟ್ಟಿರುವನು. ಜನಮೇಜಯಾ, ಹೀಗೆ ಪುರುವಂಶದ ಸಂಗತಿಯು ಇರುವದು. ಈ ಸಂಗತಿಯು ಪರಮ ಕಲ್ಯಾಣಪ್ರದವಾಗಿರುವದರಿಂದ, ನಿರ್ಮತ್ಸರರಾಗಿ ನಾಲ್ಕುವರ್ಣದವರೂ ಪಠಿಸಬೇಕು.

**೯೫ನೇ ಅಧ್ಯಾಯ — ಮಹಾಭಿಷರಾಜೋಪಾಖ್ಯಾನ**—ಜನಮೇಜಯಾ, ಇನ್ನು ನಿನಗೆ ಮಹಾಭಾರತದ ಮುಖ್ಯನಾಯಕನಾದ ಭೀಷ್ಮನ ಜನ್ಮಕಥೆಯನ್ನು ಹೇಳುವೆನು ಕೇಳು—ಒಂದಾನೊಂದು ಕಾಲದಲ್ಲಿ ಯಾವತ್ತು ದೇವತೆಗಳು ಬ್ರಹ್ಮದೇವನಕಡೆಗೆ ಹೋದರು. ಅವರ ಸಂಗಡ ಕೆಲವು ರಾಜರ್ಷಿಗಳೂ ಹೋಗಿದ್ದು, ಆ ರಾಜರ್ಷಿಗಳಲ್ಲಿ ಮಹಾಭಿಷನೆಂಬ ಶ್ರೇಷ್ಠರಾಜರ್ಷಿಯು ಇದ್ದನು. ಈ ರಾಜರ್ಷಿಯು ಇಕ್ಷ್ವಾಕುಕುಲದವನು. ಹೀಗೆ ಎಲ್ಲರೂ ಕುಳಿತಿರುವಾಗ ಸರ್ವನದಿಗಳಲ್ಲಿ ಶ್ರೇಷ್ಠಳಾದ ಗಂಗಾನದಿಯು ಮೂರ್ತಿಮತ್ತಾಗಿ ಅಲ್ಲಿಗೆ ಬಂದಳು. ಆಗ ಗಾಳಿಯಿಂದ ಆಕೆಯ ಉಟ್ಟವಸ್ತ್ರವು ಜಾರಲು, ಮಹಾಭಿಷರಾಜರ್ಷಿಯು ಹೊರತು ಎಲ್ಲರೂ ಲಜ್ಜೆಯಿಂದ ಮುಖವನ್ನು ತಗ್ಗಿಸಿದರು ; ಆದರೆ ಮಹಾಭಿಷನುಮಾತ್ರ ನಾಚಿಕೆಯಿಲ್ಲದೆ ಗಂಗೆಯನ್ನು ಎವೆಹಾಕದೆ ನೋಡತೊಡಗಿದನು. ಈ ಅಮರ್ಯಾದೆಯ ನಡತೆಯನ್ನು ನೋಡಿ ಬ್ರಹ್ಮದೇವನು ಸಿಟ್ಟಿನಿಂದ ಮಹಾಭಿಷನಿಗೆ—"ಎಲೈ ದುರ್ಮತಿಯೇ, ನೀನು ಮೃತ್ಯುಲೋಕದಲ್ಲಿ ಜನ್ಮತಾಳುವೆ. ಈ ಗಂಗೆಯನ್ನು ನೋಡಿ ನಿನ್ನ ಚಿತ್ತವು ಚಲಿಸಿದ್ದರಿಂದ, ಈಕೆಯೂ ಮನುಷ್ಯಳಾಗಿಹುಟ್ಟಿ ನಿನ್ನ ಹೆಂಡತಿಯಾಗಿ ನಿನ್ನ ಮನಸ್ಸಿಗೆ ಬಾರದ ಕೆಲಸಗಳನ್ನೇ ಮಾಡುವಳು ; ಆದರೆ ಆಕೆಯ ಕೃತಿಯಿಂದ ನಿನಗೆ ಸಿಟ್ಟುಬಂದ ದಿವಸವೇ ನಿನ್ನ ಶಾಪನಿವೃತ್ತಿ

ಯಾಗಿ, ನೀನು ಪುನಃ ಈ ಲೋಕಕ್ಕೆ ಬರುವೆ," ಎಂದು ಶಾಪವನ್ನು ಕೊಟ್ಟನು.

ಜನಮೇಜಯಾ, ಬ್ರಹ್ಮದೇವನ ಈ ಶಾಪವನ್ನು ಕೇಳಿ ಮಹಾಭಿಷನು ಭೂಲೋಕದಲ್ಲಿ ತಾನು ಎಲ್ಲಿ ಹುಟ್ಟಬೇಕೆಂದು ವಿಚಾರಿಸುತ್ತಿರುವಾಗ, ನಿನ್ನ ಪೂರ್ವಜನಾದ ಪ್ರತೀಪನ ಹೊಟ್ಟೆಯಲ್ಲಿ ಹುಟ್ಟುವದು ಯೋಗ್ಯವೆಂದು ಆತನಿಗೆ ತೋರಲು, ಹಾಗೆಮಾಡಬೇಕೆಂದು ಆತನು ನಿಶ್ಚಯಿಸಿದನು. ಇತ್ತ ಗಂಗೆಯು ಬ್ರಹ್ಮಸಭೆಯನ್ನು ಬಿಟ್ಟು ಮಹಾಭಿಷರಾಜನನ್ನು ಕುರಿತು ವಿಚಾರಿಸುತ್ತ ಬರುತ್ತಿರಲು, ಅಷ್ಟವಸುಗಳು ಆಕೆಯನ್ನು ಕಾಣಿಸಿಕೊಂಡರು. ಅವರ ಬಾಡಿದ ಮೋರೆಯನ್ನು ನೋಡಿ ಗಂಗೆಯು—

ಗಂಗೆ—ನಿಮ್ಮ ಮೋರೆಯು ಬಾಡಿರುವದೇಕೆ ? ಎಲ್ಲ ದೇವತೆಗಳಿಗೂ ಕ್ಷೇಮವಷ್ಟೆ ?

ಅಷ್ಟವಸುಗಳು—ನಮ್ಮ ಸ್ವಲ್ಪ ತಪ್ಪಿಗಾಗಿ ವಶಿಷ್ಠಋಷಿಯು—"ನೀವು ಮೃತ್ಯುಲೋಕದಲ್ಲಿ ಜನ್ಮತಾಳುವಿರಿ" ಎಂದು ಶಾಪಕೊಟ್ಟದ್ದರಿಂದ ನಮಗೆ ಅಸಮಾಧಾನವಾಗಿದೆ ; ಆದರೆ ಗಂಗೇ, ನಿನಗೆ ನಮ್ಮದಿಷ್ಟೇ ಪ್ರಾರ್ಥನೆಯು, ನೀನು ಹೇಗೂ ಮನುಷ್ಯಲೋಕದಲ್ಲಿ ಸ್ತ್ರೀಜನ್ಮವನ್ನು ತಾಳುವವಳಿರುತ್ತೀ ; ಆದ್ದರಿಂದ ನಾವು ನಿನ್ನ ಹೊಟ್ಟೆಯಲ್ಲಿ ಹುಟ್ಟುವೆವು ; ಸಾಮಾನ್ಯಸ್ತ್ರೀಯರ ಹೊಟ್ಟೆಯಲ್ಲಿ ನಾವು ಹುಟ್ಟಲಾರೆವು.

ಗಂಗೆ—ನಿಮ್ಮ ತಂದೆಯಾಗಲು ತಕ್ಕ ಶ್ರೇಷ್ಠಪುರುಷನು ಭೂಲೋಕದಲ್ಲಿ ಯಾವನಿರುವನು ?

ವಸುಗಳು—ಚಂದ್ರವಂಶದ ಪ್ರತೀಪನೆಂಬ ರಾಜನಿಗೆ ಶಾಂತನುವೆಂಬ ಕೀರ್ತಿಶಾಲಿ ರಾಜನು ಹುಟ್ಟತಕ್ಕವನಿರುವನು. ಆತನು ನಮ್ಮ ತಂದೆಯಾಗಲು ಯೋಗ್ಯನಿರುವನು.

ಗಂಗೆ—ನನಗೂ ಆತನೇ ಯೋಗ್ಯನಾಗಿ ತೋರುವನು. ನಾನು ಆತನ ಮನಸ್ಸಿನಂತೆ ನಡೆದು ನಿಮ್ಮ ಹೇತುವನ್ನು ಪೂರ್ಣಮಾಡುವೆನು.

ವಸುಗಳು— ಎಲೈ ತ್ರಿಲೋಕ್ಯಗಾಮಿನೀ, ನಾವು ಹುಟ್ಟಿದಕೂಡಲೆ ನಮ್ಮನ್ನು ನೀರಲ್ಲಿ ಚಲ್ಲಿಕೊಟ್ಟು ಬಿಡು. ನಮ್ಮಮೇಲೆ ಇಷ್ಟು ಅನುಗ್ರಹ ಮಾಡಿದರೆ, ಭೂಲೋಕದ ಬಹುಕಾಲದ ವಾಸವು ನಮಗೆ ತಪ್ಪುವದು.

ಗಂಗೆ—ಮಕ್ಕಳಸಲುವಾಗಿ ನನ್ನನ್ನು ಲಗ್ನವಾಗುವ ಶಾಂತನುವಿಗೆ ಒಬ್ಬನಾದರೂ ಮಗನು ಬೇಡವೆ ?

ವಸುಗಳು—ನಾವು ಪ್ರತಿ ಒಬ್ಬರು ನಮ್ಮ ವೀರ್ಯದ ಎಂಟನೆಯ ಭಾಗವನ್ನು ನಿನಗೆ ಕೊಡುವೆವು. ಅದರಿಂದ ಮಹಾಬಲಶಾಲಿಯಾದ ಎಂಟನೆಯಮಗನು ಹುಟ್ಟುವನು. ಆತನೊಬ್ಬನನ್ನು ಶಾಂತನುವಿಗೆ ಕೊಡು. ಆ ಹುಡುಗನು ಮಹಾವೀರ್ಯಶಾಲಿಯಾದರೂ ಪುತ್ರಹೀನನಾಗುವನು.

ಈ ನೇರೆಗೆ ಸಂಕೇತವಾಗಲು, ಅವರವರು ತಮ್ಮ ತಮ್ಮ ಕಾರ್ಯಗಳಿಗಾಗಿ ಹೊರಟುಹೋದರು.

**೯೭ನೇ ಅಧ್ಯಾಯ--ಪ್ರತೀಪೋಪಾಖ್ಯಾನ**—ಇತ್ತ ಪ್ರತೀಪ ರಾಜನು ಹರಿದ್ವಾರಕ್ಕೆಹೋಗಿ ತಪಸ್ಸು ಮಾಡುತ್ತಿರುವಾಗ, ಒಂದುದಿನ ಆತನು ಧ್ಯಾನಸ್ಥನಾಗಿ ಕುಳಿತಿರಲು, ಗಂಗೆಯು ಆತನ ಗುಣರೂಪಗಳಿಗೆ ಮೋಹಿಸಿ, ಸುಂದರಸ್ತ್ರೀಯಾಗಿ ಆತನ ಬಲಗಡೆಯ ತೊಡೆಯಮೇಲೆ ಕುಳಿತುಕೊಂಡಳು. ಆಗ ಆಕೆಯ ಮನೋಹರ ರೂಪವನ್ನೂ, ದಿವ್ಯಕಾಂತಿಯನ್ನೂ ನೋಡಿ ಪ್ರತೀಪರಾಜನು—

ಪ್ರತೀಪ—ಸುಂದರೀ, ನಿನಗೆ ಪ್ರಿಯವಾಗುವಹಾಗೆ ನಾನೇನು ಮಾಡಲಿ ?

ಗಂಗೆ—ರಾಜನ್, ನಿನ್ನಲ್ಲಿ ನನ್ನ ಮನಸ್ಸು ನಟ್ಟಿರುವದರಿಂದ ನನ್ನನ್ನು ಅಂಗೀಕರಿಸು. ಕಾಮವಶಸ್ತ್ರೀಯ ಮನೋಭಂಗಮಾಡುವದು ನಿಂದ್ಯವೆಂದು ಜ್ಞಾನಿಗಳು ತಿಳಿಯುವರು.

ಪ್ರತೀಪ—ವಿಷಯಸುಖಕ್ಕಾಗಿ ಎರಡನೆಯವರ ಹೆಂಡರೊಡನೆ ನಾನು ಎಂದೂ ಸಂಬಂಧಮಾಡಲಾರೆನು ; ಅದರಲ್ಲಿ ನೀನಂತು ನನ್ನ ಜಾತಿಯವಳಲ್ಲ ಧರ್ಮದವಳಲ್ಲ. ಧರ್ಮದಂತೆ ನಡೆಯುವದು ನನ್ನ ವ್ರತವಾಗಿರುವದು.

ಗಂಗೆ—ರಾಜಾ, ನಾನು ಅಯೋಗ್ಯಸ್ತ್ರೀಯಲ್ಲ. ಸ್ವರ್ಗದಲ್ಲಿರುವವಳು, ನಿರ್ದೋಷಿಯು. ಇನ್ನೂ ಯಾರೊಡನೆಯೂ ನನ್ನ ಲಗ್ನವಾಗಿರುವದಿಲ್ಲ. ನನ್ನನ್ನು ಅಂಗೀಕರಿಸಬೇಕು

ಪ್ರತೀಪ—ಸ್ತ್ರೀಯೇ, ನೀನು ನನ್ನ ಬಲಗಡೆಯ ತೊಡೆಯಮೇಲೆ ಕುಳಿತಿರುವೆ; ಆದರೆ ಅದು ಹೆಣ್ಣುಮಕ್ಕಳು, ಸೊಸೆಂದಿರು ಕುಳಿತುಕೊಳ್ಳ ತಕ್ಕ ಸ್ಥಳವು. ಹೆಂಡಿರು ಕುಳಿತುಕೊಳ್ಳತಕ್ಕ ಸ್ಥಳವು ಎಡಗಡೆಯ ತೊಡೆಯು; ಆದ್ದರಿಂದ ನಿನ್ನನ್ನು ಹೆಂಡತಿಯಾಗಿ ಸ್ವೀಕರಿಸಲಾರೆನು. ನಿನ್ನ ಇಚ್ಛೆಯಿದ್ದರೆ, ಸೊಸೆಯೆಂದು ತಿಳಿದು ನಿನ್ನನ್ನು ಸ್ವೀಕರಿಸುವೆನು. ಅಧರ್ಮದಿಂದ ನಡೆದರೆ ನನ್ನ ನಾಶವಾದೀತು.

ಗಂಗೆ—ಆಗಲಿ, ನಿನ್ನ ಮಗನನ್ನೇ ನಾನು ಲಗ್ನವಾಗುವೆನು ; ಆದರೆ ನನ್ನ ನಿಯಮಗಳನ್ನು ಕೇಳು. ನಾನು ಏನುಮಾಡಿದರೂ ನಿನ್ನಮಗನು "ಹೀಗೇಕೆ" ಎಂದು ನನ್ನನ್ನು ಕೇಳಬಾರದು. ಹೀಗೆ ಕೇಳಿದ ದಿವಸವೇ ನಾನು ಹೊರಟುಹೋಗುವವಳು. ಈ ನಿಯಮವನ್ನು ಪಾಲಿಸುವವರೆಗೆ ನಿನ್ನ ಮಗನ ಸಹವಾಸದಲ್ಲಿದ್ದು ಆತನಿಗೆ ಸುಖಕೊಡುವೆನು. ಆತನ ಹೊಟ್ಟೆಯಲ್ಲಿ ಪುಣ್ಯವಂತರಾದ ಮಕ್ಕಳು ಹುಟ್ಟುವರು. ಆತನಿಗೆ ತನ್ನ ಪ್ರೀತಿಯ ಮಕ್ಕಳೊಡನೆ ಕಡೆಗೆ ಸ್ವರ್ಗವು ಪ್ರಾಪ್ತವಾಗುವದು.

ಗಂಗೆಯ ಈ ನಿಯಮಗಳನ್ನು ಪ್ರತೀಪನು ಒಪ್ಪಿಕೊಳ್ಳಲು, ಗಂಗೆಯು ಅಲ್ಲಿಯೇ ಗುಪ್ತವಾದಳು. ಆಗ ಪ್ರತೀಪನು ಗಂಗೆಯ ಮಾತಿನಲ್ಲಿ ವಿಶ್ವಾಸವಿಟ್ಟು ಪುತ್ರಪ್ರಾಪ್ತಿಗಾಗಿ ಆ ವನದಲ್ಲಿ ಹೆಂಡತಿಯೊಡನೆ ತಪಶ್ಚರ್ಯ ಮಾಡಿದನು. ಮುಂದೆ ಮುಪ್ಪಿನಕಾಲದಲ್ಲಿ ಆತನಿಗೆ ಒಬ್ಬ ಮಗನು ಹುಟ್ಟಿದನು. ಆತನೇ ಬ್ರಹ್ಮಸಭೆಯಲ್ಲಿ ಶಾಪಹೊಂದಿದ ಮಹಾಭಿಷನು. ತಪಸ್ಸಿನಯೋಗದಿಂದ ಆ ದಂಪತಿಗಳು ಶಾಂತವೃತ್ತಿಯಿಂದಿದ್ದಾಗ ಈತನು ಹುಟ್ಟಿದ್ದರಿಂದ ಈತನಿಗೆ "ಶಾಂತನು" ಎಂಬ ಹೆಸರು ಉಂಟಾಯಿತು. ಶಾಂತನುವು ಕುರುಕುಲದಲ್ಲಿಯ ಒಬ್ಬ ಉತ್ತಮರಾಜನಾಗಿ ಹೋದನು. ಆತನಿಗೆ ತನ್ನ ಪೂರ್ವಜನ್ಮದ, ಅಂದರೆ ಮಹಾಭಿಷಜನ್ಮದ ಜ್ಞಾನವಿದ್ದದ್ದರಿಂದ, ತನಗೆ ಈಗ ಭೂಲೋಕದಲ್ಲಿ ಯಾವಯಾವ ದೇವತೆಗಳ ಸಂಬಂಧವಾಗುವದೆಂಬದನ್ನು ಆತನು ಅರಿತವನಾಗಿದ್ದನು. ಆತನು ವಯಸ್ಸಿಗೆ ಬರಲು, ಪ್ರತೀಪನು ಆತನಿಗೆ ಗಂಗೆಯ ವೃತ್ತಾಂತವನ್ನೆಲ್ಲ ತಿಳಿಸಿ, "ಒಬ್ಬ ಸ್ತ್ರೀಯು ನಿನ್ನನ್ನು ಲಗ್ನವಾಗಲು ಬಂದರೆ, ಯಾವ ವಿಚಾರವನ್ನೂ ಮಾಡದೆ ನನ್ನ ಅಪ್ಪಣೆಯಿರುವದೆಂದು ತಿಳಿದು ಆಕೆಯನ್ನು ಲಗ್ನವಾಗು"

ಎಂದು ಹೇಳಿ, ಸತ್ಪುತ್ರನಾದ ಶಾಂತನುವಿಗೆ ಪಟ್ಟಗಟ್ಟಿ ತಾನು ಅರಣ್ಯಕ್ಕೆ ತೆರಳಿದನು.

**೯೮ನೇ ಅಧ್ಯಾಯ— ಶಾಂತನು–ಗಂಗಾವಿವಾಹ:**— ಇತ್ತ ಶಾಂತನುವು ಧರ್ಮದಿಂದ ರಾಜ್ಯಪರಿಪಾಲನಮಾಡುತ್ತ, ಬೇಟೆಗೆ ಮೆಚ್ಚಿ ಒಂದು ದಿನ ಗಂಗಾತೀರದ ಅರಣ್ಯದಲ್ಲಿ ಬೇಟೆಯಾಡುತ್ತಿದ್ದನು. ಅಷ್ಟರಲ್ಲಿ ಒಬ್ಬ ಸುಂದರ ತರುಣಿಯು ಆತನ ಕಣ್ಣಿಗೆ ಬಿದ್ದಳು. ಆಕೆಯ ರೂಪವನ್ನು ನೋಡಿ ಶಾಂತನುವು ಮೋಹಿಸಿದನು. ಶಾಂತನುವಿನ ರೂಪಕ್ಕೆ ಆ ತರುಣಿಯೂ ಮೋಹಿತಳಾಗಿದ್ದಳು. ಆ ತರುಣಿಯೇ ಗಂಗೆಯು. ವಸುಗಳ ಸಂಕೇತವು ಗಂಗೆಗೆ ನೆನಪಾಯಿತು ; ತಂದೆಯ ಅಪ್ಪಣೆಯು ಶಾಂತನುವಿನ ಸ್ಮರಣಕ್ಕೆ ಬಂದಿತು. ಆಗ ಶಾಂತನುವು ಗಂಗೆಯನ್ನು ಕುರಿತು– "ಎಲೈ ಸ್ತ್ರೀಯೇ, ನೀನು ಯಾರು? ನಿನ್ನ ಕಾಂತಿಯನ್ನು ನೋಡಿದರೆ ನೀನು ದೇವಸ್ತ್ರೀಯಂತೆ ನನಗೆ ತೋರುತ್ತೀ. ನನಗೆ ನನ್ನದಿಷ್ಟೇ ಪ್ರಾರ್ಥನೆಯು–ನೀನು ನನ್ನ ಹೆಂಡತಿಯಾಗು."

ಅರಸನ ನಗೆಮೊಗದ ಈ ಸವಿಮಾತುಗಳನ್ನು ಕೇಳಿ ಗಂಗೆಯು— "ರಾಜಾ, ನಾನು ಏನುಮಾಡಿದರೂ "ಹೀಗೇಕೆ" ಎಂದು ನೀನು ನನ್ನನ್ನು ಕೇಳಬಾರದು ; ನನ್ನ ಮನಸ್ಸು ನೋಯುವಂತೆ ನಡಕೊಳ್ಳಬಾರದು. ನನ್ನ ಈ ನಿಯಮವನ್ನು ಮುರಿದ ದಿವಸವೇ ನಾನು ಹೊರಟುಹೋಗುವೆನು. ಇದಕ್ಕೆ ನಿನ್ನ ಒಪ್ಪಿಗೆಯಿದ್ದರೆ ನಿನ್ನ ಹೆಂಡತಿಯಾಗುವೆನು" ಅಂದಳು. ಶಾಂತನುವು ಆಕೆಯ ಈ ಮಾತಿಗೆ ಒಪ್ಪಿಕೊಂಡು ಆಕೆಯ ಲಗ್ನವಾಗಿ ಆಕೆಯಲ್ಲಿ ರಮಮಾಣನಾದನು. ಆಕೆಯ ಗುಣಗಳನ್ನೂ, ಸೇವಾಧರ್ಮವನ್ನೂ ನೋಡಿ ಶಾಂತನುವು ಸಂತುಷ್ಟನಾದನು ಶಾಂತನುವಿನಭಾಗ್ಯವೇ ಅಂತಹದು ; ಹಾಗಲ್ಲದಿದ್ದರೆ ಸ್ವರ್ಗಸ್ಥ ಭಾಗೀರಥಿಯು ಆತನ ಹೆಂಡತಿಯಾಗಬಹುದೆ? ಭಾಗೀರಥಿಯು ಇಂದ್ರನಂತೆ ತೇಜಸ್ವಿಯಾದಶಾಂತನುವಿನ ಗುಣಗಳಿಗೆ ಲುಬ್ಧಳಾಗಿ ಆತನನ್ನು ಪ್ರೀತಿಸುತ್ತ, ಶೃಂಗಾರ ಪ್ರಧಾನ ಚಾತುರ್ಯದಿಂದ ಆತನನ್ನು ತೀರ ವಶಮಾಡಿಕೊಂಡುಬಿಟ್ಟಳು.

ಹೀಗಿರುವಾಗ ಕೆಲಕಾಲವು ಕ್ರಮಿಸುತ್ತಿರಲು, ಗಂಗೆಗೆ ದೇವತೆಗಳಂತಹ ಎಂಟುಜನ ಮಕ್ಕಳಾದರು. ಪ್ರತಿಒಬ್ಬ ಮಗನು ಹುಟ್ಟುತ್ತಲೇ

ಆಕೆಯು ತನ್ನ ಶಾಂತನುವನ್ನು ಕುರಿತು–"ಇಗೋ ನೋಡು, ನಿನ್ನ ಮನಸ್ಸಿನಲ್ಲಿದ್ದಂತೆ ಮಾಡುವೆನು" ಎಂದು ಹೇಳಿ, ಹುಟ್ಟಿದ ಶಿಶುವನ್ನು ಭಾಗೀರಥಿಯಲ್ಲಿ ಚಲ್ಲುತ್ತ, ಹೀಗೆ ಏಳೂ ಮಕ್ಕಳನ್ನು ಗಂಗೆಯಪಾಲು ಮಾಡಿದಳು. ಆಕೆಯು ಎಂಟನೆಯ ಮಗನನ್ನು ಗಂಗೆಯಲ್ಲಿ ಚಲ್ಲುವಾಗ ಶಾಂತನುವು ತಡೆಯಲಾರದೆ, "ಈ ಒಂದು ಕೂಸನ್ನಾದರೂ ಉಳಿಸಿಕೊಳ್ಳಬೇಕೆಂ"ಬ ಇಚ್ಛೆಯಿಂದ ಆಕೆಯನ್ನು ಕುರಿತು–"ಎಲೈ ಕರ್ಕಶೀ, ಹುಡುಗರನ್ನು ಕೊಲ್ಲುವ ಈ ಅಘೋರ ಕರ್ಮವನ್ನು, ನೀನು ಯಾಕೆ ಮಾಡುವೆ? ನೀನು ಇರುತ್ತೀಯಾದರೂ ಯಾರು?" ಎಂದು ಕೇಳಿದನು. ಆಗ ಗಂಗೆಯು ಆತನನ್ನು ಕುರಿತು–"ರಾಜಾ, ಈ ಹುಡುಗನು ಬೇಕಾಗಿದ್ದರೆ ಕರೆದುಕೋ ನಿನ್ನೊಡನೆ ನಾನು ಮಾಡಿದ್ದ ನಿಯಮವನ್ನು ನೀನು ಮುರಿದದ್ದರಿಂದ, ಇನ್ನು ನಾನು ನಿನ್ನಲ್ಲಿ ಇರಲಾರೆನು," ಎಂದು ನುಡಿದು, ವ ಹಾಭಿಷನ, ಹಾಗು ಅದರಂತೆ ಅಷ್ಟವಸುಗಳ ಶಾಪದ ವೃತ್ತಾಂತವನ್ನು ಹೇಳಿ, ಆತನನ್ನು ಕುರಿತು "ರಾಜಾ, ನೀನು ಅಷ್ಟವಸುಗಳಿಗೆಜನ್ಮಕೊಟ್ಟದ್ದರಿಂದನಿನಗೆ ಸ್ವರ್ಗದೊಳಗಿನ ಅಕ್ಷಯ್ಯಲೋಕಗಳು ಸಿಗುವವು "ದ್ಯು" ಎಂಬ ವಸುವಾಗಿದ್ದ ಈ ಹುಡುಗನು ನನ್ನ ಹೊಟ್ಟೆಯಲ್ಲಿ ಹುಟ್ಟಿರುವದರಿಂದ "ಗಂಗೆಯು ನನಗೆ ಕೊಟ್ಟಿರುವಳು" ಎಂದು ತಿಳಿದು ನೀನು ಈ ಮಹಾತೇಜಸ್ವಿಯ ಪಾಲನ ಪೋಷಣಗಳನ್ನು ಸರಿಯಾಗಿಮಾಡು. ನಿನ್ನ ಕಲ್ಯಾಣವಾಗಲಿ" ಎಂದು ಹರಿಸಿದಳು.

**೯೯ನೆಯ ಅಧ್ಯಾಯ — ವಸುಶಾಪವೃತ್ತ** — ಗಂಗೆಯು ಈ ಮಾತುಗಳನ್ನು ಕೇಳಿ ಶಾಂತನುವು–"ಎಲೈ ಭಾಗೀರಥೀ, ವಸುಗಳಿಗೆ ಶಾಪವು ಹೇಗಾಯಿತು?" ಎಂದು ಕೇಳಲು, ಭಾಗೀರಥಿಯು—"ರಾಜಾ, ವರುಣನಿಗೆ ವಶಿಷ್ಠನೆಂಬ ಒಬ್ಬ ಮಗನಿದ್ದನು. ಆತನಿಗೆ ಆಪವನೆಂತಲೂ ಅನ್ನುವರು. ಆತನು ಮೇರುಪರ್ವತದಬಳಿಯಲ್ಲಿಯ ತನ್ನ ಆಶ್ರಮದಲ್ಲಿ ತಪಸ್ಸು ಮಾಡುತ್ತಿದ್ದನು. ಆತನಬಳಿಯಲ್ಲಿ ಒಂದು ಕಾಮಧೇನುವು ಇದ್ದು, ಆ ಮನೋಹರವಾದ ಆಶ್ರಮಕ್ಕೆ ಬಂದಿದ್ದ ಅಷ್ಟವಸುಗಳಲ್ಲಿಯ "ದ್ಯು" ಎಂಬ ವಸುವಿನ ಹೆಂಡತಿಯು ಅದನ್ನು ನೋಡಿದಳು. ಆಕೆಯು ತನ್ನ ಪತಿಯುನ್ನು ಕುರಿತು—"ಇಲ್ಲಿನೋಡಿದಿರೇನು ಈ ಪುಷ್ಟ ಆಕಳು

ಎಷ್ಟು ಸುಂದರವದೆ" ಅನ್ನಲು, ದ್ಯುವು ತನ್ನ ಹೆಂಡತಿಗೆ—"ಇದು ವಶಿಷ್ಠಋಷಿಯ ಆಕಳು. ಇದರಹಾಲು ಕುಡಿದ ಮನುಷ್ಯನು ಹತ್ತುಸಾವಿರವರ್ಷ ಬದುಕುವನಲ್ಲದೆ, ಆತನಿಗೆ ಸಾಯುವವರೆಗೆ ತಾರುಣ್ಯವಿರುವದು," ಎಂದು ಹೇಳಿದನು. ಅದನ್ನು ಕೇಳಿ ಆತನ ಹೆಂಡತಿಯು—"ಹಾಗಾದರೆ ಈ ಆಕಳನ್ನು ನನಗೆ ಹಿಡಿದುಕೊಡಬಾರದೆ? ಭೂಲೋಕದಲ್ಲಿರುವ "ಜಿತವತಿ"ಯೆಂಬ ನನ್ನ ಸಖಿಯಾದ ಸುಂದರರಾಜಪುತ್ರಿಗೆ ಇದನ್ನು ಕಳಿಸಿಕೊಡುವೆನು; ಅಂದರೆ ಆಕೆಯು ಇದರ ಹಾಲುಕುಡಿದು ಕಡೆತನಕ ತಾರುಣ್ಯದಿಂದ ಇರುವಳು" ಎಂದು ಕೇಳಿದಳು. ಆಗ ದ್ಯುವು ತನ್ನ ತಮ್ಮಂದಿರಾದ ಪೃಥು ಮೊದಲಾದವರನ್ನು ಕರಕೊಂಡು ಆ ಆಕಳನ್ನು ಕರುವಿನೊಡನೆ ಹಿಡಕೊಂಡು ಹೊರಟುಹೋದನು. ವಶಿಷ್ಠಋಷಿಯ ಹಂಗು ಆಸ್ತ್ರೈಣನಿಗೆ ಉಳಿಯಲಿಲ್ಲ! ಇತ್ತ ಅರಣ್ಯಕ್ಕೆ ಹೋಗಿದ್ದ ಋಷಿಯು ಬಂದು ತನ್ನ ಆಕಳನ್ನು ಆಶ್ರಮದಲ್ಲಿ ಕಾಣದೆ, ವಸುಗಳು ಅದನ್ನು ಅಪಹರಿಸಿದ್ದನ್ನು ಜ್ಞಾನದೃಷ್ಟಿಯಿಂದ ತಿಳಿದು ಸಿಟ್ಟಿನಿಂದ—"ನನ್ನ ಹಿಂಡಿನ ಆಕಳನ್ನು ಅಪಹರಿಸಿಕೊಂಡುಹೋಗಿದ್ದ ವಸುಗಳು ಮನುಷ್ಯಯೋನಿಯಲ್ಲಿ ಹುಟ್ಟಲಿ" ಎಂದು ಶಾಪವನ್ನುಕೊಟ್ಟನು. ಈ ಶಾಪದ ಸುದ್ದಿಯನ್ನು ಕೇಳಿ ವಸುಗಳು ಬಂದು ವಶಿಷ್ಠನನ್ನು ಪ್ರಾರ್ಥಿಸಲು, ಆತನ ಸಿಟ್ಟು ಶಾಂತವಾಗಲಿಲ್ಲ. ಆತನು ವಸುಗಳಿಗೆ—"ನನ್ನ ಮಾತು ಎಂದೂ ಸುಳ್ಳಾಗಲಾರದು. ಹಾಗೆ ಸುಳ್ಳಾಗಬೇಕೆಂದು ನನ್ನ ಇಚ್ಛೆಯೂ ಇರುವದಿಲ್ಲ; ಆದರೂ ಧರನೇ ಮೊದಲಾದ ನಿಮ್ಮ ಏಳು ಜನರು ನನ್ನ ಶಾಪದಿಂದ ಒಂದುವರ್ಷದಲ್ಲಿಯೇ ಮುಕ್ತರಾಗುವಿರಿ. ಯಾರಿಂದ ನಿಮಗೆ ಶಾಪವಾಯಿತೋ, ಆ "ದ್ಯು" ಎಂಬವನು ಮಾತ್ರ ತನ್ನ ಕರ್ಮದ ಫಲವನ್ನು ಭೋಗಿಸುವದಕ್ಕಾಗಿ ಬಹುಕಾಲ ಮೃತ್ಯುಲೋಕದಲ್ಲಿ ವಾಸಿಸುವನು. ಆತನು ಒಳ್ಳೇ ಧರ್ಮಾತ್ಮನೂ, ಸರ್ವಶಾಸ್ತ್ರಪಾರಂಗತನೂ ಆಗಿ, ತಂದೆಯುಸಲುವಾಗಿ ಸ್ತ್ರೀಸುಖವನ್ನು ಭೋಗಿಸುವದಿಲ್ಲ, ಅರ್ಥಾತ್ ಆತನಿಗೆ ಮುಂದೆ ಸಂತತಿಯು ಆಗಲಾರದು." ಎಂದು ಹೇಳಿದನು. ಆಗ ಎಲ್ಲ ವಸುಗಳು ನನ್ನಬಳಿಗೆ ಬಂದು ತಮ್ಮನ್ನು ಹುಟ್ಟಿದ ಕೂಡಲೆ ಭಾಗೀರಥಿಯಲ್ಲಿ ಚಲ್ಲಿಕೊಡಬೇಕೆಂದು ಹೇಳಿದ್ದರಿಂದ, ನಾನು

ಹಾಗೆ ಮಾಡಿದೆನು. ಈ ಉಳಿದ ಹುಡುಗನು "ದ್ಯು" ಎಂಬ ಹೆಸರಿನ ವಸುವಾಗಿರುವನು. ಈತನು ಶಾಪದಮೂಲಕ ಮನುಷ್ಯಲೋಕದಲ್ಲಿ ಬಹುದಿವಸ ಇರುವನು." ಎಂದು ನುಡಿದು, ಭಾಗೀರಥಿಯು ಹುಡುಗನೊಡನೆ ಅಲ್ಲಿಯೇ ಅದೃಶ್ಯಳಾದಳು. ಇತ್ತ ಶಾಂತನುವು ದುಃಖದಿಂದ ತನ್ನ ಪಟ್ಟಣಕ್ಕೆ ತಿರುಗಿದನು. ಜನಮೇಜಯಾ, ಆ ಹುಡುಗನಿಗೆ ಗಾಂಗೇಯ, ದೇವವ್ರತ, ಭೀಷ್ಮ ಎಂಬ ಹೆಸರುಗಳು ಉಂಟಾದವು. ಭರತಕುಲದಲ್ಲಿ ಹುಟ್ಟಿದ ಈ ಮಹಾತ್ಮನ ಇತಿಹಾಸಕ್ಕೇ ಮಹಾಭಾರತವೆನ್ನುವರೆಂದು ತಿಳಿದುಕೋ.

## ೧೦೦ನೇ ಅಧ್ಯಾಯ — ಶಾಂತನು-ಭೀಷ್ಮರವೃತ್ತಾಂತ —

ಶಾಂತನುರಾಜನು ಬುದ್ಧಿವಂತನಿದ್ದು ಧರ್ಮಾತ್ಮನಾಗಿದ್ದನು. ಆತನು ಭರತವಂಶೀಯರನ್ನೂ, ಬೇರೆಜನರನ್ನೂ ಉತ್ತಮರೀತಿಯಿಂದ ಪರಿಪಾಲಿಸಿದನು. ಆ ಕೀರ್ತಿಶಾಲಿರಾಜನ ಆಚರಣವನ್ನು ನೋಡಿ ಅರ್ಥ-ಕಾಮಗಳಿಗಿಂತ ಧರ್ಮವೇ ಶ್ರೇಷ್ಠವೆಂದು ಇತರಜನರ ನಂಬಿಗೆಯಾಯಿತು. ಧರ್ಮಸಂಬಂಧದ ಕೃತ್ಯಗಳಲ್ಲಿ ಆತನ ಅದ್ವಿತೀಯತ್ವವನ್ನು ನೋಡಿ, ಬೇರೆ ರಾಜರು ಆತನ ಸಾರ್ವಭೌಮ ಸತ್ತೆಯನ್ನು ಒಪ್ಪಿಕೊಂಡರು. ಹೀಗೆ ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ಶಾಂತನುವಿನ ಮಾಂಡಲಿಕರಾದದ್ದರಿಂದ, ಆ ರಾಜರಿಗೆ ಸ್ವಂತದ ಸಂರಕ್ಷಣದಚಿಂತೆಯು ದೂರವಾಯಿತು. ಅವರ ಯಜ್ಞ, ದಾನ ಮೊದಲಾದ ಕೃತ್ಯಗಳೆಲ್ಲ ನಿರ್ವಿಘ್ನವಾಗಿ ಸಾಗಹತ್ತಿದವು. ಹೀಗೆ ಸಾರ್ವಭೌಮರಾಜನೂ, ಮಾಂಡಲಿಕರಾಜರೂ ಧರ್ಮಪರಾಯಣರಾಗಿ ರಾಜ್ಯವಾಳಹತ್ತಿದ್ದರಿಂದ, ರಾಜ್ಯದೊಳಗಿನ ಎಲ್ಲ ಜನರೂ ಧರ್ಮಪರಾಯಣರಾಗಿಹೋದರು. ಕ್ಷತ್ರಿಯರು ಬ್ರಾಹ್ಮಣರ ಸೇವಕರಾದರು ; ವೈಶ್ಯರು ಕ್ಷತ್ರಿಯರನ್ನು ಅನುಸರಿಸಿ ನಡೆಯಹತ್ತಿದರು ; ಶೂದ್ರರು ಬ್ರಾಹ್ಮಣ-ಕ್ಷತ್ರಿಯ-ವೈಶ್ಯ ಎಂಬ ಮೂರುವರ್ಣಗಳನ್ನು ಸೇವಿಸತೊಡಗಿದರು.

ಶಾಂತನುವು ಹಸ್ತಿನಾಪುರವನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡು, ಸಮುದ್ರವಲಯಾಂಕಿತಪೃಥ್ವಿಯನ್ನು ಆಳತೊಡಗಿದನು. ಆತನು ಅತ್ಯಂತ ಸರಳಮನಸ್ಸಿನವನು, ಸತ್ಯವಾದಿಯು. ದಾನ, ಧರ್ಮ, ತಪ,

ಯೋಗ ಎಂಬ ನಾಲ್ಕು ಪ್ರಕಾರದ ಕೃತಿಗಳಿಂದ ಆತನ ವೈಭವವು ವಿಶೇಷವಾಗಿ ಹೆಚ್ಚಿತು ಆತನು ರಾಗ ದ್ವೇಷರಹಿತನಾದದ್ದರಿಂದ ಆತನ ಕಾಂತಿಯು ಚಂದ್ರನಂತೆ ಸೌಮ್ಯವಾಗಿತ್ತು. ಬಹಳ ಹೇಳುವುದೇನು ? ಆ ಶ್ರೇಷ್ಠ ರಾಜನ ರಾಜ್ಯದಲ್ಲಿ ಪ್ರಜೆಗಳಿಗೆ ನಿಷ್ಪಕ್ಷಪಾತದ ನ್ಯಾಯವು ದೊರೆಯಹತ್ತಿ, ಅವರು ಸತ್ಯವಾದಿಗಳೂ, ಧರ್ಮಪರಾಯಣರೂ ಆದರು. ಹೀಗೆ ಆತನು ರಾಜ್ಯವಾಳುತ್ತಿರುವಾಗ ಮೂವತ್ತು ವರ್ಷಗಳು ಕ್ರಮಿಸಿಹೋದವು. ಈ ಅವಧಿಯಲ್ಲಿ ಸ್ತ್ರೀಸುಖವೆಂದರೇನೆಂಬದು ಗೊತ್ತೇ ಇದ್ದಿಲ್ಲವೆಂಬಂತೆ, ಆತನು ಬೇರೆವಿಷಯಗಳಲ್ಲಿ ಕಾಲವನ್ನು ಕಳೆಯುತ್ತಿದ್ದನು. ಆತನಿಗೆ ಗಂಗೆಯಿಂದ ಹುಟ್ಟಿದ ದೇವವ್ರತನೆಂಬ ಒಬ್ಬ ಮಗನಿದ್ದನು. ಒಮ್ಮೆ ಶಾಂತನುರಾಜನು ಬೇಟೆಯಾಡಲಿಕ್ಕೆ ಹೋದಾಗ, ಒಂದು ಜಿಗರೆಯನ್ನು ಬೆನ್ನಟ್ಟಿ ಗಂಗಾತೀರಕ್ಕೆ ಹೋದನು ಆಗ ಭಾಗೀರಥಿಯ ಪಾತ್ರದಲ್ಲಿ ನೀರು ಕಡಿಮೆಯಾಗಿತ್ತು. ಇದರ ಕಾರಣವೇನೆಂದು ಆತನು ವಿಚಾರ ಮಾಡುತ್ತಿರುವಾಗ, ಒಬ್ಬ ಸುಂದರಬಾಲಕನು ಆತನಕಣ್ಣಿಗೆ ಬಿದ್ದನು. ಆ ಹುಡುಗನು ಬಾಣದಮೇಲೆಬಾಣವನ್ನು ಬಿಟ್ಟು ಪ್ರವಾಹವನ್ನು ತರಬುತ್ತಿದ್ದನು. ಆ ಹುಡುಗನ ಶರಸಂಧಾನವನ್ನು ನೋಡಿ ಶಾಂತನುವಿಗೆ ಬಹಳ ಆಶ್ಚರ್ಯವಾಯಿತು. ಹುಟ್ಟಿದಾಗ ಆ ಹುಡುಗನನ್ನು ಶಾಂತನುವು ನೋಡಿದ್ದರೂ, ಈಗ ಆತನ ಗುರುತು ಆ ರಾಜನಿಗೆ ಹತ್ತಲಿಲ್ಲ. ಅಷ್ಟರಲ್ಲಿ ಆ ಹುಡುಗನು ತನ್ನ ತಂದೆಯನ್ನು ನೋಡಿ, ಮಾಯೆಯಿಂದ ಆತನನ್ನು ಮೋಹಿಸಿ, ಅಲ್ಲಿಯೇ ಗುಪ್ತನಾದನು. ಆಗ ಶಾಂತನುವು ಗಂಗೆಯನ್ನು ಕುರಿತು—"ಆ ಹುಡುಗನನ್ನು ನನಗೆ ತೋರಿಸು" ಎಂದು ಹೇಳಿದನು.

ಆಗ ಗಂಗೆಯು ಸುಂದರ ಸ್ತ್ರೀವೇಷದಿಂದ ಪ್ರಕಟವಾದಳು. ಹಿಂದಕ್ಕೆ ಶಾಂತನುವು ಅದೇ ರೂಪವನ್ನು ನೋಡಿದ್ದರೂ, ಈಗ ಆತನಿಗೆ ಗಂಗೆಯ ಗುರುತು ಹತ್ತಲಿಲ್ಲ. ಆಗ ಗಂಗೆಯು ಶಾಂತನುವನ್ನು ಕುರಿತು—"ರಾಜಾ, ಹಿಂದಕ್ಕೆ ನನ್ನಿಂದ ನಿನಗಾಗಿದ್ದ ಎಂಟು ಹುಡುಗರಲ್ಲಿ, ನಿನ್ನ ಈ ಎಂಟನೆಯ ಹುಡುಗನನ್ನು ನೀನು ಕರೆದುಕೋ. ಈವರೆಗೆ ಈತನನ್ನು ನಾನು ಜೋಪಿಸಿದೆನು ಇನ್ನು ಈತನನ್ನು ನಿನ್ನ ಮನೆಗೆ ಕರೆದುಕೊಂಡುಹೋಗು ಈತನು ಸರ್ವಗುಣಸಂಪನ್ನನಿದ್ದು, ಅಸ್ತ್ರ

ವಿದ್ಯೆಯಲ್ಲಿ ಪ್ರವೀಣನಿರುವನು. ವಶಿಷ್ಠಋಷಿಗಳು ಷಡಂಗಸಹಿತವಾಗಿ ಈತನಿಗೆ ವೇದಗಳನ್ನು ಕಲಿಸಿರುವರು. ಯುದ್ಧವಿದ್ಯೆಯಲ್ಲಿ ಈತನು ಇಂದ್ರನಂತೆ ಇರುವನು. ದೇವದೈತ್ಯರಿಬ್ಬರಿಗೂ ಮಾನ್ಯರಾದ ಬೃಹಸ್ಪತಿ–ಶುಕ್ರರಿಗಿಬ್ಬರಿಗೂ ಬರುತ್ತಿದ್ದ ಶಾಸ್ತ್ರಗಳಲ್ಲೆಲ್ಲ ಈತನು ಪ್ರವೀಣನಿರುವನು. ಅಜಿಂಕ್ಯನಾದ ಪರಶುರಾಮನಿಗೆ ಬರುತ್ತಿದ್ದ ಅಸ್ತ್ರವಿದ್ಯೆಯೆಲ್ಲ ಈತನಿಗೆ ಬರುತ್ತಿದ್ದು, ರಾಜಧರ್ಮದಲ್ಲಿಯೂ, ಅರ್ಥಶಾಸ್ತ್ರದಲ್ಲಿಯೂ ಈತನು ಪ್ರವೀಣನಾಗಿರುವನು. ಇಂಥವನನ್ನು ನೀನು ನಿನ್ನ ಮನೆಗೆ ಕರೆದುಕೊಂಡು ನಡೆ," ಎಂದು ಹೇಳಿದಳು. ಆಗ ಶಾಂತನುವು ಸಂತೋಷದಿಂದ ಮಗನನ್ನು ರಾಜಧಾನಿಗೆ ಕರೆದೊಯ್ದು, ಆತನಿಗೆ ಯೌವರಾಜ್ಯಾಭಿಷೇಕವನ್ನು ಮಾಡಿದನು. ಇಂಥ ಸತ್ಪುತ್ರನೊಡನೆ ಶಾಂತನುವು ನಾಲ್ಕುವರ್ಷ ಆನಂದದಿಂದ ಇದ್ದನು.

**ಶಾಂತನುವು ಸತ್ಯವತಿಯನ್ನು ಕಂಡದ್ದು**—ಜನಮೇಜಯಾ, ಹೀಗಿರುವಾಗ ಒಂದುದಿನ ಶಾಂತನುವು ಯಮುನಾನದಿಯ ದಂಡೆಯ ವನದಲ್ಲಿ ಸಂಚರಿಸುತ್ತಿರುವಾಗ, ಒಂದು ಪ್ರಕಾರದ ಸುವಾಸನೆಯು ಬರತೊಡಗಿತು. ಈ ಲೋಕೋತ್ತರ ಪರಿಮಳವು ಎಲ್ಲಿಯದೆಂದು, ಆತನು ಸುತ್ತಲೆ ತಿರುಗಿ ಶೋಧಿಸುತ್ತಿರುವಾಗ, ಒಬ್ಬ ಅಂಬಿಗರ ಹುಡುಗೆಯು ಆತನ ಕಣ್ಣಿಗೆ ಬಿದ್ದಳು. ಆಕೆಯ ಸೌಂದರ್ಯವನ್ನೂ, ಮೈಗಂಧವನ್ನೂ ನೋಡಿ ಶಾಂತನುವು ಆಕೆಯನ್ನು ಕುರಿತು—"ನೀನು ಯಾರು" ಎಂದು ಕೇಳಲು, ಆಕೆಯು—"ರಾಜಾ, ನಿನ್ನ ಕಲ್ಯಾಣವಾಗಲಿ. ನಾನು ಒಬ್ಬ ಅಂಬಿಗನ ಮಗಳು. ನನ್ನ ತಂದೆಯ ಅಪ್ಪಣೆಯಂತೆ ಈ ನದಿಯಲ್ಲಿ ಧರ್ಮಾರ್ಥವಾಗಿ ನಾವನ್ನು ನಡಿಸುತ್ತಿರುವೆನು," ಎಂದು ಹೇಳಿದಳು. ರಾಜನ ಮನಸ್ಸು ಆಕೆಯಮೇಲೆ ಕುಳಿತದ್ದರಿಂದ, ಆತನು ಆಕೆಯ ತಂದೆಯಬಳಿಗೆ ಹೋಗಿ ತನ್ನ ಸಲುವಾಗಿ ಆಕೆಯನ್ನು ಕೇಳಿದನು. ಅದಕ್ಕೆ ಅಂಬಿಗನು—"ಮಹಾರಾಜ, ಈಕೆಯನ್ನು ಯೋಗ್ಯವರನಿಗೆ ಕೊಡಬೇಕಾಗಿದೆ; ಆದರೆ ನಿಮ್ಮಿಂದ ಈಕೆಯಲ್ಲಿ ಹುಟ್ಟಿದ ಮಗನಿಗೆ ರಾಜ್ಯವು ದೊರೆಯುವಹಾಗಿದ್ದರೆ ನಿಮಗೆ ಈಕೆಯನ್ನು ಕೊಡುವೆನು." ಎಂದು ಹೇಳಿದನು; ಆದರೆ ಅಂಬಿಗನ ಈ ಮಾತು ಅರಸನಿಗೆ ಒಪ್ಪಿಗೆಯಾಗದ್ದರಿಂದ ಆತನು ಸುಮ್ಮನೆ

ಹಸ್ತಿನಾಪುರಕ್ಕೆ ಹೋದನು ಆದರೆ ಆ ಅಂಬಿಗನ ಹುಡುಗೆಯ ಚಿಂತೆಯಿಂದ ಆತನ ದೇಹವು ಬಹಳ ಕ್ಷೀಣವಾಯಿತು. ಇದನ್ನು ನೋಡಿ ದೇವವ್ರತನು ತಂದೆಯನ್ನು ಕುರಿತು—"ಮಹಾರಾಜ, ಎಲ್ಲ ಅನುಕೂಲವಿದ್ದು ನೀವು ಹೀಗೆ ಸೊರಗಿರುವ ಕಾರಣವೇನು ?" ಎಂದು ಕೇಳಿದನು.

ಮಗನ ಈ ಮಾತುಗಳನ್ನು ಕೇಳಿ ಶಾಂತನುವು—"ಬಾಲಾ, ನನ್ನ ಚಿಂತೆಯಕಾರಣವನ್ನು ಹೇಳುವೆನುಕೇಳು ನಮ್ಮ ಈ ದೊಡ್ಡ ಕುಲಕ್ಕೆ ನೀನು ಒಬ್ಬನೇ ಮಗನಿರುವೆ. ಆದರಲ್ಲಿಯೂ ನೀನು ಸುಮ್ಮನೆ ಕುಳಿತುಕೊಳ್ಳುವವನಲ್ಲ; ಕೈಯಲ್ಲಿ ಶಸ್ತ್ರಧರಿಸಿ ಯಾವಾಗಲೂ ಒಂದಿಲ್ಲೊಂದು ಸಾಹಸದ ಕಾರ್ಯದಲ್ಲಿ ತೊಡಗಿರುತ್ತೀ. ಈ ಲೋಕದಲ್ಲಿ ಮನುಷ್ಯನ ಜೀವಿತವು ಅಶಾಶ್ವತವಾದದ್ದರಿಂದ, ಏನಾದರೂ ಒಳಿತು ಕೆಡಕು ಆದರೆ ನಮ್ಮ ವಂಶದ ಗತಿಯೇನು ? ನಿನ್ನಂಥ ಯೋಗ್ಯಮಗನಿರಲು, ಎರಡನೆಯ ಲಗ್ನಮಾಡಿಕೊಳ್ಳುವ ಇಚ್ಛೆಯು ನನಗಿರುವದಿಲ್ಲ; ಆದರೆ ವಂಶವು ಸ್ಥಿರವಾಗಬೇಕೆಂಬ ವಿಚಾರವು ಮನಸ್ಸಿನಲ್ಲಿ ಬಂದಕೂಡಲೆ, ತಿರುಗಿ ಲಗ್ನಮಾಡಿಕೊಳ್ಳುವ ವಿಚಾರವು ಮನಸ್ಸಿನಲ್ಲಿ ಬರುತ್ತದೆ; ಯಾಕಂದರೆ, "ಒಬ್ಬ ಮಗನು ಇದ್ದೂ ಇಲ್ಲದಹಾಗೆಯೇ" ಎಂದು ಶಾಸ್ತ್ರಜ್ಞರು ಹೇಳುವರು. ನೀನು ಶೂರನೂ, ಸಂತಾಪಿಯೂ ಇದ್ದು, ಶಸ್ತ್ರಧರನಾಗಿರುವದರಿಂದ ಯುದ್ಧದಲ್ಲಿ ಮರಣ ಒದಗುವ ಸಂಭವವು ವಿಶೇಷವಾಗಿರುತ್ತದೆ. ಯಾವದಾದರೂ ಕಾರಣದಿಂದ ಇಂಥ ಪ್ರಸಂಗವು ಒದಗಿದರೆ, ವಂಶವೃದ್ಧಿಯು ಹೇಗಾದೀತೆಂಬ ಚಿಂತೆಯು ನನ್ನನ್ನು ಬಾಧಿಸುತ್ತಿರುವದು," ಎಂದು ಹೇಳಿದನು. ತಂದೆಯ ಈ ಮಾತುಗಳನ್ನು ಕೇಳಿ ದೇವವ್ರತನು ವಿಚಾರಪರನಾಗಿ, ಕೂಡಲೆ ತಂದೆಯ ವಿಶ್ವಾಸದ ಮಂತ್ರಿಗಳಕಡೆಗೆ ಹೋಗಿ ತಂದೆಯ ದುಃಖದ ಕಾರಣವನ್ನು ಕೇಳಿದನು; ಆಗ ಅವರು ಅಂಬಿಗನ ಮಗಳ ಸಂಗತಿಯನ್ನೂ, ಆಕೆಯ ತಂದೆಯು ಹಾಕಿದ ನಿರ್ಬಂಧವನ್ನೂ ಸಾದ್ಯಂತವಾಗಿ ದೇವವ್ರತನಿಗೆ ಹೇಳಿದರು ಆಗ ಆ ರಾಜಕುಮಾರನು ಆ ಮಂತ್ರಿಗಳನ್ನು ಕರೆದುಕೊಂಡು ಆ ಧೀವರ ಕನ್ಯೆಯ ತಂದೆಯಬಳಿಗೆ ಹೋಗಿ, ಆಕೆಯನ್ನು ತನ್ನ ತಂದೆಗೆ ಲಗ್ನಮಾಡಿಕೊಡಬೇಕೆಂದು ಕೇಳಿದನು. ಆಗ ಅಂಬಿಗನು ಭೀಷ್ಮನ ಆದರಸತ್ಕಾರಮಾಡಿ ಆತನನ್ನು ಸಭೆಗೆ ಕರೆದು—

ಅಂಬಿಗ—ಭಾರತಶ್ರೇಷ್ಠಾ, ನಿನ್ನ ವಿಚಾರವು ನನಗೆ ತಿಳಿಯಿತು. ಇಂಥ ಸುಸಂಬಂಧವನ್ನು ಕಳೆದುಕೊಳ್ಳುವದು, ಇಂದ್ರನಿಗೂ ಪಶ್ಚಾತ್ತಾಪವನ್ನುಂಟುಮಾಡುವಂತಹದೆಂಬದನ್ನೂ ನಾನು ಅರಿತಿರುವೆನು; ನನ್ನ ಈ ಸುಂದರ ಸತ್ಯವತಿಯು ನಿನ್ನಂಥ ಒಬ್ಬ ಶ್ರೇಷ್ಠಪುರುಷನಿಂದ ಉತ್ಪನ್ನಳಾಗಿದ್ದು, ಈಕೆಗೆ ನಿನ್ನ ತಂದೆಯೇ ಯೋಗ್ಯವರನೆಂದು ಆ ಶ್ರೇಷ್ಠಪುರುಷನು ನನ್ನಮುಂದೆ ಹೇಳಿರುವನು. ಹಿಂದಕ್ಕೆ ಅಸಿತನೆಂಬ ಒಬ್ಬ ಶ್ರೇಷ್ಠಮುನಿಯು ಈಕೆಯನ್ನು ಲಗ್ನವಾಗಲು ಕೇಳಿದನು; ಆದರೂ ನಾನು ಇದೇಕಾರಣದಿಂದ ಅದಕ್ಕೆ ಒಪ್ಪಿಕೊಳ್ಳಲಿಲ್ಲ; ಆದರೆ ಶಾಂತನುವಿಗೆ ನಿನ್ನಂಥ ಪರಾಕ್ರಮಿಯೂ, ರಾಜಕಾರ್ಯಧುರೀಣನೂ ಆದ ಅಲೌಕಿಕ ಪ್ರಭಾವದ ಮಗನಿರುತ್ತಿರಲು, ಆ ನಿನ್ನತಂದೆಗೆ ಸತ್ಯವತಿಯನ್ನು ಕೊಡುವದರಿಂದ ಆಕೆಯ ಮಕ್ಕಳಿಗೆ ಆಗುವ ಲಾಭವೇನು ಹೇಳು? ಈ ಮಾತನ್ನು ನೀನಾದರೂ ವಿಚಾರಿಸಬಹುದಾಗಿದೆ

ದೇವವ್ರತ—ಧೀವರಾ, ಇಷ್ಟೇ ನಿನ್ನ ನಿರ್ಬಂಧವಿದ್ದರೆ, ಯಾರೂ ಹಿಂದಕ್ಕೆ ಮಾಡದಿರುವ, ಹಾಗು ಇನ್ನು ಮುಂದೆ ಯಾರೂ ಮಾಡದಿರುವ ಪ್ರತಿಜ್ಞೆಯನ್ನು ಮಾಡಿ ಹೇಳುತ್ತೇನೆ—ನಿನ್ನ ಮಗಳಿಗೆ ಹುಟ್ಟಿದ ಮಗನೇ ಮುಂದೆ ರಾಜ್ಯಾಧಿಕಾರಿಯಾಗುವನು

ಧೀವರ—ಅಪ್ಪಾ, ದೇವವ್ರತಾ, ನಿನ್ನ ಈ ಪ್ರತಿಜ್ಞೆಯಿಂದ ಶಾಂತನುವಿನ ಅನಾಥತ್ವವನ್ನು ನೀನು ದೂರಮಾಡಿದೆ, ಹಾಗು ನನಗೆ ಕನ್ಯಾದಾನದ ಫಲವನ್ನು ಒದಗಿಸಿಕೊಟ್ಟು ಶ್ರೇಯಸ್ಸು ನಿನಗೆ ಬಂದಂತಾಯಿತು. ನೀನು ಸತ್ಯಪ್ರತಿಜ್ಞನಾದದ್ದರಿಂದ ನುಡಿದಂತೆ ನಡೆಯಲು ತಪ್ಪಲಾರೆಯೆಂಬದು ನನಗೆ ಗೊತ್ತಿದೆ; ಆದರೆ ಹೆಣ್ಣು ಮಕ್ಕಳ ತಂದೆಯ ಹುಚ್ಚು ಹೋಗುವದು ಕಠಿಣವು; ಆದ್ದರಿಂದ ನನಗೆ ಮತ್ತೂ ಒಂದು ಸಂಶಯಬರುತ್ತದೆ; ಈಗ ನೀನೇನೋ ಪ್ರತಿಜ್ಞೆಯಿಂದ ರಾಜ್ಯದ ಹಕ್ಕು ಬಿಟ್ಟುಕೊಟ್ಟೆ; ಆದರೆ ಮುಂದೆ ನಿನ್ನ ಮಕ್ಕಳಿಂದ ಆ ಹಕ್ಕಿಗೆ ಬಾಧೆಬಂದರೆ?

ದೇವವ್ರತ—ಧೀವರಾ, ನಿನ್ನ ಈ ಎರಡನೆಯ ಸಂಶಯದ ನಿವಾರಣಕ್ಕಾಗಿ ನಾನು ಈ ಸಭೆಯಮುಂದೆ ಹೀಗೆ ಪ್ರತಿಜ್ಞೆಮಾಡುವೆನು; ನಾನು ಮೂಲತಃ ಲಗ್ನವನ್ನೇ ಮಾಡಿಕೊಳ್ಳದೆ, ಕೇವಲ ಬ್ರಹ್ಮಚರ್ಯದಿಂದಲೇ

ಕಾಲಹರಣಮಾಡುವೆನು. ಇದರಿಂದ ನಾನು ಪುತ್ರಹೀನನಾಗುವೆನೆಂಬದು ನಿಜವು. ಆದರೂ ನನಗೆ ಸ್ವರ್ಗದೊಳಗಿನ ಅಕ್ಷಯ್ಯ ಲೋಕಗಳು ಪ್ರಾಪ್ತ ವಾಗುವವು ಇನ್ನುಮೇಲೆ ನಿನ್ನ ಮಗಳನ್ನು ನನ್ನ ತಂದೆಗೆ ಕೊಡಲು ಪ್ರತಿಬಂಧವೇನು?

ಜನಮೇಜಯಾ, ದೇವವ್ರತನ ಈ ಮಾತುಗಳನ್ನು ಕೇಳಿ ಧರ್ಮಾತ್ಮನಾದ ಆ ಅಂಬಿಗನಿಗೆ ಪರಮಾನಂದನಾಯಿತು. ಆತನು ರೋಮಾಂಚಿತನಾಗಿ—"ನಾನು ಮಗಳನ್ನು ಕೊಡುವೆನು" ಎಂದು ನುಡಿದನು. ಆಗ ಆಕಾಶದಲ್ಲಿ ಋಷಿಗಳು, ದೇವತೆಗಳು, ಅಪ್ಸರರು ದೇವವ್ರತನನ್ನು ಕುರಿತು—"ಈತನು ಭೀಷ್ಮನು" ಅಂದರೆ "ಭಯಂಕರ ಕರ್ಮಮಾಡುವವನು" ಎಂದು ಹೇಳಿ, ಆತನಮೇಲೆ ಹೂಮಳೆಗರೆದರು. ಆಗ ಆ ದೇವವ್ರತನಿಗೆ "ಭೀಷ್ಮನೆಂ"ಬ ಹೆಸರು ಉಂಟಾಯಿತು. ಬಳಿಕ ಭೀಷ್ಮನು ತನ್ನ ತಾಯಿಯಾದ ಸತ್ಯವತಿಯನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಹಸ್ತಿನಾಪುರಕ್ಕೆ ಬಂದು, ಆಕೆಯನ್ನು ತಂದೆಗೆ ಒಪ್ಪಿಸಿದನು. ಆಗ ಶಾಂತನುವಿನ ಅಂತಃಕರಣವು ಪ್ರೇಮದಿಂದ ಉಕ್ಕಿಬಂದು—"ಭೀಷ್ಮಾ, ನೀನು ಇಚ್ಛಾಮರಣಿಯಾಗು. ನಿನಗೆ ಬದುಕುವ ಇಚ್ಛೆಯಿರುವವರೆಗೆ ಮೃತ್ಯುವಿನ ಆಘಾತವು ನಿನ್ನ ಮೇಲೆ ನಡೆಯಲಾರದು. ನಿನಗೆ ಸಾಯುವ ಇಚ್ಛೆಯಾದಾಗ ಮಾತ್ರ ಮೃತ್ಯುವು ನಿನ್ನಮೇಲೆ ಅಧಿಕಾರ ನಡಿಸುವನು." ಎಂದು ವರವನ್ನು ಕೊಟ್ಟನು.

**೧೦೧ನೇ ಅಧ್ಯಾಯ—ಶಾಂತನುಪುತ್ರ ಚಿತ್ರಾಂಗದನವಧೆ—** ರಾಜಾ, ಜನಮೇಜಯಾ, ಸತ್ಯವತಿಯೊಡನೆ ಶಾಂತನುವಿನ ಲಗ್ನವಾದ ಬಳಿಕ ಅವರಿಬ್ಬರಿಂದ ಚಿತ್ರಾಂಗದ, ವಿಚಿತ್ರವೀರ್ಯರೆಂಬ ಇಬ್ಬರು ಮಕ್ಕಳು ಹುಟ್ಟಿದರು. ಚಿತ್ರಾಂಗದನು ಸರ್ವಲಕ್ಷಣ ಸಂಪನ್ನನಾಗಿ ಶ್ರೇಷ್ಠವೀರನಾಗಿದ್ದನು ವಿಚಿತ್ರವೀರ್ಯನು ಸರ್ವ ರಾಜಲಕ್ಷಣಯುಕ್ತನಾಗಿ ಮಹಾಧನುರ್ಧರನೂ ಆಗಿದ್ದನು; ಆದರೆ ಈ ಶೂರವೀರ ಹುಡುಗರ ದುರ್ದೈವದಿಂದ ಇವರು ಪ್ರಬುದ್ಧರಾಗುವದರೊಳಗೆ ಶಾಂತನುವು ಸ್ವರ್ಗಸ್ಥನಾದನು. ಬಳಿಕ ಧರ್ಮಿಷ್ಠನಾದ ಭೀಷ್ಮನು ಸತ್ಯವತಿಯ ಅನುಮತಿಯಿಂದ ಚಿತ್ರಾಂಗದನನು ಸಿಂಹಾಸನದಮೇಲೆ ಕುಳ್ಳಿರಿಸಿದನು. ಪಟ್ಟ

ವೇರಿದ ಸ್ವಲ್ಪಕಾಲದಲ್ಲಿಯೇ ಚಿತ್ರಾಂಗದನು ಯಾವತ್ತು ಅರಸರನ್ನು ಗೆದ್ದು, ದೇವ-ಗಂಧರ್ವಾದಿಕರನ್ನು ಕೆಣಕತೊಡಗಿದನು. ಹೀಗಿರುವಾಗ ಚಿತ್ರಾಂಗದರಾಜನಿಗೂ, ಮಹಾಬಲಿಷ್ಠನಾದ ಚಿತ್ರಾಂಗದನೆಂಬ ಗಂಧರ್ವ ನಿಗೂ ಯುದ್ಧಪ್ರಸಂಗವು ಒದಗಿ, ಸರಸ್ವತೀನದೀತೀರದಲ್ಲಿ ಮೂರು ವರ್ಷ ಭಯಂಕರವಾದ ಯುದ್ಧವು ನಡೆಯಿತು. ಧನುರ್ವಿದ್ಯೆಯಲ್ಲಿ, ಅಥವಾ ಬಾಹುಬಲದಲ್ಲಿ ಚಿತ್ರಾಂಗದರಾಜನು ಸೋಲದಾಗಲು, ಚಿತ್ರಾಂಗದ ಗಂಧ ರ್ವನು ಚಿತ್ರಾಂಗದ ರಾಜನನ್ನು ಮಾಯೆಯಿಂದ ಸಂಹರಿಸಿದನು. ಆಗ ಭೀಷ್ಮನು ದುಃಖದಿಂದ ಆತನ ಉತ್ತರ ಕ್ರಿಯೆಯನ್ನು ಮಾಡಿ, ಸತ್ಯವತೀ ತಾಯಿಯ ಅನುಮತಿಯಿಂದ ವಿಚಿತ್ರ ವೀರ್ಯನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿದನು. ವಿಚಿತ್ರವೀರ್ಯನು ಚಿಕ್ಕವನಾದದ್ದರಿಂದ ಯಾವತ್ತು ರಾಜ್ಯಕಾರಭಾರವನ್ನು ಭೀಷ್ಮಾಚಾರ್ಯರ ಅನುಮತಿಯಿಂದ ಸಾಗಿಸಿ, ತನ್ನ ವಂಶಪರಂಪರೆಯ ಗೌರವವನ್ನು ಕಾಯ್ದುಕೊಂಡನು

**೧೦೨ನೇ ಅಧ್ಯಾಯ—ವಿಚಿತ್ರವೀರ್ಯನ ವೃತ್ತಾಂತ**--ಜನ ಮೇಜಯಾ, ವಿಚಿತ್ರವೀರ್ಯನು ಲಗ್ನಕ್ಕೆ ಯೋಗ್ಯನಾದದ್ದನ್ನು ಜಾಣಾ ಕ್ಷನಾದ ಭೀಷ್ಮನು ಅರಿತು, ಆತನ ಲಗ್ನವನ್ನು ಬೇಗನೆ ಮಾಡಬೇಕೆಂದು ಆಲೋಚಿಸತೊಡಗಿದನು. ಅಷ್ಟರಲ್ಲಿ ಕಾಶೀರಾಜನ ಮೂವರೂ ಮಕ್ಕಳ ಸ್ವಯಂವರವು ಒಮ್ಮೆಲೆ ಆಗುವದೆಂಬ ಸುದ್ದಿಯು ಭೀಷ್ಮನಿಗೆ ಗೊತ್ತಾ ಯಿತು. ಆಗ ಆತನು ತಾಯಿಯ ಸಮ್ಮತಿಯಿಂದ ಧನುರ್ಧಾರಿಯಾಗಿ ಒಬ್ಬನೇ ರಥದಲ್ಲಿ ಕುಳಿತು ವಾರಣಾಸಿಗೆ ಹೊರಟನು. ಅಲ್ಲಿ ಸ್ವಯಂವರ ಮಂಡಪವು ಸಿದ್ಧವಾಗಿದ್ದು, ಬೇರೆಬೇರೆ ರಾಜರು ತಮ್ಮ ತಮ್ಮ ಸ್ಥಳ ಗಳಲ್ಲಿ ಕುಳಿತುಕೊಂಡಿದ್ದರು. ಅಪ್ಸರೆಯರಂತೆ ಸುಂದರಿಯರಾದ ಅಂಬಾ-ಅಂಬಿಕಾ—ಅಂಬಾಲಿಕಾ ಎಂಬ ಮೂವರು ಕಾಶೀರಾಜನ ಮಕ್ಕಳಿಗೆ, ಕೂಡಿದ ಅರಸರ ಪರಾಕ್ರಮ-ವೈಭವಗಳನ್ನು ಹೇಳುತ್ತ ಹೇಳುತ್ತ ರಾಜ ಸೇವಕರು ಭೀಷ್ಮನಬಳಿಗೆ ಬಂದರು. ಭೀಷ್ಮನ ಹೆಸರನ್ನೂ, ಆತನ ನಾಮರ್ಥ್ಯ-ಕೀರ್ತಿಗಳನ್ನೂ ಕೇಳಿ, ಆ ಸುಂದರಿಯರು ಆತನನ್ನು ಕಣ್ಣೆತ್ತಿ ನೋಡಲು, ಆತನು ವೃದ್ಧನಾಗಿರುವದನ್ನು ಅವರು ಅರಿತು ಖಿನ್ನರಾಗಿ ಮುಂದಕ್ಕೆ ಸಾಗಿದರು. ಆಗ ಕೂಡಿದ ಅರಸರು ಭೀಷ್ಮನನ್ನು ಕುರಿತು—

"ಈ ವೃದ್ಧಕಪಿಯು ಇಲ್ಲಿ ಏಕೆ? ಈ ಧರ್ಮಮೂರ್ತಿಯು ಗಡ್ಡ ಬೆಳ್ಳಗೆ ಮಾಡಿಕೊಂಡು ಇಲ್ಲಿಗೇಕೆ ಬಂದಿರುವದು? "ನಾನು ಬ್ರಹ್ಮಚರ್ಯದಿಂದಿರುವೆನೆಂ"ದು ಮಾಡಿದ ಇದರ ಪ್ರತಿಜ್ಞೆಯಸ್ವರೂಪವು ಇದೇ ಏನು?" ಎಂಬಿವೇ ಮೊದಲಾದ ತಿರಸ್ಕಾರದ ಮಾತುಗಳನ್ನು ತಮ್ಮೊಳಗೆ ಆಡುತ್ತ, ಗಹಗಹಿಸಿ ಕತ್ತೆಗಳಂತೆ ನಗಲುತೊಡಗಿದರು! ಅದನ್ನು ನೋಡಿ ಸಂತಾಪದಿಂದ ಭೀಷ್ಮನ ಕಣ್ಣುಗಳು ಕೆಂಡದಂತಾಗಿರಲು, ಆತನು ಆ ಮೂವರು ಕನ್ನಿಕೆಯರನ್ನೂ ವ್ಯವಸ್ಥೆಯಿಂದ ರಥದಲ್ಲಿ ಕುಳ್ಳಿರಿಸಿಕೊಂಡು, ಎಲ್ಲ ಅರಸರನ್ನು ಕುರಿತು ಗಂಭೀರಧ್ವನಿಯಿಂದ—"ರಾಜರೇ, ಎಂಟುಪ್ರಕಾರದ ವಿವಾಹಗಳಲ್ಲಿ ಸ್ವಯಂವರವಿಧಿಯಿಂದ ಕ್ಷತ್ರಿಯಕನ್ಯೆಯು ವಿವಾಹವಾಗುವದು ಸರ್ವಮಾನ್ಯವಾಗಿರುವದು; ಅದರಲ್ಲಿಯೂ ಸ್ವಯಂವರಕ್ಕೆ ಬಂದಿರುವ ಎಲ್ಲ ಅರಸರನ್ನು ಗೆದ್ದುತಂದ ಕನ್ಯೆಯನ್ನು ಲಗ್ನವಾಗುವದು ಕ್ಷತ್ರಿಯರಿಗೆ ಸರ್ವಶ್ರೇಷ್ಠವೆಂದು ಧರ್ಮಜ್ಞರು ಹೇಳುತ್ತಬಂದಿರುವದು ನಿಮಗೆ ಗೊತ್ತೇಇರುವದು ನಾನಂತು ಈ ಕನ್ಯೆಯರನ್ನು ನನ್ನ ಸಾಮರ್ಥ್ಯದಿಂದ ಅಪಹರಿಸಿ ಒಯ್ಯುತ್ತೇನೆ. ನಿಮ್ಮಲ್ಲಿ ಸಾಮರ್ಥ್ಯವಿದ್ದರೆ ಯುದ್ಧಕ್ಕೆ ಬರಬೇಕು." ಎಂದು ನುಡಿದು, ರಥವನ್ನು ಹೊಡೆಯೆಂದು ಸಾರಥಿಗೆ ಅಪ್ಪಣೆಮಾಡಿದನು.

**ಭೀಷ್ಮನವಿಜಯ**—ಭೀಷ್ಮನ ಈ ಎಟ್ಟೆತನಕ್ಕೆ ಸಿಟ್ಟಿಗೆದ್ದು ಎಲ್ಲ ಅರಸರು ಅವಸರದಿಂದ ಶಸ್ತ್ರಾಸ್ತ್ರಗಳಿಂದ ಸಜ್ಜಾಗಿ ರಥದಲ್ಲಿ ಕುಳಿತು ಭೀಷ್ಮನೊಡನೆ ಯುದ್ಧಕ್ಕೆ ಬಂದರು. ಆಗ ದೇವದೈತ್ಯರ ಯುದ್ಧದಂತೆ ಭಯಂಕರಯುದ್ಧವು ಉತ್ಪನ್ನವಾಯಿತು. ಅಸ್ತ್ರಪ್ರತ್ಯಸ್ತ್ರಗಳ ಪ್ರಯೋಗದಿಂದ ಆಕಾಶಮಂಡಲವು ಬಾಣಮಯವಾಯಿತು ಅಷ್ಟುಜನ ಅರಸರಿಗೂ ಒಬ್ಬ ಭೀಷ್ಮನು ಮಣಿಯ ದಾದದ್ದನ್ನು ನೋಡಿ ಶೂರರು ಆಶ್ಚರ್ಯಪಡತೊಡಗಿದರು. ಭೀಷ್ಮನ ಅಪೂರ್ವವೂ, ಅಪ್ರತಿಹತವೂ ಆದ ಹಸ್ತಲಾಘವವನ್ನೂ, ಶತ್ರುಭೇದನ-ನೈಪುಣ್ಯವನ್ನೂ, ಆತ್ಮರಕ್ಷಣದ ದಕ್ಷತೆಯನ್ನೂ ನೋಡಿ, ವೈರಿಗಳುಕೂಡ ಬೆರಳುಕಚ್ಚಿ ನಿರ್ವೈರರಾಗಿ ಭೀಷ್ಮನನ್ನು ಹೊಗಳಹತ್ತಿದರು. ಹೀಗೆ ಭೀಷ್ಮನು ಜಯಶಾಲಿಯಾಗಿ ರಥವನ್ನು ಮುಂದಕ್ಕೆ ಸಾಗಿಸಿಕೊಂಡು ಹೋಗುತ್ತಿರಲು, ಶಾಲ್ವನೆಂಬ ಮಹಾ

ನುಭಾವನು ಭೀಷ್ಮನನ್ನು ಯುದ್ಧಕ್ಕೆ ಕರೆದನು. ಬಳಿಕ ಹೆಣ್ಣಾನೆಗಾಗಿ ಎರಡು ಸೊಕ್ಕಾನೆಗಳು ಕಾದಾಡುವಂತೆ, ಆ ಇಬ್ಬರು ವೀರರೂ ಕಾದ ತೊಡಗಿದರು ; ಆದರೆ ಭೀಷ್ಮನ ಭೀಮಪರಾಕ್ರಮಕ್ಕೆ ಶಾಲ್ವನು ಈಡಾಗ ಲಿಲ್ಲ. ಭೀಷ್ಮನು ಶಾಲ್ವನನ್ನು ಸಂಪೂರ್ಣವಾಗಿ ಸೋಲಿಸಿ ಸೆರೆಹಿಡಿದು "ನಾನು ಸೋತೆನು" ಎಂದು ಅನಿಸಿಕೊಂಡು ಆತನನ್ನು ಬಿಟ್ಟುಬಿಟ್ಟನು. ಬಳಿಕ ಪೂರ್ಣಜಯಶಾಲಿಯಾದ ಭೀಷ್ಮನು ಲೇಶವೂ ಸ್ವಾರ್ಥವಿಲ್ಲದೆ, ಮಾವನು ಸೊಸೆಂದಿರನ್ನು, ತಂದೆಯು ಹೆಣ್ಣುಮಕ್ಕಳನ್ನು, ಅಣ್ಣನು ತಂ ಗೆಯರನ್ನು ಕರಕೊಂಡು ಹೋಗುವಂತೆ, ನಿರ್ವಿಕಾರನಾಗಿ ಕಾಶೀ ರಾಜನ ಮೂವರು ಕನ್ನಿಕೆಯರನ್ನು ಕರಕೊಂಡು ವಿಚಿತ್ರವೀರ್ಯನೊಡನೆ ಅವರ ಲಗ್ನಮಾಡುವದಕ್ಕಾಗಿ ಹಸ್ತಿನಾವತಿಗೆ ಬಂದನು.

ತರುವಾಯ ಭೀಷ್ಮನು ಸತ್ಯವತಿಯ ಸಮ್ಮತಿಯಿಂದ ಲಗ್ನದ ತಿಥಿ ಯನ್ನು ಗೊತ್ತುಮಾಡಿ ಲಗ್ನದ ಎಲ್ಲಸಿದ್ಧತೆಯನ್ನು ಮಾಡತೊಡಗಿದನು. ಆಗ ಅಂಬಾ ಎಂಬ ಕನ್ನಿಕೆಯು ಭೀಷ್ಮನ ಬಳಿಗೆ ಬಂದು—"ಎಲೈ ಧರ್ಮ ಜ್ಞನೇ, ನಾನು ಸೌಭಪತಿಯಾದ ಶಾಲ್ವರಾಜನನ್ನು ಮನಸ್ಸಿನಿಂದ ಲಗ್ನ ವಾಗಿದ್ದೇನೆ; ಆತನೂ ಮನಸ್ಸಿನಿಂದ ನನ್ನನ್ನು ಲಗ್ನವಾಗಿದ್ದಾನೆ. ನನ್ನ ತಂದೆಯ ಮನಸ್ಸಿನಲ್ಲಿಯೂ ನಾನು ಶಾಲ್ವನನ್ನು ಮಾಡಿಕೊಳ್ಳಬೇಕೆಂಬು ಇರುತ್ತದೆ. ಇಂದು ಸ್ವಯಂವರದಲ್ಲಿ ನಾನು ಶಾಲ್ವನಿಗೇ ಮಾಲೆ ಹಾಕು ತ್ತಿದ್ದೆನು. ಇದ್ದಸಂಗತಿಯನ್ನು ತಿಳಿಸಿದ್ದೇನೆ. ಧರ್ಮಜ್ಞನಾದ ನೀನು ಯೋಗ್ಯತೋರಿದಂತೆ ಮಾಡಬೇಕು," ಎಂದು ಹೇಳಲು, ಭೀಷ್ಮನು ಚಿಂತೆ ಗೊಳಗಾದನು. ಬಳಿಕ ಆತನು ಧರ್ಮಜ್ಞರಾದ ಬ್ರಾಹ್ಮಣರೊಡನೆ ಆಲೋ ಚಿಸಿ ಅಂಬೆಗೆ—"ನೀನು ಶಾಲ್ವನ ಬಳಿಗೆ ಹೋಗಬಹುದು," ಎಂದು ಹೇಳಿ ಆಕೆಯನ್ನು ಕಳಿಸಿಕೊಟ್ಟನು. ಬಳಿಕ ಅಂಬಿಕಾ-ಅಂಬಾಲಿಕೆಯರೊಡನೆ ಯಥಾವಿಧಿ ವಿಚಿತ್ರವೀರ್ಯನ ಲಗ್ನವಾಯಿತು. ಲಗ್ನವಾದ ಬಳಿಕ ವಿಚಿ ತ್ರವೀರ್ಯನು ಧರ್ಮಪರನಾಗಿ ನಡೆಯುತ್ತಿದ್ದನು ; ಆದರೆ ಪ್ರಾಯದ ಮದದಿಂದ ವಿಲಾಸಮಗ್ನನಾಗಿ ಮಿತಿಮೀರಿ ಸ್ತ್ರೀಸುಖವನ್ನು ಭೋಗಿಸತೊ ಡಗಿದನು. ಜನಮೇಜಯರಾಜಾ, ಭೋಗಾತಿರೇಕದ ಪರಿಣಾಮವು ರೋಗವಷ್ಟೆ ? ಹೀಗೆ ಆ ತರುಣರಾಜನು ಏಳು ವರ್ಷ ಭೋಗಾಸಕ್ತನಾಗು

ವದರೊಳಗೆ ಆತನಿಗೆ ರಾಜಯಕ್ಷ್ಮವೆಂಬ ರೋಗವುಉತ್ಪನ್ನವಾಯಿತು. ಆಗ ಆಪ್ತರೂ, ಮಿತ್ರರೂ, ವೈದ್ಯರೂ ಸಾವಿರಾರು ದೈವೀ-ಮಾನವೀ ಉಪಾಯಗಳನ್ನು ಮಾಡಿದರೂ, ಒಂದು ಉಪಾಯವೂ ನಡೆಯದೆ ವಿಚಿತ್ರವೀರ್ಯನು ಮರಣಹೊಂದಿದನು. ಇಷ್ಟುಮಾಡಿದ್ದೂ ವ್ಯರ್ಥವಾದದ್ದನ್ನು ನೋಡಿ ಭೀಷ್ಮಾಚಾರ್ಯನಿಗೂ, ಸತ್ಯವತಿಗೂ ಅಪಾರದುಃಖವಾಯಿತು ; ಆದರೂ ಭೀಷ್ಮನು ಆ ದುಃಖವನ್ನು ಹತ್ತಿಕ್ಕಿಕೊಂಡು ರಾಜನ ಉತ್ತರ ಕ್ರಿಯೆಯನ್ನು ಯಥಾಸಾಂಗವಾಗಿ ಮಾಡಿದನು.

**೧೦೩ನೆಯ ಅಧ್ಯಾಯ — ಸತ್ಯವತೀಭೀಷ್ಮಸಂವಾದ —** ಈ ಮೇರೆಗೆ ವಿಚಿತ್ರವೀರ್ಯನು ಮರಣಹೊಂದಿರಲು, ದೀನಳೂ, ದುರ್ದೈವಿಯೂ, ಕುಲಸಂತಾನದ ವಿಷಯವಾಗಿ ತಳಮಳಿಸುವವಳೂ ಆದ ಸತ್ಯವತಿಯು ಸೊಸೆಂದಿರನ್ನು ಸಮಾಧಾನ ಪಡಿಸಿ, ಅವರೊಡನೆ ಮಗನಸಲುವಾಗಿ ಹಲವು ಪ್ರೇತೋದ್ಯಾಪನೆಗಳನ್ನು ಮಾಡಿದಳು ; ಮತ್ತು ಭೀಷ್ಮನ ಸಮಾಧಾನವನ್ನು ಮಾಡಿ ಆತನನ್ನು ಕುರಿತು—"ಬಾಲಕಾ, ಭೀಷ್ಮಾ, ನೀನಂತು ಯಶಸ್ವಿಯೂ, ಧರ್ಮಜ್ಞನೂ ಆದ ಶಾಂತನುವಿನ ಪ್ರತ್ಯಕ್ಷಸಿಂಡವಾಗಿರುವೆ ನಿನ್ನಲ್ಲಿ ಶಾಶ್ವತ ಧರ್ಮವುವಾಸಿಸುತ್ತಿರುವದು. ನೀನು ಸರ್ವಧರ್ಮಗಳನ್ನು ಸೂತ್ರರೂಪದಿಂದಲೂ, ವಿಸ್ತೃತರೂಪದಿಂದಲೂ ಅರಿತಿರುವೆ. ನಿನಗೆ ವೇದವೇದಾಂಗಗಳ ಉತ್ತಮಜ್ಞಾನ ವಿರುವದು. ಅಲ್ಲದೆ, ಧರ್ಮಾಚರಣೆಯನ್ನು ಸುವ್ಯವಸ್ಥಿತವಾಗಿ ಹೇಗೆ ಮಾಡಬೇಕು, ಕುಲಾಚಾರಗಳನ್ನು ಹೇಗೆ ಪಾಲಿಸಬೇಕು, ಆಪತ್ ಪ್ರಸಂಗದಲ್ಲಿ ಏನುಮಾಡಬೇಕು, ಎಂಬದನ್ನು ಗುರು-ಶುಕ್ರಾಚಾರ್ಯರಂತೆ ನೀನು ಅರಿತಿರುವೆ. ನಿನ್ನ ಕುರುಕುಲದ, ಹಾಗು ನನ್ನ ಮಾತೃಕುಲದ ಸಂತತಿಯು ಮುಂದೆ ನಡೆಯಬೇಕೆಂಬದು ನಿನಗೆ ಗೊತ್ತಿರುತ್ತದೆ. ಪುತ್ರಾ, ನೀನು ಧರ್ಮಜ್ಞನೂ, ಧಾರ್ಮಿಕಶ್ರೇಷ್ಠನೂ ಆಗಿರುವದರಿಂದ, ನಿನ್ನನ್ನೇ ನಾವೆಲ್ಲರೂ ಅವಲಂಬಿಸಿ, ನಿನಗೊಂದು ಕೆಲಸವನ್ನು ಒಪ್ಪಿಸಬೇಕೆಂದು ನಾನು ನಿಶ್ಚಯಿಸಿರುವೆನು. ನನ್ನ ಆ ಧರ್ಮಪೂರ್ಣ ಆಜ್ಞೆಯನ್ನು ಪಾಲಿಸೆಂದು ಹೇಳಲಿಕ್ಕೆ ನೀನು ತಕ್ಕವನಾಗಿರುತ್ತೀ. ನಿನ್ನ ಪ್ರಿಯಬಂಧು ವಿಚಿತ್ರವೀರ್ಯನ ಇಬ್ಬರು ಪಟ್ಟರಾಣಿಯರು ಇರುವರು. ಕಾಶೀರಾಜನ ಆ ಇಬ್ಬರು ರೂಪಯೌವನ ಸಂಪನ್ನ

ಪುತ್ರಿಯರು ಸತ್ಪುತ್ರರ ತಾಯಂದಿರಾಗಬೇಕೆಂದು ಇಚ್ಛಿಸುತ್ತಿರುವರು ; ಆದ್ದರಿಂದ ನಿನಗೆ ನನ್ನ ಅಪ್ಪಣೆಯೇನಂದರೆ, ಕುಲವೃದ್ಧಿಗಾಗಿ ನೀನು ಅವರಿಗೆ ಅಪತ್ಯದಾನವನ್ನು ಕೊಡು ; ಅಂದರೆ ಪಿತೃಗಳು ಪತನ ಹೊಂದಲಿಕ್ಕಿಲ್ಲ. ಇದು ಕೇವಲ ನನ್ನ ಅಪ್ಪಣೆಯೇ ಆಗಿರದೆ, ಆಪತ್ ಪ್ರಸಂಗವಲ್ಲಿ ಇದು ಧರ್ಮವೂ ಆಗಿರುವದು ; ಆದ್ದರಿಂದ ಪುತ್ರಾ, ಭೀಷ್ಮಾ, ಇನ್ನು ನೀನೇ ಪಟ್ಟವೇರಿ ಭಾರತೀಯರನ್ನು ಪಾಲಿಸು. ಸಾರಾಂಶ, ನೀನು ಬ್ರಹ್ಮಚರ್ಯಾಶ್ರಮವನ್ನು ತ್ಯಜಿಸಿ ಗೃಹಸ್ಥಾಶ್ರಮಿಯಾಗು.

ಭೀಷ್ಮ—ಅವ್ವಾ, ನೀವು ಹೇಳಿದ ಪರಮಧರ್ಮವು ನಿಸ್ಸಂಶಯ ನಿಜವಾಗಿರುವದು ; ಮತ್ತು ನಿಮ್ಮಸಲುವಾಗಿ ನಾನು ಮಾಡಿರುವ ಘೋರ ಪ್ರತಿಜ್ಞೆಯೂ ನಿಮಗೆ ಗೊತ್ತಿರುವದು ; ಆದರೆ ನನ್ನ ಆ ಪ್ರತಿಜ್ಞೆಯ ಸಂಬಂಧದಿಂದ ನಾನು ಪುನಃ ಸ್ಪಷ್ಟವಾಗಿ ಹೇಳುವೆನೇನಂದರೆ—"ತ್ರೈಲೋಕ್ಯದ ಸ್ವಾಮಿತ್ವವನ್ನು, ಅಥವಾ ದೇವಲೋಕದ ರಾಜ್ಯವನ್ನು, ಅಥವಾ ಇದಕ್ಕೂ ಹೆಚ್ಚಿನ ದೇನಾದರೂ ಇರುತ್ತಿದ್ದರೆ ಅದನ್ನು ಬಿಟ್ಟೇನು ; ಆದರೆ ನನ್ನ ಪ್ರತಿಜ್ಞೆಯನ್ನು ಎಂದೂ ಮುರಿಯಲಾರೆನು ಸೂರ್ಯನು ತನ್ನ ಪ್ರಕಾಶವನ್ನೂ, ಯಮನು ತನ್ನ ಧರ್ಮ ವೃತ್ತಿಯನ್ನೂ, ಇಂದ್ರನು ತನ್ನ ಪರಾಕ್ರಮವನ್ನೂ ಬಿಡುವಂತಹ ಹಲವು ಅಶಕ್ಯಕಾರ್ಯಗಳು ಶಕ್ಯವಾಗಬಹುದು ; ಆದರೆ ನನ್ನ ಪ್ರತಿಜ್ಞಾಭಂಗವು ಶಕ್ಯವಲ್ಲವು.

ಸತ್ಯವತಿ ಎಲೈ ಅಭಂಗ ಪ್ರತಿಜ್ಞಾ, ಭೀಷ್ಮಾ, ಸತ್ಯದ ವಿಷಯದ ನಿನ್ನ ದೃಢ ಪ್ರೇಮವನ್ನು ನಾನು ಅರಿತಿರುವೆನು. ಮನಸ್ಸುಮಾಡಿದರೆ ನೀನು ನಿನ್ನ ತೇಜಸ್ಸಿನಿಂದ ಮೂರು ಲೋಕಗಳನ್ನು ಉತ್ಪನ್ನ ಮಾಡಬಹುದು ; ಆದರೆ ಪ್ರಸಂಗವರಿತು ನೀನು ವಂಶಪರಂಪರೆಯನ್ನೂ, ರಾಜ್ಯವನ್ನೂ ನಡಿಸಬೇಕೆಂದು ಹೇಳಿದೆನು. ಬಾಳಾ, ಕುಲಧರ್ಮವು ನಷ್ಟವಾಗಬಾರದಪ್ಪಾ ! ನೀನೇಹೇಳು, ಇವರೆಲ್ಲರ ಮನಸ್ಸು ಪ್ರಸನ್ನವಾಗುವಂತೆ ನಾವು ಮಾಡಬಾರದೇನು ?

ತಾಯಿಯ ಈ ಶೋಕಪೂರ್ಣವೂ, ದೈನ್ಯಯುಕ್ತವೂ, ಪುತ್ರಕಾಮುಕತೆಯ ಮೂಲಕ ಧರ್ಮಬಾಹ್ಯವೂ ಆಗಿರುವ ಮಾತುಗಳನ್ನು ಕೇಳಿ ಭೀಷ್ಮನು ಅಸಮಾಧಾನ ಪಟ್ಟು ತಾಯಿಯನ್ನು ಕುರಿತು—"ಅವ್ವಾ,

ಸದ್ಧರ್ಮದ ವಿಚಾರಮಾಡು. ಅವಿಚಾರದಿಂದ ಕುಲದ ನಾಶವಾದೀತು. ಕ್ಷತ್ರಿಯರ ಸತ್ಯಭಂಗವು ಧರ್ಮಕ್ಕೆ ಮಾನ್ಯವಲ್ಲ. ಇನ್ನು, ಶಾಂತನುವಿನ ವಂಶವು ನಿಲ್ಲುವ ಉಪಾಯವನ್ನು ಪುರೋಹಿತರೊಡನೆ ಆಲೋಚಿಸಿ ನಿನಗೆ ಹೇಳುವೆನು, ಅದರಂತೆ ಮಾಡು.''

**೧೦೪ನೇ ಅಧ್ಯಾಯ— ಕ್ಷತ್ರಿಯರನಾಶವೂ, ಅವರ ಪುನರುತ್ಪತ್ತಿಯೂ—**ಅವ್ವಾ, ಹಿಂದಕ್ಕೆ ಪರಶುರಾಮ ಮಹರ್ಷಿಯು ತನ್ನ ತಂದೆಯನ್ನು ಹೈಹಯರಾಜನಾದ ಕಾರ್ತವೀರ್ಯನು ಕೊಂದಸಿಟ್ಟಿನಿಂದ ಆತನ ಸಹಸ್ರಬಾಹುಗಳನ್ನು ಛೇದಿಸಿ ಆತನನ್ನು ಸಂಹರಿಸಿದ್ದಲ್ಲದೆ, ನೋಡುತ್ತಿರಿಸುವ ದುಷ್ಕರ ಕೃತ್ಯದಿಂದ ಹಲವುಸಾರೆ ಕ್ಷತ್ರಿಯರ ನಾಶಮಾಡಿದನು. ಒಬ್ಬ ಕ್ಷತ್ರಿಯನೂ ಜೀವದಿಂದಿರಲಿಲ್ಲ. ಈ ದುಃಖವನ್ನು ನೋಡಿ ಯಾವತ್ತು ಕ್ಷತ್ರಿಯಸ್ತ್ರೀಯರು ಒಟ್ಟುಗೂಡಿ ವಿಚಾರಮಾಡಿ, ಸ್ವಕುಲ ರಕ್ಷಣಕ್ಕಾಗಿ ಬ್ರಾಹ್ಮಣರಿಂದ ಮಕ್ಕಳನ್ನು ಪಡೆದರು ''ಯಥಾವಿಧಿ ಪಾಣಿಗ್ರಹಣವಾಗಿದ್ದರೆಯೇ, ಹುಟ್ಟಿದಹುಡುಗರು ತಂದೆಯ ಜಾತಿಯವರಾಗುವರೆಂಬ'' ವೇದೋಕ್ತಧರ್ಮವನ್ನೂ, ಅದರ ರಹಸ್ಯವನ್ನೂ ಅರಿತ ಬ್ರಾಹ್ಮಣರು, ಕ್ಷತ್ರಿಯಕ್ಷೇತ್ರದಲ್ಲಿ ಬೀಜಾರೋಪಣಮಾಡಿ ಕ್ಷತ್ರಿಯವರ್ಣ ರಕ್ಷಣಮಾಡಿದರು. ಇತ್ತಕಡೆಯಲ್ಲಿಯೂ ಬ್ರಾಹ್ಮಣರಿಂದ ಕ್ಷತ್ರಿಯರ ಪುನರ್ಭವವಾದದ್ದರ ಉದಾಹರಣಗಳಿವೆ! ಅವ್ವಾ, ಈ ಸಂಬಂಧದಿಂದ ನಿನಗೊಂದು ಪುರಾತನ ಐತಿಹಾಸಿಕ ಕಥೆಯನ್ನು ಹೇಳುವೆನು ಕೇಳು.

**ದೀರ್ಘತಮಾನ ಆಖ್ಯಾನ**—ಪೂರ್ವದಲ್ಲಿ ಉತಥ್ಯನೆಂಬ ಹೆಸರಿನ ಒಳ್ಳೇ ಬುದ್ಧಿಶಾಲಿಯಾದ ಋಷಿಯಿದ್ದನು. ಆತನ ಹೆಂಡತಿಯಾದ ಮಮತೆಯೆಂಬವಳು ಒಳ್ಳೇ ಸನ್ಮಾನ್ಯಸ್ತ್ರೀಯಾಗಿದ್ದಳು. ಉತಥ್ಯನ ತಮ್ಮನಾದ ಬೃಹಸ್ಪತಿಯೆಂಬವನು ದೇವತೆಗಳ ಗುರುವಾಗಿದ್ದು, ಒಳ್ಳೇ ತೇಜಸ್ವಿಯಾಗಿದ್ದನು. ಒಮ್ಮೆ ಬೃಹಸ್ಪತಿಯು ಕಾಮುಕನಾಗಿ ತನ್ನ ಅತ್ತಿಗೆಯಾದ ಮಮತೆಯಬಳಿಗೆ ಹೋಗಲು, ಆಗ ಮಮತೆಯು ತನ್ನ ಮೈದುನನಿಗೆ—''ನಿಮ್ಮ ಅಣ್ಣನು ಇಟ್ಟಿರುವ ಗರ್ಭವನ್ನು ನಾನು ಧರಿಸಿದ್ದು, ಆ ಗರ್ಭಕ್ಕೆ ಷಡಂಗವೇದಾಧ್ಯಯನವೂ ಆಗಿರುವಷ್ಟು ಅದು ದೊಡ್ಡದಾಗಿರುವದು. ನೀವಾದರೂ ಅಮೋಘವೀರ್ಯಶಾಲಿಗಳಾಗಿರು

ವಿರಿ; ಆದ್ದರಿಂದ ನೀವು ದೂರವಿರಿ, ಎರಡುಗರ್ಭಗಳು ಇರುವಷ್ಟು ಸ್ಥಳವಿಲ್ಲ ದ್ದರಿಂದ, ನೀವು ಈ ಕಾಮುಕವೃತ್ತಿಯನ್ನು ಬಿಡಿರಿ,'' ಎಂದು ಹೇಳಿ ದಳು. ಬೃಹಸ್ಪತಿಯು ಶ್ರೇಷ್ಠಬುದ್ಧಿಶಾಲಿಯು ನಿಜ; ಆದರೆ ಮನಸ್ಸ ಬಿಗಿಹಿಡಿಯುವುದು ಆತನಿಂದಾಗಲೊಲ್ಲದು. ಅಷ್ಟರಲ್ಲಿ ಗರ್ಭಸ್ಥ ಶಿಶುವು ಬೃಹಸ್ಪತಿಗೆ ''ಕಕ್ಕಾ, ಇಲ್ಲ ಎರಡುಗರ್ಭಗಳಿಗೆ ಸ್ಥಳವಿಲ್ಲ. ನಾನು ಇಲ್ಲಿ ಮೊದಲು ಬಂದಿರುವುದರಿಂದ ನನ್ನನ್ನು ಇಲ್ಲಿ ಸ್ವಸ್ಥವಾಗಿ ಇರಗೊ ಡಿರಿ,'' ಎಂದು ಹೇಳಿತು. ಆದರೆ ಬೃಹಸ್ಪತಿಯು ಕೇಳದೆ ಪಶುಗಳಂತೆ ನಡೆದು ಗರ್ಭಬೀಜವನ್ನು ಸುರುವತೊಡಗಲು, ಗರ್ಭಸ್ಥಮುನಿಯು ಕಾಲುಕೊಟ್ಟು ಆ ಬೀಜವು ಒಳಗೆ ಬೀಳದಂತೆ ನಿರ್ಬಂಧಿಸಿದ್ದರಿಂದ ಬೀಜವು ಹೊರಗೆ ಭೂಮಿಯಮೇಲೆ ಬಿದ್ದಿತು. ಆಗ ಬೃಹಸ್ಪತಿಯು ಸಿಟ್ಟಿ ನಿಂದ---''ಈ ಸುಖಕಾರಕ ಪ್ರಸಂಗದಲ್ಲಿ ನನ್ನ ಅಪಮಾನವಾಗುವಂತೆ ನೀನು ಮಾತಾಡಿದ್ದರಿಂದ ನೀನು ಕುರುಡನಾಗುವೆ'' ಎಂದು ಆ ಗರ್ಭಸ್ಥ ಶಿಶುವಿಗೆ ಶಾಪಕೊಟ್ಟನು. ಆದರಿಂದ ಜಾತ್ಯಂಧನಾದ ಆ ಋಷಿಗೆ ''ದೀರ್ಘತಮಾ'' ಎಂಬ ಹೆಸರಾಯಿತು.

ದೀರ್ಘತಮಾನು ಜಾತ್ಯಂಧನಾದರೂ ಬೃಹಸ್ಪತಿಗೆ ಸರಿಯಾದ ವಿದ್ಯೆಯುಳ್ಳವನಾದದ್ದರಿಂದ, ಪ್ರದ್ವೇಷಿಯೆಂಬ ಹೆಸರಿನ ಸುಂದರಿಯೊಡನೆ ಆತನ ಲಗ್ನವಾಗಿ, ಆತನಿಂದ ಗೌತಮಾದಿ ಬಹುಜನ ತೇಜಸ್ವಿಗಳಾದ ಮಕ್ಕಳು ಹುಟ್ಟಿದರು; ಆದರೂ ತನ್ನ ತಂದೆಯಾದ ಉತಥ್ಯನಕುಲವನ್ನು ಹೆಚ್ಚಿಸಬೇಕೆಂದು, ವೇದವಿದನೂ, ಧರ್ಮಜ್ಞನೂ, ಉದಾರನೂ ಆದ ದೀರ್ಘತಮಾನು ಕಾಮಧೇನುವಿನ ಮಗನಿಂದ ಗೋರತಿಯುದ್ಧದ ವಿದ್ಯೆ ಯನ್ನು ಶ್ರದ್ಧೆಯಿಂದ ಕಲಿತು, ಹಗಲು ಎಲ್ಲರಕಣ್ಣೆದುರಿಗೆ ಎಲ್ಲರ ಸಮ ಕ್ಷನಿಶ್ಶಂಕೆಯಿಂದ ಸ್ತ್ರೀಸಮಾಗಮವನ್ನು ಮಾಡಲಾರಂಭಿಸಿದನು ಆಗ ಉಳಿದ ಋಷಿಗಳು ಸಿಟ್ಟಾಗಿ, ಇಂಥ ಪಾಪಿಯೂ, ಮಾನಗೇಡಿಯೂ ಆದ ಪುರುಷನು ಆಶ್ರಮದಲ್ಲಿರಲು ಯೋಗ್ಯನಲ್ಲವೆಂದು ದೀರ್ಘತಮಾನನ್ನು ಆಶ್ರಮದಿಂದ ಹೊರಗೆಹಾಕಿದರು. ಇತ್ತ ಪ್ರದ್ವೇಷಿಗೆ ಮಕ್ಕಳಾದದ್ದ ರಿಂದ ಈ ಕುರುಡಗಂಡನನ್ನು ಆಕೆಯು ತಿರಸ್ಕರಿಸತೊಡಗಿದಳು ಆಗ ಗಂಡ ನು-''ಹೀಗೇಕೆಮಾಡುವೆ,'' ಎಂದು ಕೇಳಲು, ಆಕೆಯು—''ಸ್ತ್ರೀಯರನ್ನು

ಅನ್ನಪಾನಾದಿಗಳ ದಾನದಿಂದ ಸಂತೋಷಪಡಿಸಿ ಅವರ ಭರಣಮಾಡುವವನು ಅವರ ಭರ್ತೃವೆಂತಲೂ, ಪಾಲಿಸುವವನು ಪತಿಯೆಂತಲೂ ಕರೆಸಿಕೊಳ್ಳುವನು ನೀವು ಅನ್ನವನ್ನೂ ಹಾಕುವದಿಲ್ಲ, ಪಾಲನವನ್ನೂ ಮಾಡುವದಿಲ್ಲ ನಿಮ್ಮ, ಹಾಗು ನಿಮ್ಮಮಕ್ಕಳ ಹೊಟ್ಟೆಗೆ ಹಾಕುವದರೊಳಗೆ ನನಗೆ ಸಾಕುಸಾಕಾಗಿ ಹೋಗಿದೆ. ಇನ್ನು ಮೇಲೆ ನಾನು ಮೊದಲಿನಂತೆ ನಿಮಗೆ ಊಟಕ್ಕೆ ಹಾಕುವದಿಲ್ಲ."

ತನ್ನ ಹೆಂಡತಿಯ ಈ ಮಾತುಗಳನ್ನು ಕೇಳಿ ದೀರ್ಘತಮಾನು ಸಿಟ್ಟಿನಿಂದ—"ನನ್ನನ್ನು ಕ್ಷತ್ರಿಯಕುಲದಲ್ಲಿ ಕರೆದುಕೊಂಡುಹೋಗಿರಿ, ನಿನಗೆ ಬೇಕಾಗುವಷ್ಟು ಧನವನ್ನೂ, ನೀವು ಬೇಡುವ ಉಪಭೋಗಗಳನ್ನೂ ಕೊಡುವೆನು." ಎಂದು ಹೇಳಿದನು. ಅದಕ್ಕೆ ಪ್ರದ್ವೇಷಿಯು—"ನನಗೆ ದುಃಖಕೊಡುವ ನಿಮ್ಮ ಆ ದ್ರವ್ಯವು ನನಗೆಬೇಡ. ನಿಮ್ಮ ಮನಸ್ಸಿಗೆ ಬಂದಕಡೆಗೆ ನೀವು ಹೋಗಿರಿ. ನಾನೇನು ಇನ್ನು ಮೇಲೆ ನಿಮ್ಮಹೊಟ್ಟೆಗೆ ಹಾಕುವದಿಲ್ಲ. ನಾನು ಇನ್ನೊಬ್ಬ ಗಂಡನನ್ನು ಮಾಡಿಕೊಳ್ಳುವೆನು." ಅನ್ನಲು, ದೀರ್ಘತಮಾನು ಸ್ತ್ರೀಯರ ಮರ್ಯಾದೆಯನ್ನು ನಿರ್ಣಯಿಸುವದಕ್ಕಾಗಿ ನುಡಿದನೇನಂದರೆ—"ಇಲ್ಲಿಯವರೆಗೆ ನಡೆದುಬಂದಿದ್ದ ಸ್ತ್ರೀಯರ ಸ್ವಚ್ಛಂದಪ್ರವೃತ್ತಿಯು ಇಂದಿಗೆ ನಿಂತುಹೋಗಲಿ. ಬದುಕಿರುವವರೆಗೆ ಸ್ತ್ರೀಯರಿಗೆ ಒಬ್ಬನೇ ಗಂಡನಿರಬೇಕು ಅವನೇ ಆಕೆಯ ದೈವತವಾಗಬೇಕು. ಆತನು ಬದುಕಿರಲಿ, ಸಾಯಲಿ, ಸ್ತ್ರೀಗೆ ಎರಡನೆಯ ಗಂಡನನ್ನು ಮಾಡಿಕೊಳ್ಳಲಿಕ್ಕೆ ಬರಲಾರದು. ಆಕೆಯು ಎರಡನೆಯ ಗಂಡನನ್ನು ಮಾಡಿಕೊಂಡರೆ ಪತಿತಳಾಗುವಳು. ಗಂಡನನ್ನು ಮಾಡಿಕೊಳ್ಳದೆ ಇರುವವರು ಪಾತಕಿಗಳೇ ಆಗುವರು. ಅವರು ಧನವಂತರಾಗಿದ್ದರೂ, ಆ ಪತಿಶೂನ್ಯಸ್ತ್ರೀಯರ ಪರಪುರುಷ ಸಂಭೋಗವೂ, ಆ ಸಂಭೋಗದಿಂದ ಹುಟ್ಟಿದ ಸಂತತಿಯೂ ಅಕೀರ್ತಿಕರವೂ, ನಿಂದಾಸ್ಪದವೂ ಆವಾವು."

ತನ್ನ ಗಂಡನು ಸ್ಥಿರಪಡಿಸಿದ ಈ ಮರ್ಯಾದೆಯನ್ನು ಕೇಳಿ ಪ್ರದ್ವೇಷಿಯು ಸಿಟ್ಟಾಗಿ ತನ್ನ ಮಕ್ಕಳಕೈಯಿಂದ ಆತನನ್ನು ತೆಪ್ಪಕ್ಕೆ ಕಟ್ಟಿಸಿ ಗಂಗೆಯಲ್ಲಿ ಚಲ್ಲಿಸಿದಳು ತೆಪ್ಪವು ತೇಲುತ್ತ ತೇಲುತ್ತ, ನೆಳಸಿಗುಂಟ ಹಲವು ದೇಶಗಳಿಗೆ ಹರಿಯುತ್ತ ಹೋಯಿತು. ಕರ್ಮಧರ್ಮಸಂಯೋಗದಿಂದ

ಆ ತೆಪ್ಪವು ಜೀವಂತ ದೀರ್ಘತಮಾನಿಂದ ಸಹಿತವಾಗಿ ಒಂದು ನದಿಯ ಘಾಟಿಗೆ ಹತ್ತಿತು. ಅಲ್ಲಿಗೆ ಸಂಧ್ಯಾವಂದನೆಗಾಗಿ ಬಂದಿದ್ದ ಬಲಿರಾಜನು ಆ ತೆಪ್ಪವನ್ನು ಹಿಡಿದು ದೀರ್ಘತಮಾನಿಂದ ಎಲ್ಲವೃತ್ತಾಂತವನ್ನು ಕೇಳಿ– "ನಿಮ್ಮನ್ನು ನಾನು ನನ್ನ ಧರ್ಮಪತ್ನಿಯ ಕ್ಷೇತ್ರದಲ್ಲಿ ಧರ್ಮಾರ್ಥ ಕುಶಲ ರಾದ ಪುತ್ರರನ್ನು ಕುಲಸಂತತಿಗಾಗಿ ಉತ್ಪನ್ನಮಾಡಲು ನನ್ನ ಮನೆಯಲ್ಲಿ ಇಟ್ಟುಕೊಳ್ಳುವೆನು" ಎಂದು ಹೇಳಿದನು. ಆದಕ್ಕೆ ದೀರ್ಘತಮಾನು ಒಪ್ಪಿಕೊಳ್ಳಲು, ರಾಜನು ತನ್ನ ಹೆಂಡತಿಯಾದ ಸುದೇಷ್ಣೆಗೆ "ಸಂತಾನಾರ್ಥವಾಗಿ ದೀರ್ಘತಮಾನ ಸೇವೆಯನ್ನು ಮಾಡು," ಎಂದು ಹೇಳಿದನು; ಆದರೆ ಸುದೇಷ್ಣೆಯು, ಮುದುಕನೂ, ಕುರುಡನೂ ಆದ ಆ ದೀರ್ಘತ ಮಾನ ಬಳಿಗೆ ತಾನುಹೋಗದೆ ತನ್ನದಾಸಿಯನ್ನು ಕಳುಹಿಸಿದಳು. ಆಗ ಆ ಶೂದ್ರಿಯ ಹೊಟ್ಟೆಯಲ್ಲ ಆ ಧರ್ಮಾತ್ಮನಿಗೆ ಕಾಕ್ಷಾವದಾದಿ ಹನ್ನೊಂದು ಜನ ಮಕ್ಕಳು ಆದರು ಅವರೆಲ್ಲರನ್ನು ನೋಡಿ ರಾಜನು—"ಇವರು ನನ್ನ ಮಕ್ಕಳು" ಅನ್ನಲು, ದೀರ್ಘತಮಾನು—"ಇವು ನಿನ್ನ ದಾಸಿಯಿಂದ ಹುಟ್ಟಿರುವವರಿಂದ ನಿನ್ನವಲ್ಲ, ನನ್ನವು : ನಿನ್ನ ಹೆಂಡತಿಯು ತಾನು ನನ್ನ ಸೇವೆಗೆ ಬಾರದೆ, ದಾಸಿಯನ್ನು ಕಳಿಸಿರುವಳು."

ಬಳಿಕ ಬಲಿಯು ಋಷಿಯನ್ನು ಸಮಾಧಾನಪಡಿಸಿ, ಸುದೇಷ್ಣೆಯನ್ನು ಪುನಃ ಆಜ್ಞಾಪಿಸಿ, ಆತನ ಬಳಿಗೆ ಕಳಿಸಿದನು. ಆಗ ಆ ಕುರುಡನು ಕ್ರಿಯಾಡಿಸಿ ಸುದೇಷ್ಣೆಯಿರುವಳೆಂದು ತಿಳಿದು—"ಸೂರ್ಯನಂತೆ ತೇಜಸ್ವಿಗಳಾದ ಮಕ್ಕಳು ನಿನಗೆ ಆಗುವರೆಂ"ದು ಆಶೀರ್ವದಿಸಿದನು. ಆ ಋಷಿಯ ಪ್ರಸಾದದಿಂದ ಸುದೇಷ್ಣೆಯ ಹೊಟ್ಟೆಯಲ್ಲಿ ಅಂಗ, ವಂಗ, ಕಳಿಂಗ, ಪುಂಡ್ರ, ಸುಹ್ಯ ಎಂಬ ಮಕ್ಕಳು ಆದರು. ಅವರ ಹೆಸರಿನಿಂದಲೇ ಅಂಗ-ವಂಗಾದಿ ದೇಶಗಳು ಪ್ರಸಿದ್ಧವಾಗಿ, ಆಯಾದೇಶಗಳು ಕ್ಷತ್ರಿಯರಿಂದ ತುಂಬಿ ಹೋದವು. ಉಳಿದ ಮಹಾ ಧನುರ್ಧರ ಕ್ಷತ್ರಿಯರ ವಂಶದ ಉತ್ಪತ್ತಿಯಾದರೂ ಹೀಗೆಯೇ ಇರುವದು. ಅವ್ವಾ, ಕ್ಷತ್ರಿಯರ ಪುನರುತ್ಪತ್ತಿಯ ಸಂಗತಿಯು ಹೀಗಿರುತ್ತದೆ ; ಆದ್ದರಿಂದ ಈಗಿನ ಕಾಲದಲ್ಲಿ ಅಲ್ಪಸ್ವಲ್ಪ ದ್ರವ್ಯವನ್ನು ಕೊಟ್ಟು, ಗುಣವಂತನೂ, ವಿದ್ವಾಂಸನೂ ಆದ ಒಬ್ಬ ಬ್ರಾಹ್ಮಣನನ್ನು ಕರತಂದು, ವಿಚಿತ್ರವೀರ್ಯನ ಕ್ಷೇತ್ರದಲ್ಲಿ ಸಂತತಿಯನ್ನು

ಉತ್ಪನ್ನಮಾಡಲಿಕ್ಕೆ ಆತನನ್ನು ಪ್ರಾರ್ಥಿಸು. ಕುರುವಂಶವೃದ್ಧಿಗೆ ಇದೊಂದೇ ಉಪಾಯವಿರುವದು.

**೧೦೫ನೆಯ ಅಧ್ಯಾಯ — ವ್ಯಾಸಜನ್ಮವೃತ್ತ**— ಭೀಷ್ಮನ ಈ ಮಾತುಗಳನ್ನು ಕೇಳಿ ಸತ್ಯವತಿಯು ಎಡಚೆಡಚಾಗುತ್ತ ಲಜ್ಜಾಯುಕ್ತ ಹಾಸ್ಯದಿಂದ ಭೀಷ್ಮನನ್ನು ಕುರಿತು—"ಭೀಷ್ಮಬಾಲಕಾ, ಈಗ ಆಪತ್ಕಾಲವು ಒದಗಿರುವದರಿಂದಲೂ, ನನ್ನ ನಿನ್ನ ಅಂತರಂಗವು ಒಂದೇ ಇರುವದರಿಂದಲೂ, ಕುಲದ ವಂಶವೃಕ್ಷದ ವೃದ್ಧಿಯು ನಮ್ಮಿಬ್ಬರಿಗೂ ಇಷ್ಟವಾಗಿರುವದರಿಂದಲೂ ನನ್ನ ಹಿಂದಿನ ಸಂಗತಿಯನ್ನು ನಿನಗೆ ಹೇಳುವೆನು ಕೇಳು. ನಮ್ಮ ಕುಲದಲ್ಲಿ ನೀನೊಬ್ಬನೇ ಧರ್ಮರಕ್ಷಕನು, ನೀನೊಬ್ಬನೇ ಪ್ರಾಪ್ತವ್ಯಮೂರ್ತಿಯು! ಆದ್ದರಿಂದ ನಿಜವಾದ ಸಂಗತಿಯನ್ನು ನಿನ್ನ ಮುಂದೆ ಹೇಳುತ್ತೇನೆ,"

"ಭೀಷ್ಮಾ, ನಾನು ಸಣ್ಣವಳಿರುವಾಗ ಯಮುನಾನದಿಯಲ್ಲಿ ನನ್ನ ತಂದೆಯದೊಂದು ನೌಕೆಯು ಇತ್ತು. ನನ್ನ ತಂದೆಯು ಅಪ್ಪಣೆಯಂತೆ ನಾನು ಆ ನೌಕೆಯಲ್ಲಿದ್ದು ಜನರನ್ನು ದಾಟಿಸುತ್ತಿದ್ದೆನು. ನಾನು ಒಂದು ದಿನ ಆ ನೌಕೆಯಲ್ಲಿ ಒಬ್ಬಳೇ ಇರುವಾಗ, ಧರ್ಮಜ್ಞರಾದ ಅತ್ಯಂತಶ್ರೇಷ್ಠ ಪರಾಶರ ಋಷಿಗಳು ಅಲ್ಲಿಗೆ ಬಂದು, ಯಮುನಾನದಿಯನ್ನು ದಾಟುವದಕ್ಕಾಗಿ ನೌಕೆಯಲ್ಲಿ ಹತ್ತಿದರು ಕೂಡಲೆ ನಾನು ನೌಕೆಯನ್ನು ನಡಿಸಹತ್ತಿದೆನು. ಆಗ ಆ ಋಷಿಯು ಕಾಮಪೀಡಿತನಾಗಿ ಸವಿಸವಿ ಮಾತಾಡುತ್ತ ನನ್ನ ಬಳಿಗೆ ಬಂದನು. ಆಗ ನಾನು—"ನಾನು ಅಂಬಿಗರ ಹುಡುಗೆಯಿರುವೆನು" ಎಂದು ಹೇಳಿದೆನು ಆದರೂ ಆ ಋಷಿಯ ಮನಸ್ಸು ತಿರುಗಲಿಲ್ಲ. ನನಗೆ ಆತನ ಶಾಪದ ಅಂಜಿಕೆ ಬರತೊಡಗಿತು; ಅತ್ತ ನನ್ನ ತಂದೆಯ ಅಂಜಿಕೆಯೂ ಬರತೊಡಗಿತು. ಆಗ ನಾನು ಆ ಋಷಿಶ್ರೇಷ್ಠನಿಗೆ- "ಮಹಾರಾಜ, ನಾನು ತಂದೆಯ ಆಜ್ಞೆಯಲ್ಲಿರುವ ಕನ್ಯೆಯು. ತಮ್ಮ ಸಮಾಗಮವಾದರೆ ನನ್ನ ಕನ್ಯಾಭಾವವು ದೂಷಿತವಾಗುವದು; ಆದ್ದರಿಂದ ಮುನಿಶ್ರೇಷ್ಠರೇ, ಈ ಕೆಟ್ಟವೋರೆಯಿಂದ ನಾನು ಬದುಕಿರುವದು ಹೇಗೆ? ಈ ಸ್ಥಿತಿಯಲ್ಲಿ ನನಗೆ ಮನೆಗೆ ಹೋಗಲಿಕ್ಕೂ ಬರುವದಿಲ್ಲ; ಪಾಪಘಟನೆಯಾದೀತೆಂದು ತಿಳಿದು ನಾನು ಇಲ್ಲಿ ಇರಲಿಕ್ಕೂ ಬರುವದಿಲ್ಲ. ಏನು

ಮಾಡಲಿ?" ಎಂದು ಕೇಳಿದೆನು. ಆಗ ಆ ಋಷಿಯು—"ನೀನು ಹಡೆದ ಬಳಿಕ ನಿನಗೆ ಮತ್ತೆ ಕನ್ಯಾಸ್ಥಿತಿಯು ಪ್ರಾಪ್ತವಾಗುವದೆಂತಲೂ, ನಿನ್ನ ಮೈಗಿರುವ ಮೀನಗಳಕುವಾಸನೆಯು ಹೋಗಿ, ನಿನ್ನ ಮೈಗೆ ದಿವ್ಯ ಸುಗಂಧವು ಉತ್ಪನ್ನವಾಗುವದೆಂತಲೂ ನನಗೆ ವರಪ್ರದಾನಮಾಡಿ, ತನ್ನ ತೇಜಸ್ಸಿನಿಂದ ನನ್ನ ಕಣ್ಣು ಕುಕ್ಕಿಬಿಟ್ಟನು. ನನ್ನ ಹುಡುಗಬುದ್ಧಿ, ನನಗೆ ಏನೂ ತಿಳಿಯಲೊಲ್ಲದು, ಒಲ್ಲೆನೆನ್ನುವದೂ ನನ್ನಿಂದ ಆಗಲೊಲ್ಲದು! ಆಗ ನಾನು-"ಭಗವನ್, ನಾಲ್ಕೂಕಡೆಗೆ ಋಷಿಗಳು ಕುಳಿತಿರುವರು; ಅಂದಬಳಿಕ ಅವರ ಸಮಕ್ಷ ನಮ್ಮಿಬ್ಬರ ಸಮಾಗಮವು ಹೇಗಾಗುವದು?" ಎಂದು ಕೇಳಿದೆನು. ಆಗ ಪರಾಶರರು ತಮ್ಮ ಪ್ರಭಾವದಿಂದ ದಟ್ಟ ಮಂಜುಕೆಡವಿ, ಹಗಲು ಹಾಡೇ ಕಗ್ಗತ್ತಲೆಯನ್ನುಂಟುಮಾಡಿ ನೌಕೆಯಲ್ಲಿಯೇ ನನ್ನನ್ನು ವಶಮಾಡಿಕೊಂಡರು. ಆಮೇಲೆ ಆ ಮಹಾತ್ಮರು ನನ್ನಮೈಗೆ ಸುಗಂಧವನ್ನು ಉತ್ಪನ್ನಮಾಡಿ, ನನ್ನಲ್ಲಿ ಗರ್ಭಸ್ಥಾಪನೆಮಾಡಿ ನನ್ನನ್ನು ಕುರಿತು—"ನೀನು ಹಡೆದಬಳಿಕ ಮತ್ತೆ ಕನ್ಯೆಯಾಗುತ್ತೀ. ಹುಟ್ಟಿದ ಹುಡುಗನನ್ನು ಈನದಿಯ ನಡುಗಡ್ಡೆಯಲ್ಲಿಯೇ ಇಡು" ಎಂದುಹೇಳಿ ಹೊರಟುಹೋದರು. ಭೀಷ್ಮ, ಕನ್ಯಾಸ್ಥಿತಿಯಲ್ಲಿ ನನ್ನ ಹೊಟ್ಟೆಯಲ್ಲಿ ಹುಟ್ಟಿದ ಪಾರಾಶರ್ಯ ಋಷಿಯು ಮಹಾಯೋಗಿಯು! ಈತನೇ ತನ್ನ ತಪಃ ಪ್ರಭಾವದಿಂದ ವೇದದ ನಾಲ್ಕುಭಾಗಗಳನ್ನು ಮಾಡಲು, ಈತನಿಗೆ "ವ್ಯಾಸ" ನೆಂತಲೂ, ಈತನು ಕಪ್ಪಿಇದ್ದದ್ದರಿಂದ "ಕೃಷ್ಣ" ಎಂತಲೂ, ಯಮುನಾ ನದಿಯ ದ್ವೀಪದಲ್ಲಿ ಹುಟ್ಟಿದ್ದರಿಂದ "ದ್ವೈಪಾಯನ"ನೆಂತಲೂ ಹೆಸರುಗಳುಂಟಾಗಿರುವವು. ಕೃಷ್ಣದ್ವೈಪಾಯನ-ವ್ಯಾಸನು ಈತನೇ. ನಿನ್ನ ಅನುಮತಿಯಿದ್ದರೆ ಈತನಿಂದ ವಿಚಿತ್ರವೀರ್ಯನ ಕ್ಷೇತ್ರದಲ್ಲಿ ಸಂತತಿಯನ್ನು ಪಡೆಯಬಹುದು. "ಸಂಕಟಕಾಲದಲ್ಲಿ ನನ್ನ ಸ್ಮರಣ ಮಾಡು" ಎಂದು ನನ್ನ ಪುತ್ರನಾದ ವ್ಯಾಸನು ಹೋಗುವಾಗ ಹೇಳಿರುವನು."

ವ್ಯಾಸಮಹರ್ಷಿಯ ಈ ಮಂಗಲಕಾರಕ ಚರಿತ್ರವನ್ನು ಕೇಳಿ, ಭೀಷ್ಮನು ಕೈಜೋಡಿಸಿ ಆ ವ್ಯಾಸರನ್ನು ನಮಸ್ಕರಿಸಿ—"ಅವ್ವಾ, ಧರ್ಮ-ಅರ್ಥ-ಕಾಮುಗಳೆಂದರೇನು? ಅವು ಹಿತಕಾರಕಗಳು ಹೇಗಾಗಬೇಕು? ಎಂಬವನ್ನು ವಿಚಾರಿಸಿ ಕರ್ಮವನ್ನು ಆರಂಭಿಸುವವನೇ ಬುದ್ಧಿವಂತನು.

ನಿಮ್ಮ ವಿಚಾರವು ಧರ್ಮಸಮ್ಮತವಾಗಿದ್ದು, ಸ್ವಕುಲಹಿತಕಾರಿಯಾಗಿರು ವದು. ನಿಮ್ಮ ಆ ಮಂಗಲಕಾರಕ ಆಲೋಚನೆಗೆ ನನ್ನ ಪೂರ್ಣ ಒಪ್ಪಿಗೆ ಯಿರುವದು," ಎಂದು ಹೇಳಲು, ಸತ್ಯವತೀ ದೇವಿಯು ಕೃಷ್ಣದ್ವೈಪಾಯ ನನನ್ನು ಧ್ಯಾನಿಸಿದಳು. ಕೂಡಲೆ ವ್ಯಾಸಮೂರ್ತಿಯು ಅಕಸ್ಮಾತ್ ಪ್ರತ್ಯ ಕ್ಷವಾಯಿತು. ಬಳಿಕ ಅವರ ಪೂಜಾಪುನಸ್ಕಾರಗಳೂ, ಆದರಾತಿಥ್ಯಗಳೂ ಆದಬಳಿಕ, ಸತ್ಯವತಿಯು ವ್ಯಾಸರನ್ನು ಪ್ರೇಮದಿಂದ ಆಲಿಂಗಿಸಿದಳು. ಬಹುದಿವಸಕ್ಕೆ ಮಗನನ್ನು ಕಂಡದ್ದರಿಂದ ಆ ಸಾಧ್ವಿಯ ಪ್ರೇಮಾಶ್ರು ಗಳು ಉದುರಿದವು. ವ್ಯಾಸರಾದರೂ ದುಃಖಿತಳಾದ ತಾಯಿಯನ್ನು ಉದ ಕದಿಂದ ಸಂಪ್ರೋಕ್ಷಿಸಿ, ಆಕೆಯನ್ನು ನಮಸ್ಕರಿಸಿದರು. ಅವರು ಸತ್ಯವತಿ ಯನ್ನು ಕುರಿತು—

ವ್ಯಾಸ—ಅವ್ವಾ, ನಿನ್ನ ಇಚ್ಛೆಯನ್ನು ಪೂರ್ಣಮಾಡಲಿಕ್ಕೆ ಬಂದಿ ದ್ದೇನೆ; ನಿನಗೆ ಧರ್ಮತತ್ವಗಳಂತು ಗೊತ್ತೇ ಇರುವವು; ಅಂದ ಬಳಿಕ ನಿನಗೆ ಪ್ರಿಯವಾದದ್ದನ್ನು ನಾನೇನು ಮಾಡಲಿ?

ಸತ್ಯವತಿ — ಮಕ್ಕಳಮೇಲೆ ತಾಯಿ—ತಂದೆಗಳಿಬ್ಬರ ಸ್ವಾಮಿ ತ್ವವೂ ಸರಿಯಾಗಿರುತ್ತದೆ; ಯಾಕಂದರೆ, ಮಕ್ಕಳು ತಾಯಿತಂದೆಗ ಳಿಬ್ಬರಿಗೂ ಸಾಧಾರಣವಾಗಿಯೇ ಇರುವರು. ನನ್ನ ಪೂರ್ವಪುಣ್ಯ ದಿಂದ ನನ್ನ ಮೊದಲನೆಯ ಮಗನು ನೀನು ಆದೆ. ವಿಚಿತ್ರವೀ ರ್ಯನು ನನ್ನ ಕಡೆಹುಟ್ಟಿದ ಮಗನೆಂಬದು ನಿನಗೆ ಗೊತ್ತಿರುತ್ತದೆ. ತಂದೆಯಕಡೆಯಿಂದ ಭೀಷ್ಮನು ವಿಚಿತ್ರವೀರ್ಯನ ಅಣ್ಣನು; ತಾಯಿ ಯಕಡೆಯಿಂದ ನೀನು ಭೀಷ್ಮನ ಅಣ್ಣನು. ವ್ಯಾಸಾ, ಈಮಾತು ನಿಜ ವಷ್ಟೆ? ಆದರೆ ಭೀಷ್ಮನು ಏಕಬಾಣಿಯೂ, ಏಕವಚನಿಯೂ, ಸತ್ಯ ಪ್ರತಿಜ್ಞನೂ ಇರುವದರಿಂದ, ಆತನಿಗೆ ಪುತ್ರೋತ್ಪಾದನದ, ಅಥವಾ ರಾಜ್ಯಾಧಿಕಾರದ ಇಚ್ಛೆಯು ಇಲ್ಲವು. ಇನ್ನು, ಕುರುಕುಲವಂತು ಸಾಗಬೇ ಕಾಗಿರುವದು; ಆದ್ದರಿಂದ ನನ್ನ ಆಜ್ಞೆಯಂತೆ, ಹಾಗು ಭೀಷ್ಮನ ವಿನಂ ತಿಯನ್ನು ಮನ್ನಿಸಿ ವಿಚಿತ್ರವೀರ್ಯನ ಕ್ಷೇತ್ರದಲ್ಲಿ ನೀನು ನಮ್ಮ ಕುಲಕ್ಕೆ ತಕ್ಕ ಸಂತತಿಯನ್ನು ಉತ್ಪನ್ನಮಾಡು.

ವ್ಯಾಸ—ಅವ್ವಾ, ನೀನು ಪ್ರವೃತ್ತಿ—ನಿವೃತ್ತಿ ಧರ್ಮಗಳೆರಡನ್ನೂ ಬಲ್ಲವಳು, ನಿನ್ನ ಬುದ್ಧಿಯೂ ಧರ್ಮಪರವಾಗಿಯೇ ಇರುವದು; ಆದ್ದ

ರಿಂದ ನಿನ್ನ ವಿಹಿತವಾದ ಅಪ್ಪಣೆಯನ್ನು ತಲೆಯಿಂದ ಹೊತ್ತು ಮನ್ನಿಸು ವೆನು. ವಿಚಿತ್ರವೀರ್ಯನಿಗೆ ಮಿತ್ರಾವರುಣರಂತಿದ್ದ ತೇಜಸ್ವಿಮಕ್ಕಳನ್ನು ಕೊಡುವೆನು ; ಆದರೆ ನನ್ನ ಆ ನಾದಿನಿಯರು ನಾನು ಹೇಳಿದ ವ್ರತವನ್ನು ಒಂದುವರ್ಷ ಶುದ್ಧಮನಸ್ಸಿನಿಂದ ಮಾಡಬೇಕು ; ಅಂದರೆ ಅವರು ಶುದ್ಧರಾಗುವರು. ಯಾವ ವ್ರತಹೀನಸ್ತ್ರೀಯರೂ ನನ್ನ ಸಮಾಗಮಕ್ಕೆ ಯೋಗ್ಯರಾಗುವದಿಲ್ಲವು.

ಸತ್ಯವತಿ—ಪುತ್ರಾ, ದೇವಿಯರನ್ನು ಈಗಲೇ ಗರ್ಭಧಾರಣಕ್ಕೆ ಯೋಗ್ಯರಾಗುವಹಾಗೆಮಾಡು ರಾಜನಿಲ್ಲದಿದ್ದರೆ ಪ್ರಜೆಗಳ ನಾಶವಾಗು ವದು ; ಯಾವತ್ತು ಕ್ರಿಯೆಗಳು ನಷ್ಟವಾಗುವವು ; ಮಳೆಯಾಗುವದಿಲ್ಲ ; ದೇವತೆಗಳು ಪ್ರಸನ್ನರಿರುವದಿಲ್ಲ ; ರಾಜನಿಲ್ಲದೆ ರಾಷ್ಟ್ರವು ಧೈರ್ಯತಾಳು ವದಾದರೂ ಹೇಗೆ? ಆದ್ದರಿಂದ ಬಾಳಾ, ಬೇಗನೆ ಗರ್ಭದಾನಮಾಡು. ಈ ಭೀಷ್ಮನು ಹುಡುಗರನ್ನು ದೊಡ್ಡವರನ್ನಾಗ ಮಾಡುವನು.

ವ್ಯಾಸ—ಹೀಗಿದ್ದರೆ, ಆ ರಾಣಿಯರು ನನ್ನ ವಿರೂಪವನ್ನೂ, ನನ್ನ ಗಂಧ ವನ್ನೂ, ನನ್ನ ವೇಷವನ್ನೂ, ನನ್ನ ಶರೀರವನ್ನೂ ಸಹಿಸಬೇಕು, ಅಂದರೆ ಅವರು ವ್ರತಪಾಲಿಸಿದಹಾಗಾಗಿ, ಕೌಸಲ್ಯೆಗೆ ಇಂದೇ ನಾನು ಗರ್ಭದಾನ ಮಾಡುವೆನು. ಆಕೆಯು ಶುದ್ಧವಸ್ತ್ರಗಳನ್ನುಟ್ಟು, ಅಲಂಕಾರಗಳನ್ನು ಧರಿಸಿ ಶಯನಗೃಹದಲ್ಲಿ ಇಂದು ಸಿದ್ಧವಾಗಿ ಇರಲಿ.

ಈ ಮೇರೆಗೆ ನುಡಿದು ವ್ಯಾಸರು ಅಲ್ಲಿಯೇ ಗುಪ್ತರಾದರು. ಇತ್ತ ಸತ್ಯವತಿಯು ಕೌಸಲ್ಯೆಗೆ (ಅಂಬಿಕೆಗೆ) ಧರ್ಮೋಪದೇಶಮಾಡಿ, ಪರಪುರುಷ ಸಂಗಮಾಡುವದು ಆಕೆಗೆ ಇಷ್ಟವಿಲ್ಲದಿದ್ದರೂ, ಒಂದು ಅಪತ್ಯವನ್ನು ಪಡೆ ಯಲೇಬೇಕೆಂದು ಆಕೆಯನ್ನು ಒಡಂಬಡಿಸಿದಳು. ಬಳಿಕ ಸತ್ಯವತಿಯು ಆದಿವಸ ಉತ್ಸವಮಾಡಿ ಬಹುಜನ ವಿಪ್ರರನ್ನೂ, ದೇವರ್ಷಿಗಳನ್ನೂ, ಅತಿಥಿ ಗಳನ್ನೂ ಅನ್ನದಾನದಿಂದ ಸಂತೋಷಪಡಿಸಿದಳು.

**೧೧೬ನೇ ಅಧ್ಯಾಯ — ಧೃತರಾಷ್ಟ್ರ - ಪಂಡು - ವಿದುರರ ಉತ್ಪತ್ತಿ**—ಜನಮೇಜಯಾ, ಗರ್ಭಾಧಾನದ ಸಮಯವು ಒದಗಲು, ಸತ್ಯ ವತಿಯು ಅಂಬಿಕೆಗೆ ಎರೆದು, ಅಲಂಕಾರಗಳಿಟ್ಟು—"ಅವ್ವಾ, ಕೌಸಲ್ಯೇ, ಇಂದು ನಿನ್ನ ಭಾವನು ಬಂದು ನಿನ್ನಲ್ಲಿ ಸ್ವಸ್ವರೂಪದ ಸಂತತಿಯನ್ನು

ಉತ್ಪನ್ನಮಾಡುವನು ; ಕಾರಣ ಭಕ್ತಿಯಿಂದ ನೀನು ಆತನ ಹಾದಿಯನ್ನು ನೋಡುತ್ತಿರು,'' ಎಂದು ಹೇಳಿದಳು. ಕೌಸಲ್ಯೆಯು ಹಾಸಿಗೆಯಮೇಲೆ ಮಲಗಿ, ತನಗೆ ಉತ್ತಮ ಸಂತತಿಯಾಗಬೇಕೆಂದು ಭೀಷ್ಮನ, ಹಾಗು ಬೇರೆ ಕೌರವಶ್ರೇಷ್ಠರ ಸ್ಮರಣಮಾಡಹತ್ತಿದಳು. ಅಷ್ಟರೊಳಗೆ ದೀಪದ ಸ್ವಚ್ಛ ಪ್ರಕಾಶದಲ್ಲಿ ಕಪ್ಪುಬಣ್ಣದ, ಹಾಗು ಪಿಂಗಟವರ್ಣದ ಜಡೆ-ಮೀಸೆಗಳ, ಕೆಂಪುಕಣ್ಣುಗಳ ವ್ಯಾಸರ ಉಗ್ರವಾದ ತೇಜಸ್ವಿರೂಪವು ಕೌಸಲ್ಯೆಯ ಕಣ್ಣಿಗೆಬೀಳಲು, ಆಕೆಯು ಅಂಜಿಕೆಯಿಂದ ಕಣ್ಣುಗಳನ್ನು ಮುಚ್ಚಿಕೊಂಡವಳು, ಕಡೆಗೂ ಕಣ್ಣುತೆರೆಯಲೇ ಇಲ್ಲ ; ಮುನಿಯ ಸ್ವರೂಪವನ್ನೂ ನೋಡಲಿಲ್ಲ ! ವ್ಯಾಸರು ಹೊರಗೆ ಬಂದಬಳಿಕ ಸತ್ಯವತಿಯು-''ಬಾಳಾ, ಅಂಬಿಕೆಯ ಹೊಟ್ಟೆಯಲ್ಲಿ ಗುಣಿಯೂ, ರಾಜ್ಯವಾಳಲು ಯೋಗ್ಯನೂ ಆದ ಮಗನು ಹುಟ್ಟುವನಷ್ಟೆ ?'' ಎಂದು ಕೇಳಲು, ವ್ಯಾಸರು-''ಅವ್ವಾ, ಆ ಹುಡುಗನಿಗೆ ಹತ್ತುಸಾವಿರ ಆನೆಯ ಬಲವುಂಟಾಗುವದು ; ಆತನು ವಿದ್ವಾಂಸನೂ, ಉತ್ತಮ ರಾಜರ್ಷಿಯೂ, ಮಹಾಭಾಗನೂ, ಮಹಾವೀರ್ಯಶಾಲಿಯೂ, ಮಹಾಬುದ್ಧಿವಂತನೂ ಆಗುವನು ; ಅವನಿಗೆ ನೂರು ಜನ ಮಕ್ಕಳೂ ಆಗುವರು ; ಆದರೆ ತಾಯಿಯ ದೋಷದಿಂದ ಆತನು ಹುಟ್ಟುಗುರುಡನಾಗುವನು,'' ಎಂದು ಹೇಳಿದರು.

ವ್ಯಾಸರ ಈ ಮಾತುಗಳನ್ನು ಕೇಳಿ ಸತ್ಯವತಿಯು-''ಬಾಳಾ, ಕುರುದೇಶದ ಪ್ರಜರಿಗೆ ಕುರುಡಅರಸನು ತಕ್ಕವನಲ್ಲ ; ಆದ್ದರಿಂದ ಕೃಪೆಮಾಡಿ ಇನ್ನೊಬ್ಬ ಅರಸನನ್ನು ಕೊಡು,'' ಎಂದು ಕೇಳಲು, ವ್ಯಾಸರು ''ಹಾಗೆಯೇ ಆಗಲಿ,'' ಎಂದು ಹೇಳಿ, ವಿಚಿತ್ರವೀರ್ಯನ ಎರಡನೆಯ ಹೆಂಡತಿಯಾದ ಅಂಬಾಲಿಕೆಯಲ್ಲಿ ಗರ್ಭವನ್ನು ಇಡುವದಕ್ಕಾಗಿ ಬಂದರು. ಅವರನ್ನು ನೋಡಿ ಅಂಬಾಲಿಕೆಯ ಮೋರೆಯು ಭಯದಿಂದ ಬಿಳುಪಾಯಿತು. ಆಗ ವ್ಯಾಸರು ಅಂಬಾಲಿಕೆಗೆ-''ನೀನು ಬೆಳ್ಳಗಾದದ್ದರಿಂದ ನಿನ್ನಮಗನೂ ಬೆಳ್ಳಗೇ ಆಗುವನು ; ಆತನ ಹೆಸರನ್ನಾದರೂ ಪಾಂಡು ಎಂತಲೇ ಇಡುವರು,'' ಎಂದು ಹೇಳಿ ಹೊರಟುಹೋದರು. ಅತ್ತ ಸತ್ಯವತಿಯು ವ್ಯಾಸರಿಂದ ಈ ಸಂಗತಿಯನ್ನು ತಿಳಿದು, ಇನ್ನೊಬ್ಬ ಮಗನನ್ನು ಕೊಡಬೇಕೆಂದು ಪ್ರಾರ್ಥಿಸಿದಳು. ಅದಕ್ಕೆ ವ್ಯಾಸರೂ ಒಪ್ಪಿಕೊಂಡರು.

ಬಳಿಕ ಸತ್ಯವತಿಯು ಹಿರಿಯಸೊಸೆಯಾದ ಕೌಸಲ್ಯೆಗೆ ಪುನಃ ಋತುಕಾಲದಲ್ಲಿ ವ್ಯಾಸರ ಸಮಾಗಮ ಮಾಡುವದಕ್ಕಾಗಿ ಹೇಳಿದಳು; ಆದರೆ ಕೌಸಲ್ಯೆಯು ಅಂಜಿ, ತನ್ನ ದಾಸಿಯನ್ನು ವ್ಯಾಸರಬಳಿಗೆ ಕಳಿಸಿದಳು. ಆಗ ಆ ದಾಸಿಯು ವ್ಯಾಸರು ಬಂದಕೂಡಲೆ ಅವರಿಗೆ ಎದುರಾಗಿ ಹೋಗಿ ಸಾಷ್ಟಾಂಗ ನಮಸ್ಕಾರಮಾಡಿ, ಸರ್ವೋಪಚಾರಗಳಿಂದ ಅವರನ್ನು ಆದರಿಸಿ, ಅವರ ಅಪ್ಪಣೆಯಂತೆ ಅವರನ್ನು ಕೂಡಿದಳು. ಆಕೆಯ ನಿರ್ಮಲವೂ, ಸಂಕೋಚರಹಿತವೂ ಆದ ನಡತೆಯಿಂದಲೂ, ಪ್ರೇಮಬುದ್ಧಿಯಿಂದಲೂ ವ್ಯಾಸರಿಗೆ ಪರಮಾನಂದವಾಯಿತು. ಆಕೆಯ ಸಹವಾಸದಿಂದ ಅವರು ಪ್ರಸನ್ನರಾದರು. ಅವರು ಹೋಗುವಾಗ ಆ ದಾಸಿಗೆ—"ನಿನ್ನ ದಾಸಿತ್ವವು ದೂರವಾಯಿತು. ಎಲ್ಕೆ ಶೋಭನೆಯೇ, ನಿನ್ನ ಮಗನು ಒಳ್ಳೇ ಧರ್ಮಾತ್ಮನೂ, ಬುದ್ಧಿ-ಜ್ಞಾನಗಳಲ್ಲಿ ಸರ್ವಶ್ರೇಷ್ಠನೂ ಆಗುವನು." ಎಂದು ಹೇಳಿದರು. ಜನಮೇಜಯಾ, ಈತನೇ ವಿದುರನು. ಯಮಧರ್ಮನು ಮಾಂಡವ್ಯಋಷಿಯ ಶಾಪದಿಂದ ವಿದುರನಾಗಿ ಹುಟ್ಟಿದ್ದನು.

**೧೦೭ನೇ ಅಧ್ಯಾಯ—ಮಾಂಡವ್ಯಾಖ್ಯಾನ**—ಜನಮೇಜಯನು ಮಾಂಡವ್ಯಋಷಿಯ ಆಖ್ಯಾನವನ್ನು ಹೇಳಿರೆನ್ನಲು, ವೈಶಂಪಾಯನರು ಅದನ್ನು ಹೇಳತೊಡಗಿದರು—"ಪೂರ್ವದಲ್ಲಿ ಮಾಂಡವ್ಯನೆಂಬ ಋಷಿಯು ತನ್ನ ಆಶ್ರಮದ ಮುಂದಿದ್ದ ಮೊಡ್ಡಗಿಡದ ಬುಡದಲ್ಲಿ ಮೌನವ್ರತದಿಂದ ನಿಷ್ಠಾವಂತನಾಗಿ ತಪಸ್ಸು ಮಾಡುತ್ತಿದ್ದನು. ಆಗ ಕೆಲವುಜನ ಕಳ್ಳರು ಅರಸನ ಧನವನ್ನು ಕದ್ದುಕೊಂಡು ಬಂದು, ಅಡಗಿಕೊಳ್ಳುವದಕ್ಕಾಗಿ ಆ ಋಷಿಯ ಆಶ್ರಮವನ್ನು ಹೊಕ್ಕರು. ಇತ್ತ ರಾಜದೂತರೂ ಹಿಂದಿನಿಂದ ಬಂದು, ಕಳ್ಳರು ಎತ್ತಹೋದರೆಂದು ಮಾಂಡವ್ಯಋಷಿಗಳನ್ನು ಕೇಳಿದರು; ಆದರೆ ಅವರು ಯಾವ ಉತ್ತರವನ್ನೂ ಕೊಡಲಿಲ್ಲ. ಮುಂದೆ ರಾಜದೂತರು ಆಶ್ರಮವನ್ನು ಹುಡುಕಲು, ಕಳ್ಳರೊಡನೆ ಸಹಿತವಾಗಿ ರಾಜಧನವು ಸಿಕ್ಕಿತು. ಆಗ ರಾಜದೂತರಿಗೆ ಮಾಂಡವ್ಯಋಷಿಯ ಸಂಶಯಬಂದು, ಆ ಋಷಿಯೊಡನೆ ಕಳ್ಳರನ್ನು ಸೆರೆಹಿಡಕೊಂಡುಹೋಗಿ, ಧನಸಹಿತವಾಗಿ ಅವರನ್ನು ರಾಜನಿಗೆ ಒಪ್ಪಿಸಿದರು. ರಾಜನು ವಿಚಾರಮಾಡದೆ ಮಾಂಡ

ವ್ಯಋುಷಿಗಳೊಡನೆ ಎಲ್ಲರನ್ನೂ ಶೂಲಕ್ಕೇರಿಸಿದನು. ಆದರೂ ಮಾಂಡ ವ್ಯಋುಷಿಯು ಮರಣಹೊಂದಲಿಲ್ಲ. ಆತನ ತಪಶ್ಚರ್ಯವು ಯಥಾಪ್ರಕಾರ ಸಾಗಿಯೇ ಇತ್ತು. ಬೇರೆ ಋುಷಿಗಳು ಪಕ್ಷಿರೂಪದಿಂದ ಮಾಂಡವ್ಯಋುಷಿಯಬಳಿಗೆ ಬಂದು ಶಿಕ್ಷೆಯ ಕಾರಣವನ್ನು ಕೇಳಲು, ನನ್ನ ಕರ್ಮದ ಫಲವೆಂದು ಮಾಂಡವ್ಯನು ಹೇಳಿದನು. ಶೂಲಕ್ಕೇರಿಸಿಯೂ ಮಾಂಡವ್ಯಋುಷಿಯು ಸಾಯದಿರುವ ಸುದ್ದಿಯನ್ನು ಕೇಳಿ, ಅರಸನು ಆಶ್ಚರ್ಯಪಟ್ಟು ಮಂತ್ರಿಗಳೊಡನೆ ಆಲೋಚಿಸಿ, ಋುಷಿಯ ಶಿಕ್ಷೆಯನ್ನು ತಿರುಗಿಸಿ, ಪಶ್ಚಾತ್ತಾಪದಿಂದ ನಮಸ್ಕಾರಪೂರ್ವಕ—"ನನ್ನನ್ನು ಕ್ಷಮಿಸಬೇಕೆಂ"ದು ಆತನನ್ನು ಪ್ರಾರ್ಥಿಸಿದನು. ಆದರಿಂದ ಮಾಂಡವ್ಯನು ಸಂತುಷ್ಟನಾಗಿ, ಭಯಪಡಬೇಡೆಂದು ಅರಸನಿಗೆ ಹೇಳಿದನು. ಆಮೇಲೆ ಮಾಂಡವ್ಯನನ್ನು ಶೂಲದಿಂದಿಳಿಸಿ, ಆತನಹೊಟ್ಟೆಯಲ್ಲಿ ಸಿಕ್ಕಿದ್ದ ಶೂಲವನ್ನು ಕಿತ್ತುಹೋಗಲು, ಅದು ಬರಲಿಲ್ಲ ಆಗ ಅದನ್ನು ಬೊಡ್ಡಿಗೆ ಮುರಿದರು. ಹೊಟ್ಟೆಯಲ್ಲಿ ಶೂಲವಿದ್ದರೂ ಮಾಂಡವ್ಯನ ತಪಶ್ಚರ್ಯಕ್ಕೆ ಬಾಧೆಬರಲಿಲ್ಲ. ಆದರಿಂದ ಆತನಿಗೆ "ಅಣಿಮಾಂಡವ್ಯ" ಎಂಬ ಹೆಸರುಂಟಾಯಿತು. ಮುಂದೆಯಂತು ಮಾಂಡವ್ಯನು ಉಗ್ರತಪಶ್ಚರ್ಯಮಾಡಿದನು ಮುಂದೆ ಆತನು ಯಮಲೋಕಕ್ಕೆ ಹೋಗಿ, ಆಸನದಲ್ಲಿ ಕುಳಿತಿದ್ದ ಯಮಧರ್ಮರಾಜನನ್ನು ಕುರಿತು— "ಧರ್ಮರಾಜಾ, ಭೂಲೋಕದಲ್ಲ ನನಗಾದ ಶಿಕ್ಷೆಗೆ ಕಾರಣವೇನು? ನಾನಂತು ಯಾವ ಅಪರಾಧವನ್ನೂ ಮಾಡಿಲ್ಲ," ಎಂದು ಕೇಳಲು, ಯಮಧರ್ಮನು—"ನೀನು ತೀರಸಣ್ಣವನಿರುವಾಗ ಆಟಕ್ಕಾಗಿ ಒಂದು ಪತಂಗದ ರೆಕ್ಕೆಗೆ ಕಡ್ಡಿಯನ್ನು ಚುಚ್ಚಿದ್ದೆ; ಆದ್ದರಿಂದ ಈ ಶಿಕ್ಷೆಯನ್ನು ನೀನು ಅನುಭವಿಸಬೇಕಾಯಿತು," ಎಂದು ಹೇಳಿದನು.

ಯಮಧರ್ಮನ ಈ ಮಾತುಗಳನ್ನು ಕೇಳಿ ಮಾಂಡವ್ಯನು—"ಧರ್ಮರಾಜಾ, ಹನ್ನೆರಡು ವರುಷಗಳವರೆಗೆ ಹುಡುಗರು ಮಾಡುವ ಅಪರಾಧವು ಅಜ್ಞಾನಮೂಲವಾದದ್ದರಿಂದ, ಅದರ ಪಾಪವು ಕರ್ತೃವಿಗೆ ತಟ್ಟುವದಿಲ್ಲವೆಂದು ಧರ್ಮಶಾಸ್ತ್ರವಿರಲು, ಈ ಶಿಕ್ಷೆಯನ್ನು ನೀನು ನನಗೆ ಹೇಗೆ ವಿಧಿಸಿದೆ? ಈ ಅಪರಾಧಕ್ಕಾಗಿ ನೀನು ಶೂದ್ರಯೋನಿಯಲ್ಲಿ ಜನ್ಮತಾಳು," ಎಂದು ಶಾಪಕೊಟ್ಟು—"ಅಪ್ಪಾ, ಯಮಧರ್ಮಾ, ಬ್ರಾಹ್ಮಣನಿಗೆ ಅನ್ಯಾ

ಯದಿಂದ ಕೊಟ್ಟ ಇಷ್ಟು ಅಲ್ಪಪೀಡೆಯೂ ಸರ್ವಭೂತಬಾಧೆಗಿಂತ ಹೆಚ್ಚು ದಂಡಕ್ಕೆ ಪಾತ್ರವಾದದ್ದೆಂಬದನ್ನು ನೀನರಿಯೆಯಾ ? ಇರಲಿ, ಇಂದಿನಿಂದ ನಾನು ಧರ್ಮಫಲವನ್ನು ಕೊಡುವ ನಿಯಮವನ್ನು ಹೀಗೆ ಮಾಡುವೆನು; "ಹದಿನಾಲ್ಕುವರ್ಷಗಳವರೆಗೆ ಆದ ದುಷ್ಕೃತ್ಯಕ್ಕಾಗಿ ಜೀವನಿಗೆ ದಂಡವಾಗ ಬಾರದು; ಯಾಕಂದರೆ ಆಗಿನ ತಪ್ಪು, ಅಜ್ಞಾನದಿಂದಾದದ್ದರಿಂದ ಪಾಪ ಕಾರಿಯಾಗುವದಿಲ್ಲ. ಹದಿನಾಲ್ಕು ವರ್ಷಗಳಮೇಲೆ ಆದ ದುಷ್ಕೃತ್ಯಗಳು ಪಾಪಕಾರಿಯಾಗುವವು" ಜನಮೇಜಯಾ, ಮಾಂಡವ್ಯ ಋಷಿಯಿಂದ ಯಮಧರ್ಮನಿಗೆ ಹೀಗೆ ಶಾಪವಾದದ್ದರಿಂದ, ಆತನು ವಿದುರನಾಗಿ ಹುಟ್ಟ ಬೇಕಾಯಿತು. ಧರ್ಮಾರ್ಥಪ್ರವೀಣನಾದ ವಿದುರನು ಕುರುಕುಲಹಿತ ದಕ್ಷನಾಗಿದ್ದನು

**೧೦೯ ನೇ ಅಧ್ಯಾಯ— ಪಾಂಡುವಿನ ರಾಜ್ಯಾಭಿಷೇಕ**—ಹೀಗೆ ಮೂವರು ರಾಜಪುತ್ರರ ಉದಯವಾದದ್ದರಿಂದ ಕೌರವರಾಷ್ಟ್ರದ, ಕೌರವ ಪುರುಷರ, ಕೌರವಪುರಗಳ ಉತ್ಕರ್ಷವಾಯಿತು. ಕಾಲಕಾಲಕ್ಕೆ ಮಳೆ ಯಾಗಿ ಉತ್ತಮ ಬೆಳೆಯು ಬಂದಿತು. ಗಿಡಗಳು ಹೂ-ಕಾಯಿಗಳಿಂದ ಬಗ್ಗಿದವು. ಹೂಗಳ ವಾಸನೆಯೂ, ಫಲಗಳ ರುಚಿಯೂ ಹೆಚ್ಚಿದವು. ದೇಶದಲ್ಲಿ ಉದ್ಯೋಗಗಳೂ, ಸಂಪತ್ತೂ ಹೆಚ್ಚಾದವು. ಶೂರರೂ, ವಿದ್ವಾಂಸರೂ, ಸಾಧುಸಂತರೂ ಸುಖಿಗಳಾದರು. ಕಳವಿಲ್ಲ, ಪಾಪಕರ್ಮಗಳಿಲ್ಲ, ಪಾಪವಾಸನೆಯಿಲ್ಲ! ಕೃತಯುಗವಾದಂತೆ ಜನರಿಗೆ ತೋರಿತು. ಎಲ್ಲರೂ ಸ್ವಾರ್ಥತ್ಯಾಗಿಗಳು, ಎಲ್ಲರೂ ಸತ್ಯವ್ರತಶೀಲರು, ಎಲ್ಲರೂ ಪರಸ್ಪರ ನಿಷ್ಕಪಟಪ್ರೇಮಮಾಡುವವರು, ಎಲ್ಲರೂ ಮಾನಾಪಮಾನಗಳ ವಿಕಾರಕ್ಕೆ ಒಳಗಾಗದವರು, ಎಲ್ಲರೂ ಕ್ರೋಧ ಲೋಭಗಳ ಎಳತಕ್ಕೆ ಸಿಗದೆ, ಪರಸ್ಪರ ಅಭಿನಂದನಶೀಲರು ಆಗಿದ್ದರು. ನಗರಗಳ ಸೌಂದರ್ಯವು ಹೆಚ್ಚಿತು. ಹಸ್ತಿನಾಪುರವು ಮಹೇಂದ್ರನ ಅಮರಾವತೀ ನಗರವನ್ನು ಹೋಲತೊಡಗಿತು. ಕೌರವರ ಸಂಪದ್ಯುಕ್ತರಾಷ್ಟ್ರದಲ್ಲಿ ಕೃಪಣರಿದ್ದಿಲ್ಲ; ವಿಧವೆಯರಿದ್ದಿಲ್ಲ. ನೋಡಿದತ್ತೆಲ್ಲ ಉತ್ಸವಗಳು; ಭೀಷ್ಮನ ಧರ್ಮಾಧ್ಯಕ್ಷತೆಯಲ್ಲಿ ನೋಡಿದತ್ತೆಲ್ಲ ಯೂಪಸ್ತಂಭಗಳು. ಭೀಷ್ಮನ ರಾಜ್ಯಕಾರಭಾರವೆಂದರೆ ಸದ್ಧರ್ಮದ ಪುನರಾವರ್ತನವೇ ಸರಿ.

ಜನಮೇಜಯಾ, ಮೂವರೂ ಬಾಲಕರ ಪಾಲನ—ಪೋಷಣಗಳನ್ನು ಭೀಷ್ಮನು ಮಕ್ಕಳಂತೆ ಉತ್ತಮರೀತಿಯಿಂದ ಮಾಡಿದನು. ಆತನು ಹುಡುಗರ ಯಾವತ್ತು ಸಂಸ್ಕಾರಗಳನ್ನು ಯಥಾಶಾಸ್ತ್ರ ಮಾಡಿಸಿ, ಬ್ರಹ್ಮಚರ್ಯಕ್ಕೆ ವಿಹಿತವಾದ ವ್ರತ-ಅಧ್ಯಯನಗಳನ್ನು ಮಾಡಿಸಿದನು. ಆ ಹುಡುಗರು ಶ್ರುತಿ-ಸ್ಮೃತಿಗಳಲ್ಲಿ ಪಂಡಿತರೂ, ಶಸ್ತ್ರಾಸ್ತ್ರಗಳಲ್ಲಿ ಪ್ರವೀಣರೂ, ವೇದ ವೇದಾಂಗಗಳಲ್ಲಿ ನಿಷ್ಣಾತರೂ ಆಗಿದ್ದರು. ಹೀಗೆ ಹುಡುಗರು ಸರ್ವಶಾಸ್ತ್ರ-ಕಲೆ-ವಿದ್ಯೆಗಳ ರಹಸ್ಯವನ್ನು ಬಲ್ಲವರಾದದ್ದರಿಂದ, ಅವರ ಬುದ್ಧಿಯು ನಿಶ್ಚಿತವಾಯಿತು; ಅವರಲ್ಲಿ ಪ್ರಸಂಗಾವಧಾನವು ಉಂಟಾಯಿತು; ಯಾಕಂದರೆ ಅವರು ಪೂರ್ಣತತ್ವಜ್ಞರಾಗಿದ್ದರು. ಪಾಂಡುವು ಧನುರ್ವಿದ್ಯೆಯಲ್ಲಿ ನಿಪುಣನಾಗಿದ್ದನು; ಧೃತರಾಷ್ಟ್ರನು ಮಹಾಬಲಿಷ್ಠನಾಗಿದ್ದನು; ಧರ್ಮ-ಹಾಗು ತತ್ವಜ್ಞಾನಗಳಲ್ಲಿ ವಿದುರನನ್ನು ಸರಿಗಟ್ಟುವವರು ತ್ರೈಲೋಕ್ಯದಲ್ಲಿಯೂ ದೊರೆಯುವದು ಕಠಿಣವಾಗಿತ್ತು! ಹೀಗೆ ಶಾಂತನುವಿನ ನಷ್ಟವಂಶದ ಪುನರುದ್ಧಾರವಾಗಿ ಎಲ್ಲಕಡೆಯಲ್ಲಿ ಕೌರವಕುಲದ ಸ್ತುತಿ-ಸ್ತೋತ್ರಗಳು ಕೇಳಿಸತೊಡಗಿದವು. ಧೃತರಾಷ್ಟ್ರನು ಹುಟ್ಟುಗುರುಡನೂ, ವಿದುರನು ಶೂದ್ರನೂ ಆಗದ್ದರಿಂದ, ಪಾಂಡುವಿಗೆ ರಾಜ್ಯಾಭಿಷೇಕವಾಯಿತು.

**೧೧ನೇ ಅಧ್ಯಾಯ - ಗಾಂಧಾರೀ-ಧೃತರಾಷ್ಟ್ರವಿವಾಹ:--**

**ಈ** ಮೇರೆಗೆ ತನ್ನ ಕುರುಕುಲವು ಉತ್ಕರ್ಷಹೊಂದಿದ್ದನ್ನು ನೋಡಿ ಭೀಷ್ಮನು ಬುದ್ಧಿಶಾಲಿಯಾದ ವಿದುರನನ್ನು ಕುರಿತು--"ನಮ್ಮ ಈ ಕುಲವು ಸರ್ವಗುಣಮಂಡಿತವಾದದ್ದರಿಂದ, ಪೃಥ್ವಿಯೊಳಗಿನ ಎಲ್ಲರಾಜಕುಲಗಳನ್ನು ಗೆದ್ದು, ಸಾರ್ವಭೌಮಪದವನ್ನು ಹೊಂದಲು ತಕ್ಕದ್ದಾಗಿರುವದು. ಸತ್ಪುರುಷರು, ಹಾಗು ನನ್ನ ಉದ್ಯೋಗದಿಂದಲೂ, ಕೃಷ್ಣದ್ವೈಪಾಯನ ಶ್ರೀವ್ಯಾಸರ ಅನುಗ್ರಹದಿಂದಲೂ ನಮ್ಮ ಈ ಕುಲವು ಪುನಃ ಪೂರ್ವದ ನಮ್ಮ ಉತ್ಕರ್ಷಸ್ಥಿತಿಯನ್ನು ಹೊಂದಿರುವದು; ಯಾಕಂದರೆ, ನೀವು ಮೂವರೂ ಆ ಕುಲದ ತಂತುವಾಗಿರುವಿರಿ; ಆದ್ದರಿಂದ ಈ ಕುಲವು ಮುಂದೆ ಹೀಗೆಯೇ ಉತ್ಕರ್ಷಹೊಂದುವಂತೆ ಉಪಾಯಮಾಡಬೇಕು. ಯಾದವಕುಲದಲ್ಲಿ, ಹಾಗು ಗಾಂಧಾರದೇಶದ ಸುಬಲನಲ್ಲಿ, ಅದರಂತೆ ಮದ್ರೇಶ್ವರನಲ್ಲಿ ಸುಂದರ ಕನ್ಯೆಯರು ಇರುವರೆಂದು ಕೇಳುತ್ತೇನೆ. ಆ ರಾಜರು ನಮ್ಮೊಡನೆ ಸಂಬಂ

ಧಮಾಡಲು ಯೋಗ್ಯರಿರುವರು. ಸುಬಲನ ಮಗಳಾದ ಗಾಂಧಾರಿಯು ವರಕೊಡುವಲ್ಲಿ ಶ್ರೇಷ್ಠನಾದ ಭಗವಾನ್ ಶಂಕರನನ್ನು ಆರಾಧಿಸಿ, ನೂರು ಜನ ಮಕ್ಕಳಾಗುವ ವರಪಡೆದಿರುವಳೆಂದು ಬ್ರಾಹ್ಮಣರ ಮುಖದಿಂದ ಕೇಳುತ್ತೇನೆ ; ಆಕೆಯನ್ನೇ ಧೃತರಾಷ್ಟ್ರನಿಗಾಗಿ ಕೇಳಬೇಕೆಂದು ಮಾಡಿರುವೆನು. ವಿದುರಾ, ನಿನ್ನ ಮನಸ್ಸಿಗೆ ಇದು ಬರುತ್ತದಷ್ಟೆ ?" ಎಂದು ಕೇಳಲು, ವಿದುರನು-"ನಮ್ಮ ಹಿರಿಯರೂ, ತಾಯಿಯೂ, ಎಲ್ಲರೂ ನೀವೇ ಆಗಿರುವಿರಿ ; ಆದ್ದರಿಂದ ಈ ಕುಲದ ಕಲ್ಯಾಣವಾಗುವಂತೆ ನೀವೇ ಮಾಡಬೇಕು" ಎಂದು ಹೇಳಿದನು. ಬಳಿಕ ಭೀಷ್ಮನು ಗಾಂಧಾರಿಯನ್ನು ಧೃತರಾಷ್ಟ್ರನಿಗೆ ಕೇಳುವದಕ್ಕಾಗಿ ಗಾಂಧಾರದೇಶಕ್ಕೆ ದೂತರನ್ನು ಕಳಿಸಿದನು. ಧೃತರಾಷ್ಟ್ರನು ಹುಟ್ಟುಗುರುಡನಾದದ್ದರಿಂದ ಮಗಳನ್ನು ಕೊಡುವದು ಹೇಗೆಂದು ಶಂಕಿಸಿದರೂ, ಕೌರವಕುಲದ ಗೌರವಾದಿಗಳನ್ನು ನೋಡಿ ತನ್ನ ಮಗಳನ್ನು ಧೃತರಾಷ್ಟ್ರನಿಗೆ ಕೊಡಲು ಸುಬಲನು ಒಪ್ಪಿಕೊಂಡನು. ಆಗ ಮಹಾಪತಿವ್ರತೆಯಾದ ಗಾಂಧಾರಿಯು, ತಾನು ಹುಟ್ಟುಗುರುಡನ ಹೆಂಡತಿಯಾಗಬೇಕಾಗಲು, ತನ್ನ ಕಣ್ಣುಗಳನ್ನು ಮಡಿಕೆಹಾಕಿದ ಅರಿವೆಯಿಂದ ಗಟ್ಟಿಯಾಗಿ ಕಟ್ಟಿಕೊಂಡಳು. ಯಾಕಂದರೆ, ಗಂಡನ ಕುರುಡತನದಿಂದ ತನ್ನಲ್ಲಿ ಪತಿವಿಷಯದ ಅಶ್ರದ್ಧೆಯು ಉತ್ಪನ್ನವಾಗಬಾರದೆಂದು ಆಕೆಯು ಬಗೆದಳು ! ಬಳಿಕ ಸುಬಲಪುತ್ರನಾದ ಶಕುನಿಯು ತನ್ನ ತಂಗಿಯನ್ನು ಹಸ್ತಿನಾವತಿಗೆ ಕರತಂದು ಆಕೆಯನ್ನು ಧೃತರಾಷ್ಟ್ರನಿಗೆ ಲಗ್ನಮಾಡಿಕೊಟ್ಟು, ಸನ್ಮಾನಿತನಾಗಿ ತನ್ನ ದೇಶಕ್ಕೆ ಹೋದನು.

**೧೧೧ನೇ ಅಧ್ಯಾಯ— ಕರ್ಣ ಜನ್ಮವೃತ್ತ**— ಜನಮೇಜಯಾ, ಯದುಕುಲದಲ್ಲಿ ಶ್ರೇಷ್ಠನಾದ ಶೂರನೆಂಬ ಹೆಸರಿನ ಒಬ್ಬ ಪುರುಷನು ಆಗಿ ಹೋದನು. ವಸುದೇವನ ತಂದೆಯು ಈತನೇ. ಶೂರನಿಗೆ ಪೃಥಾಎಂಬ ಹೆಸರಿನ ಸುಂದರ ಕನ್ಯೆಯೊಬ್ಬಳು ಇದ್ದಳು. ಆಕೆಯ ಸೌಂದರ್ಯವನ್ನು ಸರಿಗಟ್ಟುವ ಸುಂದರಿಯರು ಆಗ ಯಾರೂ ಇದ್ದಿಲ್ಲ. ತನಗೆ ಮೊದಲು ಹುಟ್ಟಿದ ಅಪತ್ಯವನ್ನು ನಿನಗೆ ಕೊಡುವೆನೆಂದು ಶೂರನು ತನ್ನ ಮಿತ್ರನಾದ ಕುಂತಿಭೋಜನಿಗೆ ವಚನ ಕೊಟ್ಟಂತೆ, ಆ ಪೃಥೆಯನ್ನು ಆ ತನ್ನ ಮಿತ್ರನಿಗೆ ಸಾಕುಮಗಳಾಗಿ ಕೊಟ್ಟುಬಿಟ್ಟನು. ಕುಂತಿಭೋಜನು ಪೃಥೆಯನ್ನು

ತನ್ನ ಮನೆಗೆಬರುವ ಬ್ರಾಹ್ಮಣರೂ, ಅತಿಥಿಗಳೂ ಮೊದಲಾದವರ ಸೇವೆಗಾಗಿ ನಿಯಮಿಸಿದನು. ಪೃಥೆಗೆ ಕುಂತಿಯೆಂತಲೂ ಕರೆಯುತ್ತಿದ್ದರು. ಹೀಗಿರುವಾಗ, ಮಹಾಪವಿತ್ರರೂ, ಕರ್ಮನಿಷ್ಠರೂ ಆದ ಜಗತ್ಪ್ರಸಿದ್ಧ ದೂರ್ವಾಸರು ಕುಂತಿಭೋಜನ ಮನೆಗೆ ಬಂದರು ಆಗ ಪೃಥೆಯು ಅವರ ಸೇವೆಯನ್ನು ಏಕನಿಷ್ಠೆಯಿಂದ ಮಾಡಿ, ಅವರ ಮನಸ್ಸನ್ನು ಸುಪ್ರಸನ್ನವಾಗ ಮಾಡಲು, ಆ ಮುನಿಗಳು ಮುಂದೆ ಒದಗಬೇಕಾಗಿದ್ದ ಕಠಿಣಪ್ರಸಂಗವನ್ನು ಸ್ಮರಿಸಿ ಪೃಥೆಗೆ ಒಂದು ಮಂತ್ರವನ್ನು ಉಪದೇಶಿಸಿ—"ನೀನು ಈ ಮಂತ್ರದಿಂದ ಯಾವ ಯಾವ ದೇವತೆಗಳನ್ನು ಕರೆಯುವೆಯೋ, ಆಯಾ ದೇವತೆಗಳಿಂದ ನಿನಗೆ ಮಕ್ಕಳಾಗುವರು" ಎಂದು ಹೇಳಿದರು. ಮುಂದೆ ದೂರ್ವಾಸರು ಹೋದಬಳಿಕ ಪೃಥೆಯು ಮಂತ್ರದ ಪ್ರಭಾವವನ್ನು ನೋಡುವ ಕುತೂಹಲದಿಂದ ಮಂತ್ರವನ್ನು ಜಪಿಸಿ, ಶ್ರೀ ಸೂರ್ಯನಾರಾಯಣನನ್ನು ಕರೆದಳು. ಆಗ ಶ್ರೀ ಸೂರ್ಯನಾರಾಯಣನು ಪ್ರತ್ಯಕ್ಷನಾಗಿ ಕುಂತಿಯನ್ನು ಕುರಿತು—

ಸೂರ್ಯ—ಎಲೈ ಸುಂದರೀ, ನಾನು ಬಂದಿದ್ದೇನೆ, ನಾನು ನಿನ್ನ ಕೆಲಸವೇನು ಮಾಡಲಿ?

ಕುಂತಿ—ಎಲೈ ಶತ್ರುಘಾತಕನೇ, ಒಬ್ಬ ಬ್ರಾಹ್ಮಣನು ಉಪದೇಶಿಸಿದ ಮಂತ್ರದ ಪ್ರಭಾವವನ್ನು ನೋಡುವ ಕುತೂಹಲದಿಂದ ತಮ್ಮನ್ನು ನಾನು ಕರೆದೆನು. ನನ್ನ ತಪ್ಪನ್ನು ಕ್ಷಮಿಸಬೇಕು. ಹೆಂಗಸರ ಅಪರಾಧಗಳನ್ನು ಕ್ಷಮಿಸಿ, ಯಾವಾಗಲೂ ಅವರನ್ನು ರಕ್ಷಿಸಬೇಕೆಂದು ಶಾಸ್ತ್ರವಚನವಿರುವದು.

ಸೂರ್ಯ—ದೂರ್ವಾಸರು ನಿನಗೆ ಮಂತ್ರೋಪದೇಶಮಾಡಿದ್ದನ್ನು ನಾನು ಬಲ್ಲೆನು. ನೀನು ಭಯಪಡದೆ ನನ್ನ ಸಂಗಮಾಡು. ಎಲೈ ಮರ್ಯಾದಶೀಲಸ್ತ್ರೀಯೇ, ನನ್ನದರ್ಶನವು ವ್ಯರ್ಥವಾಗಲಾರದು. ಸುಮ್ಮನೆ ನನ್ನನ್ನು ಕರೆದು ತರುವದರಲ್ಲಿ ಪಾಪವಿರುವದು.

ಈಮೇರೆಗೆ ಹಲವು ಬಗೆಗಳಿಂದ ಸಮಾಧಾನಹೇಳಿದರೂ ಕುಂತಿಯು ಅದಕ್ಕೆ ಒಪ್ಪದಾದಳು. "ತಾನು ಕುಮಾರಿಕೆಯಿದ್ದು ಸಲ್ಲದ ಕೆಲಸ ಮಾಡಿದರೆ ಆಪ್ತೇಷ್ಟರು ಏನಂದಾರು?" ಎಂದು ಯೋಚಿಸುತ್ತಿರುವಾಗ

ಸೂರ್ಯನು "ರಾಜಕನ್ಯೇ, ನನ್ನ ಕೃಪೆಯಿಂದ ನಿನಗೆ ಲೇಶವೂ ದೋಷ ತಟ್ಟುವದಿಲ್ಲ." ಎಂದು ಹೇಳಿ, ಕುಂತಿಯ ಸಂಭೋಗಮಾಡಿದನು. ಆಗ ಆಕೆಯ ಹೊಟ್ಟೆಯಿಂದ ತ್ರೈಲೋಕ್ಯಪ್ರಸಿದ್ಧನಾದ ಕರ್ಣನು ಹುಟ್ಟಿದನು. ಆತನು ಜನ್ಮತಃ ಕವಚಕುಂಡಲಗಳನ್ನು ಧರಿಸಿದವನೂ, ಸೂರ್ಯನಂತೆ ತೇಜಸ್ವಿಯೂ, ಮಹಾ ಪರಾಕ್ರಮಿಯೂ ಆಗಿದ್ದನು. ಆಗ ಕುಂತಿಯು ಭಯಾಕ್ರಾಂತಳಾಗಿ ಆಲೋಚಿಸಿ, ಅಪವಾದಭಯದಿಂದ ಆ ಸಶಕ್ತಶಿಶುವನ್ನು ನೀರಲ್ಲಿ ಚೆಲ್ಲಿಕೊಟ್ಟುಬಿಟ್ಟಳು. ಮುಂದೆ ಆ ಕೂಸನ್ನು ಸೂತಪುತ್ರ ಅಧಿರಥನೂ, ಆತನ ಹೆಂಡತಿಯಾದ ರಾಧೆಯೂ ತಮ್ಮ ಮಗನೆಂದು ತಿಳಿದು ರಕ್ಷಿಸಿದರು. ಈ ಶಿಶುವು ಕವಚಕುಂಡಲಾದಿ ವಸುವಿನಿಂದ, ಅಂದರೆ ಸಂಪತ್ತಿನಿಂದ ಹುಟ್ಟಿದ್ದರಿಂದ, ಅದಕ್ಕೆ "ವಸುಷೇಣ" ನೆಂದು ಹೆಸರಿಟ್ಟರು. ಮುಂದೆ ವಸುಷೇಣನು ದೊಡ್ಡವನಾದಬಳಿಕ ಆರುತಾಸಿನಿಂದ ಸೂರ್ಯೋಪಾಸನೆಯನ್ನು ಮಾಡುತ್ತಲಿದ್ದನು. ಈ ಉಪಾಸನೆಯ ಕಾಲದಲ್ಲಿ ಬ್ರಾಹ್ಮಣರು ಬೇಡಿದ್ದನ್ನು ಕೊಡುವದು ಆತನ ನಿಯಮವಾಗಿತ್ತು. ಒಮ್ಮೆ ಇಂದ್ರನು ತನ್ನ ಮಗನಾದ ಅರ್ಜುನನ ಹಿತಕ್ಕಾಗಿ ಬ್ರಾಹ್ಮಣನ ವೇಷದಿಂದ ಕರ್ಣನ ಬಳಿಗೆಬಂದು, ಆತನ ಕವಚವನ್ನು ದಾನವಾಗಿ ಕೇಳಿದನು. ಕೂಡಲೆ ಕರ್ಣನು, ತನಗೆ ಹುಟ್ಟುತ್ತಲೆ ಇದ್ದ ತನ್ನ ಕವಚವನ್ನು ಸುಲಿದು ಆ ಬ್ರಾಹ್ಮಣರೂಪಿ ಇಂದ್ರನಿಗೆ ಕೊಟ್ಟನು. ಅದನ್ನುನೋಡಿ ಇಂದ್ರನು ಸಂತುಷ್ಟನಾಗಿ ವಸುಷೇಣನಿಗೆ ತನ್ನ ಶಕ್ತಿಯನ್ನುಕೊಟ್ಟು—"ನೀನು ಗೆಲ್ಲಲಿಚ್ಛಿಸುವ ದೇವ, ಅಸುರ, ಮನುಷ್ಯ, ಗಂಧರ್ವ, ಸರ್ಪ, ರಾಕ್ಷಸ ಇವರಲ್ಲಿ ಯಾವನಮೇಲೆ ಈ ಶಕ್ತಿಯನ್ನು ಬಿಟ್ಟರೂ ಅವರ ನಾಶವಾಗುವದು" ಎಂದು ಹೇಳಿದನು. ಹೀಗೆ ವಸುಷೇಣನು ತನ್ನ ಕವಚವನ್ನು ವಿಕರ್ತನ ಮಾಡಿ, ಅಂದರೆ ಸುಲಿದು ಕೊಟ್ಟದ್ದರಿಂದ ಆತನಿಗೆ ಕರ್ಣನೆಂತಲೂ, ವೈಕರ್ತನನೆಂತಲೂ ಹೆಸರುಗಳುಂಟಾದವು.

೧೧೨, ೧೧೩, ೧೧೪ನೇ ಅಧ್ಯಾಯಗಳು—**ಪಾಂಡುವಿನ ವಿವಾಹವೂ ಆತನ ದಿಗ್ವಿಜಯವೂ**—ಜನಮೇಜಯಾ, ಕುಂತಿಯ ಸೌಂದರ್ಯ-ಸದ್ಗುಣಗಳಿಗೆ ಲುಬ್ಧರಾಗಿ ಹಲವುರಾಜರು ಆಕೆಯನ್ನು ಮದುವೆಯಾಗಲು ಇಚ್ಛಿಸಿ ಕುಂತಿಭೋಜನನ್ನು ಕೇಳಿದರು; ಆದರೆ ಕುಂತಿಭೋಜನು ಕುಂತಿಯ

ಸ್ವಯಂವರವನ್ನು ಹೂಡಿ ಯಾವತ್ತು ರಾಜರನ್ನು ತನ್ನಲ್ಲಿಗೆ ಬರಮಾಡಿಕೊಂಡನು. ರಾಜರು ಸಭೆಯಲ್ಲಿ ಕುಳಿತಿರುವಾಗ ಕುಂತಿಯು ಪಾಂಡುವಿನ ಸೌಂದರ್ಯಕ್ಕೂ, ತೇಜಸ್ಸಿಗೂ ಮರುಳಾಗಿ ಆತನ ಕೊರಳಿಗೆ ಮಾಲೆ ಹಾಕಲು, ಯಾವತ್ತು ರಾಜರು ತಮ್ಮ ತಮ್ಮ ದೇಶಗಳಿಗೆ ತೆರಳಿಹೋದರು. ಇತ್ತ ಕುಂತಿಯೊಡನೆ ಪಂಡುವಿನ ವಿವಾಹವಾಯಿತು.

ಬಳಿಕ ಭೀಷ್ಮನು ಯಶಸ್ವಿಯಾದ ಪಂಡುರಾಜನಿಗೆ ಇನ್ನೊಂದು ಲಗ್ನಮಾಡಬೇಕೆಂದು ಯೋಚಿಸಿ, ಹೆಣ್ಣು ಕೇಳುವದಕ್ಕಾಗಿ ಚತುರಂಗ ಬಲದೊಡನೆ ಮದ್ರದೇಶಕ್ಕೆ ಹೋದನು. ಆಗ ಮದ್ರಾಧಿಪತಿಯಾದ ಶಲ್ಯನು ಭೀಷ್ಮನನ್ನು ಪೂಜಿಸಿ, ಬಂದಕಾರಣವನ್ನರಿತು ಭೀಷ್ಮನನ್ನುದ್ದೇಶಿಸಿ — "ನಿಮ್ಮಂಥ ಸ್ಥಳವು ನಮಗೆ ಸಿಗುವದೇ ದುರ್ಲಭವು. ಆದರೆ ನಮ್ಮಲ್ಲಿ ಕುಲಾಚಾರವೊಂದಿರುವುದು. ಅದು ಒಳ್ಳೆಯದಿರಲಿ, ಕೆಟ್ಟದಿರಲಿ, ಅದು ಹಿರಿಯರಿಂದ ನಡೆದು ಬಂದದ್ದರಿಂದ, ನಾವು ಭಕ್ತಿಯಿಂದ ಅದನ್ನು ನಡಿಸಲೇಬೇಕಾಗುವದು. ಅದನ್ನು ಬಾಯಿಬಿಟ್ಟು ನಿಮ್ಮಮುಂದೆ ಹೇಳಲಿಕ್ಕೆ ಸಂಕೋಚವಾಗುವದು" ಅನ್ನಲು, ಅದಕ್ಕೆ ಭೀಷ್ಮನು—"ಶಲ್ಯರಾಜಾ, ಧರ್ಮವು ಶ್ರೇಷ್ಠವಾದದ್ದೆಂದು ಪ್ರತ್ಯಕ್ಷ ಬ್ರಹ್ಮದೇವನು ಹೇಳಿರುವನು; ಆದ್ದರಿಂದ ಹಿರಿಯರು ಹಾಕಿದ ಕುಲಧರ್ಮ ಕುಲಾಚಾರಗಳು ಬಿಡತಕ್ಕವಲ್ಲ," ಎಂದು ಹೇಳಿ, ಮಾದ್ರಿಯ ಸಲುವಾಗಿ ಬಂಗಾರ-ಮುತ್ತು-ರತ್ನಾದಿಗಳ ವಿಪುಲ ಸಂಪತ್ತನ್ನು ಶಲ್ಯನಿಗೆ ಕೊಟ್ಟನು. ಆಗ ಶಲ್ಯನು ಸಂತೋಷಪಟ್ಟು ತಂಗಿಯಾದ ಮಾದ್ರಿಯನ್ನು ವಸ್ತ್ರಾಲಂಕಾರಗಳಿಂದ ಅಲಂಕರಿಸಿ ಕೌರವರಿಗೆ ಒಪ್ಪಿಸಿದನು. ಬಳಿಕ ಮಾದ್ರಿಯನ್ನು ಕರಕೊಂಡು ಭೀಷ್ಮಾದಿಗಳು ಹಸ್ತಿನಾವತಿಗೆಬಂದಬಳಿಕ, ಶುಭಮುಹೂರ್ತದಲ್ಲಿ ಮಾದ್ರಿ ಪಂಡುಗಳ ವಿವಾಹವಾಯಿತು. ಪಂಡುರಾಜನು ಮಾದ್ರಿಯನ್ನು ಬೇರೆ ಅರಮನೆಯಲ್ಲಿಟ್ಟು, ಇಬ್ಬರು ಹೆಂಡಿರೊಡನೆ ವಿವಿಧವಿಲಾಸಗಳನ್ನು ಭೋಗಿಸತೊಡಗಿದನು.

ಹೀಗೆ ಪಂಡುವು ಮೂವತ್ತು ರಾತ್ರಿ ವಿಹರಿಸಿದಬಳಿಕ, ಬಲಿಷ್ಠವಾದ ಚತುರಂಗಸೈನ್ಯದೊಡನೆ ದಿಗ್ವಿಜಯಕ್ಕಾಗಿ ಹೊರಟನು. ಆತನು ಭೀಷ್ಮನೇ ಮೊದಲಾದ ಕುರುಕುಲವೃದ್ಧರನ್ನೂ, ಧೃತರಾಷ್ಟ್ರನೇ ಮೊದಲಾದ

ಹಿರಿಯರನ್ನೂ ನಮಸ್ಕರಿಸಿ, ಬ್ರಾಹ್ಮಣರ ಆಶೀರ್ವಾದಪಡೆದು ಹಸ್ತಿನಾವತಿಯನ್ನು ಬಿಟ್ಟು ಮುಂದಕ್ಕೆ ಸಾಗಿದನು. ಪಂಡುವು ಹಲವು ರಾಜರನ್ನು ಗೆದ್ದು ದಿಗ್ವಿಜಯವನ್ನು ನಡಿಸಿದನು. ಯಾವತ್ತು ರಾಜರು ಪಂಡುವಿನ ಪ್ರತಾಪಕ್ಕೆ ಅಂಜಿ ಶರಣುಬಂದು, ವಿವಿಧ ಸಂಪತ್ತನ್ನು ಆತನಿಗೆ ಒಪ್ಪಿಸಿದರು. ಆತನಲ್ಲಿ ವಿಪುಲಸಂಪತ್ತಿನ ಸಂಗ್ರಹವಾಯಿತು. ಅದನ್ನು ಹಸ್ತಿನಾವತಿಯ ಜನರಿಗೆ ತೋರಿಸಿ, ಅವರನ್ನು ಸಂತೋಷಪಡಿಸುವ ಉತ್ಸಾಹದಿಂದ ಪಂಡುವು ವಿಜಯದ ಕಾರ್ಯವನ್ನು ಮುಗಿಸಿಕೊಂಡು ಹಸ್ತಿನಾವತಿಗೆ ತಿರುಗಿದನು. ಶಾಂತನುವು ಸಂಪಾದಿಸಿದ ಕೀರ್ತಿಯು ನಾಶವಾಗಿರಲು, ಅದನ್ನು ಪಂಡುವು ಮತ್ತೆ ಸಂಪಾದಿಸಿದನು. ಭೀಷ್ಮಾದಿ ಸರ್ವಪುರಜನರು ಪಂಡುವನ್ನು ಎದುರುಗೊಳ್ಳುವದಕ್ಕಾಗಿ ಬಹುದೂರ ಬಂದರು. ಆತನು ಸಂಪಾದಿಸಿ ತಂದಿದ್ದ ವಿಪುಲ ಸಂಪತ್ತನ್ನು ನೋಡಿ ಅವರಿಗೆ ಪರಮಸಂತೋಷವಾಯಿತು. ಪಂಡುವು ಎಲ್ಲರನ್ನು ಯೋಗ್ಯವಾಗಿ ಸತ್ಕರಿಸುತ್ತಿರಲು, ಭೀಷ್ಮನು ಆತನನ್ನು ಅಪ್ಪಿಕೊಳ್ಳುತ್ತಿರುವಾಗ ಆನಂದಬಾಷ್ಪಗಳು ಉದುರಿದವು. ಉತ್ಸವದಿಂದ ಪಂಡುವು ಹಸ್ತಿನಾಪುರವನ್ನು ಪ್ರವೇಶಿಸಿ, ತಾನು ತಂದಿದ್ದ ಸಂಪತ್ತನ್ನು ಧೃತರಾಷ್ಟ್ರನ ಒಪ್ಪಿಗೆಯಿಂದ ಅವರವರಿಗೆ ಒಪ್ಪಿಸಿ, ಎಲ್ಲರನ್ನು ಸಂತೋಷಪಡಿಸಿದನು. ಪಂಡುವಿನ ದಿಗ್ವಿಜಯದ ಪ್ರೀತ್ಯರ್ಥವಾಗಿ ಧೃತರಾಷ್ಟ್ರನು ಬ್ರಾಹ್ಮಣರಿಗೆ ಲಕ್ಷಾವಧಿ ರೂಪಾಯಿಗಳನ್ನು ದಾನವಾಗಿಕೊಟ್ಟು, ಅಶ್ವಮೇಧದಂಥ ನೂರಾರು ಯಜ್ಞಗಳನ್ನು ಮಾಡಿದನು. ತರುವಾಯ ಪಂಡುವು, ಕುಂತಿ-ಮಾದ್ರಿಯರನ್ನು ಕೂಡಿಕೊಂಡು ಅರಣ್ಯದಲ್ಲಿ ಬೇಟೆಯಾಡತೊಡಗಿದನು. ಆತನು ಹಸ್ತಿನಾವತಿಯ ಅರಮನೆಯನ್ನು ಬಿಟ್ಟೇಬಿಟ್ಟನೆಂದು ಹೇಳಬಹುದು. ಆತನಿಗೆ ಬೇಕಾದ ಪದಾರ್ಥಗಳನ್ನು ಧೃತರಾಷ್ಟ್ರನ ಅಪ್ಪಣೆಯಿಂದ, ಆ ಮೃಗಯಾಪ್ರಿಯನು ಇರುತ್ತಿದ್ದ ಅರಣ್ಯದಲ್ಲಿಯೇ ಸೇವಕರು ಬಹು ಜಾಗರೂಕತೆಯಿಂದ ಒದಗಿಸಿಕೊಡುತ್ತಿದ್ದರು. ಇತ್ತ ಭೀಷ್ಮನು ದೇವಕನ ಮಗಳಾದ "ಪಾರಸವಿ" ಎಂಬ ಉಪವರ ಕನ್ಯೆಯೊಡನೆ ವಿದುರನ ಲಗ್ನಮಾಡಿದನು. ಪಾರಸವಿಯು, ಶೂದ್ರಸ್ತ್ರೀಯಲ್ಲಿ ಬ್ರಾಹ್ಮಣನಿಂದ ಹುಟ್ಟಿದವಳಾಗಿದ್ದಳು. ಮುಂದೆ ಆ ಸ್ತ್ರೀಯಿಂದ ವಿದುರನಿಗೆ ಹಲವುಜನ ಮಕ್ಕಳಾದರು. ಅವರೆಲ್ಲರೂ ವಿನಯಶೀಲರೂ, ವಿದುರನ ಮಕ್ಕಳೆನಿಸಿಕೊಳ್ಳಲು ತಕ್ಕವರೂ ಇದ್ದರು.

## ೧೫, ೧೧೬, ೧೧೭ನೇ ಅಧ್ಯಾಯಗಳು ಗಾಂಧಾರೀ ಪುತ್ರೋತ್ಪತ್ತಿ:—

ಒಮ್ಮೆ ವ್ಯಾಸರು ದಣಿದು ಬಂದಿರಲು, ಗಾಂಧಾರಿಯು ಉತ್ತಮರೀತಿಯಿಂದ ಅವರ ಸೇವೆಮಾಡಿದಳು. ಆಗ ವ್ಯಾಸರು ಸಂತುಷ್ಟರಾಗಿ ಗಾಂಧಾರಿಗೆ—"ನಿನಗೆ ಏನು ಬೇಕು ?" ಎಂದು ಕೇಳಲು, ಗಾಂಧಾರಿಯು ತನ್ನ ಹೊಟ್ಟೆಯಲ್ಲಿ ನೂರುಮಂದಿ ಮಕ್ಕಳು ಹುಟ್ಟಬೇಕೆಂದು ಬೇಡಿಕೊಂಡಳು. ಅದರಂತೆ ಕೆಲದಿನಗಳಮೇಲೆ ಧೃತರಾಷ್ಟ್ರನಿಂದ ಆಕೆಯಲ್ಲಿ ಗರ್ಭಧಾರಣವಾಯಿತು ; ಆದರೆ ಎರಡು ವರ್ಷಗಳಾದರೂ ಗಾಂಧಾರಿಯು ಹಡೆಯಲಿಲ್ಲ. ಗರ್ಭದ ಚಲನ ವಲನವೂ ಆಕೆಗೆ ಕಂಡು ಬರಲಿಲ್ಲ. ಅಷ್ಟರಲ್ಲಿ ಕುಂತಿಯು ಒಬ್ಬ ಮಗನನ್ನು ಹಡೆದಿರಲು, ಆ ಹುಡುಗನು ಸೂರ್ಯನಂತೆ ಪ್ರಕಾಶಮಾನನಾಗಿರುವನೆಂಬ ಸುದಿಯ್ದು ಗಾಂಧಾರಿಗೆ ಗೊತ್ತಾಯಿತು. ಆಗ ಗಾಂಧಾರಿಯು ಚಿಂತೆಗೊಳಗಾದಳು. ತನ್ನ ಗರ್ಭವು ಸುಳಿದಾಟವೂ ಕೂಡ ಇಲ್ಲದೆ ಕಲ್ಲಿನಹಾಗೆ ಕುಳಿತುಬಿಟ್ಟದ್ದನ್ನು ನೋಡಿ, ದುಃಖಪಟ್ಟು ಧೃತರಾಷ್ಟ್ರನನ್ನೂ ಕೇಳದೆ ತನ್ನ ಆ ಗರ್ಭವನ್ನು ಕೆಡವಿಬಿಟ್ಟಳು. ಆಗ ಕಬ್ಬಿಣದಂತೆ ಗಟ್ಟಿಯಾದ ಒಂದು ಮಾಂಸದ ಪಿಂಡವು ಹೊರಬಿದ್ದಿತು. ಎರಡುವರ್ಷ ಹೊಟ್ಟೆಯಲ್ಲಿ ಸಂರಕ್ಷಿಸಿದ್ದ ಆ ಗರ್ಭವನ್ನು ನಾಶಮಾಡಲು ಆಕೆಯು ಉದ್ಯುಕ್ತಳಾದಳು. ಅಷ್ಟರಲ್ಲಿ ವ್ಯಾಸಋಷಿಗಳು ಇದನ್ನರಿತು ಅಲ್ಲಿಗೆ ಬಂದು ಗರ್ಭವನ್ನು ನೋಡಿ, "ಇದನ್ನೇನು ಮಾಡುವೆ?" ಎಂದು ಗಾಂಧಾರಿಯನ್ನು ಕೇಳಿದರು. ಆಗ ಆ ಸಾಧ್ವಿಯು ನಿಜವನ್ನು ಹೇಳುವದಕ್ಕಾಗಿ ಆ ಋಷಿಯನ್ನು ಕುರಿತು:—

ಗಾಂಧಾರಿ:—ಕುಂತಿಗೆ ಮಗನು ಹುಟ್ಟಿದ್ದನ್ನು ಕೇಳಿ ದುಃಖವಾಗಿ ನಾನು ಈ ಗರ್ಭವನ್ನು ಕೆಡವಿದೆನು. ನೀವು ನೂರುಜನ ಮಕ್ಕಳಾಗುವರೆಂದು ಹೇಳಿರಲು, ಈ ಮಾಂಸದ ಮುದ್ದೆಯು ಹುಟ್ಟಿತು.

ವ್ಯಾಸ:—ಗಾಂಧಾರಿ, ನಾನು ಹೇಳಿದ್ದು ನಿಜವು ; ಅದು ಎಂದೂ ಸುಳ್ಳಾಗದು ; ತುಪ್ಪದಿಂದ ತುಂಬಿದ ನೂರಾಒಂದು ಕೊಡಗಳನ್ನು ಸಿದ್ಧ ಮಾಡಿ, ಅವನ್ನು ಗುಪ್ತಸ್ಥಳದಲ್ಲಿ ಜತನದಿಂದ ಇಟ್ಟು, ಚನ್ನಾಗಿ ರಕ್ಷಿಸಿರಿ ; ಮತ್ತು, ಈ ಗರ್ಭದಮೇಲೆ ತಣ್ಣೀರು ಉಗ್ಗಿರಿ

ಅನ್ನಲು, ಯುಧಿಷ್ಠಿರನು "ಹಾಗೇಆಗಲಿ" ಎಂದು ಒಪ್ಪಿಕೊಂಡನು. ಬಳಿಕ ಅವರೆಲ್ಲರೂ ರಥ, ಆನೆ ಮೊದಲಾದ ವಾಹನಗಳನ್ನೇರಿ, ಸಿಂಹಗಳು ಗುಹೆಗಳನ್ನು ಪ್ರವೇಶಿಸುವಂತೆ, ಕ್ರೀಡಾಮಂದಿರವನ್ನು ಪ್ರವೇಶಿಸಿದರು. ಆ ಮಂದಿರದ ಸೌಂದರ್ಯವನ್ನೇನು ವರ್ಣಿಸುವದು? ಅದಕ್ಕೆ ಅಲ್ಲಲ್ಲಿ ಸುಂದರ ಜಾಳಿಗೆಯ ಖಿಡಕಿಗಳಿದ್ದವು; ಅಲ್ಲಲ್ಲಿ ಕಾರಂಜಿಗಳು ಹಾರುತ್ತಿದ್ದವು; ಗೋಡೆಗಳನ್ನು ಸುಂದರ ಚಿತ್ರಗಳಿಂದ ಅಲಂಕರಿಸಿದ್ದರು; ನೀರಿನ ಪ್ರವಾಹವಂತು ಭರದಿಂದ ಸಾಗಿತ್ತು; ನೀರಲ್ಲಿಯ ಕಮಲಗಳಿಂದ ಅಪೂರ್ವಶೋಭೆಯುಂಟಾಗಿತ್ತು; ಅದರಂತೆ ಭೂಮಿಯು ಋತುಮಾನಕ್ಕನುಸರಿಸಿ ಆಯಾಹೂಗಳಿಂದ ಮುಚ್ಚಿಹೋಗಿ ಮನೋಹರವಾಗಿ ತೋರುತ್ತಿತ್ತು.

ಬಳಿಕ ಪಾಂಡವರೂ, ಕೌರವರೂ ತಮ್ಮ ಮನಸ್ಸಿಗೆಬಂದಂತೆ ಅಲ್ಲಿಯ ವಸ್ತುಗಳ ಉಪಭೋಗಮಾಡಹತ್ತಿದರು. ಬರಬರುತ್ತ ಎಲ್ಲ ಹುಡುಗರೂ ವಿನೋದಮಗ್ನರಾಗಿ ಒಬ್ಬರ ಬಾಯಲ್ಲೊಬ್ಬರು ತುತ್ತು ಹಾಕಹತ್ತಿದರು. ಇದೇಸಂಧಿಯಲ್ಲಿ ದುಷ್ಟದುರ್ಯೋಧನನು ಅನ್ನದಲ್ಲಿ ಕಾಲಕೂಟವಿಷವನ್ನು ಕಲಿಸಿ ಭೀಮಸೇನನಿಗೆ ಅದನ್ನು ಉಣಿಸಿದನು. ತೀಕ್ಷ್ಣಶಸ್ತ್ರದಂತೆ ಅಂತರಂಗವಿದ್ದ, ಸಕ್ಕರೆಗಿಂತ ಸವಿಮಾತಾಡುವ ಆ ದುಷ್ಟನು ಸ್ವತಃ ತಾನೇಎದ್ದು. ವಿವಿಧ ಭಕ್ಷ್ಯಭೋಜ್ಯಗಳನ್ನು ಕೈಮುಟ್ಟಿ ಭೀಮನಿಗೆ ಉಣಿಸಹತ್ತಿದನು. ಯಾವ ಕಪಟವನ್ನೂ ಅರಿಯದ ಭೀಮನಾದರೂ ಯಥೇಚ್ಛವಾಗಿ ಉಂಡನು. ಆಗ ದುರ್ಯೋಧನನು ತನ್ನ ಕೆಲಸವಾಯಿತೆಂದು ಮನಸ್ಸಿನಲ್ಲಿ ನಗುತ್ತ, ತಾನು ಧನ್ಯನಾದೆನೆಂದು ಆನಂದಪಡತೊಡಗಿದನು ಆಮೇಲೆ ಅವರ ಜಲಕ್ರೀಡೆಗೆ ಅರಂಭವಾಯಿತು. ಯಥೇಚ್ಛ ಜಲಕ್ರೀಡೆಯಾಡಿದಬಳಿಕ ಅವರು ಸ್ವಚ್ಛವಸ್ತ್ರಗಳನ್ನುಟ್ಟುಕೊಂಡು ಅಲಂಕಾರಗಳನ್ನು ಧರಿಸಿದರು. ಅವರು ಹಲವುಪ್ರಕಾರದ ವಿಹಾರಗಳನ್ನು ಮಾಡಿ ದಣಿದದ್ದರಿಂದ, ಆ ಕ್ರೀಡಾಮಂದಿರದಲ್ಲಿಯೇ ಮಲಗಿಕೊಳ್ಳಬೇಕೆಂದು ನಿಶ್ಚಯಿಸಿ, ತಮತಮಗೆ ಸುಖತೋರುವಲ್ಲಿ ಅವರು ಮಲಗಿಕೊಂಡರು. ಭೀಮನು ಎಲ್ಲರಿಗಿಂತಲೂ ಹೆಚ್ಚು ಗುದುಮುರಿಗೆ ಹಾಕಿದ್ದರಿಂದ ದಣಿದು, ತಂಗಾಳಿಬೀಸುತ್ತಿರುವ ಗಂಗಾತೀರದಲ್ಲಿಯೇ ಮಲಗಿಕೊಂಡನು. ಮೊದಲೇ ದಣಿದವನು, ಮೇಲೆ ತಂಗಾಳಿ, ಆದರಲ್ಲಿ ಕಾಲಕೂಟವಿಷದ ಅಮಲು

ಹ್ನಗಳನ್ನು ನೋಡಿದರೆ, ಈಗ ಹುಟ್ಟಿರುವ ನಿನ್ನ ಮಗನು ಕುಲನಾಶಕನಾಗಬಹುದಾಗಿ ತೋರುತ್ತದೆ; ಆದ್ದರಿಂದ ಈತನನ್ನು ಚಲ್ಲಕೊಡುವದು ನೆಟ್ಟಗೆ; ಈ ಒಬ್ಬನನ್ನು ಚಲ್ಲಿಕೊಟ್ಟು ವಂಶದ, ಕಿಂಬಹುನಾ ಎಲ್ಲ ಜಗತ್ತಿನ ಕಲ್ಯಾಣಮಾಡು. ಕುಲವನ್ನು ರಕ್ಷಿಸುವದಕ್ಕಾಗಿ ಒಬ್ಬ ಮನುಷ್ಯನನ್ನೂ, ಊರನ್ನು ರಕ್ಷಿಸುವದಕ್ಕಾಗಿ ಒಂದು ಕುಲವನ್ನೂ, ದೇಶವನ್ನು ರಕ್ಷಿಸುವದಕ್ಕಾಗಿ ಒಂದು ಊರನ್ನೂ, ತನ್ನ ಜೀವವನ್ನು ರಕ್ಷಿಸುವದಕ್ಕಾಗಿ ಪೃಥ್ವಿಯ ರಾಜ್ಯವನ್ನೂ ಬಿಟ್ಟುಕೊಡಬೇಕು,'' ಎಂದು ಹೇಳಿದರು; ಆದರೂ ಪುತ್ರವಾತ್ಸಲ್ಯದಿಂದ ಧೃತರಾಷ್ಟ್ರನು ಹಾಗೆ ಮಾಡಲಿಲ್ಲ. ಮುಂದೆ ಕ್ರಮವಾಗಿ ನೂರುಮಂದಿ ಗಂಡುಮಕ್ಕಳೂ, ದುಃಶಲೆ ಎಂಬ ಒಬ್ಬ ಹೆಣ್ಣುಮಗಳೂ ಹುಟ್ಟಿದರು. ಒಬ್ಬ ವೈಶ್ಯಸ್ತ್ರೀಯಲ್ಲಿ ಯುಯುತ್ಸು ಎಂಬ ಮಗನು ಹುಟ್ಟಿದನು ಶ್ರೀವ್ಯಾಸರ ವರಪ್ರದಾನದಿಂದ ನೂರೇಜನ ಗಂಡುಮಕ್ಕಳು ಆಗತಕ್ಕವರು, ಆದರೆ, ಗಾಂಧಾರಿಯು ಗರ್ಭಭಾರದ ಕಷ್ಟದಲ್ಲಿರುವಾಗ, ಒಬ್ಬ ವೈಶ್ಯಸ್ತ್ರೀಯು ಧೃತರಾಷ್ಟ್ರನನ್ನು ಸೇವಿಸಿದ್ದರಿಂದ ಆಕೆಯ ಹೊಟ್ಟೆಯಲ್ಲಿ ಯುಯುತ್ಸು ಎಂಬ ಪ್ರಸಿದ್ಧನಾದ ಮಗನು ಹುಟ್ಟಿದನು; ಮತ್ತು ಗಾಂಧಾರಿಯು ತನ್ನ ಹೊಟ್ಟೆಯಲ್ಲಿ ಬರಿಯ ನೂರುಜನ ಗಂಡುಮಕ್ಕಳೇ ಹುಟ್ಟುವದನ್ನು ಮನಸ್ಸಿನಲ್ಲಿ ತಂದು-''ವ್ಯಾಸಪ್ರಸಾದದಿಂದ ನನಗೆ ನೂರುಜನ ಗಂಡುಮಕ್ಕಳಾಗುವದಂತು ನಿಶ್ಚಯವು; ಆದರೆ ನನಗೊಬ್ಬ ಹೆಣ್ಣುಮಗಳು ಆದರೆ ಬಹಳ ಸಂತೋಷವಾಗುವದು. ನೂರು ಜನ ಮಕ್ಕಳಮೇಲೆ ಹುಟ್ಟಿದ ಹೆಣ್ಣುಮಗಳು ಅಚ್ಚೆಯ ಹೆಣ್ಣುಮಗಳಾಗುವಳು. ದೌಹಿತ್ರನಿಂದ ದೊರೆಯುವ ಪುಣ್ಯಲೋಕಗಳಿಗೆ ನನ್ನ ಪತಿಯು ಎರವಾಗಲಾರನು. ಹೆಣ್ಣುಮಕ್ಕಳಿಗೆ ಅಳಿಯನ ಕೌತುಕವು ಬಹಳ. ನನ್ನ ಸುತ್ತಲೂ ಗಂಡುಮಕ್ಕಳ ಮಕ್ಕಳೂ, ಹೆಣ್ಣುಮಗಳ ಮಕ್ಕಳೂ ಆಡಹತ್ತಿದರೆ, ನಾನು ಧನ್ಯಳಾಗುವೆನು ನನ್ನಿಂದ ಏನಾದರೂ ಪುಣ್ಯವು ಘಟಿಸಿದ್ದರೆ, ಒಬ್ಬ ಹೆಣ್ಣುಮಗಳುಆಗಲಿ'' ಎಂದು ಆಲೋಚಿಸಿದ್ದರಿಂದ ವ್ಯಾಸರು ಕರುಣಿಸಿ, ಗರ್ಭದ ನೂರಾಒಂದನೆಯ ಭಾಗವನ್ನು ಹೆಣ್ಣುಶಿಶುವಾಗುವಂತೆ ಮಾಡಿದರು. ಆಕೆಯೇ ದುಃಶಲಾಯೆಂಬ ಕಡೆಹುಟ್ಟಿದ ಮಗಳು! ಧೃತರಾಷ್ಟ್ರನ ನೂರಾಒಂದುಜನ ಮಕ್ಕಳೂ ಒಂದೇಪ್ರಕಾರದ ಮಹಾರಥರೂ,

ಶೂರರೂ, ಯುದ್ಧವಿದ್ಯೆಯಲ್ಲಿ ನಿಪುಣರೂ, ವೇದಾಧ್ಯಯನಮಾಡಿದವರೂ, ಅಸ್ತ್ರವಿದ್ಯೆಯಲ್ಲಿ ಒಳ್ಳೆಯ ಪಂಡಿತರೂ ಆದರು. ಈ ಎಲ್ಲಮಕ್ಕಳ ಲಗ್ನವನ್ನು ಧೃತರಾಷ್ಟ್ರನು ಯೋಗ್ಯಕುಲಗಳಲ್ಲಿಯ ಯೋಗ್ಯವಧುಗಳನ್ನಾರಿಸಿ, ಸಂಸ್ಕಾರಪೂರ್ವಕವಾಗಿ ಮಾಡಿದನು. ದುಃಶಲೆಯು ಉಪವರಳಾಗಲು, ಧೃತರಾಷ್ಟ್ರನು ಆಕೆಯನ್ನು ಜಯದ್ರಥನಿಗೆ ಲಗ್ನಮಾಡಿಕೊಟ್ಟನು. ಧೃತರಾಷ್ಟ್ರನ ಮಕ್ಕಳು ಮನುಷ್ಯಕೋಟಿಯವರಾಗಿದ್ದರೂ, ದೊಡ್ಡ ಋಷಿಯ ಪ್ರಭಾವದಿಂದ ಅವರ ಜನ್ಮವು ವಿಶೇಷತರದಿಂದಾಯಿತು !

**೧೧೮ನೇ ಅಧ್ಯಾಯ— ಪಾಂಡುಶಾಪವೃತ್ತ**:—ಬಳಿಕ ಜನಮೇಜಯನು ವೈಶಂಪಾಯನರನ್ನು ಕುರಿತು—"ಮುನಿವರ್ಯರೇ, ಇನ್ನುಮೇಲೆ ದೇವಾಂಶರಾದ ಪಾಂಡವರ ಚರಿತ್ರವನ್ನು ನನಗೆ ಹೇಳಿರಿ," ಎಂದುಕೇಳಲು, ವೈಶಂಪಾಯನರು—"ಜನಮೇಜಯಾ, ಒಮ್ಮೆ ಪಾಂಡುರಾಜನು ಅರಣ್ಯದಲ್ಲಿ ಬೇಟೆಯಾಡುತ್ತಿರುವಾಗ, ಸುರತಕ್ರೀಡೆಯಲ್ಲಿ ಆಸಕ್ತವಾಗಿದ್ದ ಗಂಡೆರಳೆ-ಹೆಣ್ಣೆರಳೆಗಳೆರಡರ ಮೇಲೆಯೂ ತೀಕ್ಷ್ಣವಾದ ಐದುಬಾಣಗಳನ್ನು ಬಿಟ್ಟನು. ಗಂಡೆರಳೆಯು ಕೇವಲ ಎರಳೆಯೇ ಆಗಿರದೆ, ಕಿಂದಮನೆಂಬ ಋಷಿಯು ಎರಳೆಯ ರೂಪದಿಂದ ಕ್ರೀಡಿಸುತ್ತಿದ್ದನು. ಎರಳೆಯರೂಪದ ಋಷಿಯು ಪಾಂಡುವಿನ ಬಾಣಗಳಿಂದ ನೆಲಕ್ಕೆ ಬಿದ್ದು, ಪ್ರಾಣಸಂಕಟವನ್ನು ತಾಳಲಾರದೆ, ಪಾಂಡುರಾಜನನ್ನು ಕುರಿತು ಮನುಷ್ಯವಾಣಿಯಿಂದ—

ಮೃಗ:—ಎಲೈ ರಾಜಾ, ವಿಕಾರವಶರೂ, ವಿಚಾರಶೂನ್ಯರೂ, ಸದಾ ಪಾಪಕರ್ಮನಿರತರೂ ಆದವರು ಕೂಡ ಮಾಡಲಾರದ ನಿರ್ದಯದ ಕೆಲಸವನ್ನು ನೀನು ಮಾಡಿದೆಯಲ್ಲ! ದೈವಸಂಕಲ್ಪದಮುಂದೆ ಮನುಷ್ಯನಬುದ್ಧಿಯು ನಡೆಯಲಾರದು. ದೈವಸಂಕಲ್ಪವು ಮನುಷ್ಯನ ಬುದ್ಧಿಯನ್ನು ನಷ್ಟಪಡಿಸಿಬಿಡುವದು. ಯೋಗಾಯೋಗನಿದ್ದಂತೆ ಎಲ್ಲಸಂಗತಿಗಳು ಒದಗುವವು ; ಆದರೆ ಮನುಷ್ಯನು ತನ್ನ ಜಾಣತನದ ಹೆಮ್ಮೆಯಲ್ಲಿ ಇದನ್ನು ತಿಳಿಯುವದಿಲ್ಲ. ಎಲೈ ಭರತವಂಶೀಯರಾಜನೇ, ಪುಣ್ಯಶ್ಲೋಕರಾಜರ ವಂಶದಲ್ಲಿ ಹುಟ್ಟಿದ ನಿನ್ನ ಬುದ್ಧಿಯು ಹೀಗೆ ಹೇಗೆ ಭ್ರಷ್ಟವಾಯಿತು ?

ಪಾಂಡು—ಎಲೈ ಮೃಗಾ, ಯುದ್ಧವೂ, ಬೇಟೆಯೂ ರಾಜರಿಗೆ ಧರ್ಮಗಳು ; ಆ ಪ್ರಸಂಗಗಳಲ್ಲಿ ಅವರು ಸರಳತನದಿಂದಾಗಲಿ, ಮೋಸ

ದಿಂದಾಗಲಿ ತಮ್ಮ ಕಾರ್ಯಗಳನ್ನು ಸಾಧಿಸಬಹುದು; ಅಂದಬಳಿಕ ಸುಮ್ಮನೆ ನನಗೇಕೆ ದೋಷವಿಡುವೆ? ಅಗಸ್ತ್ಯರಂಥ ದೊಡ್ಡ ಋಷಿಗಳೂ ನಿನ್ನಂಥ ಮೃಗವನ್ನು ಕೊಂದೇ ವಪಾಹೋಮ ಮೊದಲಾದವನ್ನು ಮಾಡು ವರು. ಅಂದಬಳಿಕ ವೇದದಲ್ಲಿ ಪ್ರತ್ಯಕ್ಷಹೇಳದ ಧರ್ಮದ ವಿಷಯವಾಗಿ ನನ್ನನ್ನೇಕೆ ನಿಂದಿಸುತ್ತೀ?

ಮೃಗ—ಶತ್ರುವು ಆತ್ಮರಕ್ಷಣದ ವಿಷಯದಲ್ಲಿ ಜಾಗರೂಕನಾಗಿರ ದಾಗ, ಆತನಮೇಲೆ ಬಾಣಬಿಡುವದು ಧರ್ಮವಲ್ಲ ಕೊಲ್ಲುವಂಥ ಪ್ರಸಂ ಗಗಳೇ ಎಂದು ಗೊತ್ತಾಗಿರುವ ಯುದ್ಧ ವಂಥ ಪ್ರಸಂಗಗಳಲ್ಲಿಜೀವಹತ್ಯನಾ ಗುವದು ಯೋಗ್ಯವೇ ಇರುವದು.

ಪಂಡು- ಮೃಗವು ಎಚ್ಚತ್ತಿರಲಿ ಎಚ್ಚತ್ತಿರದಿರಲಿ, ಅದನ್ನು ಹಲವು ವಿಧ ದ ಉಪಾಯಗಳಿಂದ ಕೊಲ್ಲುತ್ತಿರಲು, ನೀನು ನನಗೆ ಯಾಕೆ ದೋಷ ವಿಡುತ್ತೀ?

ಮೃಗ- ರಾಜಾ, ನನ್ನನ್ನು ನೀನು ಕೊಂದೆಯೆಂಬ ದುಃಖದಿಂದ ನಾನು ನಿನಗೆ ಹೇಳುವದಿಲ್ಲ. ರತಿಪ್ರಸಂಗದಲ್ಲಿ ನೀನು ನಿನ್ನ ದುಷ್ಟತನ ವನ್ನು ಬಿಡಬೇಕಾಗಿತ್ತು. ಎಲ್ಲರಿಗೂ ಬೇಕಾಗಿರುವ ಮೈಥುನಪ್ರಸಂಗ ದಲ್ಲಿ ಒಂದು ಮೃಗವು ತೊಡಗಿರುವಾಗ, ಅದನ್ನು ನೀನು ಕೊಲ್ಲಬಹುದೆ? ಉತ್ಕೃಷ್ಟಸಂತತಿಯನ್ನು ಉತ್ಪನ್ನಮಾಡಬೇಕೆಂದು ನಾನು ಈ ಮೃಗಿ ಯನ್ನು ಕೂಡಿರುವಾಗ, ನೀನು ಹೀಗೆ ಬಾಣಬಿಟ್ಟದ್ದು ನಿನಗೆ ಯೋಗ್ಯ ವಾಗಿ ತೋರುವದೆ? ನಿನ್ನ ಈ ಕರ್ಮವು ಎಲ್ಲರೂ ಹಳಿಯುವಂತಹದೂ, ಸ್ವರ್ಗದ ಹಾದಿಯನ್ನು ಕಟ್ಟುವಂತಹದೂ ಆಗಿರುವದು. ನಿನ್ನಂಥ ತಿಳಿ ದವನು, ರತಿಸುಖದ ಅನುಭವವುಳ್ಳವನು, ಪಾಪಪುಣ್ಯಗಳ ವಿಚಾರವುಳ್ಳ ವನು ಇಂಥ ನರಕಸಾಧನದ ಕಾರ್ಯವನ್ನು ಮಾಡತಕ್ಕದ್ದಿದ್ದಿಲ್ಲ. ಇಂಥ ದುಷ್ಟಕರ್ಮಗಳನ್ನು ಪ್ರತಿಬಂಧಿಸುವದು ನಿನ್ನ ಕರ್ತವ್ಯವಾಗಿದ್ದು, ನೀನೇ ಹೀಗೆ ಅನ್ಯಾಯದಿಂದ ನಡೆಯಬಹುದೇ? ಆದ್ದರಿಂದ ಮೃಗರೂಪಧರಿಸಿ ರುವ ಕಿಂದಮಋಷಿಯು ನಾನು ನಿನಗೆ ಶಾಪಕೊಡುತ್ತೇನೆ. "ನಿನ್ನ ಹೆಂಡತಿಯೊಡನೆ ನೀನು ರತಿಸುಖಾಸಕ್ತನಾಗಿ ದುರ್ಬಲನಾದಾಗಲೇ ನಿನ್ನ ನಾಶವಾಗುವದು; ಮತ್ತು ಮರಣಕ್ಕೆ ಕಾರಣಳಾದ ನಿನ್ನ ಹೆಂಡತಿಯು

ನಿನ್ನೊಡನೆ ಸಹಗಮನ ಮಾಡುವಳು.'' ಎಂದು ನುಡಿದು ಆ ಮೃಗವು ಪ್ರಾಣಬಿಟ್ಟಿತು.

**೧೧೯ನೇ ಅಧ್ಯಾಯ—ಪಂಡುರಾಜನ ಉಪರತಿ**— ಜನಮೇಜಯಾ, ಬಳಿಕ ಪಂಡುರಾಜನು ಮರಣಹೊಂದಿದ ಆ ಮೃಗರೂಪಮುನಿಯ ಬಳಿಗೆಹೋಗಿ ಶೋಕದಿಂದ ಪೀಡಿತನಾಗಿ ವಿಲಾಪಮಾಡತೊಡಗಿದನು— ''ನೋಡಿರಿ, ಸಜ್ಜನರ ಕುಲದಲ್ಲಿ ಹುಟ್ಟಿದ್ದರೂ ಇಂದ್ರಿಯನಿಗ್ರಹವಾಗದ್ದರಿಂದ. ವಿಷಯವಾಸನೆಯಲ್ಲಿ ಮುಳುಗಿ ದುರ್ಗತಿಯನ್ನು ಹೊಂದಬೇಕಾಗುವದು! ನನ್ನ ತಂದೆ ವಿಚಿತ್ರವೀರ್ಯನು ಶಾಂತನುವಿನ ಮಗನಾಗಿದ್ದರೂ, ವಿಷಯಸುಖಮಗ್ನನಾಗಿ ಅಲ್ಪವಯಸ್ಸಿನಲ್ಲಿಯೇ ಮರಣಹೊಂದಿದನೆಂದು ಕೇಳಿದ್ದೇನೆ. ಆ ಕಾಮಾಸಕ್ತರಾಜನ ಹೆಂಡತಿಯಲ್ಲಿ ಪ್ರತ್ಯಕ್ಷ ಭಗವಾನ್ ವ್ಯಾಸರಿಂದ ನಾನು ಉತ್ಪನ್ನನಾಗಿದ್ದರೂ, ಈಗ ನನ್ನ ಸರ್ವಶಾಸ್ತ್ರಜ್ಞಾನವು ನಷ್ಟವಾಗಿ, ಈ ಸಂಕಟಕ್ಕೆ ಗುರಿಯಾಗುವ ದುರ್ಬುದ್ಧಿಯು ನನಗೆ ಉತ್ಪನ್ನವಾಯಿತು. ಸಂಸಾರವು ದುಃಖಮಯವಾದದ್ದರಿಂದಲೇ ನನ್ನ ಜನಕರಾದ ವ್ಯಾಸರು ತಪಸ್ವಿಗಳಾದರು; ಅದರಂತೆ ನಾನೂ ತಪಸ್ಸನ್ನಾಚರಿಸುವೆನು, ಅಂದರೆ ಸರ್ವಸಂಗಪರಿತ್ಯಾಗಮಾಡಿ ಒಂದು ಗಿಡದ ಬುಡದಲ್ಲಿದ್ದು ಮನಸ್ಸನ್ನು ಏಕಾಗ್ರಮಾಡಿ ಶ್ರವಣ-ಮನನಾದಿ ವ್ಯವಸಾಯದಲ್ಲಿ ಮಗ್ನನಾಗುವೆನು; ಇಚ್ಛಾಪರಿತ್ಯಾಗಮಾಡಿ ಯಾವ ಮಾತಿನ ವಿಷಯವಾಗಿಯೇ ಆಗಲಿ, ಆನಂದ ಖೇದಗಳನ್ನು ಹೊಂದುವದಿಲ್ಲ; ನಿಂದಾಸ್ತುತಿಗಳನ್ನು ಸಮನಾಗಿ ಎಣಿಸುವೆನು; ಶೀತೋಷ್ಣ, ಸುಖದುಃಖ, ರಾಗದ್ವೇಷ ಮೊದಲಾದ ದ್ವಂದ್ವಗಳನ್ನು ಸಹಿಸುವೆನು; ಯಾರ ಉಪಹಾಸವನ್ನೂ ಮಾಡುವದಿಲ್ಲ; ಯಾರನ್ನೂ ವಕ್ರದೃಷ್ಟಿಯಿಂದ ನೋಡುವದಿಲ್ಲ; ಯಾವಾಗಲೂ ಪ್ರಸನ್ನನಾಗಿದ್ದು, ಪ್ರಾಣಿಮಾತ್ರಗಳ ಕಲ್ಯಾಣದಲ್ಲಿ ತತ್ಪರನಾಗಿರುವೆನು; ಯಾವ ಪ್ರಾಣಿಯ ಹಿಂಸೆಯನ್ನೂ ಮಾಡಲಿಕ್ಕಿಲ್ಲ; ಉದರಪೋಷಣಕ್ಕಾಗಿ, ನಿತ್ಯ ನಾಲ್ಕು ಐದು ಮನೆಗಳಿಗಿಂತ ಹೆಚ್ಚು ಭಿಕ್ಷೆ ಬೇಡಲಿಕ್ಕಿಲ್ಲ, ನಾನು ಬದುಕಲೂ ಇಚ್ಛಿಸುವದಿಲ್ಲ, ಸಾಯಲೂ ಇಚ್ಛಿಸುವದಿಲ್ಲ; ಬದುಕುವವರ ಅಭಿನಂದನವನ್ನಾಗಲಿ, ಸಾಯುವವರ ದ್ವೇಷವನ್ನಾಗಲಿ ಮಾಡಲಿಕ್ಕಿಲ್ಲ; ಸ್ವರ್ಗಾದಿ ಅಶಾಶ್ವತಫಲಗಳನ್ನು ಒದಗಿಸಿಕೊಡುವ

ಯಜ್ಞಾದಿಕರ್ಮಗಳನ್ನು ಬಿಟ್ಟುಕೊಡುವೆನು; ಇಚ್ಛಾ-ದ್ವೇಷ ಮೊದಲಾದ ಮನಸ್ಸಿನ ದೋಷಗಳನ್ನು ತೊಳೆದು ಮನಸ್ಸನ್ನು ನಿರ್ಮಲವಾಗಿ ಬಿಡುವೆನು; ಸ್ವಧರ್ಮದ ಹೊರತು, ಆತ್ಮನ ಅಲೌಕಿಕ ಸಾಮರ್ಥ್ಯವನ್ನು ಹ್ರಾಸಗೊಳಿಸುವಂಥ ಉಳಿದ ಕರ್ಮಗಳನ್ನು, ನಾನು ಈಗ ಪರಾಕ್ರಮಹೀನನಾಗಿರಲು, ವಿಷಯಾಸಕ್ತಿಯಿಂದ ಮಾಡುವದನ್ನು ಬಿಟ್ಟುಬಿಡುವೆನು. ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿದ ಬಳಿಕ ಇಂದ್ರಿಯಗಳು ಸ್ವಾಧೀನವಾಗುವ ಮನುಷ್ಯನ ಅಪಮಾನವಾಗುವದು. ಒಂದು ಪಕ್ಷದಲ್ಲಿ ಆತನಿಗೆ ಮಾನವು ದೊರೆತರೂ, ಆತನ ಬಾಳು ನಾಯಿಯ ಬಾಳಿಗೆ ಸಮಾನವಾದದ್ದೇ ಸರಿ"

ಜನಮೇಜಯಾ, ಪಾಂಡುವು ಈ ಮೇರೆಗೆ ಮಾತಾಡಿ, ದುಃಖದಿಂದ ನಿಟ್ಟುಸಿರುಗಳನ್ನು ಬಿಟ್ಟು ಕುಂತೀ-ಮಾದ್ರಿಯರ ಕಡೆಗೆ ನೋಡಿ—"ಸ್ತ್ರೀಯರೇ, ನೀವು ಹಸ್ತಿನಾವತಿಗೆ ಹೋಗಿರಿ. ತಾಯಿಯಾದ ಕೌಸಲ್ಯೆ, ವಿದುರ, ಧೃತರಾಷ್ಟ್ರ, ಆರ್ಯಸತ್ಯವತಿ, ಭೀಷ್ಮಾಚಾರ್ಯ, ರಾಜೋಪಾಧ್ಯಾಯ, ಸೋಮಪಾನಮಾಡುವ ಸದಾಚರಣೆಯ ಮಹಾತ್ಮರಾದ ಬ್ರಾಹ್ಮಣರು, ಹಸ್ತಿನಾವತಿಯ ವೃದ್ಧಪೌರಜನರು ಇವರೆಲ್ಲರಿಗೆ ನನ್ನ ನಮಸ್ಕಾರವನ್ನು ಹೇಳಿ, ಪಾಂಡುವು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿದನೆಂದು ಹೇಳಿರಿ," ಅನ್ನಲು, ಪತಿಯು ವಾನಪ್ರಸ್ಥಾಶ್ರಮದ ನಿಶ್ಚಯವನ್ನು ನೋಡಿ ಕುಂತಿ ಮಾದ್ರಿಯರು—"ಎಲೈ ಭರತಶ್ರೇಷ್ಠನೇ, ನಾವು ನಿನ್ನ ಧರ್ಮಪತ್ನಿಯರಾದದ್ದರಿಂದ ನಮ್ಮನ್ನು ನೀನು ಬಿಡಬೇಡ. ನಮ್ಮೊಡನೆ ತಪಶ್ಚರ್ಯಮಾಡತಕ್ಕಂತಹ ಬೇರೆ ಆಶ್ರಮಗಳು ಇರುವವು. ಅವುಗಳ ಯೋಗದಿಂದ ಮಹತ್ಪುಣ್ಯವು ಲಭಿಸಿ, ಸ್ವರ್ಗಪ್ರಾಪ್ತಿಯಾದೀತು. ಸ್ವರ್ಗದಲ್ಲಿಯೂ ನೀನು ನಮ್ಮ ಪತಿಯಾಗುವಲ್ಲಿ ಸಂಶಯವಿಲ್ಲ. ಇನ್ನು, ವಾನಪ್ರಸ್ಥಾಶ್ರಮದಲ್ಲಿ ದೇಹಸವಿಸುವದು ನಿನ್ನ ನಿಶ್ಚಯವಿದ್ದರೂ, ನಿನ್ನ ಸಂಗಡ ಬರಲಿಕ್ಕೆ ನಮಗೆ ಪ್ರತಿಬಂಧವಿಲ್ಲ. ಪತಿಲೋಕವನ್ನು ದೊರಕಿಸುವದೇ ನಮಗೆ ಶ್ರೇಷ್ಠಕರ್ತವ್ಯವಾಗಿ ತೋರುವದರಿಂದ, ಇಂದ್ರಿಯನಿಗ್ರಹಮಾಡಿ ಕಾಮ-ಸುಖಗಳನ್ನು ತ್ಯಜಿಸಿ, ನಿನ್ನೊಡನೆ ನಾವೂ ಘೋರ ತಪಶ್ಚರ್ಯಮಾಡುವೆವು. ರಾಜೇಂದ್ರಾ, ನೀನು ಮಹಾಜ್ಞಾನಿಯಾಗಿರುವೆ.

ನಮ್ಮನ್ನು ನೀನು ಬಿಟ್ಟುಹೋದದ್ದಾದರೆ, ನಾವು ಇಂದೇ ಪ್ರಾಣವನ್ನು ತ್ಯಜಿಸುವೆವು.''

ಹೆಂಡರ ಈ ಯಥಾರ್ಥವಾದ ಮಾತುಗಳನ್ನು ಕೇಳಿ ಪಂಡುರಾಜನು ಅವರನ್ನು ಕುರಿತು—''ಹೀಗೆ ನಿಮ್ಮಿಬ್ಬರ ನಿಶ್ಚಯವಿದ್ದರೆ ನೆಟ್ಟಗೇ ಆಯಿತು. ನಾನು ಪಿತೃವಂಶಪರಂಪರಾಗತವಾದ ಸರ್ವಶ್ರೇಷ್ಠ ಕ್ಷತ್ರಿಯ ಧರ್ಮವನ್ನವಲಂಬಿಸಿ, ಸುಖಕರ ಗ್ರಾಮ್ಯ ಆಹಾರಗಳನ್ನು ತ್ಯಜಿಸಿ ತಪಶ್ಚರ್ಯಮಾಡುವೆನು. ನಾರಿನ ಬಟ್ಟೆಗಳನ್ನುಟ್ಟು, ಜಡೆಗಳನ್ನು ಬಿಟ್ಟು, ಗಡ್ಡೆ ಗೆಣಸುಗಳನ್ನು ತಿಂದು ಅರಣ್ಯದಲ್ಲಿ ಕಾಲಹರಣಮಾಡುವೆನು. ದೇವತೆಗಳಿಗೂ, ಪಿತೃಗಳಿಗೂ ವನ್ಯಪದಾರ್ಥಗಳನ್ನೂ, ಉದಕವನ್ನೂ ಅರ್ಪಿಸಿ, ಸ್ತುತಿಯಿಂದ ಅವರನ್ನು ಸಂತೋಷಪಡಿಸುವೆನು; ವಾನಪ್ರಸ್ಥಾಶ್ರಮಿಗಳ ದರ್ಶನಮಾಡಿಕೊಳ್ಳುವೆನು.'' ಎಂದು ಹೇಳಿ, ತನ್ನ ಹಾಗು ತನ್ನ ಸ್ತ್ರೀಯರ ಎಲ್ಲ ವಸ್ತ್ರಾಲಂಕಾರಗಳನ್ನು ಬ್ರಾಹ್ಮಣರಿಗೆ ದಾನಮಾಡಿ ಅವರನ್ನು ಕುರಿತು—''ಬ್ರಾಹ್ಮಣರೇ, ನೀವು ಹಸ್ತಿನಾಪುರಕ್ಕೆ ಹೋಗಿ ಪಂಡುವು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿದನೆಂದು ನಗರವಾಸಿಗಳಿಗೆ ಹೇಳಿರಿ'' ಎಂದು ಹೇಳಿ, ಕಾಮ-ಅರ್ಥ-ಸುಖ-ಪುತ್ರಪ್ರಾಪ್ತಿಯ ಇಚ್ಛೆ-ಸ್ತ್ರೀಸಂಗ ಇವೆಲ್ಲವುಗಳನ್ನು ತ್ಯಜಿಸಿ, ತನ್ನ ಸ್ತ್ರೀಯರೊಡನೆ ಅರಣ್ಯಕ್ಕೆ ತೆರಳಿದನು. ಆತನ ಪರಿವಾರವು ದುಃಖದಿಂದ ಹಸ್ತಿನಾವತಿಗೆ ಹೋಯಿತು. ಅವರು ಪುರಜನರಿಗೆ ಯಾವತ್ತು ವೃತ್ತಾಂತವನ್ನು ಹೇಳಿ, ಪಂಡುವು ಕೊಟ್ಟಿದ್ದ ದ್ರವ್ಯವನ್ನು ಧೃತರಾಷ್ಟ್ರನಿಗೆ ಒಪ್ಪಿಸಿದರು. ತಮ್ಮನು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ ಅರಣ್ಯವಾಸಿಯಾದದ್ದನ್ನು ಕೇಳಿ ಧೃತರಾಷ್ಟ್ರನು ದುಃಖಿಸಿದನು. ಇತ್ತ ಪಂಡುವು ಹೆಂಡರೊಡನೆ ಹಿಮಾಲಯದೊಳಗಿನ ಶತಶೃಂಗ ಪರ್ವತಕ್ಕೆ ಹೋಗಿ, ಅಲ್ಲಿ ಘೋರತಪಸ್ಸನ್ನು ಆಚರಿಸತೊಡಗಿದನು. ಆ ಪರ್ವತಪ್ರದೇಶದ ಕಠಿಣತರ ವಿಷಮಪ್ರದೇಶದಲ್ಲಿ ಪ್ರವಾಸಮಾಡುತ್ತಿರುವಾಗ ಪಂಚಮಹಾಭೂತಗಳೂ, ಸಿದ್ಧರೂ, ಮಹರ್ಷಿಗಳೂ ಅವರನ್ನು ಸಂರಕ್ಷಿಸಿದರು.

**೧೨೦ನೇ ಅಧ್ಯಾಯ—ಬ್ರಹ್ಮದೇವನ ದರ್ಶನಕ್ಕೆ ಹೋಗಲು ಋಷಿಗಳ ಸಿದ್ಧತೆ—**ಜನಮೇಜಯಾ, ಆ ಶತಶೃಂಗಪರ್ವತದಲ್ಲಿ ಪಂಡು

ರಾಜನು ಮಾಡಿದ ಕಠಿಣತರ ತಪಶ್ಚರ್ಯೆಕ್ಕಾಗಿ ಸಿದ್ಧ-ಚಾರಣರ ಸಮುದಾಯವೂ ಸಂತುಷ್ಟವಾಯಿತು. ತಪಸ್ವಿಗಳು ಆತನನ್ನು ಬಹಳವಾಗಿ ಪ್ರೀತಿಸತೊಡಗಿದರು. ಪಂಡುರಾಜನು ಇಂದ್ರಿಯನಿಗ್ರಹದಿಂದ ಮನಸ್ಸನ್ನು ನಿರ್ಮಲಮಾಡಿ, ಬ್ರಹ್ಮಋಷಿಗಳಿಗೆ ಸಮಾನವಾದ ಯೋಗ್ಯತೆಯನ್ನು ಪಡೆದನು. ಮುಂದೆ ಒಮ್ಮೆ ಅಮಾವಾಸ್ಯೆಯದಿವಸ ಸದಾಚಾರಿಗಳಾದ ಆ ಯಾವತ್ತು ಋಷಿಗಳು ಕೂಡಿ ಬ್ರಹ್ಮದೇವನ ದರ್ಶನಕ್ಕೆ ಹೊರಟರು. ಆಗ ಪಂಡುರಾಜನೂತನ್ನ ಹೆಂಡರೊಡನೆಸ್ವರ್ಗಕ್ಕೆಹೋಗಲು ಸಿದ್ಧನಾಗಿ ಅವರೊಡನೆ ಆ ಶತಶೃಂಗಪರ್ವತದ ಉತ್ತರದಿಕ್ಕಿಗೆ ಸಾಗಿದನು. ಆಗ ಆ ಹಿಮಾಲಯದ ಉನ್ನತ ಶಿಖರಗಳಕಡೆಗೆ ಸಾಗಿಹೋಗುತ್ತಿದ್ದ ಆ ತಪಸ್ವಿಗಳು ಪಂಡುರಾಜನನ್ನು ಕುರಿತು—"ರಾಜಾ, ಹಿಮಾಲಯಪರ್ವತವು ನೋಡಲಿಕ್ಕೆ ರಮಣೀಯವಾಗಿದ್ದರೂ, ಕೆಲವುಕಡೆ ಹತ್ತಿಹೋಗಲಿಕ್ಕೆ ಅಸಾಧ್ಯವಾಗಿರುತ್ತದೆಂಬದನ್ನು ಪ್ರತ್ಯಕ್ಷ ನೋಡಿರುವ ನಾವು ನಿನಗೆ ಹೇಳುವೆವು. ಈ ಪರ್ವತದಮೇಲೆ ದೇವತೆಗಳ, ಅಪ್ಸರಸರ ಕ್ರೀಡಾಸ್ಥಾನಗಳು ಇರುವವು. ಅಲ್ಲಿ ಗಾಯನದ ಧ್ವನಿಯು ಯಾವಾಗಲೂ ಕೇಳುತ್ತಿರುವದು. ಅಲ್ಲಿ ಸಮ ವಿಷಮಸ್ಥಳಗಳಲ್ಲಿ ಕುಬೇರನ ಹಲವು ಉದ್ಯಾನಗಳು ಇರುತ್ತಿದ್ದು, ನದಿಗಳ ಉಗಮಸ್ಥಾನಗಳೂ, ದೊಡ್ಡದೊಡ್ಡ ಅರಣ್ಯಗಳೂ ಇರುವವು. ಈ ಪರ್ವತದ ಎಷ್ಟೋಭಾಗಗಳು ಹಿಮಾಚ್ಛಾದಿತವಾಗಿರುವದರಿಂದ, ಅಲ್ಲಿ ಹುಲ್ಲುಕೂಡ ಬೆಳೆಯುವದಿಲ್ಲ. ಅಲ್ಲಿ ದೊಡ್ಡದೊಡ್ಡ ಕಂದರಗಳೂ, ಹಿಮಾಚ್ಛಾದಿತ ಗವಿಗಳೂ ಇರುವವು. ಎಷ್ಟೋ ದುರ್ಗಮಪ್ರದೇಶಗಳನ್ನು ಪಕ್ಷಿಗಳೂ ಆಕ್ರಮಿಸದಿರುವಾಗ, ಪಶ್ವಾದಿಗಳ ಪಾಡೇನು? ಆ ಪ್ರದೇಶಗಳಲ್ಲಿ ಒಬ್ಬ ವಾಯುವಿನ, ಅಥವಾ ಯೋಗಬಲದ ಮಹರ್ಷಿಗಳ ಸಂಚಾರವುಮಾತ್ರ ಇರುವದು. ಅಂದಬಳಿಕ ಅಂಥ ಪ್ರದೇಶಗಳನ್ನು ನಿನ್ನ ಹೆಂಡರು ಹೇಗೆ ಹತ್ತಿಬಂದಾರು? ಆದ್ದರಿಂದ ನೀನು ನಮ್ಮಸಂಗಡ ಬರಬೇಡ"

ಋಷಿಗಳ ಈ ಮಾತುಗಳನ್ನುಕೇಳಿ, ತಾನು ನಿಪುತ್ರಿಕನಿರುವೆನೆಂಬ ಸೂಕ್ಷ್ಮವನ್ನು ಮನಸ್ಸಿನಲ್ಲಿತಂದು, ದುಃಖದಿಂದ ಪಂಡುವು ಋಷಿಗಳನ್ನು ಕುರಿತು—"ಋಷಿಗಳೇ, ನಾನು ಪಿತೃಋಣದಿಂದ ಮುಕ್ತನಾಗದಿರುವದ

ರಿಂದ ನನಗೆ ಬಹಳ ದುಃಖವಾಗುತ್ತದೆ. ಈ ನಿಷ್ಪುತ್ರಕಸ್ಥಿತಿಯಲ್ಲಿಯೇ ನನ್ನ ದೇಹಾವಸಾನವಾದರೆ, ನನ್ನ ಪೂರ್ವಜರಿಗೆ ಅಧೋಗತಿಯು ಪ್ರಾಪ್ತವಾಗುವಲ್ಲಿ ಸಂಶಯವಿಲ್ಲ. ಭೂಲೋಕದಲ್ಲಿ ಮನುಷ್ಯಪ್ರಾಣಿಯು ಹುಟ್ಟಿ ಬರುವಾಗ ದೇವಋಣ, ಋಷಿಋಣ, ಪಿತೃಋಣ, ಮಾನವಋಣ ಎಂಬ ನಾಲ್ಕುಬಗೆಯ ಋಣಗಳನ್ನು ತಕ್ಕೊಂಡು ಬರುತ್ತಿರುವನು. ಈ ಋಣಗಳನ್ನು ಯೋಗ್ಯಕಾಲದಲ್ಲಿ ತೀರಿಸದವನಿಗೆ ಉತ್ತಮಲೋಕಗಳು ಪ್ರಾಪ್ತವಾಗುವದಿಲ್ಲವೆಂದು ಧರ್ಮಜ್ಞರ ಸಿದ್ಧಾಂತವಿರುವದು. ಯಜ್ಞಗಳನ್ನು ಮಾಡಿ ದೇವತೆಗಳನ್ನು ಸಂತೋಷಪಡಿಸಬೇಕು; ಅಧ್ಯಯನ-ತಪಶ್ಚರ್ಯೆಗಳನ್ನುಮಾಡಿ ಋಷಿಋಣದಿಂದ ಮುಕ್ತನಾಗಬೇಕು; ಪುತ್ರೋತ್ಪತ್ತಿ ಹಾಗು ಶ್ರಾದ್ಧಕರ್ಮಗಳಿಂದ ಪಿತೃಗಳನ್ನು ಸಂತೋಷಪಡಿಸಬೇಕು; ದಯೆಯ ಯೋಗದಿಂದ ಯಾವತ್ತು ಮನುಷ್ಯರನ್ನು ಸಂತೋಷಪಡಿಸಬೇಕು. ಇವುಗಳಲ್ಲಿ ಪಿತೃಋಣದ ಹೊರತು ಉಳಿದ ಮೂರು ಋಣಗಳನ್ನು ಧರ್ಮಾಚರಣೆಯಿಂದ ನಾನು ತೀರಿಸಿರುವೆನು; ಆದರೆ ಪಿತೃಋಣದಿಂದ ಮುಕ್ತನಾಗಲಿಕ್ಕೆ ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿರುವ ನಾನು ಏನುಮಾಡಲಿ? ಭಗವಾನ್ ವ್ಯಾಸಮುನಿಗಳಿಂದ ನನ್ನ ಉತ್ಪತ್ತಿಯಾಗಿರುವಂತೆ, ನನ್ನ ಸ್ತ್ರೀಯರಲ್ಲಿ ಸಂತತಿಯಾಗುವ ಉಪಾಯವನ್ನು ಹೇಳಿರಿ.

ಪಂಡುರಾಜನ ಈ ಮಾತುಗಳನ್ನುಕೇಳಿ ಋಷಿಗಳು—"ಎಲೈ ಧರ್ಮನಿಷ್ಠನೇ, ನಿನಗೆ ಪಾಪರಹಿತವೂ, ದೇವತೆಗಳಂತೆ ಶುಭಲಕ್ಷಣಗಳುಳ್ಳದ್ದೂ ಆದ ಸಂತತಿಯಾಗುತ್ತದೆಂಬದು ನಮ್ಮ ದಿವ್ಯದೃಷ್ಟಿಗೆ ತೋರುವದು; ಆದ್ದರಿಂದ ರಾಜಾ, ನಿನ್ನ ಸುದೈವದಿಂದ ಪ್ರಾಪ್ತವಾಗಬೇಕಾಗಿರುವ ಸಂತತಿಯನ್ನು ಸತ್ಕರ್ಮದಿಂದ ಇದೇ ಸ್ಥಳದಲ್ಲಿ ಸಂಪಾದಿಸುವ ಯತ್ನ ಮಾಡು" ಎಂದು ಹೇಳಲು, ಪಂಡುವು ಕುಂತಿಯನ್ನು ಕುರಿತು ಏಕಾಂತದಲ್ಲಿ—"ಭಾರ್ಯೇ, ಈ ಸಂಕಟಕಾಲದಲ್ಲಿ ಪ್ರಜೋತ್ಪಾದನಮಾಡಲು ಯತ್ನಮಾಡು. ಪುತ್ರಪ್ರಾಪ್ತಿಯಹೊರತು ಉತ್ತಮಗತಿಯಿಲ್ಲ ಧರ್ಮಗ್ರಂಥದಲ್ಲಿ ಆರುಜನ ಬಂಧು ದಾಯಾದರೂ, ಆರುಜನ ಅಬಂಧುದಾಯಾದರೂ ಹೀಗೆ ಹನ್ನೆರಡುಪ್ರಕಾರದ ಮಕ್ಕಳಿರುವರೆಂದು ಹೇಳಿರುತ್ತಾರೆ. ೧ ಔರಸ, ೨ ಕ್ಷೇತ್ರಜ, ೩ ಪರಿಕ್ರೀತ, ೪ ಪೌನರ್ಭವ, ೫ ಕಾನೀನ,

೬ ವ್ಯಭಿಚಾರೋತ್ಪನ್ನ ಇವರು ಆರುಜನರು ಬಂಧು ದಾಯಾದರು; ೧ ದತ್ತ, ೨ ಕ್ರೀತ ಅಥವಾ ಕೃತ್ರಿಮ, ೩ ತಾನಾಗಿ ಮಗನೆಂದು ಬಂದವನು, ೪ ಸಹೋಢ, ೫ ಜ್ಞಾತಿರೇತ, ೬ ಹೀನಯೋನಿ ಇವರು ಆರುಜನರು ಅಬಂಧುದಾಯಾದರು. ಇವರಲ್ಲಿ ಔರಸ ಸಂತತಿಯಿದ್ದರೆ ಉತ್ತಮವೇ; ಅದಿಲ್ಲದಿದ್ದರೆ ಕ್ಷೇತ್ರಜ ಸಂತತಿಯನ್ನು ಅಪೇಕ್ಷಿಸಬೇಕು. ಇದರಂತೆಹಿಂದಿನ ಸಂತತಿಯ ಅಭಾವದಲ್ಲಿ ಮುಂದಿನ ಸಂತತಿಯ ಅಪೇಕ್ಷೆಯನ್ನು ಮಾಡಬೇಕು. ಆಪತ್ಕಾಲದಲ್ಲಿ ಭಾವನಿಂದ ಸಂತತಿಯನ್ನು ಪಡೆಯುವ ಪದ್ಧತಿಯಿರುವದು. ಈ ಪದ್ಧತಿಯಿಂದ ಸ್ವವೀರ್ಯೋತ್ಪನ್ನ ಸಂತತಿಗಿಂತ ಉತ್ತಮವಾದ, ಹಾಗು ಧರ್ಮಫಲವನ್ನು ಕೊಡುವ ಸಂತತಿಯು ಉತ್ಪನ್ನವಾಗುವದೆಂದು ಪ್ರತ್ಯಕ್ಷ ಸ್ವಾಯಂಭುವಮನುವು ಹೇಳಿರುವನು; ಆದ್ದರಿಂದ, ಶಾಪಮೂಲಕ ಸಂತತಿಯನ್ನು ಉತ್ಪನ್ನಮಾಡಲು ಅಸಮರ್ಥನಾದ ನಾನು, ಸ್ವಜಾತೀಯನಿಂದ ಅಥವಾ ಶ್ರೇಷ್ಠಜಾತಿಯ ಪುರುಷನಿಂದ ಸಂತಾನವನ್ನು ಪಡೆಯುವ ವಿಷಯದಲ್ಲಿ ನಿನಗೆ ಅನುಜ್ಞೆಯನ್ನು ಕೊಡುತ್ತೇನೆ. ಹಿಂದಕ್ಕೆ ಶರದಂಡಾಯನನು ತನ್ನ ಹೆಂಡತಿಗೆ ಮಗನನ್ನು ಹಡೆಯುವದಕ್ಕಾಗಿ ಹೇಳಲು, ಆ ಪತಿವ್ರತೆಯು ಪತಿಯ ಅಪ್ಪಣೆಯನ್ನು ಪ್ರಮಾಣವಾಗಿ ತಿಳಿದು, ಋತುಕಾಲದಲ್ಲಿ ಮೂರುದಿವಸ ಪವಿತ್ರವಾಗಿ ಇದ್ದು, ನಾಲ್ಕನೆಯ ದಿವಸ ಸಾಯಂಕಾಲದಲ್ಲಿ ಸ್ನಾನಮಾಡಿದಳು ಆಮೇಲೆ ರಾಜಮಾರ್ಗಕ್ಕೆ ಹೋಗಿ ಒಬ್ಬ ಸಿದ್ಧಬ್ರಾಹ್ಮಣನಿಗೆ ಆಮಂತ್ರಣ ಕೊಟ್ಟಳು. ಆಮೇಲೆ ಪುತ್ರಪ್ರಾಪ್ತಿಗಾಗಿ ಹವನಮಾಡಿ, ಆ ಬ್ರಾಹ್ಮಣನೊಡನೆ ಅಲ್ಲಿಯೇ ಇದ್ದಳು. ಆಗ ಆಕೆಗೆ ದುರ್ಜಯಾದಿ ಮಹಾರಥಿಪುತ್ರರು ಹುಟ್ಟಿದರು; ಆದ್ದರಿಂದ ಎಲೈ ಕಲ್ಯಾಣೀ, ನೀನಾದರೂ ನನ್ನ ಅಪ್ಪಣೆಯಂತೆ ಒಬ್ಬ ತಪೋಧನ ಬ್ರಾಹ್ಮಣನಿಂದ ಸಂತತಿಯನ್ನು ಪಡೆಯುವದಕ್ಕಾಗಿ ಯತ್ನಿಸು.

## ೧೨೧ನೆಯ ಅಧ್ಯಾಯ — ವ್ಯುಷಿತಾಶ್ವರಾಜನ ಕಥೆ

ಪಂಡುವಿನ ಈಮಾತುಗಳನ್ನುಕೇಳಿ ಕುಂತಿಯು—"ಎಲೈ ಮಹಾಭಾಗಾ, ನಿಜವಾದ ಧರ್ಮವನ್ನು ನೋಡಿದರೆ, ನನ್ನಲ್ಲಿ ಸ್ವವೀರ್ಯದಿಂದ ಪ್ರಜೋತ್ಪಾದನ ಮಾಡಲಿಕ್ಕೆ ನೀನೊಬ್ಬನೇ ಯೋಗ್ಯನಾಗಿರುವೆ. ನಿನ್ನ ಹೊರತು ಅನ್ಯರ ಸಂಗವನ್ನು ನಾನು ಮನಸ್ಸಿನಿಂದಲೂ ಮಾಡಲಾರೆನು.

ಅಲ್ಲದೆ, ಈ ಲೋಕದಲ್ಲಿ ನಿನಗಿಂತ ಶ್ರೇಷ್ಠನಾದ ಪುರುಷನು ಮತ್ತೊಬ್ಬ ನಿಲ್ಲ. ನಾನೊಂದು ಪುರಾಣದೊಳಗಿನ ಕಥೆಯನ್ನು ಹೇಳುವೆನು ಕೇಳು. ಪ್ರಾಚೀನಕಾಲದಲ್ಲಿ ವ್ಯುಷಿತಾಶ್ವನೆಂಬ ಅತಿ ಪ್ರಖ್ಯಾತನಾದ ಒಬ್ಬ ರಾಜ ನಿದ್ದನು. ಆತನು ಅತ್ಯಂತ ಧಾರ್ಮಿಕನಿದ್ದು, ಪುರುವಂಶವನ್ನು ವಿಸ್ತರಿ ಸಿದನು. ಆತನು ಮಾಡಿದ ಯಜ್ಞಗಳಲ್ಲಿ ದೇವತೆಗಳು ಬಂದು ಪ್ರತ್ಯಕ್ಷ ಹವಿರ್ಭಾಗವನ್ನು ಸ್ವೀಕರಿಸುತ್ತಿದ್ದರು. ಕಕ್ಷವಾನನ ಮಗಳಾದ ಭದ್ರಾ ಎಂಬವಳು ಆತನ ಹೆಂಡತಿಯು ಉಭಯತ್ತರು ಪರಸ್ಪರ ಪ್ರೇಮವುಳ್ಳ ವರಾಗಿದ್ದರು. ಹೀಗಿರುವಾಗ 'ವಿಷಯಭೋಗದ ಅತಿರೇಕದಿಂದ ಕ್ಷಯ ರೋಗನಾಗಲು, ಆ ರಾಜನು ಸ್ವರ್ಗಸ್ಥನಾದನು. ಆಗ ಭದ್ರೆಗೆ ಆದ ದುಃಖವನ್ನು ವರ್ಣಿಸಲಾಸಲ್ಲ. ಆಕೆಯು ಮೇಲೆ ಮೇಲೆ ಆ ಶವವನ್ನು ಆಲಿಂಗಿಸಿ ಹಲವು ಬಗೆಯಾಗಿ ಹಂಬಲಿಸಿದಳು. ಆಕೆಯ ದುಃಖವನ್ನು ನೋಡಿ ಕಲ್ಲು ಮರಗಳೂ ಕರಗಿದವು. ಆಗ ಆಕೆಯ ಪತಿಯು ಆಕಾಶ ವಾಣಿಯ ರೂಪದಿಂದ ಆ ಪತಿವ್ರತೆಯನ್ನು ಕುರಿತು—"ಎಲೈ ಭದ್ರೇ, ಏಳು, ಮನೆಗೆಹೋಗು ನಾನು ನಿನಗೆ ಪ್ರಸನ್ನನಾಗಿದ್ದೇನೆ ನಿನಗೆ ನನ್ನಿಂದ ಮಕ್ಕಳಾಗುವರು. ನೀನು ಋತುಸ್ನಾನಮಾಡಿ ಚತುರ್ದಶಿಯ ಅಥವಾ ಅಷ್ಟಮಿಯದಿವಸ ನಿನ್ನ ಶ್ರೇಷ್ಠವಾದ ಶಯನಮಂದಿರದಲ್ಲಿ ನನ್ನ ಶವದೊಡನೆ ಮಲಗಿಕೊ" ಎಂದು ಹೇಳಿದನು. ಆಗ ಆ ಪತಿವ್ರತೆಯು ಮಕ್ಕಳ ಬಯಕೆಯಿಂದ ಗಂಡನು ಹೇಳಿದಂತೆ ಮಾಡಿದಳು ಆದ್ದರಿಂದ ಆಕೆಗೆ ಮೂವರು ಶಾಲ್ವರು, ನಾಲ್ಕುಜನ ಭದ್ರರು ಹೀಗೆ ಏಳುಜನ ಮಕ್ಕ ಳಾದರು, ಆದ್ದರಿಂದ ರಾಜೇಂದ್ರನೇ, ನೀನೂ ಮಹಾ ತಪಸ್ವಿಯೂ, ಯೋಗಿಯೂ ಆಗಿರುವವನಂದ, ನನ್ನಲ್ಲಿ ಮಾನಸಪ್ರಜೆಗಳನ್ನು ನಿರ್ಮಾಣ ಮಾಡಲು ಸಮರ್ಥನಾಗಿರುವೆ

**೧೨೨ನೇ ಅಧ್ಯಾಯ—ಧರ್ಮತತ್ವಕಥನ**—ಕುಂತಿಯ ಮಾತು ಗಳನ್ನು ಕೇಳಿ ಪಾಂಡುವು—"ಕುಂತೀ, ದೇವತೆಗಳಿಗೆ ಸಮಾನನಾದ ವ್ಯುಷಿ ತಾಶ್ವರಾಜನ ಮಾತು ಹೇರೆ : ಆದರೆ ಪ್ರಾಚೀನಕಾಲದಲ್ಲಿ ಧರ್ಮಜ್ಞ ರಾದಮುನಿಗಳು ಆಚರಿಸುತ್ತಿದ್ದ ಅನಾದಿ ಧರ್ಮತತ್ವವನ್ನು ನಿನಗೆ ಹೇಳು ವೆನು ಕೇಳು. ಬಹಳ ಪ್ರಾಚೀನಕಾಲದಲ್ಲಿ ಸ್ತ್ರೀಯರು ಅನಿಯಂತ್ರಿತರಾಗಿ

ನಡೆದು, ಪಶುಪಕ್ಷಿಮೊದಲಾದ ತಿರ್ಯಕ್ ಪ್ರಾಣಿಗಳಂತೆ ಸ್ವಚ್ಛಂದವಾಗಿ ವಿಹರಿಸುತ್ತಿದ್ದರು. ಅವರನ್ನು ಯಾರೂ ನಿರ್ಬಂಧಿಸುತ್ತಿದ್ದಿಲ್ಲ. ಅವರು ಲಗ್ನವಾಗುವ ಮೊದಲಿನಿಂದಲೂ ಪತಿಮರ್ಯಾದೆಯನ್ನು ಅತಿಕ್ರಮಿಸುತ್ತಿದ್ದರು. ಅವರಿಗೆ ಅಧರ್ಮವು ಘಟಿಸುತ್ತಿದ್ದಿಲ್ಲ. ಯಾಕಂದರೆ, ಆಕಾಲದಲ್ಲಿ ಅದೇ ಧರ್ಮವೆಂದು ತಿಳಿಯಲ್ಪಡುತ್ತಿತ್ತು. ಎಲೈ ವರಾನನೇ, ಅದೇ ಹಳೆಯ ಧರ್ಮವೇ ಈವರೆಗೂ ತಿರ್ಯಗ್ಯೋನಿಯಲ್ಲಿ ಪಾಲಿಸಲ್ಪಡುತ್ತಿದ್ದು, ಆದರಿಂದ ಅವುಗಳ ಕಾಮಕ್ರೋಧಗಳು ಹೆಚ್ಚಾಗಿರುವದಿಲ್ಲ. ಈ ಧರ್ಮವು ಸಪ್ರಮಾಣವಾಗಿದ್ದು, ಇದಕ್ಕೆ ದೊಡ್ಡ ದೊಡ್ಡ ಋಷಿಗಳ ಸಮ್ಮತಿಯೂ ಇರುವದು. ಈ ಧರ್ಮತತ್ವವು ಸನಾತನವಿದ್ದು, ಸ್ತ್ರೀಯರಿಗೆ ಸುಖಪ್ರದವಾಗಿರುವದರಿಂದ, ಉತ್ತರ ಕುರುದೇಶದಲ್ಲಿ ಈಗೂ ಇದೇ ಧರ್ಮದಿಂದ ಲೋಕವ್ಯವಹಾರವು ನಡೆದಿರುವದು. ಸಾರಾಂಶ, ನಮ್ಮಲ್ಲಿ ಈಗ ನಡೆದಿರುವ ಲೋಕವ್ಯವಹಾರವು ಬಹು ಪ್ರಾಚೀನವಾದದ್ದಲ್ಲ. ಇತ್ತಿತ್ತಲಾಗಿ ಅದನ್ನು ಯಾರು ಬಳಕೆಯಲ್ಲಿ ತಂದರೆಂಬದನ್ನು ನಾನು ನಿನಗೆ ಹೇಳುವೆನು ಕೇಳು.

**ಶ್ವೇತಕೇತುವಿನ ಕಥೆ**–ಉದ್ದಾಲಕನೆಂಬ ದೊಡ್ಡ ತಪಸ್ವಿಯ ಹೊಟ್ಟೆಯಲ್ಲಿ ಶ್ವೇತಕೇತುವೆಂಬ ಒಬ್ಬ ಮಗನಿದ್ದನು. ಆತನೇ ಈಗಿನ ನಮ್ಮ ಧರ್ಮಮರ್ಯಾದೆಯನ್ನು ಹಾಕಿಕೊಟ್ಟನು. ಅದು ಹೇಗೆಂಬದನ್ನು ಕೇಳು. ಒಮ್ಮೆ ಒಬ್ಬ ಬ್ರಾಹ್ಮಣನು ಉದ್ದಾಲಕನ ಸಮಕ್ಷ ಶ್ವೇತಕೇತುವಿನ ತಾಯಿಯ ಕೈಹಿಡಿದು "ನಡೆ, ನಾವು ಹೋಗೋಣ" ಎಂದು ನುಡಿದು, ಆಕೆಯನ್ನು ಬಲಾತ್ಕಾರದಿಂದ ಎಳೆಯಹತ್ತಿದನು. ಅದನ್ನು ನೋಡಿ ಶ್ವೇತಕೇತುವಿಗೆ ಸಿಟ್ಟು ಬಂದಿತು. ಆಗ ಉದ್ದಾಲಕನು ಮಗನಿಗೆ "ಬಾಳಾ, ಸಿಟ್ಟು ಮಾಡುವ ಕಾರಣವೇನು ಹೇಳು? ಅಲ್ಲೋ, ಇದು ಅನಾದಿಸಿದ್ಧವಾದ ಧರ್ಮವೇ ಆಗಿರುವದು. ಈ ಲೋಕದೊಳಗಿನ ಎಲ್ಲಾ ವರ್ಣದ ಜಾತಿಯ ಸ್ತ್ರೀಯರು ತಮ್ಮತಮ್ಮ ಜಾತಿಗಳಲ್ಲಿ ಆಕಳುಗಳಂತೆ ಅನಿಯಂತ್ರಿತರಾಗಿ ವ್ಯವಹರಿಸುತ್ತಿರುವರು" ಎಂದು ಹೇಳಿದನು. ಅದು ಸನಾತನ ಧರ್ಮವಾಗಿದ್ದರೂ ಶ್ವೇತಕೇತುವಿಗೆ ಅದು ಸಹನವಾಗಲಿಲ್ಲ. ಆತನು, ಭೂಲೋಕದಲ್ಲಿ ಇನ್ನುಮೇಲೆ ಸ್ತ್ರೀ ಪುರುಷರ ವ್ಯವಹಾರವು ಹೇಗಿರಬೇಕೆಂಬದನ್ನು

ನಿರ್ಣಯಿಸಿದನೆಂದು ಕೇಳಿದ್ದೇನೆ. ಆ ಶ್ವೇತಕೇತುವು ನಿರ್ಣಯಿಸಿದ್ದೇನಂದರೆ–"ಇಂದಿನಿಂದ ಗಂಡನಹೊರತು ಬೇರೆ ಪುರುಷರೊಡನೆ ವ್ಯವಹರಿಸುವ ಸ್ತ್ರೀಯರಿಗೆ, ಭ್ರೂಣಹತ್ಯೆಯ ಘೋರಪಾತಕವು ಉಂಟಾಗುವದು. ಅದರಂತೆ, ಕೌಮಾರಾವಸ್ಥೆಯಿಂದ ವ್ರತಸ್ಥಳಾಗಿರುವ ಸಾಧ್ವಿಯಾದ ತನ್ನ ಹೆಂಡತಿಯನ್ನು ಬಿಟ್ಟು ಅನ್ಯ ಸ್ತ್ರೀಯೊಡನೆ ರಮಿಸುವ ಪುರುಷನಿಗೂ, ಅಂತಹದೇ ಮಹತ್ಪಾಪವು ಘಟಿಸುವದು. ಅದರಂತೆ, ಕೇವಲ ಪುತ್ರಪ್ರಾಪ್ತ್ಯರ್ಥವಾಗಿ ಪತಿಯು ಅನ್ಯಸಮಾಗಮದವಿಷಯದಲ್ಲಿ ಅಪ್ಪಣೆಮಾಡುತ್ತಿರಲು, ಅದನ್ನು ಮೀರುವ ಸ್ತ್ರೀಗೂ ಅದೇಪಾತಕವು ಬರುವದು."ಕುಂತೀ, ಈ ಸಂಗತಿಯನ್ನು ನೀನು ವಿಚಾರಿಸು.

ಎಲೈ ಸಾಧ್ವಿಯಾದ ಕುಂತಿಯೇ, ನನ್ನ ಮಾತನ್ನು ನಿರಾಕರಿಸಬೇಡ. ಹಿಂದಕ್ಕೆ ಮದಯಂತಿಯು ತನ್ನ ಪತಿಯಾದ ಸೌದಾಸರಾಜನ ಅಪ್ಪಣೆಯಂತೆ ,ವಶಿಷ್ಠರಿಂದ ಅಶ್ಮಕನೆಂಬ ಮಗನನ್ನು ಪಡೆದಳೆಂದು ಕೇಳಿದ್ದೇನೆ. ಬಹಳ ದೂರವೇಕೆ? ಪ್ರತ್ಯಕ್ಷ ನಮ್ಮ ಜನ್ಮವೇ ಕುರುವಂಶ ವೃದ್ಧ್ಯರ್ಥವಾಗಿ ಭಗವಾನ್ ವ್ಯಾಸರಿಂದ ಆದದ್ದು ನಿನಗೆ ಗೊತ್ತಿಲ್ಲವೆ? ಆದ್ದರಿಂದ ನೀನು ಈ ಎಲ್ಲ ಕಾರಣಗಳ ವಿಚಾರಮಾಡಿ, ನನ್ನ ಸಪ್ರಮಾಣವಾದ ಅಪ್ಪಣೆಯಂತೆ ನಡೆದುಕೊಳ್ಳುವದು ಉಚಿತವು. ಎಲೈ ರಾಜಕನ್ಯೆ, ಪ್ರತಿ ಋತುಕಾಲದಲ್ಲಿ ಸ್ತ್ರೀಯು ಪುರುಷಸಮಾಗಮವನ್ನು ಮಾಡಲೇಬೇಕು. ಉಳಿದ ಕಾಲದಲ್ಲಿಮಾತ್ರ ಪತಿಸಮಾಗಮ ಮಾಡುವದು ಬಿಡುವದು ಆಕೆಯ ಇಚ್ಛೆಯು. ಈ ಬಗೆಯ ಧರ್ಮವನ್ನು ಸತ್ಪುರುಷರು ಹೇಳುತ್ತಿರುವರು. ರಾಜಕನ್ಯೇ, ಪತಿಯ ಆಜ್ಞೆಯು ಧರ್ಮಕ್ಕೆ ಸಮ್ಮತವಿರಲಿ, ಇಲ್ಲದಿರಲಿ ಅದನ್ನು ಸತಿಯು ಪಾಲಿಸಲೇಬೇಕೆಂದು ಸರ್ವಧರ್ಮಜ್ಞರು ತಿಳಿಯುವರು. ಅದರಲ್ಲಿಯೂ, ನನ್ನಂತೆ ಮಕ್ಕಳನ್ನು ಹಡೆಯಲು ಅಸಮರ್ಥನಾದ ಪುತ್ರೇಚ್ಛುಪತಿಯ ಅಪ್ಪಣೆಯನ್ನಂತು ಹೆಂಡತಿಯು ಪಾಲಿಸಲೇಬೇಕು; ಆದ್ದರಿಂದ ನಿನ್ನನ್ನು ನಾನು ಕೈಜೋಡಿಸಿ ಬೇಡಿಕೊಳ್ಳುತ್ತೇನೆ. ನನ್ನ ಅಪ್ಪಣೆಯಂತೆ ಮಹಾ ತಪಸ್ವಿಯಾದ ಒಬ್ಬ ಬ್ರಾಹ್ಮಣನಿಂದ ನೀನು ಗುಣವಂತ ಸಂತತಿಯನ್ನು ಪಡೆ; ಅಂದರೆ ಮಕ್ಕಳಿದ್ದವರಿಗೆ ಉಂಟಾಗುವ ಸದ್ಗತಿಯು ನಿನ್ನಿಂದ ನನಗೆ ಪ್ರಾಪ್ತವಾಗುವದು."

ಪತಿಯ ಈ ಮಾತುಗಳನ್ನು ಕೇಳಿ ಪತಿಹಿತತತ್ಪರಳಾದ ಕುಂತಿಯು ಪತಿಯನ್ನು ಕುರಿತು—"ರಾಜನ್, ನಾನು ಸಣ್ಣವಳಿದ್ದಾಗ ತಂದೆಯ ಮನೆಯಲ್ಲಿ ಅತಿಥಿಗಳ ಸತ್ಕಾರವನ್ನು ಮಾಡುತ್ತಿದ್ದೆನು ಆಗ ಗೂಢಧರ್ಮತತ್ವಗಳ ವಿಷಯದ ನಿಶ್ಚಯಬುದ್ಧಿಯುಳ್ಳ, ಹಾಗು ಮನನ-ಆಚರಣಗಳೆರಡೂ ಸರಿಯಾಗಿಯೇ ಪವಿತ್ರವಾಗಿರುವ ತಪೋನಿಷ್ಠ ದೂರ್ವಾಸಮಹರ್ಷಿಗಳ ಸೇವೆಯು ನನಗೆ ಘಟಿಸಲು, ಅವರು ನನಗೊಂದು ಆಕರ್ಷಕ ಮಂತ್ರವನ್ನು ಉಪದೇಶಿಸಿ ನನ್ನನ್ನು ಕುರಿತು—"ತಂಗೀ, ಈ ಮಂತ್ರದ ಅನುಷ್ಠಾನಮಾಡಿ ನೀನು ಬೇಕಾದ ದೇವತೆಯನ್ನು ಕರೆ, ಕೂಡಲೆ ನೀನು ಕರೆದಿದ್ದ ದೇವತೆಯು ನಿನಗೆ ಪ್ರತ್ಯಕ್ಷವಾಗಿ, ಆ ದೇವತೆಯಿಂದ ನಿನಗೆ ಒಬ್ಬ ಮಗನು ಹುಟ್ಟುವನು." ಎಂದು ಹೇಳಿರುವರು ರಾಜಾ, ಹಾಗೆ ದೇವತೆಗಳನ್ನು ಕರೆಯುವ ಪ್ರಸಂಗವು ಈಗ ಬಂದೊದಗಿರುವಂತೆ ತೋರುತ್ತದೆ; ಆದ್ದರಿಂದ ನೃಪಾಲಾ, ಈಗ ಯಾವದೇವತೆಯನ್ನು ಕರೆಯಲಿ ಹೇಳು. ನಿನ್ನ ಅಪ್ಪಣೆಯಾದ ಕೂಡಲೆ ನಾನು ಆ ಅನುಷ್ಠಾನವನ್ನು ಆರಂಭಿಸುವೆನು"

**೧೨೩ನೇ ಅಧ್ಯಾಯ — ಯುಧಿಷ್ಠಿರಜನ್ಮ** — ಕುಂತಿಯ ಈ ಮಾತುಗಳನ್ನು ಕೇಳಿ ಪಂಡುವು—"ಸುಂದರೀ, ಇಂದೇ ನೀನು ಯಥಾವಿಧಿ ಮಂತ್ರವನ್ನು ಜಪಿಸಿ ಯಮಧರ್ಮನನ್ನು ಕರೆ. ಆತನ ಪ್ರಸಾದದಿಂದ ಹುಟ್ಟಿದ ಮಗನು ಮೂರ್ತಿಮಂತ ಧರ್ಮನೇ ಆಗುವನು." ಎಂದು ಹೇಳಲು, ಕುಂತಿಯು ಮೊದಲು ಬಲಿದಾನ ಪೂರ್ವಕವಾಗಿ ಯಮನನ್ನು ಪೂಜಿಸಿ, ದೂರ್ವಾಸರು ಉಪದೇಶಿಸಿದ ಮಂತ್ರವನ್ನು ವಿಧಿಪೂರ್ವಕ ಜಪಿಸತೊಡಗಿದಳು. ಆಗ ಮಂತ್ರಸಾಮರ್ಥ್ಯದಿಂದ ಯಮನು ಅಲ್ಲಿಗೆ ಬರಬೇಕಾಯಿತು ಆತನು ಸೂರ್ಯನಂತೆ ಪ್ರಕಾಶಮಾನವಾದ ರಥದಲ್ಲಿ ಕುಳಿತುಕೊಂಡು ಕುಂತಿಯ ಬಳಿಗೆಬಂದು ನಕ್ಕು—"ಕುಂತೀ, ನನ್ನಿಂದ ನಿನಗೇನು ಬೇಕಾಗಿದೆ?" ಎಂದು ಕೇಳಲು, "ಭಗವನ್, ನನಗೆ ಮಗನನ್ನು ಕೊಡಿರಿ" ಎಂದು ಕೇಳಿಕೊಂಡಳು. ಆಗ ಯಮನು ಯೋಗಬಲದಿಂದ ಸುಂದರ ರೂಪವನ್ನು ಧರಿಸಿ ಕುಂತಿಯೊಡನೆ ಕೂಡಲು, ಪ್ರಾಣಿಮಾತ್ರಗಳಿಗೆ ಕಲ್ಯಾಣಮಾಡುವ ಮಗನು ಹುಟ್ಟಿದನು. ಈ ಕಾಲದಲ್ಲಿ ಗಾಂಧಾರಿಯು ಬಸುರಾಗಿ ಸರಾಸರಿ ಒಂದು ವರ್ಷವಾಗಿತ್ತು; ಇನ್ನೂ ಹಡೆದಿದ್ದಿಲ್ಲ. ಕುಂತಿಯು

ಮಗನು ಹುಟ್ಟಿದಾಗ ಆಕಾಶವಾಣಿಯು—"ಈ ಪುತ್ರನು ಯಾವತ್ತು ಮನುಷ್ಯರಲ್ಲಿ ಶ್ರೇಷ್ಠನೂ, ಧರ್ಮನಿಷ್ಠರಲ್ಲಿ ವರಿಷ್ಠನೂ, ಸತ್ಯವಚನದವನೂ, ಪರಾಕ್ರಮಿಯೂ ಆಗಿ, ಸಂಪೂರ್ಣ ಪೃಥ್ವಿಯ ರಾಜ್ಯವನ್ನು ಆಳುವನು. ಕುಂತಿಯ ಈ ಹಿರಿಯಮಗನು ಯುಧಿಷ್ಠಿರನೆಂಬ ಹೆಸರಿನಿಂದ ವಿಖ್ಯಾತನಾಗಿ, ತ್ರೈಲೋಕ್ಯದಲ್ಲಿ ಹೆಸರುಪಡೆದ ರಾಜನೆನಿಸಿ ಕೀರ್ತಿ,ತೇಜ, ಸದಾಚರಣಗಳಿಂದ ಸಂಪನ್ನನಾಗುವನು." ಎಂದು ಆಯಿತು.

**ಭೀಮಜನ್ಮ**—ಈಮೇರೆಗೆ ಯುಧಿಷ್ಠಿರನು ಹುಟ್ಟಿದ ಬಳಿಕ ಪಂಡುವು ಪುನಃ ಕುಂತಿಯನ್ನು ಕುರಿತು—"ಭಾರ್ಯೆ, ಕ್ಷತ್ರಿಯರ ಶ್ರೇಷ್ಠತ್ವವು ಬಲವನ್ನವಲಂಬಿಸಿರುವದೆಂದು ಹೇಳಿರುವದರಿಂದ, ನೀನು ಮಹಾ ಬಲಶಾಲಿಯಾದ ಒಬ್ಬ ಮಗನನ್ನು ಪಡೆ" ಎಂದು ಹೇಳಿದನು. ಆಗ ಕುಂತಿಯು ಪತಿಯ ಆಜ್ಞೆಯಂತೆ ವಿಧಿಪೂರ್ವಕ ವಾಯುವನ್ನು ಕರೆಯಲು, ಮಹಾ ಬಲಾಢ್ಯನಾದ ವಾಯುವು ಜಿಗರೆಯನ್ನು ಹತ್ತಿಕೊಂಡು ಬಂದು ಕುಂತಿಗೆ—"ಕುಂತೀ, ನಿನ್ನ ಯಾವ ಬಯಕೆಯನ್ನು ಪೂರ್ಣಮಾಡಬೇಕು?" ಎಂದು ಕೇಳಿದನು. ಆಗ ಕುಂತಿಯು ನಾಚಿಕೆಯಿಂದ ಸ್ವಲ್ಪ ನಕ್ಕು—"ಸುರಶ್ರೇಷ್ಠಾ, ಎಲ್ಲರ ಗರ್ವಹರಣಮಾಡುವ ಮಹಾದೇಹಧಾರಿಯಾದ ಒಬ್ಬ ಬಲಾಢ್ಯಪುತ್ರನನ್ನು ಕೊಡು" ಎಂದು ಕೇಳಿಕೊಂಡಳು. ಆಗ ವಾಯುವಿನಿಂದ ಅತುಲಪರಾಕ್ರಮಿಯಾದ ಮಹಾಬಾಹು ಭೀಮಸೇನನು ಹುಟ್ಟಿದನು. ಆವಾಗಾದರೂ ಆಕಾಶದಲ್ಲಿ—"ಈ ಬಲವಂತರ ರಾಜನು ಹುಟ್ಟಿರುವನು" ಎಂದು ವಾಣಿಯು ಉತ್ಪನ್ನವಾಯಿತು. ಭೀಮಸೇನನು ಹುಟ್ಟಿದಬಳಿಕ ಸ್ವಲ್ಪದಿನಗಳಲ್ಲಿಯೇ ಒಂದು ಚಮತ್ಕಾರವಾಯಿತು; ಕುಂತಿಯು ಭೀಮಸೇನನನ್ನು ಒಮ್ಮೆ ತೊಡೆಯಮೇಲೆ ಮಲಗಿಸಿಕೊಂಡು ಕುಳಿತಿರುವಾಗ, ಒಂದು ಹುಲಿಯು ಬರಲು, ಕುಂತಿಯು ಬೆಚ್ಚಿಬಿದ್ದಳು. ಕೂಡಲೆ ತೊಡೆಯಮೇಲಿನ ಭೀಮಸೇನನು ಕೆಳಗೆ ಕಲ್ಲಮೇಲೆ ಬಿದ್ದನು; ಆ ವಜ್ರದೇಹಿಯಾದ ಭೀಮಸೇನನ ಅಂಗಸ್ಪರ್ಶವಾದ ಕೂಡಲೆ ಆ ಕಲ್ಲು ಪುಡಿಪುಡಿಯಾಯಿತು. ಇದನ್ನುನೋಡಿ ಪಂಡುರಾಜನಿಗೆ ಆಶ್ಚರ್ಯವಾಯಿತು. ಇತ್ತ ಭೀಮಸೇನನು ಹುಟ್ಟಿದ ದಿವಸವೇ ಅತ್ತ ಹಸ್ತಿನಾವತಿಯಲ್ಲಿ ದುರ್ಯೋಧನನು ಹುಟ್ಟಿದನು.

**ಅರ್ಜುನನ ಜನ್ಮ**—ಭೀಮಸೇನನು ಹುಟ್ಟಿದಬಳಿಕ ಮತ್ತೆ ಪಾಂಡುವು ಮನಸ್ಸಿನಲ್ಲಿ—"ಎಲ್ಲ ಜಗತ್ತು ದೇವರಪ್ರಸಾದ, ಹಾಗು ಮನುಷ್ಯಪ್ರಯತ್ನಗಳನ್ನವಲಂಬಿಸಿ ನಡೆದಿರುವದು. ಯೋಗ್ಯಕಾಲದಲ್ಲಿ ವಿಧಿಪೂರ್ವಕ ಕರ್ಮಮಾಡುವದರಿಂದ ದೇವತಾ ಪ್ರಸಾದವಾಗುವದು. ಇಂದ್ರನು ಯಾವತ್ತು ದೇವತೆಗಳಲ್ಲಿ ಶ್ರೇಷ್ಠನೆಂದು ಕೇಳಿದ್ದೇನೆ. ಆತನನ್ನು ಒಲಿಸಿಕೊಂಡು ಮಗನನ್ನು ಪಡೆದರೆ, ಆತನು ಲೋಕವಿಜಯಿಯಾಗುವಲ್ಲಿ ಸಂಶಯವಿಲ್ಲ." ಎಂದು ಯೋಚಿಸಿ, ಇಂದ್ರನನ್ನು ಕುರಿತು ತಪಶ್ಚರ್ಯಮಾಡಬೇಕೆಂದು ನಿಶ್ಚಯಿಸಿ, ಋಷಿಗಳ ಅನುಮತಿ ಪಡೆದು, ಒಂದು ವರ್ಷ ವ್ರತಸ್ಥಳಾಗಿರುವಂತೆ ಕುಂತಿಗೆ ಹೇಳಿದನು. ತಾನಾದರೂ ಒಂಟಿಗಾಲಿನಿಂದ ನಿಂತು ಶ್ರೇಷ್ಠಸಮಾಧಿಯೋಗದಿಂದ ಒಂದುವರ್ಷ ಕಠಿಣ ತಪಸ್ಸುಮಾಡಿದನು. ಬಹುದಿವಸಗಳಮೇಲೆ ಇಂದ್ರನು ಪ್ರಸನ್ನನಾಗಿ ಪಾಂಡುವನ್ನು ಕುರಿತು—"ರಾಜಾ, ನಾನು ನಿನಗೆ ಒಬ್ಬ ಮಗನನ್ನು ಕೊಡುವೆನು ಆತನು ಮೂರು ಲೋಕಗಳಲ್ಲಿ ಪ್ರಸಿದ್ಧನಾಗಿ ಗೋಬ್ರಾಹ್ಮಣರ, ಹಾಗು ಆಪ್ತೇಷ್ಟರ ಕಲ್ಯಾಣಮಾಡುವನು; ಬಾಂಧವರನ್ನು ಆನಂದಗೊಳಿಸುವನು; ಶತ್ರುಗಳಿಗೆ ದುಃಖವನ್ನುಂಟುಮಾಡುವನು" ಎಂದು ಹೇಳಿದನು. ಆಗ ಪಾಂಡುವು ಕುಂತಿಯಬಳಿಗೆ ಹೋಗಿ—"ಎಲೈ ಕಲ್ಯಾಣೀ, ಈಗ ನಮ್ಮ ಅಭ್ಯುದಯ ಕಾಲವು ಪ್ರಾಪ್ತವಾಗಿರುವದು. ದೇವಾಧಿಪತಿಯಾದ ಇಂದ್ರನು ಸಂತುಷ್ಟನಾಗಿ ನನ್ನ ಇಚ್ಛೆಯಂತೆ ಒಬ್ಬ ಮಗನನ್ನು ಕೊಡುವ ವಚನಕೊಟ್ಟಿದ್ದಾನೆ; ಆದ್ದರಿಂದ ಕ್ಷಾತ್ರತೇಜದ ನಿವಾಸಸ್ಥಾನನಾದ ಆ ಶ್ರೇಷ್ಠ ಪುತ್ರನನ್ನು ಪಡೆಯುವದಕ್ಕಾಗಿ ಬೇಗನೆ ಇಂದ್ರನನ್ನು ಕರೆ" ಎಂದು ಆಜ್ಞಾಪಿಸಲು, ಅದರಂತೆ ಕುಂತಿಯು ಇಂದ್ರನನ್ನು ಕರೆದು, ಒಬ್ಬ ಶ್ರೇಷ್ಠ ಮಗನನ್ನು ಹಡೆದಳು ಆಗ ಆಕಾಶದಲ್ಲಿ ಎಲ್ಲರಿಗೂ ಕೇಳಿಸುವಂತೆ ಕುಂತಿಯನ್ನು ಕುರಿತು—"ಎಲೈ ಕುಂತಿಯೇ, ಈ ನಿನ್ನ ಮಗನು ಕಾರ್ತವೀರ್ಯನಿಗೆ ಸಮಾನನಿದ್ದು, ಶಂಕರನಂತೆ ಪರಾಕ್ರಮಿಯಾಗಿರುವನು. ಈತನು ಇಂದ್ರನಂತೆ ಅಜೇಂಕ್ಯನಾಗಿ ನಿನ್ನ ಯಶಸ್ಸನ್ನು ಎಲ್ಲಕಡೆಗೆ ಹಬ್ಬಿಸುವನು ಈತನು ಎಲ್ಲ ಅರಸರನ್ನು ಗೆಲ್ಲುವನು; ಖಾಂಡವವನವನ್ನು ಈತನು ಅಗ್ನಿಯಿಂದ ದಹನಮಾಡಿಸುವದರಿಂದ, ಆ ಅಗ್ನಿಯು ತೃಪ್ತನಾ

ಗುವನು. ಈ ಬಲಾಢ್ಯನಾದ ಲೋಕನಾಯಕನು ತನ್ನ ಬಂಧುಗಳ ಸಹಾಯದಿಂದ ಪೃಥ್ವಿಯೊಳಗಿನ ಸಂಪೂರ್ಣ ರಾಜರನ್ನು ಗೆದ್ದು, ಮೂರು ಅಶ್ವಮೇಧಗಳನ್ನು ಮಾಡುವನು. ಈ ನಿನ್ನ ಮಗನು ಪರಶುರಾಮನಿಗೆ ಸಮಾನನಾಗಿದ್ದು, ವಿಷ್ಣುವಿನಹಾಗೆ ಪರಾಕ್ರಮಿಯಾಗಿರುವನು. ಈತನು ಯುದ್ಧದಲ್ಲಿ ಮಹಾದೇವನಾದ ಶಂಕರನನ್ನು ಮೆಚ್ಚಿಸಿ, ಆತನಿಂದ ಪಾಶುಪತಾಸ್ತ್ರವನ್ನು ಪಡೆಯುವನು. ಕುಂತೀ, ಈ ನಿನ್ನ ಮಗನು ಇಂದ್ರನ ಅಪ್ಪಣೆಯಿಂದ ದೇವಶತ್ರುಗಳಾದ ನಿವಾತಕವಚರೆಂಬ ರಾಕ್ಷಸರನ್ನು ಸಂಹರಿಸುವನು; ಮತ್ತು ಬ್ರಾಹ್ಮಣರ ನಷ್ಟವಾಗಿದ್ದ ದ್ರವ್ಯವನ್ನು ತಿರುಗಿ ಸಂಪಾದಿಸಿ ಕೊಡುವನು.'' ಎಂದು ಗಂಭೀರಧ್ವನಿಯಾಯಿತು. ಅರ್ಜುನನ ಜನ್ಮವಾದಾಗ ಏಕಾದಶ ರುದ್ರರೂ, ದ್ವಾದಶಾದಿತ್ಯರೂ, ವಿಶ್ವೇದೇವತೆಗಳೂ, ಅಷ್ಟವಸುಗಳೂ, ಅಪ್ಸರರೂ, ಗಂಧರ್ವರೂ, ನಾಗರೂ, ಋಷಿಗಳೂ ಮುಂತಾದವರು ಆತನನ್ನು ನೋಡುವದಕ್ಕಾಗಿ ಬಂದರು. ಆಕಾಶದಲ್ಲಿ ದುಂದುಭಿಗಳು ಮೊಳಗಿದವು; ಹೂಮಳೆಗರೆಯಿತು.

ಜನಮೇಜಯಾ, ಇಷ್ಟಾದರೂ ಪಂಡುವಿಗೆ ಮಕ್ಕಳ ಅಕ್ಕರೆಯು ಹರಿಯಲಿಲ್ಲ. ಮತ್ತೆ ಆತನು ಕುಂತಿಗೆ ಮಕ್ಕಳನ್ನು ಪಡೆಯಲು ಹೇಳಬೇಕೆಂದು ಯೋಚಿಸುತ್ತಿರಲು, ಆಕೆಯು ಪಂಡುವಿಗೆ--''ಇನ್ನು ನಾಲ್ಕನೆಯ ಮಗನನ್ನು ಹಡೆಯೆಂದು ಹೇಳಲಿಕ್ಕೆ, ಸಂಕಟಸಮಯದಲ್ಲಿ ಕೂಡ ಶಾಸ್ತ್ರದಲ್ಲಿ ಹೇಳಿರುವದಿಲ್ಲ. ಇನ್ನುಮೇಲೆ ನಾಲ್ಕನೆಯ ಮಗನನ್ನು ಹಡೆಯಲು ಯತ್ನಮಾಡಿದರೆ, ನಾನು ವ್ಯಭಿಚಾರಿಯಾದೇನು; ಅದರಂತೆ ಮುಂದೆ ಐದನೆಯ ಮಗನನ್ನು ಹಡೆಯಲು ಯತ್ನಿಸಿದರೆ ವೇಶ್ಯೆಯೆಂದು ನಿರ್ಣಯಿಸಲ್ಪಟ್ಟೇನು! ಹೀಗೆ ಶಾಸ್ತ್ರವಿದ್ದದ್ದು ನಿಮಗೆ ಗೊತ್ತಿದ್ದರೂ, ನೀವು ಹೀಗೇಕೆ ಮಕ್ಕಳಸಲುವಾಗಿ ತಾಳು ತಂತು ಬಿಟ್ಟು ನನಗೆ ಇಲ್ಲದ್ದೊಂದು ಹೇಳುವಿರಿ ?

**೧೨೪ನೇ ಅಧ್ಯಾಯ — ಪಂಡುವಿಗೆ ಮಾದ್ರಿಯ ಪ್ರಾರ್ಥನೆಯು, ನಕುಲ ಸಹದೇವರ ಜನ್ಮ**—ಜನಮೇಜಯಾ, ಹೀಗೆ ಕುಂತಿಯ ಮೂವರು ಮಕ್ಕಳೂ, ಅತ್ತ ಧೃತರಾಷ್ಟ್ರನ ನೂರುಜನ ಮಕ್ಕಳೂ ಹುಟ್ಟಿದ ಬಳಿಕ ಒಂದುದಿವಸ ಮಾದ್ರಿಯು ಪಂಡುವನ್ನು ಕುರಿತು—''ಮಹಾರಾಜ,

ನಿಮ್ಮಲ್ಲಿ ಪ್ರಜೋತ್ಪಾದನಮಾಡುವ ಯೋಗ್ಯತೆಯಿಲ್ಲವೆಂದು ನಿಮ್ಮಮೇಲೆ ನನ್ನ ಸಿಟ್ಟು ಇಲ್ಲ. ಕುಂತಿಯು ಯಾವಾಗಿದ್ದರೂ ನನಗಿಂತ ಹಿರಿಯಳಾಗಿದ್ದದ್ದರಿಂದ, ಆಕೆಗೆ ಮಕ್ಕಳಾದ ವಿಷಯದಲ್ಲಿಯೂ ನನಗೆ ಕೆಡಕೆನಿಸುವದಿಲ್ಲ; ಆದರಂತೆ ಗಾಂಧಾರಿಗೆ ನೂರುಜನ ಮಕ್ಕಳಾದರೆಂದ, ನನಗೆ ದುಃಖವೂ ಆಗುವದಿಲ್ಲ; ಆದರೆ ಅವರಂತೆಯೇ ನಾನೂ ಇದ್ದು, ನನಗೆ ಮಕ್ಕಳಾಗಲಿಲ್ಲವೆಂಬ ಬಗ್ಗೆ ಮಾತ್ರ ದುಃಖವು ನನಗೆ ಆಗುತ್ತದೆ. ಅದರಲ್ಲಿಯೂ ಆನಂದದ ಸಂಗತಿಯೆಂದರೆ, ಕುಂತಿಯಿಂದಾದರೂ ನಿಮಗೆ ಮಕ್ಕಳಾದರ.! ಆದರೆ ಮಹಾರಾಜ, ಕುಂತಿಯು ಯತ್ನಮಾಡಿದರೆ ನನಗೂ ಮಕ್ಕಳಾಗುವಹಾಗಿದೆ. ಕುಂತಿಯ ಮುಂದೆ ನಾನೇ ಈ ಮಾತು ತೆಗೆಯಬೇಕೆಂದರೆ, ಆಕೆಯು ನನ್ನ ಸವತಿಯು, ಕೇಳಲಿಕ್ಕೆ ನನಗೆ ಮನಸಾಗುವದಿಲ್ಲ; ತಾವು ನನಗೆ ಪ್ರಸನ್ನರಾದರೆ, ಕುಂತಿಯ ಮನಸ್ಸನ್ನು ತಾವು ಒಲಿಸಬಹುದು, ಅನ್ನಲು, ಪಂಡುವು—"ಎಲೈ ಮಾದ್ರಿ, ನನ್ನ ಮನಸ್ಸಿನಲ್ಲಿಯೂ ಈ ಮಾತು ಕಟಿಯುತ್ತಿತ್ತು; ಆದರೆ ನೀನು ಏನೆನ್ನುವೆಯೋ ಎಂಬ ಸಂಶಯದಿಂದ ನಾನು ನಿನ್ನಮುಂದೆ ಮಾತಾಡುವ ಸಾಹಸಮಾಡಲಿಲ್ಲ; ಆದರೆ ನಿನ್ನ ಮನಸ್ಸಿಗೆ ಬಂದರೆ ನಾನು ಕುಂತಿಯನ್ನು ಕೇಳುವೆನು. ಆಕೆಯು ನಿಸ್ಸಂಶಯವಾಗಿ ನನ್ನಮಾತು ನಡೆಸುವಳು" ಎಂದುಹೇಳಿ, ಕುಂತಿಯನ್ನು ಕುರಿತು ಏಕಾಂತದಲ್ಲಿ—"ನನ್ನವಂಶದ ವಿಸ್ತಾರಕ್ಕಾಗಿಯಾಗಲಿ ನನ್ನ ನಿನ್ನ, ಹಾಗು ನನ್ನ ನಿನ್ನ ಪೂರ್ವಜರ ಪಿಂಡಲೋಪವು ಎಂದೂ ಆಗಬಾರದೆಂಬ ಬುದ್ಧಿಯಿಂದಾಗಲಿ, ಕೀರ್ತಿಯು ಹೆಚ್ಚಾಗಬೇಕೆಂದಾಗಲಿ ನಾನು ಈಗ ಹೇಳುವ ಮಾತನ್ನು ನಡಿಸು. ಇಂದ್ರನು ದೇವತೆಗಳ ಪ್ರಭುತ್ವವನ್ನು ಪಡೆದಮೇಲೆಯೂ, ಕೀರ್ತಿವೃದ್ಧಿಗಾಗಿ ಯಜ್ಞಗಳನ್ನು ಮಾಡಿದನು; ಆದರಂತೆ ಮಂತ್ರಾನುಷ್ಠಾನಗಳನ್ನರಿತಿರುವ ಬ್ರಾಹ್ಮಣರು, ಉಗ್ರತಪಶ್ಚರ್ಯಮಾಡಿದಮೇಲೆಯೂ ಕೀರ್ತಿಯು ಹೆಚ್ಚಬೇಕೆಂದು ಗುರುವಿಗೆ ಶರಣುಹೋಗಿ, ಆತನ ಕೃಪೆಯನ್ನು ಸಂಪಾದಿಸುವರು. ಆದರಂತೆ, ಎಲೈ ಸಾಧ್ವಿಯೇ, ಮಾದ್ರಿಗೆ ಮಕ್ಕಳಾಗುವಂತೆ ನೀನು ಯತ್ನಮಾಡಿ ಕೀರ್ತಿಯನ್ನು ಸಂಪಾದಿಸು."

ಪತಿಯ ಅಪ್ಪಣೆಯನ್ನು ಮನ್ನಿಸುವದಕ್ಕಾಗಿ ಕುಂತಿಯು ಮಾದ್ರಿಯನ್ನು ಕುರಿತು—"ಮಾದ್ರೀ, ನಾನು ನಿನಗೆ ಮಂತ್ರೋಪದೇಶವನ್ನು ಮಾಡುವೆನು; ಅದರ ಜಪಮಾಡಿದೆಯೆಂದರೆ, ದೇವತೆಯು ಪ್ರಸನ್ನವಾಗಿ ನಿನಗೆ ಸಂತಾನಪ್ರಾಪ್ತಿಯಾಗುವದು" ಎಂದುಹೇಳಿ, ಮಂತ್ರವನ್ನು ಉಪದೇಶಿಸಿದಳು. ಮಾದ್ರಿಯು ಆ ಮಂತ್ರದಿಂದ ಅಶ್ವಿನೀಕುಮಾರರನ್ನು ಕರೆಯಲು, ಅವರಿಂದ ಆಕೆಯ ಹೊಟ್ಟೆಯಲ್ಲಿ ಅವಳಿಜವಳಿ ಮಕ್ಕಳು ಹುಟ್ಟಿದರು ; ಅವರೇ ನಕುಲ ಸಹದೇವರು. ಇವರು ಹುಟ್ಟಿದಾಗೂ ಮೊದಲಿನಂತೆ ಆಕಾಶದಲ್ಲಿ—"ಈ ಇಬ್ಬರು ಹುಡುಗರು ಶೀಲದಿಂದ, ರೂಪದಿಂದ, ಗುಣಗಳಿಂದ ಅಶ್ವಿನೀಕುಮಾರರಿಗಿಂತಲೂ ಶ್ರೇಷ್ಠರಾಗಿದ್ದು, ಕಾಂತಿ, ತೇಜ, ಸೌಂದರ್ಯ, ಸಂಪತ್ತು ಇವುಗಳಿಂದ ಇವರು ಅತ್ಯಂತ ಕೀರ್ತಿಶಾಲಿಗಳು ಆಗುವರು." ಎಂಬ ಧ್ವನಿಯುಂಟಾಯಿತು. ಜನಮೇಜಯಾ, ಆ ಶತಶೃಂಗಪರ್ವತದಲ್ಲಿದ್ದ ಋಷಿಗಳು ಆ ಐದುಹುಡುಗರನ್ನು ಬಹಳವಾಗಿ ಪ್ರೀತಿಸುತ್ತ, ಆಶೀರ್ವದಿಸಿ, ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡಿ ಅವರಿಗೆ ಕ್ರಮವಾಗಿ ಯುಧಿಷ್ಠಿರ, ಭೀಮ, ಅರ್ಜುನ, ನಕುಲ, ಸಹದೇವ ಎಂಬ ಹೆಸರುಗಳನ್ನಿಟ್ಟರು. ಒಂದೊಂದು ವರ್ಷದ ಅಂತರದಿಂದ ಹುಟ್ಟಿದ ಈ ಹುಡುಗರು ಋಷಿಗಳ, ಹಾಗು ಋಷಿಪತ್ನಿಯರ ಕೌತುಕಕ್ಕೂ, ಪ್ರೇಮಕ್ಕೂ ಪಾತ್ರರಾಗಿ ಬೆಳೆಯಹತ್ತಿದರು. ಮುಂದೆ ಕೆಲವು ದಿವಸಗಳ ಮೇಲೆ ಪಂಡುರಾಜನು ಮಾದ್ರಿಗೆ ಇನ್ನೂ ಸಂತತಿಯಾಗಬೇಕೆಂದು ಕುಂತಿಯನ್ನು ದುಂಬಾಲುಬಿದ್ದು ಕೇಳಲು, ಕುಂತಿಯು ಆತನಿಗೆ ಏಕಾಂತದಲ್ಲಿ—"ಮಹಾರಾಜ, ಮಾದ್ರಿಗೆ ಒಮ್ಮೆ ಅಪ್ಪದಕೊಟ್ಟಕೂಡಲೆ ಆಕೆಯು ಅವಳಿಜವಳಿ ಮಕ್ಕಳನ್ನು ಹಡೆದಳು. ಈ ಪ್ರಸಂಗದಲ್ಲಿ ನಾನು ಮೋಸಹೋದಂತಾಗಿರುವದು. ಈಕೆಯು ನನ್ನನ್ನು ಎಲ್ಲಿ ಸೋಲಿಸುವಳೋ ಎಂಬ ಅಂಜಿಕೆಯು ಉತ್ಪನ್ನವಾಗಿದೆ. ಕೆಟ್ಟಹೆಂಗಸರ ಸ್ಥಿತಿಯು ಹೀಗಿರುತ್ತದೆ. ದೇವತೆಗಳ ಜೋಡಿಯನ್ನು ಕರೆದರೆ, ಅವಳಿಜವಳಿ ಮಕ್ಕಳಾಗುವವೆಂಬದು ಸರಳಸ್ವಭಾವದ ನನಗೆ ಹೇಗೆ ಗೊತ್ತಾಗಬೇಕು ? ತಮ್ಮನ್ನು ಈಗ ನಾನು ಪ್ರಾರ್ಥಿಸುವದೇನಂದರೆ; ತಾವು ಇನ್ನುಮೇಲೆ ನನಗೆ ಘಡೆಹಾಕಬಾರದು.

**೧೨೫ನೇ ಅಧ್ಯಾಯ — ಪಂಡುರಾಜನ ನಿಧನ**:—ಜನಮೇಜಯಾ, ಹೀಗೆ ಇತ್ತ ಐದುಜನ ಪಾಂಡವರೂ, ಅತ್ತ ನೂರುಜನ ಕೌರ

ವರೂ ನೀರಲ್ಲಿ ಕಮಲಗಳು ಬೆಳೆಯುವಂತೆ ಬೆಳೆಯುತ್ತಿರಲು, ವಸಂತಋತುವು ಪ್ರಾಪ್ತವಾಯಿತು. ಅರಣ್ಯದೊಳಗಿನ ಗಿಡಬಳ್ಳಿಗಳೆಲ್ಲ ಚಿಗಿತು ಅರಣ್ಯದ ಸೌಂದರ್ಯವು ಹೆಚ್ಚಿತು ಹೀಗಿರುವಾಗ ಪಂಡುರಾಜನ ಮನಸ್ಸಿನಲ್ಲಿ ಕಾಮವಾಸನೆಯು ಉತ್ಪನ್ನವಾಯಿತು. ಆಗ ಉತ್ತಮವಾದ ವಸ್ತ್ರವನ್ನುಟ್ಟುಕೊಂಡಿದ್ದ ಮಾದ್ರಿಯು ಆತನ ಬೆನ್ನಹತ್ತಿ ಬರತೊಡಗಿದಳು. ಬಿನುಗು ವಸ್ತ್ರದ ಆ ತನ್ನ ಪ್ರಿಯದ ಹೆಂಡತಿಯನ್ನು ನೋಡಿ ಪಂಡುವಿನ ಕಾಮವಿಕಾರವು ಹೆಚ್ಚಿತು. ಒಬ್ಬಳೇ ಏಕಾಂತದಲ್ಲಿದ್ದ ಮಾದ್ರಿಯು ತನ್ನ ಶಕ್ತಿಯಂತೆ ನಿವಾರಣಮಾಡಿದರೂ, ಬಲಾತ್ಕಾರದಿಂದ ಪಂಡುವು ಆಕೆಯ ಸಂಗಮಾಡಿ ಮರಣಹೊಂದಿದನು. ಜನಮೇಜಯರಾಜಾ, ಆ ಕಾಲದಲ್ಲಿ ಆತನ ಮರಣವು ನಿಯಮಿಸಿದ್ದರಿಂದ, ಪ್ರಾರಬ್ಧವು ಆತನನ್ನು ಪ್ರೇರಿಸಲು, ಆತನು ಶಾಪದ ಭೀತಿಯನ್ನು ಬಿಟ್ಟು, ಕಾಮವಶನಾದನು. ಆ ಕಾಮವಶನಾಗಿರುವ ರಾಜನ ಬುದ್ಧಿಯನ್ನು ಪ್ರತ್ಯಕ್ಷ ಕಾಲನೇ ಮೋಹಿಸಿಬಿಟ್ಟದ್ದರಿಂದ, ಆತನ ನೋಡೋಣ, ಕೇಳೋಣ ಮೊದಲಾದ ಇಂದ್ರಿಯಗಳ ವ್ಯಾಪಾರವು ನಿಂತುಹೋಗಿ, ಆತನ ವಿಚಾರಸಾಮರ್ಥ್ಯವು ಕಟ್ಟಾಗಿ ಆತನ ವಿವೇಕವು ನಷ್ಟವಾಯಿತು! ಹೀಗೆ ಪತಿಯು ತನ್ನಿಂದ ಮರಣಹೊಂದಿದ್ದನ್ನು ನೋಡಿ, ಮಾದ್ರಿಯು ಶವವನ್ನು ಆಲಿಂಗಿಸಿ ಅಳತೊಡಗಿದಳು. ಆಗ ಕುಂತಿಯು ಮಕ್ಕಳೊಡನೆ ಅಲ್ಲಿಗೆ ಬಂದು ದುಃಖದಿಂದ ಮಾದ್ರಿಯನ್ನು ಕುರಿತು--

ಕುಂತಿ --ಮಾದ್ರೀ, ಈ ವಿವೇಕಿಯಾದ ರಾಜನನ್ನು ನಾನು ಇಷ್ಟು ಕಾಯುತ್ತಿದ್ದರೂ, ಋಷಿಶಾಪವನ್ನು ಈತನು ಅರಿತವನಾಗಿದ್ದರೂ ಈತನು ನಿನ್ನಮೇಲೆ ಬಲಾತ್ಕಾರವನ್ನು ಹೇಗೆ ಮಾಡಿದನು? ಅಕ್ಕೇ ಮಾದ್ರಿ, ಮಹಾರಾಜರ ಸಂರಕ್ಷಣಮಾಡುವದನ್ನು ಬಿಟ್ಟು, ಏಕಾಂತದಲ್ಲಿ ಅವರಿಗೆ ಮೋಹವನ್ನುಂಟುಮಾಡಬಹುದೇ? ಆದರೆ ಮಾದ್ರೀ, ಕಾಮವಶನಾದ ಪತಿಯ ಮುಖವನ್ನು ನೋಡಿದ ನೀನೇ ಧನ್ಯಳು; ನನಗಿಂತ ನಿಶ್ಚಯವಾಗಿ ನೀನು ಸುದೈವಿಯು!

ಮಾದ್ರಿ--ಅವ್ವಾ! ನಾನು ಅಳುತ್ತ ಅಳುತ್ತ "ಬೇಡಬೇಡ" ಎಂದು ಎಷ್ಟು ನಿವಾರಿಸಿದರೂ, ದುರ್ದೈವದ ಮೂಲಕ ಮಹಾರಾಜರಿಂದ ಮನಸ್ಸು ಬಿಗಿಹಿಡಿಯುವದಾಗಲಿಲ್ಲ.

ಕುಂತಿ—ನಾನು ಮಹಾರಾಜರ ಹಿರಿಯಹೆಂಡತಿಯು, ಪಾಪಪುಣ್ಯಗಳಲ್ಲಿಯೂ ನನ್ನಪಾಲು ದೊಡ್ಡದು; ಆದ್ದರಿಂದ ನಾನು ಪತಿಯೊಡನೆ ಸಹಗಮನವನ್ನಾಡುವೆನು, ನೀನು ಅಡ್ಡಬರಬೇಡ.

ಮಾದ್ರಿ—ನನ್ನ ರಣಶೂರ ಪತಿಯಸಂಗಡ ನಾನೇ ಹೋಗುವೆನು; ಯಾಕಂದರೆ ನನ್ನ ಕಾಮವಾಸನೆಯು ಇನ್ನೂ ತೃಪ್ತವಾಗದಿರುವದರಿಂದ, ಸ್ವರ್ಗದಲ್ಲಾದರೂ ಪತಿಯ ಕಾಮವಾಸನೆಯನ್ನು ತೃಪ್ತಿಮಾಡಲು ಯತ್ನಿಸುವೆನು. ಸಮಬುದ್ಧಿಯಿಂದ ನನ್ನ ನಿನ್ನಮಕ್ಕಳನ್ನು ರಕ್ಷಿಸುವದು ನನ್ನಿಂದಾಗಲಿಕ್ಕಿಲ್ಲ ಮೇಲಾಗಿ ನನ್ನ ಕಾರಣದಿಂದಲೇ ಪತಿಯ ದೇಹಾವಸಾನವಾಗಿರುವದು; ಆದ್ದರಿಂದ ನನ್ನ ಶರೀರವನ್ನು ಪತಿಯ ಶರೀರದೊಡನೆ ಚನ್ನಾಗಿ ಮುಚ್ಚಿ ನನ್ನನ್ನು ದಹನಮಾಡಿರಿ; ನನ್ನಮೇಲೆ ಇಷ್ಟು ಉಪಕಾರಮಾಡದೆ ಇರಬೇಡಿರಿ.

ಈ ಮೇರೆಗೆ ನುಡಿದು ಮಾದ್ರಿಯು ತಟ್ಟನೆ ಪತಿಯ ಶವದಮೇಲೆ ಹೋಗಿ ಬಿದ್ದುಕೊಂಡಳು.

**೧೨೯ನೇ ಅಧ್ಯಾಯ-ಪಾಂಡವರು ಹಸ್ತಿನಾವತಿಗೆಬಂದದ್ದು**— ಪಂಡುರಾಜನು ಮರಣಹೊಂದಿದ್ದನ್ನು ನೋಡಿ, ದೇವತೆಗಳ ಯೋಗ್ಯತೆಗೆ ಸಮಾನವಾದ ಯೋಗ್ಯತೆಯುಳ್ಳ ದೊಡ್ಡದೊಡ್ಡ ಋಷಿಗಳು ತಮ್ಮತಮ್ಮೊಳಗೆ—"ಈ ಉದಾರನಾದ ದೊಡ್ಡರಾಜನು ತನ್ನ ರಾಜ್ಯವನ್ನೂ, ಪ್ರಜೆಗಳನ್ನೂ, ಎಲ್ಲವನ್ನೂ ಬಿಟ್ಟು ಇಲ್ಲಿಗೆಬಂದು, ತಪಶ್ಚರ್ಯಮಾಡಿ ಇಲ್ಲಿಯ ತಪಸ್ವಿಜನರಿಗೆ ಶರಣುಬಂದನು. ಆಮೇಲೆ ಈ ಸಣ್ಣಸಣ್ಣ ಹುಡುಗರನ್ನೂ, ಹೆಂಡತಿಯನ್ನೂ ನಮ್ಮ ಅಧೀನದಲ್ಲಿಟ್ಟು ಸ್ವರ್ಗಕ್ಕೆಹೋದನು. ಈಗ ಈ ಹುಡುಗರನ್ನೂ, ಈ ಸ್ತ್ರೀಯನ್ನೂ ಸಂಗಡ ಕರಕೊಂಡು, ಪಂಡು-ಮಾದ್ರಿಯರ ಈ ಅಸ್ಥಿಗಳನ್ನು ತಕ್ಕೊಂಡು ನಾವು ಪಂಡುವಿನ ರಾಷ್ಟ್ರಕ್ಕೆ ಹೋಗೋಣ; ಯಾಕಂದರೆ, ಇದು ನಮ್ಮ ಧರ್ಮವಾಗಿರುವದು," ಎಂದು ಆಲೋಚಿಸಿ ಕುಂತಿಯನ್ನೂ, ಆಕೆಯ ಮಕ್ಕಳನ್ನೂ ಭೀಷ್ಮ-ಧೃತರಾಷ್ಟ್ರರಿಗೆ ಒಪ್ಪಿಸುವದಕ್ಕಾಗಿ ಹಸ್ತಿನಾವತಿಗೆ ಹೊರಟರು. ಅವರು ಮಾರ್ಗವನ್ನು ಕ್ರಮಿಸುತ್ತಕ್ರಮಿಸುತ್ತ ಹಸ್ತಿನಾವತಿಯ ಮುಖ್ಯದ್ವಾರಕ್ಕೆ ಬಂದು, ತಾವು ಬಂದಿರುವ ಸುದ್ದಿಯನ್ನು ರಾಜನಿಗೆ ಮುಟ್ಟಿಸಂದು ಅಲ್ಲಿಯ ಕಾವಲು

ಗಾರರಿಗೆ ಹೇಳಿದರು. ಕೂಡಲೆ ಅವರು ಹೋಗಿ ಸುದ್ದಿಯನ್ನು ತಿಳಿಸಲು, ಸಾವಿರಾರುಜನ ಗುಹ್ಯಕರೂ, ಋಷಿಗಳೂ ಬಂದದ್ದನ್ನು ನೋಡಿ ಜನರಿಗೆ ಆಶ್ಚರ್ಯವಾಯಿತು. ಹುಡುಗರ, ಹೆಂಗಸರ, ಗಂಡಸರ ಹಿಂಡಿಗೆ ಹಿಂಡು ಅವರನ್ನು ನೋಡುವದಕ್ಕಾಗಿ ಬಂದಿತು. ಅದರಂತೆ, ಭೀಷ್ಮ, ಧೃತರಾಷ್ಟ್ರ, ವಿದುರ, ಸತ್ಯವತಿ, ಸಾಧ್ವಿಯಾದ ಅಂಬಾಲಿಕೆ, ರಾಜಸ್ತ್ರೀಯರೊಡನೆ ಗಾಂಧಾರಿ, ವಿವಿಧ ಅಲಂಕಾರಗಳನ್ನು ಧರಿಸಿದ ಧೃತರಾಷ್ಟ್ರನ ನೂರು ಜನ ಮಕ್ಕಳು ಮೊದಲಾದವರು ಋಷಿಗಳ ಬಳಿಗೆ ಬಂದು ಅವರ ಪಾದಗಳಿಗೆ ಹಣೆಹಚ್ಚಿ ಅವರನ್ನು ವಂದಿಸಿ, ಅವರಸುತ್ತಲು ಸಾಲಾಗಿ ಕುಳಿತುಕೊಂಡರು. ಎಲ್ಲಕಡೆಯಲ್ಲಿ ಸ್ತಬ್ಧವಾಗಿರುವಾಗ ಅರ್ಘ್ಯಪಾದ್ಯಾದಿಗಳಿಂದ ಋಷಿಗಳ ಪೂಜೆಯಾಯಿತು

ಬಳಿಕ ಋಷಿಮಂಡಲಿಯೊಳಗಿನ ಜಟಾ ಮೃಗಚರ್ಮಗಳನ್ನು ಧರಿಸಿದ ಒಬ್ಬ ಶ್ರೇಷ್ಠನಾದ ಋಷಿಯು ಎಲ್ಲಋಷಿಗಳ ಆಶಯವನ್ನರಿತು ಎದ್ದುನಿಂತು:—"ಸಭ್ಯರೇ, ಸರ್ವರಾಜ್ಯವನ್ನು ಬಿಟ್ಟುಬಂದಿದ್ದ ಪಾಂಡುರಾಜನು ಶತಶೃಂಗಪರ್ವತದಲ್ಲಿದ್ದು, ತಪಶ್ಚರ್ಯಮಾಡುತ್ತಿದ್ದನು. ಆತನು ಬ್ರಹ್ಮಚರ್ಯದಿಂದಿರುತ್ತಿರುವಾಗ ದೈವೀಉಪಾಯದಿಂದ ಯಮ, ವಾಯು, ಇಂದ್ರ, ಅಶ್ವಿನೀದೇವತೆಗಳು ಇವರಿಂದ ಕ್ರಮವಾಗಿ ಯುಧಿಷ್ಠಿರ, ಭೀಮ, ಅರ್ಜುನ, ನಕುಲ, ಸಹದೇವ ಎಂಬ ಈ ಐವರುಮಕ್ಕಳು ಕುಂತಿ-ಮಾದ್ರಿಯರ ಹೊಟ್ಟೆಯಲ್ಲಿ ಹುಟ್ಟಿರುವರು. ಇವರ ಜನ್ಮವೃತ್ತಾಂತವನ್ನೂ, ಇವರು ದೊಡ್ಡವರಾದದ್ದನ್ನೂ, ಇವರ ವೇದಾಧ್ಯಯನಾದಿಗಳ ವಿಚಾರವನ್ನೂ ಕೇಳಿದರೆ, ನಿಮಗೆ ಸಂತೋಷವಾಗುವದು. ಧರ್ಮದಂತೆ ನಡೆಯುತ್ತಿದ್ದ ಪಂಡುರಾಜನು ಕಡೆಗೆ ಸ್ವರ್ಗಸ್ಥನಾಗಿ ಇಂದಿಗೆ ಹದಿನೇಳುದಿನಗಳಾದವು. ಆತನ ಹೆಂಡತಿ ಮಾದ್ರಿಯು ಸಹಗಮನಮಾಡಿದಳು. ಇನ್ನು ಮೇಲೆ ಅವರಿಬ್ಬರ ಉತ್ತರಕಾರ್ಯಗಳನ್ನು ಮಾಡಿರಿ; ಇವು ಅವರ ಅಸ್ಥಿಗಳು" ಎಂದುಹೇಳಿ, ಅವರೆಲ್ಲರೂ ನೋಡುತ್ತಿರಲು, ಗುಹ್ಯಕರೊಡನೆ ಆ ಋಷಿಮಂಡಲಿಯು ಗಂಧರ್ವನಗರದಂತೆ ಅಲ್ಲಿಯೇ ಮಾಯವಾಗಿ ಹೋಯಿತು! ಅದನ್ನು ನೋಡಿ ಎಲ್ಲರಿಗೂ ಬಹಳ ಆಶ್ಚರ್ಯವಾಯಿತು.

**೧೨೭, ೧೨೮ನೇ ಅಧ್ಯಾಯ ಗಳು — ಪಂಡುಮಾದ್ರಿಯರ ಉತ್ತರಕ್ರಿಯೆ**— ಬಳಿಕ ಧೃತರಾಷ್ಟ್ರನು ವಿದುರನನ್ನು ಕುರಿತು–"ವಿದುರಾ, ಸಿಂಹನಂತೆ ಪರಾಕ್ರಮಿಯಾದ ಪಂಡುವಿನ, ವಿಶೇಷವಾಗಿ ಮಾದ್ರಿಯ ಯೋಗ್ಯತೆಗೆ ತಕ್ಕಂತೆ ಸಮಾರಂಭದಿಂದ ಅವರ ಪ್ರೇತಸಂಸ್ಕಾರವನ್ನು ಮಾಡಿಸು. ಪಶು, ರತ್ನ, ವಸ್ತ್ರ, ದ್ರವ್ಯ ಮೊದಲಾದ ಹಲವು ದಾನಗಳನ್ನು ಕೊಡಿಸು. ಮಾದ್ರಿಯ ಪ್ರೀತ್ಯರ್ಥವಾಗಿ ಕುಂತಿಯು ಹೇಳಿದಂತೆ ಮಾಡು. ವಾಯು-ಸೂರ್ಯರು ಕೂಡ ನೋಡದಂತೆ ಆ ಕುಂತಿಯ ವ್ಯವಸ್ಥೆಯನ್ನು ಉತ್ತಮರೀತಿಯಿಂದ ಇಡಿಸು. ಪಂಡುರಾಜನ ಈ ಐದುಜನ ಮಕ್ಕಳನ್ನು ನೋಡಿ ಪಂಡುವಿನ ಮರಣದ ದುಃಖವನ್ನು ಇನ್ನುಮೇಲೆ ನಾವೆಲ್ಲರೂ ಮರೆಯುವದೇ ಒಳ್ಳೆಯದು." ಎಂದು ಹೇಳಿದನು. ಬಳಿಕ ಪಂಡು-ಮಾದ್ರಿಯರ ಅಸ್ಥಿಗಳಿಗೆ ಅಗರು ಚಂದನಾದಿ ವಿವಿಧ ಸುಗಂಧದ್ರವ್ಯಗಳನ್ನು ಬಳಿದು ಅವಕ್ಕೆ ಬಿಳಿಯ ವಸ್ತ್ರಗಳನ್ನು ಸುತ್ತಿ, ಪಲ್ಲಕ್ಕಿಯಲ್ಲಿರಿಸಿ, ಛತ್ರಚಾಮರಾದಿಗಳನ್ನು ಹಿಡಿದು ಸಮಾರಂಭದಿಂದ ಅವುಗಳ ಮೆರವಣಿಗೆ ಹೊರಡಿಸಿದರು. ಬಳಿಕ ಅಂತ್ಯೇಷ್ಟಿಕರ್ಮಗಳನ್ನು ಮಾಡಿಸುವ ಬ್ರಾಹ್ಮಣರ ಅನುಮತಿಯಿಂದ, ಶುದ್ಧ ಸ್ಥಳದಲ್ಲಿ ಚಂದನ-ಅಗರುಗಳ ಕಟ್ಟಿಗೆಯಿಂದ ಅವುಗಳ ದಹನಮಾಡಿದರು. ಆಗ ಅಂಬಾಲಿಕೆ ಕುಂತಿಯರೇ ಮೊದಲಾದ ರಾಜಸ್ತ್ರೀಯರೂ, ಪ್ರಜಾಜನವೂ ಪಟ್ಟದುಃಖವನ್ನು ವರ್ಣಿಸಲಾಸಲ್ಲ. ಅವರ ಆ ದುಃಖವನ್ನು ನೋಡಿ ಭೀಷ್ಮಾದಿಗಳ ಕಣ್ಣುಗಳಲ್ಲಿಯೂ ನೀರುಬರಲು, ಅವರು ದೊಡ್ಡ ಧ್ವನಿಯಿಂದ ಅಳತೊಡಗಿದರು. ಹೀಗೆ ಅಸ್ಥಿಗಳ ದಹನವಾದಬಳಿಕ ಭೀಷ್ಮಾದಿ ಕೌರವಜ್ಞಾತಿಗಳು ಪಿಂಡೋದಕಾದಿಗಳಿಂದ ಪಂಡು ಮಾದ್ರಿಯರ ಶ್ರಾದ್ಧ ಮಾಡಿದರು. ಯಥೇಚ್ಛ ಅನ್ನದಾನವೂ, ವಿಪುಲ ದಕ್ಷಿಣೆ ದಾನಾದಿಗಳೂ ಆಗಿ ಕರ್ಮಸಮಾಪ್ತಿಯಾಗಲು, ಎಲ್ಲರೂ ಶೋಕಮಗ್ನರಾಗಿ ಹಸ್ತಿನಾಪತಿಯನ್ನು ಪ್ರವೇಶಿಸಿದರು.

**ಸತ್ಯವತಿಗೆ ವ್ಯಾಸರ ಉಪದೇಶ**—ಹೀಗೆ ಎಲ್ಲರೂ ಶೋಕಮಗ್ನರಾಗಿರುವಾಗ, ವ್ಯಾಸರು ಬಂದು ತಮ್ಮ ತಾಯಿಯಾದ ಸತ್ಯವತಿಯನ್ನು ಸಮಾಧಾನಪಡಿಸುವದಕ್ಕಾಗಿ ಆಕೆಯನ್ನು ಕುರಿತು–"ಅಮ್ಮಾ, ಕಾಲವು

ಬಹು ಕಠಿಣಬಂದಿರುವದು; ಸುಖದ ದಿನಗಳು ಹಿಂದಾದವು; ಮುಂದೆ ಒಂದಕ್ಕಿಂತ ಒಂದು ದುರ್ಧರಪ್ರಸಂಗಗಳು ಬರುವವು. ಪೃಥ್ವಿಯು ಜೀರ್ಣಾವಸ್ಥೆಯನ್ನು ಹೊಂದಿರುವದು. ನಾಲ್ಕೂಕಡೆಗೆ ಕಪಟವ್ಯವಹಾರಗಳು ನಡೆದು, ಹಲವುಪ್ರಕಾರದ ಅನ್ಯಾಯಗಳಾಗಿ ಧರ್ಮಮುಣುಗಿ ನೋಡಿದತ್ತೆಲ್ಲ ಭ್ರಷ್ಟಾಕಾರವೂ, ಅನೀತಿಯೂ ಉಂಟಾಗುವ ಕಾಲವು ದಿನದಿನಕ್ಕೆ ಬರಬೇಕಾಗಿರುವದು. ಈ ಕುರುವಂಶದ ಪುರುಷರಿಂದಲೇ ಅನ್ಯಾಯ-ಬಲಾತ್ಕಾರಗಳಾಗಿ, ಜಗತ್ತಿನ ನಾಶವಾಗಬೇಕಾಗಿರುವದು; ಆದ್ದರಿಂದ ನೀನು ಯೋಗಾಭ್ಯಾಸವನ್ನು ಮಾಡಿ ಮನಸ್ಸನ್ನು ಸ್ಥಿರಪಡಿಸಿ ಅರಣ್ಯದಲ್ಲಿ ಹೋಗಿ ಇರು. ನಿನ್ನ ಕುಲದ ಭಯಂಕರ ಸಂಹಾರವಾಗುವದನ್ನು ನೀನು ನೋಡಬೇಡ" ಎಂದು ಹೇಳಲು, ಹಾಗೇ ಆಗಲಿ, ಎಂದು ಹೇಳಿ, ಆ ಸಂಗತಿಯನ್ನು ತನ್ನ ಸೊಸೆಂದಿರಾದ ಅಂಬಿಕಾ-ಅಂಬಾಲಿಕೆಯರಿಗೆ ತಿಳಿಸಿದಳು. ಆ ಸಾಧ್ವಿಯರೂ ಅರಣ್ಯಕ್ಕೆ ಬರಲು ಒಪ್ಪಿಕೊಳ್ಳಲು, ಸೊಸಂದಿರೊಡನೆ ಸತ್ಯವತಿಯು ಅರಣ್ಯವನ್ನು ಕುರಿತು ತೆರಳಿದಳು.

**ಪಾಂಡವ-ಧಾರ್ತರಾಷ್ಟ್ರರ ಬಾಲ್ಯವರ್ಣನ**—ಬಳಿಕ ಪಾಂಡವರಿಗೆ ಕ್ರಮವಾಗಿ ಯಾವತ್ತು ವೇದೋಕ್ತಸಂಸ್ಕಾರಗಳು ಆಗಿ, ಅವರು ತಂದೆಯಮನೆಯಲ್ಲಿ ಸುಖದಿಂದ ಇರತೊಡಗಿದರು. ಅವರು ಧೃತರಾಷ್ಟ್ರನ ಮಕ್ಕಳೊಡನೆ ಆನಂದದಿಂದ ಆಡುವರು. ಹೀಗೆ ಇರಇರುತ್ತ ಚಿಕ್ಕತನದ ಎಲ್ಲ ಆಟಗಳಲ್ಲಿ ಪಾಂಡವರು ಎಲ್ಲರಿಗಿಂತ ಹೆಚ್ಚಿನವರೆನಿಸಿಕೊಳ್ಳುಹತ್ತಿದರು. ಓಡುವದರಲ್ಲಿ, ನೋಡಿದ ಪದಾರ್ಥಗಳನ್ನು ಮೇಲಾಟದಿಂದ ಹಿಡಿಯುವದರಲ್ಲಿ, ಊಟದಲ್ಲಿ, ಧೂಳವಾಡುವಲ್ಲಿ ಅವರು ಎಲ್ಲರನ್ನು ಮೀರುವರು. ಭೀಮಸೇನನಂತು ಧೃತರಾಷ್ಟ್ರನ ಮಕ್ಕಳನ್ನು ಗುದ್ದಿಗುದ್ದಿ ಸಾಕುಸಾಕು ಮಾಡುವನು. ಅವರನ್ನು ಚಂಡುಹಿಡಿದು ದರದರವೆಳೆದು ತರುವನು. ನೂರುಜನ ಧಾರ್ತರಾಷ್ಟ್ರರಿಗೂ ಅವನು ಒಬ್ಬನೇ ಸಾಕಾಗಿದ್ದನು. ಅತ್ತಾಯಾ ಅವರನ್ನು ಬಿಡುತ್ತಿದ್ದಿಲ್ಲ. ಅವರ ಮೊಣಕೈ ಮೊಣಕಾಲುಗಳು ಕೆತ್ತುತ್ತಿದ್ದವು. ನೀರಾಟವಾಡುವಾಗ ಆತನು ಹತ್ತುಜನ ಕೌರವರನ್ನು ಎರಡೂ ಕೈಗಳಿಂದ ಅಪ್ಪಿಕೊಂಡು ನೀರಲ್ಲಿ ಹಾರಿ, ಅವರು ಉಸುರು

ಕಟ್ಟಿ ಸಾಯುವಹಾಗಾದಾಗ ಬಿಡುವನು. ಆ ಕೌರವರು ಗಿಡವನ್ನು ಹತ್ತಿ ಹಣ್ಣು ಕೊಯ್ಯುತ್ತಿರಲು, ಈ ಭೀಮನು ಗಿಡವನ್ನು ಕಾಲಿನಿಂದ ಒದ್ದು ಅಲ್ಲಾಡಿಸುವನು. ಅದರಿಂದ ಹಣ್ಣುಗಳೊಡನೆ ಹತ್ತಿದ ಹುಡುಗರೂ ಬೀಳುವವು! ಹೊಡೆದಾಡುವದರಲ್ಲಿ, ಓಡುವದರಲ್ಲಿ, ವಿದ್ಯಾಭ್ಯಾಸದಲ್ಲಿ ಭೀಮನನ್ನು ಸೋಲಿಸಬೇಕೆಂದು ಆ ಕೌರವರು ಬೇಕಾದಷ್ಟು ಹೆಣಗುವರು; ಆದರೆ ಭೀಮನು ಎಂದೂ ಸೋಲುತ್ತಿದ್ದಿಲ್ಲ. ಹೀಗೆ ಧಾರ್ತರಾಷ್ಟ್ರರೊಡನೆ ಹೆಣಗಿಹೆಣಗಿ, ಅವರನ್ನು ಹಣಿದುಹಣಿದು ಭೀಮನು ಕೌರವರಿಗೆ ಸೇರದಾದನು; ಆದರೆ ಇವೆಲ್ಲ ಕೃತಿಗಳು ಹುಡುಗಾಟಿಗೆಯಿಂದಾಗುತ್ತಿದ್ದವಲ್ಲದೆ ದ್ವೇಷದಿಂದಾಗುತ್ತಿದ್ದಿಲ್ಲ.

**ಭೀಮನಿಗೆ ವಿಷಪ್ರಯೋಗ** — ಮುಂದೆ ಪರಾಕ್ರಮಿಯಾದ ದುರ್ಯೋಧನನು ಭೀಮಸೇನನ ಆ ಲೋಕೋತ್ತರ ಸಾಮರ್ಥ್ಯವನ್ನು ನೋಡಿ ತನ್ನ ದುಷ್ಟಬುದ್ಧಿಯನ್ನು ತೋರಿಸಹತ್ತಿದನು. ಎಲ್ಲ ಐಶ್ವರ್ಯವು ತನಗೇ ಆಗಬೇಕೆಂಬ ಲೋಭದಿಂದ ಆತನಲ್ಲಿ ಪಾಪಬುದ್ಧಿಯು ಉತ್ಪನ್ನವಾಯಿತು. ಬಲಿಷ್ಠರಲ್ಲಿ ಅಗ್ರಗಣ್ಯನಾದ ಭೀಮಸೇನನನ್ನು ಏನಾದರೂ ಹಂಚಿಕೆಮಾಡಿ ನಾಶಮಾಡಬೇಕೆಂತಲೂ, ಯುಧಿಷ್ಠಿರ-ಅರ್ಜುನರನ್ನು ಸೆರೆಯಲ್ಲಿರಿಸಿ ಪೃಥ್ವಿಯ ರಾಜ್ಯವನ್ನು ತಾನೊಬ್ಬನೇ ಆಳಬೇಕೆಂತಲೂ ಆತನು ಯೋಚಿಸಿದನು ಒಬ್ಬ ಭೀಮನು ತಮ್ಮೆಲ್ಲರಿಗೂ ಸಾತ ಉಳಿಯುವನೆಂಬ ಅಂಜಿಕೆಯು ಆತನಿಗೆ ಇದ್ದಿತು. ಹೀಗೆ ಭೀಮಸೇನನ ನಾಶದ ಉಪಾಯಗಳನ್ನು ಯೋಚಿಸುತ್ತಿರುವಾಗ, ಜಲಕ್ರೀಡೆಯ ನೆವದಿಂದ ಗಂಗಾತೀರಕ್ಕೆ ಹೋಗಿ ಅಲ್ಲಿ ವಿಷಪ್ರಯೋಗದಿಂದ ಭೀಮನನ್ನು ಕೊಲ್ಲುವದು ತಕ್ಕದ್ದೆಂದು ಆತನು ನಿರ್ಧರಿಸಿದನು. ಅದಕ್ಕಾಗಿ ಆತನು "ಉದಕಕ್ರೀಡನ" ಎಂಬ ಹೆಸರಿನ ಕ್ರೀಡಾಮಂದಿರವನ್ನು, ಅರ್ಧ ನೀರಿನಲ್ಲಿ ಅರ್ಧನೆಲದಲ್ಲಿರುವಂತೆ ಸುಂದರವಾಗಿ ಕಟ್ಟಿಸಿ, ಅದರಲ್ಲಿ ವಿವಿಧ ಖಾದ್ಯಗಳನ್ನೂ, ಪೇಯಗಳನ್ನೂ, ಭಕ್ಷ್ಯ-ಭೋಜ್ಯಗಳನ್ನೂ, ಅನ್ನಗಳನ್ನೂ ಚತುರರಾದ ಅಡಿಗೆಯವರಿಂದ ಮಾಡಿಸಿ ಸಿದ್ಧಪಡಿಸಿದನು. ಬಳಿಕ ಆತನು ಪಾಂಡವರನ್ನು ಕುರಿತು—"ನೋಡಿರಿ, ಕ್ರೀಡಾಮಂದಿರದಲ್ಲಿ ಎಲ್ಲಸಿದ್ಧವಾಗಿದೆ. ನಾವೆಲ್ಲರೂ ಜಲಕ್ರೀಡೆಗಾಗಿ ಹೋಗೋಣ"

ಅನ್ನಲು, ಯುಧಿಷ್ಠಿರನು "ಹಾಗೇಆಗಲಿ" ಎಂದು ಒಪ್ಪಿಕೊಂಡನು. ಬಳಿಕ ಅವರೆಲ್ಲರೂ ರಥ, ಆನೆ ಮೊದಲಾದ ವಾಹನಗಳನ್ನೇರಿ, ಸಿಂಹಗಳು ಗುಹೆಗಳನ್ನು ಪ್ರವೇಶಿಸುವಂತೆ, ಕ್ರೀಡಾಮಂದಿರವನ್ನು ಪ್ರವೇಶಿಸಿದರು. ಆ ಮಂದಿರದ ಸೌಂದರ್ಯವನ್ನೇನು ವರ್ಣಿಸುವದು? ಅದಕ್ಕೆ ಅಲ್ಲಲ್ಲಿ ಸುಂದರ ಜಾಳಿಗೆಯ ಖಿಡಕಿಗಳಿದ್ದವು; ಅಲ್ಲಲ್ಲಿ ಕಾರಂಜಿಗಳು ಹಾರುತ್ತಿದ್ದವು; ಗೋಡೆಗಳನ್ನು ಸುಂದರ ಚಿತ್ರಗಳಿಂದ ಅಲಂಕರಿಸಿದ್ದರು; ನೀರಿನ ಪ್ರವಾಹವಂತು ಭರದಿಂದ ಸಾಗಿತ್ತು; ನೀರಲ್ಲಿಯ ಕಮಲಗಳಿಂದ ಅಪೂರ್ವಶೋಭೆಯುಂಟಾಗಿತ್ತು; ಅದರಂತೆ ಭೂಮಿಯು ಋತುಮಾನಕ್ಕನುಸರಿಸಿ ಆಯಾಹೂಗಳಿಂದ ಮುಚ್ಚಿಹೋಗಿ ಮನೋಹರವಾಗಿ ತೋರುತ್ತಿತ್ತು.

ಬಳಿಕ ಪಾಂಡವರೂ, ಕೌರವರೂ ತಮ್ಮ ಮನಸ್ಸಿಗೆಬಂದಂತೆ ಅಲ್ಲಿಯ ವಸ್ತುಗಳ ಉಪಭೋಗಮಾಡಹತ್ತಿದರು. ಬರಬರುತ್ತ ಎಲ್ಲ ಹುಡುಗರೂ ವಿನೋದಮಗ್ನರಾಗಿ ಒಬ್ಬರ ಬಾಯಲ್ಲೊಬ್ಬರು ತುತ್ತು ಹಾಕಹತ್ತಿದರು. ಇದೇಸಂಧಿಯಲ್ಲಿ ದುಷ್ಟದುರ್ಯೋಧನನು ಅನ್ನದಲ್ಲಿ ಕಾಲಕೂಟ ವಿಷವನ್ನು ಕಲಿಸಿ ಭೀಮಸೇನನಿಗೆ ಅದನ್ನು ಉಣಿಸಿದನು. ತೀಕ್ಷ್ಣಶಸ್ತ್ರದಂತೆ ಅಂತರಂಗವಿದ್ದ, ಸಕ್ಕರೆಗಿಂತ ಸವಿಮಾತಾಡುವ ಆ ದುಷ್ಟನು ಸ್ವತಃ ತಾನೇಎದ್ದು, ವಿವಿಧ ಭಕ್ಷ್ಯಭೋಜ್ಯಗಳನ್ನು ಕೈಯಿಂದುಟ್ಟಿ ಭೀಮನಿಗೆ ಉಣಿಸಹತ್ತಿದನು. ಯಾವ ಕಪಟವನ್ನೂ ಅರಿಯದ ಭೀಮನಾದರೂ ಯಥೇಚ್ಛವಾಗಿ ಉಂಡನು. ಆಗ ದುರ್ಯೋಧನನು ತನ್ನ ಕೆಲಸವಾಯಿತೆಂದು ಮನಸ್ಸಿನಲ್ಲಿ ನಗುತ್ತ, ತಾನು ಧನ್ಯನಾದೆನೆಂದು ಆನಂದಪಡತೊಡಗಿದನು. ಆಮೇಲೆ ಅವರ ಜಲಕ್ರೀಡೆಗೆ ಆರಂಭವಾಯಿತು. ಯಥೇಚ್ಛ ಜಲಕ್ರೀಡೆ ಮಾಡಿದಬಳಿಕ ಅವರು ಸ್ವಚ್ಛವಸ್ತ್ರಗಳನ್ನುಟ್ಟುಕೊಂಡು ಅಲಂಕಾರಗಳನ್ನು ಧರಿಸಿದರು. ಅವರು ಹಲವುಪ್ರಕಾರದ ವಿಹಾರಗಳನ್ನು ಮಾಡಿ ದಣಿದದ್ದರಿಂದ, ಆ ಕ್ರೀಡಾಮಂದಿರದಲ್ಲಿಯೇ ಮಲಗಿಕೊಳ್ಳಬೇಕೆಂದು ನಿಶ್ಚಯಿಸಿ, ತಮತಮಗೆ ಸುಖತೋರುವಲ್ಲಿ ಅವರು ಮಲಗಿಕೊಂಡರು. ಭೀಮನು ಎಲ್ಲರಿಗಿಂತಲೂ ಹೆಚ್ಚು ಗುದುಮುರಿಗೆ ಹಾಕಿದ್ದರಿಂದ ದಣಿದು, ತಂಗಾಳಿಬೀಸುತ್ತಿರುವ ಗಂಗಾತೀರದಲ್ಲಿಯೇ ಮಲಗಿಕೊಂಡನು. ಮೊದಲೇ ದಣಿದವನು, ಮೇಲೆ ತಂಗಾಳಿ, ಅದರಲ್ಲಿ ಕಾಲಕೂಟವಿಷದ ಅಮಲು

ಹೀಗಾಗಿ ಭೀಮನು ಆ ಗಂಗಾತೀರದಲ್ಲಿ ಮೃತಪ್ರಾಯನಾಗಿ ಬಿದ್ದುಕೊಂಡನು. ಆಗ ದುರ್ಯೋಧನನು ಬಳ್ಳಿ ಬಡಕಲುಗಳಿಂದ ಆತನನ್ನು ಬಿಗಿದು ಗಂಗೆಯಲ್ಲಿ ನೂಕಿಬಿಟ್ಟನು.

ಹೀಗೆ ಗಂಗೆಯಲ್ಲಿ ಬಿದ್ದ ಭೀಮನು ನಾಗಲೋಕದಲ್ಲಿ ಇಳಿಯಲು, ಸರ್ಪಗಳ ಮರಿಗಳ ಮೇಲೆ ಅವನ ಮೈಭಾರವು ಬಿದ್ದು ಅವು ಜಿಬ್ಬಿಯಾಗಿ ಹೋದವು. ಆಗ ಭಯಂಕರವಿಷದ ಸರ್ಪಗಳು ಸಿಟ್ಟಿನಿಂದ ಭೀಮನನ್ನು ಕಡಿಯಹತ್ತಲು, ಅದೊಂದು ಭೀಮನಿಗೆ ಉಪಕಾರವೇ ಆದಂತಾಗಿ, ಅವನ ಎಂದೂ ಇಳಿಯದಂತಹ ಕಾಲಕೂಟವಿಷವು ಸರ್ಪಗಳ ವಿಷದಿಂದ ತಾನಾಗಿ ಇಳಿಯಿತು. ಆಗ ಭೀಮನು ಎಚ್ಚತ್ತು ಸರ್ಪಗಳ ಸಮಾಚಾರವನ್ನು ಚನ್ನಾಗಿ ತೆಗೆದುಕೊಂಡನು. ಉಳಿದ ಸರ್ಪಗಳು ಅಂಜಿ ನಾಗಲೋಕದ ರಾಜನಾದ ವಾಸುಕಿಯಬಳಿಗೆ ಹೋಗಿ ಭೀಮನನ್ನು ತೋರಿಸಿ—"ಮಹಾರಾಜ, ಈತನನ್ನು ಯಾರೋ ಬಿಗಿದುಕಟ್ಟಿ ನೀರಲ್ಲಿ ಮುಣುಗಿಸಿರಬಹುದು. ಈತನು ನಿಶ್ಚೇಷ್ಟನಾಗಿಯೇ ನಮ್ಮ ಲೋಕಕ್ಕೆ ಇಳಿದನು. ಈತನ ಹೊಟ್ಟೆಯಲ್ಲಿ ವಿಷವು ಹೋಗಿರಬಹುದಾಗಿ ನಮಗೆ ತರ್ಕವಾಗುತ್ತದೆ. ಅಂತೇ ನಮ್ಮ ವಿಷದಿಂದ ಈತನಿಗೆ ಬಾಧೆಯಾಗದೆ, ಆ ವಿಷವು ಇಳಿದು ಈತನು ಎಚ್ಚತ್ತಿರುವನು. ಇನ್ನು ಈತನು ಯಾರೆಂಬದನ್ನು ನೀವೇ ವಿಚಾರಿಸಬೇಕು." ಎಂದು ಹೇಳಲು, ಭೀಮನು ವಾಸುಕಿಗೆ ಹೇಳಿದ ವೃತ್ತಾಂತದ ಮೇಲಿಂದ, ಕುಂತಿಯ ತಂದೆಯಾದ ಶೂರನಿಗೆ ವಾಸುಕಿಯು ಮಾತಾಮಹ (ತಾಯಿಯತಂದೆ) ಎಂಬುದು ಗೊತ್ತಾಯಿತು. ಆಗ ವಾಸುಕಿಯು ಸಂತೋಷಪಟ್ಟು ತನ್ನ ಮೊಮ್ಮಗನಾದ ಶೂರನಿಗೆ ಮೊಮ್ಮಗನಾಗಿರುವ ಭೀಮನನ್ನು ಆಲಿಂಗಿಸಿ, ಸಾವಿರ ನಾಗಗಳ ಸಾಮರ್ಥ್ಯದ ರಸವನ್ನು ತುಂಬಿಟ್ಟದ್ದ ಕುಂಡಗಳನ್ನು ಆತನಿಗೆ ತೋರಿಸಿ, ಬೇಕಾದಷ್ಟು ರಸವನ್ನು ಕುಡಿದು ಬಲಶಾಲಿಯಾಗೆಂದು ಹೇಳಿದನು. ಆಗ ಭೀಮನು ಶುಚಿರ್ಭೂತನಾಗಿ ಪೂರ್ವಕ್ಕೆ ಮೋರೆಮಾಡಿ ಕುಳಿತು, ಒಂದರಹಿಂದೊಂದರಂತೆ ಎಂಟುಕುಂಡಗಳ ರಸವನ್ನು ಕುಡಿದು ಹಾಸಿಗೆಹಾಕಿ ಸ್ವಸ್ಥವಾಗಿ ಮಲಗಿಕೊಂಡನು.

**೧೨೯ನೇ ಅಧ್ಯಾಯ — ಭೀಮನ ಪುನರಾಗಮನ:—** ಇತ್ತ ಕ್ರೀಡಾಮಂದಿರದಲ್ಲಿ ಮಲಗಿದ್ದ ಕೌರವರೂ, ಭೀಮನ ಹೊರತು ಉಳಿದ



ವಿಷಪ್ರಯೋಗದಿಂದ ಮೂರ್ಛಿತನಾದ ಭೀಮನನ್ನು ಕಟ್ಟಿ ಮಡುವಿನಲ್ಲಿ ಹಾಕಿದ್ದು.

ಪಾಂಡವರೂ ನಿದ್ದೆ ಮಾಡಿ ಎದ್ದರು. ಭೀಮನು ಮುಂದೆ ಹೋಗಿರಬಹು ದೆಂದು ತಿಳಿದು ಯುಧಿಷ್ಠಿರನೇ ಮೊದಲಾದ ನಾಲ್ವರೂ ಹಸ್ತಿನಾವತಿಗೆ ಹೊರಟರು. ಭೀಮನು ಇಲ್ಲದಹಾಗಾದದ್ದರಿಂದ ದುರ್ಯೋಧನನು ಸಂ ತೋಷಪಟ್ಟು, ತಮ್ಮಂದಿರೊಡನೆ ಹಸ್ತಿನಾವತಿಗೆ ಹೊರಟನು. ಯುಧಿ ಷ್ಠಿರನು ತನ್ನಂತೆ ಎಲ್ಲರೂ ಸರಳರೆಂದು ತಿಳಿಯುವ ಸ್ವಭಾವದವನಾಗಿ ದ್ದರೂ, ಆತನಿಗೆ ಅಂದು ದುರ್ಯೋಧನನ ವಿಷಯವಾಗಿ ಸಂಶಯವು ಉತ್ಪನ್ನವಾಯಿತು. ಆತನು ಕುಂತಿಯ ಬಳಿಗೆಹೋಗಿ–"ಅವ್ವಾ, ಭೀಮನು ಎಲ್ಲಿರುವನು? ಆತನು ಮುಂದೆ ಹೋಗಿರಬಹುದೆಂದು ನಾವು ಬಂದೆವು; ಆದರೆ ಆತನು ಎಲ್ಲಿಯೂ ಕಾಣುವದಿಲ್ಲವಲ್ಲ? ಆ ಸಮರ್ಥ ಭೀಮನನ್ನು ನೀನು ಎಲ್ಲಿಗಾದರೂ ಕಳಿಸಿರುವೆಯೋ ಏನು ? ಆ ಶೂರಬಾಲಕನ ಸಂಬಂ ಧದಿಂದ ನನಗೆ ಸಂಶಯಬಂದಿದೆ ಆತನು ಮಲಗಿದಂತೆ ನನಗೆ ತೋರು ವದಿಲ್ಲ. ಆತನನ್ನು ಯಾರೋ ಘಾತಿಸಿದ ಹಾಗೆ ತೋರುತ್ತದೆ," ಎಂದು ಕೇಳಲು, ಕುಂತಿಯು ಗಾಬರಿಯಾಗಿ ಯುಧಿಷ್ಠಿರನಿಗೆ— "ಭೀಮನನ್ನು ನಾನು ಕಂಡಿರುವದಿಲ್ಲ ; ಆತನು ಇಲ್ಲಿಗೆ ಬಂದಿರುವದೂ ಇಲ್ಲ. ನೀನು ತಮ್ಮಂದಿರನ್ನು ಕರಕೊಂಡು ಬೇಗನೆ ಆತನನ್ನು ಹುಡುಕು," ಎಂದು ಹೇಳಿ, ವಿದುರನನ್ನು ಕರೆಸಿ ಭೀಮನು ಇಲ್ಲದಹಾಗಾದ ಸುದ್ದಿಯನ್ನು ಹೇಳಿ ದುರ್ಯೋಧನನನ್ನು ಬಹಳವಾಗಿ ತಿರಸ್ಕರಿಸಿದಳು. ಅದಕ್ಕೆ ವಿದು ರನು—"ದೇವೀ, ನೀನು ಜಾಣಳಾಗಿದ್ದರೆ, ಹೀಗೆ ದುರ್ಯೋಧನನನ್ನು ತಿರಸ್ಕರಿಸಬೇಡ ; ಯಾಕಂದರೆ ಆ ದುಷ್ಟನಿಗೆ ಈ ಸಂಗತಿಯು ಗೊತ್ತಾ ದರೆ ನಿನ್ನ ಉಳಿದ ಮಕ್ಕಳನ್ನು ನಾಶಮಾಡಬಹುದು. ನಿನ್ನ ಮಕ್ಕಳೆಲ್ಲರೂ ದೀರ್ಘಾಯುಷಿಗಳಿರುವರೆಂದು ಒಬ್ಬ ದೊಡ್ಡ ಮುನಿಯು ನನ್ನಮುಂದೆ ಹೇಳಿರುವನು ; ಆದ್ದರಿಂದ ನಿನ್ನಮಗ ಭೀಮನು ಸುರಕ್ಷಿತ ಬಂದು ನಿನಗೆ ಸುಖಕೊಡುವನು," ಎಂದು ಹೇಳಿದನು.

ಈ ಮೇರೆಗೆ ವಿದ್ವಾಂಸನಾದ ಆ ವಿದುರನು ಹೇಳಿ ಮನೆಗೆ ಹೋದನು. ಕುಂತಿಯು ಚಿಂತೆಯಿಂದ ಮಕ್ಕಳೊಡನೆ ಇರತೊಡಗಿದಳು. ಇತ್ತ ನಾಗಲೋಕದಲ್ಲಿ ಬಲವರ್ಧಕ ರಸಕುಡಿದು ಮಲಗಿದ ಭೀಮನು ಎಂಟು ದಿವಸಗಳಮೇಲೆ ಎದ್ದನು. ಅಷ್ಟರಲ್ಲಿ ಆತನು ಕುಡಿದಿದ್ದ ರಸ

ವೆಲ್ಲವೂ ಪಚನವಾಗಿ ಆತನು ಅಳತೆಯಿಲ್ಲದಷ್ಟು ಬಲಶಾಲಿಯಾದನು. ಆಗ ನಾಗಗಳು ಆತನನ್ನು ಕುರಿತು—"ಎಲೈ ಭವ್ಯಪುರುಷಾ, ಸಹಸ್ರ ನಾಗ ಬಲವುಳ್ಳವನಾಗಿರುವ ನಿನ್ನ ಮುಂದೆ ಯುದ್ಧದಲ್ಲಿ ಯಾರೂ ನಿಲ್ಲಲಾರರು. ಇನ್ನು ಈ ಉತ್ತಮವಾದ ಜಲದಲ್ಲಿ ಸ್ನಾನಮಾಡಿ ನಿನ್ನ ಮನೆಗೆ ಹೋಗು; ಯಾಕಂದರೆ ನಿನ್ನ ವಿಯೋಗದಿಂದ ನಿನ್ನ ಅಣ್ಣತಮ್ಮಂದಿರಿಗೆ ಬಹಳ ದುಃಖವಾಗುತ್ತಿರಬಹುದು," ಅನ್ನಲು, ಭೀಮನು ಸ್ನಾನಮಾಡಿ ಶುಭ್ರ ವಸ್ತ್ರವನ್ನುಟ್ಟು ಬಿಳಿಯ ಹೂಗಳ ಮಾಲೆಯನ್ನು ಹಾಕಿಕೊಂಡು, ವಿಷದ ಮೇಲೆ ಅತ್ಯುತ್ತಮ ಔಷಧವಾಗಿರುವ ಸ್ವಾದಿಷ್ಟ ವನಸ್ಪತಿಯನ್ನು ಹಾಕಿ ಮಾಡಿರುವ ಮಿಷ್ಟಾನ್ನವನ್ನುಂಡನು. ಬಳಿಕ ನಾಗರು ಭೀಮನನ್ನು ಉತ್ತಮೋತ್ತಮವಾದ ಅಲಂಕಾರಗಳಿಂದ ಅಲಂಕರಿಸಿ, ಆಶೀರ್ವದಿಸಿ ಆತನನ್ನು ಎತ್ತಿಕೊಂಡು ಆತನ ಪೂರ್ವದ ಆ ಕ್ರೀಡಾಮಂದಿರದ ಸ್ಥಳದಲ್ಲಿ ಇಳಿಸಿ ಗುಪ್ತರಾದರು. ಬಳಿಕ ಭೀಮನು ಕುಂತಿಯ ಬಳಿಗೆ ಹೋಗಿ ಆಕೆಯನ್ನೂ, ಅಣ್ಣನಾದ ಯುಧಿಷ್ಠಿರನನ್ನೂ ನಮಸ್ಕರಿಸಿ, ತಮ್ಮಂದಿರ ನೆತ್ತಿಯನ್ನು ಮೂಸಿನೋಡಿದನು. ಬಳಿಕ ತಾಯಿಯೂ, ಅಣ್ಣತಮ್ಮಂದಿರೂ ಭೀಮನನ್ನು ಆಲಿಂಗಿಸಿದರು. ದುರ್ಯೋಧನನ ದುಷ್ಟತನವನ್ನೂ, ನಾಗರಿಂದ ತನಗಾದ ಉಪಕೃತಿಯನ್ನೂ ಒಂದುಳಿಯದಂತೆ ಭೀಮನು ಹೇಳಿದನು. ಆಗ ಯುಧಿಷ್ಠಿರನು ಭೀಮನಿಗೆ—"ಈಗ ಆದದ್ದನ್ನು ಯಾರ ಮುಂದೆಯೂ ಹೇಳಬೇಡ," ಎಂದು ಹೇಳಿ, ತಾವೆಲ್ಲರೂ ಬಹು ಜಾಗರೂಕತೆಯಿಂದ ಇರತೊಡಗಿದರು; ಆದರೂ ದುರ್ಯೋಧನನು ಪಾಂಡವರ ಪ್ರೀತಿಯ ಸಾರಥಿಯನ್ನು ಬಲತ್ಕಾರದಿಂದ ಕೊಂದುಬಿಟ್ಟದ್ದಲ್ಲದೆ, ಭೀಮನಿಗೆ ಉಗ್ರತರ ಕಾಲಕೂಟ ವಿಷವನ್ನು ಪುನಃ ಹಾಕಿದನು. ಈ ಸುದ್ದಿಯನ್ನು ಧೃತರಾಷ್ಟ್ರನಿಂದ ವೈಶ್ಯಸ್ತ್ರೀಯಲ್ಲಿ ಹುಟ್ಟಿದ ಯುಯುತ್ಸುವು, ಪಾಂಡವರಿಗೆ ಕಲ್ಯಾಣವಾಗಬೇಕೆಂದು ಅವರ ಮುಂದೆ ಹೇಳಿದನು; ಆದರೆ ವಜ್ರದೇಹಿಯಾದ ಭೀಮನಿಗೆ ಆ ವಿಷವು ಬಾಧಿಸದೆ ಅದು ಆತನ ಹೊಟ್ಟೆಯಲ್ಲಿ ಪಚನವಾಗಿ ಹೋಯಿತು!

ಈಮೇರೆಗೆ ದುರ್ಯೋಧನ, ಕರ್ಣ, ಶಕುನಿ ಇವರು ಮೂವರು ಅನೇಕ ಉಪಾಯುಗಳಿಂದ ಪಾಂಡವರನ್ನು ಕೊಲ್ಲಲು ಯತ್ನಿಸಿದರು; ಆದ

ನ್ನೆಲ್ಲ ಪಾಂಡವರು ಅರಿತಿದ್ದರು; ಕೌರವರಮೇಲೆ ಅವರ ಸಿಟ್ಟೂ ಇತ್ತು; ಆದರೆ ವಿದುರನ ಬುದ್ಧಿವಾದದಿಂದ ಅವರು ತಮ್ಮ ಸಿಟ್ಟನ್ನು ಹೊರಗೆ ತೋರಗೊಡುತ್ತಿದ್ದಿಲ್ಲ. ತನ್ನ ಮಕ್ಕಳು ಉನ್ಮತ್ತರಾಗಿ ಕೆಟ್ಟಕೆಟ್ಟ ಕೆಲಸಮಾಡುವದನ್ನು ನೋಡಿ ಧೃತರಾಷ್ಟ್ರನು, ವೇದಶಾಸ್ತ್ರಗಳಲ್ಲಿ ನಿಷ್ಣಾತರಾದ. ಹಾಗು ಶರಸ್ತಂಬದಲ್ಲಿ ಹುಟ್ಟಿದ ಕೃಪಾಚಾರ್ಯರ ಬಳಿಯಲ್ಲಿ ವಿದ್ಯೆ ಕಲಿಯುವದಕ್ಕಾಗಿ ಅವರನ್ನು ಇಟ್ಟನು. ಆಗ ಕೃಪಾಚಾರ್ಯರು ಯಾವತ್ತು ಕೌರವರಿಗೆ ಧನುರ್ವಿದ್ಯೆಯನ್ನು ಕಲಿಸತೊಡಗಿದರು.

**೧೩೦ನೇ ಅಧ್ಯಾಯ - ಕೃಪಾಚಾರ್ಯರ ಜನ್ಮವೃತ್ತ**—ಜನಮೇಜಯನು ವೈಶಂಪಾಯನನನ್ನು ಕುರಿತು—"ಮಹಾರಾಜ, ಕೃಪಾಚಾರ್ಯರ ಜನ್ಮವೃತ್ತವನ್ನೂ, ಅವರಿಗೆ ಅಸ್ತ್ರಗಳು ಹೇಗೆ ದೊರೆತವೆಂಬದನ್ನೂ ದಯಮಾಡಿ ಹೇಳಬೇಕು,"ಎಂದು ಕೇಳಿಕೊಳ್ಳಲು, ವೈಶಂಪಾಯನನು— "ಜನಮೇಜಯಾ, ಕೇಳು. ಗೌತಮನೆಂಬ ಒಬ್ಬ ದೊಡ್ಡಮುನಿಯು ಇದ್ದನು. ಆತನ ಮಗನು ಗೌತಮಗೋತ್ರದ ಭರದ್ವಾಜನೆಂಬವನು. ಆತನು ಶರಗಳಿಂದ ಸಹಿತನಾಗಿ ಹುಟ್ಟಿದ್ದರಿಂದ, ಆತನಿಗೆ ಶರದ್ವಾನನೆನ್ನುತ್ತಿದ್ದರು ಆತನ ಬುದ್ಧಿಯ ಪ್ರವೇಶವು ಧನುರ್ವಿದ್ಯೆಯಲ್ಲಿ ಆದಂತೆ ವೇದಾಧ್ಯಯನದಲ್ಲಿ ಆಗುತ್ತಿದ್ದಿಲ್ಲ ಬ್ರಹ್ಮಚರ್ಯವನ್ನು ಪಾಲಿಸುತ್ತಿದ್ದ ಉಳಿದ ತಪಸ್ವಿಗಳು ತಪಸ್ಸಿನಿಂದ ವೇದಾಧ್ಯಯನವನ್ನು ಮಾಡುತ್ತಿದ್ದರೆ, ಭರದ್ವಾಜನು ತಪಸ್ಸಿನಿಂದ ಸಂಪೂರ್ಣ ಅಸ್ತ್ರಗಳನ್ನು ಸಂಪಾದಿಸಿದನು. ಹೀಗೆ ಶರದ್ವಾನನು ಅಸ್ತ್ರವಿದ್ಯೆಯಲ್ಲಿ ನಿಪುಣನಾದದ್ದಲ್ಲದೆ, ತಪೋಬಲವನ್ನು ಹೆಚ್ಚಿಸಿಕೊಂಡನು. ಅದನ್ನು ನೋಡಿ, ಇಂದ್ರನು ಅಂಜಿ "ಜಾನಪದಿ" ಎಂಬ ಅಪ್ಸರೆಯನ್ನು ಶರದ್ವಾನನ ತಪಸ್ಸು ಕೆಡಿಸುವದಕ್ಕಾಗಿ ಕಳಿಸಿದನು. ಶರದ್ವಾನನು ಅಪ್ಸರೆಯ ರೂಪಕ್ಕೆ ಮೋಹಿತನಾಗಲು, ಆತನ ಕೈಯೊಳಗಿನ ಧನುರ್ಬಾಣಗಳು ಕಳಚಿಬಿದ್ದವು; ಕೈಕಾಲುಗಳು ನಡುಗಹತ್ತಿದವು; ಆದರೂ ಆ ಬ್ರಾಹ್ಮಣನು ಮಹಾಜ್ಞಾನಿಯೂ, ತಪೋಬಲಸಂಪನ್ನನೂ ಆದದ್ದರಿಂದ ವಿವೇಕಿಯಾಗಿ ಆತ್ಮನಿಗ್ರಹ ಮಾಡಿದನು. ಆದರೆ ಎಲೈ ರಾಜಾ, ಒಮ್ಮೆಲೆ ಆತನ ಮನಸ್ಸು ಚಂಚಲವಾದದ್ದರಿಂದ ಅವನ ವೀರ್ಯವು ಪತನಹೊಂದಿ, ಶರಗಳ ಪೆಂಡೆಯಮೇಲೆ ಬಿದ್ದಿತು. ಆದರೆ ಅದೇನೂ ಗೊತ್ತಾ

ಗದೆ ಆ ಬ್ರಾಹ್ಮಣನ ಆ ಬಿಲ್ಲು ಬಾಣಗಳನ್ನೂ, ಆಶ್ರಮವನ್ನೂ, ಅಪ್ಸರೆಯನ್ನೂ ಬಿಟ್ಟು ಹೊರಟುಹೋದನು. ಇತ್ತ ಆ ಶರಗಳ ಪೆಂಡೆಯಮೇಲೆ ಬಿದ್ದ ವೀರ್ಯದಲ್ಲಿ ಎರಡು ಭಾಗಗಳಾಗಿ, ಅವುಗಳಿಂದ ಅವಳಿಜವಳಿ ಹುಡುಗರು ಹುಟ್ಟಿದರು. ಅಷ್ಟರಲ್ಲಿ ಅಕಸ್ಮಾತ್ತಾಗಿ ಶಾಂತನುವು ಬೇಟೆಗೆ ಬಂದಿರಲು, ಆತನ ಒಬ್ಬ ದಂಡಾಳುವು ಆ ಅವಳಿಜವಳಿ ಹುಡುಗರನ್ನು ತಂದು ರಾಜನಿಗೆ ಒಪ್ಪಿಸಿದನು. ಬಿಲ್ಲು, ಬಾಣ, ಕೃಷ್ಣಾಜಿನ ಇವುಗಳ ಮೇಲಿಂದ ಈ ಹುಡುಗರು ಶರದ್ವಾನನ ಮಕ್ಕಳೆಂಬದು ಆ ದಂಡಾಳುವಿಗೆ ಗೊತ್ತಾಗಿತ್ತು. ಆ ಹುಡುಗರನ್ನು ಶಾಂತನುವು ಮನೆಗೆ ತಕ್ಕೊಂಡುಹೋಗಿ ಕೃಪೆಯಿಂದ ಅವನ್ನು ರಕ್ಷಿಸಿದ್ದರಿಂದ, ಅವುಗಳಲ್ಲಿ ಗಂಡುಹುಡುಗನಿಗೆ ಕೃಪನೆಂತಲೂ, ಹೆಣ್ಣು ಹುಡುಗಿಗೆ ಕೃಪೆ ಯೆಂತಲೂ ಹೆಸರುಗಳುಂಟಾದವು. ಈ ಸಂಗತಿಯು ಶರದ್ವಾನನಿಗೆ ತಪಸ್ಸಾಮರ್ಥ್ಯದಿಂದ ಗೊತ್ತಾಗಲು, ಆತನು ಶಾಂತನುವಿನ ಬಳಿಗೆ ಬಂದು, ತನ್ನ ಮಕ್ಕಳ ಗೋತ್ರ ಮೊದಲಾದವನ್ನು ಹೇಳಿ, ಕೃಪನಿಗೆ ನಾಲ್ಕುಪ್ರಕಾರದ ಧನುರ್ವೇದವನ್ನೂ, * ನಾನಾ ಪ್ರಕಾರದ ಶಾಸ್ತ್ರಗಳನ್ನೂ, ಯಾವತ್ತು ಗುಪ್ತವಿದ್ಯೆಗಳನ್ನೂ ಒಂದೂ ಉಳಿಯದಂತೆ ಹೇಳಿದನು. ಮುಂದೆ ಕೃಪನು ಬೇಗನೆ ಆಚಾರ್ಯ ಪದವಿಯನ್ನು ಹೊಂದಿದನು. ಕೃಪಾಚಾರ್ಯರ ಬಳಿಯಲ್ಲಿ ಕೌರವರೂ, ಪಾಂಡವರೂ, ಯಾದವರೂ, ಬೇರೆ ರಾಜಮನೆತನದವರೂ ಧನುರ್ವೇದವನ್ನು ಕಲಿತರು.

ದ್ರೋಣಜನ್ಮವೃತ್ತ—ಜನಮೇಜಯಾ, ಹೀಗೆ ಕೌರವಪಾಂಡವರು ಕೃಪಾಚಾರ್ಯರ ಬಳಿಯಲ್ಲಿ ಧನುರ್ವೇದವನ್ನು ಕಲಿಯುತ್ತಿರಲು, ಅಷ್ಟರಿಂದ ಭೀಷ್ಮಾಚಾರ್ಯನು ತೃಪ್ತರಾಗದೆ, ತನ್ನ ಮೊಮ್ಮಕ್ಕಳು ಅಸ್ತ್ರವಿದ್ಯೆಯಲ್ಲಿ ಒಳ್ಳೇ ಪ್ರವೀಣರಾಗಬೇಕೆಂದು ಭರದ್ವಾಜಪುತ್ರನಾದ ದ್ರೋಣಾ

* ನಾಲ್ಕು ಪ್ರಕಾರದ ಧನುರ್ವೇದಗಳೆಂದರೆ, ಶಸ್ತ್ರ-ಅಸ್ತ್ರ-ಪ್ರತ್ಯಸ್ತ್ರ-ಪರಮಾಸ್ತ್ರ ಎಂಬವು. ಶಸ್ತ್ರಗಳೆಂದರೆ ಧನುಸ್ಸಿಗೆ ಹೂಡಿ ಬಿಡುವ ಬಾಣ ಮುಂತಾದವು; ಅಸ್ತ್ರವೆಂದರೆ ಹೂಡಿ ಬಿಡದ ಖಡ್ಗ ಮುಂತಾದವು, ಪ್ರತ್ಯಸ್ತ್ರವೆಂದರೆ ಉಪಸಂಹಾರ ಸಹಿತ ಶಸ್ತ್ರಗಳು; ಪರಮಾಸ್ತ್ರಗಳೆಂದರೆ ಉಪಸಂಹಾರರಹಿತ ಶಸ್ತ್ರಗಳು.

ಬಂದಿರುವನೆಂ'' ದು ವಿದುರನು ಹೇಳಿದನು. ಅದನ್ನು ಕೇಳಿ ಧೃತರಾಷ್ಟ್ರನು- ''ಈ ಕುಂತಿಯ ಮಕ್ಕಳೇ ನನ್ನನ್ನು ರಕ್ಷಿಸುವವರು'' ಎಂದು ನುಡಿದನು.

ಕೆಲಹೊತ್ತಿನಮೇಲೆ ರಂಗಭೂಮಿಯ ಗದ್ದಲವಡಗಿ ಸ್ತಬ್ಧವಾಗಲು, ಅರ್ಜುನನು ತನ್ನ ಅಸ್ತ್ರವಿದ್ಯಾ ಕೌಶಲ್ಯವನ್ನು ತನ್ನ ಗುರುಗಳಾದ ದ್ರೋಣಾಚಾರ್ಯರಿಗೆ ತೋರಿಸತೊಡಗಿದನು. ಆತನು ಅಗ್ನಿಮಂತ್ರದಿಂದ ಅಗ್ನ್ಯಸ್ತ್ರವನ್ನು ಬಿಟ್ಟನು, ವರುಣಾಸ್ತ್ರದಿಂದ ಮಳೆಗರೆದನು, ವಾಯುಮಂತ್ರದಿಂದ ಗಾಳಿಯನ್ನು ಉತ್ಪನ್ನಮಾಡಿದನು, ಪರ್ಜನ್ಯಮಂತ್ರದಿಂದ ಮೋಡಗಳನ್ನು ಹುಟ್ಟಿಸಿದನು, ಭೂಮಿಯ ಮಂತ್ರದಿಂದ ಭೂಮಿಯ ಹೊಟ್ಟೆಯಲ್ಲಿ ಹೊಕ್ಕನು, ಪರ್ವತಮಂತ್ರದಿಂದ ಗುಡ್ಡವನ್ನು ಈಡಾಡಿದನು. ಅಷ್ಟರಲ್ಲಿ ಅಂತರ್ಧಾನಮಂತ್ರದಿಂದ ಗುಪ್ತನಾದನು. ಆ ಗುರುಭಕ್ತನಾದ ಅರ್ಜುನನು ಬಹುಸೂಕ್ಷ್ಮರೀತಿಯಿಂದ ಬಾಣಗಳನ್ನು ಹೊಡೆದು ತೋರಿಸಿದನು ; ತೀರ ಸೂಕ್ಷ್ಮಪದಾರ್ಥಕ್ಕೆ ಗುರಿಯಿಟ್ಟು ಹೊಡೆದು ತೋರಿಸಿದನು ; ತೀರ ಸ್ಥೂಲಪದಾರ್ಥವನ್ನು ಸೀಳಿ ತೋರಿಸಿದನು. ತಿರುಗುತ್ತಿರುವ ಕಬ್ಬಿಣದ ಹಂದಿಯಬಾಯಲ್ಲಿ ಒಂದೇಬಾಣವನ್ನು ಹೊಡೆದಂತೆ, ಒಂದಕ್ಕೊಂದು ಹೊಂದದಿರುವ ಐದುಬಾಣಗಳನ್ನು ಹೊಡೆದು ತೋರಿಸಿದನು. ತೂಗಾಡುತ್ತಿರುವ ಒಂದು ಆಕಳಕೊಂಬಿನ ಪೊಳ್ಳಿನಲ್ಲಿ ಆ ಪರಾಕ್ರಮಿಯಾದ ಅರ್ಜುನನು ಇಪ್ಪತ್ತೊಂದು ಬಾಣಗಳನ್ನು ಹೊಡೆದು ತೋರಿಸಿದನು. ಹೀಗೆ ಹಲವು ಅಸ್ತ್ರಗಳ ಚಾತುರ್ಯವನ್ನೂ, ಖಡ್ಗಪ್ರಯೋಗದ ಚಾತುರ್ಯವನ್ನೂ, ಗದಾಯುದ್ಧದ ಪ್ರಕಾರಗಳನ್ನೂ ರಂಗಭೂಮಿಯಲ್ಲಿ ಅರ್ಜುನನು ತೋರಿಸಿದನು.

ಹೀಗೆ ಅರ್ಜುನನು ತೋರಿಸುವ ಚಮತ್ಕಾರಗಳೆಲ್ಲ ಮುಗಿಯುತ್ತ ಬಂದಿರಲು, ರಂಗಭೂಮಿಯು ಸ್ತಬ್ಧವಾಗಿರುವಾಗ ರಂಗಸ್ಥಳದ ಬಾಗಿಲ ಕಡೆಯಿಂದ ವಜ್ರಾಘಾತದಂತಹ ಸಪ್ಪಳವು ಕೇಳಿಸತೊಡಗಿತು. ''ಇದೇನು ಚಮತ್ಕಾರವೋ ?'' ಎಂದು ಪ್ರೇಕ್ಷಕರು ಬಾಗಿಲಕಡೆಗೆ ನೋಡತೊಡಗಿದರು. ಆಗ ಪಂಚಪಾಂಡವರ ಮಧ್ಯದಲ್ಲಿ ದ್ರೋಣನು ನಿಂತಿದ್ದನು. ಇತ್ತ ಅಶ್ವತ್ಥಾಮನೂ, ನೂರುಜನ ತಮ್ಮಂದಿರೂ ಇವರ ಮಧ್ಯದಲ್ಲಿ ದುರ್ಯೋಧನನು ನಿಂತಿದ್ದನು. ಬಳಿಕ ದ್ವಾರಪಾಲಕರು

ಮಗನು ಹುಟ್ಟಿದ್ದನು. ಆ ಕ್ಷತ್ರಿಯ ಪುತ್ರನು ಯಾವಾಗಲೂ ಭರದ್ವಾಜಾಶ್ರಮಕ್ಕೆ ಬಂದು ದ್ರೋಣನೊಡನೆ ಆಡುತ್ತಿದ್ದನಲ್ಲದೆ, ಅಧ್ಯಯನವನ್ನೂ ಮಾಡುತ್ತಿದ್ದನು. ಮುಂದೆ ಪ್ರುಷತನು ಮರಣಹೊಂದಿದ ಬಳಿಕ ದ್ರುಪದನು ಉತ್ತರಪಾಂಚಾಲ ದೇಶಕ್ಕೆ ಅರಸನಾದನು. ಇತ್ತ ಪರಮ ಪೂಜ್ಯ ಭರದ್ವಾಜಋಷಿಯೂ ಸ್ವರ್ಗಕ್ಕೆ ಹೋಗಿದ್ದನು. ಬಳಿಕ ಮಹಾ ತಪಸ್ವಿಯಾದ ದ್ರೋಣನು ಅಲ್ಲಿಯೇ ಗಂಗಾದ್ವಾರದಲ್ಲಿದ್ದು, ಕಠಿಣ ತಪಸ್ಸನ್ನು ಮಾಡಿ ವೇದಗಳಲ್ಲಿಯೂ, ವೇದಾಂಗಗಳಲ್ಲಿಯೂ ನಿಷ್ಣಾತನಾಗಿ ತಪಸ್ಸಾಮರ್ಥ್ಯದಿಂದ ತನ್ನ ಪಾತಕಗಳನ್ನು ಸುಟ್ಟುಬಿಟ್ಟನು. ಬಳಿಕ ಪಿತೃಗಳ ಆರಾಧನೆಯನ್ನು ಮಾಡಬೇಕೆಂದು ಕೀರ್ತಿಶಾಲಿಯಾದ ಆ ದ್ರೋಣಬ್ರಾಹ್ಮಣನು ಶರದ್ವಾನನ ಮಗಳಾದ ಕೃಪೆಯನ್ನು ಲಗ್ನವಾದನು. ಕೃಪೆಯು ಅಗ್ನಿಹೋತ್ರವೇ ಮೊದಲಾದ ಗೃಹಿಣಿಯ ಧರ್ಮಗಳನ್ನು ಪಾಲಿಸುವದರಲ್ಲಿಯೂ, ಇಂದ್ರಿಯ ನಿಗ್ರಹಮಾಡುವದರಲ್ಲಿಯೂ ಯಾವಾಗಲೂ ತತ್ಪರಳಾಗಿದ್ದಳು. ಆ ಗೌತಮಪುತ್ರಿಗೆ ಅಶ್ವತ್ಥಾಮನೆಂಬ ಒಬ್ಬ ಮಗನು ಹುಟ್ಟಿದನು. ಹುಟ್ಟಿದಕೂಡಲೆ ಆತನು ಉಚ್ಚೈಃಶ್ರವ ಕುದುರೆಯಂತೆ ಒದರಿದನು. ಆಗ ಆಕಾಶದಲ್ಲಿ—"ಈ ಹುಡುಗನ ಧ್ವನಿಯು ಕುದುರೆಯ ಧ್ವನಿಯಂತೆ ನಾಲ್ಕೂಕಡೆಗೆ ಹಬ್ಬಿದ್ದರಿಂದ ಈತನಿಗೆ "ಅಶ್ವತ್ಥಾಮ"ನೆಂಬ ಹೆಸರು ಉಂಟಾಗುವದು" ಎಂಬ ವಾಣಿಯು ಉತ್ಪನ್ನವಾಯಿತು ಅಶ್ವತ್ಥಾಮನನ್ನು ನೋಡಿ ದ್ರೋಣನು ಸಂತೋಷಪಟ್ಟನು

ಮುಂದೆ ದ್ರೋಣನು ಅಲ್ಲಿಯೇ ಇದ್ದು, ಧನುರ್ವೇದವನ್ನು ಅಭ್ಯಾಸಿಸುತ್ತಿರುವಾಗ ಸರ್ವಶಾಸ್ತ್ರಜ್ಞನೂ, ಪರಾಕ್ರಮಿಯೂ, ಶತ್ರುಗಳಿಗೆ ಯಮಸ್ವರೂಪನೂ, ಮಹಾತ್ಮನೂ ಆದ ಪರಶುರಾಮನು ಸರ್ವಸ್ವವನ್ನು ದಾನಮಾಡುವನೆಂಬದನ್ನು ಕೇಳಿ ದ್ರೋಣನು ಮಹೇಂದ್ರಪರ್ವತದಲ್ಲಿದ್ದ ಆ ಪರಶುರಾಮನ ಬಳಿಗೆಹೋಗಿ ಆತನನ್ನು ನಮಸ್ಕರಿಸಿ—"ಮಹಾತ್ಮನೆ, ಅಂಗಿರಸಕುಲೋತ್ಪನ್ನನಾದ ಭರದ್ವಾಜ ಪುತ್ರ ದ್ರೋಣಬ್ರಾಹ್ಮಣನು ನಾನು ಬಂದಿದ್ದೇನೆ" ಎಂದು ಹೇಳಿದನು. ಆಗ ಪರಶುರಾಮನು—

ಪರಶುರಾಮ— ಎಲೈ ಶ್ರೇಷ್ಠಬ್ರಾಹ್ಮಣಾ, ನಿನಗೆ ಸ್ವಾಗತವು ನಿನ್ನ ಇಚ್ಛೆಯೇನಿರುವದು ?

ದ್ರೋಣ—ಪರಮ ತಪೋನಿಷ್ಠರೇ, ಶತ್ರುಗಳನ್ನು ಸಂಹರಿಸುವವರೂ, ತೇಜಸ್ವಿ ಪುರುಷರಲ್ಲಿ ಪರಮಶ್ರೇಷ್ಠರೂ ಆದ ತಾವು ಹಲವು ಪ್ರಕಾರದ ಸಂಪತ್ತುಗಳನ್ನು ಕೊಡುತ್ತಿರುವವರಿಂದ, ನಾನು ತಮ್ಮ ಬಳಿಯಲ್ಲಿ ಅಪಾರವಾದ ದ್ರವ್ಯವನ್ನು ಬೇಡುವೆನು.

ಪರಶುರಾಮ—ಎಲೈ ತಪಸ್ವಿಯಾದ ಬ್ರಾಹ್ಮಣನೇ, ನನ್ನಲ್ಲಿದ್ದ ಸಂಪತ್ತನ್ನೆಲ್ಲ ನಾನು ಬ್ರಾಹ್ಮಣರಿಗೆ ದಾನಮಾಡಿಬಿಟ್ಟಿರುವೆನು. ಅದರಂತೆ, ಈ ಸಮುದ್ರವಲಯಾಂಕಿತಪೃಥ್ವಿಯನ್ನು ಗ್ರಾಮ-ಪುರ-ರಾಜಧಾನಿಗಳೊಡನೆ ಕಶ್ಯಪರಿಗೆ ಕೊಟ್ಟುಬಿಟ್ಟಿರುವೆನು. ಈಗ ನನ್ನ ಬಳಿಯಲ್ಲಿ ಈ ನನ್ನ ಶರೀರವೂ, ಉತ್ತಮೋತ್ತಮ ಶಸ್ತ್ರಗಳೂ ಮಾತ್ರ ಉಳಿದಿರುವವು. ಅವೆರಡನ್ನೂ ಈಗ ನಿನ್ನಮುಂದೆ ಇಟ್ಟಿರುವೆನು. ಅವರ ಪೈಕಿ ಶರೀರವೂ, ಶಸ್ತ್ರವೂ, ಇವುಗಳಲ್ಲಿ ಯಾವದು ಬೇಕು ಬೇಗನೆ ಹೇಳು.

ದ್ರೋಣ—ಬಿಡುವ, ಹಾಗು ಹಿಂದಕ್ಕೆ ಕರೆಯುವ ಸಾಮರ್ಥ್ಯ ಗುಪ್ತಮಂತ್ರಗಳೊಡನೆ ನಿಮ್ಮಲ್ಲಿರುವ ಸಮಸ್ತ ಶಸ್ತ್ರಾಸ್ತ್ರಗಳನ್ನು ನನಗೆ ಕೊಡಬೇಕು.

ಜನಮೇಜಯಾ, ಆಗ ಪರಶುರಾಮನು ಹಾಗೇಆಗಲೆಂದು ಹೇಳಿ, ಆತನಿಗೆ ಎಲ್ಲ ಶಸ್ತ್ರಾಸ್ತ್ರಗಳನ್ನು ಕೊಟ್ಟನು, ಮತ್ತು ಮಂತ್ರಾನುಷ್ಠಾನದ ರಹಸ್ಯವನ್ನು ಯಥಾಸ್ಥಿತವಾಗಿ ಹೇಳಿ, ತನ್ನ ಸಮಸ್ತ ಧನುರ್ವೇದವನ್ನು ದ್ರೋಣನಿಗೆ ಅರ್ಪಿಸಿದನು. ಅವನ್ನೆಲ್ಲ ಅಂಗೀಕರಿಸಿದ ಅಸ್ತ್ರವಿದ್ಯಾ ನಿಪುಣ ದ್ರೋಣನು ಪರಮ ಸಂತೋಷದಿಂದ ತನ್ನ ಬಾಲಮಿತ್ರನಾದ ದ್ರುಪದನಬಳಿಗೆ ಹೋದನು.

**೧೨೧ನೇ ಅಧ್ಯಾಯ—ದ್ರೋಣ ದ್ರುಪದರ ವೈರೋತ್ಪತ್ತಿ—** ಹೀಗೆ ಮಹಾಪರಾಕ್ರಮಿಯಾದ ದ್ರೋಣನು ದ್ರುಪದನಬಳಿಗೆ ಬಂದು ಆ ರಾಜನನ್ನು ಕುರಿತು—"ಎಲೈ ರಾಜನೇ, ನಿನ್ನ ಮಿತ್ರನಾದ ದ್ರೋಣನು ಬಂದಿರುವೆನು" ಎಂದು ಹೇಳಲು, ದ್ರುಪದನಿಗೆ ಸಿಟ್ಟುಬಂದಿತು. ಐಶ್ವರ್ಯಮದದಿಂದ ಎಚ್ಚರದಪ್ಪಿದ ಆ ರಾಜನು ಕಣ್ಣುಕೆಂಪಗೆಮಾಡಿಕೊಂಡು

ಸಂತಾಪದಿಂದ ಹುಬ್ಬುಗಂಟಿಕ್ಕಿ—"ಎಲೈ ಬ್ರಾಹ್ಮಣಾ, ನಿನ್ನ ಬುದ್ಧಿಗೆ ಜ್ಞಾನಸಂಸ್ಕಾರವಾದಂತೆ ತೋರುವದಿಲ್ಲ. ಅಂತೇ, "ನಾನು ನಿನ್ನ ಮಿತ್ರನು" ಎಂದು ಬಡಬಡಿಸುತ್ತೀ. ಎಲಾ ಹುಚ್ಚಾ, ಸಂಪತ್ತಿನ ಸಂಪರ್ಕವಿಲ್ಲದ ನಿನ್ನಂಥವನೊಡನೆ ನಮ್ಮಂಥ ದೊಡ್ಡ ದೊಡ್ಡ ಅರಸರ ಸ್ನೇಹವೆಲ್ಲಿಯಾದರೂ ಉಂಟಾಗುವದೇ? ದಿವಸವಾದಾದಂತೆ ಮನುಷ್ಯನು ಕ್ಷೀಣನಾಗುವ ಚಂದದಿಂದ ಮಿತ್ರತ್ವವೂ ಕ್ಷೀಣವಾಗುತ್ತದೆ. ಹಿಂದಕ್ಕೆ ನಿನ್ನಲ್ಲಿ ಸಾಮರ್ಥ್ಯವಿದ್ದದ್ದರಿಂದ ನಿನ್ನೊಡನೆ ನನ್ನ ಸ್ನೇಹವಿತ್ತು. ಜಗತ್ತಿನಲ್ಲಿ ಯಾರ ಅಂತಃಕರಣದಲ್ಲಿಯೂ ಸ್ನೇಹಭಾವವು ಕಡಿಮೆಯಾಗದೆ ಒಂದೇ ಸಮನೆ ಇರುವದಿಲ್ಲ, ಯಾಕಂದರೆ ದಿನಗಳು ಕ್ರಮಿಸಿದಂತೆ ಮಿತ್ರನು ಹೊರಗಿನವನಾಗಿ ತೋರುವನು. ಒಮ್ಮೊಮ್ಮೆ ಕೆಲವೊಂದು ಕಾರಣದಿಂದ ಮನಸ್ಸು ಬೇಸತ್ತು ಶತ್ರುಭಾವವೂ ಉತ್ಪನ್ನವಾಗುತ್ತದೆ ಅಂದಬಳಿಕ ನಿನ್ನ ಹಳೇಮಿತ್ರತ್ವವನ್ನು ಕಟ್ಟಿಕೊಂಡು ನೀನೇನು ಮಾಡುವೆ? ಆದನ್ನು ಬಿಟ್ಟುಬಿಡು ಬಡವರಿಗೂ-ಶ್ರೀಮಂತರಿಗೂ, ವಿದ್ವಾಂಸರಿಗೂ-ಅವಿದ್ವಾಂಸರಿಗೂ, ಶೂರರಿಗೂ-ಹೇಡಿಗಳಿಗೂ ಸ್ನೇಹವುಂಟಾಗುವದು ಸರ್ವಥಾ ಶಕ್ಯವಿರುವದಿಲ್ಲ. ಸ್ನೇಹವಾಗಲಿ, ಶರೀರಸಂಬಂಧವಾಗಲಿ ಸಮಾನಸ್ಕಂಧರಲ್ಲಿ ಆಗುತ್ತಿರುತ್ತದೆ

ದ್ರುಪದನ ಈ ಉದ್ಧಟತನದ ಮಾತುಗಳನ್ನು ಕೇಳಿ ಪರಾಕ್ರಮಿಯಾದ ದ್ರೋಣನು ಸಂತಾಪಗೊಂಡು, "ಈ ಗರ್ವಿಷ್ಠನ ಸೇಡು ತೀರಿಸಿಯೇತೀರಬೇಕೆಂ"ದು ನಿಶ್ಚಯಿಸಿ, ಹಸ್ತಿನಾವತಿಗೆಬಂದು ಕೃಪಾಚಾರ್ಯರ ಬಳಿಯಲ್ಲ ಗುಪ್ತರೀತಿಯಿಂದ ವಾಸಿಸಹತ್ತಿದನು. ಕೃಪಾಚಾರ್ಯರ ತರುವಾಯ ದ್ರೋಣಪುತ್ರ ಅಶ್ವತ್ಥಾಮನು ಕೌರವಪಾಂಡವರಿಗೆ ಅಸ್ತ್ರವಿದ್ಯೆಯನ್ನು ಕಲಿಸುತ್ತಿದ್ದರೂ, ಅವರು ದ್ರೋಣನನ್ನು ಗುರುತಿಸಲಿಲ್ಲ. ಹೀಗೆಯೇ ದ್ರೋಣನು ಗುಪ್ತರೀತಿಯಿಂದ ಇರುತ್ತಿರಲು, ಒಂದುದಿನ ಕೌರವಪಾಂಡವರು ಬಯಲಲ್ಲಿ ಚಿಣಿಫಣಿ ಆಡುತ್ತಿರುವಾಗ, ಅವರ ಚಿಣಿಯು ಒಂದು ಹಾಳುಬಾವಿಯಲ್ಲ ಬಿದ್ದಿತು. ಅದನ್ನು ಮೇಲಕ್ಕೆ ತೆಗೆಯುವ ಹಂಚಿಕೆಯು ಯಾರಿಗೂ ತೋಚಲೊಲ್ಲದು ಅವರು ಬಗೆಬಗೆಯ ಯತ್ನ ಮಾಡಿ ಬೇಸತ್ತು ಅತ್ತಿತ್ತ ನೋಡುತ್ತಿರಲು, ಕಪ್ಪು ಮೈಬಣ್ಣದ,

ಹಾಗು ಬಿಳಿಯಕೂದಲುಳ್ಳ ಒಬ್ಬ ತೆಳ್ಳನ್ನ ತೇಜಸ್ವಿಯಾದ ಅಗ್ನಿಹೋತ್ರಿ ಬ್ರಾಹ್ಮಣನು ಅವರ ಕಣ್ಣಿಗೆ ಬಿದ್ದನು ತೇಜಸ್ವಿಗಳಾದ ಆ ಹುಡುಗರು ತಮ್ಮ ಕೆಲಸವಾಗದೆ ಅವಮಾನಹೊಂದಿದ್ದರಿಂದ, ತಲೆಬಾಗಿಸಿ ಸುಮ್ಮನೆ ಆ ಬ್ರಾಹ್ಮಣನ ಸುತ್ತುಮುತ್ತು ನಿಂತುಕೊಂಡರು. ಆಗ ದ್ರೋಣಾಚಾರ್ಯರು ನಗುತ್ತ ಆ ಹುಡುಗರನ್ನು ಕುರಿತು—"ಎಲಾ, ನೀವು ಭರತ ಕುಲದಲ್ಲಿ ಉತ್ಪನ್ನವಾಗಿದ್ದು, ಚಿಣಿಯನ್ನು ಸಂಪಾದಿಸದಿರುವದನ್ನು ನೋಡಿದರೆ, ನಿಮ್ಮ ಕ್ಷಾತ್ರತೇಜಸ್ಸಿಗೂ, ಅಸ್ತ್ರಾಭ್ಯಾಸಕ್ಕೂ ಧಿಕ್ಕಾರವೇ ಸರಿ! ನಿಮ್ಮ ಆ ಚಿಣಿಯನ್ನೂ, ನಾನು ಈಗ ಬಾವಿಯಲ್ಲಿ ಒಗೆಯುವ ಈ ನನ್ನ ಉಂಗುರವನ್ನೂ ಈ ಕಡ್ಡಿಗಳಿಂದ ತೆಗೆಯುವೆನು ನೋಡಿರಿ. ಅದಕ್ಕಾಗಿ ನೀವು ನನ್ನ ಊಟದ ವ್ಯವಸ್ಥೆಯನ್ನು ಮಾತ್ರ ಮಾಡಿರಿ," ಅನ್ನಲು, ಕುಂತಿಯ ಮಗನಾದ ಯುಧಿಷ್ಠಿರನು—"ಬ್ರಾಹ್ಮಣಾ, ಕೃಪಾಚಾರ್ಯರು ಒಪ್ಪಿಕೊಂಡರೆ, ನಿನ್ನ ಊಟದ ವ್ಯವಸ್ಥೆಯನ್ನು ಸತತವಾಗಿ ಮಾಡುವೆನು," ಎಂದು ಹೇಳಿದನು

ಯುಧಿಷ್ಠಿರನ ಈ ಮಾತುಗಳನ್ನು ಕೇಳಿ ದ್ರೋಣನು ನಕ್ಕು—"ಈ ಕಡ್ಡಿಯ ಹಿಂಡೆಯನ್ನು ಅಸ್ತ್ರಮಂತ್ರದಿಂದ ಮಂತ್ರಿಸಿರುವೆನು. ಬೇರೆ ಯಾತರಲ್ಲಿಯೂ ಇಲ್ಲದ ಸಾಮರ್ಥ್ಯವು ಈ ಕಡ್ಡಿಗಳಲ್ಲಿ ಬಂದಿದೆ. ಮೊದಲು ನಾನು ಒಂದು ಕಡ್ಡಿಯಿಂದ ಚಿಣಿಯನ್ನು ಚುಚ್ಚುವೆನು; ಮತ್ತೊಂದು ಕಡ್ಡಿಯಿಂದ ಆ ಮೊದಲನೆಯ ಕಡ್ಡಿಯನ್ನು, ಇನ್ನೊಂದು ಕಡ್ಡಿಯಿಂದ ಆ ಎರಡನೆಯ ಕಡ್ಡಿಯನ್ನು ಹೀಗೆ ಕಡ್ಡಿಗಳನ್ನು ಒಂದರಲ್ಲಿ ಒಂದು ಚುಚ್ಚುತ್ತ ಚಿಣಿಯನ್ನು ತೆಗೆಯುವೆನು," ಎಂದುಹೇಳಿ, ಆಡಿದಂತೆ ಪ್ರತ್ಯಕ್ಷ ಮಾಡಿ ತೋರಿಸಿದನು. ಇದನ್ನು ನೋಡಿ ಎಲ್ಲ ಹುಡುಗರಿಗೆ ಆಶ್ಚರ್ಯವಾಗಿ, ಅವರ ಕಣ್ಣುಗಳು ತೇಜಃಪುಂಜವಾದವು. "ಇದೆಂಥ ಆಶ್ಚರ್ಯವು!" ಎಂದು ಮನಸ್ಸಿನಲ್ಲಿ ಅಂದುಕೊಂಡು, ಎಲ್ಲರೂ ಆ ಬ್ರಾಹ್ಮಣನನ್ನು ಕುರಿತು—"ಎಲೈ ತಪಸ್ವಿಬ್ರಾಹ್ಮಣಾ, ನಿನ್ನ ಉಂಗುರವನ್ನು ಹೀಗೆಯೇ ತೆಗೆ ನೋಡೋಣ" ಅನ್ನಲು, ದ್ರೋಣನು ಧನುರ್ಬಾಣಗಳನ್ನು ಕೈಯಲ್ಲಿ ತಕ್ಕೊಂಡು, ಗುರಿಯಿಟ್ಟು ಉಂಗುರವನ್ನು ತೆಗೆದು ಹುಡುಗರಕೈಯಲ್ಲಿ ಕೊಟ್ಟನು ಆಗ ಆ ಹುಡುಗರು ಪರಮಾಶ್ಚರ್ಯ

ಪಟ್ಟು ದ್ರೋಣನನ್ನು ಕುರಿತು--“ಬ್ರಾಹ್ಮಣಾ, ನಾವೆಲ್ಲರೂ ನಿನಗೆ ನಮಸ್ಕಾರಮಾಡುವೆವು ; ಯಾಕಂದರೆ ಇಂಥ ಸಾಮರ್ಥ್ಯವು ಎರಡನೆಯವರಲ್ಲಿ ಕಂಡುಬರಲಾರದು. ನೀನು ಯಾರು ? ನಿನ್ನ ಕೆಲಸವನ್ನು ನಾವೇನು ಮಾಡಬೇಕು ?” ಎಂದು ಕೇಳಲು, ದ್ರೋಣನು—“ನಾನು ಈಗ ಇದ್ದ ಹಾಗೆ ನನ್ನ ವರ್ಣನವನ್ನೂ, ನನ್ನ ಗುಣವರ್ಣನವನ್ನೂ ಭೀಷ್ಮನಮುಂದೆ ಮಾಡಿರಿ, ಅಂದರೆ ನಾನು ಯಾರೆಂಬದು ಆತನಿಗೆ ಗೊತ್ತಾಗುವದು” ಎಂದು ಹೇಳಿದನು.

**ದ್ರೋಣನ ಮಾನಭಂಗಕಥನ** — ಬಳಿಕ ಆ ಎಲ್ಲ ಹುಡುಗರು “ಹಾಗೇಆಗಲಿ” ಎಂದು ಹೇಳಿ, ಭೀಷ್ಮನ ಮುಂದೆ ಎಲ್ಲಸಂಗತಿಯನ್ನು ಹೇಳಿದರು. ಅದನ್ನು ಕೇಳಿ ಭೀಷ್ಮನು “ಬಂದಾತನು ದ್ರೋಣನೇ” ಎಂದು ತಿಳಿದು, ಆತನನ್ನು ಕರೆಸಿ ಸ್ವಾಗತ ಸತ್ಕರಿಸಿ ಬಂದಕಾರಣವನ್ನು ಕೇಳಿದನು. ಆಗ ದ್ರೋಣನು--“ಭೀಷ್ಮಾ, ನಾನು ಧನುರ್ವೇದವನ್ನು ಅಭ್ಯಾಸಿಸುವದಕ್ಕಾಗಿ ಮೊದಲು ಮಹರ್ಷಿ ಅಗ್ನಿವೇಶನಬಳಿಯಲ್ಲಿ ಇದ್ದೆನು. ಆಗ ಕತ್ತ್ರ್ಯತ್ರಕಾಲಿಯಾದ ಯಜ್ಞಸೇನ (ದ್ರುಪದ)ನೂ ನನ್ನೊಡನೆ ಧನುರ್ವೇದದ ಅಭ್ಯಾಸವನ್ನು ಮಾಡುತ್ತಿದ್ದನು ಆಗ ನಮ್ಮಿಬ್ಬರಲ್ಲಿ ಅತ್ಯಂತವಾದ ಮೈತ್ರಿಯು ಉಂಟಾಗಿತ್ತು. ಒಮ್ಮೆ ದ್ರುಪದನು ನನಗೆ ಸಂತೋಷವಾಗುವಂತೆ--“ದ್ರೋಣಾ, ನನ್ನ ತಂದೆಯು ಪ್ರೇಮವು ನನ್ನ ಮೇಲೆ ವಿಶೇಷವಾಗಿ ಇರುತ್ತದೆ. ಆತನು ನನಗೆ ರಾಜ್ಯಾಭಿಷೇಕವನ್ನು ಮಾಡಿದರೆ, ಗೆಳೆಯಾ, ಆಣೆಮಾಡಿ ಹೇಳುತ್ತೇನೆ, ಆ ರಾಜ್ಯದ ಸುಖವನ್ನು ಯಥಾಸ್ಥಿತವಾಗಿ ನಿನಗೆ ಒದಗಿಸಿಕೊಡುವೆನು. ನನ್ನ ವಿಷಯಭೋಗಗಳೂ, ನನ್ನ ಸಂಪತ್ತೂ, ನನ್ನ ಸುಖಗಳೂ ನಿನ್ನ ಅಧೀನದಲ್ಲಿರುವವು” ಎಂದು ಹೇಳಿದನು. ಮುಂದೆ ಆತನು ಅಸ್ತ್ರವಿದ್ಯೆಯನ್ನು ಸಂಪಾದಿಸಿ ನನ್ನಿಂದ ಬಹುಮಾನಿತನಾಗಿ ಹೊರಟುಹೋದನು. ಮುಂದೆ ನನ್ನ ತಂದೆಯ ಅಪ್ಪಣೆಯಂತೆ ನಾನು ಸಂತತಿಪ್ರಾಪ್ತಿಗಾಗಿ ಕೃಪಿಯನ್ನು ಲಗ್ನವಾದೆನು. ಆಕೆಯಿಂದ ನನಗೆ ಮಹಾಪರಾಕ್ರಮಿಯೂ, ಸೂರ್ಯನಂತೆ ತೇಜಸ್ವಿಯೂ ಆದ ಅಶ್ವತ್ಥಾಮನೆಂಬ ಮಗನು ಹುಟ್ಟಿದನು. ಆಗ ನನಗೆ ಪರಮ ಸಂತೋಷವಾಯಿತು. ಅಲ್ಲಿ ಶ್ರೀಮಂತರ ಹುಡುಗರು ಹಾಲು

ಕುಡಿಯುತ್ತಿರುವಾಗ, ಅಶ್ವತ್ಥಾಮನೂ ಹುಡುಗನೇ ಆದದ್ದರಿಂದ ಹಾಲು ಬೇಕೆಂದು ಅಳತೊಡಗಿದನು. ಅಗ್ನಿಹೋತ್ರಾದಿ ತನ್ನ ಕರ್ಮಗಳನ್ನು ಮಾಡುವ ಒಬ್ಬಾನೊಬ್ಬ ಬ್ರಾಹ್ಮಣನಿಂದ ಆಕಳನ್ನು ಸಂಪಾದಿಸಿ, ಆತನನ್ನು ಸಂಕಟಕ್ಕೆ ಗುರಿಮಾಡುವವರಲ್ಲಿ ಏನು ಅರ್ಥ ಇದೆ? ಆದ್ದರಿಂದ ಆಕಳ ಪ್ರತಿಗ್ರಹಕ್ಕಾಗಿ ಶಾಸ್ತ್ರಶುದ್ಧವಾದ ಸ್ಥಳವು ಯಾವದೆಂದು ಆ ತುದಿಯಿಂದ ಈ ತುದಿಯುವರೆಗೆ ಯಾವತ್ತು ದೇಶವನ್ನು ನಾನು ತಿರುಗಿದೆನು; ಆದರೂ ನನಗೆಲ್ಲಿಯೂ ಆಕಳು ಸಿಗಲೊಲ್ಲದು. ಇತ್ತ ಹುಡುಗರು ನೀರಲ್ಲಿ ಹಿಟ್ಟುಕಲಿಸಿ ಹಾಲೆಂದು ಅಶ್ವತ್ಥಾಮನಿಗೆ ಕುಡಿಸಲು, ಆತನು "ನಾನು ಹಾಲುಕುಡಿದೆನು" ಎಂದು ಕುಣಿಯುವಾಗ ಉಳಿದಹುಡುಗರು ನಗುವದನ್ನು ನೋಡಿ ನನಗೆ ಸಮಾಧಾನವಾಗಲಿಲ್ಲ. ಆ ಹುಡುಗರು ತಮ್ಮತಮ್ಮೊಳಗೆ–"ಏನು ದರಿದ್ರದ್ರೋಣನು! ಆತನ ಮಗನಿಗೆ ಕುಡಿಯಲಿಕ್ಕೆ ಹಾಲುಸಿಗದಿದಿರಲು, ಹಿಟ್ಟುಕಲಿಸಿದ ನೀರನ್ನೇ ಹಾಲೆಂದು ಕುಡಿದು ಆತನು ಆನಂದದಿಂದ ಕುಣಿದಾಡುವನು," ಎಂದು ಮಾತಾಡಿಕೊಳ್ಳುವದನ್ನು ನೋಡಿ, ನನ್ನ ಬುದ್ಧಿಯು ಭ್ರಂಶವಾಯಿತು. ಮೊದಲು ಎಷ್ಟೋ ಬ್ರಾಹ್ಮಣರು "ಈ ದ್ರೋಣನೇನು, ಅತ್ಯಂತ ದರಿದ್ರನು" ಎಂದು ಧಿಕ್ಕರಿಸುತ್ತಿದ್ದರು; ಆದರೂ ದ್ರವ್ಯಪ್ರಾಪ್ತಿಗಾಗಿ ಅನ್ಯರ ಸೇವೆಮಾಡಲಿಕ್ಕಿಲ್ಲವೆಂಬ ನಿಶ್ಚಯದಿಂದ, ನನ್ನಮಿತ್ರ ದ್ರುಪದನಬಳಿಗೆ ಹೋಗಬೇಕೆಂದು, ಹೆಂಡತಿಯನ್ನೂ, ಮಗನನ್ನೂ ಕರಕೊಂಡು ಹೊರಟೆನು. ಆದರೆ ಧೀಮಂತ, ದ್ರುಪದನು ದ್ರವ್ಯಮದದಿಂದ ನನ್ನನ್ನು ಧಿಕ್ಕರಿಸಿ, ಮಿತ್ರತ್ವವು ಚಂಚಲವೆಂಬುದಾಗಿಯೂ, ಸಮಾನಸ್ಕಂಧರಲ್ಲಲ್ಲದೆ ಅನ್ಯರಲ್ಲಿ ಮಿತ್ರತ್ವವು ಉಂಟಾಗುವದಿಲ್ಲವೆಂಬದಾಗಿಯೂ ಏನೇನೋ ಪಾಂಡಿತ್ಯದ ಬೋಧವನ್ನು ಮಾಡಿದನು. ಮತ್ತು ಅತಿ ನಿಷ್ಠುರತನದಿಂದ ನನ್ನನ್ನು ಕುರಿತು—"ದ್ರೋಣಾ, ರಾಜ್ಯದ ಸಂಬಂಧದಿಂದ ನಾನು ಒಪ್ಪಿಕೊಂಡದ್ದರ ಸ್ಮರಣವು ನನಗಿರುವದಿಲ್ಲ. ಬೇಕಾದರೆ ಒಂದುರಾತ್ರಿ ತೃಪ್ತಿಯಾಗುವಷ್ಟು ಅನ್ನವನ್ನು ನಿನಗೆ ಹಾಕುವೆನು." ಎಂದು ಹೇಳಿದನು; ಆಗ ಅದೇಕಾಲಿಸಿಂದ ನಾನು ಹೆಂಡತಿ ಮಗನೊಡನೆ ಹಿಂದಿರುಗಿ, ಒಂದುಪ್ರತಿಜ್ಞೆಯನ್ನು ಮಾಡಿರುವೆನು. ಅದನ್ನು ಬೇಗನೆ ಪೂರಯಿಸುವವನೂ ಇದ್ದೇನೆ. ಹೀಗೆ ಪ್ರತಿಜ್ಞೆಮಾಡಿರುವ ನಾನು

ಈಗ ಕುರುದೇಶಕ್ಕೆ ಬಂದಿರುವೆನು. ನನಗೆ ಗುಣಿಗಳಾದ ಉತ್ತಮ ಶಿಷ್ಯರು ದೊರೆಯಬೇಕೆಂದು ನಾನು ಇಚ್ಛಿಸುತ್ತೇನೆ; ಆದರೆ ನಾನು ಏನುಮಾಡ ಬೇಕೆಂಬುದನ್ನು ನೀವೇಹೇಳಿರಿ."

ದ್ರೋಣನ ಈ ಮಾತುಗಳನ್ನು ಕೇಳಿ ಭೀಷ್ಮನು—"ಇನ್ನು ತಾವು ಧನುಸ್ಸಿನ ಹಗ್ಗವನ್ನು ಬಿಚ್ಚಬೇಕು. ಸ್ವಸ್ಥವಾಗಿ ನಮ್ಮ ಹುಡುಗರಿಗೆ ಅಸ್ತ್ರವಿದ್ಯೆಯನ್ನು ಕಲಿಸುತ್ತ, ಪ್ರತಿಷ್ಠೆಯಿಂದ ಯಾವತ್ತು ಸುಖಗಳನ್ನು ಭೋಗಿಸಿರಿ. ಕೌರವರ ಯಾವತ್ತು ಸಂಪತ್ತೂ, ಅವರ ರಾಜ್ಯವೂ, ಆ ರಾಜ್ಯದಹಾಗು ಪ್ರಜೆಗಳ ಆಧಿಪತ್ಯವೂ, ಈ ಕೌರವರೂ ನಿಮ್ಮವರೇ ಎಂದು ತಿಳಿಯಿರಿ. ನಿಮ್ಮ ಮನಸ್ಸಿನಲ್ಲಿ ಬಂದದ್ದು ಆಯಿತೆಂತಲೇ ತಿಳಿ ಯಬೇಕು. ಎಲೈ ಮುನಿವರ್ಯರೇ, ನೀವು ಇಲ್ಲಿಗೆ ಬಂದದ್ದು ಬಹಳ ಆನಂದಕರವು! ನನ್ನಮೇಲೆ ತಮ್ಮ ಕೃಪೆಯು ಆಯಿತೆಂದು ನಾನು ತಿಳಿ ಯುವೆನು."

**೧೩೨ನೇ ಅಧ್ಯಾಯ—ಕೌರವರ ಗುರುತ್ವದ ಸ್ವೀಕಾರ**—ಭೀಷ್ಮನ ಈ ಮಾತುಗಳನ್ನು ಕೇಳಿ ತೇಜಸ್ವಿಯಾದ ದ್ರೋಣನು ಕುರುಗಳ ಮನೆ ಯಲ್ಲಿ ವಿಶ್ರಾಂತಿಯನ್ನು ಹೊಂದಹತ್ತಿದನು. ಆ ಗುರು ದ್ರೋಣನ ಶ್ರಮದ ಪರಿಹಾರವಾದ ಬಳಿಕ ಭೀಷ್ಮನು ತನ್ನ ಮೊಮ್ಮಕ್ಕಳಾದ ಕೌರವ ಪಾಂಡವ ರನ್ನು ಕರೆದೊಯ್ದು "ಇವರು ನಿಮ್ಮ ಶಿಷ್ಯರೆಂ"ದು ಆ ಬ್ರಾಹ್ಮಣನಿಗೆ ಒಪ್ಪಿಸಿದನು ; ಮತ್ತು ವಿಪುಲದ್ರವ್ಯವನ್ನೂ, ಧನಧಾನ್ಯಗಳನ್ನೂ, ಭದ್ರ ವಾದ ಮನೆಯನ್ನೂ ದ್ರೋಣನಿಗೆ ಸಂತೋಷದಿಂದ ಕೊಟ್ಟನು. ದ್ರೋಣ ನಿಗೂ ಸಂತೋಷವಾಗಿ, ಪಾಂಡವ-ಧಾರ್ತರಾಷ್ಟ್ರರನ್ನು ಶಿಷ್ಯರೆಂದು ಪರಿ ಗ್ರಹಿಸಿದನ. ಹೀಗಿರಲು, ಒಂದುದಿನ ದ್ರೋಣನ ಚಿತ್ತವೃತ್ತಿಯು ಪ್ರಸನ್ನವಾಗಿರುವಾಗ ಅವರೆಲ್ಲರೂ ನಮಸ್ಕಾರಮಾಡಿ ಆತನ ಬಳಿಯಲ್ಲಿ ಕುಳಿತುಕೊಂಡರು ಆಗ ದ್ರೋಣನು ಅವರನ್ನು ಕುರಿತು—"ಶಿಷ್ಯರೇ, ನಾನು ಒಂದು ಕಾರ್ಯಸಾಧಿಸಬೇಕಾಗಿದೆ. ನೀವು ಅಸ್ತ್ರವಿದ್ಯೆಯನ್ನು ಕಲಿತಬಳಿಕ ಅದನ್ನು ಸಾಧಿಸಿಕೊಡಬೇಕು ; ಅದರಂತೆ ಈಗ ನೀವು ನನಗೆ ವಚನಕೊಡಿರಿ," ಎಂದು ಕೇಳಿದನು, ಆದರೆ ಎಲ್ಲಕುಮಾರರು ಸುಮ್ಮನೆ ಕುಳಿತರು ಆಗ ಅರ್ಜುನನು ಮಾತ್ರ ಪ್ರತಿಜ್ಞೆಮಾಡಿದನು. ಅದರಿಂದ

ದ್ರೋಣನಿಗೆ ಪರಮಾನಂದವಾಗಿ ಆತನು ಅರ್ಜುನನನ್ನು ಆಲಿಂಗಿಸಿ, ಆತನ ಮಸ್ತಕವನ್ನು ಮೂಸಿನೋಡಿದನು. ದ್ರೋಣನು ಎಲ್ಲಕುಮಾರರಿಗೆ ನಾನಾವಿಧದ ದೈವೀ ಮಾನವೀ ಅಸ್ತ್ರಗಳನ್ನು ಕಲಿಸಿದನು. ಪಾಂಡವ-ಕೌರವಕುಮಾರರೊಡನೆ ಯಾದವಕುಮಾರರೂ, ಬೇರೆ ರಾಜಕುಮಾರರೂ, ಕರ್ಣನೂ ಅಸ್ತ್ರಗಳ ಅಭ್ಯಾಸವನ್ನು ಮಾಡುತ್ತಿದ್ದರು. ಕರ್ಣನು ಖಂಗಿನಸ್ವಭಾವದವನು ; ದುರ್ಯೋಧನನ ಪಕ್ಷವಹಿಸಿ ಅರ್ಜುನನೊಡನೆ ಮತ್ಸರಿಸಿ ಯಾವಾಗಲೂ ಪಾಂಡವರ ಉಪಮರ್ದಮಾಡುತ್ತಿದ್ದನು. ಎಲ್ಲ ಕುಮಾರರಲ್ಲಿ ಅರ್ಜುನನೇ ಮಿಗಿಲಾದವನು. ಕಲಿಯುವದರಲ್ಲಾಗಲಿ, ಶರೀರಸಾಮರ್ಥ್ಯದಲ್ಲಾಗಲಿ, ವ್ಯವಸಾಯಮಾಡುವಲ್ಲಿಯಾಗಲಿ, ಅಸ್ತ್ರವಿದ್ಯೆಯಲ್ಲಿಯಾಗಲಿ ಆತನೇ ಹೆಚ್ಚು. ಆತನಮೇಲೆ ಗುರುಗಳ ಪ್ರೇಮ ಬಹಳ. ವಿಷಯಗ್ರಹಣದಲ್ಲಿ ಆ ಇಂದ್ರಪುತ್ರನಾದ ಅರ್ಜುನನೇ ಅದ್ವಿತೀಯನೆಂದು ದ್ರೋಣಾಚಾರ್ಯರ ಮತವಿತ್ತು.

**ಶಿಕ್ಷಣದಲ್ಲಿ ಅರ್ಜುನನ ದಕ್ಷತೆ**—ಜನಮೇಜಯಾ, ತಮ್ಮಮಗ ಅಶ್ವತ್ಥಾಮನು ಬೇಗನೆ ನೀರುತುಂಬಿಕೊಂಡು ಬರಬೇಕೆಂತಲೂ, ಉಳಿದ ಕುಮಾರರು ತಡಮಾಡಿ ಬರಬೇಕೆಂತಲೂ, ಅವರು ಬರುವದರೊಳಗಾಗಿ ತಮ್ಮಮಗನಿಗೆ ಗುಟ್ಟಿನ ವಿದ್ಯೆಯನ್ನು ಕಲಿಸಬೇಕೆಂತಲೂ ಯೋಚಿಸಿ, ದ್ರೋಣಾಚಾರ್ಯರು ನೀರುತರುವದಕ್ಕಾಗಿ ತಮ್ಮಮಗನಿಗೆ ದೊಡ್ಡಬಾಯುಳ್ಳ ಪಾತ್ರೆಯನ್ನೂ, ಉಳಿದ ಕುಮಾರರಿಗೆ ಸಣ್ಣಬಾಯುಳ್ಳ ಕಮಂಡಲುಗಳನ್ನೂ ಕೊಡುತ್ತಿದ್ದರು. ಈ ಮರ್ಮವನ್ನರಿತು ಅರ್ಜುನನು ವರುಣಾಸ್ತ್ರದಿಂದ ತನ್ನ ಕಮಂಡಲುವನ್ನು ಬೇಗನೆ ತುಂಬಿಕೊಂಡು, ಅಶ್ವತ್ಥಾಮನ ಸಂಗಡಲೇ ಬಂದು ಆತನೊಡನೆ ಗುಪ್ತವಿದ್ಯೆಯನ್ನು ಕಲಿಯುತ್ತಿದ್ದನು. ಅದರಂತೆ ಗುರುವಿನ ಮರ್ಯಾದೆಯನ್ನು ಕಾಯ್ದು ಆತನ ಮನಸ್ಸನ್ನು ಒಲಿಸಿಕೊಳ್ಳುವದಕ್ಕಾಗಿ ಹಲವು ಯತ್ನಗಳನ್ನು ಅರ್ಜುನನು ಮಾಡುತ್ತಿದ್ದನು. ದ್ರೋಣನು ಅಡಿಗೆಯವನಿಗೆ–"ನೀನು ಕತ್ತಲಲ್ಲಿ ಅರ್ಜುನನಿಗೆ ಅನ್ನಹಾಕಬೇಕೆಂ"ತಲೂ "ಹೀಗೆ ನಾನು ನಿನಗೆ ಹೇಳಿರುವೆನೆಂದು ಅರ್ಜುನನ ಮುಂದೆ ಹೇಳಬೇಡೆಂ"ತಲೂ ತಿಳಿಸಿದ್ದನು. ಒಂದು ದಿನ ಊಟಮಾಡುವಾಗ ದೀಪವು ಹೋಯಿತು. ಆಗ ಅಭ್ಯಾಸದಮೂಲಕ

ಅರ್ಜುನನು ಹಾಗೆಯೇ ಉಂಡನು. ತನಗೆ ಅಭ್ಯಾಸದಮೂಲಕ ಕತ್ತಲಲ್ಲಿಯೂ ಉಣ್ಣಲಿಕ್ಕೆ ಬಂತೆಂಬ ಅನುಭವದಿಂದ, ಅರ್ಜುನನು ಗುರಿಹೊಡೆಯುವ ಅಭ್ಯಾಸವನ್ನು ಮಾಡಿದರೆ ಕತ್ತಲಲ್ಲಿಯೂ ತಪ್ಪದೆ ಗುರಿಹೊಡೆಯಬಹುದೆಂದು ತಿಳಿದು, ಆತನು ರಾತ್ರಿ ಗುರಿಹೊಡೆಯುವ ಅಭ್ಯಾಸಮಾಡತೊಡಗಿದನು. ಕತ್ತಲಲ್ಲಿ ಆಗುವ ಅರ್ಜುನನ ಧನುಷ್ಟಂಕಾರವನ್ನು ಕೇಳಿ, ದ್ರೋಣನು ತನ್ನ ಶಿಷ್ಯನಬಳಿಗೆ ಹೋಗಿ ಆನಂದದಿಂದ ಆತನನ್ನು ಆಲಿಂಗಿಸಿ,—"ಅರ್ಜುನಾ, ನಿನ್ನಂಥ ಎರಡನೆಯ ಧನುರ್ಧರನಾದ ವೀರನು ಜಗತ್ತಿನಲ್ಲಿ ಇಲ್ಲವೆಂಬಂತೆ ನಿನ್ನನ್ನು ಅಸ್ತ್ರವಿದ್ಯಾನಿಪುಣನಾಗಮಾಡಲು ನಾನು ಯತ್ನಿಸುವೆನು, ಈ ಮಾತು ಸತ್ಯವು ಸತ್ಯವೆಂದು ತಿಳಿ" ಎಂದು ಹೇಳಿದನು.

**ಏಕಲವ್ಯನ ವೃತ್ತಾಂತ**—ಬೇರೆಬೇರೆಕಡೆಯ ಹಲವುಜನ ರಾಜಕುಮಾರರು ಅಸ್ತ್ರಾಭ್ಯಾಸಕ್ಕಾಗಿ ದ್ರೋಣನಬಳಿಗೆ ಬಂದಂತೆ, ಬೇಡರ ಅರಸನಾದ ಹಿರಣ್ಯಧನುವಿನ ಮಗ ಏಕಲವ್ಯ ಎಂಬವನು ದ್ರೋಣನಬಳಿಗೆ ಅಸ್ತ್ರಾಭ್ಯಾಸಕ್ಕಾಗಿ ಬಂದನು. ಆತನು ವ್ಯಾಧನೆಂದು ತಿಳಿದು ಉಳಿದ ಶಿಷ್ಯರ ಹಿತಕ್ಕಾಗಿ ಆಚಾರ್ಯರು ಆ ಏಕಲವ್ಯನನ್ನು ಅಸ್ತ್ರಾಭ್ಯಾಸಮಾಡಲು ತಮ್ಮ ಬಳಿಯಲ್ಲಿ ಇಟ್ಟುಕೊಳ್ಳಲಿಲ್ಲ. ಆಗ ಏಕಲವ್ಯನು ದ್ರೋಣನ ಚರಣಗಳಿಗೆರಗಿ ಅರಣ್ಯಕ್ಕೆ ಹೋಗಿ ಮಣ್ಣಿನ ದ್ರೋಣನ ಪ್ರತಿಮೆಯನ್ನು ಮಾಡಿ ಆ ಪ್ರತಿಮೆಯನ್ನೇ "ಈತನು ನನ್ನ ಗುರುವು" ಎಂದು ಭಾವಿಸಿ, ಏಕನಿಷ್ಠೆಯಿಂದ ಬಾಣಹೊಡೆಯುವ ಅಭ್ಯಾಸವನ್ನು ಮಾಡತೊಡಗಿದನು. ಅದರಿಂದ ಆತನು ಅಸ್ತ್ರವಿದ್ಯಾನಿಪುಣನಾದನು. ಒಮ್ಮೆ ದ್ರೋಣನ ಅನುಮತಿಯಿಂದ ಪಾಂಡವರು ಕೌರವರು ಬೇಟೆಗೆ ಹೋದಾಗ, ಒಂದು ನಾಯಿಯು ತಪ್ಪಿಸಿಕೊಂಡು ಏಕಲವ್ಯನಿದ್ದ ಕಡೆಗೆ ಹೋಗಿ, ಆತನ ಕಪ್ಪು ಬಣ್ಣವನ್ನೂ, ಮಾಸಿದವಸ್ತ್ರವನ್ನೂ, ಹೊತ್ತ ಕೃಷ್ಣಾಜಿನವನ್ನೂ, ಬಿಟ್ಟ ಜಡೆಗಳನ್ನೂ ನೋಡಿ ಆ ವ್ಯಾಧನನ್ನುದ್ದೆ ಒದರುತ್ತ ನಿಂತುಕೊಂಡಿತು. ಆಗ ಏಕಲವ್ಯನು ಆ ನಾಯಿಗೆ ಒದರಲಿಕ್ಕೆ ಬಾರದಂತೆ, ಆದರೆ ಅದಕ್ಕೆ ಗಾಯವಾಗದಂತೆ ಐದು ಬಾಣಗಳನ್ನು ಅದರ ಬಾಯಲ್ಲಿ ಹೊಡೆದನು. ಆಗ ಆ ನಾಯಿಯು ಬಾಣಸಹಿತವಾಗಿ ಪಾಂಡವರಬಳಿಗೆ ಹೋಗಲು, ವ್ಯಾಧನ

ಶಬ್ದವೇಧವಮಾಡುವ ಕೌಶಲ್ಯವನ್ನೂ, ಹಸ್ತಲಾಘವವನ್ನೂ ನೋಡಿ ಎಲ್ಲರೂ ಬೆರಗಾಗಿ ನಾಚಿಕೆಯಿಂದ ತಲೆಯನ್ನು ತಗ್ಗಿಸಿ, ವ್ಯಾಧನನ್ನು ಶ್ಲಾಘಿಸಿದರು. ಇಂಥ ಈ ವೀರನು ಯಾರಿರಬಹುದೆಂದು ಅವನನ್ನು ಹುಡುಕುತ್ತ ಹುಡುಕುತ್ತ ಅವರು ಏಕಲವ್ಯನಿದ್ದಲ್ಲಿಗೆ ಬಂದರು. ಆಗ ಜಟಾ-ವಲ್ಕಲಧಾರಿಯಾದ, ಕಪ್ಪುಬಣ್ಣದ, ಹೊಲಸುವೇಷ್ಟಿಯ ಆ ವ್ಯಾಧನ ಉಗ್ರರೂಪವನ್ನು ನೋಡಿ ಅವರು ಬೆರಗಾಗಿ—"ನೀನುಯಾರು? ಯಾರವನು?" ಎಂದು ಕೇಳಿದರು. ಆಗ ಏಕಲವ್ಯನು—"ವೀರರೇ, ನಾನು ಬೇಡರಅರಸನಾದ ಹಿರಣ್ಯಧನುವಿನ ಮಗನು, ಏಕಲವ್ಯನು, ದ್ರೋಣಾಚಾರ್ಯರ ಶಿಷ್ಯನು, ನಾನು ಧನುರ್ವಿದ್ಯೆಯಲ್ಲಿ ಚನ್ನಾಗಿ ಪರಿಶ್ರಮ ಮಾಡಿರುವೆನು."

ಹೀಗೆ ಏಕಲವ್ಯನ ಗೊತ್ತುಹಚ್ಚಿ ಪಾಂಡವರು ಹಿಂದಿರುಗಿ ಬಂದು, ನಡೆದ ಯಾವತ್ತು ಸಂಗತಿಯನ್ನು ದ್ರೋಣನಿಗೆ ಹೇಳಿದರು; ಆದರೆ ಅರ್ಜುನನಿಗೆ ಇಷ್ಟರಿಂದ ಸಮಾಧಾನವಾಗದೆ, ಆತನು ದ್ರೋಣಗುರುವನ್ನು ಕುರಿತು—"ಗುರುಗಳೇ, ಆದಿನ ತಾವು ನನ್ನನ್ನು ಅಸ್ತ್ರವಿದ್ಯೆಯಲ್ಲಿ ಅದ್ವಿತೀಯನನ್ನಾಗಿ ಮಾಡುವೆವೆಂದು ಹೇಳಿದ್ದಿರಿ, ಆದರೆ ನನಗೆ ಒಬ್ಬನಿಗೇ ಏಕೆ, ಜಗತ್ತಿಗೂ ಭಾರಿಯಾದ ಏಕಲವ್ಯನೆಂಬವನು ಇರುವನಲ್ಲ; ಇಂದಬಳಿಕ ಭಗವನ್, ಇದೇನು?" ಎಂದು ಕೇಳಿದನು. ಆಗ ದ್ರೋಣನು ಕೆಲಹೊತ್ತು ಯೋಚಿಸಿ ಅರ್ಜುನನೊಡನೆ ಏಕಲವ್ಯನಬಳಿಗೆ ಬಂದನು. ಆಗ ಏಕಲವ್ಯನು ಗುರುಗಳಿಗೆ ಸಾಷ್ಟಾಂಗವಾಗಿ ಎರಗಿ ಅವರನ್ನು ಯಥಾವಿಧಿ ಪೂಜಿಸಿ—"ನಾನು ತಮ್ಮ ಶಿಷ್ಯನಿದ್ದೇನೆ" ಎಂದು ಹೇಳಿ, ದ್ರೋಣನಮುಂದೆ ಕೈಜೋಡಿಸಿ ನಿಂತುಕೊಂಡನು. ಆಗ ದ್ರೋಣನು—"ನೀನು ನನ್ನ ಶಿಷ್ಯನಾಗಿದ್ದರೆ ನನಗೆ ಗುರುದಕ್ಷಿಣೆಯನ್ನು ಕೊಡು," ಎಂದು ಕೇಳಲು, ಏಕಲವ್ಯನು ಒಳ್ಳೇ ಆನಂದದಿಂದ—"ಮಹಾರಾಜ, ನಾನು ಗುರುದಕ್ಷಿಣೆ ಏನುಕೊಡಬೇಕೆಂಬಬಗ್ಗೆ ಅಪ್ಪಣೆಯಾಗಲಿ. ಬ್ರಹ್ಮಜ್ಞರಾದ ಗುರುವರ್ಯರು ತಾವುಕೇಳಲು, ಕೊಡದಿರುವಂಥ ವಸ್ತುವು ನನ್ನಲ್ಲಿ ಯಾವದಿರುವದು?" ಎಂದು ಕೇಳಿದನು. ಅದಕ್ಕೆ ದ್ರೋಣನು—"ಏಕಲವ್ಯಾ, ನೀನು ಬಲಗೈಯ್ಯ ಹೆಬ್ಬೆರಳನ್ನು ಗುರುದಕ್ಷಿಣೆಯಾಗಿ

ಕೊಡು" ಎಂದು ಕೇಳಿದರು. ಆಗ ಏಕಲವ್ಯನು ಒಂದುಕ್ಷಣವೂ ತಡೆಯದೆ, ಬಲಗೈಯ್ಯ ಹೆಬ್ಬೆರಳನ್ನು ನಿಶ್ಶಂಕೆಯಿಂದ ಕೊಯ್ದು ಗುರುವಿಗೆ ಅರ್ಪಿಸಿದನು. ಹೆಬ್ಬೆರಳು ಹೋದದ್ದರಿಂದ ಏಕಲವ್ಯನಲ್ಲಿ ಮೊದಲಿನ ಹಸ್ತಲಾಘವವು ಉಳಿಯಲಿಲ್ಲ.

**ಶಿಷ್ಯಪರೀಕ್ಷೆ**—ಜನಮೇಜಯಾ, ಗದಾಯುದ್ಧದಲ್ಲಿ ಪ್ರವೀಣರಾದ ದ್ರೋಣನ ಶಿಷ್ಯರು ಇಬ್ಬರು; ಒಬ್ಬನು ದುರ್ಯೋಧನ, ಇನ್ನೊಬ್ಬನು ಭೀಮ. ಇವರಿಬ್ಬರಲ್ಲಿ ಪರಸ್ಪರ ವೈರಭಾವವಿತ್ತು. ಯಾವತ್ತು ಪ್ರಕಾರದ ರಹಸ್ಯದಲ್ಲಿ ಅಶ್ವತ್ಥಾಮನು ಶ್ರೇಷ್ಠನಾದನು. ಅದರಂತೆ ಖಡ್ಗಯುದ್ಧದಲ್ಲಿ ನಕುಲ-ಸಹದೇವರೂ, ರಥಯುದ್ಧದಲ್ಲಿ ಯುಧಿಷ್ಠಿರನೂ ಶ್ರೇಷ್ಠರಾದರು. ಅರ್ಜುನನು ಎಲ್ಲ ವಿಷಯಗಳಲ್ಲಿಯೂ ಶ್ರೇಷ್ಠನಾದನು. ಆತನು ಅಸ್ತ್ರವಿದ್ಯೆಯಲ್ಲಿ ಪ್ರವೀಣಸಿದ್ಧನಲ್ಲದೆ, ಗುರುಕೃಪೆಗೆ ಪಾತ್ರನಾಗಿದ್ದನು. ಬಲದಲ್ಲಿ ಹೆಚ್ಚಿನವನಾದ ಭೀಮನನ್ನೂ, ವಿದ್ಯೆಯಲ್ಲಿ ಹೆಚ್ಚಿನವನಾದ ಅರ್ಜುನನನ್ನೂ ನೋಡಿ ಧೃತರಾಷ್ಟ್ರನ ದುಷ್ಟಮಕ್ಕಳು ಹೊಟ್ಟೆಕಿಚ್ಚುಪಡುತ್ತಿದ್ದರು. ಹೀಗೆ ಅಸ್ತ್ರವಿದ್ಯೆಯಲ್ಲಿ ಎಲ್ಲರೂ ನಿಪುಣರಾದ ಬಳಿಕ ಗುರಿಹೊಡೆಯುವದರಲ್ಲಿ ಯಾರು ಶ್ರೇಷ್ಠರೆಂಬದನ್ನು ನೋಡುವದಕ್ಕಾಗಿ ದ್ರೋಣಾಚಾರ್ಯರು, ಒಂದು ಕೃತ್ರಿಮ ಭಾಸಪಕ್ಷಿಯನ್ನು ಮಾಡಿಸಿ ಅದನ್ನು ಮರದ ಒಂದು ಕೊಂಬೆಯಲ್ಲಿ ಕೂಡಿಸಿದರು. ಬಳಿಕ ಗುರುಗಳ ಅಪ್ಪಣೆಯಂತೆ ಯಾವತ್ತು ಶಿಷ್ಯರು ಧನುಸ್ಸುಗಳನ್ನು ಸಿದ್ಧಮಾಡಿಕೊಂಡು ಬಂದಬಳಿಕ, ಆಚಾರ್ಯರು ಪರಾಕ್ರಮಿಯಾದ ಯುಧಿಷ್ಠಿರನನ್ನು ಕರೆದು—"ಯುಧಿಷ್ಠಿರಾ, ಅಗೋ, ಆ ಭಾಸಪಕ್ಷಿಗೆ ಗುರಿಯಿಡು; ನಾನು ಹೇಳಿದ ಕೂಡಲೆ ಬಾಣಬಿಟ್ಟು ಅದರ ತಲೆಯನ್ನು ಕತ್ತರಿಸು" ಎಂದು ಹೇಳಿದರು. ಅದರಂತೆ ಯುಧಿಷ್ಠಿರನು ಧನುಸ್ಸಿಗೆ ಬಾಣಹೂಡಿ ಗುರಿಯಿಟ್ಟು ಕುಳಿತುಕೊಳ್ಳಲು, ಸ್ವಲ್ಪಹೊತ್ತು ಸುಮ್ಮನಿದ್ದು ಆಮೇಲೆ ದ್ರೋಣನು ಆತನಿಗೆ—"ಯುಧಿಷ್ಠಿರಾ, ಈಗ ನಿನಗೆ ಈ ಗಿಡವು ಕಾಣುವದೋ ? ಅಥವಾ ನಾನು ಕಾಣುವೆನೋ ? ಅಥವಾ ನಿಮ್ಮ ಅಣ್ಣತಮ್ಮಂದಿರು ಕಾಣುವರೋ?" ಎಂದು ಕೇಳಲು, ಅದಕ್ಕೆ ಧರ್ಮರಾಜನು—"ನನಗೆ ಆ ಗಿಡವೂ ಕಾಣುವದು, ನೀವೂ ಕಾಣುವಿರಿ, ನನ್ನ ಬಂಧುಗಳೂ ಕಾಣುವರು, ಭಾಸಪಕ್ಷಿಯೂ

ಕಾಣುವದು, ಎಲ್ಲವೂ ಕ್ರಮಕ್ರಮವಾಗಿ ಕಾಣುವವು'' ಎಂದು ಉತ್ತರ ಕೊಟ್ಟನು. ಆಗ ದ್ರೋಣನು ಸಿಟ್ಟಾಗಿ—''ನಡೆ ಅತ್ತ! ಗುರಿಹೊಡೆಯುವ ಯೋಗ್ಯತೆಯು ನಿನ್ನದಲ್ಲ'' ಎಂದು ಧಿಕ್ಕರಿಸಿದನು. ಇದರಂತೆ ಅರ್ಜುನನ ಹೊರತು ಉಳಿದ ಶಿಷ್ಯರೆಲ್ಲರೂ ದ್ರೋಣನಿಂದ ತಿರಸ್ಕರಿಸಲ್ಪಟ್ಟರು.

**೧೩೩ನೇ ಅಧ್ಯಾಯ—ಅರ್ಜುನನ ಪರೀಕ್ಷೆಯು—**ಬಳಿಕ ದ್ರೋಣನು ಸ್ವಲ್ಪ ನಕ್ಕು ಅರ್ಜುನನಿಗೆ—''ಇನ್ನು ನೀನು ಗುರಿ ಹೊಡೆ ನೋಡೋಣ,'' ಅನ್ನಲು, ಅರ್ಜುನನು ಧನುಸ್ಸಿಗೆ ಬಾಣ ಹೂಡಿ ಭಾಸ ಪಕ್ಷಿಗೆ ಗುರಿಯಿಟ್ಟನು. ಸ್ವಲ್ಪಹೊತ್ತಿನಮೇಲೆ ದ್ರೋಣನು ಮೊದಲಿನಂತೆಯೇ ಅರ್ಜುನನನ್ನು ಕುರಿತು—''ಅರ್ಜುನಾ, ನಿನಗೆ ಮುಂದೆಯಿರುವ ಭಾಸ ಪಕ್ಷಿಯು ಕಾಣುವದೋ, ಅಥವಾ ಗಿಡವು ಕಾಣುವದೋ, ಅಥವಾ ನಾನು ಕಾಣುವೆನೋ?'' ಎಂದು ಕೇಳಲು, ಅರ್ಜುನನು—''ಒಂದು ಭಾಸಪಕ್ಷಿಯು ಮಾತ್ರ ಕಾಣುವದು, ಗಿಡವೂ ಕಾಣುವದಿಲ್ಲ-ತಾವೂ ಕಾಣುವದಿಲ್ಲ'' ಎಂದು ಹೇಳಿದನು. ಆಗ ಆಚಾರ್ಯರು ಸಂತೋಷಪಟ್ಟು ಮತ್ತು ಒಂದುಕ್ಷಣ ನಿಂತಂತೆ ಮಾಡಿ—''ಅರ್ಜುನಾ, ಈಗ ಭಾಸಪಕ್ಷಿಯು ನಿನಗೆ ಕಾಣುವದೋ? ಅಥವಾ ಮತ್ತೇನಾದರೂ ಕಾಣುವದೋ? ಮತ್ತೆ ಹೇಳು.'' ಅನ್ನಲು, ಅರ್ಜುನನು—''ಭಾಸಪಕ್ಷಿಯ ತಲೆಯುಮಾತ್ರ ಕಾಣುವದು, ದೇಹವು ಕಾಣುವದಿಲ್ಲ'' ಎಂದು ಹೇಳಿದನು. ಅದನ್ನು ಕೇಳಿದಕೂಡಲೆ ಆನಂದದಿಂದ ದ್ರೋಣನ ಮೈಗೂದಲು ನೆಟ್ಟಗಾದವು. ಆಗ ಆತನು—''ಬಾಣಬಿಡು'' ಎಂದು ಹೇಳಲು, ಅರ್ಜುನನು ನಿಶ್ಶಂಕೆಯಿಂದ ಬಾಣವನ್ನು ಬಿಟ್ಟನು. ಆಗ ಆತನ ತೀಕ್ಷ್ಣಬಾಣದಿಂದ ಭಾಸಪಕ್ಷಿಯ ತಲೆಯು ಕತ್ತರಿಸಿ ನೆಲಕ್ಕೆ ಬಿದ್ದಿತು! ಕೂಡಲೆ ದ್ರೋಣನು ಅರ್ಜುನನನ್ನು ಆಲಿಂಗಿಸಿ, ''ಇನ್ನು ಯುದ್ಧದಲ್ಲಿ ದ್ರುಪದನು ಸೋತನೆಂ''ದು ಮನಸ್ಸಿನಲ್ಲಿ ನಿಶ್ಚಯಿಸಿದನು.

ಮುಂದೆ ಕೆಲವು ದಿನಗಳಮೇಲೆ ದ್ರೋಣನು ಶಿಷ್ಯರೊಡನೆ ಗಂಗಾಸ್ನಾನಕ್ಕಾಗಿ ಹೋದನು. ಆಗ ಒಂದು ಮೊಸಳೆಯು ದ್ರೋಣನನ್ನು ಕಿಪ್ಪೊಟ್ಟೆಯ ಮೇಲ್ಭಾಗದಲ್ಲಿ ಸುತ್ತು ಹಾಕಿತು. ಆಗ ತನ್ನಲ್ಲಿ ಆ ಮೊಸಳೆಯನ್ನು ನಿವಾರಿಸುವ ಸಾಮರ್ಥ್ಯವಿದ್ದರೂ ದ್ರೋಣನು ಅಂಜಿದಂತೆಮಾಡಿ ತಮ್ಮ ಶಿಷ್ಯರಿಗೆ, ''ನೀವು ನನ್ನನ್ನು ಮೊಸಳೆಯ ಬಾಯೊಳಗಿಂದ ಉಳಿಸಿ

ಕೊಳ್ಳಿರಿ" ಎಂದು ಹೇಳಿದನು. ಆಗ ಎಲ್ಲ ಶಿಷ್ಯರು ಅತ್ತಿತ್ತ ಎಡತಾಕುತ್ತಿರಲು, ಅರ್ಜುನನು ತನ್ನ ಗುರುವಿಗೆ ಗಾಯವಾಗದಂತೆ ಮೊಸಳೆಯ ಮೇಲೆ ಐದು ಬಾಣಗಳನ್ನು ಬಿಟ್ಟು ಅದನ್ನು ತುಂಡರಿಸಿ, ತನ್ನ ಕರ್ತವ್ಯವನ್ನು ಮಾಡಿದನು. ಆಗ ದ್ರೋಣನು ಸಂತೋಷಪಟ್ಟು ಉದಾರನೂ, ಶೂರನೂ ಆದ ಅರ್ಜುನನನ್ನು ಕುರಿತು—"ವೀರಾ, ಬಿಡುವ, ಹಾಗು ಹಿಂದಕ್ಕೆ ಬರ ಮಾಡಿಕೊಳ್ಳುವ ಮಂತ್ರವನ್ನು ಹೇಳಿ ಈ ಬ್ರಹ್ಮಶಿರವೆಂಬ ಅಸ್ತ್ರವನ್ನು ನಿನಗೆ ಕೊಡುವೆನು ತೆಗೆದುಕೋ. ಈ ಅಸ್ತ್ರವು ಅಪೂರ್ವವಾಗಿದ್ದು, ಬಹು ಉಗ್ರವಾಗಿರುವದು. ನೀನು ಇದನ್ನು ಮನುಷ್ಯರಮೇಲೆ ಎಂದೂ ಬಿಡ ಬೇಡ; ಯಾಕಂದರೆ, ಸಾಧಾರಣ ಸಾಮರ್ಥ್ಯವುಳ್ಳವರಮೇಲೆ ಇದನ್ನು ಬಿಟ್ಟರೆ, ಇದು ಜಗತ್ತನ್ನು ಸುಟ್ಟುಬಿಟ್ಟೀತು. ಆದ್ದರಿಂದ ನೀನು ಶುಚಿರ್ಭೂತನಾಗಿ ಈ ಅಸ್ತ್ರವನ್ನು ಸ್ವೀಕರಿಸು. ಅಮಾನುಷ ಶತ್ರುವು ನಿನಗೆ ಪೀಡಿಸಹತ್ತಿದಾಗ ಮಾತ್ರ ಈ ಅಸ್ತ್ರವನ್ನು ಬಿಡು" ಎಂದು ಹೇಳಲು, "ಹಾಗೆಯೇ ಮಾಡುವೆನು" ಎಂದು ಕೈಜೋಡಿಸಿ ವಚನಕೊಟ್ಟು, ಅರ್ಜುನನು ಆ ಅಸ್ತ್ರವನ್ನು ಸ್ವೀಕರಿಸಿದನು.

**೧೩೪ನೇ ಅಧ್ಯಾಯ—ಕೌರವ ಪಾಂಡವರ ಪರೀಕ್ಷೆಯು:—** ಜನಮೇಜಯಾ, ಹೀಗೆ ಕೌರವ-ಪಾಂಡವರ ಅಸ್ತ್ರವಿದ್ಯಾಭ್ಯಾಸವು ಮುಗಿಯಲು, ಕೃಪ, ಭೀಷ್ಮ, ವ್ಯಾಸ ಮೊದಲಾದವರ ಸಮಕ್ಷ ದ್ರೋಣನು ಧೃತರಾಷ್ಟ್ರರಾಜನನ್ನು ಕುರಿತು—"ಎಲೈ ಕುರುಕುಲದೀಪಕಮಹಾರಾಜನೇ, ನಿನ್ನ ಕುಮಾರರ ವಿದ್ಯಾಭ್ಯಾಸವು ಮುಗಿದಿರುವದು; ಆದ್ದರಿಂದ ನೀನು ಅನುಜ್ಞೆಯಿತ್ತರೆ, ಅವರು ತಮ್ಮ ವಿದ್ಯೆಯನ್ನು ತೋರಿಸುವರು," ಎಂದು ಹೇಳಲು, ಧೃತರಾಷ್ಟ್ರನು ಸಂತುಷ್ಟನಾಗಿ ದ್ರೋಣನನ್ನು ಕುರಿತು—"ಅಹೋ ಬ್ರಾಹ್ಮಣಶ್ರೇಷ್ಠ ಭಾರದ್ವಾಜರೇ, ನೀವು ಬಹು ದೊಡ್ಡ ಕೆಲಸ ಮಾಡಿದಿರಿ. ಇನ್ನು ನಿಮ್ಮ ಇಚ್ಛೆಯಂತೆ ರಂಗಭೂಮಿಯು ಸಿದ್ಧವಾಗಲಿ. ನೋಡಲಿಕ್ಕೆ ನನಗೆ ಕಣ್ಣುಗಳಿಲ್ಲದ್ದರಿಂದ ನನಗೆ ಬಹಳ ದುಃಖವಾಗುತ್ತಿದ್ದರೂ, ಕಣ್ಣುಳ್ಳವರಾದರೂ ನನ್ನ ಕುಮಾರರ ಅಸ್ತ್ರವಿದ್ಯಾನಿಪುಣತ್ವವನ್ನು ನೋಡಬೇಕೆಂಬ ಕುತೂಹಲವು ನನ್ನಲ್ಲಿ ಉಂಟಾಗಿರುತ್ತದೆ. ವಿದುರಾ, ಗುರು ದ್ರೋಣಾಚಾರ್ಯರು ಹೇಳಿದಂತೆ ಎಲ್ಲ ಕೆಲಸವನ್ನು ಮಾಡು,"

ಎಂದು ನುಡಿಯಲು, ವಿದುರನು ಒಂದು ಉತ್ತಮವಾದ ಬೈಲುಪ್ರದೇಶವನ್ನು ನೋಡಿ, ವೀರರ ಸಮೂಹದೊಡನೆ ಕ್ಷೇತ್ರದೇವತೆಯನ್ನು ಪೂಜಿಸಿ, ಉತ್ತಮವಾದ ರಂಗಭೂಮಿಯನ್ನು ಸಿದ್ಧಮಾಡಿಸಿದನು. ಆ ರಂಗಭೂಮಿಯಲ್ಲಿ ಕುಳಿತುಕೊಳ್ಳುವದಕ್ಕಾಗಿ ಗಂಡಸರಿಗೊಂದು ಹೆಂಗಸರಿಗೊಂದು ಹೀಗೆ ಎರಡು ಸುಂದರ ಮಂದಿರಗಳನ್ನು ಕಟ್ಟಿಸಿ, ವಿವಿಧ ಸಾಧನಗಳಿಂದ ರಂಗಭೂಮಿಯನ್ನು ಶೃಂಗರಿಸಿದರು. ಮುಂದೆ ಗೊತ್ತುಮಾಡಿದ ದಿವಸವು ಒದಗಿದಕೂಡಲೆ, ಧೃತರಾಷ್ಟ್ರರಾಜನು ಭೀಷ್ಮ- ಕೃಪಾಚಾರ್ಯರನ್ನು ಮುಂದೆ ಮಾಡಿಕೊಂಡು ರಂಗಭೂಮಿಯ ಮಂದಿರವನ್ನು ಪ್ರವೇಶಿಸಿದನು. ಅತ್ತ ಗಾಂಧಾರಿ, ಕುಂತಿ ಮೊದಲಾದ ರಾಜಸ್ತ್ರೀಯರು ತಮಗಾಗಿ ಸಿದ್ಧಮಾಡಿದ್ದ ಮಂದಿರದೊಳಗಿನ ಮಂಚದಮೇಲೆ ಕುಳಿತುಕೊಂಡರು. ನಾಲ್ಕು ವರ್ಣಗಳ ಪ್ರೇಕ್ಷಕಜನರಿಂದ ರಂಗಭೂಮಿಯು ಗಜಬಜಿಸಿ ಹೋಗಿತ್ತು. ಅಷ್ಟರಲ್ಲಿ ದ್ರೋಣಾಚಾರ್ಯನು ಮಗ ಅಶ್ವತ್ಥಾಮನೊಡನೆ ರಂಗಭೂಮಿಗೆ ಬಂದನು. ಆಗ ಸಾಮರ್ಥ್ಯಶಾಲಿಯಾದ ಆತನು ದೇವತಾಪೂಜೆಯನ್ನು ಮಾಡಿ, ವಿದ್ವಾಂಸರಾದ ಬ್ರಾಹ್ಮಣರಿಂದ ಪುಣ್ಯಾಹವಾಚನವನ್ನು ಮಾಡಿಸಿದನು. ಆಮೇಲೆ ವಿವಿಧ ಶಸ್ತ್ರಾಸ್ತ್ರಗಳನ್ನು ತಕ್ಕೊಂಡು ಆಳುಗಳು ಬಂದರು. ತರುವಾಯ ಭರತವಂಶದ ಕುಲದೀಪಕ ರಾಜಪುತ್ರರು ತಾವು ಕಲಿತಿದ್ದ ಶಸ್ತ್ರಾಸ್ತ್ರವಿದ್ಯೆಯ ಚಮತ್ಕಾರಗಳನ್ನು, ಹಿರಿಯರಾದ ಬಳಿಕ ಕಿರಿಯರು ಎಂಬ ಕ್ರಮದಂತೆ, ಧರ್ಮರಾಜನಿಂದ ಆರಂಭಮಾಡಿ ಎಲ್ಲರೂ ಮಾಡಿತೋರಿಸಿದರು. ಅದನ್ನು ನೋಡಿ ಜನರಿಗೆ ಬಹಳ ಕೌತುಕವಾಯಿತು. "ಶಾಬಾಸ ಶಾಬಾಸ" ಎಂಬ ಧ್ವನಿಯಿಂದ ರಂಗಭೂಮಿಯು ತುಂಬಿಹೋಯಿತು. ಹೀಗಿರುವಾಗ ಭೀಮ-ದುರ್ಯೋಧನರಿಬ್ಬರೂ ಗದೆಗಳನ್ನು ಹಿಡಕೊಂಡು ಮದ್ದಾನೆಗಳಂತೆ ರಂಗಭೂಮಿಯಲ್ಲಿ ಬಂದು ಗದೆಗಳನ್ನು ತಿರುವಹತ್ತಿದರು. ಆ ರಾಜಪುತ್ರರ ಯಾವತ್ತು ಪರಾಕ್ರಮವನ್ನು ವಿದುರನು ಧೃತರಾಷ್ಟ್ರನಿಗೆ ಹೇಳುತ್ತಿದ್ದನು. ಕುಂತಿಯು ಗಾಂಧಾರಿಗೆ ಹೇಳುತ್ತಿದ್ದಳು.



**೧೩೫ನೇ ಅಧ್ಯಾಯ— ಅರ್ಜುನಕೃತ ಸ್ವಾಸ್ತ್ರಶಿಕ್ಷಾ ದರ್ಶನ—** ಜನಮೇಜಯಾ, ಆ ಭೀಮ-ದುರ್ಯೋಧನರು ರಂಗಭೂಮಿಯಲ್ಲಿದ್ದಾಗ ಕೆಲವರು ಭೀಮನ ಪಕ್ಷದವರಾದರು ; ಕೆಲವರು ದುರ್ಯೋಧನನ ಪಕ್ಷದವರಾದರು. ಕೆಲವರು "ಪೂತುರೇ ವೀರಾ, ದುರ್ಯೋಧನಾ" ಎಂದು ಧನ್ಯವಾದಮಾಡುವರು ; ಕೆಲವರು "ಪೂತುರೇ ವೀರಾ, ಭೀಮಾ" ಎಂದು ಧನ್ಯವಾದಮಾಡುವರು .ಹೀಗೆ ರಂಗಭೂಮಿಯು ಜನರಕಲಕಲಧ್ವನಿಯಿಂದ ತುಂಬುತ್ತಿರಲು, ದ್ರೋಣಾಚಾರ್ಯರು ಮಗನಾದ ಅಶ್ವತ್ಥಾಮನಿಗೆ— "ಈ ಮಹಾಪರಾಕ್ರಮಿಗಳೂ, ಯುದ್ಧನಿಪುಣರೂ ಆದ ಭೀಮ-ದುರ್ಯೋಧನರನ್ನು ನೀನು ತಡೆದು ನಿಲ್ಲಿಸು" ಎಂದು ಹೇಳಲು, ಅಶ್ವತ್ಥಾಮನು ಅವರನ್ನು ಹಿಂದಕ್ಕೆ ಸರಿಸಿ ಅವರವರ ಸ್ಥಳದಲ್ಲಿ ಕುಳ್ಳಿರಿಸಿದನು. ಆಗ ದ್ರೋಣಾಚಾರ್ಯರು ರಂಗಭೂಮಿಯಲ್ಲಿ ಎದ್ದುನಿಂತು:—"ನನಗೆ ಮಗನಿಗಿಂತ ಪ್ರಿಯನೂ, ಶಸ್ತ್ರಾಸ್ತ್ರವಿದ್ಯೆಯಲ್ಲಿ ನಿಷ್ಣಾತನೂ, ಪ್ರತ್ಯಕ್ಷ ವಿಷ್ಣುವಿನಂತೆ ಇರುವವನೂ ಆದ ಈ ಇಂದ್ರಪುತ್ರ ಅರ್ಜುನನನ್ನು ನೋಡಿರಿ" ಎಂದು ಹೇಳಿದಕೂಡಲೆ, ಗುರುಗಳ ಅಪ್ಪಣೆಯಂತೆ ಅರಿಷ್ಟನಿವಾರಣೆಗಾಗಿ ಮಂತ್ರವನ್ನು ಜಪಿಸಿ, ಸುವರ್ಣಕವಚವನ್ನೂ, ಬಾಣತುಂಬಿದ ಬತ್ತಳಿಕೆಯನ್ನೂ ಧರಿಸಿ, ಧನುಸ್ಸನ್ನು ತಕ್ಕೊಂಡು ತರುಣ ರಾಜಪುತ್ರನಾದ ಅರ್ಜುನನು ರಂಗಭೂಮಿಗೆ ಬಂದನು. ಆಗ ರಂಗಭೂಮಿಯು ಆನಂದದಿಂದ ಪ್ರಫುಲ್ಲಿತವಾಗಿರುವಂತೆ ತೋರಿತು. ಶಂಖಗಳೂ, ಬೇರೆ ವಾದ್ಯಗಳೂ ಸುತ್ತುಮುತ್ತು ಬಾರಿಸತೊಡಗಿದವು. ಆಗ ಜನರಮುಖದಿಂದ—"ಈತನೇ ಕುಂತಿಯ ಮಗನಾದ ಮಧ್ಯಪಾಂಡವ ಅರ್ಜುನನು ; ಈತನೇ ಇಂದ್ರನ ಮಗನು ; ಈತನೇ ಕುರುಕುಲವನ್ನು ರಕ್ಷಿಸುವವನು. ಈತನು ಅಸ್ತ್ರವಿದ್ಯೆಯಲ್ಲಿ ಶ್ರೇಷ್ಠನೂ, ಧಾರ್ಮಿಕರಲ್ಲಿ ಅಗ್ರಗಣ್ಯನೂ, ಸಚ್ಛೀಲಪುರುಷರಲ್ಲಿ ದೊಡ್ಡ ಸಚ್ಛೀಲಪುರುಷನೂ ಆಗಿರುವನು." ಎಂಬಿವೇ ಮೊದಲಾದ ಜನರ ಧನ್ಯೋದ್ಗಾರಗಳು ಕುಂತಿಯ ಕಿವಿಗೆ ಬೀಳಲು, ಆಕೆಯ ಮೊಲೆಯ ಹಾಲು ಚಿಮ್ಮಿ ಆನಂದಾಶ್ರುಗಳು ಸುರಿದು ಆಕೆಯ ವಕ್ಷಸ್ಥಳವು ತೊಯ್ದು ಹೋಯಿತು. ಇತ್ತ ಧೃತರಾಷ್ಟ್ರನು ವಿದುರನಿಗೆ—"ರಂಗಭೂಮಿಯಲ್ಲಿ ಇಷ್ಟು ಗದ್ದಲವೇಕೆ ?" ಎಂದು ಕೇಳಲು, "ರಂಗಭೂಮಿ ಯಲ್ಲಿ ಅರ್ಜುನನು

ಅರಸರು ಸಿಟ್ಟಾಗಿ ಯುದ್ಧಕ್ಕೆ ಸಿದ್ಧರಾದರು. "ಕ್ಷತ್ರಿಯರ ಅಪಮಾನ ಮಾಡಿದ ಈ ದ್ರುಪದನನ್ನು, ಆತನ ಮಕ್ಕಳಿಂದ ಸಹಿತವಾಗಿ ಕೊಂದು ಬಿಡೋಣ ; ಸ್ವಯಂವರವು ಬ್ರಾಹ್ಮಣರಿಗೆ ಯೋಗ್ಯವಲ್ಲ; ಅದು ಕ್ಷತ್ರಿಯರಿಗೆ ಯೋಗ್ಯವು. ದ್ರೌಪದಿಯು ನಮ್ಮಲ್ಲಿ ಒಬ್ಬನನ್ನು ಲಗ್ನವಾಗದೆ, ಬ್ರಾಹ್ಮಣನನ್ನೇ ಲಗ್ನವಾಗಲಿಚ್ಛಿಸಿದರೆ, ಆಕೆಯನ್ನು ಬೆಂಕಿಯಲ್ಲಿ ಹಾಕಿ ನಾವು ನಮ್ಮನಮ್ಮ ದೇಶಗಳಿಗೆ ಹೊರಟುಹೋಗೋಣ ; ಆದರೆ ದುಷ್ಕೃತನದಿಂದಾಗಲಿ, ಕನ್ಯೆಯ ಇಚ್ಛೆಯಿಂದಾಗಲಿ ಈ ಬ್ರಾಹ್ಮಣನು ಪೃಥ್ವೀಪತಿಗಳ ಅಪಮಾನಮಾಡಿದ್ದರೂ, ಈತನನ್ನು ಕೊಲ್ಲುವದುಮಾತ್ರ ಯಾವ ಬಗೆಯಿಂದಲೂ ಯೋಗ್ಯವಲ್ಲ ; ಯಾಕಂದರೆ ನಮ್ಮ ರಾಜ್ಯವು, ನಮ್ಮ ಜೀವಿತವು, ನಮ್ಮ ಪುತ್ರಪೌತ್ರರು, ಉಳಿದ ಸಂಪತ್ತು ಇವೆಲ್ಲ ಬ್ರಾಹ್ಮಣರ ಸಲುವಾಗಿಯೇ ಇರುವವು. ಈಗ ದ್ರುಪದನ ಶಾಸನಮಾಡುವದಾದರೂ, ಇನ್ನುಮೇಲೆ ಮತ್ತೊಬ್ಬರು ಹೀಗೆ ಸ್ವಯಂವರದಲ್ಲಿ, ಅರಸರ ಅಪಮಾನಮಾಡದಂತೆ ಎಚ್ಚರಪಡಬೇಕೆಂತಲೇ'' ಎಂದು ನುಡಿದು, ಶಸ್ತ್ರಾಸ್ತ್ರಗಳನ್ನು ಸಜ್ಜುಮಾಡಿಕೊಂಡು, ಎಲ್ಲ ಅರಸರು ದ್ರುಪದನಮೇಲೆ ದುಮುಕಿದರು. ಅದನ್ನು ನೋಡಿ ದ್ರುಪದನು—"ಬ್ರಾಹ್ಮಣರು ಸಿಟ್ಟಾಗಿ ಯಾವತ್ತು ಕ್ಷತ್ರಿಯರನ್ನೇ ಸುಟ್ಟುಬಿಟ್ಟಾರೆಂ''ದು ಅಂಜಿ ಅವರಿಗೆ ಶರಣು ಹೋದನು. ಇತ್ತ ಅರ್ಜುನನು ಸ್ವಯಂವರದಲ್ಲಿ ಸಿದ್ಧಮಾಡಿ ಇಟ್ಟಿದ್ದ ಧನುಸ್ಸನ್ನು ತಕ್ಕೊಂಡು ರಾಜರ ಸಮೂಹಕ್ಕೆ ಎದುರಾದನು. ಭೀಮನು ಒಂದು ಗಿಡವನ್ನು ಕಿತ್ತಿ, ಅದರ ಎಲೆಗಳನ್ನು ಸವರಿ ಒಗೆದು, ದಂಡಧಾರಿ ಯಮನಂತೆ ಅರ್ಜುನನಿಗೆ ಸಹಾಯಕನಾಗಿ ನಿಂತುಕೊಂಡನು. ಅಣ್ಣನ ಈ ಅಮಾನುಷಕೃತ್ಯವನ್ನು ನೋಡಿ ಅರ್ಜುನನು ಬೆರಗಾದನು. ಶ್ರೀಕೃಷ್ಣನೂ, ಬಲರಾಮನೂ—"ಇವರು ಭೀಮಾರ್ಜುನರೆಂ''ದು ಗೊತ್ತು ಹಿಡಿದರು ; ಆಗಲೆ ಸಭಾಮಂಟಪದಿಂದ ಎದ್ದುಹೋದ ಮೂವರು, ಯುಧಿಷ್ಠಿರ, ನಕುಲ, ಸಹದೇವರೆಂದು ನಿಶ್ಚಯಿಸಿ, ಅರಗಿನಮನೆಯಲ್ಲಿ ತಮ್ಮ ಪಾಂಡವರು ಸರ್ವಥಾ ಸುಟ್ಟಿರುವದಿಲ್ಲವೆಂದು ಅವರು ಆನಂದಪಟ್ಟರು.

**೧೯೦ನೇ ಅಧ್ಯಾಯ — ಅರಸರ ಪರಾಜಯ—** ಹೀಗೆ ಯುದ್ಧಪ್ರಸಂಗಬರಲು, ಯಾವತ್ತು ಬ್ರಾಹ್ಮಣರು ಒಳ್ಳೇ ಆವೇಶದಿಂದ ತಮ್ಮತಮ್ಮ

ಹಾದಿಯನ್ನು ಮಾಡಿಕೊಡುತ್ತಿರಲು, ತೇಜಃಪುಂಜನಾದ ವಿಶಾಲನೇತ್ರದ ಕರ್ಣನು ರಂಗಭೂಮಿಯಲ್ಲಿ ಬಂದನು. ಹುಟ್ಟುವಾಗಲೇ ಇದ್ದ ಕವಚ ಕುಂಡಲಗಳಿಂದ ಆತನ ಮುಖಕ್ಕೆ ವಿಶೇಷವಾದ ಶೋಭೆಯುಂಟಾಗಿತ್ತು. ಟೊಂಕದಲ್ಲಿ ಖಡ್ಗವು ಅಲೆದಾಡುತ್ತಿರಲು, ಆತನು ಕೈಯ್ಯಲ್ಲಿ ಧನುಸ್ಸನ್ನು ಹಿಡಿದು, ಒಂದು ಗುಡ್ಡವೇ ಸಾಗಿಬರುತ್ತಿರುವಂತೆ ತೋರಿದನು. ಆ ವೀರನು ಸುತ್ತುಮುತ್ತು ರಂಗಭೂಮಿಯನ್ನು ನೋಡಿ, ದ್ರೋಣ-ಕೃಪರಿಗೆ ಅಷ್ಟರಮಟ್ಟಿಗೆ ಮಾನಕೊಟ್ಟು ನಮಸ್ಕರಿಸಿದನು. ಬಳಿಕ ವಾಕ್‌ಚತುರನಾದ ಕರ್ಣನು ಅರ್ಜುನನನ್ನು ಕುರಿತು—"ಅರ್ಜುನಾ, ನೀನು ಏನೇನು ಚಮತ್ಕಾರವನ್ನು ಮಾಡಿ ತೋರಿಸಿದೆಯೋ ಅದನ್ನೆಲ್ಲ, ಅಥವಾ ಅದಕ್ಕೂ ಹೆಚ್ಚು ಚಮತ್ಕಾರಗಳನ್ನು ರಂಗಭೂಮಿಯಲ್ಲಿ ಪ್ರೇಕ್ಷಕರಮುಂದೆ ನಾನು ಮಾಡಿ ತೋರಿಸುವೆನು; ನೀನು ಗರ್ವಕ್ಕೆ ಆಸ್ಪದಕೊಡಬೇಡ," ಎಂದು ಹೇಳಿ, ಅರ್ಜುನನು ಮಾಡಿತೋರಿಸಿದ ಚಮತ್ಕಾರಗಳನ್ನೆಲ್ಲ ತೋರಿಸಿದನು. ಅದನ್ನು ನೋಡಿ ದುರ್ಯೋಧನನ ಮನಸ್ಸಿಗೆ ಆನಂದವಾಯಿತು. ಅರ್ಜುನನ ಮನಸ್ಸಿನಲ್ಲಿ ಲಜ್ಜೆಯು ಉತ್ಪನ್ನವಾಗಿ, ಆತನು ಕ್ರೋಧಾಯಮಾನನಾದನು. ಆಗ ದುರ್ಯೋಧನನು ಬಂಧುಗಳೊಡನೆ ಕರ್ಣನನ್ನು ಆಲಿಂಗಿಸಿ ಆತನನ್ನು ಕುರಿತು—

ದುರ್ಯೋಧನ—ವೀರಾ, ನಿನಗೆ ಸ್ವಾಗತವು. ಯಶಸ್ಸನ್ನುಂಟು ಮಾಡುವ ನೀನು ಇದೇಕಾಲದಲ್ಲಿ ಬಂದದ್ದು ಬಹಳ ಆನಂದಕರವು. ನನ್ನಿಂದ ಕುರುರಾಜ್ಯದಲ್ಲಿ ನಿನಗೆ ಬೇಕಾದ ಸುಖಗಳನ್ನು ಸಂಪಾದಿಸಿಕೋ.

ಕರ್ಣ—ಹಾಗಿದ್ದರೆ ನಾನು ಕೃತಕೃತ್ಯನಾದೆನೆಂದು ಭಾವಿಸುವೆನು. ದುರ್ಯೋಧನಾ, ನಿನ್ನೊಡನೆ ಸ್ನೇಹಬಳಿಸುವದು ನನಗೆ ಬೇಕಾದಮಾತು. ನಾನು ಅರ್ಜುನನೊಡನೆ ದ್ವಂದ್ವಯುದ್ಧಮಾಡಲು ಇಚ್ಛಿಸುವೆನು.

ದುರ್ಯೋಧನ—ಎಲೈ ಶೂರಾ, ನನ್ನೊಡನೆ ಸರ್ವಸುಖಗಳನ್ನು ಭೋಗಿಸುತ್ತ, ನಮ್ಮ ಬಂಧುಗಳ ಹಿತದ ಸಲುವಾಗಿ ಯತ್ನಿಸುತ್ತಿರು; ಮತ್ತು ಎಲ್ಲ ವೈರಿಗಳ ತಲೆಗಳನ್ನು ಕಾಲಿನಿಂದ ಮೆಟ್ಟು.

ಅರ್ಜುನ (ತನ್ನ ತಿರಸ್ಕಾರವನ್ನು ಸಹಿಸದೆ)—ಕರ್ಣಾ, ಕರೆಸದೆ ತಾವಾಗಿ ಬಂದು ಸೇರಿಕೊಳ್ಳುವವರಿಗೂ, ವ್ಯರ್ಥ ಹರಟುವವರಿಗೂ ಸತ್ತ

ಬಳಿಕ ಉಂಟಾಗುವ ಗತಿಯು, ಈಗ ನನ್ನಿಂದ ನೀನು ಸಾಯಲು, ನಿನಗೆ ದೊರೆಯುವದು.

ಕರ್ಣ—ಎಲಾ ಅರ್ಜುನಾ, ಈ ರಂಗಭೂಮಿಯು ಎಲ್ಲರದೂ ಇರುವದು; ನಿನ್ನೊಬ್ಬನದೇ ಇಲ್ಲಿ ಇಟ್ಟಿದ್ದೇನು? ಅರಸರ ಶ್ರೇಷ್ಠತ್ವವು ಅವರ ಪರಾಕ್ರಮವನ್ನವಲಂಬಿಸಿರುವದು; ಮತ್ತು ಬಲಿಷ್ಠರ ಪಕ್ಷಕ್ಕೇ ನ್ಯಾಯ್ಯವೆಂಬದನ್ನು ತಿಳಿಯಬೇಕು. ಹೇಡಿತನದಿಂದ ಹೆಚ್ಚುಕಡಿಮೆ ಮಾತಾಡುವದು ಯಾತಕ್ಕೆಬೇಕು? ಏನು ಹೇಳುವದನ್ನು ಬಾಣದಿಂದ ಹೇಳು ನೋಡೋಣ? ಅಂದರೆ ಗುರುಗಳ ಸಮಕ್ಷ ಬಾಣದಿಂದ ನಿನ್ನ ತಲೆಯನ್ನು ಹಾರಿಸುವೆನು.

ಕರ್ಣನ ಈ ಮಾತುಗಳನ್ನು ಕೇಳಿ ಅರ್ಜುನನು ದ್ರೋಣನ ಅಪ್ಪಣೆ ಪಡೆದು ಅವಸರದಿಂದ ಬಂಧುಗಳನ್ನು ಆಲಿಂಗಿಸಿ, ಯುದ್ಧಕ್ಕೆ ಸಿದ್ಧನಾಗಿ ಕರ್ಣನಿಗೆ ಎದುರಾದನು. ಇತ್ತ ದುರ್ಯೋಧನನು ತನ್ನ ಬಂಧುಗಳೊಡನೆ ಕರ್ಣನನ್ನು ಆಲಿಂಗಿಸಿದಬಳಿಕ ಕರ್ಣನು ಧನುರ್ಧಾರಿಯಾಗಿ ಅರ್ಜುನನಿಗೆ ಎದುರಾದನು. ಅರ್ಜುನನಿದ್ದ ನಿಟ್ಟಿನಲ್ಲಿ ದ್ರೋಣ, ಕೃಪ, ಭೀಷ್ಮರು ನಿಂತುಕೊಂಡರು; ಕರ್ಣನಿದ್ದ ನಿಟ್ಟಿನಲ್ಲಿ ದುರ್ಯೋಧನನೇ ಮೊದಲಾದವರು ನಿಂತುಕೊಂಡರು. ಉಳಿದ ಪ್ರೇಕ್ಷಕರಲ್ಲಿ ಕೆಲವರು ಈಕಡೆಗೆ, ಕೆಲವರು ಆಕಡೆಗೆ ಆದರು. ಹೆಂಗಸರಲ್ಲಿಯೂ ಎರಡು ಪಂಗಡಗಳಾದವು. ತನ್ನ ಇಬ್ಬರು ಮಕ್ಕಳೂ ಯುದ್ಧಕ್ಕೆ ಸಿದ್ಧರಾದದ್ದನ್ನುನೋಡಿ ಕುಂತಿಯು ಮೂರ್ಛಿತಳಾದಳು. ಆಗ ವಿದುರನು ದಾಸಿಯ ಮುಖಾಂತರ ಶೀತೋಪಚಾರಗಳಿಂದ ಆಕೆಯನ್ನು ಎಚ್ಚರಗೊಳಿಸಿದನು. ಆಗ ಕುಂತಿಗೆ ಏನೂ ತೋಚದಾಯಿತು. ಹೀಗೆ ಕರ್ಣಾರ್ಜುನರಿಬ್ಬರೂ ಯುದ್ಧಕ್ಕೆ ಸಿದ್ಧರಾಗಿ ನಿಂತಿರುವಾಗ, ಕೃಪಾಚಾರ್ಯರು ಕರ್ಣನನ್ನು ಕುರಿತು—"ಕರ್ಣಾ, ಈತನು ಕುಂತಿಯ ಚಿಕ್ಕಮಗನು; ಪಂಡುವು ಈತನ ತಂದೆಯು; ಈತನು ಕೌರವಕುಲದವನಾಗಿ ದ್ವಂದ್ವಯುದ್ಧದಲ್ಲಿ ಪ್ರವೀಣನಾಗಿರುವನು; ಈತನಿಗೆ ಆ ಯುದ್ಧದ ರೀತಿ ನಡತೆಗಳು ಗೊತ್ತಿರುವವು; ಈತನು ನಿನ್ನೊಡನೆ ದ್ವಂದ್ವಯುದ್ಧಮಾಡಲು ನಿಸ್ಸಂಶಯ ಸಿದ್ಧನಿರುವನು; ಆದರೆ ಶೂರಾ, ನೀನಾದರೂ ಇದರಂತೆ ನಿನ್ನ ತಂದೆಯಾರು? ತಾಯಿಯಾರು? ಯಾವ

ರಾಜಕುಲದಲ್ಲಿ ನಿನ್ನ ಜನ್ಮವಾಗಿರುವದು ? ಇದನ್ನೆಲ್ಲ ಹೇಳು ; ಅಂದರೆ ನಿನ್ನೊಡನೆ ಯುದ್ಧಮಾಡುವದು ಯೋಗ್ಯವೋ ಅಯೋಗ್ಯವೋ ಎಂಬ ದನ್ನು ಅರ್ಜುನನು ಹೇಳುವನು; ಯಾಕಂದರೆ ಹೆಸರುವಾಸಿಯುಲ್ಲದ ಜಾತಿ-ಕುಲಗಳಲ್ಲಿ ಹುಟ್ಟಿದವರೊಡನೆ ರಾಜಪುತ್ರರು ಯುದ್ಧಮಾಡುತ್ತಿರು ವದಿಲ್ಲ''

ಕೃಪನ ಈ ಮರ್ಮಭೇದಕ ಮಾತುಗಳನ್ನು ಕೇಳಿ ಕರ್ಣನು ನಾಚಿ ಕೆಯಿಂದ ತಲೆಯನ್ನು ತಗ್ಗಿಸಿದನು. ಆತನ ಮುಖವು ಬಾಡಿತು. ಆಗ ದುರ್ಯೋಧನನು—''ಗುರುಗಳೇ, ಈ ಸಂಬಂಧದಿಂದ ಶಾಸ್ತ್ರದಲ್ಲಿ ಹೀಗೆ ಹೇಳಿರುವದು ಅರಸನ ಕುಲೀನತೆಯನ್ನು ಮೂರು ಪ್ರಕಾರದಿಂದ ಅರಿ ಯಬೇಕು. ಮೊದಲನೆಯದು ದೊಡ್ಡ ಕುಲದಲ್ಲಿ ಹುಟ್ಟುವದು, ಎರಡ ನೆಯದು ಶರೀರದಲ್ಲಿ ಶೌರ್ಯವಿರುವದು, ಮೂರನೆಯದು ಸೇನಾಪತಿಯು ಅಧಿಕಾರವಿರುವದು. ಇನ್ನು ಅರಸರಲ್ಲದವರೊಡನೆ ಅರ್ಜುನನು ಯುದ್ಧ ಮಾಡುವದಿಲ್ಲವೆಂಬಂತಿದ್ದರೆ, ಇಗೋ ನೋಡಿರಿ, ಈಗಲೇ ನಾನು ಈ ಕರ್ಣನಿಗೆ ಅಂಗದೇಶದ ರಾಜ್ಯದ ಅಭಿಷೇಕಮಾಡುವೆನು,'' ಎಂದು ಹೇಳಿ, ಅಲ್ಲಿಯೇ ಕರ್ಣನನ್ನು ಸುವರ್ಣಸಿಂಹಾಸನದಲ್ಲಿ ಕುಳ್ಳಿರಿಸಿ ವಿಧ್ಯು ಕ್ತವಾಗಿ ಅಂಗರಾಜ್ಯಾಭಿಷೇಕಮಾಡಿಸಿದನು. ಆಗ ಶೂರ ಕರ್ಣನು ದುರ್ಯೋಧನನಿಗೆ—''ರಾಜಾ, ನೀನು ಈ ರಾಜ್ಯವನ್ನು ನನಗೆ ಕೊಟ್ಟಿ ರುವೆ. ಇದಕ್ಕಾಗಿ ನಾನು ನಿನಗೆ ಏನುಕೊಡಬೇಕು ಹೇಳು ; ನೀನು ಹೇಳಿದ ಕೆಲಸವನ್ನು ಮಾಡಿಕೊಡುವೆನು,'' ಅನ್ನಲು, ದುರ್ಯೋಧನನು— ''ನಿನ್ನೊಡನೆ ಪೂರ್ಣಸ್ನೇಹವಿರಬೇಕೆಂಬದೇ ನನ್ನ ಇಚ್ಛೆಯು,'' ಎಂದು ಹೇಳಿದನು. ಅದಕ್ಕೆ ಕರ್ಣನು ''ಹಾಗೇ ಆಗಲೆಂ''ದು ಹೇಳಲು, ಅವರು ಆನಂದದಿಂದ ಪರಸ್ಪರರನ್ನು ಆಲಿಂಗಿಸಿದರು.

**೧೩೭ನೇ ಅಧ್ಯಾಯ—ಕರ್ಣನ ಅಪಮಾನ**—ಅಷ್ಟರಲ್ಲಿ ಕರ್ಣನ ಧರ್ಮಪಿತನಾದ ಅಧಿರಥಸೂತನು ಯುದ್ಧಪ್ರಸಂಗವನ್ನರಿತು ಭಯದಿಂದ ರಂಗಭೂಮಿಯಲ್ಲಿ ಬಂದನು. ಆಗ ಅವನ ಮೈಮೇಲಿನ ವಸ್ತ್ರವು ಕಳಚಿ ಬೀಳುತ್ತಿತ್ತು ; ಅವನ ಸರ್ವಾಂಗವು ಬೆವತಿತ್ತು ; ಆತನ ಮೈಯು ನಡಗುತ್ತಿತ್ತು. ಆತನನ್ನು ನೋಡಿದಕೂಡಲೆ ಕರ್ಣನು ತಂದೆಯನ್ನು

ಬಹುಮಾನಿಸುವದಕ್ಕಾಗಿ ಕೈಯೊಳಗಿನ ಧನುಸ್ಸನ್ನು ಚೆಲ್ಲಿಕೊಟ್ಟು, ಅದೇ ಅಭಿಷೇಕವಾದದ್ದರಿಂದ ಹಸಿಯಾಗಿದ್ದ ತಲೆಯಿಂದಲೇ ತಂದೆಯ ಚರಣಕ್ಕೆ ಎರಗಿದನು. ಆಗ ಅಧಿರಥ ಸಾರಥಿಯು "ಮಗನೇ" ಎಂಬ ದೊಂದೇ ಅರ್ಥಪೂರ್ಣ ಶಬ್ದವನ್ನು ಉಚ್ಚರಿಸಿ, ಪ್ರೇಮದಿಂದ ಮೈಮರೆತು ಕರ್ಣನನ್ನು ಅಪ್ಪಿಕೊಂಡು, ಮೊದಲೇ ಅಭಿಷೇಕದಿಂದ ತೊಯ್ದಿದ್ದ ಕರ್ಣನ ತಲೆಯನ್ನು ಅಶ್ರುಗಳಿಂದ ಮತ್ತೆ ತೋಯಿಸಿದನು. ಅದನ್ನು ನೋಡಿ, ಕರ್ಣನು ಈ ಸಾರಥಿಯ ಮಗನೆಂದು ತಿಳಿದು ಭೀಮನು ನಕ್ಕು ಕರ್ಣನನ್ನು ಕುರಿತು—"ಎಲೈ ಸೂತಪುತ್ರಾ, ಅರ್ಜುನನೊಡನೆ ಯುದ್ಧ ಮಾಡಿ ಸಾಯುವ ಯೋಗ್ಯತೆಯು ನಿನ್ನದಲ್ಲ. ನಿನ್ನದೆಂದು ಬೇಗನೆ ಕುದುರೆಯ ಚಬುಕವನ್ನು ಕೈಯಲ್ಲಿ ತಕ್ಕೋ ನೋಡೋಣ! ಎಲೈ ನೀಚಾ, ಯಜ್ಞದಲ್ಲಿ ಅಗ್ನಿಯ ಹತ್ತಿರ ಇಟ್ಟಿದ್ದ ಪುರೋಡಾಶವನ್ನು ನಾಯಿಯು ತಿನ್ನುವದು ಅಯೋಗ್ಯವಾಗಿರುವಂತೆ, ಅಂಗರಾಜ್ಯವನ್ನು ಭೋಗಿಸಲು, ನೀನು ಸರ್ವಥಾ ಅಯೋಗ್ಯನಿರುವೆ" ಎಂದು ನುಡಿದ ಶಬ್ದಗಳು ಕಿವಿಗೆ ಬಿದ್ದ ಕೂಡಲೆ, ಕರ್ಣನ ತುಟಿಗಳು ಸ್ವಲ್ಪ ಸ್ಫುರಿಸಲು, ಆತನು ಆವೇಶದಿಂದ ಶ್ವಾಸಬಿಡುತ್ತ ಸೂರ್ಯನಕಡೆಗೆ ನೋಡಿದನು.

ಈ ಸ್ಥಿತಿಯನ್ನು ನೋಡಿ ಬಲಾಢ್ಯನಾದ ದುರ್ಯೋಧನನು ಸಿಟ್ಟಾಗಿ ಆವೇಶದಿಂದ ತನ್ನ ತಮ್ಮಂದಿರ ಮಧ್ಯದಿಂದ ಹೊರಬಿದ್ದು ಬಂದು ಭೀಮನನ್ನು ಕುರಿತು—"ಭೀಮಾ, ನೀನು ಇಂಥ ಮಾತುಗಳನ್ನು ಆಡುವದು ಯೋಗ್ಯವಲ್ಲ. ಕ್ಷತ್ರಿಯರಿಗೆ ಸಾಮರ್ಥ್ಯವೇ ಮುಖ್ಯವಾಗಿದ್ದು, ಸಮರ್ಥ ಕ್ಷತ್ರಿಯರು ಒಬ್ಬರನ್ನೊಬ್ಬರು ಎದುರಿಸಿದರೆ ಪರಸ್ಪರರು ಕಾದುವದು ಅವಶ್ಯವು. ಶೂರರ ಕುಲವೂ, ನದಿಯ ಮೂಲವೂ ಎಂದಿಗೂ ಗೊತ್ತಾಗಲಾರವು. ಅಗ್ನಿಯು ನೀರಲ್ಲಿ ಹುಟ್ಟಿದರೂ, ಸ್ಥಾವರ ಜಂಗಮ ಸರ್ವವಸ್ತುಗಳನ್ನು ಸುಡುವ ಸಾಮರ್ಥ್ಯವು ಅದರಲ್ಲಿರುವದು; ದಧೀಚಿ ಋಷಿಯ ಅಸ್ಥಿಯಿಂದಾದ ವಜ್ರಾಯುಧವು ಸರ್ವ ದಾನವರ ಉಚ್ಛೇದ ಮಾಡಿತು; ಭಗವಾನ್ ಕಾರ್ತಿಕೇಯನ ಜನ್ಮದ ನಿಶ್ಚಯವು ಇನ್ನೂ ಆಗಿರುವದಿಲ್ಲ; ಕೆಲವರು ಆತನನ್ನು ಅಗ್ನಿಯ ಮಗನೆನ್ನುವರು; ಕೆಲವರು ಕೃತ್ತಿಕೆಯ ಮಗನೆನ್ನುವರು; ಕೆಲವರು ಗಂಗೆಯಮಗನೆನ್ನುವರು, ಕೆಲ

ವರು ರುದ್ರನ ಮಗನೆನ್ನುವರು; ಕ್ಷತ್ರಿಯರಿಂದ ಹುಟ್ಟಿದ ವಿಶ್ವಾಮಿತ್ರನಂಥ ಎಷ್ಟೋ ಜನರು ಬ್ರಾಹ್ಮಣರಾಗಿ ಅಕ್ಷಯ್ಯಮೋಕ್ಷವನ್ನು ಹೊಂದಿದರು. ಶೂರರಲ್ಲಿ ಅತ್ಯಂತ ಶೂರರಾದ ದ್ರೋಣಾಚಾರ್ಯರ ಜನ್ಮವು ದ್ರೋಣಕಲಶದಿಂದ ಆಗಿರುವದು; ಅದರಂತೆ ಕೃಪಾಚಾರ್ಯರ ಜನ್ಮವು ಶರಗಳ ಪೆಂಡೆಯಿಂದ ಆಗಿರುವದು. ಬಹಳ ದೂರವೇಕೆ? ನಿಮ್ಮ ಜನ್ಮವು ಕೈಯಲ್ಲಿ ಚಬಕಹಿಡಿಯಲು ಯೋಗ್ಯವಾದ ಯಾವ ಕುಲದಲ್ಲಿ ಆಗಿರುವದೆಂಬದು ನನಗೆ ಗೊತ್ತಿರುವದು. ಜನ್ಮತಃ ಕವಚ ಕುಂಡಲಗಳಿದ್ದ, ಸೂರ್ಯನಂತೆ ತೇಜಸ್ವಿಯಾದ ಕರ್ಣನ ಜನ್ಮವು, "ಜಿಗರೆಯ ಹೊಟ್ಟೆಯಲ್ಲಿ ಹುಲಿಯು ಹುಟ್ಟುವ" ಚಂದದಿಂದ ಸರ್ವಥಾ ಆಗಿರಲಿಕ್ಕಿಲ್ಲ. ಇಂಥ ವೀರನು ಹೇಳಿದಂತೆ ಕೇಳಲಿಕ್ಕೆ ನಾನು ಸಿದ್ಧನಾಗಿರಲು, ಬರಿಯ ಅಂಗರಾಜ್ಯವೇ ಏಕೆ, ಇಡಿಯ ಪೃಥ್ವಿಯ ರಾಜ್ಯವೂ ಕರ್ಣನಿಗೆ ಒಪ್ಪಬಹುದು. ಅದರಲ್ಲಿಯೂ ನನ್ನ ಈ ಕೃತಿಯು ಯಾವ ಮನುಷ್ಯನಿಗೆ ತಡೆಯುವದಿಲ್ಲವೋ, ಅವನು ರಥವನ್ನು ಹತ್ತಿ ಧನುಸ್ಸನ್ನು ಮೆಟ್ಟಲಿ! *

ಹೀಗೆ ಯಾವತ್ತು ರಂಗಭೂಮಿಯಲ್ಲಿ ಹಾಹಾಕಾರವು ಆಗಿಹೋಗಿರಲು, ಸೂರ್ಯನು ಮುಣುಗಿದ್ದರಿಂದ ದುರ್ಯೋಧನನು ಕರ್ಣನ ಕೈಯನ್ನು ಹಿಡಕೊಂಡು ದೀವಟಿಗೆಗಳ ಬೆಳಕಿನಲ್ಲಿ ಮನೆಗೆ ಹೊರಟುಹೋದನು. ದ್ರೋಣ, ಭೀಷ್ಮ, ಕೃಪರೊಡನೆ ಪಾಂಡವರೂ ಮನೆಗೆ ಹೋದರು. ಕೆಲವರು ಕರ್ಣನನ್ನೂ, ಕೆಲವರು ಅರ್ಜುನನನ್ನೂ, ಕೆಲವರು ದುರ್ಯೋಧನನನ್ನೂ ಹೊಗಳಹತ್ತಿದರು. ಕುಂತಿಗೆ ಮಗನ ಭೆಟ್ಟಿಯಾದದ್ದರಿಂದ ಆನಂದವಾಯಿತು. ದುರ್ಯೋಧನನಿಗೆ ಅರ್ಜುನನ ಭಯವು ಇಲ್ಲದಂತಾಯಿತು. ಕರ್ಣನಂಥ ಧನುರ್ಧರನು ಪೃಥ್ವಿಯಲ್ಲಿ ಇಲ್ಲವೆಂಬ ನಂಬಿಗೆಯು ಧರ್ಮರಾಜನಿಗೂ ಆಯಿತು.

**೧೩೮ನೇ ಅಧ್ಯಾಯ—ದ್ರುಪದನಮೇಲೆ ದಂಡಯಾತ್ರೆ—** ಪಾಂಡವರೂ, ಧಾರ್ತರಾಷ್ಟ್ರರೂ ಅಸ್ತ್ರವಿದ್ಯೆಯಲ್ಲಿ ಪ್ರವೀಣರಾದದ್ದನ್ನು

---

* ನಾನು ಸತ್ತೇನು, ಇಲ್ಲವೇ ಶತ್ರುವನ್ನು ಕೊಂದೇನು, ಎಂದು ಪ್ರತಿಜ್ಞೆ ಮಾಡುವದೊಂದು ಪ್ರಕಾರವು ಇದು ಆಗಿರುವದು.

ನೋಡಿ, ಇನ್ನು ಗುರುದಕ್ಷಿಣೆ ಕೇಳುವ ಪ್ರಸಂಗವು ಒದಗಿತೆಂದು ತಿಳಿದು ದ್ರೋಣನು ಎಲ್ಲ ರಾಜಕುಮಾರರನ್ನು ಕರೆದು–"ರಾಜಕುಮಾರರೇ, ಪಾಂಚಾಲದೇಶದ ದ್ರುಪದರಾಜನನ್ನು ಯುದ್ಧದಲ್ಲಿ ಸೆರೆಹಿಡಿದು ನನಗೆ ಒಪ್ಪಿಸಿದರೆ ನಿಮ್ಮ ಕಲ್ಯಾಣವಾಗುವದು ಅದೇ ಎಲ್ಲಕ್ಕೂ ದೊಡ್ಡದಾದ ನನ್ನ ಗುರುದಕ್ಷಿಣೆಯು" ಎಂದು ಹೇಳಲು, ಹಾಗೆಯೇ ಆಗಲೆಂದು ಒಪ್ಪಿಕೊಂಡು ಪಾಂಡವರೂ, ಕೌರವರೂ ರಥದಲ್ಲಿ ಕುಳಿತು ಸೈನ್ಯದೊಡನೆ ದ್ರುಪದನಮೇಲೆ ಸಾಗಿಹೋದರು. ಅವರು ರಾಜ್ಯವನ್ನು ಹಾಳುಮಾಡುತ್ತ ದ್ರುಪದನ ರಾಜಧಾನಿಯನ್ನು ಪ್ರವೇಶಿಸಿದರು. ದುರ್ಯೋಧನಾದಿ ಕೌರವರಿಗೆ ಅಭಿಮಾನವು ವಿಶೇಷವಾಗಿರುವದರಿಂದ, ಅವರ ಯುದ್ಧದ ನಿರ್ಣಯವಾದಬಳಿಕ ತಾವು ಹೋಗಬೇಕೆಂದು ಅರ್ಜುನನು ಪೂಜ್ಯರಾದ ದ್ರೋಣಾಚಾರ್ಯರೊಡನೆ ಆಲೋಚಿಸಿ, ಬಂಧುಗಳೊಡನೆ ರಾಜಧಾನಿಯಿಂದ ಅರ್ಧಹರದಾರಿಯ ಮೇಲೆ ಇದ್ದನು. ಇತ್ತ ಕೌರವರು ಆವೇಶದಿಂದ ದ್ರುಪದನ ರಾಜಧಾನಿಯನ್ನು ಪ್ರವೇಶಿಸಲು, ಅತ್ತ ದ್ರುಪದನೂ ತನ್ನ ತಮ್ಮಂದಿರೊಡನೆ ರಕ್ಷಿತನಾಗಿ ಕೌರವರಮೇಲೆ ಸಾಗಿಬಂದನು. ಆಗ ಕೌರವರು ದ್ರುಪದನ ಕೂಡ ತತ್ತರಿಸಿದರು. ದ್ರುಪದನ ರಾಜಧಾನಿಯೊಳಗಿನ ಹುಡುಗರು ಮುದುಕರು ಕೂಡ ಕೈಗೆ ಸಿಕ್ಕ ಒನಿಕೆ ಕೊಡಲಿ ಮೊದಲಾದವನ್ನು ತಕ್ಕೊಂಡು ಕೌರವರನ್ನು ಹಣಿಯಹತ್ತಿದರು; ಆದ್ದರಿಂದ ಕೌರವರು ದೆಸೆಗೆಟ್ಟು ಪಾಂಡವರನ್ನು ಕೂಗುತ್ತ ಅವರಿರುವಕಡೆಗೆ ಓಡಿಬಂದರು. ಅವರ ಆ ದೀನವೃತ್ತಿಯನ್ನು ನೋಡಿ ಅರ್ಜುನನು ಭೀಮಸೇನನ ಬೆಂಬಲದಿಂದ ದ್ರುಪದನ ರಾಜಧಾನಿಯನ್ನು ಪ್ರವೇಶಿಸಿದನು. ಅರ್ಜುನನ ಹೇಳಿಕೆಯಂತೆ ಯುಧಿಷ್ಠಿರನು ಯುದ್ಧಕ್ಕೆ ಬರಲಿಲ್ಲ. ನಕುಲ-ಸಹದೇವರು ಅರ್ಜುನನ ರಥಚಕ್ರಗಳನ್ನು ರಕ್ಷಿಸತೊಡಗಿದರು. ಭೀಮನು ಗದಾಧಾರಿಯಾಗಿ ಸೈನ್ಯದ ಮುಂಭಾಗದಲ್ಲಿ ನಿಂತನು. ಆಗ ದ್ರುಪದನ ಸೈನ್ಯದಲ್ಲಾದ ಸಂಹಾರವನ್ನು ವರ್ಣಿಸಲಾಗದು. ಭೀಮಸೇನನು ಆನೆ-ಕುದುರೆ-ರಥಗಳ ನಾಶಮಾಡುವದನ್ನು ನೋಡಿ, ಯಮನ ಹಾವಳಿಯೇ ಬಂತೆಂದು ಪಾಂಚಾಲರು ತಿಳಿದರು. ಅವರು ಅರ್ಜುನನ ಅಸ್ತ್ರಕೌಶಲ್ಯಕ್ಕೆ ಬೆರಗಾಗಿ ಆತನನ್ನು ಹೊಗಳಹತ್ತಿದರು. ಉಭಯಪಕ್ಷ

ದಲ್ಲಿ ಭಯಂಕರ ಯುದ್ಧವು ಸಾಗಿರುವಾಗ, ದ್ರುಪದನ ಪಕ್ಷದವರು ಹಿಂದಕ್ಕೆ ಸರಿಯಹತ್ತಿದರು. ದ್ರುಪದರಾಜನ ಧನುಸ್ಸು-ಕುದುರೆ-ಸಾರಥಿಗಳನ್ನು ಅರ್ಜುನನು ನಾಶಮಾಡಿದನು, ಬಳಿಕ ಆತನು ಖಡ್ಗವನ್ನು ಧರಿಸಿ ಆ ಯಜ್ಞಸೇನನ ರಥಕ್ಕೆ ದುಮುಕಿ ನಿಶ್ಶಂಕೆಯಿಂದ ರಥದೊಳಗೆ ಹೋಗಿ ದ್ರುಪದನನ್ನು ಆತನ ಮಂತ್ರಿಗಳೊಡನೆ ಸೆರೆಹಿಡಿದು ಗುರುಗಳಾದ ದ್ರೋಣಾಚಾರ್ಯರಿಗೆ ಒಪ್ಪಿಸಿದನು. ಇತ್ತ ಭೀಮನು ದ್ರುಪದನ ಸೈನ್ಯವನ್ನು ಸಂಹರಿಸತೊಡಗಲು, ಅರ್ಜುನನ–"ಭೀಮಾ, ದ್ರುಪದನೂ ದೊಡ್ಡ ಅರಸುಮನೆತನದವನಾಗಿರುವನು ; ಕೌರವರೊಡನೆ ಆತನ ಸಂಬಂಧವೂ ಆಗಿರುವದು ; ಆದ್ದರಿಂದ ಇವನ ಸೈನ್ಯವನ್ನು ಸಂಹರಿಸಬೇಡ ನಾವು ಗುರುದಕ್ಷಿಣೆಯನ್ನಷ್ಟು ಕೊಟ್ಟುಬಿಡೋಣವೆಂದರಾಯಿತು"

**ದ್ರುಪದನೊಡನೆ ದ್ರೋಣನ ಮರ್ಮಭೇದಕ ಮಾತುಗಳು**– ಮಂತ್ರಿಗಳೊಡನೆ ದ್ರುಪದನು ತನ್ನ ಸೆರೆಯಾಳಾದದ್ದನ್ನು ನೋಡಿ ದ್ರೋಣನು ಸಂತೋಷಪಟ್ಟನು. ಈಗ ದ್ರುಪದನ ಗರ್ವಭಂಗವಾಗಿತ್ತು ; ಆತನ ಐಶ್ವರ್ಯವು ನಷ್ಟವಾಗಿತ್ತು, ಆತನು ಸಂಪೂರ್ಣವಾಗಿ ದ್ರೋಣನ ಕೈಯಲ್ಲಿ ಸಿಕ್ಕಿದ್ದನು. ಈಗ ದ್ರೋಣನು ಪೂರ್ವದ್ವೇಷವನ್ನು ಸ್ಮರಿಸಿ ದ್ರುಪದನನ್ನು ಕುರಿತು–"ದ್ರುಪದಾ, ಕಣಕವನ್ನು ಮಿದ್ದಿ ಮೆತ್ತಗೆಮಾಡು ವಂತೆ, ನಾನು ಬಲಾತ್ಕಾರದಿಂದ ನಿನ್ನ ಜನರನ್ನು ತುಳಿದೆನು ; ಮತ್ತು ನಿನ್ನ ರಾಜಧಾನಿಯನ್ನು ಹಾಳುಮಾಡಿದೆನು. ಈಗ ನೀನು ಜೀವದಿಂದ ಶತ್ರುಗಳ ಕೈಯಲ್ಲಿ ಸಿಕ್ಕಿರುತ್ತೀ. ಅಂದಬಳಿಕ ಹಿಂದಿನ ಹಳೆಯ ಗೆಳೆತನವು ಈಗ ಯಾತಕ್ಕೆ ಬೇಕಾಗಿರುವದು ?" ಎಂದು ಹಂಗಿಸಿ ಸ್ವಲ್ಪನಕ್ಕು ಪುನಃ ದ್ರುಪದನನ್ನು ಕುರಿತು–"ಕ್ಷತ್ರಿಯಾ, ಪ್ರಾಣಭಯವನ್ನು ಮನಸ್ಸಿನಲ್ಲಿ ಹಿಡಿಯಬೇಡ ; ಯಾಕಂದರೆ, ಬ್ರಾಹ್ಮಣರು ನಾವು ಮಹಾಕ್ಷಮಾಶೀಲರು ಚಿಕ್ಕಂದಿನಲ್ಲಿ ನೀನು ನನ್ನ ಸಂಗಡ ಆಡುತ್ತಿದ್ದಾಗ, ರಾಜಾ, ನಿನ್ನೊಡನೆ ನನ್ನ ಸ್ನೇಹಭಾವವು ಉತ್ಪನ್ನವಾಗಿ ಪ್ರೇಮವೃದ್ಧಿಯಾಗಿರುವದು ; ಆದ್ದರಿಂದ ನಿನ್ನೊಡನೆ ನನ್ನ ಪೂರ್ವದ ಸ್ನೇಹವು ಪುನಃ ಹೊಸದಾಗಿ ಉತ್ಪನ್ನವಾಗಬೇಕೆಂದು ನಾನು ಕೇಳಿಕೊಳ್ಳುವೆನು. ನಾನೂ ನಿನಗೆ ಈಗ ನಿನ್ನ ರಾಜ್ಯದ ಅರ್ಧರಾಜ್ಯವನ್ನು ಕೊಡುವೆನು, ಯಾಕಂದರೆ,

ರಾಜನಲ್ಲದವನೊಡನೆ ಸ್ನೇಹವಾಗುವದು ಶಕ್ಯವಿಲ್ಲದಿರುವಾಗ, ನೀನು ರಾಜ್ಯಹೀನನಾದರೆ ನನ್ನ ನಿನ್ನ ಸ್ನೇಹವು ಹೇಗೆ ಉಂಟಾದೀತು? ದ್ರುಪದಾ, ನಾನಾದರೂ ಇದಕ್ಕಾಗಿಯೇ ನಿನ್ನ ರಾಜ್ಯವನ್ನು ಗೆದ್ದುಕೊಳ್ಳುವ ಯತ್ನ ಮಾಡಿದೆನು. ಭಾಗೀರಥಿಯ ದಕ್ಷಿಣತೀರದಲ್ಲಿ ನಿನ್ನ ರಾಜ್ಯವು, ಉತ್ತರತೀರದಲ್ಲಿ ನನ್ನ ರಾಜ್ಯವು: ದ್ರುಪದಾ, ಈಗ ನಿನಗೆ ಸಮಾಧಾನವಾಗುತ್ತಿದ್ದರೆ ನಾನು ನಿನ್ನ ಮಿತ್ರನಿರುವೆನೆಂದು ತಿಳಿದುಕೋ," ಅನ್ನಲು ದ್ರುಪದನು—"ಎಲೈ ಬ್ರಾಹ್ಮಣಾ, ಪರಾಕ್ರಮಿಯಾದ ಮಹಾತ್ಮ್ಯದ ಪುರುಷನು ಹೀಗೆಮಾಡುವಲ್ಲಿ ಆಶ್ಚರ್ಯವಿಲ್ಲ. ನಿನ್ನ ಸಂಬಂಧದಿಂದ ನನಗೆ ಬಹಳ ಸಂತೋಷವಾಗುತ್ತದೆ. ನನ್ನ ವಿಷಯದಲ್ಲಿ ನೀನೂ ನಿರಂತರ ಪ್ರೇಮ ಮಾಡಬೇಕೆಂದು ನಾನು ಇಚ್ಛಿಸುವೆನು."

ಜನಮೇಜಯಾ, ದ್ರುಪದನ ಈ ಮಾತುಗಳನ್ನು ಕೇಳಿದಕೂಡಲೆ ದ್ರೋಣನು ಆತನನ್ನು ಬಿಟ್ಟುಕೊಟ್ಟು, ಆನಂದದಿಂದ ಆತನನ್ನು ಸತ್ಕರಿಸಿ ಅರ್ಧರಾಜ್ಯವನ್ನು ಆತನಿಗೆ ಕೊಟ್ಟನು. ಅಂದಿನಿಂದ ಭಾಗೀರಥೀತೀರದ ಮಾಕಂದೀಪಟ್ಟಣವೂ, ಅದರ ಸುತ್ತುಮುತ್ತಲಿನ ಪ್ರದೇಶವೂ ದ್ರುಪದನ ರಾಜ್ಯವಾಯಿತು. ದ್ರುಪದನು ಉದಾಸೀನನಾಗಿ ಮಾಕಂದೀಪಟ್ಟಣದಲ್ಲಿಯೂ, ಕಾಂಪಿಲ್ಯಪಟ್ಟಣದಲ್ಲಿಯೂ ಇರತೊಡಗಿದನು. ದಕ್ಷಿಣಕ್ಕೆ ಚರ್ಮಣ್ವತೀನದಿಯವರೆಗೆ ಪಾಂಚಾಲದೇಶದ ದಕ್ಷಿಣಭಾಗವು ದ್ರುಪದನ ಅಧೀನವಾಯಿತು. ಈ ಮೇರೆಗೆ ದ್ರೋಣನು ದ್ರುಪದನನ್ನು ಗೆದ್ದು ಆತನನ್ನು ರಕ್ಷಿಸಿದನು. ಬರಿಯ ಕ್ಷಾತ್ರತೇಜದಿಂದ ದ್ರೋಣನ ಬ್ರಹ್ಮತೇಜವನ್ನು ಗೆಲ್ಲುವದು ಆಗದೆಂದು ತಿಳಿದ ದ್ರುಪದನು ದ್ರೋಣನನ್ನು ಗೆಲ್ಲುವ ಮಗನನ್ನು ಪಡೆಯುವದಕ್ಕಾಗಿ ತಪಸ್ಸುಮಾಡಲು ಭೂಲೋಕದಲ್ಲಿ ಸಂಚರಿಸತೊಡಗಿದನು. ಇತ್ತ ದ್ರೋಣನ ಪಾಲಿಗೆ ಅಹಿಚ್ಛತ್ರರಾಜ್ಯವು ಬಂದಿತು. ಅದನ್ನು ಅರ್ಜುನನು ಗೆದ್ದು ದ್ರೋಣನಿಗೆ ಕೊಟ್ಟನು.

**೧೩೯ನೇ ಅಧ್ಯಾಯ—ಪಾಂಡವರ ಪರಾಕ್ರಮವೂ, ಪ್ರಖ್ಯಾತಿಯೂ**—ಜನಮೇಜಯಾ, ಆ ವರ್ಷವು ಮುಗಿದಬಳಿಕ ಧೃತರಾಷ್ಟ್ರನು ಪಂಡುವಿನ ಹಿರಿಯಮಗನಾದ ಯುಧಿಷ್ಠಿರನಿಗೆ ಯೌವರಾಜ್ಯಾಭಿಷೇಕವನ್ನು ಮಾಡಿದನು; ಯಾಕೆಂದರೆ ಆತನಲ್ಲಿ ಧೈರ್ಯ, ಮನಸ್ಸಿನ ಸ್ಥೈರ್ಯ

ಸಹನಶೀಲತೆ, ಭೂತದಯೆ, ಸರಳತನ, ಆಳುಕೋಳುಗಳಲ್ಲಿ ದಯೆ ಮೊ ದಲಾದ ಸದ್ಗುಣಗಳು ಇದ್ದವು. ಧರ್ಮರಾಜನು ಸದಾಚರಣೆಯಿಂದಲೂ, ಶೌರ್ಯಾದಿ ಸದ್ಗುಣಗಳಿಂದಲೂ ಎಲ್ಲರನ್ನು ಸಂತೋಷಪಡಿಸಿ, ಲೌಕಿಕ ವನ್ನು ಸಂಪಾದಿಸಿದನು. ಭೀಮನು ಖಡ್ಗಯುದ್ಧ, ಗದಾಯುದ್ಧ, ರಥ ಯುದ್ಧಗಳಲ್ಲಿ ಕಲಿಯಬೇಕಾಗಿದ್ದ ವಿಷಯಗಳನ್ನು ಬಲರಾಮನಲ್ಲಿ ಕಲಿ ತನು. ಅರ್ಜುನನಂತು ಅಸ್ತ್ರವಿದ್ಯೆಯಲ್ಲಿ ಅಪ್ರತಿಮನಿದ್ದನು. ಆತ ನನ್ನು ನೋಡಿ ದ್ರೋಣನು ಸಂತೋಷಪಟ್ಟು, ಆತನಿಗೆ ಹಿಂದೆ ಹೇಳಿ ದಂತೆ ಬ್ರಹ್ಮಶಿರವೆಂಬ ಅಸ್ತ್ರವನ್ನು ಕೊಟ್ಟು, ಗುರುದಕ್ಷಿಣೆ ಕೊಡುವೆ ನೆಂದು ಆತನಿಂದ ವಚನವನ್ನು ತಕ್ಕೊಂಡು ಆತನನ್ನು ಕುರಿತು— "ಎಲೈ ಉದಾರರಾಜಪುತ್ರಾ, ನಾನು ನಿನ್ನೊಡನೆ ಯುದ್ಧ ಮಾಡಹತ್ತಿದರೆ, ನನ್ನೊಡನೆ ನೀನು ಯುದ್ಧ ಮಾಡಬೇಕು," ಅನ್ನಲು, ಮೊದಲೇ ವಚನ ಕೊಟ್ಟಿದ್ದರಿಂದ "ಹಾಗೇ ಆಗಲಿ" ಎಂದು ಅರ್ಜುನನು ಒಪ್ಪಿಕೊಂಡನು. ನಕುಲ-ಸಹದೇವರೂ ತಮ್ಮ ಗುಣವಿಶೇಷದಿಂದ ಲೌಕಿಕವನ್ನು ಪಡೆದರು. ಅರ್ಜುನನೇ ಮೊದಲಾದ ಪಂಡುವಿನ ಈ ಶೂರರಾದ ಮಕ್ಕಳು ದಿಗ್ವಿಜಯ ಮಾಡಿ, ಪಂಡುವಿಗೂ ಹಣಿಯದೆ ಇದ್ದ ರಾಜರನ್ನು ಹಣಿದು, ಹಸ್ತಿನಾವ ತಿಯಲ್ಲಿ ದ್ರವ್ಯದ ರಾಶಿಯನ್ನು ಸುರುವಿದರು. ಪಾಂಡವರ ಈ ಉತ್ಕರ್ಷ ವನ್ನು ನೋಡಿ ಧೃತರಾಷ್ಟ್ರನಿಗೆ ರಾತ್ರಿ ನಿದ್ದೆ ಬಾರದಾಯಿತು!

**೧೪೦ನೇ ಅಧ್ಯಾಯ— ಕಣಿಕನೀತಿ** —ಜನಮೇಜಯಾ, ಪಾಂಡ ವರ ಉತ್ಕರ್ಷವನ್ನು ಸಹಿಸಲಾರದ ಧೃತರಾಷ್ಟ್ರನು ಕಣಿಕನೆಂಬ ತನ್ನ ಬ್ರಾಹ್ಮಣಮಂತ್ರಿಯನ್ನು ಕರೆಸಿ—"ಮಂತ್ರಿಶ್ರೇಷ್ಠಾ, ಪಾಂಡವರ ಉತ್ಕ ರ್ಷವನ್ನು ನೋಡಿ ನನ್ನ ಮನಸ್ಸಿಗೆ ಬಹಳ ಚಡಪಡಿಕೆಯಾಗಿದೆ; ಈ ಸ್ಥಿತಿಯಲ್ಲಿ ನಾನು ಪಾಂಡವರೊಡನೆ ಯುದ್ಧ ಮಾಡಲೋ, ಸಖ್ಯ ಬೆಳೆಸಲೋ? ಏನು ಮಾಡಿದರೆ ನನ್ನ ಹಿತವಾದೀತು?" ಎಂದು ಕೇಳಲು, ಕಣಿಕಬ್ರಾಹ್ಮ ಣನು—"ರಾಜಾ ಧೃತರಾಷ್ಟ್ರಾ, ನಾನು ಹೇಳುವ ಮಾತುಗಳು ನಿನಗೆ ಉಗ್ರವಾಗಿ ಕಂಡಾವು; ಅವನ್ನು ಕೇಳಿ ನಿನಗೆ ಸಂತಾಪವೂ, ತಿರಸ್ಕಾರವೂ ಉಂಟಾದಾವು; ಆದರೆ ಹಾಗೆ ಆಗಗೊಡಬೇಡ. ನಾನು ಹೇಳುವ ಉಪಾ ಯದಿಂದಲೇ ನಿನಗೆ ಹಿತವಾದೀತು. ದುರ್ಯೋಧನನಿಗೂ-ಭೀಮನಿಗೂ,

ಕರ್ಣನಿಗೂ ಅರ್ಜುನನಿಗೂ ಘೋರವಾದ ದ್ವೇಷವಿರುವದರಿಂದ, ಅವರಲ್ಲಿ ಸಖ್ಯಬೆಳಿಸುವದು ಶಕ್ಯವಿರುವದಿಲ್ಲ; ಆದ್ದರಿಂದ ನೀನು ಪಾಂಡವರೊಡನೆ ಯುದ್ಧವನ್ನೇ ಮಾಡಬೇಕಾಗುವದು.

ರಾಜಾ, ಸ್ಥೂಲಮಾನದಿಂದ ಶತ್ರುಗಳಲ್ಲಿ ದುರ್ಬಲರು, ಸಮಬಲರು, ಬಲಿಷ್ಠರು ಎಂಬ ಮೂರು ವರ್ಗಗಳಾಗುವವು. ಆಯಾ ವರ್ಗದ ಶತ್ರುಗಳ ಸ್ಥಿತಿಯಮೇಲಿಂದ ಅವರವರೊಡನೆ ಬೇರೆ ಬೇರೆ ರೀತಿಯಿಂದ ನಡಕೊಳ್ಳಬೇಕಾಗುವದು. ಶತ್ರುವು ಯಾವ ವರ್ಗದವನಿದ್ದರೂ ಆತನು ತನಗೆ ಅಂಕಿತನಾಗಿರಬೇಕು; ಅಥವಾ ಆತನ ಸರ್ವಸ್ವವನ್ನು ಹರಣ ಮಾಡಲು ತನಗೆ ಆಸ್ಪದವಿರಬೇಕು, ಎಂಬ ಮಾತನ್ನು ಲಕ್ಷದಲ್ಲಿಡ ತಕ್ಕದ್ದು.

ಧೃತರಾಷ್ಟ್ರಾ, ಈ ದೃಷ್ಟಿಯಿಂದ ವಿಚಾರಮಾಡಿದರೆ, ದುರ್ಬಲ ಶತ್ರುವನ್ನು, ಆತನು ಎಂದೂ ತಲೆಯೆತ್ತದಂತೆ ಶಸ್ತ್ರಭಯದಿಂದ ಸ್ವಾಧೀನ ಪಡಿಸಿಕೊಳ್ಳಬೇಕು. ಶತ್ರುವು ಸಮಬಲನಿದ್ದರೆ ಆತನಮುಂದೆ ತನ್ನ ಪರಾಕ್ರಮ, ಬಲ, ಐಶ್ವರ್ಯ ಇವನ್ನು ಯಾವಾಗಲೂ ಜಾಗ್ರತವಾಗಿ ಇಡಬೇಕು. ತನ್ನ ಬಲಾದಿಗಳ ವಿಷಯದಲ್ಲಿ ಆತನಿಗೆ ಸಂಶಯ ಉಂಟಾಗದಂತೆ ಯಾವಾಗಲೂ ಜಾಗರೂಕವಾಗಿರಬೇಕು. ತಾನು ಮೆಲ್ಲಮೆಲ್ಲನೆ ತನ್ನ ಬಲವನ್ನು ಹೆಚ್ಚಿಸಿಕೊಳ್ಳುತ್ತ ಕಡೆಗೆ ಆ ಸಮಬಲದ ಶತ್ರುವನ್ನು ಸಂಹರಿಸಿಬಿಡಬೇಕು.

ಕುರುಶ್ರೇಷ್ಠಾ, ತನ್ನ ರಾಜ್ಯದೊಳಗಿನ ಯಾವಛಿದ್ರವನ್ನೂ ಬಲಿಷ್ಠ ಶತ್ರುವಿನ ಕಣ್ಣಿಗೆ ಬೀಳಗೊಡದಿರುವದು, ಹಾಗು ಬಲಿಷ್ಠಶತ್ರುವಿನ ಪ್ರತಿಒಂದು ಛಿದ್ರವನ್ನು ತಾನು ಅರಿತಿರುವದು ಇವು ಬಲಿಷ್ಠಶತ್ರುವಿನ ನಾಶಮಾಡುವ ಸುಗಮ ಮಾರ್ಗಗಳಾಗಿರುವವು ವಿಜಯೇಚ್ಛುಪುರುಷನು ಶತ್ರುಪಕ್ಷದ ಛಿದ್ರದೊಳಗಿಂದ ಆತನ ವಾಸಸ್ಥಳವನ್ನು ಹೊಕ್ಕು, ಶತ್ರುವನ್ನು ಅನುಮಾನವಿಲ್ಲದೆ ಸಂಹರಿಸಿಬಿಡಬೇಕು.

ಶತ್ರುವಿನ ಮೇಲೆ ಶಸ್ತ್ರವನ್ನು ಎತ್ತಿದಕೂಡಲೆ ಆತನ ನಾಶವನ್ನು ಪೂರ್ಣವಾಗಿಮಾಡಿಬಿಡಬೇಕು. ಅಪೂರ್ಣನಾಶಮಾಡಿ ಆತನನ್ನು ಬಿಟ್ಟು ಬಿಡಬಾರದು. ಕಾಲಲ್ಲಿ ನಟ್ಟಮುಳ್ಳು ಕಾಲಲ್ಲಿ ಅರ್ಧಉಳಿದರೆ ವ್ರಣವಾಗು

ತ್ತದೆಂಬದನ್ನು ಲಕ್ಷದಲ್ಲಿಡಬೇಕು. ಅಪಕಾರಮಾಡಿದ ಶತ್ರುವಿನ ವಧ ವನ್ನು ಮಾಡಲೇಬೇಕು.

ಶತ್ರುವು ದುರ್ಬಲನಾಗಿದ್ದರೂ ಆತನ ಉಪೇಕ್ಷೆಯನ್ನು ಸರ್ವಥಾ ಮಾಡಬಾರದು; ಯಾಕಂದರೆ, ಆತನಿಗೆ ಅನ್ಯರ ಆಶ್ರಯ ದೊರೆತರೆ ನಮ್ಮ ನಾಶಕ್ಕೆ ಕಾರಣನಾಗುವನು. ದುರ್ಬಲಶತ್ರುವು ಈಗ ತನಗೆ ಪ್ರತಿಕೂಲ ಸ್ಥಿತಿಯಿರುವದೆಂದು ತಿಳಿದು ಬೇಕಾದಷ್ಟು ವಿನಯವನ್ನು ತೋರಿಸಬ ಹುದು; ಬೇಕಾದಂತಹ ಅಪಮಾನವನ್ನು ಸಹಿಸಬಹುದು; ಬೇಕಾದಷ್ಟು ಹತಾಶನಾಗಿ ಕೈಕಾಲುಗೆಟ್ಟು ಸುಮ್ಮನೆ ಕುಳಿತುಕೊಳ್ಳಬಹುದು; ಆದರೆ ಆತನಿಗೆ ಅನುಕೂಲಕಾಲವು ಒದಗಿದಕೂಡಲೆ "ಸತ್ತಹಾಗೆ ಮಲಗಿದ್ದ ಬೇಟೆಗಾರನು ಸಮಯುವರಿತು ಎದ್ದು ಮೃಗವನ್ನು ಕೊಲ್ಲುವಂತೆ," ನಮ್ಮನ್ನು ನಾಶಮಾಡಿಬಿಡಬಹುದು; ಆದ್ದರಿಂದ ಯುಕ್ತಿಪ್ರಯುಕ್ತಿ ಯಿಂದ ಶತ್ರುವನ್ನು ವಶಮಾಡಿಕೊಂಡು ಕಡೆಗೆ ಅವನನ್ನು ಕೊಂದುಬಿಡ ಬೇಕು.

ಧೃತರಾಷ್ಟ್ರ, ಪ್ರಬಲಶತ್ರುವಿನೊಡನೆ ಹೇಗೆ ನಡೆದ ಕೊಳ್ಳಬೇಕೆಂ ಬದನ್ನು ಕುರಿತು ಮತ್ತೂ ಹೇಳುವೆನು ಕೇಳು. ಪ್ರಬಲಶತ್ರುವಿನಕಡೆಯ ಜನರನ್ನು ಧನಾದಿಗಳನ್ನು ಕೊಟ್ಟು ವಶಮಾಡಿಕೊಂಡು, ವಿಷಪ್ರಯೋಗಾ ದಿಗಳಂಥ ಉಪಾಯಗಳಿಂದ ಪ್ರಬಲಶತ್ರುವನ್ನು ನಾಶಗೊಳಿಸಿಬಿಡಬೇಕು. ಪ್ರಬಲಶತ್ರುವನ್ನು ದುರ್ಬಲಮಾಡುವ ಉಪಾಯಗಳನ್ನು ಹೇಳುವೆನು ಕೇಳು. ಅವನ ಸೇವಕವರ್ಗವನ್ನು ವಶಮಾಡಿಕೊಳ್ಳಬೇಕು; ಗುಪ್ತಚಾ ರರಿಂದ ಶತ್ರುವಿನ ಗುಪ್ತ ಆಲೋಚನೆಗಳನ್ನು ಅರಿತುಕೊಳ್ಳಬೇಕು; ಶತ್ರುವಿನ ಆಪ್ತರೇ ಮೊದಲಾದವರು ಆತನಿಗೆ ದುಷ್ಟ ಉಪದೇಶಮಾಡು ವಂತೆ ಮಾಡಬೇಕು; ಅವನ ಐಶ್ವರ್ಯದ ನಾಶವನ್ನು ಸಂಪೂರ್ಣವಾಗಿ ಮಾಡಿಬಿಡಬೇಕು; ಅದಕ್ಕಾಗಿ ಅಮಾತ್ಯ, ದುರ್ಗ, ಕೋಶ, ದಂಡ, ಪ್ರಜಾ ಎಂಬ ಶತ್ರುವಿನ ಐದುಪ್ರಕೃತಿಗಳನ್ನು ನಾಶಗೊಳಿಸಿಬಿಡಬೇಕು. ಮತ್ತು ಶತ್ರುವಿನಿಂದ ಸಾಮ, ದಾನ, ಭೇದ, ದಂಡ, ಮಾಯಾ, ಉಪೇಕ್ಷಾ, ಇಂದ್ರಜಾಲ ಎಂಬ ಏಳು ಉಪಾಯಗಳ ಪರಿಣಾಮವು ತನ್ನಮೇಲೆ ಆಗದಂತೆ ಎಚ್ಚರಪಡಬೇಕು.

ರಾಜಾ, ಒಂದು ಗಿಡದ ಬೇರುಗಳನ್ನು ಕಡಿದು ಆ ಗಿಡದ ಟೊಂಗೆ-ಹರಿಗಳನ್ನು ಒಣಗಿಸುವಂತೆ, ಶತ್ರುವಿನ ಸಹಾಯಕರಾದ ಮುಖ್ಯಮುಖ್ಯ ಪುರುಷರ ನಾಶವನ್ನು ವಿಷಪ್ರಯೋಗಾದಿ ಪ್ರಾಣಘಾತಕ ಉಪಾಯಗಳಿಂದ ಮಾಡಿ, ಶತ್ರುಗಳನ್ನು ನಾಶಗೊಳಿಸಿಬಿಡಬೇಕು. ಅಗ್ನಿಹೋತ್ರ, ಯಜ್ಞ ಯಾಗ, ಕೆಂಪುವಸ್ತ್ರಗಳು, ಮೃಗಚರ್ಮ, ಜಡೆಬೆಳೆಸೋಣ ಇತ್ಯಾದಿ ಉಪಾಯಗಳಿಂದ "ನಾವು ಒಳ್ಳೇ ಧಾರ್ಮಿಕರಿರುವೆವೆ"ಂಬ ವಿಶ್ವಾಸವನ್ನು ಶತ್ರುಗಳ ಮನಸ್ಸಿನಲ್ಲಿ ಉತ್ಪನ್ನಮಾಡಿ, ಆಮೇಲೆ ತೋಳನಂತೆ ಶತ್ರುವಿನ ಮೇಲೆ ಅಕಸ್ಮಾತ್‌ಬಿದ್ದು ಅವನನ್ನು ಸಂಹರಿಸಿಬಿಡಬೇಕು. ರಾಜಾ, ಅಗ್ನಿಹೋತ್ರಾದಿ ದಾಂಭಿಕ ಕೃತ್ಯಗಳೆಂದರೆ, ಪರರನ್ನು ಬಗ್ಗುಬಡೆಯುವ ವ್ಯಾವಹಾರಿಕ ಅಂಕುಶಗಳಾಗಿರುವವು.

ಅಪ್ಪಾ, ಕೌರವಾಧಿಪಾ, ಜಾಣರ ಸಂಪೂರ್ಣದೃಷ್ಟಿಯು ಫಲದಲ್ಲಿರುವದು. ಅವರು ತಮ್ಮ ಆ ಮುಖ್ಯ ಉದ್ದೇಶವನ್ನು ಸಾಧಿಸುವದಕ್ಕಾಗಿ ಮಾಡಬೇಕಾದದ್ದನ್ನೆಲ್ಲ ಮಾಡುವರು, ಆದ್ದರಿಂದ ಕಾಲವು ಪ್ರತಿಕೂಲವಿದ್ದಾಗ ಶತ್ರುವನ್ನು ತಲೆಯಮೇಲಾದರೂ ಕುಣಿಸಿಕೊಳ್ಳಬೇಕು. ಅನುಕೂಲ ಕಾಲವು ಒದಗಿದಕೂಡಲೆ ಮಣ್ಣಗಡಿಗೆಯನ್ನು ಕಲ್ಲಿಗೆಅಪ್ಪಳಿಸಿ ಒಡೆಯುವಂತೆ, ಶತ್ರುವನ್ನು ಸಂಹರಿಸಬೇಕು. ಶತ್ರುವನ್ನು ಸ್ವಾಧೀನಪಡಿಸಿಕೊಂಡು ಅವನನ್ನು ನಾಶಗೊಳಿಸಲಿಕ್ಕೆ ಸಾಮ, ದಾನ, ಭೇದ, ದಂಡಗಳೆಂಬ ನಾಲ್ಕುಉಪಾಯಗಳು ಇರುವವು. ಆ ನಾಲ್ಕುಸಾಧನಗಳನ್ನು ಉಪಯೋಗಿಸಿ ಶತ್ರುವನ್ನು ಸಂಹರಿಸಬೇಕು. ರಾಜಾ, ಧೃತರಾಷ್ಟ್ರಾ, ಸಾಮಾದಿ ಆ ನಾಲ್ಕು ಉಪಾಯಗಳಿಂದ ಶತ್ರುಗಳನ್ನು ಹೇಗೆ ಸಂಹರಿಸಬೇಕೆಂಬದು ಸ್ಪಷ್ಟ ತಿಳಿಯುವದಕ್ಕಾಗಿ ನಿನಗೊಂದು ಕಥೆ ಹೇಳುವೆನು ಕೇಳು.

**ನರಿಯ ಕಥೆ**—ಧೃತರಾಷ್ಟ್ರಾ, ಹಿಂದಕ್ಕೆ ಸ್ವಾರ್ಥಪಂಡಿತವೂ, ಮಹಾಧೂರ್ತವೂ ಆದದ್ದೊಂದು ನರಿಯು ಅರಣ್ಯದಲ್ಲಿ ವಾಸಿಸುತ್ತಿತ್ತು. ಅದಕ್ಕೆ ಹುಲಿ, ತೋಳ, ಮುಂಗಲಿ, ಇಲಿ ಎಂಬ ನಾಲ್ಕು ಜನ ಗೆಳೆಯರಿದ್ದರು. ನರಿಯು ಒಂದುದಿನ ತನ್ನ ಆ ನಾಲ್ಕು ಗೆಳೆಜನರೊಡನೆ ಅರಣ್ಯದಲ್ಲಿ ತಿರುಗಾಡುತ್ತಿರುವಾಗ, ಒಂದು ಸೊಕ್ಕಿದ ಗಂಡುಚಿಗರೆಯು ಅವುಗಳ ಕಣ್ಣಿಗೆ ಬಿದ್ದಿತು. ಆ ಐವರಿಂದಲೂ ಆ ಚಿಗರೆಯನ್ನು ಹಿಡಿಯುವದಾಗಲಿಲ್ಲ.

ಆಗ ಅವೆಲ್ಲಕೂಡಿ ಆಲೋಚಿಸಿ—"ಇಲಿಯು ಆ ಚಿಗರೆಯ ಕಾಲನ್ನು ಮೆಲ್ಲಮೆಲ್ಲನೆ ಸವಿಸಿ ಅದಕ್ಕೆ ನಡೆಯಲಿಕ್ಕೆ ಬಾರದಂತೆ ಮಾಡಬೇಕೆಂತಲೂ, ಆಮೇಲೆ ಹುಲಿಯು ಅದನ್ನು ಕೊಲ್ಲಬೇಕೆಂತಲೂ ಗೊತ್ತುಮಾಡಿಕೊಂಡು, ಅದರಂತೆಮಾಡಿ ಚಿಗರೆಯನ್ನು ಕೊಂದವು. ಆಗ ನರಿಯು ತನ್ನ ನಾಲ್ಕು ಜನ ಗೆಳೆಯರನ್ನು ಕುರಿತು—"ಗೆಳೆಯರೇ, ಇನ್ನು ನೀವು ಸ್ನಾನಮಾಡಿ ಕೊಂಡು ಬರಬೇಕು. ಆಮೇಲೆ ನಾವೆಲ್ಲರೂ ಕೂಡಿ ಈ ಚಿಗರೆಯ ಮಾಂಸವನ್ನು ತಿನ್ನೋಣ." ಎಂದು ಹೇಳಿತು. ಅದರಂತೆ ಅವೆಲ್ಲ ಸ್ನಾನಕ್ಕೆ ಹೋಗಲು, ನರಿಯು ಚಿಂತಾಕ್ರಾಂತವಾಗಿರುವಂತೆ ಆಲೋಚಿಸುತ್ತ ಕುಳಿತುಕೊಂಡಿತು. ಅಷ್ಟರಲ್ಲಿ ಹುಲಿಯು ಸ್ನಾನಮಾಡಿಕೊಂಡುಬಂದು ನರಿಯನ್ನು ಕುರಿತು—"ಮಿತ್ರಾ, ಹೀಗೇಕೆ ಚಿಂತೆಮಾಡುತ್ತ ಕುಳಿತು ಕೊಂಡಿರುವೆ? ಬಾ, ಈ ಚಿಗರೆಯ ಮಾಂಸವನ್ನು ತಿಂದು ವಿಹರಿಸೋಣ" ಅನ್ನಲು, ನರಿಯು—"ಎಲೈ ಮೃಗರಾಜಾ, ಚಿಂತೆಮಾಡದೇನು ಮಾಡಲಿ? ಕ್ಷುದ್ರ ಇಲಿಯು ಮಾತಾಡಿದ್ದನ್ನು ಕೇಳು—"ಆ ಮೃಗಾಧಿಪತಿಯ ಸಾಮರ್ಥ್ಯಕ್ಕೆ ಧಿಕ್ಕಾರವು. ನಾನು ಚಿಗರೆಯ ಕಾಲು ಕಡಿದು ಅದಕ್ಕೆ ನಡೆಯಲಿಕ್ಕೆ ಬಾರದಹಾಗೆ ಮಾಡಿದಬಳಿಕ, ಅದು ಚಿಗರೆಯನ್ನು ಕೊಂದಿತು. ನನ್ನ ಬಾಹುಬಲದಮೇಲೆ ಅದು ಇಂದು ಚಕ್ಕಂದವಾಡುವದು." ಹುಲಿ ರಾಜಾ, ಈ ಕ್ಷುದ್ರ ಇಲಿಯು ಹೀಗೆ ಅಂದಬಳಿಕ ಮಾಂಸವನ್ನು ನಾನು ಹೇಗೆ ಮುಟ್ಟಲಿ?

ನರಿಯ ಈ ಮೋಸದ ಮಾತುಗಳನ್ನು ಕೇಳಿ ಹುಲಿಯು—"ಮಿತ್ರಾ, ಇಲಿಯು ಹೀಗನ್ನುತ್ತಿದ್ದರೆ, ನಾನು ಈ ಮಾಂಸವನ್ನು ತಿನ್ನುವದಿಲ್ಲ, ನನ್ನ ಬಾಹುಬಲದಿಂದ ಸಂಪಾದಿಸಿ ಮಾಂಸವನ್ನು ತಿನ್ನುವೆನು." ಎಂದು ನುಡಿದು ಅದು ಹೊರಟುಹೋಯಿತು. ಬಳಿಕ ಇಲಿಯು ಸ್ನಾನಮಾಡಿ ಬರಲು ನರಿಯು—"ಅಪ್ಪಾ, ಇಲಿ, ಮುಂಗಲಿಯು ನನ್ನಮುಂದೆ ಆಡಿದ ಮಾತುಗಳನ್ನು ಕೇಳು. ಅದಕ್ಕೇನೋ ಚಿಗರಿಯ ಮಾಂಸವು ಪಚನವಾ ಗುವದಿಲ್ಲವಂತೆ; ಆ ಮಾಂಸವು ತನಗೆ ವಿಷಸ್ವರೂಪವಾದದ್ದರಿಂದ, ಇಂದು ನಾನು ಇಲಿಯನ್ನೇ ತಿನ್ನುವೆನೆಂದು ಹೇಳಿತು. ಅದರ ಮಾತಿಗೆ ನೀನು ಒಪ್ಪಿಗೆಯನ್ನು ಕೊಡಬೇಕು," ಅನ್ನಲು, ಇಲಿಯು ಬಹಳ ಹೆದರಿ

ಗುದ್ದನ್ನು ಸೇರಿತು. ಅಷ್ಟರಲ್ಲಿ ತೋಳವು ಸ್ನಾನಮಾಡಿಕೊಂಡು ಬಂದಿತು. ಆಗ ನರಿಯು ಅದನ್ನು ಕುರಿತು—"ಗೆಳೆಯಾ, ಯಾಕೋ ಹುಲಿಯು ನಿನ್ನ ಮೇಲೆ ಬಹಳ ಸಿಟ್ಟಾಗಿ, ತನ್ನ ಪರಿವಾರವನ್ನು ಕರಕೊಂಡುಬರುತ್ತೇನೆಂದು ಹೇಳಿಹೋಗಿರುವದು; ಆದ್ದರಿಂದ ನಿನ್ನ ವಿಚಾರವನ್ನು ನೀನು ಕಂಡುಕೋ" ಅನ್ನಲು, ತೋಳವು ಬಾಯಲ್ಲಿ ಎಸರಿಲ್ಲದೆ ಓಡಿಹೋಯಿತು. ಅಷ್ಟರಲ್ಲಿ ಮುಂಗಲಿಯು ಅಲ್ಲಿಗೆ ಬಂದಿತು. ಆಗ ನರಿಯು ಅದಕ್ಕೆ—"ಅಪ್ಪಾ ನಕುಲಾ, ನನ್ನ ಪರಾಕ್ರಮವು ನಿನಗೆ ಗೊತ್ತಿಲ್ಲ. ನೋಡು, ನಾನು ನನ್ನ ಬಾಹು ಬಲದಿಂದ ಹುಲಿಯೇ ಮೊದಲಾದವನ್ನು ಸೋಲಿಸಿ ಓಡಿಸಿರುವೆನು; ಆದ್ದರಿಂದ ಮೊದಲು ನೀನು ನನ್ನ ಸಂಗಡ ಯುದ್ಧಮಾಡು, ಆಮೇಲೆ ಮಾಂಸವನ್ನು ತಿನ್ನು, ಎಂದು ಹೇಳಿತು. ಆಗ ಮುಂಗಲಿಯು ನರಿಗೆ—"ಗೆಳೆಯಾ, ಮೃಗರಾಜನಾದ ಹುಲಿಯನ್ನೂ, ತೋಳವನ್ನೂ, ಮಹಾಧೂರ್ತ ಇಲಿಯನ್ನೂ ನೀನು ಓಡಿಸಿದಬಳಿಕ, ನೀನು ಸಮರ್ಥನೇಸರಿ.ನಿನ್ನೊಡನೆ ಯುದ್ಧ ಮಾಡುವ ಯೋಗ್ಯತೆಯು ನನ್ನದಲ್ಲ" ಎಂದುಹೇಳಿ ಅರಣ್ಯದಲ್ಲಿ ಹೊರಟು ಹೋಯಿತು.

ಕೌರವಾಧಿಪಾ, ಹೀಗೆ ಎಲ್ಲರನ್ನು ಓಡಿಸಿದ ಬಳಿಕ ನರಿಯು ಆನಂದದಿಂದ ಮಾಂಸವನ್ನು ತಿಂದಿತು. ಇದನ್ನೆಲ್ಲ ನರಿಯು ತನ್ನ ಹಂಚಿಕೆಯಿಂದ ಮಾಡಿತು ರಾಜನಾದರೂ ನಿತ್ಯ ಹೀಗೆ ನಡೆದುಕೊಂಡರೆ, ಆತನಿಗೆ ಸುಖ ಪ್ರಾಪ್ತಿಯಾಗುವದು. ರಾಜಾ, ಅಂಜುವವನನ್ನು ಅಂಜಿಸಬೇಕು, ಶೂರನ ಮುಂದೆ ಕೈ ಜೋಡಿಸಿ ಕೆಲಸ ಮಾಡಿಕೊಳ್ಳಬೇಕು, ಲೋಭಿಯನ್ನು ದ್ರವ್ಯಾದಿಗಳನ್ನು ಕೊಟ್ಟು ಮೋಸಗೊಳಿಸಬೇಕು, ತನಗೆ ಸಮಾನನಾದವನನ್ನು ಅಥವಾ ತನಗಿಂತ ಕಡಿಮೆಯಾದವನನ್ನು ತನ್ನ ಶಕ್ತಿಯಿಂದ ಸ್ವಾಧೀನ ಪಡಿಸಿಕೊಳ್ಳಬೇಕು. ರಾಜಾ, ಇದನ್ನೆಲ್ಲ ಲಕ್ಷದಲ್ಲಿಡು. ಇನ್ನು ಕೆಲವು ನಿಯಮಗಳನ್ನು ನಿನಗೆ ಹೇಳುವೆನು ನೆನಪಿನಲ್ಲಿಡು.

**ಬೇರೆ ಕುಟಿಲ ನಿಯಮಗಳು** -ರಾಜಾ ಧೃತರಾಷ್ಟ್ರಾ, ಮಕ್ಕಳು, ಗೆಳೆಯರು, ಅಣ್ಣತಮ್ಮಂದಿರು, ತಂದೆಯು, ಗುರುವು ಇವರಲ್ಲಿ ಯಾವನೇ ಇರಲೊಲ್ಲನೇಕೆ, ಆತನು ತನ್ನನ್ನು ದ್ವೇಷಿಸುತ್ತಿದ್ದರೆ ಅವನನ್ನು ಕೊಲ್ಲುವದರಲ್ಲಿಯೇ ಉತ್ಕರ್ಷೇಚ್ಛುವಿನ ಹಿತವಿರುತ್ತದೆ.

ಆಣೆಮಾಡುವದು, ಲಂಚಕೊಡುವದು, ವಿಷಹಾಕುವದು, ಹೊಡೆ ದಾಡುವದು ಇವುಗಳಲ್ಲಿ ಯಾವದೊಂದು ಉಪಾಯದಿಂದ ಶತ್ರುವಿನ ಸಂಹಾ ರಮಾಡಬೇಕು. ಪರಿಜೋದಿಯ ಶತ್ರುವಿನ ನಾಶಕ್ಕೆ ಇದೇ ತಕ್ಕ ಉಪಾ ಯವು.

ರಾಜಾ, ಧನಾದಿಗಳ ಮದದಿಂದ ಅಂಧರಾಗಿ ಕಾರ್ಯಾ ಕಾರ್ಯಗಳ ವಿಚಾರಮಾಡದೆ, ಅಡ್ಡಹಾದಿಹಿಡಿಯುವ ಗುರುಜನರ ಶಾಸನವನ್ನು ಕೂಡ ಮಾಡಬೇಕು. ಅದರಲ್ಲ ಅಯೋಗ್ಯವಾದದ್ದೇನೂ ಇಲ್ಲ

ಧೃತರಾಷ್ಟ್ರಾ, ತನ್ನ ಮನಸ್ಸಿನಲ್ಲಿದ್ದದ್ದನ್ನು ಎರಡನೆಯವರಿಗೆ ತಿಳಿ ಯಗೊಡಬಾರದು ತಾನು ಸಿಟ್ಟಿಗೆದ್ದರೂ ಸಿಟ್ಟನ್ನು ಹೊರಗೆಡವಬಾರದು. ಮಂದಿಯೊಡನೆ ನಗೆಮೊಗದಿಂದ ಪ್ರೇಮಪೂರ್ವಕ ಮಾತಾಡಬೇಕು. ಎಷ್ಟು ಸಂತಾಪವಾದರೂ ಬೈದಾಡಬಾರದು, ಒದರಾಡಬಾರದು. ಭಾರತಾ, ಎರಡನೆಯವರ ಘಾತಮಾಡಲಿಚ್ಛಿಸುವವನು ಯಾವಾಗಲೂ ಸವಿಮಾತಾ ಡುವ ಅಭ್ಯಾಸವಿಟ್ಟು, ಸವಿಮಾತಾಡುತ್ತ ಅನ್ಯರನ್ನು ಕೊಲ್ಲಬೇಕ . ಹಾಗೆ ಘಾತಿಸಿದಬಳಿಕ ಆ ದೀನಜನರ ವಿಷಯದಲ್ಲ ಒಳ್ಳೇ ದಯಾಗುಣವನ್ನು ವ್ಯಕ್ತಮಾಡಬೇಕು; ಅವರ ವಿಷಯವಾಗಿ ಖೇದಪ್ರದರ್ಶನ ಮಾಡಬೇಕು; ಕಡೆಗೆ ಅತ್ತೂ ಬಿಡಬೇಕು

ರಾಜಾ, ಶತ್ರುವಿಗೆ ತನ್ನಲ್ಲಿ ವಿಶ್ವಾಸವು ಉತ್ಪನ್ನವಾಗುವದಕ್ಕಾಗಿ ಆತನಿಗೆ ನಾಲ್ಕು ತಿಳವಳಿಕೆಯ ಮಾತುಗಳನ್ನು ಹೇಳಬೇಕು ; ಧರ್ಮದ ಡಾಂಭಿಕತನದಿಂದ ತನ್ನ ವಿಷಯವಾಗಿ ಆತನಲ್ಲಿ ಶ್ರದ್ಧೆಯನ್ನುಂಟುಮಾಡ ಬೇಕು ; ತನ್ನಲ್ಲಿ ದಯಾದಾಕ್ಷಿಣ್ಯಾದಿ ಗುಣಗಳು ಇರುವವೆಂಬ ಆಭಾಸ ವನ್ನು ಶತ್ರುವಿನಲ್ಲಿ ಉಂಟುಮಾಡಬೇಕು. ಇಂತಹ ಉಪಾಯಗಳಿಂದ ಶತ್ರುವು ಮಬ್ಬಿಗೆ ಬಿದ್ದು ತನಗೆ ವಶವಾದಕೂಡಲೆ, ಸಂಧಿಯನ್ನು ಸಾಧಿಸಿ ಅವನನ್ನು ಕೊಂದುಬಿಡಬೇಕು. ಡಾಂಭಿಕತನದಿಂದ ದೊಡ್ಡ ತಪ್ಪುಗಳೂ ಮುಚ್ಚಿಹೋಗುತ್ತವೆ. ರಾಜಾ, ಶತ್ರುವನ್ನು ನಾಶಗೊಳಿಸುವದಕ್ಕಾಗಿ ಆತನ ಮನೆಗೆ ಬೆಂಕೆಹಚ್ಚಿಸಬೇಕು. ತನ್ನ ಇಂಥ ನೀಚಕೃತ್ಯಗಳು ಮು ಚ್ಚಬೇಕೆಂದು ತುಂಟರು, ನಾಸ್ತಿಕರು, ಕಳ್ಳರು ಮೊದಲಾದ ಕೆಟ್ಟಜನ ರನ್ನು ದೇಶದಿಂದ ಹೊರಗೆ ಹಾಕಬೇಕು ; ಅಂದರೆ, "ಇಂಥ ಧರ್ಮಿಷ್ಠರಾ ಜನು ಕೆಟ್ಟಕೆಲಸ ಮಾಡಬಹುದೆ" ಎಂದು ಜನರು ಮೋಸಹೋಗುವರು.

ಆಗತಸ್ವಾಗತ, ಕಪ್ಪಕಾಣಿಕೆ, ಸಾಲಕ್ಕೈಗಡ ಮೊದಲಾದವುಗಳಿಂದ ಶತ್ರುವಿನ ವಿಶ್ವಾಸವನ್ನು ಸಂಪಾದಿಸಿದಕೂಡಲೆ, ಆತನನ್ನು ರಸಾತಳಕ್ಕೆ ಮೆಟ್ಟಬೇಕು. ಶಂಕಿಸಲು ಕಾರಣವಿಲ್ಲದವರನ್ನೂ ಶಂಕಿಸಬೇಕೆಂದು ಹೇಳುತ್ತಿರುವಾಗ, ಶಂಕಿಸತಕ್ಕ ಜನರನ್ನು ಶಂಕಿಸಬೇಕೆಂದು ಯಾಕೆ ಹೇಳಬೇಕು? ಒಟ್ಟಿಗೆ, ಯಾವಾಗಲೂ ಅವಿಶ್ವಾಸದ ವೃತ್ತಿಯಿಂದಲೇ ರಾಜನು ಜನರಸಂಗಡ ನಡೆದುಕೊಳ್ಳಬೇಕು; ಯಾಕಂದರೆ ವಿಶ್ವಾಸದಿಂದುಂಟಾಗುವ ಭಯವು ಸಹಮೂಲ ನಾಶಮಾಡುವದು.

ಪರರಾಷ್ಟ್ರದಲ್ಲಿ ನಿಯಮಿಸತಕ್ಕ ಗುಪ್ತಚಾರರನ್ನು ಪರೀಕ್ಷಿಸಿ, ವಿಶ್ವಾಸಕ್ಕೆ ಪಾತ್ರರಾದವರನ್ನೇ ನಿಯಮಿಸತಕ್ಕದ್ದು. ಆ ಚಾರರು ತಪಸ್ವಿಗಳು, ಪಾಖಂಡಿಗಳು ಮುಂತಾದವರ ವೇಷದಿಂದ ತೋಟಪಟ್ಟಿಗಳು, ಕ್ರೀಡಾಸ್ಥಾನಗಳು, ದೇವಾಲಯಗಳು, ಸಾರಾಯಿಯ ಅಂಗಡಿಗಳು, ಹಾದಿಗಳು, ಬೈಲುಗಳು, ಬಾವಿಗಳು, ಪರ್ವತಗಳು, ವನಗಳು, ನದಿಗಳು ಮೊದಲಾದ ಒಂದಿಲ್ಲೊಂದು ಬಗೆಯಿಂದ ಜನರು ಕೂಡುವ ಸ್ಥಳಗಳಲ್ಲಿ ಸುದ್ದಿಯನ್ನು ತಿಳಕೊಂಡು, ದಿನಾಲು ಅವನ್ನು ತಮಗೆ ತಿಳಿಸುವಂತೆ ರಾಜರು ವ್ಯವಸ್ಥೆಮಾಡಬೇಕು. ಅದರಂತೆ ಮಂತ್ರಿ, ಪುರೋಹಿತ, ಯುವರಾಜ, ಚಮೂಪತಿ, ರಾಜದ್ವಾರಪಾಲಕ, ಅಂತಃಪುರರಕ್ಷಕ, ಕಾರಾಗೃಹಾಧಿಪತಿ, ಧನಸಂಗ್ರಹಾಧಿಕಾರಿ, ಧನವ್ಯಯಾಧಿಕಾರಿ, ಮಾರ್ಗದರ್ಶಕ, ನಗರಾಧ್ಯಕ್ಷ, ಕಾರ್ಯಯೋಜಕ, ಧರ್ಮಾಧ್ಯಕ್ಷ, ಸಭಾಪತಿ, ದಂಡಪಾಲ, ದುರ್ಗಪಾಲ, ಸೀಮಾರಕ್ಷಕ, ಅರಣ್ಯರಕ್ಷಕ ಎಂಬ ಹದಿನೆಂಟುಜನ ರಾಜ್ಯಾಧಿಕಾರಿಗಳ ಮೇಲೆ ರಾಜನು ಗೂಢಚಾರರನ್ನಿಡಬೇಕು.

ಧೃತರಾಷ್ಟ್ರ, ವೈಭವೇಚ್ಛು ಪುರುಷನು ತಾನು ಮುಂದಿಗೆ ತೋರಿಸುವ ಆಶೆಯನ್ನು ಪೂರ್ಣಮಾಡದಂತೆ ದಕ್ಷನಾಗಿರಬೇಕು; ಒಂದು ಪ್ರಸಂಗದಲ್ಲಿ ಆಶೆಯನ್ನು ಪೂರ್ಣಮಾಡುವ ಹೊತ್ತು ಬಂದರೆ, ನಡುವೆ ಏನಾದರೂ ವಿಘ್ನವನ್ನುಂಟುಮಾಡಬೇಕು; ಆದರೆ ಹೊರಗೆ ತಾನು ನಿಶ್ಚಯವಾಗಿ ಕಾರ್ಯಮಾಡುವೆನೆನ್ನುವಹಾಗೆ ಜನರಿಗೆ ತೋರಿಸಬೇಕು; ಆದರೆ ಮನಸ್ಸಿನಲ್ಲಿ ಈ ಕಾರ್ಯವನ್ನು ಸರ್ವಥಾ ಮಾಡಲಿಕ್ಕಿಲ್ಲವೆಂಬ ನಿಶ್ಚಯವಿರಬೇಕು. ಒಂದುಪಕ್ಷದಲ್ಲಿ ಹೀಗೆ ಮಾಡಿದ ಯತ್ನವು ವ್ಯರ್ಥವಾದರೆ, ಉತ್ಸಾಹದಲ್ಲಿ ಕೊರತೆಮಾಡಿಕೊಳ್ಳಬಾರದು.

ರಾಜಾ, ಧರ್ಮ-ಅರ್ಥ-ಕಾಮ ಈ ಮೂರರಿಂದ ಮೂರುವಿಧದ ಪೀಡೆಗಳೂ, ಮೂರುವಿಧದ ಫಲಗಳೂ ಪ್ರಾಪ್ತವಾಗುವವು. ಇವುಗಳಲ್ಲಿ ಪೀಡೆಗಳು ಕಷ್ಟದಾಯಕಗಳಿರುವದರಿಂದ ಅವನ್ನು ಬಿಟ್ಟುಬಿಡಬೇಕು; ಫಲಗಳು ಸುಖದಾಯಕಗಳಾದದ್ದರಿಂದ ಅವನ್ನು ಸ್ವೀಕರಿಸಬೇಕು. ತಾತ್ಪರ್ಯವೇನಂದರೆ, ಈ ಮೂರರಲ್ಲಿ ಒಂದರಿಂದ ಮತ್ತೊಂದಕ್ಕೆ ಉಪಹತಿಯಾಗದ ಹಾಗೆ ಅವುಗಳ ಉಪಭೋಗಮಾಡಬೇಕು; ಅಂದರೆ ಪೀಡೆಯಾಗದೆ ಸುಖೋತ್ಪತ್ತಿಯಾಗುವದು. ಯಾರೊಬ್ಬರು ಕೇವಲ ಧರ್ಮವನ್ನು ಲಕ್ಷಿಸಿದರೆ ಅವರಿಗೆ ಅರ್ಥಹಾನಿ-ಕಾಮನಾಶದ ದುಃಖಗಳು ಸಹಜವಾಗಿ ಉತ್ಪನ್ನವಾಗುವವು. ಬಳಿಕ ಅವರ ಚಿತ್ತವು ಅರ್ಥ-ಕಾಮಗಳಲ್ಲಿ ಆಸಕ್ತವಾದರೆ, ಧರ್ಮದಿಂದಲೂ, ಅವರಿಗೆ ದುಃಖವೇ ಆಗಬಹುದು. ಅದರಂತೆ ಯಾರಾದರೂ ಕೇವಲ ಅರ್ಥದಕಡೆಗೇ ಲಕ್ಷಗೊಟ್ಟರೆ, ಅವರಿಗೆ ಧರ್ಮಹಾನಿ-ಕಾಮನಾಶಗಳ ದುಃಖವುಂಟಾಗಿ, ಅವರಿಗೆ ಅರ್ಥದಿಂದಲೂ ದುಃಖವು ಉತ್ಪನ್ನವಾಗಬಹುದು. ಹಾಗೆಯೇ ಯಾರಾದರೂ ಕೇವಲ ಕಾಮದಕಡೆಗೇ ವಿಶೇಷ ಲಕ್ಷಗೊಟ್ಟರೆ, ಅವರಿಗೆ ಧರ್ಮಹಾನಿ-ಅರ್ಥನಾಶದ ಆಪತ್ತು ಒದಗಿ, ಕಾಮದಿಂದಲೂ ಅವರಿಗೆ ದುಃಖವುಂಟಾಗುವದು.

ರಾಜಾ, ಸಂಪತ್ತಿಯಿಂದ ಸೊಕ್ಕಬಾರದು. ಸ್ವಕಾರ್ಯದಲ್ಲಿ ಯಾವಾಗಲೂ ಲಕ್ಷವಿರಬೇಕು. ಶಾಂತಿಯನ್ನು ತಾಳಬೇಕು. ಎರಡನೆಯವರ ಉತ್ಕರ್ಷವನ್ನು ನೋಡಿ ಅಸೂಯಪಡಬಾರದು. ವಿವೇಕವನ್ನು ಜಾಗ್ರತವಾಗಿ ಇಡಬೇಕು. ಚಿತ್ತಶುದ್ಧಿಯನ್ನು ಕಾಯ್ದುಕೊಳ್ಳಬೇಕು. ಬ್ರಾಹ್ಮಣರ ಆಲೋಚನೆಯನ್ನು ಕೇಳಬೇಕು. ಮೃದುಕಾರ್ಯವನ್ನಾಗಲಿ, ಕಠಿಣಕಾರ್ಯವನ್ನಾಗಲಿ ಮಾಡಿ, ತಾನು ಸಂಕಟಮುಕ್ತನಾಗಬೇಕು; ಆದರೆ ಆಪತ್ಕಾಲವು ನಷ್ಟವಾದಬಳಿಕ ಕುಟಿಲತನಕ್ಕೆ ಹೋಗದೆ, ಧರ್ಮದಂತೆ ನಡೆಯಬೇಕು.

ಸಾಹಸಮಾಡದೆ ಸುಖದ ದಿವಸಗಳು ಬರಲಾರವು. ಸಾಹಸದಲ್ಲಿಯೇ ನಾಶವಾದರೆ ಎಲ್ಲವೂ ಮುಗಿದು ಹೋಗುವದು

ರಾಜಾ, ಮಂದಬುದ್ಧಿಯವರ ಮುಂದೆ ತನ್ನ ಹಿಂದಿನ ದೊಡ್ಡಿಸ್ತಿಕೆಯನ್ನು ಹೇಳಬೇಕು; ಮೂರ್ಖರಿಗೆ "ಮುಂದೆ ಹೀಗೆಮಾಡುವೆನು" ಎಂಬ

ಆಶೆತೋರಿಸಬೇಕು ; ಜಾಣರಾದವರಿಗೆ ಪ್ರತ್ಯಕ್ಷ ಧನಾದಿಗಳನ್ನು ಕೊಟ್ಟು ಸಂತೋಷಪಡಿಸಬೇಕು.

ಶತ್ರುವಿನೊಡನೆ ಗೆಳೆತನಮಾಡಿದರೆ ಕೃತಕೃತ್ಯನಾದೆನೆಂದು ತಿಳಿದು, ಸುಮ್ಮನೆ ಕುಳಿತುಕೊಳ್ಳುವದು ಕೇವಲ ಹುಚ್ಚುತನವು. ಗಿಡದ ತುದಿಯಲ್ಲಿ ಮಲಗಿದವನು ಕೆಳಗೆ ಬಿದ್ದ ಬಳಿಕ ಕಣ್ಣು ತೆರೆಯುವಂತೆ, ಅವನ ಗತಿಯಾಗುವದು.

ಮಂತ್ರಿವರ್ಗದೊಡನೆ ಮತ್ಸರ ಮಾಡಬಾರದು. ತನ್ನ ಆಲೋಚನೆಯನ್ನು ಅವರಿಂದ ಗುಪ್ತವಾಗಿ ಇಡುವಂತೆ ಯಾವಾಗಲೂ ಯತ್ನಿಸಬೇಕು.

ವಿಪುಲಸಂಪತ್ತನ್ನು ಇಚ್ಛಿಸುವವನು ಶತ್ರುವಿನ ಮರ್ಮವನ್ನು ಕತ್ತರಿಸಬೇಕಾಗುವದು ; ಕ್ರೂರಕರ್ಮಗಳನ್ನು ಮಾಡಬೇಕಾಗುವದು ; ಮೀನಗಾರನಂತೆ ಪ್ರಾಣಹರಣ ಮಾಡಬೇಕಾಗುವದು ; ಆದ್ದರಿಂದ ಶತ್ರುವಿನ ಸೈನ್ಯವು ಸ್ವಲ್ಪ ಉಳಿದಿರುವಾಗ, ಅದು ರೋಗಗ್ರಸ್ತವಾಗಿರುವಾಗ, ಅದು ದಣಿದಿರುವಾಗ, ಅದು ನೀರಡಿಸಿರುವಾಗ, ಅದು ಉಪವಾಸ ಸಾಯುತ್ತಿರುವಾಗ, ಅದು ವಿಶ್ವಾಸವಿಟ್ಟು ಸುಮ್ಮನೆ ಕುಳಿತಿರುವಾಗ ಅಕಸ್ಮಾತ್ ಅದರಮೇಲೆ ಬೀಳಬೇಕಾಗುವದು.

ಎರವಸೆಯುವರ ಕೆಲಸವನ್ನು ಒಮ್ಮೆಲೆ ಪೂರಾ ಮಾಡಿ ಬಿಡಬಾರದು; ಸ್ವಲ್ಪ ಉಳಿಸಿ ಇಡಬೇಕು ; ಯಾಕಂದರೆ, ಆಚುತೀರಿದಬಳಿಕ ಯಾರೂ ಲೆಕ್ಕಿಸುವದಿಲ್ಲ.

ಮಿತ್ರನೊಡನೆ ಸ್ನೇಹಬಳಿಸಲಿಕ್ಕೂ, ಶತ್ರುವಿನೊಡನೆ ವೈರಮಾಡಲಿಕ್ಕೂ ವಿಷಾದಪಡಬಾರದು. ಭಾಗ್ಯೇಚ್ಛುಪುರುಷನು ಯಾವಾಗಲೂ ಉತ್ಸಾಹಶಾಲಿಯಾಗಿರಬೇಕು.

ತಾನು ಮಾಡುವ ಕೆಲಸದಗೊತ್ತು ಶತ್ರುಗಳಿಗೂ ಆಗಬಾರದು, ಮಿತ್ರರಿಗೂ ಆಗಬಾರದು. ಕೆಲಸದ ಆರಂಭವಾದಬಳಿಕ, ಅಥವಾ ಅದು ಮುಗಿದಬಳಿಕ ಕೆಲಸದ ಗೊತ್ತಾಗಬೇಕು.

ಅಂಜಿಕೆಯು ದೂರವಿರುವತನಕ ಅಂಜುಬುರುಕನಂತೆ ಅದರ ನಿವಾರಣಮಾಡಬೇಕು ; ಆದರೆ ಮೈಮೇಲೆ ಬಂದರೆ ಹೆದರದೆ ಅದಕ್ಕೆ ಎದೆಗೊಟ್ಟು ಕಾದಬೇಕು.

ಬಾಹುಬಲದಿಂದ ವಶಮಾಡಿಕೊಂಡಿರುವ ಶತ್ರುಗಳಮೇಲೆ ಕೃಪೆ ಮಾಡುವವನು ಗರ್ಭಧಾರಣಮಾಡಿದ ಖೇಚರಿಯಂತೆ (ಏಡಿಯಂತೆ) ಮರಣ ಹೊಂದುವನು.

ಉದಯೇಚ್ಛುಪುರುಷನು ಒಂದೇ ಸಮನೆ ಉದ್ಯೋಗಮಾಡಬೇಕು. ಆತನಿಗೆ, ತಾನು ಈಗ ಏನುಮಾಡುತ್ತಿರುವೆನು, ಮುಂದೆ ಏನುಮಾಡಬೇಕು ಎಂಬದರ ಎಚ್ಚರವಿರಬೇಕು. ದೇಶ, ಕಾಲ, ಪ್ರಾಕ್ತನ, ಧರ್ಮ, ಅರ್ಥ, ಕಾಮ ಇವುಗಳ ಅನುರೋಧದಿಂದ ಆತನು ನಡೆದುಕೊಳ್ಳಬೇಕು. ಅವುಗಳಲ್ಲಿಯೂ ವಿಶೇಷವಾಗಿ ದೇಶ-ಕಾಲಗಳನ್ನು ಲಕ್ಷಿಸಬೇಕು ; ಯಾಕಂದರೆ ನಿಜವಾದ ಕಲ್ಯಾಣವು ಅವೆರಡರಿಂದಲೇ ಆಗುತ್ತದೆಂಬದನ್ನು ನಿಶ್ಚಯವಾಗಿ ತಿಳಿದಿರಬೇಕು

ಧೃತರಾಷ್ಟ್ರ, ಶತ್ರುಗಳಿಗೆ ಏನಾದರೂ ಆಶೆತೋರಿಸುವ ಪ್ರಸಂಗದಲ್ಲಿ, ನಡುವೆ ಬಹಳಕಾಲವು ಹೋಗುವಂತೆ ವ್ಯವಸ್ಥೆಮಾಡಬೇಕು; ಆ ಅವಧಿಯಲ್ಲಿ ಶತ್ರುಗಳನ್ನು ಮುರಿಯುವದು ಆಗದೆ ಅವರ ಆಶಾಪೂರ್ಣಮಾಡುವ ಪ್ರಸಂಗ ಒದಗಿದರೆ, ನಡುವೆ ಏನಾದರೂ ವಿಘ್ನವನ್ನುಂಟು ಮಾಡಿ ನೆವತೋರಿಸಬೇಕು. ಅಷ್ಟರಿಂದ ಭಾಗಿಸದಿದ್ದರೆಒಂದರಹಿಂದೊಂದು ತೊಂದರೆಯ ಮೂಲಕ ನಿಮಿತ್ತಗಳನ್ನುಂಟುಮಾಡುತ್ತ ಹೋಗಬೇಕು.

ರಾಜಾ, ತೀಕ್ಷ್ಣಧಾರೆಯ ಶಸ್ತ್ರಗಳು ತೊಗಲಿನ ಆಚ್ಛಾದನದಲ್ಲಿ ಗುಪ್ತವಾಗಿರುವಂತೆ, ಶತ್ರುಘಾತಕನಾದ ರಾಜನು ನಿಷ್ಠುರಮನಸ್ಸಿನವನಾಗಿ ಛಿದ್ರಗಳನ್ನು ಹುಡುಕುತ್ತ ಗುಪ್ತವಾಗಿ ಇದ್ದು, ಸಂಧಿಯನ್ನು ಸಾಧಿಸಿ ಶತ್ರುವಿನ ಪ್ರಾಣಹರಣ ಮಾಡಬೇಕು.

ಆದ್ದರಿಂದ ಎಲೈ ಕೌರವಶ್ರೇಷ್ಠ, ಪಾಂಡವರೊಡನೆಯೂ, ಅವರ ಪಕ್ಷದವರೊಡನೆಯೂ ಯುಕ್ತಿಯಿಂದ ನಡೆದು, ಅವರಿಂದ ನಿನ್ನ ನಾಶವಾಗದಂತೆ ಮಾಡಿಕೋ. ಅಪ್ಪಾ, ಯಾವ ಪುರುಷನಹತ್ತರ ಧನ-ಪುತ್ರ-ರಾಜ್ಯಾದಿ ಐಶ್ವರ್ಯಗಳಿರುವವೋ ಅವನೇ ಕುಲಶೀಲಾದಿಗಳಿಂದ ಶ್ರೇಷ್ಠನೆಂದು ಜನರು ಅನ್ನುವರು ; ಆದ್ದರಿಂದ ನೀನು ಪಾಂಡವರಿಂದ ನಿನ್ನ, ಹಾಗು ನಿನ್ನಮಕ್ಕಳ ಸಂರಕ್ಷಣವನ್ನು ಮಾಡು. ಎಲೈ ನರಾಧಿಪಾ, ನಿನ್ನ ತಮ್ಮನ ಮಕ್ಕಳು ಬಲಿಷ್ಠರಾಗಿರುವದರಿಂದ, ನಿನಗೆ ಪಶ್ಚಾತ್ತಾಪವಾಗದಂತೆ ಅವರೊಡನೆ ನಡೆದುಕೋ.

## ಶ್ರೀ ಶೇಷಸದ್ಗುರು - ಸೂಕ್ತಿರೂಪ

# ರಹಸ್ಯಗಳು

**ಉಪಕ್ರಮ**—ಈ ಉಪಪರ್ವದಲ್ಲಿ ಭರತವಂಶದ ಅರಸರ ಚರಿತ್ರಕ್ಕೆ, ಪ್ರಾಮುಖ್ಯವಾಗಿ ಆ ವಂಶದೊಳಗಿನ ಪಾಂಡವ-ಕೌರವರ ಚರಿತ್ರಕ್ಕೆ ಸಂಬಂಧಪಟ್ಟ ಮುಖ್ಯಮುಖ್ಯ ಪುರುಷರ ಜನ್ಮಗಳನ್ನು ಹೇಳಿರುವದರಿಂದ, ಈ ಉಪಪರ್ವಕ್ಕೆ ಸಂಭವಪರ್ವವೆಂಬ ಹೆಸರು ಬಂದಿರುತ್ತದೆ. ಈ ಸಂಭವಪರ್ವದಲ್ಲಿ ಹೇಳಿರುವ ಹಲವು ಮಹಾಪುರುಷರ ಜನ್ಮಗಳು, ದೇವ-ಋಷಿ-ರಾಕ್ಷಸ ಮೊದಲಾದ ಅಲೌಕಿಕಪುರುಷರಿಗೆ ಸಂಬಂಧಿಸಿರುವದರಿಂದ, ಅವರ ಜನ್ಮಗಳ ಕ್ರಮಗಳು ಅಲೌಕಿಕಗಳಾಗಿರುವವೆಂದು ತಿಳಿಯಬೇಕಲ್ಲದೆ, ಅವನ್ನು ಮನುಷ್ಯರಜನ್ಮಕ್ರಮಕ್ಕೆ ಹೋಲಿಸಿನೋಡಿ ಸಂಶಯಪಡಬಾರದು.

**೩೧ ಆರಣ್ಯಕಬ್ರಾಹ್ಮಣರ ಇರವು**—ಹಿಂದೆ ೬೦ನೇ ಪುಟದ ೯ನೇ ರಹಸ್ಯದಲ್ಲಿ ಬ್ರಾಹ್ಮಣರಲ್ಲಿಯು—೧ ಆರಣ್ಯಕ ೨ ನಾಗರಿಕ ೩ ಅಧಮ ೪ ಪತಿತ ಎಂಬ ನಾಲ್ಕುವರ್ಗಗಳನ್ನು ಹೇಳಿ, ಆ ವರ್ಗದವರ ಸಾಮಾನ್ಯ ಲಕ್ಷಣಗಳನ್ನು ಹೇಳಿರುತ್ತದಷ್ಟೆ? ಅವರಲ್ಲಿ ಆರಣ್ಯಕಬ್ರಾಹ್ಮಣರ, ಅಥವಾ ಋಷಿಸಂಜ್ಞಕಬ್ರಾಹ್ಮಣರ ಇರುವಿಕೆಯು ಹೇಗಿರಬೇಕೆಂಬದರ ತಿಳುವಳಿಕೆಯಾಗುವದಕ್ಕಾಗಿ, ಈ ಉಪಪರ್ವದ ೧೭೮ನೇ ಪುಟದಲ್ಲಿ ವರ್ಣಿಸಿರುವ ಭಗವಾನ್ ಕಣ್ವಋಷಿಗಳ ಆಶ್ರಮವರ್ಣನವನ್ನು ಲಕ್ಷಪೂರ್ವಕವಾಗಿ ಓದಬೇಕು; ಅಂದರೆ ಈಗಿನ ಅಧಮವರ್ಗದ ಅಥವಾ ಪತಿತವರ್ಗದ ನಾಮಧಾರಿಬ್ರಾಹ್ಮಣರು ಕರ್ತೃತ್ವಹೀನರು, ಅಂತೇ ಲೋಕನಿಂದ್ಯರು ಯಾಕಾಗಿರುವರೆಂಬದರ ಕಾರಣವು ಗೊತ್ತಾಗುವದು. ಈಗಿನ ಬ್ರಾಹ್ಮಣರ ಈ ಹೀನಸ್ಥಿತಿಯು ದೂರವಾಗಬೇಕಾದರೆ, ಇವರು ತಮ್ಮ ಪ್ರಾಚೀನ ಋಷಿಗಳ ಚಾರಿತ್ರ್ಯದ ರಹಸ್ಯವನ್ನರಿತು ನಾಚಿ, ಸ್ವಧರ್ಮನಿರತರಾಗಿ ತಮ್ಮ ಅಧಮ ವೃತ್ತಿಯನ್ನು, ಅಥವಾ ಪಾತಿತ್ಯವನ್ನು ದೂರಮಾಡಿಕೊಂಡು, ಆರಣ್ಯಕರಾಗದಿದ್ದರೂ ದ್ರೋಣ-ಕೃಪರಂತೆ ನಾಗರಿಕರಾ

ದರೂ ಆಗಲಿಕ್ಕೆ ಯತ್ನಿಸಬೇಕು ; ಇಲ್ಲದಿದ್ದರೆ ತಮ್ಮ ವಿಷಯದ ಲೋಕ ತಿರಸ್ಕಾರವು ನ್ಯಾಯ್ಯವಾದದ್ದೆಂದು ತಿಳಿದು ಪಶ್ಚಾತ್ತಾಪಪಡಬೇಕು.

**೩೨ ಗಾಂಧರ್ವವಿವಾಹದ ದೋಷಗಳು** — ಈ ಉಪಪರ್ವದಲ್ಲಿ ಶಕುಂತಲೆ, ದೇವಯಾನಿ, ಶರ್ಮಿಷ್ಠೆ ಇವರ ಗಾಂಧರ್ವವಿವಾಹದ ವರ್ಣನಗಳು ಬಂದಿರುವವಷ್ಟೆ ? ಗಾಂಧರ್ವವಿವಾಹವೆಂದರೆ, "ಪರಸ್ಪರ ಪ್ರೀತಿ ಕೂಡಿದ ಸ್ತ್ರೀಪುರುಷರು ಏಕಾಂತದಲ್ಲಿ ಐಕಮತ್ಯವನ್ನು ಹೊಂದಿ ಮಾಡಿಕೊಳ್ಳುವ ಮಂತ್ರವಿಹೀನ ವಿವಾಹವು"ಎಂತಲೂ ಹಿಂದೆ ೧೮೪ನೇಪುಟದಲ್ಲಿ ಹೇಳಿದೆ. ಇಂತಹ ಗಾಂಧರ್ವವಿವಾಹದಿಂದ ವಿವಾಹಿತರಾದ ಈ ಮೂವರು ಕುಲೀನಸ್ತ್ರೀಯರು ಪತಿವ್ರತೆಯರೂ, ಉತ್ತಮಪ್ರಕಾರದ ಶೀಲವುಳ್ಳವರೂ ಆಗಿದ್ದರೂ, ಪ್ರಸಂಗವಿಶೇಷದಲ್ಲಿ ಅವರು, ಪ್ರಾಮುಖ್ಯವಾಗಿ ಶಕುಂತಲಾ-ದೇವಯಾನಿಯರು ತಮ್ಮ ಗಂಡಂದಿರ ಹಂಗು ಇಡದೆ, ಸಂಕೋಚರಹಿತರಾಗಿ ಅವರೊಡನೆ ನಡೆದುಕೊಂಡದ್ದನ್ನು ನೋಡಿದರೆ, ಗಾಂಧರ್ವವಿವಾಹದಲ್ಲಿ ಲಜ್ಜಾ, ವಿನಯ, ದಾಕ್ಷಿಣ್ಯ, ಭಕ್ತಿ, ಸೌಜನ್ಯ ಮೊದಲಾದ ಕೋಮಲ ಮನೋವೃತ್ತಿಗಳ ಬೆಳವಣಿಗೆಗೆ ಆಸ್ಪದವು ಕಡಿಮೆಯೆಂದು ಹೇಳಬೇಕಾಗುತ್ತದೆ ; ಯಾಕಂದರೆ, ತಾರುಣ್ಯದ ವಿಕಾರವಶತೆಯಿಂದ ಪ್ರೇರಿತವಾದ ಮನಸ್ಸಿನ ಕ್ಷಣಿಕಪ್ರಸನ್ನತೆಯೇ ಈ ವಿವಾಹಕ್ಕೆ ಕಾರಣವಾಗಿರುವದರಿಂದ, ಬ್ರಾಹ್ಮವಿವಾಹದಂತೆ ವಧೂ-ವರರು ಪರಸ್ಪರರ ಕುಲ-ಶೀಲಾದಿಗಳನ್ನು ಕುರಿತು ವಿಚಾರಿಸಲಿಕ್ಕೆ ಆಸ್ಪದವು ದೊರೆಯದೆ ಹೋಗುವದು ; ಅಲ್ಲದೆ, ತಾಯಿತಂದೆಗಳಂಥ ಅನುಭವಿಕ ಪೂಜ್ಯಹಿತಕರ್ತೃಗಳ ಆಲೋಚನೆಯು, ಹಾಗು ಪ್ರಸನ್ನತೆಯ ಸಹಾಯವು ಅವರಿಗೆ ದೊರೆಯದೆ ಹೋಗುವದು ; ಆದ್ದರಿಂದ ಪತಿಯೇ ದೈವತವೆಂದು ತಿಳಿದು ಅನನ್ಯಗತಿಕತೆಯಿಂದ ಪತಿಯೊಡನೆ ನಡೆದುಕೊಳ್ಳುವ ಪಾತಿವ್ರತ್ಯದ ಉಚ್ಚತರ ದೈವೀ ತಪಶ್ಚರ್ಯಕ್ಕೆ, ಈ ಗಾಂಧರ್ವವಿವಾಹದಲ್ಲಿ ಆಸ್ಪದವು ಕಡಿಮೆಯಾಗಿರುವದು. ಈ ದೋಷದಮೂಲಕವಾಗಿಯೇ ದುಷ್ಯಂತ-ಯಯಾತಿಯರ ಮೋಸಗಾರಿಕೆಯೂ, ಶಕುಂತಲೆ-ದೇವಯಾನಿಯರ ಕಠೋರತನವೂ ವ್ಯಕ್ತವಾಗಿರುವವು, ಇನ್ನು, ಯೋಗ್ಯ ಹಿರಿಯರು ಶೋಧಿಸಿ ಮಾಡಿದ ವಿವಾಹಗಳ ವಿಚಾರಮಾಡೋಣ. ಇದೇಪರ್ವದ ೨೬೬ನೇ, ೨೬೮ನೇ

ಪುಟಗಳಲ್ಲಿ ಮಹಾಜ್ಞಾನಿಗಳಾದ ಭೀಷ್ಮಾಚಾರ್ಯರು ಹುಟ್ಟುಗುರುಡನಾದ ಧೃತರಾಷ್ಟ್ರನಿಗೆ ಗಾಂಧಾರಿಯನ್ನೂ, ಪಂಡುವಿಗೆ ಕುಂತಿ–ಮಾದ್ರಿಯರನ್ನೂ ಯೋಗ್ಯವಧುಗಳೆಂದು ಆರಿಸಿ ವಿವಾಹಮಾಡಲು, ಆ ಸಾಧ್ವಿಯರು ತಮ್ಮ ಗಂಡಂದಿರೊಡನೆ ಎಂತಹ ವಿನಯ–ಸೌಜನ್ಯಗಳಿಂದ ನಡೆದುಕೊಂಡರೆಂಬದನ್ನು ಅವರ ನಡತೆಯಿಂದ ವಿಚಾರಿಸತಕ್ಕದ್ದಾಗಿದೆ. ಅದರಲ್ಲಿಯೂ, ಮಹಾಪತಿವ್ರತೆಯಾದ ಗಾಂಧಾರಿಯು ತನ್ನನ್ನು ತಂದೆಯು ಹುಟ್ಟುಗುರುಡನಿಗೆ ಕೊಡುವನೆಂಬದನ್ನು ಕೇಳಿದಕೂಡಲೆ, ತನ್ನ ಕುರುಡಪತಿಯ ವಿಷಯದ ವಿಕಲ್ಪಭಾವನೆಯ ಉತ್ಪತ್ತಿಗೆ ತನ್ನಲ್ಲಿ ಆಸ್ಪದವಾಗಬಾರದೆಂದು ತಿಳಿದು, ತನ್ನ ಎರಡೂಕಣ್ಣುಗಳನ್ನು ಮಡಿಕೆಮಾಡಿದ ಅರಿವೆಯಿಂದ ಗಟ್ಟಿಯಾಗಿಕಟ್ಟಿಕೊಂಡು, ತಾನೂ ಅಂದಿನಿಂದ ಕುರುಡಳೇ ಆದ ಘೋರ ತಪಶ್ಚರ್ಯವು ವಿಚಾರಿಸತಕ್ಕಂತಹದಾಗಿದೆ ! ಗಾಂಧರ್ವವಿವಾಹವು ಬಳಿಕೆಯಲ್ಲಿರುವ ಧರ್ಮಶೈಥಿಲ್ಯದ ಈಗಿನ ದೇಶಗಳಲ್ಲಿಯ ಗಂಡಹೆಂಡಿರಲ್ಲಿ, ಆ ವಿವಾಹದ ಮೇಲೆ ಹೇಳಿದ ದೋಷಗಳು ಢಾಳವಾಗಿ ಕಣ್ಣಿಗೆ ಬೀಳುವವಲ್ಲದೆ, ಗಂಡಹೆಂಡಿರ ಘಟಸ್ಫೋಟಗಳು ಆ ದೇಶಗಳಲ್ಲಿ ವಿಪುಲವಾಗಿ ಆಗುತ್ತಿರುವವು! ಈ ಮಾತು ಬ್ರಾಹ್ಮವಿವಾಹವು ವಿಶೇಷವಾಗಿ ಬಳಿಕೆಯಲ್ಲಿರುವ ನಮ್ಮ ಹಿಂದುಸ್ಥಾನದ ಸುಶೀಲದಂಪತಿಗಳಿಗೆ ವಿಲಕ್ಷಣವಾಗಿ ತೋರಿದರೆ ಆಶ್ಚರ್ಯವಲ್ಲ.

**೩೩. ಬ್ರಾಹ್ಮಣರು ಶೀಘ್ರಕೋಪಿಗಳು, ಆದರೆ ದೀರ್ಘದ್ವೇಷಿಗಳಲ್ಲ**—ಋಜುಭಾವವು, ಅಥವಾ ಮನಸ್ಸಿನ ಸರಳತೆಯು ನಿಜವಾದ ಬ್ರಾಹ್ಮಣರದೊಂದು ಸಾಧಾರಣ ಲಕ್ಷಣವಾಗಿರುವದೆಂದು ಹೇಳಬಹುದು; ಆದ್ದರಿಂದಲೇ ಅವರು ಹೊಟ್ಟೆಯಲ್ಲಿ ಕಪಟವಿಲ್ಲದೆ ಕೂಡಲೆ ಸಿಟ್ಟಾಗುವರು; ಕೂಡಲೆ ಪ್ರಸನ್ನರಾಗುವರು. ಈ ಮಾತಿನ ಸಾಕ್ಷಿಗಾಗಿ ಈ ಉಪಪರ್ವದೊಳಗಿನ ಕೆಲವು ಉದಾಹರಣೆಗಳನ್ನು ಕೊಡೋಣ. ದೇವದೈತ್ಯರು ಪರಸ್ಪರ ಶತ್ರುಗಳಷ್ಟೇ? ಬೃಹಸ್ಪತ್ಯಾಚಾರ್ಯರು ದೇವತೆಗಳ ಗುರುಗಳು, ಶುಕ್ರಾಚಾರ್ಯರು ದೈತ್ಯರ ಗುರುಗಳು. ಅಂದಬಳಿಕ ಅವರಿಬ್ಬರು ಪರಸ್ಪರ ಪ್ರತಿಸ್ಪರ್ಧಿಗಳಾದರೆಂದು ಹೇಳಲವಶ್ಯವಿಲ್ಲ. ಆದರೂ ಅವರಿಬ್ಬರಲ್ಲಿ ಅಧಾರ್ಮಿಕವಾದ ನೀಚತನದ ದ್ವೇಷಭಾವವು ಸರ್ವಥಾ ಇದ್ದಿಲ್ಲವೆಂಬದು,

ಈ ಉಪಪರ್ವದೊಳಗಿನ ಕಚನ ಚರಿತ್ರದಿಂದ ಗೊತ್ತಾಗುತ್ತದೆ. ಬೃಹಸ್ಪತ್ಯಾಚಾರ್ಯರು ತಮ್ಮ ಸರಳಹೃದಯದಮೂಲಕ ತಮ್ಮ ಪ್ರತಿಸ್ಪರ್ಧಿಯಾದ ಶುಕ್ರಾಚಾರ್ಯರ ಬಳಿಗೆ ತಮ್ಮ ಮಗ ಕಚನನ್ನು ವಿದ್ಯಾಭ್ಯಾಸಕ್ಕಾಗಿ ನಿರ್ಮಾತ್ಸರ್ಯದಿಂದ ಕಳಿಸಲಿಕ್ಕೆ ಹಿಂದೆಮುಂದೆ ನೋಡಲಿಲ್ಲ. ಅದರಂತೆ, ಶುಕ್ರಾಚಾರ್ಯರಾದರೂ ತಮ್ಮ ಪ್ರತಿಸ್ಪರ್ಧಿಯಾದ ಬೃಹಸ್ಪತ್ಯಾಚಾರ್ಯರ ಮಗ ಕಚನನ್ನು, ತಮ್ಮ ಆಚಾರ್ಯಧರ್ಮಕ್ಕನುಸರಿಸಿ, ತ್ರಿಕರಣಪೂರ್ವಕ ಶಿಷ್ಯನೆಂದು ಪರಿಗ್ರಹಿಸಿ, ಆತನ ಅಧಿಕಾರ ನೋಡಿ ಸಂಜೀವನೀವಿದ್ಯೆಯಂಥ ಅಲೌಕಿಕವಿದ್ಯೆಯನ್ನು. ತಮ್ಮ ಯಜಮಾನರಾದ ದೈತ್ಯರ ಹಾನಿಯಕಡೆಗೆ ಲಕ್ಷ್ಯಗೊಡದೆ, ಆ ಗುರುಪುತ್ರನಿಗೆ ನಿರ್ಮಾತ್ಸರ್ಯದಿಂದ ಉಪದೇಶಿಸಲಿಕ್ಕೆ ಹಿಂದೆಮುಂದ ನೋಡಲಿಲ್ಲ! ಅದರಂತ ತಮ್ಮ ಪ್ರತ್ಯಕ್ಷ ಅಳಿಯನಾದ ಯಯಾತಿಯು ವಚನಭ್ರಷ್ಟನಾಗಲು, ಅದೇ ಶುಕ್ರಾಚಾರ್ಯರು ತಮ್ಮ ಮಗಳ ಹಿತಾಹಿತವನ್ನು ಲಕ್ಷಿಸದೆ "ನೀನು ಮುದುಕನಾಗು" ಎಂದು ಆ ಯಯಾತಿಯನ್ನು ತಟ್ಟನೆ ಶಪಿಸಿದರು; ಆದರೆ ಆ ಯಯಾತಿಯು ಬಿದ್ದು ಕಾಲ್ಗೆರಗಲು, ಕೂಡಲೆ ಕನಿಕರಗೊಂಡು ಅವರು— "ನಿನ್ನ ಮುಪ್ಪನ್ನು ನಿನ್ನ ಮಕ್ಕಳಲ್ಲಿ ಬೇಕಾದವರಿಗೆ ಕೊಟ್ಟು, ಅವರ ತಾರುಣ್ಯವನ್ನು ತಕ್ಕೊಳ್ಳಲಿಕ್ಕೆ ನಿನಗೆ ಬರಲಿ" ಎಂದು ವರಪ್ರದಾನ ಮಾಡಿದರು. ಅದರಂತೆ, ದ್ರೋಣಾಚಾರ್ಯರು ದ್ರುಪದನ ಸೊಕ್ಕಿನ ನಡತೆಗಾಗಿ ಆತನನ್ನು ತಮ್ಮ ಶಿಷ್ಯರಾದ ಪಾಂಡವರಿಂದ ಸೆರೆಹಿಡಿಸಿ ಒಡತರಿಸಿದರೂ, ಬ್ರಾಹ್ಮಣರಲ್ಲಿಯ- ಮೈತ್ರಿ, ಕರುಣಾ, ಮುದಿತಾ, ಉಪೇಕ್ಷಾ ಎಂಬ ಗುಣಗಳಮೂಲಕ ದ್ರುಪದನಿಗೆ ಅರ್ಧರಾಜ್ಯಕೊಟ್ಟು ಮತ್ತೆ ಆತನೊಡನೆ ಮೈತ್ರಿಯನ್ನು ಬಳಸಿದರು; ಮತ್ತು ಅದೇ ದ್ರುಪದನು ಖಂಗು ಇಟ್ಟು, ದ್ರೋಣಾಚಾರ್ಯರನ್ನು ಕೊಲ್ಲುವಂಥ ಧೃಷ್ಟದ್ಯುಮ್ನ ಎಂಬ ಹೆಸರಿನ ಮಗನನ್ನು ತಪಶ್ಚರ್ಯದಿಂದ ಪಡೆದದ್ದು ದ್ರೋಣಾಚಾರ್ಯರಿಗೆ ಗೊತ್ತಿದ್ದರೂ, ಆ ಸರಳಹೃದಯದ ದ್ರೋಣಬ್ರಾಹ್ಮಣನು ಶಿಷ್ಯನಾಗಿ ಬಂದ ಧೃಷ್ಟದ್ಯುಮ್ನನಿಗೆ ಸಂಪೂರ್ಣ ಧನುರ್ವಿದ್ಯೆಯನ್ನು ಕಲಿಸಿದನು! ಹಿಂದೆ ಪೌಷ್ಯಪರ್ವದಲ್ಲಿ ಉತ್ತಂಕನು ತಟ್ಟನೆ ಪೌಷ್ಯರಾಜನನ್ನು ಕುರುಡನಾಗೆಂದು ಶಪಿಸಿ, ಮತ್ತೆ ತಟ್ಟನೆ ಕಣ್ಣುಬರಲೆಂದು ಆತನನ್ನು ಅನುಗ್ರಹಿ

ಸಿದ್ಧ ವಾಚಕರ ಲಕ್ಷ್ಯದಲ್ಲಿರಬಹುದು. ಇವೆಲ್ಲ ಉದಾಹರಣಗಳು ಬ್ರಾಹ್ಮಣರ ಸರಳಸ್ವಭಾವಮೂಲವಾದ ಶೀಘ್ರಕೋಪವನ್ನೂ, ದೀರ್ಘದ್ವೇಷರಾಹಿತ್ಯವನ್ನೂ ತೋರಿಸುವವು.

**೫೪ ಶ್ರೇಯಾಂಸಿ ಬಹುವಿಘ್ನಾನಿ**— ಈ ಉಪಪರ್ವದಲ್ಲಿ ಕಚನು ಸಂಜೀವನೀವಿದ್ಯೆಯನ್ನು ಸಂಪಾದಿಸುವಾಗ ಬಂದ ವಿಘ್ನಗಳನ್ನೂ, ಹಿಂದಿನ ಪೌಷ್ಯಪರ್ವದಲ್ಲಿ ಉತ್ತಂಕನು ಗುರುದಕ್ಷಿಣೆ ಕೊಡುವಾಗ ಬಂದ ವಿಘ್ನಗಳನ್ನೂ, ಬೇರೆ ಇಂತಹ ಸತ್ಕಾರ್ಯಗಳಲ್ಲಿ ಒದಗಿರುವ ವಿಘ್ನಗಳನ್ನೂ ಕುರಿತು ವಿಚಾರಮಾಡಿದರೆ "ಶ್ರೇಯಾಂಸಿ ಬಹುವಿಘ್ನಾನಿ" ಅಂದರೆ "ಒಳ್ಳೆಯ ಕೆಲಸಗಳು ಬಹಳ ವಿಘ್ನಗಳುಳ್ಳವು" ಎಂಬ ಸುಪ್ರಸಿದ್ಧ ಉಕ್ತಿಗೆ ಪ್ರತ್ಯಂತರ ದೊರೆಯುವದು. ಇನ್ನು ಕೆಟ್ಟಕೆಲಸಗಳಿಗೂ ದೈವಯೋಗದಿಂದ ಬಹಳವಿಲ್ಲ ಸ್ವಲ್ಪವಾದರೂ ವಿಘ್ನಗಳು ಬರುತ್ತಿರಲು, ಒಳ್ಳೆಯ ಕೆಲಸಗಳಿಗೇ ವಿಘ್ನಗಳು ಯಾಕೆ ಹೆಚ್ಚು ಬರಬೇಕೆಂಬ ಪ್ರಶ್ನವು ಉತ್ಪನ್ನವಾಗುವದು. ಒಳ್ಳೆಯ ಕೆಲಸಗಳಿಂದ ಪುಣ್ಯವೂ, ಕೆಟ್ಟಕೆಲಸಗಳಿಂದ ಪಾಪವೂ ಬರುತ್ತವೆಂಬ ಮಾತು ಎಲ್ಲರಿಗೂ ಗೊತ್ತಿರುವದಷ್ಟೆ? ಅದರಂತೆ, ಪುಣ್ಯದಿಂದ ಜೀವನ ಉತ್ಕರ್ಷವು ಅಥವಾ ಏರಿಕೆಯೂ, ಪಾಪದಿಂದ ಜೀವನ ಅಪಕರ್ಷವು ಅಥವಾ ಇಳಿಕೆಯೂ ಆಗುವವೆಂಬ ಮಾತೂ ಎಲ್ಲರಿಗೂ ಗೊತ್ತಿರುವದು. ಏರಿಕೆಯೆಂದರೆ, ಈ ಲೋಕದ ಹಾಗು ಸ್ವರ್ಗಾದಿ ಉಚ್ಚಲೋಕಗಳ ಉಚ್ಚತರ ಸುಖಗಳಿಗೆ ಏರಿಹೋಗೋಣವು; ಇಳಿಕೆಯೆಂದರೆ ಈ ಲೋಕದ ಹಾಗು ನರಕಾದಿ ನೀಚಲೋಕಗಳ ದುಃಖಗಳಿಗೆ ಜಾರುತ್ತ ಹೋಗೋಣವು. ಜಾರಿಹೋಗುವದಕ್ಕಿಂತ ಏರಿಹೋಗಲಿಕ್ಕೆ ತೊಂದರೆಗಳೂ, ಆಯಾಸವೂ ಬಹಳವೆಂಬುದು ಅನುಭವಸಿದ್ಧವಾಗಿರುವದು. ಈ ಲೋಕದಲ್ಲಿ ಜೀವನು ಹೆಂಡಿರು–ಮಕ್ಕಳು, ಹೊಲ–ಮನೆ, ಹಣ–ಕಾಸು, ಹಕ್ಕು–ಬಾಬು, ಅಧಿಕಾರ–ದೌಲತ್ತು ಮೊದಲಾದ ವಿಷಯಗಳ ಮೋಹದಲ್ಲಿ ಸಿಕ್ಕುಬಿದ್ದಿರುವನು. ಅಂಥವನು ಮತ್ತಿಷ್ಟು ಆ ವಿಷಯಮೋಹಕ್ಕೆ ಒಳಗಾಗಿ ಕೆಟ್ಟಕೆಲಸ ಮಾಡಹತ್ತಿದರೆ, ಆತನ ಅಧಃಪತನಕ್ಕೆ, ಅಂದರೆ ಜಾರಿಹೋಗುವದಕ್ಕೆ ಪಾಪದ ದೂಡುವಿಕೆಯ ಸಹಾಯವು ಒದಗಿದಂತಾಗಲು, ಆತನಿಗೆ ಹೆಚ್ಚು ವಿಘ್ನಗಳು ಯಾಕೆ ಒದಗಬೇಕು? ಒಂದು ಪಕ್ಷ

ದಲ್ಲಿ ದೈವಯೋಗದಿಂದ ಅಲ್ಪಸ್ವಲ್ಪ ವಿಘ್ನಗಳು ಒದಗಿದರೂ, ಆ ಪಾಪಿಷ್ಠನು ಸರ್ವಥಾ ಅವನ್ನು ಲೆಕ್ಕಿಸನು. ಆದೇ ಜೀವನು ಮೇಲೆಹೇಳಿದ ವಿಷಯಮೋಹಜಾಲವನ್ನು ಸಡಲಿಸಿಕೊಳ್ಳುತ್ತ, ಅಥವಾ ಅದನ್ನು ಹರಿದು ಚಲ್ಲುತ್ತ, ಸತ್ಕಾರ್ಯದ ಯೋಗದಿಂದ ಮೇಲಕ್ಕೆ ಪ್ರಯಾಸದಿಂದ ಏರಿ ಹೋಗಹತ್ತಿದರೆ, ಆ ವಿಷಯಜಾಲದ ತೊಡಕುಗಳು ಹಲವು ವಿಘ್ನರೂಪದಿಂದ ಆತನನ್ನು ಬಾಧಿಸಿದರೆ ಆಶ್ಚರ್ಯವಲ್ಲ. ಈ ಪ್ರಸಂಗದಲ್ಲಿ ಆ ಸತ್ಕಾರ್ಯಾಸಕ್ತನು ತನ್ನ ಮನಸ್ಸಿನಲ್ಲಿ—"ಜಗತ್ತಿನ ವ್ಯವಹಾರಗಳೆಲ್ಲ ಈಶ್ವರನ ತಂತ್ರದಿಂದ ನಡೆದಿರುವವು. ನಾನೂ ಈಶ್ವರೀತಂತ್ರಕ್ಕೆ ಒಳಗಾದವನೇ. ನನ್ನ ತರ್ಕವ್ಯವೆಂದು ಒಳ್ಳೆಯ ಕಾರ್ಯವನ್ನು ನಾನು ಮಾಡತೊಡಗಿರುವೆನು. ಕಾರ್ಯವಾದರೆ ದೇವರ ಮನಸ್ಸಿಗೆ ಬಂತೆಂದು ತಿಳಿಯುವೆನು; ಕಾರ್ಯವಾಗದಿದ್ದರೆ ದೇವರ ಮನಸ್ಸಿಗೆ ಬರಲಿಲ್ಲವೆಂದು ತಿಳಿಯುವೆನು. ಹಿಡಿದ ಒಳ್ಳೆಯ ಕೆಲಸಕ್ಕಾಗಿ ಸರ್ವಸ್ವವನ್ನು ದೇವರಿಗೆ ಅರ್ಪಿಸುವದಷ್ಟು ನನ್ನ ಕೆಲಸವು." ಎಂದು ಗಟ್ಟಿಮುಟ್ಟಿಯಾಗಿ ತಿಳಿದುಕೊಂಡಿರಬೇಕು; ಅಂದರೆ ಸತ್ಕಾರ್ಯದಲ್ಲಿ ಬರುವ ವಿಘ್ನಗಳೆಲ್ಲ ಕರ್ತೃವಿನ ಸತ್ವವೃದ್ಧಿದ್ವಾರಾ ಆತನ ಆತ್ಮೋನ್ನತಿಗೆ ಕಾರಣವಾಗಿ, ಆತನ ಶಾಶ್ವತ ಕಲ್ಯಾಣವಾಗುವದು. ಇಂತಹ ಕಲ್ಯಾಣಸಾಧನಕ್ಕಾಗಿಯೇ ಸತ್ಕಾರ್ಯದಲ್ಲಿ ವಿಘ್ನಗಳ ಪರಂಪರೆಯುಂಟಾಗುವದು; ಆದ್ದರಿಂದ ಸತ್ಕಾರ್ಯನಿಷ್ಠನು ತನ್ನ ಕಾರ್ಯದಲ್ಲಿ ಬರುವ ವಿಘ್ನಗಳೆಲ್ಲ ತನ್ನ ಕಲ್ಯಾಣಕ್ಕಾಗಿಯೇ ಬರುವವೆಂದು ತಿಳಿದು, ಎಷ್ಟು ವಿಘ್ನಗಳು ಬಂದರೂ ಆತನು ಹಿಡಿದ ಕೆಲಸವನ್ನು ಬಿಡಲಾಗದು.

**೩೪ ಕುಲದೀಪಕ ಪುತ್ರನೇ ಸತ್ಪುತ್ರನು**—ಈ ಉಪಪರ್ವದಲ್ಲಿಯ ಯಯಾತಿರಾಜನ ಐದುಜನ ಮಕ್ಕಳಲ್ಲಿ, ಕಡೆಹುಟ್ಟಿದ ಮಗನಾದ ಪುರು ಎಂಬವನೊಬ್ಬನು ಮಾತ್ರ ಸತ್ಪುತ್ರನೆಂದು ಕರೆಯಲ್ಪಟ್ಟಿರುವನು; ಯಾಕಂದರೆ ಆತನು ತಂದೆಯ ಅಪ್ಪಣೆಯನ್ನು ಮನ್ನಿಸಿ ತನ್ನ ಪ್ರಾಯವನ್ನು ತಂದೆಗೆ ಕೊಟ್ಟು ಆತನ ಮುಪ್ಪನ್ನು ತಾನು ತಕ್ಕೊಂಡಿರುವನು; ಆದ್ದರಿಂದ ಆತನು ತನ್ನ ತಂದೆಯ ಅನುಗ್ರಹವನ್ನು ಪಡೆದು ತನ್ನ ಕುಲವನ್ನು ಪ್ರಕಾಶಿಸುವವನಾದನು; ಅಂತೇ ಆತನ ಮುಂದಿನ ಅರಸರಿಗೆ ಪೌರವ

ರೆಂಬ ಹೆಸರು ಬಂದಿತು ! ಈ ದುಸ್ತರಕಾರ್ಯವನ್ನು ಯಯಾತಿಯ ಉಳಿದ ಮಕ್ಕಳು ಮಾಡದ್ದರಿಂದ, ಅವರು ತಂದೆಯ ಶಾಪಕ್ಕೆ ಗುರಿಯಾಗಿ ಕುಪುತ್ರರೆನಿಸಿ ತಮ್ಮ ಕುಲವನ್ನು ಕಲಂಕಿತವಾಗಿ ಮಾಡಿದರು; ಆದ್ದರಿಂದ ಮಕ್ಕಳ ಮುಖ್ಯಕರ್ತವ್ಯವು ತಾಯಿತಂದೆಗಳ ಅಪ್ಪಣೆಯಂತೆ ನಡೆಯುವದಾಗಿರುತ್ತದೆಂಬ ರಹಸ್ಯವನ್ನು, ಸತ್ಪುತ್ರರಾಗಲಿಚ್ಛಿಸುವವರು ಲಕ್ಷ್ಯದಲ್ಲಿಡತಕ್ಕದ್ದು. ಇಂಥ ಸತ್ವಶಾಲಿಗಳಾದ ಸತ್ಪುತ್ರರೇ, ತಾವು ಉದ್ಧೃತರಾಗುವರಲ್ಲದೆ, ತಮ್ಮ ಕುಲ-ಸಮಾಜ-ರಾಷ್ಟ್ರಗಳನ್ನು ಉದ್ಧರಿಸುವರು. ರಾಜಕಾರಣಪಟುವಾದ ನಮ್ಮ ಆರ್ಯಚಾಣಕ್ಯನು ಸುಖಪ್ರಾಪ್ತಿಯ ಮಾರ್ಗವನ್ನು ಕುರಿತು ಹೇಳುವಾಗ-"ಮಾತಾಪಿತೃ ಸೇವೆಯಿಂದ ಇಂದ್ರಿಯನಿಗ್ರಹವೂ, ಇಂದ್ರಿಯನಿಗ್ರಹದಿಂದ ಸ್ವರಾಜ್ಯವೂ, ಸ್ವರಾಜ್ಯದಿಂದ ದ್ರವ್ಯಪ್ರಾಪ್ತಿಯೂ, ದ್ರವ್ಯಪ್ರಾಪ್ತಿಯಿಂದ ಧರ್ಮಸಂಗ್ರಹವೂ, ಧರ್ಮಸಂಗ್ರಹದಿಂದ ಇಹಪರಸುಖಗಳೂ ಪ್ರಾಪ್ತವಾಗುವವೆಂ"ಬ ಕ್ರಮವನ್ನು ಹೇಳಿರುವನು. ಒಟ್ಟಿಗೆ, ನಿಜವಾದ ಸುಖದ ಕಾರಣವು ಧರ್ಮವಾಗಿದ್ದು, ಅಂತಹ ಧರ್ಮಸಂಗ್ರಹಕ್ಕೆ ಅರ್ಥವೂ, ಅರ್ಥಸಾಧನಕ್ಕೆ ಸ್ವರಾಜ್ಯವೂ, ಸ್ವರಾಜ್ಯಪ್ರಾಪ್ತಿಗೆ ಇಂದ್ರಿಯನಿಗ್ರಹವೂ, ಇಂದ್ರಿಯನಿಗ್ರಹಕ್ಕೆ ಮಾತಾಪಿತೃಸೇವೆಯೂ ಬೇಕಾಗುವವೆಂಬ ಆರ್ಯಚಾಣಕ್ಯನ ಸಿದ್ಧಾಂತವನ್ನು ಲಕ್ಷ್ಯದಲ್ಲಿಡತಕ್ಕದ್ದು. ಧರ್ಮಲಂಡರಾದ ಸ್ವಚ್ಛಂದವೃತ್ತಿಯ ಉದ್ಧತ ಮಕ್ಕಳಿಂದ, ಸ್ವಹಿತವಾಗಲಿ ಪರಹಿತವಾಗಲಿ ಸಾಧಿಸಲಾರವು ! ಒಂದುಪಕ್ಷದಲ್ಲಿ ಕಾರಣಾಂತರದಿಂದ ಹಿತವು ಸಾಧಿಸಿದರೂ, ಅದು ಅಶಾಂತಿಕಾರಕವಾಗಿರಲು, ಅದರಿಂದ ನಿಜವಾದ ಸುಖವಾಗದೆ ತಾಪಮಾತ್ರ ಆಗುವದು. ಪುತ್ರನಾದವನು ಪಿತ್ರಾಜ್ಞಾಧಾರಕನಾಗಿ ಧರ್ಮವನ್ನು ಸಂಗ್ರಹಿಸಬೇಕು. ತನ್ನ ಸದ್ವರ್ತನ-ಸತ್ಕಾರ್ಯಗಳಿಂದ ತನ್ನ ಹಾಗು ತನ್ನ ಮನೆತನದ, ಅದರಂತೆ ತನ್ನ ರಾಷ್ಟ್ರದ ಕೀರ್ತಿಯನ್ನು ಹೆಚ್ಚಿಸಬೇಕು; ಅಂದರೆ ಆತನು ತಂದೆ ತಾಯಿಗಳಿಗೂ, ಅನ್ಯರಿಗೂ ಆಹ್ಲಾದಕರನಾಗುವನು ! ಹೀಗೆ ತಾಯಿತಂದೆಗಳನ್ನು ಈ ಲೋಕದಲ್ಲಿ ಆಲ್ಹಾದಪಡಿಸದ ಮಕ್ಕಳು, ಪರಲೋಕದಲ್ಲಿ ಅವರನ್ನು ಪುನ್ನಾಮನರಕದಿಂದ ಉದ್ಧರಿಸಲು ಹೇಗೆ ಸಮರ್ಥರಾಗುವರು ? ತಾಯಿತಂದೆಗಳ ಹೊಟ್ಟೆಯಲ್ಲಿ ಹುಟ್ಟಿಬೆಳೆದ ದೇಹವು, ತಾಯಿತಂದೆಗಳ

ದೆಂದು ತಿಳಿದು, ಅವರ ಹಿತಕ್ಕಾಗಿ ಅದನ್ನು ವಿನಿಯೋಗಿಸದೆ, ತಾಯಿತಂದೆ ಗಳ ಆಸ್ತಿಯೇ ತಾರಕವೆಂದು ತಿಳಿದು ಮೋಹಗ್ರಸ್ತರಾಗಿ, ಮನಸ್ಸಿಗೆ ಬಂಹಂತೆ ದುಷ್ಟತನದಿಂದ ನಡೆಯುವ ಕೃತಘ್ನಮಕ್ಕಳು, ತಾವು ನರಕಕ್ಕೆ ಇಳಿಯುವದಲ್ಲದೆ, ತಮ್ಮ ತಂದೆ-ತಾಯಿಗಳನ್ನೂ, ತಮ್ಮ ರಾಷ್ಟ್ರವನ್ನೂ ನರಕದಲ್ಲಿ ಹಾಕುವರು. ಇಂಥ ಕೃತಘ್ನರು ಯಾವ ಮಹಾಕಾರ್ಯಮಾ ಡಲಿಕ್ಕೂ ಅಧಿಕಾರಿಗಳಲ್ಲ. ಹೀಗಿದ್ದು, ನವನಾಗರಿಕತೆಯ ಈಗಿನ ನೀಚ ಸ್ವಾರ್ಥಪರಾಯಣತೆಯ, ಅಂದರೆ, ಅಧಾರ್ಮಿಕ ಸ್ವಾರ್ಥಪರಾಯಣತೆಯ ಕಾಲದಲ್ಲಿ ಕುಲಕಂಟಕಪುತ್ರರೇ ವಿಶೇಷವಾಗಿ ಕಣ್ಣಿಗೆ ಬೀಳುತ್ತಿರುವದ ರಿಂದ, ನಿಜವಾದ ಆತ್ಮೋದ್ಧಾರದ ಅಥವಾ ರಾಷ್ಟ್ರೋದ್ಧಾರದ ವಿಷಯ ದಲ್ಲಿ ಸಂಶಯಪಡಬೇಕಾಗುವದು! ಈಗಿನ ದತ್ತಕಮಕ್ಕಳ ದುಶ್ಶೀಲವ ನ್ನಂತು ವರ್ಣಿಸುವ ಹಾಗೆಯೇ ಇಲ್ಲ. ಈಗಿನ ದತ್ತಕಮಕ್ಕಳು ಜಾಲಿಯ ಬಿತ್ತಿ ಕಾಲಿಗೆ ಮೂಲಮಾಡಿಕೊಂಡಂತೆ, ತಪ್ಪದೆ ತಮ್ಮ ದತ್ತಕ ತಾಯಿತಂದೆಗಳಿಗೆ ಕಂಟಕಪ್ರಾಯರಾಗಿ ಬಾಧಕರಾಗುವರು! ಈಗಿನ ಹೊಟ್ಟೆಯಮಕ್ಕಳೇ ತಾಯಿತಂದೆಗಳನ್ನು ಲಕ್ಷಿಸದಿರುವಾಗ, ದತ್ತಕಮಕ್ಕ ಳಿಗೆ ಏಕೆ ಅನ್ನಬೇಕು? ಮೊದಲು ಧರ್ಮಾಚರಣೆಯಿಂದ ತನ್ನ ಉದ್ಧಾರ ವನ್ನೂ, ಆಜ್ಞಾಪಾಲನದಿಂದ ತಾಯಿತಂದೆಗಳ ಉದ್ಧಾರವನ್ನೂ, ಪರೋ ಪಕಾರದ ಕೃತಿಗಳಿಂದ ರಾಷ್ಟ್ರೋದ್ಧಾರವನ್ನೂ ಕ್ರಮವಾಗಿ ಮಾಡುವವನು ಮಾತ್ರ ಪುರುರಾಜನಂತೆ, ಅಥವಾ ಲೋಕವಂದ್ಯನಾದ ಭೀಷ್ಮನಂತೆ ಧರ್ಮಿ ಷ್ಠನೂ, ಮಾತಾಪಿತೃಭಕ್ತನೂ, ರಾಷ್ಟ್ರೋದ್ಧಾರಕನೂ ಎನಿಸಿಕೊಳ್ಳುವ ನೆಂಬದನ್ನು ಲಕ್ಷದಲ್ಲಿಡತಕ್ಕದ್ದು. ಈ ಕ್ರಮವನ್ನನುಸರಿಸದವರು ಮೋಹ ಗ್ರಸ್ತರಾಗಲಿ, ಮೋಸಗಾರರಾಗಲಿ ಇರುವರೆಂಬ ರಹಸ್ಯವನ್ನು ಮರೆಯ ಬಾರದು!

೩೬. **ಸುವ್ರತರಿಗೇ ಸತ್ಪುತ್ರಪ್ರಾಪ್ತಿಯು**—ಈ ಸಂಭವಪರ್ವ ದಲ್ಲಿಯ ಧೃತರಾಷ್ಟ್ರ–ಪಂಡು–ಕರ್ಣ–ಪಾಂಡವರು ಇವರ ಜನ್ಮಚಾರಿತ್ರಗ ಳನ್ನು ಮನಸ್ಸಿನಲ್ಲಿ ತಂದರೆ, ಸುವ್ರತಸ್ಥರಿಗೆ ಮಾತ್ರ ಒಳ್ಳೆಯ ಸಂತತಿಯು ಆಗುವದೆಂದು ಹೇಳಬೇಕಾಗುತ್ತದೆ. ವಿಚಿತ್ರವೀರ್ಯನು ಅತಿಸಂಭೋ ಗದಮೂಲಕ ಕ್ಷಯರೋಗಿಯಾಗಿ ಅಕಾಲದಲ್ಲಿ ಮರಣಹೊಂದಲು, ಕುರು

ವಂಶಕ್ಕೆ ಸಂತತಿಯು ಇಲ್ಲವಾಯಿತು. ಆಗ ಆ ವಿಚಿತ್ರವೀರ್ಯನ ತಾಯಿ ಯಾದ ಸತ್ಯವತಿಯು ಸಂತತಿವೃದ್ಧಿಗಾಗಿ ಭೀಷ್ಮನೊಡನೆ ಆಲೋಚಿಸಿ, ಆಗಿನ ಧರ್ಮಕ್ಕನುಸರಿಸಿ ವಿಚಿತ್ರವೀರ್ಯನ ಹೆಂಡಿರಲ್ಲಿ ಯೋಗ್ಯಸಂತತಿ ಯನ್ನು ಉತ್ಪನ್ನಮಾಡಬೇಕೆಂದು ತನ್ನ ಮಗನಾದ ಭಗವಾನ್ ವ್ಯಾಸ ರನ್ನು ಆಜ್ಞಾಪಿಸಿದಳು. ಅದಕ್ಕೆ ವ್ಯಾಸರು, ಒಂದು ವರ್ಷದವರೆಗೆ ವಿಚಿ ತ್ರವೀರ್ಯನ ಹೆಂಡಿರು ನಾನು ಹೇಳಿದಂತೆ ವ್ರತಸ್ಥರಾಗಿ ಬ್ರಹ್ಮಚರ್ಯ ದಿಂದಿದ್ದು ಪವಿತ್ರರಾದರೆ, ಅವರಲ್ಲಿ ನಿರ್ದೋಷಸಂತತಿಯನ್ನು ಉಂಟು ಮಾಡುವೆನೆಂದು ಹೇಳಿದರು ; ಆದರೆ ಸತ್ಯವತಿಯು ಈಗೇ ಸಂತತಿಯನ್ನು ಉತ್ಪನ್ನಮಾಡೆಂದು ಹೇಳಿದ್ದರಿಂದ, ವ್ಯಾಸವೀರ್ಯದಿಂದ ವಿಚಿತ್ರವೀ ರ್ಯನ ಹಿರಿಯ ಹೆಂಡತಿಯಾದ ಅಂಬಿಕೆಯಲ್ಲಿ ಹುಟ್ಟುಗುರುಡ ಧೃತರಾ ಷ್ಟ್ರನೂ, ಚಿಕ್ಕಹೆಂಡತಿಯಾದ ಅಂಬಾಲಿಕೆಯಲ್ಲಿ ಶುಭ್ರವರ್ಣದ ಪಂಡುವೂ ಉತ್ಪನ್ನವಾದರು. ಹೀಗೆ ವ್ಯಾಸವೀರ್ಯದಿಂದ ಉತ್ಪನ್ನರಾದ ಅವರಿ ಬ್ಬರು ಮಕ್ಕಳೂ ವೀರ್ಯಶಾಲಿಗಳೂ, ಬುದ್ಧಿವಂತರೂ, ಮಹಾಬಲಿ ಷ್ಠರೂ, ಜ್ಞಾನಿಗಳೂ, ರಾಜರ್ಷಿಗಳೂ ಇದ್ದರೂ, ಧೃತರಾಷ್ಟ್ರನ ಮಾತ್ಸ ರ್ಯಾದಿ ದುಷ್ಟಗುಣಗಳಿಂದ ಕುರುಕುಲದ ನಾಶವಾದದ್ದೂ, ಪಂಡುವು ಋಷಿವಧದಿಂದ ಶಾಪದಗ್ಧನಾದದ್ದೂ ಪ್ರಸಿದ್ಧವಾಗಿರುವವು. ಅದರಂತೆ, ಕರ್ಣನು ಕುಂತಿಯಲ್ಲಿ ಸೂರ್ಯನಿಂದ ಹುಟ್ಟಿದವನುಸರಿ! ಆದರೆ ಕುಂತಿಯು ಅವಿವಾಹಿತಳಾಗಿರುವಾಗ, ಅಂದರೆ ವ್ರತಹೀನಳಾಗಿರುವಾಗ ಕಳ್ಳತನ ದಿಂದ ಹುಟ್ಟಿದ್ದರಿಂದ, ಆ ವೀರನು ನೀಚಮಾರ್ಗಪ್ರವರ್ತಕನೂ, ಪ್ರಸಂ ಗವಿಶೇಷದಲ್ಲಿ ಮುಖಭಂಗಿತನೂ ಹೇಗಾಗುತ್ತಿದ್ದನೆಂಬದು ಈ ಉಪಪರ್ವಾ ವಲೋಕನದಿಂದಲೂ ಅಲ್ಪಸ್ವಲ್ಪ ಗೊತ್ತಾಗುವದು ; ಆದರೆ ಅದೇ ಕುಂತಿಯು ತನ್ನ ಪತಿಯಾದ ಪಂಡುವಿನ ಆಗ್ರಹದ ಅಪ್ಪಣೆಯಂತೆ ವ್ರತ ಸ್ಥಳಾಗಿ ಯಮ, ವಾಯು, ಇಂದ್ರರಿಂದ ಕ್ರಮವಾಗಿ ಧರ್ಮ-ಭೀಮ-ಅರ್ಜುನ ರನ್ನು ಹಡೆಯಲು, ಧರ್ಮಮೂರ್ತಿಗಳಾದ ಅವರು ಲೋಕವಿಖ್ಯಾತರಾಗಿ ಜಗತ್ಕಲ್ಯಾಣವನ್ನು ಹೇಗೆ ಮಾಡಿದರೆಂಬದು ಗೊತ್ತಾಗುವದು. ಇದ ರಂತೆ, ಮಾದ್ರಿಯಲ್ಲಿ ಅಶ್ವಿನೀದೇವತೆಗಳಿಂದ ಹುಟ್ಟಿದ ನಕುಲ-ಸಹದೇವ ರಾದರೂ ಸತ್ಪುತ್ರರೇ ಆಗಿದ್ದರು. ಅರ್ಜುನನನ್ನು ಹಡೆಯುವಾಗಂತು

ಕುಂತಿಯು ಪತಿಯ ಆಜ್ಞೆಯಂತೆ ಒಂದುವರ್ಷ ವ್ರತಸ್ಥಳಾಗಿದ್ದದ್ದೂ, ಪಂಡುವೂ ಒಂದುವರ್ಷ ಇಂದ್ರನನ್ನು ಕುರಿತು ತಪಶ್ಚರ್ಯೆಮಾಡಿದ್ದೂ ವಿಚಾರಿಸತಕ್ಕ ಸಂಗತಿಗಳಾಗಿವೆ. ಒಟ್ಟಿನಲ್ಲಿ ಹೇಳುವದೇನಂದರೆ, ಪವಿತ್ರಮನಸ್ಸಿನ, ಹಾಗು ಪವಿತ್ರಾಚರಣೆಯ ಬ್ರಹ್ಮಚರ್ಯಪಾಲನದಕ್ಷ ತಾಯಿತಂದೆಗಳಿಂದ, ಶಾಸ್ತ್ರನಿಯಮದಂತೆ ಪವಿತ್ರಕಾಲ-ಪವಿತ್ರದೇಶಗಳಲ್ಲಿ ಹುಟ್ಟಿದ ಸಂತತಿಯು ಮಾತ್ರ ಸತ್ಪಾತ್ರಪದವಿಯನ್ನು ಹೊಂದುವವದಲ್ಲದೆ, ವಿಧಿನಿಷೇಧವಿಲ್ಲದ ಕೇವಲ ವಿಷಯಸುಖವ್ಯವಹಾರದಿಂದ ಹುಟ್ಟಿದ ಸಂತತಿಯು, ಪೈಶಾಚ್ಯವೃತ್ತಿಯದೋ, ರಾಕ್ಷಸವೃತ್ತಿಯದೋ, ಪಶುವೃತ್ತಿಯದೋ, ಷಂಡವೃತ್ತಿಯದೋ ಅಥವಾ ಬೇರೆ ಯಾವ ಹೀನವೃತ್ತಿಯದೋ ಆಗುವದೆಂಬದನ್ನು ಯಾರೂ ಹೇಳಲಾರರು! ಈಗಿನ ಧರ್ಮವಿಹೀನವಾದ ಉಚ್ಛೃಂಖಲವೃತ್ತಿಯ ಭರತಭೂಮಿಯಲ್ಲಿಯ ಸಂತತಿಯ ಕಡೆಗೆನೋಡಿದರೆ, ಈ ಮಾತಿನ ಸತ್ಯತೆಯು ಒಡೆದು ಕಾಣಬಹುದು; ಆದ್ದರಿಂದ ವಿವೇಕಿಗಳಾದವರು ಯೋಗ್ಯಸಂತತ್ಯುತ್ಪಾದನದ ಈ ರಹಸ್ಯವನ್ನು ಲಕ್ಷಿಸಿ, ಪಶುಗಳಿಗಿಂತಲೂ ಕಡೆಯಾಗಿ ವ್ಯವಹರಿಸದೆ, ಶಾಸ್ತ್ರವನ್ನನುಸರಿಸಿ ತಪಸ್ವಿಗಳಾಗಿ ಪ್ರಯತ್ನಪೂರ್ವಕ ಯೋಗ್ಯಸಂತತಿಯನ್ನು ಪಡೆದು, ಯೋಗ್ಯರೀತಿಯಿಂದ ಅದರ ಸಂಗೋಪನಮಾಡಿ, ಅದನ್ನು ಸುಶಿಕ್ಷಿತವಾಗಿ ಮಾಡಿದರೆ ಅದು ಕುಲದ ಉದ್ಧಾರವನ್ನಾಗಲಿ, ರಾಷ್ಟ್ರದ ಉದ್ಧಾರವನ್ನಾಗಲಿ ಮಾಡಲಿಕ್ಕೆ ಅಧಿಕಾರಿಯಾಗಬಹುದು. ಹಾಗಲ್ಲದೆ, ಬಚ್ಚಲಕುಣಿಯ ನೀರೊಳಗಿನ ಬುಚಗುಟ್ಟುವ ಹುಳಗಳ ಚಂದದಿಂದ ಹೇಗಾದರೂ ಹುಟ್ಟಿ, ಹೇಗಾದರೂ ಬೆಳೆದು, ಏನಾದರೂ ಕಲಿತ ಸಂತತಿ ಸಾವಿರದಿಂದ, ಉದರಪೋಷಣ ವ್ಯವಹಾರವೇ ನಡೆಯದಿರುವಾಗ, ರಾಷ್ಟ್ರೋದ್ಧಾರದ ಬರಿಯ ಮಾತುಗಳಿಂದ ಪ್ರಯೋಜನವೇನಾಗುವದು ?

೩೭ **ಕುಟಿಲತನವು ಸರ್ವನಾಶಕರವು**— ಕುಟಿಲತನವೆಂದರೆ ಡೊಂಕತನವು; ಅಂದರೆ, ಮನಸ್ಸಿನಲ್ಲಿರುವದೊಂದು, ಬಾಯಿಂದ ಮಾತಾಡುವದು ಮತ್ತೊಂದು, ಕೈಯಿಂದ ಮಾಡುವದು ಇನ್ನೊಂದು ಹೀಗೆ ಮೋಸದಿಂದ ನಡೆಯುವದಕ್ಕೆ ಕುಟಿಲತನವೆನ್ನುವರು. ಇದಕ್ಕೆ ವಿರುದ್ಧವಾದದ್ದು ಸರಳತನವು; ಅಂದರೆ, ಮನಸ್ಸಿನಲ್ಲಿಯ ವಿಚಾರವನ್ನೇ

ಬಾಯಿಂದ ಆಡುವದು, ಬಾಯಿಂದ ಆಡಿದಂತೆಯೇ ಕೈಯಿಂದ ಮಾಡು ವದು ಇದಕ್ಕೆ ಸರಳತನವೆನ್ನುವರು. ಈ ಉಪಪರ್ವದಲ್ಲಿ ಕುಟಿಲತನಕ್ಕೆ ಧೃತರಾಷ್ಟ್ರನ ನಡತೆಯನ್ನೂ, ಸರಳತನಕ್ಕೆ ಧರ್ಮರಾಜನ ನಡತೆಯನ್ನೂ ಉದಹರಿಸಬಹುದು. ಲೋಭವು ಕುಟಿಲತನದ ಮೂಲವಾಗಿರುವದು. ಧೃತ ರಾಷ್ಟ್ರನು ರಾಜ್ಯಲೋಭಿಯಾಗಿದ್ದನು. ಪಾಂಡವರಿಗೆ ರಾಜ್ಯಪ್ರಾಪ್ತಿ ಯಾಗದೆ ತನ್ನ ಮಕ್ಕಳಾದ ಕೌರವರಿಗೇ ರಾಜ್ಯಪ್ರಾಪ್ತಿಯಾಗಬೇಕೆಂಬದು ಆತನ ಕೆಟ್ಟಲೋಭವು. ಅದನ್ನು ಸಾಧಿಸುವದಕ್ಕಾಗಿ ಆತನು ಕಣಿಕ ಮಂತ್ರಿಯ ಕುಟಿಲನೀತಿಯನ್ನು ಅನುಸರಿಸಿ ನಡೆದು ನಾಶಹೊಂದಿದನು. ಆತನ ಮನಸ್ಸಿನಲ್ಲಿ ಪಾಂಡವರ ವಿಷಯದ ದ್ವೇಷ, ಆತನ ಮಾತಿನಲ್ಲಿ ಪಾಂಡವರವಿಷಯದ ಪ್ರೇಮ, ಆತನ ಕೃತಿಯಲ್ಲಿ ಪಾಂಡವರವಿಷಯದ ನಾಶ ಇವು ಇರುತ್ತಿದ್ದವು. ಇಂತಹ ಕುಟಿಲತನದ ನಡತೆಯಮೂಲಕ, ಮೊದಮೊದಲು ಧೃತರಾಷ್ಟ್ರನ ಉತ್ಕರ್ಷವಾದಂತೆ ತೋರಿದರೂ, ಕಡೆಗೆ ಆ ತಾಪದಾಯಕ ಉತ್ಕರ್ಷದ ಪರ್ಯವಸಾನವು ಧೃತರಾಷ್ಟ್ರನ ಸರ್ವನಾ ಶದಲ್ಲಿ ಆಯಿತು.

ಇನ್ನು, ಸರಳತನದ ಮೂಲವು ಧರ್ಮನಿಷ್ಠೆಯಾಗಿರುವದು. ಧರ್ಮ ರಾಜನು ಧರ್ಮದಲ್ಲಿ ನಿಷ್ಠೆಯುಳ್ಳವನಾದದ್ದರಿಂದ, ದೊಡ್ಡಪ್ಪನಾದ ಧೃತರಾಷ್ಟ್ರನ ಮಾತಿನಂತೆ ಭಕ್ತಿಯಿಂದ ನಡೆಯುವದೂ, ಆತನ ಅಹಿತ ವನ್ನು ಚಿಂತಿಸದಿರುವದೂ, ಆತನವಿಷಯವಾಗಿ ಅಶ್ರದ್ಧೆಯನ್ನು ತಾಳದಿರುವದೂ ಪುತ್ರಧರ್ಮವೆಂದು ತಿಳಿದು, ಆ ತನ್ನ ದೊಡ್ಡಪ್ಪನ ಕುಟಿ ಲತನವನ್ನು ವಿದುರನ ಮುಖಾಂತರ ಅರಿತಿದ್ದರೂ, ತನ್ನ ದೊಡ್ಡಪ್ಪನ ಅಪ್ಪಣೆಯಂತೆ ವಾರಣಾವತಕ್ಕೆಹೋಗಿ ವಿದುರನ ಸೂಚನೆಯಂತೆ ಅರಗಿನ ಮನೆಯಲ್ಲಿ ಬಹು ಎಚ್ಚರದಿಂದ ಇರತೊಡಗಿದನು. ಧರ್ಮರಾಜನಂತೆ ಭೀ ಮಾರ್ಜುನಾದಿಗಳಾದರೂ ಧರ್ಮನಿಷ್ಠರೇ ಆದದ್ದರಿಂದ, ತಮ್ಮ ಕನಿಷ್ಠ ಭ್ರಾತೃಧರ್ಮದಂತೆ ತಮ್ಮ ಅಣ್ಣನಾದ ಧರ್ಮರಾಜನ ಅಪ್ಪಣೆಯಂತೆ ನಡೆಯತೊಡಗಿದರು. ಇದರಿಂದ ಅವರಿಗೆ ಮೊದಮೊದಲು ಕಷ್ಟಪರಂಪರೆ ಗಳು ಒದಗಿದರೂ, ಅವರು ಅವುಗಳೊಳಗಿಂದೆಲ್ಲ ಪಾರಾಗಿ ಉತ್ಕರ್ಷಹೊಂ ದುತ್ತ ಹೋಗಿ, ಕಡೆಗೆ ಮಹಾ ಧರ್ಮಿಷ್ಠರೆನಿಸಿ ಸಾರ್ವಭೌಮ ಪದವಿ ಯನ್ನು ಹೊಂದಿ, ಶಾಶ್ವತಕೀರ್ತಿಯನ್ನು ಪಡೆದರು.

ಹೀಗೆ ಕುಟಿಲತನವು ಪರಿಣಾಮದಲ್ಲಿ ನಾಶಕ್ಕೂ, ಸರಳತನವು ಪರಿಣಾಮದಲ್ಲಿ ಉತ್ಕರ್ಷಕ್ಕೂ ಕಾರಣವಾದರೂ, ಈ ಜಗತ್ತಿನಲ್ಲಿ ಕೇವಲ ಸರಳತನದಿಂದ ನಡೆಯುವದು ಅಶಕ್ಯವಾಗಿರುವದು ; ಯಾಕಂದರೆ ಜಗತ್ತು ತ್ರಿವಿಧಜನರಿಂದ ಕೂಡಿದ್ದಾಗಿರುತ್ತದೆ ; ಅಂದರೆ ಅದರಲ್ಲಿ ಕುಟಿಲಜನರೂ ಸರಳಜನರೂ ಕೂಡಿಯೇ ಇರುವರು ; ಅವರಲ್ಲಿ ಪರಸ್ಪರ ವ್ಯವಹಾರವಂತು ನಡೆಯಲೇಬೇಕಾಗುವದು ; ಅಂದಬಳಿಕ ವ್ಯವಹಾರದಲ್ಲಿ ಕೇವಲ ಸರಳತನದಿಂದ ನಡೆದರೆ, ಕುಟಿಲರು ಸರಳರನ್ನು ತಿಂದುಬಿಡಬಹುದಲ್ಲವೆ ? ಹಾಗೆ ಕೇವಲ ಸರಳತನದಿಂದ ನಡೆದು ನಾಶಹೊಂದುವದು ವ್ಯವಹಾರಧರ್ಮವಲ್ಲ; ಅದೊಂದು ವ್ರತವಾಗಬಹುದು. ವ್ರತದಿಂದ ದೇಹಪಾತವಾದರೂ ಚಿಂತೆಯಿಲ್ಲ ; ಆದರೆ ಧರ್ಮದಿಂದ ತನ್ನ ದೇಹದ ರಕ್ಷಣವಾಗಬೇಕಾಗುವದು ವ್ಯವಹಾರದಲ್ಲಿ ತನ್ನ ಅಸ್ತಿತ್ವವನ್ನು ಕಾಯ್ದುಕೊಳ್ಳುವದು ವ್ಯವಹಾರಧರ್ಮವಾಗಿರುವದು ; ಆದ್ದರಿಂದ ತನ್ನ ಲಾಭಕ್ಕಾಗಿ ಕುಟಿಲತನದಿಂದ ನಡೆಯುವದು ಅಧರ್ಮವು, ಅಂತೇ ಪಾಪಕರವು ಆಗಿದ್ದರೂ, ಅನ್ಯರ ಕುಟಿಲತನದಿಂದ ತನ್ನ ನಾಶವಾಗದಂತೆ, ಅಥವಾ ಅನ್ಯರ ಕುಟಿಲತನವು ಅವರ ನಾಶಕ್ಕೇಕಾರಣವಾಗುವಂತೆ ನಡೆದುಕೊಳ್ಳುವದು ಅಧರ್ಮವಲ್ಲದ್ದರಿಂದ ಪಾಪಕಾರಕವೂ ಅಲ್ಲ. ಆದ್ದರಿಂದಲೇ ಧರ್ಮರಾಜನು ವಿದುರನಮುಖದಿಂದ ಅರಗಿನಮನೆಯ ಸಂಗತಿಯನ್ನು ಅರಿತವನಾಗಿದ್ದರೂ, ಅದೇ ವಿದುರನ ಹೇಳಿಕೆಯಂತೆ ಅರಿತೂ ಅರಿಯದವನಂತೆ ನಟಿಸಿ, ಪುರೋಚನನ ಕುಟಿಲತನದ ಫಲವನ್ನು ಪುರೋಚನನೇ ಭೋಗಿಸುವಂತೆ ಮಾಡಿ, ಆತನ ಕುಟಿಲತನದಿಂದ ತಮ್ಮೆಲ್ಲರ ಸಂರಕ್ಷಣಮಾಡಿಕೊಂಡನು; ಆದ್ದರಿಂದಆತನು ಧರ್ಮ ಭ್ರಷ್ಟನಾಗದೆ, ವ್ಯವಹಾರಧರ್ಮವನ್ನು ಪಾಲಿಸಿದಹಾಗಾಯಿತು.

ಒಟ್ಟಿನಲ್ಲಿ ಈ ರಹಸ್ಯದಿಂದ ನಾವು ಮೂರುಬೋಧಗಳನ್ನು ಗ್ರಹಿಸತಕ್ಕದ್ದು — ೧ ಕುಟಿಲತನವು ಲೋಭಮೂಲವು ಅಂತೇ ಪಾಪಕರವು ಆಗಿರುವದರಿಂದ, ಅದರಿಂದಾಗುವ ಲಾಭವು ತಾಪದಾಯಕವಾಗುವದಲ್ಲದೆ, ಅದರ ಪರ್ಯವಸಾನವು ಸರ್ವನಾಶದಲ್ಲಾಗುವದು. ೨ ಸರಳತನವು ಧರ್ಮಮೂಲವಾಗಿರುವದರಿಂದ ಅದರಿಂದಾಗುವ ಲಾಭವು ಶಾಂತಿದಾಯಕ

ಪಾಗಿರುವದು. ಸರಳತನದವರಿಗೆ ಮೊದಮೊದಲು ಕಷ್ಟಗಳೊದಗಿದರೂ ಪರಿಣಾಮದಲ್ಲಿ ಆ ಕಷ್ಟಗಳ ಪರ್ಯವಸಾನವು ಉತ್ಕರ್ಷದಲ್ಲಾಗುವದು. ೩ ಅನ್ಯರ ಕುಟಿಲತನದ ಆಟವು ತನ್ನಮೇಲೆ ನಡೆಯದಂತೆ, ಅಥವಾ ಅನ್ಯರ ಕುಟಿಲತನಕ್ಕೆ ಅನ್ಯರೇ ಬಲಿಯಾಗಿ ತಾನು ಉಳಿದುಕೊಳ್ಳುವಂತೆ ಕುಟಿಲತನದಿಂದ ತಾನು ನಡೆದುಕೊಂಡರೆ, ಅದು ವ್ಯವಹಾರಧರ್ಮವಾದ ದ್ದರಿಂದ ಪಾಪಕರವೂ ಅಲ್ಲ.

**೩೮ ಸ್ತ್ರೀಯರ ಸಲಿಗೆಯು ಚಿತ್ತವಿಕಾರ ಹೇತುವು**—ಈ ಉಪ ಪರ್ವದಲ್ಲಿ ಯಯಾತಿ-ದುಷ್ಯಂತ-ಪಂಡುಗಳು ಸ್ತ್ರೀಯರ ಸಲಿಗೆಯಿಂದ ವಿಕಾರವಶರಾಗಿರುವರು. ಯಯಾತಿಯು ಶರ್ಮಿಷ್ಠೆಯ ಸಲಿಗೆಯಿಂದ ಕಾಮಮೋಹಿತನಾಗಿ ಶುಕ್ರಾಚಾರ್ಯರ ನಿಯಮದ ವಿರುದ್ಧ ಆಕೆಯ ಪಾಣಿಗ್ರಹಣಮಾಡಿ ಅಕಾಲದಲ್ಲ ವೃದ್ಧನಾಗಿರುವನು. ದುಷ್ಯಂತನು ಶಕುಂತಲೆಯ ಸಲಿಗೆಯಿಂದ ಮೋಹಿತನಾಗಿ ಕಣ್ವಋಷಿಗಳ ಸಮ್ಮತಿಪಡೆ ಯದೆ ಆಕೆಯ ಪಾಣಿಗ್ರಹಣಮಾಡಿ ಪಶ್ಚಾತ್ತಾಪದಿಂದ ಭ್ರಷ್ಟಪ್ರತಿಜ್ಞನಾ ಗಿರುವನು. ಪಂಡುವು ಮಾದ್ರಿಯಸಲಿಗೆಯಿಂದ ಕಾಮಮೋಹಿತನಾಗಿ ತನ್ನ ಶಾಪದ ಪರಿವೆಯಿಲ್ಲದೆ ಮಾದ್ರಿಯ ಉಪಭೋಗದಿಂದ ಮರಣಹೊಂ ದಿರುವನು. ಇದಕ್ಕಾಗಿಯೇ ನೀತಿಕಾರರು—"ಮಾತ್ರಾ ಸ್ವಸ್ರಾದುಹಿ ತ್ರಾವಾ ನೈಕಶಯ್ಯಾಸನೋಭವೇತ್ ॥ ಬಲವಾನಿಂದ್ರಿಯ ಗ್ರಾಮೋ ವಿದ್ವಾಂಸಮಪಿಕರ್ಷತಿ॥" ಎಂದು ಸ್ತ್ರೀಯರ ಸಲಿಗೆಗೆ ಬಾಧೆಬರುವಂತೆ ನಿರ್ಬಂಧಿಸಿರುವರು. ಅಂದರೆ, "ತಾಯಿ, ತಂಗಿ, ಮಗಳು ಇವರೊಡ ನೆಯೂ ಒಂದೇಹಾಸಿಗೆ–ಒಂದೇ ಆಸನದಮೇಲೆ ಕುಳಿತುಕೊಳ್ಳಲಾಗದು ; ಯಾಕಂದರೆ ಬಲಿಷ್ಠವಾದ ಇಂದ್ರಿಯಗಳು ವಿದ್ವಾಂಸನ ಮನಸ್ಸನ್ನಾದರೂ ಆಕರ್ಷಿಸುವವು." ಎಂಬದು ಅವರ ನಿರ್ಬಂಧದ ಅಭಿಪ್ರಾಯವು. ಸ್ತ್ರೀಪುರು ಷರ ಮನಸ್ಸುಗಳು ಪರಸ್ಪರ ಆಕರ್ಷಿತವಾಗುವದು ಸ್ವಭಾವಗುಣವು. ಬೆಂಕಿಯುಬಳಿಯ ತುಪ್ಪವು ಕರಗುವಂತೆ, ಸಲಿಗೆಯ ಸ್ತ್ರೀಪುರುಷರ ಮನ ಸ್ಸುಗಳು ಕರಗತಕ್ಕವೇ ; ಆದ್ದರಿಂದಲೇ ನಮ್ಮ ಆರ್ಯರ ಪವಿತ್ರ ಸುಸಂ ಸ್ಕೃತಿಯಲ್ಲಿ ವಿಷಪರೀಕ್ಷೆಯು ಸಲ್ಲದೆಂದು, ಗಂಡಹೆಂಡರುಕೂಡ ಎರಡನೆಯ ವರಮುಂದೆ ಪರಸ್ಪರ ಸಲಿಗೆಯಿಂದ ನಡೆಯುವದಂತು ಇರಲಿ, ಒಬ್ಬರ

ನ್ನೊಬ್ಬರು ನೋಡಬಾರದೆಂತಲೂ, ಒಬ್ಬರಸಂಗಡ ಒಬ್ಬರು ಮಾತಾಡ ಲಾಗದೆಂತಲೂ ನಿರ್ಬಂಧವಿರುವದು.

ಹೀಗೆ ಸ್ತ್ರೀಪುರುಷರು ಪರಸ್ಪರ ಮರ್ಯಾದಶೀಲರಾಗಿ ನಡೆದುಕೊಳ್ಳುವದು ಜೀವಿತಸರ್ವಸ್ವವಾದ ಬ್ರಹ್ಮಚರ್ಯದ ಪಾಲನದ ದೃಷ್ಟಿಯಿಂದ ಅತ್ಯಂತ ಹಿತಕರವಾಗಿರುವದು. ಅನಿರ್ಬಂಧವೂ, ಸಂಕೋಚರಹಿತವೂ, ಅಲಂಕಾರಪ್ರಚುರವೂ ಆದ ಸ್ತ್ರೀಚಿರಸಹವಾಸವು ಅತಿಭೋಗಕ್ಕೆ ಉತ್ತೇಜಕವಾಗಿರುವದು. ಅತಿಭೋಗದಿಂದ ಆಯುಷ್ಯ, ವೀರ್ಯ, ಬಲ, ಆರೋಗ್ಯ ಇವುಗಳ ನಾಶವಾಗುತ್ತದೆಂಬದು ಧರ್ಮಶಾಸ್ತ್ರ-ವೈದ್ಯಶಾಸ್ತ್ರಗಳ ಸಿದ್ಧಾಂತವಾಗಿರುತ್ತದೆ. ಈ ಪರ್ವದೊಳಗಿನ ವಿಚಿತ್ರವೀರ್ಯನ ಅಕಾಲಮೃತ್ಯುವು ಈ ಸಿದ್ಧಾಂತಕ್ಕೆ ಸಾಕ್ಷಿಯಾಗಿರುವದು. ಅಂತೇ ನಮ್ಮ ವೈದಿಕ ಸುಸಂಸ್ಕೃತಿಯಲ್ಲಿ ಸ್ತ್ರೀಸಂಭೋಗಕ್ಕೆ ಶಾಸ್ತ್ರತಃ ಋತುನಿರ್ಬಂಧ, ಮುಹೂರ್ತ ನಿರ್ಬಂಧ, ಸ್ಥಳನಿರ್ಬಂಧ, ಸೌಜನ್ಯನಿರ್ಬಂಧ ಮುಂತಾದ ಹಲವು ನಿರ್ಬಂಧಗಳಿರುವವು; ಆದರೆ ಅನ್ಯಸಂಸ್ಕೃತಿಯವರ ಸಹವಾಸದಿಂದ ನಮ್ಮಲ್ಲಿಯು ಈ ಬಗೆಯ ಮಾನ-ಮರ್ಯಾದೆ, ಸೌಜನ್ಯ-ಸುಶೀಲತೆಗಳ ನಿರ್ಬಂಧವು ಇಲ್ಲದಂತಾಗಿ, ಗಂಡಹೆಂಡಿರು ಕೈಹಿಡಕೊಂಡು ಬೀದಿಯಲ್ಲಿ ಅಡ್ಡಾಡುವದು, ಪರಪುರುಷ-ಪರಸ್ತ್ರೀಯರು ಕೂಡ ಪ್ರೇಮಪರ್ಧಕವೆಂದು ಸಂಕೋಚರಹಿತರಾಗಿ ಪರಸ್ಪರ ಹಸ್ತಾಂದೋಲನ ಮಾಡುವದು, ಸರಳತನದ ಲಕ್ಷಣವೆಂದು ತಿಳಿದು ಪರಸ್ಪರರು ಬೇಕಾದಹಾಗೆ ಮಾತಾಡುವದು, ನಗುವದು, ಕೆಲೆಯುವದು, ಅಸಭ್ಯತನದ ವೇಷಭೂಷಣಗಳನ್ನು ಧರಿಸುವದು, ಸ್ತ್ರೀಪುರುಷರು ಸರಿಬೆರಿಕೆಯಾಗಿ ಸಲಿಗೆಯಿಂದ ಕಾರ್ಯಮಾಡುವದು ಮೊದಲಾದ ನಮ್ಮ ಸಂಸ್ಕೃತಿ ವಿರುದ್ಧಾಚಾರಗಳು ಸುಶಿಕ್ಷಿತರೆನಿಸಿಕೊಳ್ಳುವವರ ಶಿಷ್ಟಸಾಂಪ್ರದಾಯಗಳಾಗತೊಡಗಿವೆಯೆಂದು ದುಃಖದಿಂದ ಹೇಳಬೇಕಾಗುತ್ತದೆ. ಈ ಸಾಂಪ್ರದಾಯದ ಗುಣ-ದೋಷದಗೊಡವಿಗೆ ಹೋಗಲಿಕ್ಕೆ ಇದು ತಕ್ಕಸ್ಥಳವಲ್ಲದಿದ್ದರೂ, ಈ ನೂತನ ಸಾಂಪ್ರದಾಯವು ನಮ್ಮ ನಯ-ಭಯದ ಪರಿಶುದ್ಧ ಆರ್ಯ ಸುಸಂಸ್ಕೃತಿಯನ್ನು ಮಣ್ಣುಗೂಡಿಸುವದಾಗಿರುತ್ತದೆಂದು ಸ್ಪಷ್ಟವಾಗಿ ಹೇಳಬೇಕಾಗುತ್ತದೆ! ನಮ್ಮಲ್ಲಿಯ ಪಾತಿವ್ರತ್ಯದ ಕಠಿಣತರ ನಿಯಮಗಳೆತ್ತ, ಈ ಸ್ವಚ್ಛಂದ

ವೃತ್ತಿಯ ಸಲಿಗೆಯ ಆಚರಣೆಯೆತ್ತ? ಅವರವರ ಸಂಸ್ಕೃತಿಗಳು ಅವರವರಿಗೆ ವೈಯುಂಡವಾದದ್ದರಿಂದ, ಅವರವರಿಗೆ ಅವವು ಸುಖಪ್ರದಗಳಾಗಿರಬಹುದು; ಅದರಂತೆ, ನಮ್ಮ ವೈಯುಂಡಿದ್ದ ನಮ್ಮ ಆರ್ಯಸುಸಂಸ್ಕೃತಿಯಿಂದ ನಮಗೆ ಸುಖವಷ್ಟೇ ಅಲ್ಲ, ಶ್ರೇಯಸ್ಸೂ ಉಂಟಾಗುವಹಾಗಿರುವದು! ಪರರ ಅನುಕರಣದಿಂದ ಸ್ತ್ರೀಯರ ಸ್ವಚ್ಛಂದವೃತ್ತಿಯನ್ನು ಸ್ವಾತಂತ್ರ್ಯವೆಂದು ತಿಳಿದು, ನಯ-ಭಯಗಳಿಲ್ಲದೆ ಸ್ತ್ರೀಯರು ಮನಸ್ಸಿಗೆ ಬಂದಂತೆ ನಡೆಯತೊಡಗಿರಲು, ನಾವು ಶೀಲಭ್ರಷ್ಟರೂ, ಸತ್ವಹೀನರೂ, ದುರ್ಬಲರೂ, ಪೌರುಷರಹಿತರೂ, ಅಲ್ಪಾಯುಗಳೂ ಹೇಗಾಗುತ್ತಿರುವೆವೆಂಬದಕ್ಕೆ ನಾವೂ, ನಮ್ಮ ಸಂತತಿಯೂ ಸಾಕ್ಷಿಯಾಗಿರುವೆವು; ಆದ್ದರಿಂದ ನಮ್ಮ ಮನ್ವಾದಿ ಮಹರ್ಷಿಗಳು ಹಾಕಿಕೊಟ್ಟಿರುವ ಸ್ತ್ರೀ-ಪುರುಷರ ವ್ಯವಹಾರಗಳ ಮರ್ಯಾದರಿತು, ಸ್ತ್ರೀ-ಪುರುಷರಿಬ್ಬರೂ ಪರಸ್ಪರ ಸಲಿಗೆಗೆ ಆಸ್ಪದಕೊಡದೆ, ಸಭ್ಯತನದ ಉಡಿಗೆತೊಡಿಗೆಗಳನ್ನು ಧರಿಸುವದೂ, ನಯ-ಭಯಗಳಿಂದ ನಡೆದುಕೊಳ್ಳುವದೂ ಹಿತಕರವಾಗಿರುತ್ತದೆ.

೩೯. **ಆಗುವದೆಲ್ಲ ನಮ್ಮ ಹಿತಕ್ಕಾಗಿಯೇ ಆಗುತ್ತದೆ**—ಈ ಉಪಪರ್ವದಲ್ಲಿ ಶಾಂತನುರಾಜನ ಹೆಂಡತಿಯಾದ ಭಾಗೀರಥಿಯು ತನ್ನ ಹುಟ್ಟಿದ ಮಕ್ಕಳನ್ನು ಕೂಡಲೆ ಹೊಳೆಯಲ್ಲಿ ಚಲ್ಲಿಕೊಟ್ಟಿದ್ದನ್ನು ಮನಸ್ಸಿನಲ್ಲಿ ತಂದರೆ, "ಭಾಗೀರಥಿಯು ಎಂತಹ ಕಟುಕಳು, ಎಂತಹ ರಾಕ್ಷಸಿಯು, ಮುತ್ತಿನಂಥ ಮಕ್ಕಳನ್ನು ಹೊಳೆಯಲ್ಲಿ ಚಲ್ಲಿಕೊಟ್ಟಳಲ್ಲ," ಎಂದು ಆಕೆಯನ್ನು ನಿಂದಿಸುವಹಾಗೆ ಆಗುತ್ತದೆ; ಆದರೆ ಹಿಂದಿನ ೨೩೬ನೇ ಪುಟದಲ್ಲಿ ಶಾಪಗ್ರಸ್ತರಾದ ಅಷ್ಟವಸುಗಳು ಶಾಪಗ್ರಸ್ತಳಾದ ಭಾಗೀರಥಿಗೆ ಪ್ರಾರ್ಥಿಸಿದ್ದನ್ನು ಮನಸ್ಸಿನಲ್ಲಿ ತಂದರೆ, ಭಾಗೀರಥಿಯು ಶಿಶುಗಳ ಹಿತಕ್ಕಾಗಿಯೇ ಅವನ್ನು ಕೊಂದಳೆಂದು ಅನ್ನಬೇಕಾಗುತ್ತದೆ. ಭಾಗೀರಥಿಗೆ ಇದ್ದಂತಹ ಜನ್ಮಾಂತರ ಜ್ಞಾನವು ನಮಗಿಲ್ಲದ್ದರಿಂದ, ಸಾಂಸಾರಿಕರಾದ ನಾವು ಅಜ್ಞಾನದಿಂದ—"ನಮ್ಮ ಹುಟ್ಟಿದಮಕ್ಕಳು ಹುಟ್ಟಿದಹಾಗೆ ದೊಡ್ಡವಾಗಬೇಕು; ಅವಕ್ಕೆ ಬೇನೆ ಬೇಸರಿಕೆಗಳು ಬರಬಾರದು; ನಮ್ಮ ಕಣ್ಣಮುಂದೆ ಅವು ಸಾಯಬಾರದು; ಅವು ಯಾವಾಗಲೂ ಆರೋಗ್ಯದಿಂದಿರಬೇಕು; ನಾವಾದರೂ ಉಚ್ಚತರ ಐಶ್ವರ್ಯ-ಅಧಿಕಾರ-ಸುಖಗಳನ್ನು ಭೋಗಿಸಬೇಕು;

ಯಾವಬಗೆಯ ಸಾಂಸಾರಿಕ ದುಃಖಗಳೂ ನಮಗೆ ಒದಗಬಾರದು'' ಇತ್ಯಾದಿ ಶುಭೇಚ್ಛೆಗಳನ್ನು ಮಾಡುತ್ತೇವೆ; ಆದರೆ ಹಾಗೆ ಶುಭೇಚ್ಛೆಮಾಡುವದು ತಪ್ಪುಅಲ್ಲದಿದ್ದರೂ, ನಮಗೆ ಸಂಸಾರದಲ್ಲಿ ಯಾವಾಗಲೂ ಸುಖಗಳೇ ಉಂಟಾಗುವದು ಶಕ್ಯವಾಗಿರುವದಿಲ್ಲ; ಯಾಕಂದರೆ, ಈ ಸೃಷ್ಟಿಯ ಕರ್ತಾರನಾದ ದೇವರು ನಿಸ್ಪೃಹನಾಗಿ, ನಮ್ಮ ಕರ್ಮವಂತೆ ನಮಗೆ ಫಲ ಕೊಡುತ್ತಿರುವದು ಸಿದ್ಧಾಂತವಾಗಿದ್ದು, ಸತ್ಕರ್ಮ-ದುಷ್ಕರ್ಮಗಳೆರಡ ನ್ನೂಮಾಡುವದು ನಮ್ಮ ಪ್ರಕೃತಿ ಗುಣವಾಗಿರುವದರಿಂದ, ನಮಗೆ ಸಂಸಾ ರದಲ್ಲಿ ಸುಖದುಃಖಗಳೆರಡೂ ಒದಗುವದು ನ್ಯಾಯ್ಯವಾಗಿರುವದು. ಅಂದ ಬಳಿಕ ನಮ್ಮ ದುಷ್ಕರ್ಮಕ್ಕಾಗಿ ನಮಗೆ ದುಃಖಗಳು ಒದಗಿದರೆ, ನಾವು ಚಿಂತೆಯಿಂದ ಯಾಕೆ ಕೊರಗಬೇಕು? ಸಂಸಾರವು ಕೇವಲ ಸುಖಮಯವು, ಅಥವಾ ಕೇವಲ ದುಃಖಮಯವು ಆಗಿರದೆ, ಅದು ಸುಖದುಃಖಮಿಶ್ರಿತ ವಾಗಿರುತ್ತದೆಂಬ ಮಾತನ್ನು ಗಟ್ಟಿಮುಟ್ಟಿಯಾಗಿ ತಿಳಿದುಕೊಂಡಿರಬೇಕು. ಅವರವರ ಕರ್ಮಗಳಂತೆ ಸುಖದುಃಖಗಳ ಮಾನಗಳು ಹೆಚ್ಚುಕಡಿಮೆ ಯಾಗಿದ್ದರೂ, ಸಂಸಾರದಲ್ಲಿ ನಮಗೆ ಸುಖದುಃಖಗಳೆರಡರ ಯೋಗವೇನು ತಪ್ಪಿದ್ದಲ್ಲ. ಸಂಸಾರದೊಳಗಿನವರೆಲ್ಲ ಒಮ್ಮೆಲೆ ಹುಟ್ಟುವದಿಲ್ಲ; ಒಮ್ಮೆಲೆ ಸಾಯುವದೂ ಇಲ್ಲ. ತಮ್ಮತಮ್ಮ ಕರ್ಮಗಳಂತೆ ಯಾರು ಹುಟ್ಟಿದ ಕೂಡಲೆ ಸಾಯುವರು, ಯಾರು ಹುಡುಗರಿರುವಾಗ ಸಾಯುವರು, ಯಾರು ಹರೆಯದಲ್ಲಿ ಸಾಯುವರು, ಯಾರು ಮುಪ್ಪಿನಮುದುಕರಾಗಿ ಸಾಯುವರು. ''ಭೋಗಾದೇವಕ್ಷಯಃ'' ಎಂಬ ಕರ್ಮಸಿದ್ಧಾಂತದಂತೆ, ನಾವು ಮಾಡಿದ ಸತ್ಕರ್ಮಕ್ಷಯಕ್ಕೆ ಸುಖಭೋಗವೂ, ದುಷ್ಕರ್ಮಕ್ಷಯಕ್ಕೆ ದುಃಖಭೋಗವೂ ಅವಶ್ಯವಾಗಿರುವವು. ನಾವು ಸತ್ಕರ್ಮದಿಂದ ದೇವ–ಮನುಷ್ಯಾದಿ ಎಂತಹ ಉತ್ತಮಜನ್ಮವನ್ನೇ ಹೊಂದಲಿ, ದುಷ್ಕರ್ಮದಿಂದ ಕ್ರಿಮಿಕೀಟಕಾದಿ ಎಂ ತಹ ನೀಚಜನ್ಮವನ್ನೇ ಹೊಂದಲಿ ನಮಗೆ ಗರ್ಭವಾಸದದುಃಖ, ಜನನದುಃಖ ಸಂಸಾರಯಾತ್ರೆಯದುಃಖ, ಮರಣದುಃಖ ಇವೆಲ್ಲ ಹೆಚ್ಚುಕಡಿಮೆಪ್ರಮಾಣ ದಿಂದಾದರೂಒದಗತಕ್ಕವೇ ಆಗಿರುವವು; ಆದರಿಂದ ನಮ್ಮ ಸತ್ಕರ್ಮ-ದು ಷ್ಕರ್ಮಗಳೆರಡೂ ಬಂಧನಕ್ಕೆ ಕಾರಣಗಳಾಗಿರುವವೆಂದು ತಿಳಿದು, ಅವುಗಳ ಫಲಗಳಾದ ಸುಖದುಃಖಗಳೆರಡನ್ನೂ ವಿಕಾರರಹಿತರಾಗಿ, ಅಂದರೆ ಹಿಗ್ಗದೆ

ಕುಗ್ಗದೆಭೋಗಿಸಿ ಅವುಗಳ ಕ್ಷಯಮಾಡುತ್ತ, ಮುಂದೆ ಕರ್ಮಬಂಧನವು ಉಂಟಾಗದಂತೆ ಈಶ್ವರಾರ್ಪಣಬುದ್ಧಿಯಿಂದ ನಿಷ್ಕಾಮಕರ್ಮಮಾಡಿ ಮೋಕ್ಷವನ್ನು, ಅಂದರೆ ಸಂಸಾರದ ಜನನಮರಣಾದಿಗಳ ದುಃಖದಿಂದ ಬಿಡುಗಡೆಯನ್ನು ಹೊಂದತಕ್ಕದ್ದು.

ಸಕಾಮಗಳಾದ ಸತ್ಕರ್ಮಗಳಿಂದ ಸ್ವರ್ಗಾದಿ ಅರ್ಥಗಳೂ, ದುಷ್ಕರ್ಮಗಳಿಂದ ನರಕಾದಿ ಅನರ್ಥಗಳೂ, ಈಶ್ವರಾರ್ಪಣ ಬುದ್ಧಿಯ ನಿಷ್ಕಾಮ ಕರ್ಮಗಳಿಂದ ಮೋಕ್ಷವೂ ಸಾಧಿಸುವವೆಂದು ಹೇಳಿದೆ. ಈ ಮೋಕ್ಷದ ದೃಷ್ಟಿಯಿಂದನೋಡಿದರೆ, ಸಂಸಾರದ ಸುಖಗಳಿಗಿಂತ ಸಂಸಾರದದುಃಖಗಳೇ ನಮಗೆ ಹೆಚ್ಚು ತಾರಕಗಳಾಗಿರುವವೆಂದು ತಿಳಿಯಬೇಕು; ಯಾಕಂದರೆ ಸಂಸಾರದ ಸುಖಗಳು ಸಂಸಾರಾಸಕ್ತಿಗೂ, ಸಂಸಾರದದುಃಖಗಳು ಜ್ಞಾನಸಾಧನವಾದ ಸಂಸಾರದವೈರಾಗ್ಯಕ್ಕೂ ಕಾರಣವಾಗಿರುವವು. ಪಾಂಡುವಿನಮೋಕ್ಷ ಸಾಧನದ ವೈರಾಗ್ಯಕ್ಕೆ ಕಿಂದಮಋಷಿಯ ಶಾಪದಿಂದ ಅವನಿಗೆ ಉಂಟಾದ ದುಃಖವು ಕಾರಣವಾಯಿತು. ಅದರಂತೆ ಸತ್ಯವತಿ, ಅಂಬಿಕಾ, ಅಂಬಾಲಿಕಾ ಇವರ ಮೋಕ್ಷಸಾಧನದ ವೈರಾಗ್ಯಕ್ಕೆ, ಶ್ರೀ ವ್ಯಾಸರು ಹೇಳಿದ ಕುರುಕುಲದ ನಾಶದ ಭವಿಷ್ಯದ ದುಃಖವು ಕಾರಣವಾಯಿತು! ಒಟ್ಟಿಗೆ, ದೇವರು ಅತ್ಯಂತ ನ್ಯಾಯಿಯಾದದ್ದರಿಂದ, ಸಂಸಾರದಲ್ಲಿ ಆತನ ತಂತ್ರದಿಂದ ನಮಗೆ ಆಗುವದೆಲ್ಲ ನಮ್ಮ ಹಿತಕ್ಕಾಗಿಯೇ ಆಗುವದೆಂದು ತಿಳಿದು, ಬರುವ ಸುಖದುಃಖಗಳನ್ನು ಉದಾಸೀನರಾಗಿ ಭೋಗಿಸುತ್ತ, ಮೋಕ್ಷಸಾಧನಮಾಡಿಕೊಳ್ಳಬೇಕು. ಹಾಗೆಮಾಡದೆ, ನಾನು ಹೀಗೆಮಾಡಲಿಲ್ಲ-ಹಾಗೆಮಾಡಲಿಲ್ಲ, ನಾನು ಹೀಗೆಮಾಡಿದೆನು-ಹಾಗೆಮಾಡಿದೆನು, ಹೀಗೆಮಾಡಿದ್ದರೆ ಹಾಗಾಗುತ್ತಿತ್ತು-ಹಾಗೆಮಾಡಿ ಮಾಡಿದ್ದರೆ ಹೀಗಾಗುತ್ತಿತ್ತು, ದೇವರು ದಯಮಾಡಿದನು—ದೇವರು ನಿರ್ದಯದನು'' ಇತ್ಯಾದಿ ಅಹಂಕಾರದ ನಿರರ್ಥಕ ಉದ್ಗಾರಗಳನ್ನು ಹೊರಡಿಸುತ್ತ, ಶೋಕಮಗ್ನರಾಗಿ ವ್ಯರ್ಥ ಆಯುಷ್ಯ ಕ್ಷೀಣಮಾಡಿಕೊಳ್ಳಬಾರದು. ಹುಟ್ಟಿಬರುವವರು ತಮ್ಮ ತಮ್ಮ ಕರ್ಮಭೋಗಕ್ಕಾಗಿ ಹುಟ್ಟಿಬರುವರಲ್ಲದೆ, ಒಬ್ಬರಿಗೆ ಸುಖಕೊಡಬೇಕೆಂದಾಗಲಿ, ಒಬ್ಬರಿಗೆ ದುಃಖಕೊಡಬೇಕೆಂದಾಗಲಿ ಹುಟ್ಟಿಬರುವದಿಲ್ಲ; ಅಂದಬಳಿಕ ಒಬ್ಬರನಲುವಾಗಿ ಒಬ್ಬರು ಸುಖದುಃಖಮಗ್ನರಾಗಿ ತಮ್ಮಹಾನಿಯನ್ನು ಯಾಕೆಮಾಡಿಕೊಳ್ಳಬೇಕು? ಕೇವಲ

ಪರಸ್ಪರ ಕರ್ಮಸಂಬಂಧವಿರುವದರಿಂದ, ಆ ಕರ್ಮಸಂಬಂಧಕ್ಕನುಸರಿಸಿ ಪರಸ್ಪರರು ಪರಸ್ಪರರಿಗೆ ಸುಖದುಃಖದ ಪ್ರಸಂಗಗಳನ್ನು ಉಂಟುಮಾಡಿ ಕೊಡಲಿಕ್ಕೆಮಾತ್ರ ಸಾಂಸಾರಿಕರು ನಾವು ಪರಸ್ಪರ ಸಂಬಂಧಿಕರಾಗಿ ಹುಟ್ಟಿರುವೆವೆಂದು ತಿಳಿದು, ನಮ್ಮ ನಿಜವಾದ ಆಪ್ತನಾದ ದೇವರಲ್ಲಿ ಭಕ್ತಿಯನ್ನಿಟ್ಟು, ನಮ್ಮ ಕರ್ಮಕ್ಕನುಸರಿಸಿ ಆ ಭಗವಂತನ ಸಂಕೇತದಂತೆ ಆಗುವದೆಲ್ಲ ನಮ್ಮ ಹಿತಕ್ಕಾಗಿಯೇ ಆಗುವದೆಂದು ತಿಳಿದು, ಧರ್ಮದಂತೆ ನಡೆಯಬೇಕು.

೪೦. **ಋಷಿಗಳ ಶಾಸನವೇ ಧರ್ಮವು**—ಈ ಉಪಪರ್ವದ ೨೦೪, ೨೦೫ನೇ ಪುಟಗಳಲ್ಲಿ ಕ್ರಮವಾಗಿ ಉದ್ದಾಲಕ, ದೀರ್ಘತಮಾ ಎಂಬ ಋಷಿಗಳು ಈಗಿನವಿವಾಹದ ನಿರ್ಬಂಧವನ್ನು ಗೊತ್ತುಪಡಿಸಿ, ಸ್ತ್ರೀಪುರುಷರ ಸ್ವೇಚ್ಛಾಚಾರವು ನರಕಸಾಧನವೆಂದು ನಿರ್ಣಯಿಸಿರುವರು. ಅದರಂತೆ, ದೈತ್ಯಗುರುಗಳಾದ ಶುಕ್ರಾಚಾರ್ಯರು ಇದೇಪರ್ವದ ೧೯೭ನೇ ಪುಟದಲ್ಲಿ— "ಮದ್ಯಪಾನಮಾಡಿದ ಚಾತುರ್ವರ್ಣದವರಿಗೂ ಬ್ರಹ್ಮಹತ್ಯೆಮಾಡಿದ ದೋಷವು ಬರಲೆಂದು" ಶಾಸನಮಾಡಿರುವರು. ಹೀಗೆ ಈ ಋಷಿಗಳು ಶಾಸನ ಮಾಡುವಮೊದಲು ಸ್ತ್ರೀ ಪುರುಷರ ಸ್ವೇಚ್ಛಾಚಾರವಾಗಲಿ, ಜನರಮದ್ಯಪಾನವಾಗಲಿ ವ್ಯವಹಾರತಃ ಹಾನಿಕಾರಕಗಳಾಗಿರದ್ದರಿಂದ, ಧರ್ಮತಃ ಅವು ಪಾಪಕಾರಕಗಳು ಆಗಿದ್ದಿಲ್ಲ; ಆದರೆ ದೇವರು ಇಂದ್ರಿಯಗಳನ್ನು ಬಹಿರ್ಮುಖವಾಗಿ, ಅಂದರೆ ವಿಷಯಗಳಲ್ಲಿ ಪ್ರವೇಶಿಸುವಂತೆ ಮಾಡಿರುವನು. ಮತ್ತು ಇಂದ್ರಿಯಗಳು ವಿಷಯಗಳಲ್ಲಿ ಪ್ರವೇಶಿಸುತ್ತಹೋದಂತೆ, ಅಗ್ನಿಯಲ್ಲಿ ತುಪ್ಪ ಹಾಕಿದರೆ ಅಗ್ನಿಯು ಮತ್ತಿಷ್ಟು ಪ್ರಜ್ವಲಿಸುವ ಚಂದದಿಂದ, ಆ ಇಂದ್ರಿಯಗಳ ವಿಷಯಮಗ್ನತೆಯ ಸ್ಥಿತಿಯು ಮೀರುತ್ತಬರುವದು ಮನುಷ್ಯಸ್ವಭಾವವಾಗಿರುತ್ತದೆ. ಇನ್ನು, ವಿಷಯ ಸಂಪರ್ಕವೇ ಮನುಷ್ಯನ ಅಧಃಪತನ ಕಾರಣವಾಗಿರುವಾಗ, ಮನುಷ್ಯನ ವಿಷಯಮಗ್ನತೆಯು ಆತನ ನಾಶಕ್ಕೆ ಕಾರಣವಾಗುವದೆಂದು ಏಕೆ ಹೇಳಬೇಕು?

ಹೀಗೆ ವಿಷಯಮಗ್ನತೆಯಿಂದ ಮನುಷ್ಯರು ನಾಶದ ಪಂಥವನ್ನು ಹಿಡಿದಾಗ, ಲೋಕಕಲ್ಯಾಣಬುದ್ಧಿಯ ತ್ರಿಕಾಲಜ್ಞ ವೈದಿಕಋಷಿಗಳು, ಮನುಷ್ಯರ ವಿಷಯಮಗ್ನತೆಗೆ ಪ್ರತಿಬಂಧವುಂಟಾಗಿ ಅವರ ಕಲ್ಯಾಣವಾಗಬೇ

ಕೆಂದು ತಮ್ಮ ಅಗಾಧ ಜ್ಞಾನಶಕ್ತಿಯಿಂದಲೂ, ದೈವೀಸಾಮರ್ಥ್ಯದಿಂದಲೂ ಆಯಾಕಾಲಕ್ಕನುಸರಿಸಿ ಹೊಸ ಧರ್ಮನಿಯಮಗಳನ್ನು ನಿರ್ಮಿಸಿ ಸಮಾಜಕ್ಕೆ ಶಾಸನಮಾಡುವರು. ಈ ನಿಯಮಕ್ಕನುಸರಿಸಿಯೇ ಮೇಲೆ ಹೇಳಿದಂತೆ ಮೂವರು ಋಷಿಗಳ ಧರ್ಮಶಾಸನಗಳು ಆಗಿರುವವೆಂಬದು ವಿಚಾರದಿಂದ ಗೊತ್ತಾಗಬಹುದು. ಪಶು ಪಕ್ಷಿ ಮೊದಲಾದ ತಿರ್ಯಗ್ ಯೋನಿಯ ಪ್ರಾಣಿಗಳು ಋತುಕಾಲದಲ್ಲಿ ಮಾತ್ರ ಒಮ್ಮೆ ಸಂಭೋಗಮಾಡುವಂತೆ, ಪ್ರಾಚೀನಕಾಲದ ಇಂದ್ರಿಯನಿಗ್ರಹಸಮರ್ಥರಾದ ಮನುಷ್ಯರೂ ಋತುಕಾಲದಲ್ಲಿಯೇ ಸ್ತ್ರೀಸಂಭೋಗಮಾಡುತ್ತಿದ್ದರು. ಅಲ್ಲದೆ ಬಹುಜನರಿಗೆ ಸ್ತ್ರೀಸಂಭೋಗಕ್ಕೆ ಪುತ್ರೋತ್ಪತ್ತಿಯ ಇಚ್ಛೆಯು ಇರಬೇಕಾಗುತ್ತಿತ್ತು. ಆ ಇಚ್ಛೆ ಇರದಿದ್ದರೆ, ಅವರು ಆಮರಣ ಬ್ರಹ್ಮಚರ್ಯದಿಂದಿರುತ್ತಿದ್ದರು. ಈ ಬಗೆಯ ಇಂದ್ರಿಯನಿಗ್ರಹ ಸಂಪನ್ನ ಸ್ತ್ರೀಪುರುಷರಿಗೆ, ಪಶುಗಳಂತೆ ಬೇಕಾದ ಸ್ತ್ರೀಯರು ಬೇಕಾದ ಪುರುಷರೊಡನೆ ಋತುಭೋಗಮಾಡಲಿಕ್ಕೆ ಪ್ರತಿಬಂಧವಿದ್ದಿಲ್ಲ. ಅದು ಆಗ ಧರ್ಮವೆಂದು ಎಣಿಸಲ್ಪಡುತ್ತಿದ್ದದ್ದರಿಂದ ಅದು ಪಾಪಕಾರಣವೂ ಆಗುತ್ತಿದ್ದಿಲ್ಲ; ಆದರೆ ಶ್ವೇತಕೇತುಋಷಿಯಂತಹ ಪ್ರಬುದ್ಧಮಗನು, ಹಾಗು ಆತನ ತಂದೆಯು ಸಮಕ್ಷ ಇರುತ್ತಿರಲು, ಆತನ ತಾಯಿಯನ್ನು ಒಬ್ಬ ವೃದ್ಧಬ್ರಾಹ್ಮಣನು ಸಂತತಿಪ್ರಾಪ್ತಿಗಾಗಿ ಎಳೆದೊಯ್ಯುತ್ತಿರುವವನ್ನು ನೋಡಿ, ಶ್ವೇತಕೇತುವಿಗೆ ಸಹನವಾಗಲಿಲ್ಲ. ಋಷಿಗಳ ಆಶ್ರಮದಲ್ಲಿಯೇ ಇಷ್ಟು ನಿರ್ಲಜ್ಜವ್ಯವಹಾರವು ಬಳಿಕೆಯಲ್ಲಿ ಬಂದಿರುವಾಗ, ಸಾಮಾನ್ಯ ಜನಸಮಾಜದಲ್ಲಿ ಅದು ಎಷ್ಟು ವಿಕೋಪಕ್ಕೆ ಹೋಗಿರಬಹುದೆಂಬವನ್ನು ಮನಸ್ಸಿನಲ್ಲಿ ತರತಕ್ಕದ್ದು. ಆಗ ಋತುಗಮನದ ನಿಯಮವು ಮುರಿದು, ವಿಷಯತೃಪ್ತಿಗಾಗಿ ಬೇಕಾದಾಗ ಬೇಕಾದ ಪುರುಷರು ಬೇಕಾದ ಸ್ತ್ರೀಯರೊಡನೆ ಸ್ವಚ್ಛಂದದಿಂದ ವ್ಯವಹರಿಸತೊಡಗಿ ವ್ಯಭಿಚಾರದೋಷದಿಂದ ಸಮಾಜದ ಅಧಃಪತನವಾಗತೊಡಗಿರಬಹುದು; ಆದ್ದರಿಂದಲೇ ಇಂತಹ ವಿಷಯಮಗ್ನತೆಗೆ ಪ್ರತಿಬಂಧವಾಗುವದಕ್ಕಾಗಿ ಶ್ವೇತಕೇತುವು ಒಂದುಬಗೆಯ ವಿವಾಹನಿರ್ಬಂಧವನ್ನುಂಟುಮಾಡಿರಬಹುದು.

ಮಹಾತ್ಮನಾದ ದೀರ್ಘತಮಾಋಷಿಯ ಧರ್ಮಶಾಸನವಾದರೂ ಇದೇ ಬಗೆಯದಾಗಿರುವದು. ಗರ್ಭದಲ್ಲಿಯೇ ಜ್ಞಾನಸಂಪನ್ನನಾಗಿದ್ದ ಆ ಋಷಿ

ಶ್ರೇಷ್ಠನು, ಗರ್ಭದಲ್ಲಿರುವಾಗಲೇ ಬೃಹಸ್ಪತಿಯ ಶಾಪದಿಂದ ಹುಟ್ಟುಗುರುಡನಾದನು ಅಂಥವನ ಲಗ್ನವನ್ನು ಆತನ ಹೆಂಡತಿಯು ಮೊದಲೇ ಮಾಡಿಕೊಳ್ಳತಕ್ಕದ್ದಿದ್ದಿಲ್ಲ; ಆದರೆ ಆ ಋಷಿಯ ಅಗಾಧ ಯೋಗ್ಯತೆಗಾಗಿ ಆತನ ಲಗ್ನವಾದಬಳಿಕ ಹೆಂಡತಿಯು ತನ್ನ ಧರ್ಮದಂತೆ, ಪರಾಧೀನನಾದ ತನ್ನ ಪತಿಯನ್ನು ತನ್ನ ಪ್ರಬುದ್ಧಮಕ್ಕಳ ಸಹಾಯದಿಂದ ಸಂರಕ್ಷಿಸಬೇಕಾಗಿತ್ತು. ಅಲ್ಲದೆ, ದೀರ್ಘತಮಾನು "ನನ್ನನ್ನು ಕ್ಷತ್ರಿಯರಲ್ಲಿ ಬಿಡಿರಿ, ಅವರಿಗೆ ಯೋಗ್ಯಸಂತತಿಯನ್ನು ಉತ್ಪನ್ನಮಾಡಿ ಕೊಟ್ಟು ನಿಮಗೆ ಬೇಕಾದಷ್ಟು ದುಡ್ಡುಕೊಡುವೆ"ನೆಂದು ಹೇಳಿದ್ದನ್ನಾದರೂ ಆತನ ಹೆಂಡತಿಯು ಲಕ್ಷಿಸಬೇಕಾಗಿತ್ತು. ಅಲ್ಲದೆ, ಬಹುಜನ ಮಕ್ಕಳನ್ನು ಹಡೆದ ಆಕೆಯು ಮತ್ತೊಬ್ಬ ಗಂಡನನ್ನು ಮಾಡಿಕೊಳ್ಳುವ ಇಚ್ಛೆಯನ್ನಾದರೂ ಬಿಡಬೇಕಾಗಿತ್ತು. ಆದರೆ ಅದನ್ನಾವದನ್ನೂ ಮಾಡದೆ, ಭೂತದಯೆಯ ವಿರುದ್ಧವಾಗಿ ಗಂಡನನ್ನು ಮಕ್ಕಳ ಕೈಯಿಂದ ತೆಪ್ಪಕ್ಕೆ ಕಟ್ಟಿಸಿ ಹೊಳೆಯಲ್ಲಿ ಚಲ್ಲಿಸಿ ಬಿಡುವದೆಂದರೆ, ಎಂತಹ ವಿಷಯಾಂಧತೆಯ ಕ್ರೂರತನವು! ದೀರ್ಘತಮಾನಂಥ ಋಷಿಯ ಹೆಂಡತಿಯೇ ಹೀಗೆ ಅನಾಚಾರಕ್ಕೆ ನಿಂತಬಳಿಕ, ಸಾಮಾನ್ಯಜನ ಸಮಾಜದಲ್ಲಿ ಅನಾಚಾರವು ಎಷ್ಟು ಬೆಳೆದಿರಬಹುದು? ಆದ್ದರಿಂದಲೇ ಮಹಾಸಮರ್ಥನಾದ ದೀರ್ಘತಮಾನು ಈಗಿನ ವಿವಾಹದ ನಿಯಮಗಳನ್ನು ಸ್ಥಾಪಿಸಿ, ಸ್ತ್ರೀಪುರುಷರಿಬ್ಬರ ವಿಷಯಮಗ್ನತೆಯ ಅನಾಚಾರವನ್ನೂ ನಿರ್ಬಂಧಿಸಿದನು. ಬಲಿರಾಜನು ದೀರ್ಘತಮಾನನ್ನು ಪ್ರಾರ್ಥಿಸಿ ಆತನಿಂದ ತನ್ನ ಪಟ್ಟಮಹಿಷಿಯಲ್ಲಿ ಅಂಗ, ವಂಗಾದಿ ಯೋಗ್ಯಸಂತತಿಯನ್ನು ಪಡೆದದ್ದರ ಮೇಲಿಂದ, ದೀರ್ಘತಮಾನ ಘನವಾದ ಯೋಗ್ಯತೆಯನ್ನು ಮನಸ್ಸಿನಲ್ಲಿ ತರತಕ್ಕದ್ದು. ಹೀಗೆ ಸಮರ್ಥರಿಂದ ಯೋಗ್ಯಸಂತತಿ ಪಡೆಯುವ ಪ್ರಚಾರವು ಸಿಕಂದರಬಾದಶಹನ ಕಾಲದಲ್ಲಿಯೂ ಇತ್ತು. ಅಂತೇ ಒಬ್ಬ ಶೂರರಾಣಿಯು ಲೋಕವಿಜಯಿಯಾದ ಆ ಶಿಕಂದರನಿಂದ ಯೋಗ್ಯ ಸಂತತಿಯನ್ನು ಪಡೆಯುವದಕ್ಕಾಗಿ ಆತನನ್ನು ಪ್ರಾರ್ಥಿಸಿದ್ದರ ಉಲ್ಲೇಖವು ಇತಿಹಾಸದಲ್ಲಿರುವದು, ಇರಲಿ.

ಇವರಂತೆಯೇ ಶುಕ್ರಾಚಾರ್ಯರ ಮದ್ಯಪಾನದ ನಿಷೇಧದಮಾತೂ ಇರುವದು. ಆ ಆಚಾರ್ಯರ ಶಿಷ್ಯರಾದ ವೃಷಪರ್ವಾದಿ ದೈತ್ಯರಲ್ಲಿ ಧರ್ಮ

ವಿರುದ್ಧವಾದ, ಅಂದರೆ ನೀಚವಾದ ಸ್ವಾರ್ಥದ ಇಚ್ಛೆಯು ಉಂಟಾಗಿ, ಅವರ ನಾಶಕಾಲವು ಒದಗಿದ್ದರಿಂದಲೇ ಅವರು ಕಚನೆಂಬ ಪವಿತ್ರಬ್ರಾಹ್ಮಣನನ್ನು ಕೊಂದು, ಆತನ ಬೂದಿಯನ್ನು ತಮ್ಮ ಗುರುಗಳಾದ ಶುಕ್ರಾಚಾರ್ಯರ ಮದ್ಯದಲ್ಲಿ ಕೂಡಿಸಿ ಅದನ್ನು ಅವರಿಂದ ಕುಡಿಸಿ, ಅವರಿಗೂ ಬ್ರಹ್ಮಹತ್ಯೆಯ ದೋಷವನ್ನು ಒದಗಿಸಿಕೊಟ್ಟರು. ಹೀಗಾದದ್ದು ತಮ್ಮ ಮದ್ಯಪಾನದ ಎಚ್ಚರಗೇಡಿತನದಿಂದಲೇ ಎಂದು ತಿಳಿದು, ಆಗಿನಕಾಲಕ್ಕೆ ಅತಿರೇಕಕ್ಕೆ ಹೋಗಿರಬಹುದಾದ ಮದ್ಯಪಾನವನ್ನು ನಿರ್ಬಂಧಿಸುವದಕ್ಕಾಗಿಯೇ ತಮ್ಮ ಅಮೋಘವಾಣಿಯಿಂದ ಅವರು, ಮದ್ಯಪಾನಮಾಡಿದವರಿಗೆ ಬ್ರಹ್ಮಹತ್ಯೆಯ ಪಾಪವನ್ನು ವಿಧಿಸಿದರು. ಇದರಂತೆ ಕಲಿಯುಗದಲ್ಲಿ ಅಶ್ವಾಲಂಭಂ ಗವಾಲಂಭಂ ಸನ್ಯಾಸಂ ಪಲಪೈತೃಕಂ। ದೇವರೇಣ ಸುತೋತ್ಪತ್ತಿಃ ಕಲೌಪಂಚವಿವರ್ಜಯೇತ್ ॥ ಎಂಬ ಉಕ್ತಿಯಂತೆ ಅಶ್ವಮೇಧ, ಗೋಮೇಧ, ಸನ್ಯಾಸ, ಶ್ರಾದ್ಧದಲ್ಲಿ ಮಾಂಸ, ಭಾವನಿಂದ ಸಂತತಿಯು ಪಡೆಯುವದು. ಎಂಬ ಐದು ವಿಷಯಗಳು ಕಲಿಯುಗದಲ್ಲಿ ವರ್ಜ್ಯವಾಗಿರುವದರ ಮರ್ಮವನ್ನು ವಿವೇಕಿಗಳು ವಿಚಾರಿಸಿ ನೋಡತಕ್ಕದ್ದು. ಒಟ್ಟಿಗೆ, ಹಾನಿಕಾರಕ ಸ್ವೇಚ್ಛಾಚಾರಕ್ಕೆ ಪ್ರತಿಬಂಧವಾಗುವದಕ್ಕಾಗಿಯೇ ಆಯಾಕಾಲದಲ್ಲಿ, ಆಯಾಮಹಾತ್ಮರಾದ ಜ್ಞಾನಸಂಪನ್ನ ಋಷಿಗಳು ಕಠಿಣವಾದ ಹೊಸಹೊಸ ಧರ್ಮನಿರ್ಬಂಧಗಳನ್ನು ನಿರ್ಮಿಸಿದರು. ಶ್ರುತಿಮಾರ್ಗನಿರತರೂ, ಸತ್ಯವಾದಿಗಳೂ, ಅತ್ಯಂತ ನಿಸ್ಪೃಹಿಗಳೂ, ಮಹಾ ತಪಸ್ವಿಗಳೂ ಅಂತೇ ತ್ರಿಕಾಲಜ್ಞರೂ ಆದ ವೈದಿಕಋಷಿಗಳ ಅಮೋಘವಾಣಿಯು ಶ್ರುತಿವಿರುದ್ಧವಾಗಿಯಾಗಲಿ, ಜಗತ್ತಿಗೆ ಅಕಲ್ಯಾಣಕಾರಕವಾಗಿಯಾಗಲಿ ಇರುವ ಸಂಭವವೇ ಇರುವದಿಲ್ಲ. ಶ್ರುತಿಸಮ್ಮತವಾದ ಇಂತಹ ಧರ್ಮಶಾಸನಗಳ ಸಮುಚ್ಚಯಗಳೇ ಮನು, ಯಾಜ್ಞವಲ್ಕ್ಯಾದಿ ಸ್ಮೃತಿಗಳಾಗಿರುವವು; ಆದ್ದರಿಂದ ಇಹಲೋಕ-ಪರಲೋಕಗಳ ಸುಖಗಳನ್ನಿಚ್ಛಿಸುವವರು, ಆಯಾಕಾಲಕ್ಕೆ ಸಮ್ಮತವೆಂದು ಹೇಳಿದ ಸ್ಮೃತಿಗಳಂತೆ ನಡೆಯಬೇಕಲ್ಲದೆ, ಕಾಲಕ್ಕನುಸರಿಸಿ ಸ್ಮೃತಿಗಳಾಗಬೇಕೆಂಬ ಹುಚ್ಚುಭಾವನೆಯಿಂದ, ತಮ್ಮ ಸ್ವೇಚ್ಛಾಚಾರಕ್ಕೆ ಅನುಕೂಲವಾಗುವಂತೆ ಹೊಸ ಸ್ಮೃತಿಗಳನ್ನು ನಿರ್ಮಿಸುವ ಸಾಹಸಕ್ಕೆ ಹೋಗತಕ್ಕದ್ದಲ್ಲ.

ಹೀಗಿದ್ದರೂ ಈಗಿನ ಸ್ವಚ್ಛಂದವೃತ್ತಿಯ ಕಾಲದಲ್ಲಿ ಸ್ವಚ್ಛಂದ ವೃತ್ತಿಗೆ ಅನುಕೂಲವಾದ ಸ್ಮೃತಿಯನ್ನು ರಚಿಸುವ ಮನುಷ್ಯಮಾಡುವದು, ಹಾಗು ಸ್ಮೃತಿಯ ನಿಯಮಗಳಿಗೆ ವಿರುದ್ಧವಾಗಿ ಸ್ವಚ್ಛಂದವೃತ್ತಿಗೆ ಅನುಕೂಲವಾಗುವಂತೆ ಕಾಯಿದೆಗಳನ್ನು ಮಾಡಿ ಧರ್ಮಸಂಬಂಧದಿಂದ ಜವಾಬದಾರರಲ್ಲದ ಜನರುಕೂಡ ಧರ್ಮದಲ್ಲಿ ಕೈಹಾಕುವದು ವೈದಿಕಸಂಸ್ಕೃತಿಯ ನಾಶದ ಲಕ್ಷಣವಾಗಿರುವದು! ಇಂಥ ಕಾಯಿದೆಗಳನ್ನು ಮಾಡುವವರು ಸದುದ್ದೇಶಪ್ರೇರಿತರಾಗಿರಬಹುದು; ಆದರೆ ಅವರು ಅಧಿಕಾರಸಂಪನ್ನರಾಗಿರುವರೆಂದು ಹೇಳಲಾಗುವದಿಲ್ಲ. ಪ್ರಾಚೀನ ಋಷಿಗಳು ಸಮಾಜದ ಅನಾಚಾರವು ತಮ್ಮ ಮನೆಯಲ್ಲಿ ಪ್ರವೇಶಿಸುವಷ್ಟು ಬೆಳೆದದ್ದನ್ನು ನೋಡಿ, ಅದನ್ನು ಪ್ರತಿಬಂಧಿಸುವದಕ್ಕಾಗಿ ಯುಗಧರ್ಮದಂತೆ ಕಠಿಣ-ಕಠಿಣ ಧರ್ಮಶಾಸನಗಳನ್ನು ಮಾಡುತ್ತ ಬಂದು, ಪ್ರಸಂಗವಿಶೇಷದಲ್ಲಿ ಆಪದ್ಧರ್ಮಗಳನ್ನು ಹೇಳಿರುವರು; ಆದರೆ ಈಗಿನ ಕಾಯಿದೆಯಪಂಡಿತರು ವಿಷಯಾಸಕ್ತಸಮಾಜದ ಸ್ವಚ್ಛಂದವೃತ್ತಿಯನ್ನು ನೋಡಿ, ಅದು ತಮಗೂ, ತಮ್ಮ ಮನೆಯವರಿಗೂ, ತಮ್ಮವರಿಗೂ ಬೇಕೆಂದು ತೋರಲು, ಧರ್ಮಕ್ಕಿರುವ ತಮ್ಮ ಸಂಬಂಧವನ್ನೂ, ಜವಾಬುದಾರಿಯನ್ನೂ ಲಕ್ಷಿಸದೆ, ತಮ್ಮ ಮನೋದಯದಂತೆ ಕಾಯದೆಗಳನ್ನು ಮಾಡಿ ಸ್ಮೃತಿವಿರುದ್ಧವಾಗಿ, ಅರ್ಥಾತ್ ಧರ್ಮವಿರುದ್ಧವಾಗಿ ನಡೆಯುವ ಪ್ರಸಂಗವನ್ನು ಸಮಾಜಕ್ಕೊದಗಿಸಿಕೊಟ್ಟು, ಸ್ವಚ್ಛಂದವೃತ್ತಿಗೆ ಮತ್ತಿಷ್ಟುಆಸ್ಪದವನ್ನುಂಟುಮಾಡುವರು. ಈಗಿನ ಶಾರದಾಬಿಲ್ಲು ಇದಕ್ಕೆ ಸಾಕ್ಷಿಯಾಗಿರುವದೆಂದು ಹೇಳಬಹುದು. ಹಿತಕಾರಕ ನಿಯಮಗಳಂತೆ ನಡೆಯುವದಕ್ಕಾಗಿ ತಮ್ಮ ಮನೋವೃತ್ತಿಗಳನ್ನು ಬಿಗಿಹಿಡಿಯುವದು ನಮ್ಮ ಪ್ರಾಚೀನ ಸ್ಮೃತಿಕಾರರ ಉದ್ದೇಶವಾಗಿದ್ದರೆ, ಈಗಿನ ಕಾಯಿದೆಪಂಡಿತರ ಉದ್ದೇಶವು, ಸಮಾಜದ ಸಾರ್ವತ್ರಿಕ ಪ್ರಬಲ ಮನೋವೃತ್ತಿಗಳಿಗನುಸರಿಸಿ ಕಾಯಿದೆಗಳನ್ನು ಮಾಡುವದಾಗಿರುತ್ತದೆ. ಅಂದಬಳಿಕ ಇವರಿಬ್ಬರ ಉದ್ದೇಶಗಳು ಪೂರ್ವಪಶ್ಚಿಮದಿಕ್ಕಿನಷ್ಟು ವಿರುದ್ಧವಾಗಿರುವವೆಂದು ಹೇಳಬೇಕಾಗುವದು; ಯಾಕಂದರೆ ಪ್ರಾಚೀನಋಷಿಗಳು ಹಿತಕಾರಕ ನಿಯಮಗಳಿಗೆ ಶರಣು ಹೋಗಬೇಕೆಂದು ಸಮಾಜಕ್ಕೆ ಹೇಳಿದರೆ, ಈಗಿನ ಕಾಯಿದೆ ಪಂಡಿತರು ಸಮಾಜದ ಸಾರ್ವ

ತ್ರಿಕ ಆಚರಣೆಗೆ ಶರಣುಹೋಗಬೇಕೆಂದು ಕಾಯಿದೆಗಳಿಗೆ ಹೇಳಿದಂತಾಗುತ್ತದೆ; ಆದ್ದರಿಂದ ಈಗಿನ ಕಾಯಿದೆಪಂಡಿತರಿಗೆ ಸ್ಮೃತಿಮೂಲವಾದ ಧರ್ಮದಲ್ಲಿ ಕೈಹಾಕಲಿಕ್ಕೆ ಅಧಿಕಾರವಿಲ್ಲೆಂದು ಹೇಳಬೇಕಾಗುವದು. ವೈದಿಕಸ್ಮೃತಿಕಾರರು ಮುಂದಿನ ಐದು ಲಕ್ಷಣಗಳುಳ್ಳವರಾಗಿರಬೇಕಾಗುವದೆಂದು ತೋರುತ್ತದೆ. ಆ ಲಕ್ಷಣಗಳು ಯಾವವೆಂದರೆ—(೧) ಕೇವಲ ಶ್ರುತಿಮಾರ್ಗಾವಲಂಬನದ ತಪಶ್ಚರ್ಯದಿಂದ ಶ್ರುತಿವಿರುದ್ಧ ಧರ್ಮನಿಯಮಗಳ ಉತ್ಪತ್ತಿಗೆ ಸ್ಥಾನವಾಗದವರಾಗಿರಬೇಕು. (೨) ಅವರ ಶರೀರ ವಾಣಿ-ಮನಸ್ಸುಗಳಿಗೆ ಆಜನ್ಮ ಅಸತ್ಯದಸ್ಪರ್ಶವಾಗಿರಕೂಡದು, ಅರ್ಥಾತ್ ಅವರ ವಾಣಿಯು ಸತ್ಯರೂಪವೂ, ಶ್ರುತಿಸಮ್ಮತವೂ ಆಗಿರಬೇಕು. (೩) ಅವರು ಕೇವಲ ಸರಳಹೃದಯದವರಿರಬೇಕು. (೪) ಜಗತ್ತನ್ನೇ ತೃಣೀಕರಿಸುವಷ್ಟು ನಿಸ್ಪೃಹವೃತ್ತಿಯೂ, ತಮ್ಮ ದೈವೀಸತ್ವಾತಿಶಯದಿಂದ ಜಗತ್ತನ್ನೇ ಆಲ್ಹಾದಿಸುವಷ್ಟು ಸಾಮರ್ಥ್ಯವೂ ಅವರಲ್ಲಿರಬೇಕು. (೫) ಜಗತ್ಕಲ್ಯಾಣವೇ ಅವರ ಕುಲವ್ರತವಾಗಿರಬೇಕು.

ಈ ಲಕ್ಷಣಗಳಿಲ್ಲದವರು ವೈದಿಕಧರ್ಮದಲ್ಲಿ ಕೈಹಾಕುವದಕ್ಕಿಂತ, ತಮಗೆ ಸಿಗಬಹುದಾದ ಬೇರೆಬಗೆಯಿಂದ ಲೋಕಹಿತವನ್ನು ಸಾಧಿಸತಕ್ಕದ್ದು; ಯಾಕಂದರೆ "ಧರ್ಮಗ್ಲಾನಿಯಾದಾಗ ನಾನೇ ಅವತರಿಸುವೆನೆಂ"ದು ದೇವರು ವೈದಿಕರಿಗೆ ವಚನಕೊಟ್ಟಿರುವನು. ಇದಲ್ಲದೆ ಈಗಿನ ಧರ್ಮಶೈಥಿಲ್ಯದ ಕಾಲದಲ್ಲಿ ಧರ್ಮವಿರುದ್ಧವಾಗಿ ನಡೆಯುವವರಿಗೆ ಲೌಕಿಕ ಉಪಹತಿಗಳೂ ಇಲ್ಲದಾಗಿರುವವು; ಅಂದಬಳಿಕ ಪಾಪ! ಈಗ ಬಡವರಾಗಿ ತೋರುವ ಧಾರ್ಮಿಕರನ್ನು ಕಾಯಿದೆಯಿಂದ ಬಿಗಿದು ಅವರನ್ನು ಯಾಕೆ ನೋಯಿಸಬೇಕು?

**೪೧. ತಾಮಸಪ್ರಕೃತಿಯವರ ರಜೋಗುಣಪ್ರಾಬಲ್ಯವು ಪರಪೀಡಾಕಾರಕವು**—ಈ ಉಪಪರ್ವದಲ್ಲಿ ದ್ರೋಣಾಚಾರ್ಯರು, ವ್ಯಾಧನಾದ ಏಕಲವ್ಯನಿಗೆ—"ನೀನು ಬ್ರಾಹ್ಮಣನಾಗಲಿ, ಕ್ಷತ್ರಿಯನಾಗಲಿ ಅಲ್ಲದ್ದರಿಂದ ನಿನಗೆ ಧನುರ್ವಿದ್ಯೆಯನ್ನು ಹೇಳುವದಿಲ್ಲ" ಎಂದು ಹೇಳಿರುವದರಲ್ಲಿ ಆಚಾರ್ಯರ ವೈಷಮ್ಯಭಾವವು ವ್ಯಕ್ತವಾಗುವಂತೆ ತೋರುವದು; ಆದರೆ ಲೋಕಹಿತವನ್ನು ಲಕ್ಷಿಸಿ ಅವರು ಹಾಗೆ ವೈಷಮ್ಯಭಾವವನ್ನು ತೋರಿಸಬೇಕಾಯಿತೆಂಬದು ಕೆಳಗಿನ ವಿವರಣೆಯಿಂದ ಗೊತ್ತಾಗಬಹುದು

ದೇವರು ಗುಣಕರ್ಮಗಳಿಗನುಸರಿಸಿ ಮನುಷ್ಯರಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳನ್ನು ಮಾಡಿರುವನೆಂದು ಶ್ರುತಿ-ಸ್ಮೃತಿಗಳಲ್ಲಿ ಹೇಳಿದೆಯಷ್ಟೆ? ಗುಣಗಳು ಸತ್ವ, ರಜಸ್, ತಮಸ್ ಎಂದು ಮೂರು ಇರುವವು. ಸತ್ವಗುಣದ ಲಕ್ಷಣವು ವಿವೇಕವು, ಅಂದರೆ ವೈರಾಗ್ಯದೃಷ್ಟಿಯಿಂದ ನಿತ್ಯಾನಿತ್ಯವಸ್ತುಗಳ ನಿರ್ಣಯಮಾಡುವ ಶಕ್ತಿಯು; ರಜೋಗುಣದ ಲಕ್ಷಣವು ಕಾರ್ಯಾಸಕ್ತಿಯು, ಅಂದರೆ ಧರ್ಮಸಮ್ಮತವಾದ ಐಹಿಕಸುಖವೇ ಪರಮ/ಪುರುಷಾರ್ಥವೆಂದು ತಿಳಿದು ಸ್ವಲಾಭದೃಷ್ಟಿಯಿಂದ ಯಾವಾಗಲೂ ಕೆಲಸದಲ್ಲಿ ತೊಡಗಿರುವದು; ತಮೋಗುಣದ ಲಕ್ಷಣವು ಪ್ರಮಾದವು, ಅಂದರೆ ಅನಿತ್ಯವಾದ ಸೃಷ್ಟಿಯನ್ನು ನಿತ್ಯವೆಂದು ತಿಳಿದು, ಸ್ವಚ್ಛಂದವಾದ ವಿಷಯಮಗ್ನತೆಯಿಂದ ಆಲಸ್ಯಕ್ಕೆ ಎಡೆಗೊಡುತ್ತ ನಾಶದ ಹಾದಿಯನ್ನು ಹಿಡಿಯುವದು.

ಗುಣಗಳ ಈ ಲಕ್ಷಣಗಳಮೇಲಿಂದ ನೋಡಿದರೆ, ಕೇವಲ ಶುದ್ಧ ಸತ್ವಗುಣವಾಗಲಿ, ಕೇವಲ ಶುದ್ಧ ರಜೋಗುಣವಾಗಲಿ, ಕೇವಲ ಶುದ್ಧ ತಮೋಗುಣವಾಗಲಿ ಕಾರ್ಯಕ್ಷಮವಾಗಲಾರವೆಂದು ವಿಚಾರದಿಂದ ಗೊತ್ತಾಗಬಹುದು; ಯಾಕಂದರೆ ಕೆಲಸಮಾಡುವವನಲ್ಲಿ ಸತ್ವಗುಣದ ಲಕ್ಷಣವಾದ ವಿವೇಕವೂ, ರಜೋಗುಣದ ಲಕ್ಷಣವಾದ ಕಾರ್ಯಾಸಕ್ತಿಯೂ, ತಮೋಗುಣದ ಲಕ್ಷಣವಾದ ಪ್ರಮಾದವೂ ಎಷ್ಟೇಆಗಲಿ ಇದ್ದೇತೀರಬೇಕಾಗುವದು. ಹೀಗೆ ಕಾರ್ಯದೃಷ್ಟಿಯಿಂದ ಈ ಮೂರುಗುಣಗಳ ಅವಶ್ಯಕತೆಯಿರುವದರಿಂದಲೇ, ದೇವರು ಈ ಮೂರೂಗುಣಗಳ ವಿವಿಧಪ್ರಮಾಣದ ಮಿಶ್ರಣದಿಂದ ಪ್ರಾಣಿಗಳ ಪ್ರಕೃತಿಗಳನ್ನುಂಟುಮಾಡಿರಲು, ಈ ಲೋಕವು ಭಿನ್ನಪ್ರಕೃತಿ-ಭಿನ್ನರುಚಿಗಳುಳ್ಳದ್ದಾಗಿರುವದು; ಹೀಗೆ ಲೋಕವು ಭಿನ್ನಪ್ರಕೃತಿ-ಭಿನ್ನರುಚಿಗಳುಳ್ಳದ್ದಾಗಿದ್ದರೂ, ಬ್ರಾಹ್ಮಣವರ್ಣವು ಸತ್ವಗುಣಪ್ರಧಾನವೆಂತಲೂ, ಕ್ಷತ್ರಿಯ-ವೈಶ್ಯವರ್ಣಗಳು ರಜೋಗುಣಪ್ರಧಾನಗಳೆಂತಲೂ, ಶೂದ್ರವರ್ಣವು ತಮೋಗುಣಪ್ರಧಾನವೆಂತಲೂ ಒಟ್ಟಿನಲ್ಲಿ ಹೇಳಲಾಗಿರುತ್ತದೆಂಬದನ್ನು ಲಕ್ಷ್ಯದಲ್ಲಿಡತಕ್ಕದ್ದು

ಹೀಗೆ ಚಾತುರ್ವರ್ಣಗಳ ಪ್ರಧಾನಗುಣಗಳಿಗನುಸರಿಸಿ ಸತ್ವಗುಣಪ್ರಧಾನವಾದ ಬ್ರಾಹ್ಮಣವರ್ಣಕ್ಕೆ, ಅದರ ವಿವೇಕಗುಣದಮೂಲಕ ತತ್ವ

ವಿಚಾರವನ್ನೂ, ರಜೋಗುಣಪ್ರಧಾನಗಳಾದ ಕ್ಷತ್ರಿಯ–ವೈಶ್ಯವರ್ಣಗಳಿಗೆ, ಆ ವರ್ಣಗಳ ಕಾರ್ಯಾಸಕ್ತಿಯಮೂಲಕ ಕ್ರಮವಾಗಿ ರಾಜ್ಯಭಾರ-ದ್ರವ್ಯ ಸಂಪಾದನರೂಪ ವ್ಯವಸಾಯಗಳನ್ನೂ, ತಮಃಪ್ರಧಾನವಾದ ಶೂದ್ರವರ್ಣಕ್ಕೆ, ಅದರ ಪ್ರಮಾದಗುಣದಮೂಲಕ ತ್ರೈವರ್ಣಿಕರ ಸೇವಾಧರ್ಮವನ್ನೂ ಶ್ರುತಿ-ಸ್ಮೃತಿಗಳಿಂದ ಯೋಜಿಸಲಾಗಿರುವದು. ತತ್ವವಿಚಾರವೇ ಕರ್ತವ್ಯವಾಗಿರುವ ಸಾತ್ವಿಕ ಬ್ರಾಹ್ಮಣವರ್ಣದಿಂದ ಪರಪೀಡೆಯಾಗುವ ಸಂಭವವಿರದ್ದರಿಂದ, ವೇದಮಾತೆಯು ಆವರ್ಣಕ್ಕೆ ಷಟ್ಕರ್ಮಾಧಿಕಾರವನ್ನು ಕೊಟ್ಟಿರುವಳು; ಯಾಕಂದರೆ ನಿರುಪದ್ರವಿಗಳಾದವರಿಗೆ ಎಷ್ಟು ಅಧಿಕಾರ ಕೊಟ್ಟರೂ, ಅವರು ಅದರ ದುರುಪಯೋಗಮಾಡರು. ರಾಜಸರಾದ ಕ್ಷತ್ರಿಯ–ವೈಶ್ಯವರ್ಣದವರ ರಜೋಗುಣದ ತೀವ್ರತೆಯು, ಸತ್ವಸ್ಥರಾದ ಬ್ರಾಹ್ಮಣರ ಗುರುತ್ವದಿಂದ ಕುಗ್ಗದಿದ್ದರೆ, ಆ ರಜೋಗುಣದ ಕ್ಷತ್ರಿಯ–ವೈಶ್ಯರ ಮಹತ್ವಾಕಾಂಕ್ಷೆಯಿಂದ ಪರಪೀಡೆಯಾಗುವ ಸಂಭವವಿರುವದು; ಅಂದಬಳಿಕ ತಾಮಸವೃತ್ತಿಯ ಶೂದ್ರರ ರಜೋಗುಣಪ್ರಾಬಲ್ಯವು, ಅವರ ಪ್ರಮಾದಯುಕ್ತ ಮಹತ್ವಾಕಾಂಕ್ಷೆಯಿಂದ ಪರಪೀಡಾಕಾರಕವಾಗದೆ ಹೇಗೆ ಇದ್ದೀತು? ಅಂತೇ ಜಗತ್ಕಲ್ಯಾಣದೃಷ್ಟಿಯಿಂದ ವೇದಮಾತೆಯು ಕ್ಷತ್ರಿಯ–ವೈಶ್ಯ–ಶೂದ್ರವರ್ಣಗಳಿಗೆ ಬ್ರಾಹ್ಮಣರ ಗುರುತ್ವವನ್ನು ಯೋಜಿಸಿ, ಕ್ಷತ್ರಿಯ–ವೈಶ್ಯವರ್ಣಗಳಿಗೆ ತ್ರಿಕರ್ಮಾಧಿಕಾರವನ್ನೂ, ಶೂದ್ರರಿಗೆ ತ್ರೈವರ್ಣಿಕರ ಸೇವೆಯನ್ನೂ ವಿಧಿಸಿರುವಳು.

ಹೀಗೆ ಒಟ್ಟಿನಲ್ಲಿ ವರ್ಣಗಳಿಗನುಸರಿಸಿ ಗುಣಕರ್ಮಗಳ ವ್ಯವಸ್ಥೆಯಾಗಿದ್ದರೂ, ಒಂದು ವರ್ಣದಲ್ಲಿ ಅನ್ಯವರ್ಣಗಳ ವೃತ್ತಿಯ ಜನರ ಮಿಶ್ರಣವು ಯಾವಾಗಾದರೂ ಆಗಿಯೇ ಇರುವದು; ಆದರೆ ಯುಗಾಂತರದಿಂದ ಈ ಮಿಶ್ರಣದ ಪ್ರಮಾಣವು ಹೆಚ್ಚುತ್ತ ಅದರ ಮಿತಿಯು ಮೀರಿದರೆ, ವಿಶೇಷವಾಗಿ ಬ್ರಾಹ್ಮಣರಲ್ಲಿ ರಾಜಸ–ತಾಮಸಸ್ವಭಾವದವರ ಮಿಶ್ರಣವು ಹೆಚ್ಚಿದರೆ, ಆ ಮಾನದಿಂದ ವರ್ಣಸಂಕರವಾಯಿತೆಂದು ತಿಳಿಯಬೇಕಾಗುವದು. ಮಹಾಭಾರತಕಾಲದಲ್ಲಿ ವರ್ಣಸಂಕರದಕಡೆಗೆ ಆಗಿನ ಸಮಾಜದ ಮೋರೆ ತಿರುಗಿದ್ದರೂ, ಆಗ ವರ್ಣಸಂಕರವು ದೊಡ್ಡಪ್ರಮಾಣದಿಂದ ಇನ್ನೂ ಆಗಿದ್ದಿಲ್ಲ. ಆದ್ದರಿಂದ ತಮೋಗುಣಪ್ರಕೃತಿಯ ಏಕಲವ್ಯನು

ರಾಜಪುತ್ರನಾದದ್ದರಿಂದ, ಕ್ಷತ್ರಿಯರ ರಜೋಗುಣದ ಪ್ರಾಬಲ್ಯಕ್ಕೆ ಆತನಲ್ಲಿ ಆಸ್ಪದ ಉಂಟಾಗಿರಲು, ಆತನ ಕ್ಷಾತ್ರವೃತ್ತಿಯ ಮಹತ್ವಾಕಾಂಕ್ಷೆಯು, ಆತನ ಹುಟ್ಟುಗುಣವಾದ ತಮೋಗುಣದ ಪ್ರಮಾದಾಲಸ್ಯಗಳಿಂದ ದೂಷಿತ ವಾಗುವ ಸಂಭವವು ವಿಶೇಷವಾಗಿತ್ತು.

ಹೀಗೆ ಏಕಲವ್ಯನಲ್ಲಿಯ ಕ್ಷಾತ್ರವೃತ್ತಿಯು ಆತನ ತಮೋಗುಣ ಪ್ರಕೃತಿಯಮೂಲಕ ದೂಷಿತವಾಗುವಸಂಭವವಿರಲು, ಅಂಥವನನ್ನು ಧನು ರ್ಧರಾಗ್ರೇಸರನನ್ನಾಗಿ ಮಾಡಿದರೆ, ಆತನು ಅಜಿಂಕ್ಯನಾಗಿ ಪರರಿಗೆ ತಾಪ ಕೊಡುವವನಾಗಬಹುದೆಂದು ತಿಳಿದೆ, ಆತನನ್ನು ಶಿಷ್ಯನನ್ನಾಗಿ ಪರಿಗ್ರಹಿ ಸದಿರುವದು ದ್ರೋಣಾಚಾರ್ಯರ ಲೋಕಕಲ್ಯಾಣೇಚ್ಛೆಗೆ ಒಪ್ಪುವಹಾ ಗೆಯೇ ಇರುವದು. ದುಷ್ಟರಪ್ರಾಬಲ್ಯವಾಗಿ ಅವರ ಅಧಿಕಾರದಿಂದ ಜರ್ಜ ರವಾಗುವದರ ಅನುಭವವು ಭಾರತೀಯರಿಗೆ ಆಗಾಗ್ಗೆ ಬರುತ್ತಬಂದಿರು ವದು. ಧರ್ಮಗ್ಲಾನಿಯಾದಾಗೆಲ್ಲ ಜಗತ್ತಿನ ಅಸ್ತಿತ್ವವನ್ನು ಕಾಯ್ದು ಕೊಳ್ಳುವದಕ್ಕಾಗಿ ಜಗತ್ಕರ್ತೃವಾದ ಪರಮೇಶ್ವರನು ದುಷ್ಟಶಾಸನ ವನ್ನೂ, ಶಿಷ್ಟಪರಿಪಾಲನವನ್ನೂ ಮಾಡುತ್ತಿರುವದರಿಂದ, ಆತನ ಈ ಧರ್ಮವನ್ನು ಅನುಸರಿಸುವದು ಜ್ಞಾನಿಗಳಾದ ದ್ರೋಣಾಚಾರ್ಯರ ಕರ್ತ ವ್ಯವಾಗಿರುವದು. ಮೇಲಾಗಿ, ದ್ರೋಣಾಚಾರ್ಯರು ಸರ್ವಸಾಧಾರಣ ಧನುರ್ಧರರಲ್ಲ; ಇದೇ ಉಪಪರ್ವದ ೩೦೫ನೇ ಪುಟದಲ್ಲ ಹೇಳಿರುವಂತೆ, ಅವರು ಭಗವದವತಾರವಾದ ಪ್ರತ್ಯಕ್ಷ ಪರಶುರಾಮನಿಂದ ಮಂತ್ರಸಿದ್ಧಿ ಪೂರ್ವಕ ಶಸ್ತ್ರಾಸ್ತ್ರಗಳನ್ನು ಪಡೆದವರು! ಅಂಥವರ ಯೋಗ್ಯಶಿಷ್ಯರು ಅಸ್ತ್ರವಿದ್ಯಾಪ್ರವೀಣರಾಗದೆ ಹೇಗೆ ಇದ್ದಾರು? ಆದ್ದರಿಂದ, ತಮ್ಮ ಅಮೋ ಘಶಿಕ್ಷಣದಿಂದ ಏಕಲವ್ಯನು ಶೂರಾಗ್ರೇಸರನಾಗಿ ಲೋಕಕಂಟಕನಾದಾ ನೆಂಬ ವಿಚಾರದಿಂದ, ಆತನನ್ನು ಶಿಷ್ಯತ್ವೇನ ಪರಿಗ್ರಹಿಸಲಿಲ್ಲ.

ಇನ್ನು ಏಕಲವ್ಯನು ಶೂದ್ರನಿದ್ದರೂ ಸತ್ವಗುಣಾತ್ಮಕನಾಗಿದ್ದನು; ಅದ್ದರಿಂದಲೇ ಆ ಗುರುಭಕ್ತನು ಸದ್ವಿವೇಕನೂ, ವಿನಯ ಭಯ-ಭಕ್ತಿಗ ಳುಳ್ಳವನೂ ಆಗಿ, ದ್ರೋಣನ ಮಣ್ಣಿನ ಪ್ರತಿಮೆಯನ್ನೇ ಗುರುವೆಂದು ಭಾವಿಸಿ, ಆ ಪ್ರತಿಮೆಯ ಸೇವೆಮಾಡುತ್ತ ಸಾತ್ತ್ವಿಕ ಸಚ್ಛಿಷ್ಯ ವೃತ್ತಿಯನ್ನು ಕಾಯ್ದುಕೊಂಡು ಧನುರ್ವಿದ್ಯಾಭ್ಯಾಸಮಾಡಿ, ಆ ವಿದ್ಯೆಯಲ್ಲಿ ಅರ್ಜುನನಿ

ಗಿಂತಲೂ ಶ್ರೇಷ್ಠನಾದನು ; ಆದರೆ ಗುರುದಕ್ಷಿಣೆ ಕೊಟ್ಟ ಹೊರತು ಆತನ ವಿದ್ಯೆಯು ಸಫಲವಾಗುವದಾಗಿದ್ದಿಲ್ಲ ; ಆದ್ದರಿಂದಲೇ ದ್ರೋಣಾಚಾರ್ಯರು ಆ ಧನ್ಯಶಿಷ್ಯನ ಸತ್ಪಾತ್ರತಿಶಯಕ್ಕೆ ಅನುರೂಪವಾಗಿ ಆತನ ಬಲಗೈಯ ಹೆಬ್ಬೆರಳನ್ನು ಗುರುದಕ್ಷಿಣೆಯಾಗಿ ಸ್ವೀಕರಿಸಿದರು. ಇದರಿಂದ ಏಕಲವ್ಯನು ಪರಪೀಡಕನಾಗಿ ಪಾರಮಾರ್ಥಿಕ ಅಧಃಪತನ ಹೊಂದುವ ಪ್ರಸಂಗದಿಂದ ಮುಕ್ತನಾದದ್ದಲ್ಲದೆ, ಗುರುಕೃಪೆಯ ಶ್ರೇಷ್ಠಫಲಕ್ಕೆ ಪಾತ್ರನಾಗಿ, ಜಗತ್ತಿನಲ್ಲಿ ಶಾಶ್ವತ ಕೀರ್ತಿಯನ್ನೂ, ಪಾರಲೌಕಿಕ ಶ್ರೇಷ್ಠಫಲದ ಪಾತ್ರತೆಯನ್ನೂ ಪಡೆದನು ; ಆದ್ದರಿಂದ 'ದ್ರೋಣಾಚಾರ್ಯರನ್ನು ಏಕಲವ್ಯನ ನಿಜವಾದ ಕಲ್ಯಾಣಕರ್ತೃಗಳೆಂದು ತಿಳಿಯತಕ್ಕದ್ದು.



## ಜತುಗೃಹಪರ್ವ

**೧೪೧ನೇ ಅಧ್ಯಾಯ—ದುರ್ಯೋಧನನ ಈರ್ಷೆ**—ಕಣಿಕನ ಕುಟಿಲನೀತಿಯನ್ನು ಕೇಳಿ ಧೃತರಾಷ್ಟ್ರನು ಚಿಂತಿಸತೊಡಗಿದನು. ಬಲಿಷ್ಠಪಾಂಡವರ ಮುಂದೆ ತನ್ನ ಮಕ್ಕಳಗತಿಯೇನಾಗುವದೋ ಎಂದು ಆತನು ಆಲೋಚಿಸತೊಡಗಿದನು. ಇತ್ತ ದುರ್ಯೋಧನನಂತು ಭೀಮನ ಪ್ರಾಬಲ್ಯವನ್ನು ನೋಡಿ ಹೊಟ್ಟೆಕಿಚ್ಚುಬಟ್ಟು ಉರುಳಹತ್ತಿದ್ದನು. ಆತನು ಕರ್ಣ-ಶಕುನಿಗಳ ದುರಾಲೋಚನೆಯಿಂದ ಪಾಂಡವರ ನಾಶಕ್ಕಾಗಿ ಹಲವುಯತ್ನಗಳನ್ನು ಮಾಡಿದನು ; ಆದರೆ ವಿದುರನ ಸಹಾಯದಿಂದ ಪಾಂಡವರು ಅವುಗಳೊಳಗಿಂದೆಲ್ಲ ಪಾರಾದರು. ಪಾಂಡವರು ತಮ್ಮ ಸದ್ಗುಣಗಳಿಂದ ಪ್ರಬಲರಾದದ್ದನ್ನು ನೋಡಿ, ಪುರಜನರು ಸಂತೋಷಪಟ್ಟರು. ಅವರ ವಿವಿಧ ಸದ್ಗುಣಗಳನ್ನು ಸಭೆಯಲ್ಲಿ ವರ್ಣಿಸಹತ್ತಿದರು. ಪಾಂಡುವಿನ ಹಿರಿಯಮಗನಾದ ಧರ್ಮರಾಜನೇ ರಾಜ್ಯಾರೋಹಣಕ್ಕೆ ಯೋಗ್ಯನೆಂದು ಪ್ರತಿಪಾದಿಸಹತ್ತಿದರು. ಅವರು ಪ್ರಸಿದ್ಧರೀತಿಯಿಂದ ಹೇಳತೊಡಗಿದರೇನೆಂದರೆ—"ಧೃತರಾಷ್ಟ್ರನು ಹುಟ್ಟುಗುರುಡನಾದದ್ದರಿಂದ ರಾಜ್ಯಾಧಿಕಾರಿಯಾಗಲಿಲ್ಲ, ಈಗೂ ಆಗುವಹಾಗಿಲ್ಲ ; ಭೀಷ್ಮನಂತು ಘೋರಪ್ರತಿಜ್ಞೆಗೆ ಅಧೀನನಾಗಿ ಕಠಿಣತರ ಬ್ರಹ್ಮಚರ್ಯವ್ರತವನ್ನು ಪಾಲಿಸುತ್ತಿರು

ವನು. ಸದ್ಯಕ್ಕೆ ಪಂಡುವಿನ ಹಿರಿಯಮಗನಾದ ಧರ್ಮರಾಜನು ತಾರುಣ್ಯ ದೆಸೆಗೆ ಬಂದಿದ್ದು, ಮಹಾವೀರನಾಗಿರುವನು. ಆತನು ಸತ್ಯನಿಷ್ಠನು, ದಯಾಳುವು, ವೇದಜ್ಞನು ಇದ್ದು, ವೃದ್ಧರಂತೆ ಶಾಂತಗುಣದವನಾಗಿರುವನು. ಆದ್ದರಿಂದ ಈಗ ನಾವು ಆತನಿಗೇ ರಾಜ್ಯಾಭಿಷೇಕಮಾಡೋಣ. ಆತನು ಧರ್ಮಜ್ಞನಿರುವದರಿಂದ ಭೀಷ್ಮ, ಧೃತರಾಷ್ಟ್ರ, ಧೃತರಾಷ್ಟ್ರನ ಮಕ್ಕಳು ಮೊದಲಾದವರ ಮಾನಮರ್ಯಾದೆಗಳನ್ನು ಕಾಯ್ದು, ಅವರಿಗೆ ಯಾವದರ ಕೊರತೆಯೂ ಆಗದಂತೆ ಯೋಗ್ಯವಸ್ತುಗಳನ್ನು ಒದಗಿಸಿಕೊಡುವನು.

**೧೪೨ನೇ ಅಧ್ಯಾಯ:-ದುರ್ಯೋಧನ-ಧೃತರಾಷ್ಟ್ರಸಂವಾದ-**

ಜನಮೇಜಯಾ, ಪ್ರಜೆಗಳ ಈ ಮಾತುಗಳನ್ನು ಕೇಳಿ ದುರ್ಯೋಧನನು ಅಸಮಾಧಾನಪಟ್ಟನು. ಕೂಡಲೆ ಆತನು ತನ್ನ ತಂದೆಯಾದ ಧೃತರಾಷ್ಟ್ರನ ಬಳಿಗೆ ಹೋಗಿ, ತಂದೆಯು ಒಬ್ಬನೇ ಇರುವದನ್ನು ತಿಳಿದು ಆತನನ್ನು ನಮಸ್ಕರಿಸಿ, ಆತನಿಗೆ ಪುರಜನರ ಅಭಿಪ್ರಾಯವನ್ನು ತಿಳಿಸಿ— "ಅಪ್ಪಾ, ನೀವು ಹಿರಿಯರಾದ್ದರಿಂದ ನಿಜವಾಗಿ ನೀವೇ ಪಟ್ಟಕ್ಕೆ ಬಾಧ್ಯಸ್ಥರು ; ಆದರೆ ಅಂಧತ್ವದಿಂದ ನಿಮಗೆ ರಾಜ್ಯಪ್ರಾಪ್ತಿಯಾಗಲಿಲ್ಲ. ಪಂಡುರಾಜನು ಪಟ್ಟಕ್ಕೆ ಕೂತಹಕ್ಕಿನಿಂದ ಈಗ ಯುಧಿಷ್ಠಿರನು ಅರಸನಾದರೆ, ಮುಂದೆ ಆತನ ಮಗನು ಅರಸನಾಗಿ ರಾಜ್ಯದ ಬಾಧ್ಯತೆಯು ಅವರ ವಂಶಕ್ಕೆ ಉತ್ಪನ್ನವಾಗಲು, ನಾವು ಹಿರಿಯಮನೆತನದವರಾದರೂ, ಅನ್ಯರಿಂದ ಪೋಷಿತರಾಗಿ ನರಕಭಾಗಿಗಳಾಗಬೇಕಾಗುವದು ; ಆದ್ದರಿಂದ ಹೀಗಾಗದಂತೆ ಏನಾದರೂ ವ್ಯವಸ್ಥೆಮಾಡಿರಿ ಮೊದಲಿಗೇ ನಿಮಗೆ ಈ ರಾಜ್ಯವು ಸಿಕ್ಕಿದ್ದರೆ, ಈಗ ಜನರು ವಿರುದ್ಧವಾಗಿದ್ದರೂ ರಾಜ್ಯವು ನಿಶ್ಚಯವಾಗಿ ನಮಗೆ ದೊರೆಯುತ್ತಿತ್ತು ; ಆದರೆ ಆದಮಾತು ಈಗ ಬರುವಹಾಗಿಲ್ಲ. ಈಗ ನೀವು ಹೇಗಾದರೂಮಾಡಿ ಪಾಂಡವರನ್ನು ವಾರಣಾವತನಗರಕ್ಕೆ ಕಳಿಸಬೇಕು," ಎಂದು ಹೇಳಿದನು. ಅದನ್ನು ಕೇಳಿ, ಮೊದಲೇ ಕಣಿಕನೀತಿಯಿಂದ ಚಂಚಲಮನಸ್ಸಿನವನಾಗಿದ್ದ ಧೃತರಾಷ್ಟ್ರನಲ್ಲಿ ದ್ವೈತಭಾವವು ಉತ್ಪನ್ನವಾಗಿ, ಆತನು ದುಃಖಿತನಾದನು ಪಾಂಡವರನ್ನು ವಾರಣಾವತಕ್ಕೆ ಕಳಿಸುವಸಂಬಂಧದಿಂದ ಆತನಲ್ಲಿ ಆಲೋಚನೆಯು ಉತ್ಪನ್ನವಾಗಿ, ಸ್ವಲ್ಪಹೊತ್ತು ವಿಚಾರಮಾಡುತ್ತ ಸುಮ್ಮನೆ ಕುಳಿತುಕೊಂಡನು. ಬಳಿಕ ಆತನು ದುರ್ಯೋಧನನನ್ನು ಕುರಿತು—

ಧೃತರಾಷ್ಟ್ರ—ತಮ್ಮಾ, ಪಂಡುವು ಒಳ್ಳೇಧರ್ಮಿಷ್ಠನಿದ್ದನು; ಆತನು ಎಲ್ಲ ಅಣ್ಣತಮ್ಮಂದಿರನ್ನೂ ಯೋಗ್ಯರೀತಿಯಿಂದ ನಡಿಸಿಕೊಳ್ಳುತ್ತಿದ್ದನು; ವಿಶೇಷವಾಗಿ ನನ್ನಲ್ಲಿ ಆತನ ಆದರವು ಬಹಳ ಆತನಲ್ಲಿ ಯಾವದರ ಆಸಕ್ತಿಯೂ ಇರದೆ, ಆತನು ಕೇವಲ ವ್ರತಸ್ಥನಾಗಿದ್ದನು. ನನಗೆ ಆತನು—"ಮಹಾರಾಜ, ಈ ರಾಜ್ಯವು ನಿಮ್ಮದು" ಎಂದು ಅನ್ನುತ್ತಿದ್ದನು. ಅಮಾತ್ಯರನ್ನೂ, ಸೈನಿಕರನ್ನೂ ಪಂಡುವು ಸತತವಾಗಿ ರಕ್ಷಿಸಿರುವನು. ಅವರ ಹೆಂಡರು ಮಕ್ಕಳ ಸಂರಕ್ಷಣವನ್ನು ಉತ್ತಮರೀತಿಯಿಂದ ಮಾಡಿರುವನು. ಪ್ರಜೆಗಳನ್ನು ಮಕ್ಕಳಂತೆ ಪಾಲಿಸಿರುವನು. ಅಂದಬಳಿಕ ನಾವು ಪಾಂಡವರನ್ನು ಈಗ ವಾರಣಾವತಕ್ಕೆ ಕಳಿಸಿದರೆ, ಈ ಪಂಡುಪಕ್ಷಪಾತಿಗಳಾದ ಅಮಾತ್ಯಾದಿಗಳೂ, ಪ್ರಜೆಗಳೂ ಸಹಿಸಬಹುದೆ? ಅದರಲ್ಲಿ ಈಗ ಪಂಡುಪುತ್ರನಾದ ಯುಧಿಷ್ಠಿರನು ತಂದೆಯಂತೆ ಧರ್ಮಿಷ್ಠನೂ, ಸದ್ಗುಣಿಯೂ, ಲೋಕವಿಖ್ಯಾತನೂ, ಪುರಜನರಿಗೆ ಪ್ರಿಯನೂ ಆಗಿರುವದರಿಂದ, ಅಂಥವನನ್ನು, ಬಂಧುಗಳೊಡನೆ ವಾರಣಾವತಕ್ಕೆ ಕಳಿಸಿದರೆ, ಪೌರರು ಯುಧಿಷ್ಠಿರನ ಸಲುವಾಗಿ ಬಂಧುಗಳೊಡನೆ ನಮ್ಮನ್ನು ನಾಶಗೊಳಿಸಲಿಕ್ಕಿಲ್ಲವೆ?

ದುರ್ಯೋಧನ—ಅಪ್ಪಾ, ನಿಮ್ಮ ಮಾತು ಸತ್ಯವು. ಇದನ್ನರಿತೇ ನಾನು ಅಮಾತ್ಯರಿಗೆ ದ್ರವ್ಯಾದಿಗಳನ್ನು ಕೊಟ್ಟು ನನ್ನಕಡೆಗೆ ಮಾಡಿಕೊಂಡಿರುವೆನು; ಆದ್ದರಿಂದ ಎಲ್ಲ ಮುಖ್ಯಪ್ರಧಾನರೂ ನನ್ನಕಡೆಗೆ ಆಗುವರು; ಯಾವತ್ತು ಭಂಡಾರವು ಈಗ ನನ್ನ ಕೈಯಲ್ಲಿರುವದು; ಆದ್ದರಿಂದ ಯಾವಮಾತಿನ ಚಿಂತೆಯನ್ನೂ ಮಾಡದೆ, ಈಗ ನೀವು ಪಾಂಡವರನ್ನು ಬೇಗನೆ ಹೇಗಾದರೂಮಾಡಿ ವಾರಣಾವತನಗರಕ್ಕೆ ಕಳಿಸಿಕೊಡಿರಿ. ಮುಂದೆ ಸಂಪೂರ್ಣರಾಜ್ಯವು ನನ್ನ ಕೈಸೇರಿದಬಳಿಕ, ಪುನಃ ಅವರು ಬೇಕಾದರೆ ಹಸ್ತಿನಾವತಿಗೆ ಬರಲೊಲ್ಲರೇಕೆ.

ಧೃತರಾಷ್ಟ್ರ—ದುರ್ಯೋಧನಾ, ಈಮಾತು ನನ್ನ ಮನಸ್ಸಿನಲ್ಲಿಯೂ ಬಹುದಿವಸಗಳಿಂದ ಕಟೆಯುತ್ತಿರುವದು; ಆದರೆ ಇದು ಪಾಪಮೂಲವಾಗಿರುವದರಿಂದ ನಾನು ಹೊರಗೆ ಆಡಿಲ್ಲ. ಪಾಂಡವರನ್ನು ಹೊರಗೆ ಹಾಕುವದಕ್ಕೆ ಭೀಷ್ಮ, ದ್ರೋಣ, ವಿದುರ, ಕೃಪಾಚಾರ್ಯರು ಒಪ್ಪಲಾರರು;

ಯಾಕಂದರೆ ಅವರಿಗೆ ನಾವಿಬ್ಬರೂ ಸಮಾನರೇ. ಧರ್ಮಿಷ್ಠರಾದ ಅವರಲ್ಲಿ ವೈಷಮ್ಯಭಾವವು ಇರಲಾರದು. ಅಂದಬಳಿಕ ನಾವು ಪಾಂಡವರನ್ನು ಹೊರಗೆಹಾಕಿದರೆ, ಈ ಕುರುಕುಲಾಭಿಮಾನಿಗಳು ನಮ್ಮನ್ನು ನಾಶಗೊಳಿಸಲಿಕ್ಕಿಲ್ಲವೆ ?

ದುರ್ಯೋಧನ—ಭೀಷ್ಮರ ಮನಸ್ಸು ನಮ್ಮಿಬ್ಬರಲ್ಲಿ ಯಾರಕಡೆಗೂ ಆಸಕ್ತವಾಗಿಲ್ಲ; ಅವರು ಕೇವಲ ಮಧ್ಯಸ್ಥರು. ದ್ರೋಣಪುತ್ರನಾದ ಅಶ್ವತ್ಥಾಮನು ಕೇವಲ ನನ್ನಕಡೆಗೆ ಇರುವದರಿಂದ, ದ್ರೋಣಾಚಾರ್ಯರೂ, ಕೃಪಾಚಾರ್ಯರೂ ನನ್ನಕಡೆಗೆ ಇದ್ದಹಾಗೆಯೇಸರಿ; ಯಾಕಂದರೆ ಮಗನನ್ನು ಬಿಟ್ಟು ದ್ರೋಣಾಚಾರ್ಯರೂ, ಸೋದರಳಿಯನನ್ನು ಬಿಟ್ಟು ಕೃಪಾಚಾರ್ಯರೂ ಪಾಂಡವರಕಡೆಗೆ ಹೋಗಲಾರರು. ವಿದುರನಂತು ನಮ್ಮ ದುಡ್ಡಿನದಾಸನು. ಆತನು ಪಾಂಡವರಕಡೆಗಿದ್ದರೂ, ಸಹಾಯಹೀನನಾದ ಆತನು ನಮಗೇನುಮಾಡುವಹಾಗಿದ್ದಾನೆ? ಆದ್ದರಿಂದ ನೀವು ಕುಂತಿಯೊಡನೆ ಪಾಂಡವರನ್ನು ಇಂದೇ ವಾರಣಾವತಕ್ಕೆ ಕಳಿಸಿ, ನನ್ನ ಚಿಂತೆಯನ್ನು ದೂರಮಾಡಿರಿ.

**೧೪೩, ೧೪೪ನೇ ಅಧ್ಯಾಯಗಳು — ಜತುಗೃಹನಿರ್ಮಾಣ** — ಮಗನಮಾತಿಗೆ ಕಿವಿಗೊಟ್ಟು ಪಾಂಡವರನ್ನು ಕಳಿಸಲಿಕ್ಕೆ ಏನು ಉಪಾಯ ಮಾಡಬೇಕೆಂದು ಧೃತರಾಷ್ಟ್ರನು ಆಲೋಚಿಸತೊಡಗಿದನು. ಆತನ ಸೂಚನೆಯಂತೆ, ಅಮಾತ್ಯಾದಿಗಳು ವಾರಣಾವತದ ವರ್ಣನವನ್ನು ಪಾಂಡವರಮುಂದೆ ಉಪ್ಪುಕಾರಹಚ್ಚಿ ಮಾಡತೊಡಗಿದರು. ದುರ್ಯೋಧನಾದಿಗಳು ಆ ಪಟ್ಟಣದ ವರ್ಣನವು ಜನರಲ್ಲಿ ಹಬ್ಬುವಂತೆ ವ್ಯವಸ್ಥೆಮಾಡಿದರು. ಎಲ್ಲರೂ ಹೀಗೆ ವಾರಣಾವತವ ವರ್ಣಿಸುವದನ್ನು ಕೇಳಿ, ಅಲ್ಲಿಗೆ ಹೋಗುವ ಇಚ್ಛೆಯು ಪಾಂಡವರಿಗೆ ಉತ್ಪನ್ನವಾಯಿತು. ಇದನ್ನರಿತು ಧೃತರಾಷ್ಟ್ರನು ಪಾಂಡವರಬಳಿಗೆ ಹೋಗಿ—"ಮಕ್ಕಳಿರಾ, ವಾರಣಾವತನಗರವು ಬಹುರಮ್ಯವಾಗಿರುವದೆಂದು ನಾನುಕೇಳುತ್ತೇನೆ. ಮೇಲಾಗಿ ಈಗ ಅಲ್ಲಿ ಶ್ರೀ ಶಂಕರನ ಯಾತ್ರೆಯೂ ನೆರೆಯುತ್ತಿರುವದಂತೆ ನಿಮ್ಮ ಇಚ್ಛೆಯಿದ್ದರೆ, ನೀವು ಕುಂತಿಯೊಡನೆ ಹೋಗಿ ಅಲ್ಲಿ ಯಥೇಚ್ಛ ರಮಿಸಿರಿ. ನಿಮಗೆ ಯಾತರ ಕೊರತೆಯೂ ಆಗಲಾರದು. ನಿಮಗೆ ಇಲ್ಲಿಗೆಬರುವ ಇಚ್ಛೆಯಾದ

ಕೂಡಲೆ ಅವಶ್ಯವಾಗಿ ಬರಬೇಕು,'' ಎಂದುಹೇಳಿದನು. ತಾವು ಇಲ್ಲಿಂದಹೋಗಬೇಕೆಂದು ಧೃತರಾಷ್ಟ್ರನಮನಸ್ಸಿನಲ್ಲಿರುವದೆಂಬದನ್ನರಿತು, ತಮಗೆ ವಿದುರನ ಸಹಾಯವಿರುತ್ತದೆಂಬದನ್ನು ಸ್ಮರಿಸಿ, ಪಾಂಡವರು ಧೃತರಾಷ್ಟ್ರನ ಮಾತಿಗೆ ''ಯಾಕಾಗಲೊಲ್ಲದು'' ಎಂದು ಒಪ್ಪಿಕೊಂಡರು. ಬಳಿಕ ಅವರು ಭೀಷ್ಮ, ದ್ರೋಣ, ಕೃಪ, ವಿದುರ, ಅಶ್ವತ್ಥಾಮ, ಭೂರಿಶ್ರವ, ಬೇರೆ ಮಾನ್ಯಪುರುಷರು, ಅಮಾತ್ಯರು, ತಪೋನಿಧಿಬ್ರಾಹ್ಮಣರು, ಪುರೋಹಿತರು, ನಾಗರಿಕರು, ಗಾಂಧಾರಿ, ಧೃತರಾಷ್ಟ್ರ ಮೊದಲಾದವರನ್ನು ಕಂಡು ನಮಸ್ಕರಿಸಿ, ತಮ್ಮ ಪ್ರಯಾಣದ ಸಂಗತಿಯನ್ನು ತಿಳಿಸಿ, ತಮ್ಮನ್ನು ಆಶೀರ್ವದಿಸಬೇಕೆಂದು ಪ್ರಾರ್ಥಿಸಿದರು. ಆಗ ಅವರೆಲ್ಲರು—''ಪಾಂಡುಪುತ್ರರೇ, ಮಾರ್ಗದಲ್ಲಿ ಯಾವಾಗಲೂ ನಿಮ್ಮ ಕಲ್ಯಾಣವಾಗಲಿ ; ಯಾವ ಪ್ರಾಣಿಗಳಿಂದಲೂ ಸ್ವಲ್ಪವೂ ನಿಮಗೆ ತೊಂದರೆಯಾಗಬೇಡ.'' ಎಂದು ಆಶೀರ್ವದಿಸಿದರು. ಆಮೇಲೆ ಪಾಂಡವರು ರಾಜ್ಯಪ್ರಾಪ್ತಿಗಾಗಿ ಸ್ವಸ್ತಿವಾಚನಕರ್ಮವನ್ನು ಮಾಡಿ, ತಾಯಿಯೊಡನೆ ವಾರಣಾವತಕ್ಕೆ ತೆರಳಿದರು.

ಹೀಗೆ ಪಾಂಡವರು ವಾರಣಾವತಕ್ಕೆ ಹೊರಟದ್ದನ್ನು ನೋಡಿ, ದುರ್ಯೋಧನನಿಗಾದ ಆನಂದವು ಆತನಹೊಟ್ಟೆಯಲ್ಲಿ ಹಿಡಿಸದಾಯಿತು. ಕೂಡಲೆ ಆತನು ಪುರೋಚನನೆಂಬ ಹೆಸರಿನ ತನ್ನ ಸಚಿವನನ್ನು ಏಕಾಂತದಲ್ಲಿ ಕರೆಸಿ, ಆತನ ಬಲಗೈಯನ್ನು ಹಿಡಿದು ಆತನನ್ನು ಕುರಿತು–''ಮಿತ್ರ, ನಿನಗಿಂತ ಹೆಚ್ಚಿನ ನಂಬಿಗೆಯವರು ನನಗೆ ಮತ್ತೊಬ್ಬರಿಲ್ಲ. ನನ್ನ ರಾಜ್ಯದ ಉಪಭೋಗದಲ್ಲಿ ನಿನ್ನಪಾಲೂ ನಿಶ್ಚಯವಾಗಿ ಇರುವದರಿಂದ, ಅದರ ಸಂರಕ್ಷಣವನ್ನು ನೀನು ಅವಶ್ಯವಾಗಿ ಮಾಡಲೇಬೇಕು. ಈಗ ಪಾಂಡವರು ವಾರಣಾವತಕ್ಕೆ ಹೊರಟಿರುವದರಿಂದ, ಅವರ ನಾಶವು ಅಲ್ಲಿ ಆಗಬೇಕೆಂದು ನೀನು ಮನಃಪೂರ್ವಕ ಯತ್ನಿಸತಕ್ಕದ್ದು. ನಮ್ಮ ಈ ಆಲೋಚನೆಯು ಹೊರಬೀಳದಂತೆ ನೀನು ಅತ್ಯಂತ ಜಾಗರೂಕನಾಗಿರತಕ್ಕದ್ದು. ನೀನು ಪಾಂಡವರಿಗಿಂತ ಮೊದಲೇ ವಾರಣಾವತಕ್ಕೆ ಹೋಗಿ, ಪಾಂಡವರು ಉತ್ಸವದಲ್ಲಿ ಮಗ್ನರಾಗಿರುವಾಗ, ವಾರಣಾವತದ ಒಂದು ನಿಟ್ಟಿನಲ್ಲಿ ಒಂದು ಅರಗಿನ ಮನೆಯನ್ನು ಕಟ್ಟಿಸು. ಅದಕ್ಕಾಗಿ ರಾಳ, ಅರಗು, ತುಪ್ಪ, ಬಿದಲು, ನಾರು, ನೆಣ ಮೊದಲಾದ ಜ್ವಾಲಾಗ್ರಾಹಿ ಪದಾರ್ಥಗ

ಳನ್ನು ಮಣ್ಣಿನಲ್ಲಿ ಕಲಿಸಿ ಉಪಯೋಗಿಸಿ, ಆ ಪದಾರ್ಥಗಳನ್ನೂ, ಕಟ್ಟಿಗೆಗಳನ್ನೂ, ಅಲ್ಲಲ್ಲಿ ಮನೆಯೊಳಗೆ ಪಸರಿಸಿ ಇಟ್ಟಿರು. ಅದಕ್ಕಾಗಿ ಎಷ್ಟು ಹಣ ವೆಚ್ಚವಾದರೂ ಹಿಂದೆಮುಂದೆ ನೋಡಬೇಡ. ಇದೆಲ್ಲ ಬಹು ಗುಪ್ತವಾಗಿ ಆಗತಕ್ಕದ್ದು. ನಿನ್ನ ಅರಗಿನಮನೆಯು ಸಿದ್ಧವಾದಬಳಿಕ ಪಾಂಡವರನ್ನು ಬಹು ಮರ್ಯಾದೆಯಿಂದ ಅಲ್ಲಿಗೆ ಕರಕೊಂಡುಹೋಗಿ, ಯಾವ ವೈಭವಕ್ಕೂ, ಸುಖಗಳಿಗೂ ಕೊರತೆಬಾರದಂತೆ ಅವರನ್ನು ಅಲ್ಲಿ ಇರಿಸು. ಹೀಗೆ ಕೆಲವುದಿವಸಗಳು ಕ್ರಮಿಸಿ, ನಿನ್ನಮೇಲೆ ಪಾಂಡವರ ನಂಬಿಗೆಯು ಪೂರ್ಣವಾಗಿ ಕುಳಿತಮೇಲೆ, ಒಂದುದಿನ ನಿಶ್ಚಿಂತೆಯಿಂದ ಮನೆಯಲ್ಲಿ ಅವರು ನಿದ್ದೆಹೋಗಿರುವಾಗ, ನೀನು ಮನೆಗೆ ಬೆಂಕಿಯನ್ನು ಹಚ್ಚಿಬಿಡು. ಮನೆಗೆ ಬೆಂಕಿಹತ್ತಿ ಪಾಂಡವರು ಸತ್ತರೆಂದು ಜನರೊಳಗೆ ಸುದ್ದಿಯಾಗಿ, ಅವರ ಮರಣದವಿಷಯದಲ್ಲಿ ನಮಗೆ ಯಾರೂ ದೋಷವಿಡಲಾರರು'' ಎಂದು ಹೇಳಿದನು.

**೧೪೫ನೇ ಅಧ್ಯಾಯ—ವಿದುರೋಪದೇಶ**—ಇತ್ತ ಪಾಂಡವರು ವೇಗಶಾಲಿಗಳಾದ ಕುದುರೆಗಳನ್ನು ರಥಗಳಿಗೆ ಹೂಡಿ, ಭೀಷ್ಮ-ದ್ರೋಣ-ಧೃತರಾಷ್ಟ್ರಾದಿ ಗುರುಹಿರಿಯರನ್ನು ವಂದಿಸಿ, ಖಿನ್ನಾಂತಃಕರಣದಿಂದ ಅವರ ಅಪ್ಪಣೆಪಡೆದು ವಾರಣಾವತದ ಹಾದಿಯನ್ನು ಹಿಡಿದರು. ಆಗ ಮಹಾಬುದ್ಧಿಶಾಲಿಯಾದ ವಿದುರನೂ, ಕುರುವಂಶದ ಬೇರೆ ದೊಡ್ಡದೊಡ್ಡ ಪುರುಷರೂ ದುಃಖಾಕುಲರಾಗಿ ಅವರನ್ನು ಕಳಿಸುತ್ತ ಸಾಗಿದರು. ಪಾಂಡವರ ಈ ದೀನವೃತ್ತಿಯನ್ನು ನೋಡಿ ಪುರಜನರು ಬಹಳ ಅಸಮಾಧಾನಪಟ್ಟರು ಎಷ್ಟೋಜನ ಬ್ರಾಹ್ಮಣರು ಧೃತರಾಷ್ಟ್ರನ ಹಂಗುಇಡದೆ, ಆತನ ಕೃತಿಯನ್ನು ನಿಷೇಧಿಸಿದರು. ತಾವು ಇನ್ನು ಹಸ್ತಿನಾವತಿಯಲ್ಲಿ ಇರದೆ ಪಾಂಡವರನ್ನು ಅನುಸರಿಸಿ ಹೋಗುವೆವೆಂದು ನುಡಿದರು. ಪುರಜನರ ಈ ಮಾತುಗಳನ್ನು ಕೇಳಿ ಯುಧಿಷ್ಠಿರನ ಕಂಠವು ಸದ್ಗದಿತವಾಯಿತು. ಆತನು ಪೌರರನ್ನು ಕುರಿತು—''ಪುರಜನರೇ, ನಮ್ಮ ದೊಡ್ಡಪ್ಪನಾದ ಧೃತರಾಷ್ಟ್ರನು ತಂದೆಯಂತೆ ನಮಗೆ ವಂದನೀಯನೂ, ಶ್ರೇಷ್ಠನೂ ಆಗಿರುವದರಿಂದ, ಆತನ ಅಪ್ಪಣೆಯನ್ನು ನಾವು ಪಾಲಿಸಲೇಬೇಕು. ಆತನ ಕೃತಿಯನ್ನು ಕುರಿತು ನಾವು ಶಂಕಿಸಲಾಗದು. ನಮ್ಮ ವಿಷಯವಾಗಿ ನಿಮ್ಮ ಅಂತಃಕರ

ಣವು ತಳಮಳಿಸುವದರಿಂದ, ನೀವು ನಮ್ಮನ್ನು ಬಲಕ್ಕೆ ಹಾಕಿಕೊಂಡು ನಮ್ಮನ್ನು ಆಶೀರ್ವದಿಸಿ ನಿಮ್ಮನಿಮ್ಮ ಮನೆಗಳಿಗೆ ಹೋಗಿರಿ. ಹೊತ್ತು ಬಿದ್ದಾಗ ನೀವು ನಮಗೆ ಸಹಾಯಮಾಡಿರಿ" ಎಂದು ಹೇಳಿದನು.

ಯುಧಿಷ್ಠಿರನ ಈ ಮಾತುಗಳನ್ನು ಕೇಳಿ ಪುರಜನರು ಪಾಂಡವರನ್ನು ಬಲವಂದು ಆಶೀರ್ವದಿಸಿ, ತಮ್ಮತಮ್ಮ ಮನೆಗಳಿಗೆ ಹೋದರು. ಇತ್ತ ವಿದುರನು ಪಾಂಡವರನ್ನು ಕಳಿಸುತ್ತ ಮತ್ತೆ ಮುಂದಕ್ಕೆ ಹೋಗಿ, ಕೇವಲ ಧರ್ಮರಾಜನಿಗೆ ಮಾತ್ರ ತಿಳಿಯುವಂತೆ ಯಾವನೀಭಾಷೆಯಿಂದ ಆತನನ್ನು ಕುರಿತು—"ಅಪ್ಪಾ, ಧರ್ಮಾ, ಶತ್ರುಗಳು ರಾಜನೀತಿಯನ್ನನುಸರಿಸಿ ಮಾಡಿರುವ ಗುಪ್ತಾಲೋಚನೆಯ ರಹಸ್ಯವನ್ನು ಅರಿತು ಅದಕ್ಕೆ ತಕ್ಕಂತೆ ನಡೆದು, ಮುಂದೆಬರುವ ವಿಪತ್ತಿನಿಂದ ಪಾರಾಗಬೇಕು. ವಾರಣಾವತದಲ್ಲಿ ನಿಮ್ಮಸಲುವಾಗಿ ಕಟ್ಟಿದ ಮನೆಯು ಅರಗಿನದಾಗಿರುವದು. ಅದರಲ್ಲಿ ಗುಪ್ತ ರೀತಿಯಿಂದ ಗೋಡೆಮೊದಲಾದವುಗಳಲ್ಲಿ ಜ್ವಾಲಾಗ್ರಾಹ್ಯ ಪದಾರ್ಥಗಳನ್ನು ಇರಿಸಿ, ಪುರೋಚನನು ಮನೆಕಟ್ಟಿಸಿರುವನು. ನೀವು ಬಹು ಎಚ್ಚರದಿಂದ ವಾಸಮಾಡಿರಿ. ಇನ್ನು ನೀವು—"ಈ ಪುರೋಚನನನ್ನು ಕೊಂದು ಬಿಡುವೆವು" ಅಥವಾ "ನಾವು ಅರಗಿನಮನೆಯಲ್ಲಿ ವಾಸಿಸುವದೇ ಇಲ್ಲ" ಎಂದು ಅನ್ನಬಹುದು; ಆದರೆ ಅದು ಸರಿಯಲ್ಲ. ಪ್ರಬಲಶತ್ರುವಿನೊಡನೆ ವಿರೋಧಕಟ್ಟಿಕೊಳ್ಳುವದೆಂದರೆ, ನಾಳಿನ ಮರಣವನ್ನು ಇಂದೇ ಕರಕೊಂಡಂತಾಗುವದು; ಆದ್ದರಿಂದ ನೀವು ಅರಗಿನ ಮನೆಯಲ್ಲಿ ವಾಸಿಸುತ್ತ, ಸಮಯ ನೋಡಿ ನೀವೇ ಆ ಮನೆಗೆ ಬೆಂಕಿಹಚ್ಚಿ, ಗುಪ್ತದ್ವಾರದಿಂದ ಪಾರಾಗಿ ಹೋಗಬೇಕು.

ಯುಧಿಷ್ಠಿರಾ, ಆಪತ್ತಿನಿಂದ ಪಾರಾಗಲಿಕ್ಕೆ ವಿವೇಕವು ಬೇಕು; ಆಪತ್ತನ್ನು ದಾಟಿದಬಳಿಕ ಮುಂದೆ ಏನುಮಾಡಬೇಕೆಂಬದನ್ನಾದರೂ ವಿವೇಕದಿಂದಲೇ ಅರಿತುಕೊಳ್ಳಬೇಕು. ಅದರಂತೆ, ಧೈರ್ಯದ ಬಲದಿಂದಲೇ ಯಾವತ್ತು ಐಶ್ವರ್ಯಗಳೂ, ಪೃಥ್ವಿಯೂ ಪ್ರಾಪ್ತವಾಗುವವೆಂದು ತಿಳಿದಿರಬೇಕು; ಆದ್ದರಿಂದ ನಿನ್ನಲ್ಲಿ ವಿವೇಕವೂ, ಧೈರ್ಯವೂ ಇರಲಿ. ನಾನು ನನ್ನ ಒಬ್ಬ ಮಿತ್ರನ ಮುಖಾಂತರ ಅರಗಿನ ಮನೆಯಲ್ಲಿ ಒಂದು ಗುಪ್ತಮಾರ್ಗವನ್ನು ಸಿದ್ಧಮಾಡಿಸುವೆನು. ನೀವು ಆ ಮಾರ್ಗದಿಂದ

ಪಾರಾಗಿ ಹೋದಬಳಿಕ, ತಿರುಗಿ ಹಸ್ತಿನಾವತಿಗೆ ಬರಬೇಡಿರಿ. ರಾತ್ರಿ ನಕ್ಷತ್ರಗಳ ಗುರುತಿನಿಂದ ದಿಕ್ಕಿನ ಗೊತ್ತುಹಿಡಿದು ಬಹುದೂರ ಹೋಗಿರಿ. ಬೇಟೆಯ ನೆವದಿಂದ ನೀವು ಮಾರ್ಗವನ್ನು ಕ್ರಮಿಸಿರಿ. ನೀವು ಅರಗಿನ ಮನೆಯಿಂದ ಪಾರಾಗಿ ಹೋದಬಳಿಕ, ನಿಮಗೆ ಎಷ್ಟು ಕಷ್ಟಗಳೊದಗಿದರೂ ಅವುಗಳ ಮಹತ್ವವು ನಿಮಗೆ ತೋರಲಿಕ್ಕಿಲ್ಲ" ಎಂದು ಹೇಳಲು, ಯುಧಿಷ್ಠಿರನು "ತಿಳಿಯಿತು" ಎಂದು ಹೇಳಿದನು. ಬಳಿಕ ವಿದುರನು ಪಾಂಡವರನ್ನು ಬಲಕ್ಕೆ ಹಾಕಿಕೊಂಡು ಮುಂದಕ್ಕೆ ಸಾಗಹೇಳಿ ತಾನು ತನ್ನ ಮನೆಗೆ ತಿರುಗಿದನು. ಹೀಗೆ ಎಲ್ಲರೂ ಕಳಿಸಿ ಹಿಂದಿರುಗಿ ಹೋಗಲು, ಕುಂತಿಯು ಯುಧಿಷ್ಠಿರನಿಗೆ--"ತಮ್ಮಾ, ವಿದುರನು ಏನೋ ನಮಗೆ ತಿಳಿಯದಂತೆ ನಿನಗೆ ಹೇಳಿದನು, ನೀನು "ತಿಳಿಯಿತು" ಎಂದು ಆತನಿಗೆ ಉತ್ತರಕೊಟ್ಟೆ ; ಆದರೆ ಅದು ನಮಗೇನೂ ಗೊತ್ತಾಗಲಿಲ್ಲ! ಅದನ್ನು ನನ್ನಮುಂದೆ ಹೇಳುವದರಿಂದ ಏನೂ ಅಪಾಯವಾಗದಂತೆ ಇದ್ದರೆ, ನನ್ನಮುಂದೆ ಹೇಳು," ಎಂದು ಕೇಳಲು, ಯುಧಿಷ್ಠಿರನು ಎಲ್ಲಸಂಗತಿಯನ್ನು ತಾಯಿಗೆ ಹೇಳಿದನು. ರಾಜಾ ಜನಮೇಜಯಾ, ಹೀಗೆ ಪಾಂಡವರು ಫಾಲ್ಗುಣ ಶುದ್ಧ ಅಷ್ಟಮಿಯ ದಿವಸ ರೋಹಿಣೀನಕ್ಷತ್ರದಲ್ಲಿ ಹಸ್ತಿನಾವತಿಯಿಂದ ಹೊರಟು ವಾರಣಾವತಿಗೆ ಹೋದಬಳಿಕ, ಅಲ್ಲಿಯ ನಾಗರಿಕರನ್ನು ಕಂಡರು.

**೧೪೬ನೇ ಅಧ್ಯಾಯ—ಭೀಮ ಯುಧಿಷ್ಠಿರಸಂವಾದ**—ಪಾಂಡವರು ಬಂದ ಸುದ್ದಿಯನ್ನು ಕೇಳಿ ವಾರಣಾವತದ ನಾಗರಿಕರು ಪರಮಾನಂದದಿಂದ ಪುರವನ್ನು ಶೃಂಗರಿಸಿ, ಸಮಾರಂಭದಿಂದ ಎದುರುಗೊಂಡು ಅವರನ್ನು ಪಟ್ಟಣದೊಳಗೆ ಕರಕೊಂಡು ಹೋದರು. ಬಳಿಕ ಪಾಂಡವರು ಮೊದಲು ಸ್ವಕರ್ಮನಿಷ್ಠ ಬ್ರಾಹ್ಮಣರ ಮನೆಗೆ, ಆಮೇಲೆ ರಥದಲ್ಲಿ ಕುಳಿತುಕೊಳ್ಳುವಂಥ ದೊಡ್ಡದೊಡ್ಡ ಅಧಿಕಾರಿಗಳ ಮನೆಗೆ, ಆಮೇಲೆ ವೈಶ್ಯ-ಶೂದ್ರ ಮೊದಲಾದವರ ಮನೆಗೆ ಹೋಗಿ ಅವರನ್ನು ಕಂಡು ಗೌರವಿಸಿದರು. ಹೀಗೆ ಪರಸ್ಪರರು ಪರಸ್ಪರರನ್ನು ಗೌರವಿಸಿದಬಳಿಕ, ಪುರೋಚನನು ಪಾಂಡವರ ಸಲುವಾಗಿ ಗೊತ್ತುಮಾಡಿದ ಒಂದು ಮನೆಗೆ ಅವರನ್ನು ಕರಕೊಂಡುಹೋದನು. ಹೊಸಮನೆಯು ಇನ್ನೂ ಸಿದ್ಧವಾಗಿದ್ದಿಲ್ಲ.ಪಾಂಡವರ ಆಹಳಿಯಮನೆಯಲ್ಲಾದರೂ ಎಲ್ಲ ಅನುಕೂಲತೆಗಳು ಉತ್ತಮರೀತಿಯಿಂದ

ಮಾಡಲ್ಪಟ್ಟಿದ್ದವು. ಹತ್ತುದಿವಸ ಪಾಂಡವರು ಆ ಮನೆಯಲ್ಲಿ ಇರುತ್ತಿರಲು, ಹೊಸಮನೆಯು ಸಿದ್ಧವಾಯಿತು. ಅದನ್ನು ಪಾಂಡವರ ನಾಶಕ್ಕಾಗಿ ಕಟ್ಟಿದ್ದರಿಂದ ಅದು "ಅಶಿವ" ವಾಗಿದ್ದರೂ ಅದಕ್ಕೆ "ಶಿವ" ಎಂಬ ಹೆಸರನ್ನಿಟ್ಟಿದ್ದರು. ಪಾಂಡವರು ಕುಂತಿಯೊಡನೆ ಹೊಸಮನೆಯನ್ನು ಪ್ರವೇಶಿಸಿ, ಅಲ್ಲಿ ಸುಖದಿಂದ ಇರತೊಡಗಿದರು. ಪುರೋಚನನು ಯಾವ ಕೊರತೆಯೂ ಉಂಟಾಗದಂತೆ ದಕ್ಷತೆಯಿಂದ ನೋಡಿಕೊಳ್ಳುತ್ತಿದ್ದನು. ಯುಧಿಷ್ಠಿರನು ಆ ಹೊಸಮನೆಯನ್ನು ಪರೀಕ್ಷಿಸಿ, ಅದು ಜ್ವಾಲಾಗ್ರಾಹಿಪದಾರ್ಥಗಳಿಂದ ನಿರ್ಮಿಸಿದ್ದೇ ನಿಜವೆಂದು ನಿಶ್ಚಯಿಸಿ ಭೀಮನನ್ನು ಕುರಿತು—

ಯುಧಿಷ್ಠಿರ—ಭೀಮಾ, ಈ ಮನೆಯು ನಮ್ಮನ್ನು ನಾಶಗೊಳಿಸಬೇಕೆಂದು ಅರಗು ಮೊದಲಾದ ಜ್ವಾಲಾಗ್ರಾಹಿ ಪದಾರ್ಥಗಳಿಂದ ಕಟ್ಟಿಸಿದ್ದಾಗಿರುವದು ; ಆದ್ದರಿಂದ ಇಲ್ಲಿ ನಾವು ಬಹುಎಚ್ಚರದಿಂದ ವಾಸಿಸತಕ್ಕದ್ದು. ಈ ಸಂಗತಿಯು ವಿದುರನಿಂದ ನಮಗೆ ಗೊತ್ತಾಗಿರದಿದ್ದರೆ, ನಾವು ಪೂರಾ ಮೋಸಹೋಗಬಹುದಾಗಿತ್ತು.

ಭೀಮ—ಅಣ್ಣಾ, ಹೀಗಿದ್ದರೆ ನಾವು ಮೊದಲು ಇದ್ದ ಮನೆಯಲ್ಲಿಯೇ ಇದ್ದುಬಿಡೋಣ. ಬೇಕಂತ ಈ ಘಾತಕಮನೆಯಲ್ಲಿ ಯಾಕೆ ಇರಬೇಕು ?

ಯುಧಿಷ್ಠಿರ—ಭೀಮಾ, ನಾವು ಹಾಗೆಮಾಡಿದರೆ ಪುರೋಚನನು ಬಲಾತ್ಕಾರದಿಂದ ನಮ್ಮನ್ನು ಸುಟ್ಟುಬಿಡಬಹುದು ; ಆದ್ದರಿಂದ, ಶಮದಮಾದಿಗಳಲ್ಲಿ ತತ್ಪರನಾಗಿರುವ ಜ್ಞಾನಿಯು, ದೇಹದ ಆಕೃತಿವಿಶೇಷವನ್ನು ಲಕ್ಷಿಸದೆ ಮೋಕ್ಷಚಿಂತನಮಾಡುತ್ತ ಇರುವಂತೆ, ನಾವಾದರೂ ಆತ್ಮಸಂಯಮನದಿಂದ ನಮ್ಮ ಭಾವವನ್ನು ಅನ್ಯರಿಗೆ ತಿಳಿಯಗೊಡದೆ, ಇಲ್ಲಿಂದಪಾರಾಗುವ ವಿಚಾರಮಾಡುತ್ತ ಇದೇಮನೆಯಲ್ಲಿರುವದು ನೆಟ್ಟಗೆಕಾಣುತ್ತದೆ. ಪುರೋಚನನು ಮಹಾದುಷ್ಟನು ; ದುರ್ಯೋಧನನ ಪಕ್ಷಪಾತಿಯು ; ಧರ್ಮಾಧರ್ಮಗಳನ್ನು ಲೆಕ್ಕಿಸದವನು ; ಆತನು ಏನುಮಾಡಲಿಕ್ಕೂ ಹಿಂದುಮುಂದು ನೋಡಲಿಕ್ಕಿಲ್ಲ. ನಾವು ಈ ಮನೆಯಲ್ಲಿ ಸುಟ್ಟುಹೋಗಬಾರದು ; ಇಲ್ಲಿಂದ ಓಡಿಯೂ ಹೋಗಬಾರದು ; ಯುಕ್ತಿಯಿಂದ ನಾವೇ ಮನೆಗೆ

ಬೆಂಕಿಯನ್ನು ಹಚ್ಚಿ "ಪಾಂಡವರು ಸುಟ್ಟುಹೋದರು" ಎಂಬ ಭಾವ ವನ್ನು ಜನರಲ್ಲಿ ಉತ್ಪನ್ನಮಾಡಬೇಕು ; ಯಾಕಂದರೆ ನಾವು ಇಲ್ಲಿ ನಿಜವಾ ಗಿಯೇ ಸುಟ್ಟುಹೋದರೆ, ಭೀಷ್ಮಾದಿ ಕೌರವರು ವ್ಯರ್ಥ ಕೋಪಸಂತಪ್ತ ರಾಗುವರು ; ಅವರ ಸಿಟ್ಟಿನಿಂದ ಸತ್ತುಹೋದ ನಮಗೇನೂ ಪ್ರಯೋಜನ ವಾಗುವದಿಲ್ಲ. ಇನ್ನು ನಾವು ಓಡಿಹೋದರೆ, ದುರ್ಯೋಧನನುಗುಪ್ತಚಾರರ ಮುಖಾಂತರ ನಮ್ಮ ಗೊತ್ತುಹಚ್ಚಿ, ಅಸಹಾಯರಾದ ನಮ್ಮನ್ನು ನಾಶ ಗೊಳಿಸುವನು. ಆತನಿಗೆ ಜನಸಹಾಯವಿರುವದು ; ದ್ರವ್ಯಭಂಡಾರವು ಆತನ ವಶದಲ್ಲಿರುವದು ; ಆದ್ದರಿಂದ ನಾವು ಸಾಯಲೂಬಾರದು, ಓಡಿ ಹೋಗಲೂಬಾರದು. ಒಂದು ಗುಪ್ತಮಾರ್ಗವನ್ನುಮಾಡಿ ಈ ಮನೆಗೆ ಬೆಂಕಿಹಚ್ಚಿ ಆದ್ವಾರದಿಂದ ನಾವು ಪಾರಾಗಿ ಹೋಗೋಣ.

**೧೪೭, ೧೪೮ನೇ ಅಧ್ಯಾಯಗಳು — ಜತುಗೃಹದಹನ**—ಈ ಮೇರೆಗೆ ಯುಧಿಷ್ಠಿರನು ಭೀಮನೊಡನೆ ಆಲೋಚಿಸುತ್ತಿರಲು, ವಿದುರನ ಮಿತ್ರನಾದ ಖನಕನು ಪಾಂಡವರನ್ನು ಏಕಾಂತದಲ್ಲಿ ಕಂಡು—"ಪಾಂ ಡವರೇ, ನಿಮಗೆ ಹಿತಮಾಡುವದಕ್ಕಾಗಿ ವಿದುರನು ನನ್ನನ್ನು ನಿಮ್ಮ ಬಳಿಗೆ ಕಳಿಸಿರುವನು. ತೋಡುವ ಕೆಲಸದಲ್ಲಿ ನಾನು ಪ್ರವೀಣನಿರುತ್ತೇನೆ. ಬರುವ ಕೃಷ್ಣ ಚತುರ್ದಶಿಯ ದಿವಸ ಪುರೋಚನನು ನಿಮ್ಮನ್ನು ಸುಡಲು ನಿಶ್ಚಯಿಸಿರುವನು ಮ್ಲೇಂಛಭಾಷೆಯಲ್ಲಿ ವಿದುರನು ನಿನಗೆ ಎಲ್ಲಸಂಗತಿ ಯನ್ನು ಹೇಳಿರುವನಂತೆ," ಅನ್ನಲು ಯುಧಿಷ್ಠಿರನು—"ಎಲೈ ಸತ್ವಸ್ಥನೇ, ನೀನು ವಿದುರನ ಪರಮಮಿತ್ರನಿರುವೆಯೆಂಬದನ್ನು ನಾನು ಬಲ್ಲೆನು. ನಿನ್ನ ಸಹಾಯದಿಂದಲೇ ಈ ಅರಗಿನಮನೆಯಿಂದ ನಾವು ಪಾರಾದರೆ ಆಗಬೇಕು. ಸಮ್ಮದ್ಧ ಶಸ್ತ್ರಾಗಾರದಂತೆ ಇದ್ದ ಈ ವಿಸ್ತೃತ ಲಾಕ್ಷಾಗೃಹವನ್ನು ನೋಟಿ ದೆಯಾ ? ಇದರ ಸುತ್ತುಮುತ್ತು ಭದ್ರವಾದ ಗೋಡೆಗಳಿರುವದರಿಂದ ಪಾರಾಗಿ ಹೋಗಲಿಕ್ಕೆ ಹಾದಿಯೇ ಇಲ್ಲ. ಆದ್ದರಿಂದ ನೀನು ಗುಪ್ತಮಾ ರ್ಗವನ್ನು ಮಾಡಿ ನಮ್ಮನ್ನು ಈ ಸಂಕಟದಿಂದ ಮುಕ್ತಮಾಡು," ಎಂದು ಹೇಳಿದನು. ಬಳಿಕ ಆ ಖನಕನು ಗೋಡೆಯ ಹೊರಭಾಗದಲ್ಲಿರುವ ಕಂದ ಕವನ್ನು ಸರಿಯಾಗಿ ಮಾಡುವೆನೆಂದು ಪುರೋಚನನಿಗೆ ಹೇಳಿ, ಮಂದಿರದ ಮಧ್ಯದಿಂದ ಕಂದಕದ ಹೊರಮಗ್ಗಲವರೆಗೆ ಒಂದು ಗುಪ್ತಮಾರ್ಗವನ್ನು

ಯಾರಿಗೂ ಗೊತ್ತಾಗದಂತೆ ಮಾಡಿದನು. ಅದರ ಎರಡೂ ಬಾಯಿಗಳು ಮಂದಿಗೆ ಗೊತ್ತಾಗದಂತೆ ಚಾತುರ್ಯದ ರಚನೆಮಾಡಿದ್ದನು. ಜನಮೇಜಯಾ, ಪಾಂಡವರು ತಮ್ಮ ಆಯುಧಗಳೊಡನೆ ರಾತ್ರಿ ಆ ಮನೆಯಲ್ಲಿ ವಾಸಿಸಿ, ಹಗಲು ಬೇಟೆಯಾಡುತ್ತ ಅರಣ್ಯದಲ್ಲಿ ಸಂಚರಿಸುತ್ತಿದ್ದರು. ಪುರೋಚನನನ್ನು ಮೋಸಗೊಳಿಸುವದಕ್ಕಾಗಿ, ತಾವು ನಿಶ್ಶಂಕರೂ, ವಿಶ್ವಾಸಿಕರೂ, ಸಂತುಷ್ಟರೂ ಇರುವೆವೆಂದು ಆತನಿಗೆ ಅವರು ತೋರಿಸುತ್ತಿದ್ದರು.

ಹೀಗೆ ಪಾಂಡವರು ಕಾಲಕ್ರಮಣಮಾಡುತ್ತ, ಒಂದು ವರ್ಷ ಆ ಅರಗಿನಮನೆಯಲ್ಲಿ ಆನಂದದಿಂದ ವಾಸಿಸಿದರು. ಪಾಂಡವರು ತನ್ನಮೇಲೆ ಪೂರ್ಣವಿಶ್ವಾಸವಿಟ್ಟಿರುವರೆಂದು ಪುರೋಚನನಿಗೆ ಆನಂದವಾಯಿತು. ಹೀಗೆ ಪುರೋಚನನು ಪೂರಾ ಮೋಸಹೋಗಿರುವದನ್ನರಿತು ಯುಧಿಷ್ಠಿರನು, "ಈ ಮನೆಯಿಂದ ಪಾರಾಗಿ ಹೋಗಲಿಕ್ಕೆ ಇದೇ ತಕ್ಕಸಮಯವೆಂ"ದು ಯೋಚಿಸಿ, ಅದಕ್ಕೆ ತಕ್ಕ ಹಂಚಿಕೆಯನ್ನು ಹೂಡಿದನು. ಒಂದುದಿನ ಕುಂತಿಯು ದಾನಧರ್ಮಮಾಡುವ ನೆವದಿಂದ ರಾತ್ರಿ ಬ್ರಾಹ್ಮಣಭೋಜನ ಮಾಡಿಸಿದಳು. ಆಗ ಎಷ್ಟೋಜನ ಮುತ್ತೈದೆಯರೂ ಊಟಕ್ಕೆ ಬಂದಿದ್ದರು. ಊಟವಾಗಿ ಕೆಲಹೊತ್ತು ವಿಶ್ರಾಂತಿಹೊಂದಿದಬಳಿಕ ಎಲ್ಲರೂ ತಮ್ಮತಮ್ಮ ಮನೆಗೆ ಹೋದರು. ಅನ್ನದ ಆಶೆಯಿಂದ ಒಬ್ಬ ಭಿಲ್ಲರಾಕೆಯು ತನ್ನ ಐವರು ಗಂಡುಮಕ್ಕಳೊಡನೆ ಅಕಸ್ಮಾತ್ ಅಲ್ಲಿಗೆ ಬಂದು, ಸೆರೆ ಕುಡಿದು ಆ ಅರಗಿನ ಮನೆಯಲ್ಲಿಯೇ ಸತ್ತಹಾಗೆ ಮಕ್ಕಳೊಡನೆ ಬಿದ್ದುಕೊಂಡಳು. ರಾತ್ರಿ ಪುರೋಚನನು ಸ್ವಸ್ಥನಿದ್ರೆಮಾಡುತ್ತಿದ್ದನು. ಆಗ ಧರ್ಮರಾಜನ ಪ್ರೇರಣೆಯಿಂದ ಭೀಮಸೇನನು ಪುರೋಚನನು ಮಲಗಿದ್ದ ಸ್ಥಳದಲ್ಲಿಯೇ ಮನೆಗೆ ಬೆಂಕಿಯನ್ನು ಹಚ್ಚಿ, ಮನೆಯ ಬೇರೆಬೇರೆ ಸ್ಥಳಗಳಿಗೂ ಬೆಂಕಿಯನ್ನು ಮುಟ್ಟಿಸಿ, ತಾಯಿಯನ್ನೂ, ಅಣ್ಣತಮ್ಮಂದಿರನ್ನೂ ಕರಕೊಂಡು ಗುಪ್ತಮಾರ್ಗದಿಂದ ಸುರಕ್ಷಿತವಾಗಿ ಹೊರಬಿದ್ದು, ವಾಯುವೇಗದಿಂದ ಹೊರಟುಹೋದನು. ಆಗ ಆ ಸಮರ್ಥ ಭೀಮನು ತಾಯಿಯನ್ನು ಹೆಗಲಮೇಲೆ ಕುಳ್ಳಿರಿಸಿಕೊಂಡಿದ್ದನು ; ನಕುಲ ಸಹದೇವರನ್ನು ಬಗಲಲ್ಲಿ ಎತ್ತಿಕೊಂಡಿದ್ದನು ; ಧರ್ಮಾರ್ಜುನರ ಕೈಗಳನ್ನು ಹಿಡಕೊಂಡಿದ್ದನು.

**೧೪೯, ೧೫೦ನೇ ಅಧ್ಯಾಯಗಳು–ಗಂಗೋತ್ತರಣವೂ, ಪಾಂಡವರ ಉತ್ತರ ಕಾರ್ಯವೂ**—ಈ ಮೇರೆಗೆ ಭೀಮನು ತಾಯಿಯನ್ನೂ, ಅಣ್ಣತಮ್ಮಂದಿರನ್ನೂ ಕರಕೊಂಡು ಗಂಗಾತೀರಕ್ಕೆ ಬಂದನು. ಆಗ ಪಾಂಡವರು ನೀರು ಎಷ್ಟು ಇರಬಹುದೆಂದು ಹೊಳೆಯನ್ನು ನೋಡುತ್ತಲಿದ್ದರು. ಅಷ್ಟರಲ್ಲಿ ವಿದುರನು ಕಳಿಸಿದ ಭದ್ರವಾದ ನಾವು ಅಲ್ಲಿಗೆ ಬಂದಿತು. ನಾವಿಕರ ಮುಖ್ಯಸ್ಥನು ತನ್ನನ್ನು ವಿದುರನು ಕಳಿಸಿದನೆಂದು ಧರ್ಮರಾಜನಿಗೆ ಹೇಳಿ, ಆತನಿಗೆ ನಂಬಿಗೆಯಾಗುವದಕ್ಕಾಗಿ—

"ಕಕ್ಷಘ್ನಃ ಶಿಶಿರಘ್ನಶ್ಚ ಮಹಾಕಕ್ಷೇಬಿಲೌಕಸಃ |
ನಹಂತೀತ್ಯೇವಮಾತ್ಮಾನಂ ಯೋರಕ್ಷತಿ ಸಜೀವತೀ ||"

ಎಂಬ ಈ ವಾಕ್ಯವನ್ನು ಹೇಳಿದನು. ಇದೇ ವಾಕ್ಯವನ್ನು ಹಿಂದಕ್ಕೆ ವಿದುರನು ಯವನಭಾಷೆಯಿಂದ ಯುಧಿಷ್ಠಿರನಿಗೆ ಹೇಳಿದ್ದರಿಂದ, ನೌಕೆಯ ವಿಷಯದಲ್ಲಿ ಯುಧಿಷ್ಠಿರನು ಸಂಶಯರಹಿತನಾದನು. ಬಳಿಕ ಪಾಂಡವರು ಆ ನೌಕೆಯಲ್ಲಿ ಕುಳಿತು ಸುರಕ್ಷಿತ ಗಂಗೆಯನ್ನು ದಾಟಿ ಆಚೆಯ ದಂಡೆಗೆ ಮುಟ್ಟಿದರು. ಆಗ ನೌಕೆಯ ಮುಖ್ಯಸ್ಥನು ಯುಧಿಷ್ಠಿರನಿಗೆ—"ಪಾಂಡವರೇ, ವಿದುರನು ಶಿರಾಘ್ರಾಣಪೂರ್ವಕವಾಗಿ ನಿಮ್ಮನ್ನು ಆಲಿಂಗಿಸಿ ನಿಮಗೆ ಮೇಲಿಂದಮೇಲೆ ಹೇಳಿರುವದೇನಂದರೆ—ನೀವು ಬಿಕ್ಕಟ್ಟಿನ ಹಾದಿಯಲ್ಲಿ ಬಹು ಜೋಕೆಯಿಂದ ಹೋಗಬೇಕು. ಯುಧಿಷ್ಠಿರಾ, ನೀನು ಕರ್ಣ, ಶಕುನಿ, ಯಾವತ್ತು ತಮ್ಮಂದಿರಿಂದ ಸಹಿತನಾದ ದುರ್ಯೋಧನ ಇವರನ್ನು ನಿಸ್ಸಂಶಯ ಯುದ್ಧದಲ್ಲಿ ಗೆಲ್ಲುವೆ"

ಹೀಗೆ ಪಾಂಡವರು ಬಹುಕಷ್ಟದಿಂದ ದಕ್ಷಿಣದಿಕ್ಕು ಹಿಡಿದು ಅರಣ್ಯದಲ್ಲಿ ಹಾದಿಯನ್ನು ನಡೆದು ಹೋಗುತ್ತಿರುವಾಗ, ಅವರು ಬಹಳವಾಗಿ ದಣಿದರು ; ನೀರಡಿಕೆಯಿಂದ ಕಂಗಾಲಾದರು ; ಕಣ್ಣುಗಳು ಕತ್ತಲೆಗೂಡಿಸಿ ಅವರಿಗೆ ಏನೂ ಕಾಣದಹಾಗಾಯಿತು. ಆಗ ಅವರು ಮಹಾಸಮರ್ಥನಾದ ಭೀಮನನ್ನು ಕುರಿತು—"ಅಪ್ಪಾ, ಭೀಮಾ, ಇನ್ನು ಮಾತ್ರ ಒಳ್ಳೆಯ ಕಠಿಣಪ್ರಸಂಗವು ಒದಗಿತು. ಕತ್ತಲಲ್ಲಿ ಹಾದಿ ಕಾಣಲೊಲ್ಲದು. ದಿಕ್ಕುಗಳೂ ತಿಳಿಯದಾದವು. ನಡೆಯುವ ತ್ರಾಣವಿಲ್ಲ. ಆ ದುಷ್ಟಪುರೋಚನನು ಸತ್ತನೋ ಇಲ್ಲವೋ ಎಂಬದೂ ನಂಬಿಗೆಯಿಂದ ಗೊತ್ತಾಗಲಿಲ್ಲ.

ಅಂದಬಳಿಕ ಈ ಸಂಕಟದೊಳಗಿಂದ ನಾವು ಗುಪ್ತರೀತಿಯಿಂದ ಹೇಗೆ ಪಾರಾಗಬೇಕು? ಆದ್ದರಿಂದ ಭೀಮಸೇನಾ, ಹಿಂದಕ್ಕೆ ನೀನು ನಮ್ಮನ್ನು ಕರಕೊಂಡು ಬಂದಂತೆ ಈಗಲೂ ಕರಕೊಂಡು ನಡೆ; ಯಾಕಂದರೆ, ದಣಿವು ಮೊದಲಾದವೇನೂ ಇಲ್ಲದೆ ನಡೆಯಲಿಕ್ಕೆ ಸಮರ್ಥನಾದವನು, ನಮ್ಮಲ್ಲಿ ನೀನೊಬ್ಬನೇ ಇರುತ್ತೀ'' ಅನ್ನಲು, ಭೀಮನು ತಾಯಿಯನ್ನೂ, ಅಣ್ಣ ತಮ್ಮಂದಿರನ್ನೂ ಕರಕೊಂಡು ಅರಣ್ಯದಲ್ಲಿ ನೇಗದಿಂದ ಸಾಗತೊಡಗಿದನು.

ಇತ್ತ ಅರಗಿನಮನೆಯು ಸುಡುವಾಗ ಆಗುವ ಭಯಂಕರ ಶಬ್ದದಿಂದ ವಾರಣಾವತದ ಜನರು ಎಚ್ಚತ್ತು, ಆ ಮನೆಯ ಸುತ್ತುಮುತ್ತು ನೆರೆದು ಪಾಂಡವರನ್ನು ನೆನಿಸಿ ಬಗೆಬಗೆಯಾಗಿ ಪ್ರಲಾಪಿಸಿದರು; ಧೃತರಾಷ್ಟ್ರ-ದುರ್ಯೋಧನಾದಿಗಳನ್ನು ಬಾಯಿಗೆ ಬಂದಂತೆ ಹಳಿದರು; ಭೀಷ್ಮ-ದ್ರೋಣ-ಕೃಪಾದಿಗಳ ಅನ್ಯಾಯಕ್ಕಾಗಿ ಅವರನ್ನು ನಿಂದಿಸಿದರು. ಅವರು ಬೆಂಕಿಯನ್ನು ಆರಿಸಿ ಪಾಂಡವರನ್ನು ಹುಡುಕುತ್ತಿರಲು, ಭಿಲ್ಲರಾಕೆಯು ತನ್ನ ಐವರು ಮಕ್ಕಳೊಡನೆ ಸುಟ್ಟಿರುವದನ್ನು ನೋಡಿ, ಪಾಂಡವರು ಕುಂತಿಯಿಂದ ಸಹಿತವಾಗಿ ಸುಟ್ಟುಹೋದರೆಂದು ಅವರು ಮರುಗಿದರು. ಈ ಗದ್ದಲದಲ್ಲಿ ಖನಕನು ಬಿಲದ ಬಾಯಿಯನ್ನು ಯಾರಿಗೂ ಗೊತ್ತಾಗದಂತೆ ಮಣ್ಣಿನಿಂದ ಮುಚ್ಚಿಬಿಟ್ಟನು. ಪುರೋಚನನ ಮರಣದಿಂದ ಪುರಜನರಿಗೆ ಸಮಾಧಾನವಾಯಿತು. ದುಷ್ಟನು ತನ್ನ ಕರ್ಮದ ಫಲವನ್ನು ಭೋಗಿಸಿದನೆಂದು ಅವರು ನುಡಿದರು. ಬಳಿಕ ಅವರು ಧೃತರಾಷ್ಟ್ರನಿಗೆ ಪಾಂಡವರ ಮರಣವಾರ್ತೆಯನ್ನು ತಿಳಿಸಲು, ಆತನೂ, ಉಳಿದ ಕೌರವರೂ, ಪುರಜನರೂ ದುಃಖಿಸಿದರು. ವಿದುರನಿಗೆ ನಿಜವಾದ ಸಂಗತಿಯು ಗೊತ್ತಿದ್ದರೂ ಆತನೂ ಎಲ್ಲರೊಡನೆ ದುಃಖಿಸಿದನು. ಧೃತರಾಷ್ಟ್ರಾದಿ ಕೌರವರು, ಪಾಂಡವ-ಕುಂತಿಯವರಿಗಾಗಿ ತಿಲಾಂಜಲಿಗಳನ್ನು ಕೊಟ್ಟರು. ರಾಜವೈಭವಕ್ಕೆ ತಕ್ಕಂತೆ ಸತ್ತವರ ಉತ್ತರಕ್ರಿಯೆಗಳು ಮಾಡಲ್ಪಟ್ಟವು.

**೧೫೧ನೆಯ ಅಧ್ಯಾಯ—ಭೀಮನಉದ್ವೇಗ**— ಮೇಲೆ ಹೇಳಿದಂತೆ ಭೀಮನು ತಾಯಿಯನ್ನು ಹೆಗಲಮೇಲೆ ಕುಳ್ಳಿರಿಸಿಕೊಂಡು, ನಕುಲ ಸಹದೇವರನ್ನು ಬಗಲಲ್ಲಿ ಎತ್ತಿಕೊಂಡು, ಧರ್ಮಾರ್ಜುನರ ಕೈಹಿಡಕೊಂಡು ವಾಯುವಿನಂತೆ, ಗರುಡನಂತೆ ಮಹಾವೇಗದಿಂದ ಸಾಗಿರುವಾಗ,

ಕುಂತಿ ಮೊದಲಾದವರಿಗೆ ಮೂರ್ಛೆಬಂದಂತಾಯಿತು. ಅವರು ಕಣ್ಣು ಮುಚ್ಚಿಕೊಂಡು ಶ್ರಮದಿಂದ ಕಂಗಾಲಾಗಿರಲು, ಸಾಯಂಕಾಲದಲ್ಲಿ ಭೀಮನು ಒಂದು ಅರಣ್ಯವನ್ನು ಹೊಕ್ಕನು. ಆ ಅರಣ್ಯದಲ್ಲಿ ಫಲಪುಷ್ಪಗಳಿದ್ದಿಲ್ಲ; ನೀರು ಸಿಗುವದೂ ಕಷ್ಟವಾಗಿತ್ತು; ಕ್ರೂರಪಕ್ಷಿಗಳೂ, ಹಿಂಸ್ರಶ್ವಾಪದಗಳೂ ಅಲ್ಲಿವಾಸಿಸುತ್ತಿದ್ದವು. ಹೊತ್ತುಮುಣುಗಿದ್ದರಿಂದ ನಾಲ್ಕೂ ಕಡೆಗೆ ಕತ್ತಲೆ ಮುಸುಕಿತು. ಅಲ್ಲಿಯ ವೃಕ್ಷಗಳೆಂದರೆ ಗಿಡಗಂಟೆಗಳು, ಅವೂ ಎಲೆಯುದರಿ ಬರಲಾಗಿದ್ದವು. ಪಾಂಡವರಿಂದ ಮುಂದಕ್ಕೆ ಹೆಜ್ಜೆಯಿಡುವದೂ ಆಗಲೊಲ್ಲದು. ಕುಂತಿಗೆ ನೀರಡಿಕೆಯು ಬಹಳವಾಯಿತು. ಅವರು ಮುಂದಕ್ಕೆ ಹೋಗಲಾರದೆ ಅಲ್ಲಿಯೇ ವಿಶ್ರಾಂತಿಯನ್ನು ಹೊಂದಹತ್ತಿದರು. ಆಗ ಕುಂತಿಯು ಕಳವಳಗೊಂಡು—"ಪಂಚಪಾಂಡವರ ತಾಯಿಯು ನಾನು, ಮಕ್ಕಳು ಸುತ್ತುಮುತ್ತು ಇರುತ್ತಿರುವಾಗ ಗುಟುಕುನೀರು ಸಿಗಲೊಲ್ಲವಲ್ಲ!" ಎಂದು ನುಡಿದಳು. ಅದನ್ನು ಕೇಳಿ ಮಾತೃಭಕ್ತನಾದ ಭೀಮನಿಗೆ ಬಹಳ ವ್ಯಥೆಯಾಯಿತು! ಕೂಡಲೆ ಆತನು ಎಲ್ಲರನ್ನು ಕರಕೊಂಡು ಮುಂದಕ್ಕೆ ಸಾಗಿಹೋಗುತ್ತಿರಲು, ಒಂದು ವಿಶಾಲವಾದ ಆಲದ ಗಿಡವು ಆತನಕಣ್ಣಿಗೆ ಬಿದ್ದಿತು. ಆಗ ಆತನು ಅವರನ್ನು ಅದರ ಬುಡದಲ್ಲಿ ಕುಳ್ಳಿರಿಸಿ—"ನೀವು ಇಲ್ಲಿಯೇ ಸ್ವಲ್ಪ ವಿಶ್ರಮಿಸಿರಿ; ನಾನು ಈಗ ನೀರುತರುವೆನು." ಎಂದು ಹೇಳಲು, ಧರ್ಮರಾಜನು ಅದಕ್ಕೆ ಸಮ್ಮತಿಸಿದನು.

ಜನಮೇಜಯಾ, ಧರ್ಮರಾಜನ ಅಪ್ಪಣೆಯಂತೆ ಭೀಮಸೇನನು ಸಾರಸಪಕ್ಷಿಗಳ ಧ್ವನಿಯು ಕೇಳಬರುವ ದಿಕ್ಕಿಗೆ ನೀರು ತರುವದಕ್ಕಾಗಿ ಹೊರಟನು. ಆತನು ಎರಡುಹರದಾರಿ ಕ್ರಮಿಸಿಹೋಗಲು, ಒಂದು ಸರೋವರವು ಆತನಕಣ್ಣಿಗೆ ಬಿದ್ದಿತು. ಅಲ್ಲಿ ಆತನು ಸ್ನಾನಮಾಡಿ, ಯಥೇಚ್ಛ ನೀರುಕುಡಿದು, ತಾಯಿ–ಬಂಧುಗಳ ಸಲುವಾಗಿ ಉತ್ತರೀಯವನ್ನು ಎದ್ದಿಕೊಂಡು ಎರಡುಹರದಾರಿಯಿಂದ ನೀರು ತಕ್ಕೊಂಡುಬಂದನು. ಆಗ ಆಲದಮರದ ಬುಡದಲ್ಲಿ ತನ್ನ ತಾಯಿಯೂ, ಅಣ್ಣತಮ್ಮಂದಿರೂ ನೆಲದಮೇಲೆಯೇ ಮಲಗಿಕೊಂಡು ನಿದ್ದೆಮಾಡುತ್ತಿರುವದನ್ನು ನೋಡಿ, ಆತನಿಗೆ ಬಹಳ ದುಃಖವಾಯಿತು. ಈ ಅನರ್ಥಕ್ಕೆಲ್ಲ ಕುಲಕಲಂಕನಾದ

ಧೃತರಾಷ್ಟ್ರನೂ, ಆತನಮಕ್ಕಳೂ ಕಾರಣರಾವರೆಂದು ಆತನು ಸಂತಾಪ ದಿಂದ ಅವರಮೇಲೆ ಹಲ್ಲುಕಡಿದನು. ಆತನು ಸಿಟ್ಟಿನಭರದಿಂದ ತನ್ನೊಳಗೆ–“ಕುಲಕಲಂಕರಾದ ಅಣ್ಣತಮ್ಮಂದಿರಿರದವನ ಆಯುಷ್ಯವು ಸುಖ ಮಯವಾಗಿರಬಹುದು ; ಅಥವಾ ಪರಸ್ಪರ ಅನುಕೂಲವಾಗಿರುವ ಧರ್ಮಿಷ್ಠ ಅಣ್ಣತಮ್ಮಂದಿರು, ಸಮರ್ಥರೂ, ಐಶ್ವರ್ಯವಂತರೂ ಆಗಿ ಬಾಳಬಹುದು ; ಆದರೆ ದುಷ್ಟರಾದ ಧೃತರಾಷ್ಟ್ರನ ಮಕ್ಕಳಂತಹ ಬಂಧುಗಳಿಂದ ಸರ್ವಥಾ ಸುಖವಾಗದು. ದುಷ್ಟಾ, ಧೃತರಾಷ್ಟ್ರಾ, ಈಗ ನಿನ್ನ ಬಯಕೆಯು ಪೂರ್ಣವಾಯಿತೇ? ಎಲಾ, ನಿಜವಾಗಿಯೇ ನಿನ್ನಮೇಲೆ ದೇವರು ಪ್ರಸನ್ನನಾಗಿರುವದರಿಂದ, ಧರ್ಮರಾಜನು ನಿನ್ನನ್ನು ಕೊಲ್ಲಲಿಕ್ಕೆ ನನಗೆ ಅಪ್ಪಣೆಕೊಡಲೊಲ್ಲನು ; ಅಂತೇ, ಇನ್ನೂ ನೀನು ಬದುಕಿರುವೆ! ಈಗಿನ ಸಂತಾಪದ ಭರದಲ್ಲಿ ಹೀಗೆಯೇ ಹಸ್ತಿನಾವತಿಗೆಹೋಗಿ ನಿನ್ನನ್ನು, ನಿನ್ನ ಮಕ್ಕಳನ್ನು, ಶಕುನಿ–ಕರ್ಣ ಮೊದಲಾದವರನ್ನು ಕೊಂದುಬಿಟ್ಟೇನು ; ಆದರೆ ಪಾಪಿಷ್ಠಾ, ಧರ್ಮಮೂರ್ತಿಯಾದ ಪಾಂಡವಶ್ರೇಷ್ಠ ಯುಧಿಷ್ಠಿರನಿಗೆ ನಿನ್ನಮೇಲೆ ಸಿಟ್ಟು ಬರಲೊಲ್ಲದು, ಏನುಮಾಡಬೇಕು ?”

ಈ ಮೇರೆಗೆ ಸಂತಾಪಗೊಂಡು ಭೀಮನು ಕೈಹೊಸೆಯುತ್ತಿರಲು, ಅಗ್ನಿಯು ಬರಬರುತ್ತ ತಾನೇ ಶಾಂತವಾಗುವಂತೆ, ಭೀಮನ ಸಿಟ್ಟು ಕ್ರಮ ಕ್ರಮವಾಗಿ ಇಳಿದು ಆತನು ಶಾಂತನಾದನು. ಮತ್ತೆ ಆತನು ಮಲಗಿದ ಬಂಧುಗಳಕಡೆಗೆ ನೋಡುತ್ತ—“ಇಲ್ಲಿಂದ ನಗರವು ಸಮೀಪದಲ್ಲಿದ್ದಂತೆ ತೋರುತ್ತದೆ; ಆದ್ದರಿಂದ ನಾವು ಇಲ್ಲಿ ಇರುವದು ಸರಿಯಲ್ಲ; ಆದರೆ ಇವರೆಲ್ಲರೂ ನಿದ್ದೆಮಾಡುತ್ತಿರುವದರಿಂದ, ನಾನು ಎಚ್ಚರಿದ್ದೇ ಕಾಯುವೆನು. ಇವರು ಎಚ್ಚತ್ತಬಳಿಕ ನೀರು ಕುಡಿಯಲಿ,” ಎಂದು ಅಂದುಕೊಂಡು ಭೀಮನು ಬಂಧುಗಳನ್ನು ಕಾಯುತ್ತ ಕುಳಿತುಕೊಂಡನು.



## ಶ್ರೀ ಶೇಷಸದ್ಗುರು-ಸೂಕ್ತಿರೂಪ

# ರಹಸ್ಯಗಳು

**೪೨. ರಾಜಕಾರಣವು ಗೂಢತಂತ್ರಮಯವು**—ರಾಜಕಾರಣವೆಂದರೆ ರಾಜಕೀಯ ವ್ಯವಹಾರವೆಂದು ಸಾಧಾರಣವಾಗಿ ಹೇಳಬಹುದು. ರಾಜನು ಪ್ರಾಮುಖ್ಯವಾಗಿ ತನ್ನ ಪ್ರಜೆಗಳೊಡನೆಯೂ, ಅನ್ಯರಾಜರೊಡನೆಯೂ ವ್ಯವಹರಿಸಬೇಕಾಗುವದು. ಈ ಜಗತ್ತು ತ್ರಿವಿಧವೆಂಬ ಮಾತಂತು ಪ್ರಸಿದ್ಧವಷ್ಟೆ? ಅಂದಬಳಿಕ ಯಾವನೊಬ್ಬ ರಾಜನ ಪ್ರಜೆಗಳಲ್ಲಿ, ಅಥವಾ ಆ ರಾಜನ ನೆರೆರಾಜರಲ್ಲಿ ಸಾತ್ವಿಕರು, ರಾಜಸರು, ತಾಮಸರು ಎಂಬ ಮೂರುವಿಧದ ಜನರು ಪ್ರಾಮುಖ್ಯವಾಗಿ ಇರಬೇಕಾಗುವದು. ಇವರಲ್ಲಿ ಸಾತ್ವಿಕರಾದವರು ಸತ್ಯನಿಷ್ಠರು ಅಥವಾ ಕರ್ತವ್ಯತತ್ಪರರೂ, ರಾಜಸರು ಕಾರ್ಯನಿಷ್ಠರು ಅಥವಾ ಆಶೆಬುರುಕರೂ, ತಾಮಸಿಗಳು ಸೋಮಾರಿಗಳು ಅಥವಾ ಪರಪೀಡಕರೂ ಆಗಿರುವದು ಅವರವರ ಮುಖ್ಯಲಕ್ಷಣಗಳಾಗಿರುತ್ತವೆ. ಇಲ್ಲಿ ಕರ್ತವ್ಯಕ್ಕೂ, ಕಾರ್ಯಕ್ಕೂ ಇರುವ ವೈಲಕ್ಷಣ್ಯವು ನೆನಪಿನಲ್ಲಿಡತಕ್ಕದ್ದಾಗಿದೆ. ಕರ್ತವ್ಯವೆಂದರೆ ಧರ್ಮಸಮ್ಮತ ವ್ಯವಹಾರವು; ಕಾರ್ಯವೆಂದರೆ ಲಾಭದಾಯಕವ್ಯವಹಾರವು. ಧರ್ಮರಾಜನ ಧಾರ್ಮಿಕ ವ್ಯವಹಾರವು ಆತನ ಕರ್ತವ್ಯತತ್ಪರತೆಗೂ, ದುರ್ಯೋಧನನ ಲಾಭೇಚ್ಛೆಯ ಅಧಾರ್ಮಿಕವ್ಯವಹಾರವು ಆತನ ಕಾರ್ಯತತ್ಪರತೆಗೂ ಉದಾಹರಣಗಳಾಗಿರುತ್ತವೆ.

ಹೀಗೆ ಭಿನ್ನಭಿನ್ನಗುಣಗಳ ಹಾಗು ಭಿನ್ನ ಭಿನ್ನ ಸ್ವಭಾವಗಳ ತನ್ನ ಪ್ರಜೆಗಳಮೇಲೆಯೂ, ತನ್ನ ನೆರೆಹೊರೆಯರಾಜರಮೇಲೆಯೂ ರಾಜನು ತನ್ನ ವರ್ಚಸ್ಸನ್ನು ಕೂಡಿಸಿ, ಅವರನ್ನು ರಂಜಿಸುವವನಾಗಬೇಕಾದರೆ, ಆತನು ತನ್ನ ರಾಜಕೀಯ ವ್ಯವಹಾರಗಳನ್ನು ಕುರಿತು, ನಂಬಿಗೆಯ ಯೋಗ್ಯಮಂತ್ರಿಗಳೊಡನೆ ಬಹು ಗೂಢವಾಗಿ ವಿಚಾರಿಸಿ, ಆ ವಿಚಾರಗಳನ್ನು ಗೂಢವಾಗಿಯೇ ಇಟ್ಟು, ಕಾರ್ಯತಃ ಅವನ್ನು ಎರಡನೆಯವರಿಗೆ ತಿಳಿಸಬೇಕಾಗುತ್ತದೆ ಹಾಗೆ ಮಾಡದೆ, ಕಾರ್ಯವಾಗುವದಕ್ಕಿಂತಮೊದಲೆ, ಅವನ್ನು ಜನರಲ್ಲಿ ಪ್ರಸಿದ್ಧಿಸಿಬಿಟ್ಟರೆ, ರಾಜಕೀಯ

ವ್ಯವಹಾರವು ಹಸಗೆಡುವ ಸಂಭವವಿರುತ್ತದೆ. ಇದೇ ಕಾರಣದಿಂದಲೇ ಈ ಉಪಪರ್ವದಲ್ಲಿ ಕುಟಿಲತಂತ್ರದ ಅಧರ್ಮಿಷ್ಠ ಧೃತರಾಷ್ಟ್ರ-ದುರ್ಯೋಧನರು, ತಮ್ಮ ಕುಟಿಲಮಂತ್ರಿಗಳಾದ ಕಣಿಕ-ಕರ್ಣಾದಿಗಳೊಡನೆಯೂ, ಸರಳತಂತ್ರದ ಧರ್ಮಿಷ್ಠ ಯುಧಿಷ್ಠಿರನು, ತನ್ನ ಸರಳಮಂತ್ರಿಗಳಾದ ವಿದುರ-ಭೀಮಾದಿಗಳೊಡನೆಯೂ ತಮ್ಮ ತಮ್ಮ ರಾಜಕಾರಣಗಳನ್ನು ಕುರಿತು ಗೂಢವಾಗಿಯೇ ಆಲೋಚಿಸಿ, ಅವನ್ನು ಕಾರ್ಯತಃ ಪ್ರಸಿದ್ಧಪಡಿಸಿದರೆಂಬ ಮಾತು ಅರಗಿನಮನೆಯ ಪ್ರಕರಣದಿಂದ ಮನಸ್ಸಿನಲ್ಲಿ ಬರಬಹುದು. ಒಟ್ಟಿಗೆ, ಅರಸನು ಧರ್ಮಿಷ್ಠನಿರಲಿ, ಅಧರ್ಮಿಷ್ಠನಿರಲಿ ಅವನ ರಾಜಕೀಯವ್ಯವಹಾರಗಳು ಗೂಢವಾಗಿಯೇ ಇರಬೇಕಾಗುವದೆಂಬದು ಸಿದ್ಧಾಂತವು.

ಆದರೆ ಈ ಸಿದ್ಧಾಂತಕ್ಕೆ ವಿರುದ್ಧವಾಗಿ ಕೆಲವು ರಾಜಕಾರಣವರಿಯದವರು ರಾಜಕಾರಣನಡಿಸಹೋಗಿ, ತಮ್ಮ ವಿಚಾರಗಳನ್ನೂ, ಕಾರ್ಯಪದ್ಧತಿಯನ್ನೂ, ಮಾಡಿದ ಕಾರ್ಯವನ್ನೂ ಡಾಣಾಡಂಗುರವಾಗಿ ಪ್ರಸಿದ್ಧಿಸುವದುಂಟು. ಇದರಿಂದ "ಮಂತ್ರಕ್ಕಿಂತ ಉಗುಳು ಹೆಚ್ಚಾಯಿತೆಂಬಂತೆ" ಕಾರ್ಯಕ್ಕಿಂತ ಬಬ್ಬಾಟಗೊಂದಲಗಳು ಮಾತ್ರ ಹೆಚ್ಚಾಗುವವು. ಇಂತಹ ಅದೂರದರ್ಶಿತ್ವದ ಅಪೂರ್ವಪದ್ಧತಿಯಿಂದ ರಾಜಕಾರಣಕ್ಕೆ ಮೂರುಬಗೆಯ ಆಘಾತಗಳೊದಗಿ ರಾಜಕಾರಣವು ನಿಷ್ಫಲವಾಗಲು, ರಾಜಕಾರಣ ಪುರುಷರ ಗೌರವವು ನಷ್ಟವಾಗಿ ಅವರ ಯೋಗ್ಯತಾಹೀನತೆಯು ಮಾತ್ರವ್ಯಕ್ತವಾಗುವ ಸಂಭವವಿರುತ್ತದೆ. ಆ ಮೂರು ಆಘಾತಗಳು ಯಾವವೆಂಬದನ್ನು ಸಂಕ್ಷಿಪ್ತವರ್ಣನದೊಡನೆ ಕೆಳಗೆ ಹೇಳಿರುವೆವು.

**(೧) ವಿರುದ್ಧಪಕ್ಷದವರ ಪ್ರತಿಕ್ರಿಯೆಗೆ ಆಸ್ಪದವುಂಟಾಗುವದು**—ಇದನ್ನು ಹೆಚ್ಚಿಗೆ ವಿವರಿಸುವ ಅವಶ್ಯವೇ ಇಲ್ಲ. ಬೆಕ್ಕು ಇಲಿಯನ್ನು ಜಪ್ಪುಹಾಕಿ ಹಿಡಿಯದೆ, "ನಾನು ಇಂಥ ದಿವಸ ಇಷ್ಟು ಹೊತ್ತಿಗೆ ನಿನ್ನನ್ನು ಹಿಡಿದು ತಿನ್ನುವೆನು" ಎಂದು ಪ್ರಸಿದ್ಧಪಡಿಸಿದರೆ, ಇಲಿಯು ಬೆಕ್ಕಿನ ಕೈಗೆ ಸಿಗದಂತೆ ವ್ಯವಸ್ಥೆಮಾಡಿಕೊಳ್ಳುವದು ಸ್ವಾಭಾವಿಕವು. ಅಂತೇ ವಿದುರನು ಪ್ರತ್ಯಕ್ಷ ಭೀಮಾದಿಗಳಿಗೂ, ಕುಂತಿಗೂ ಕೂಡ ತಿಳಿಯದಂತೆ ಯಾವನೀಭಾಷೆಯಲ್ಲಿ ಧರ್ಮರಾಜನಿಗೆ ಲಾಕ್ಷಾಗೃಹ

ದಿಂದ ಪಾರಾಗುವ ಉಪಾಯವನ್ನು ಹೇಳಿದನು. ಇದರಂತೆ ದುರ್ಬಲ ಇಲಿಯಂತು ತನ್ನ ರಾಜಕಾರಣವನ್ನು ಅತ್ಯಂತಗೂಢವಾಗಿ ಮಾಡಬೇಕಾಗುವದು.

**(೨) ಸ್ವಕೀಯ ದೋಷವು ಬೆಳಕಿಗೆ ಬಂದು ಗೌರವಕ್ಕೆ ಹಾನಿ ತಟ್ಟುವ ಸಂಭವವಿರುವದು**—ಮನುಷ್ಯನೆಂದಬಳಿಕ ಎಂಥವನಿದ್ದರೂ ಆತನಲ್ಲಿ ಕಿಂಚಿಜ್ಞತೆಯು ಸಿದ್ಧವಾದದ್ದೇ. ಅಂದಬಳಿಕ ಎಂತಹ ರಾಜಕಾರಣಪಟುವೇ ಇರಲಿ, ಪ್ರಸಂಗವಶಾತ್ ಆತನ ಆಲೋಚನೆಯು ಸದೋಷವಾಗುವ ಸಂಭವವಿರುತ್ತದೆ ಅಂತಹದನ್ನು ಪ್ರಸಿದ್ಧಮಾಡಿದರೆ ದೋಷವು ಜನರಲ್ಲಿ ಹೊರಬಿದ್ದು, ಅರಸನ ಆಲೋಚನಾಸಾಮರ್ಥ್ಯಕ್ಕೆ ಹೀನತೆಯುಂಟಾಗಿ ಆತನು ಪ್ರಜೆಗಳ ಅಶ್ರದ್ಧೆಗೂ, ಅಪನಂಬಿಗೆಗೂ ಗುರಿಯಾಗಬೇಕಾಗುವದು. ಇನ್ನು ಆ ರಾಜಕಾರಣವು ಗುಪ್ತವಾಗಿದ್ದಲ್ಲಿ, ಪ್ರಸಂಗವಶಾತ್ ಆ ಸದೋಷ ರಾಜಕಾರಣವೇ ಜಯಶೀಲವಾದರೆ ದೋಷವೂ ಗುಣವಾಗಿ ಅರಸನ ಮಂತ್ರಾಲೋಚನಾಸಾಮರ್ಥ್ಯಕ್ಕೆ ಮತ್ತಿಷ್ಟು ಕಳೆಯೇರುವದು.

**(೩) ಅನ್ಯರ ತಪ್ಪು ತಿಳುವಳಿಕೆಗೆ ಆಸ್ಪದವಾಗಿ ಮತಭೇದಗಳುಂಟಾಗಬಹುದು**—ಜಗತ್ತಿನ ಭಿನ್ನರುಚಿಯಮೂಲಕ ಅರಸನ ಯೋಗ್ಯ ಆಲೋಚನೆಯು ಕೂಡ ಸರ್ವಮಾನ್ಯವಾಗದಿರುವ ಸಂಭವವಿರುತ್ತದೆ; ಇಂಥ ಪ್ರಸಂಗಗಳಲ್ಲಿ ಪ್ರಜೆಗಳ ಅಥವಾ ಪ್ರತಿಕಕ್ಷಿಗಳ ತಪ್ಪುತಿಳುವಳಿಕೆಯಿಂದ ಮತಭೇದಗಳುಂಟಾಗಲು, ರಾಜಕಾರಣವು ಕಸುವುಗೆಡುವ ಸಂಭವವಿರುತ್ತದೆ.

ಒಟ್ಟಿಗೆ ಹೇಳುವದೇನಂದರೆ-ಗೂಢರಾಜಕಾರಣದಿಂದ ಕಾರ್ಯಗಳು ಕೈಗೂಡುತ್ತ ಬಂದರೆ, ರಾಜಕಾರಣ ಪುರುಷರ ಆಲೋಚನಾಶಕ್ತಿಯು ವಿಲಕ್ಷಣವಾದದ್ದೆಂಬ ಭಾವನೆಯುಂಟಾಗಿ, ಸ್ವಪಕ್ಷದವರಲ್ಲಿ ನಿಷ್ಠೆಯೂ, ಪರಪಕ್ಷದವರಲ್ಲಿ ಭಯವೂ ಹೆಚ್ಚಿ, ರಾಜಕಾರಣ ಪುರುಷನು ಅವತಾರಿಕರಲ್ಲಿ ಎಣಿಸಲ್ಪಡುವಷ್ಟು ಹೆಚ್ಚಳವನ್ನು ಪಡೆಯಬಹುದು! ಗೂಢರಾಜಕಾರಣದಿಂದ ಒಬ್ಬನು ನೂರುಮಂದಿಯ ಕೆಲಸವನ್ನು ಮಾಡಬಹುದು; ಆದರೆ ವ್ಯಕ್ತರಾಜಕಾರಣದಿಂದ ನೂರುಮಂದಿ ಕೂಡಿಯೂ ಹೆಚ್ಚಿನ ಕೆಲಸವೇನು ಆಗದೆ, ಆ ನೂರುಜನರು ಕಷ್ಟವನ್ನು ಮಾತ್ರ ಅನುಭೋಗಿಸಬಹುದು. ಸಹಾಯ

ಹೀನರಾದ ಪಾಂಡವರು ದೊಡ್ಡ ಸಹಾಯವುಳ್ಳ ಕೌರವರ ಪ್ರಚಂಡಬಲದ ಆಘಾತದಿಂದ ನಾಶವಾಗದೆ, ಸಾಧನಸಂಪನ್ನರಾಗುತ್ತ ಕಡೆಗೆ ಪ್ರತಿಕಕ್ಷಿಗಳಾದ ಕೌರವರ ನಾಶಮಾಡಿ ಸಾಮ್ರಾಜ್ಯವನ್ನು ಪಡೆದದ್ದು, ಗೂಢತಂತ್ರದ ಮಹತ್ವಕ್ಕೆ ಉದಾಹರಣವಾಗಿದೆ. ಇದಕ್ಕೆ ಇತ್ತಿತ್ತಲಾಗಿನ ಐತಿಹಾಸಿಕ ಉದಾಹರಣವೆಂದರೆ, ಮಹಾರಾಷ್ಟ್ರ ರಾಜ್ಯಸ್ಥಾಪಕನಾದ ಶಿವಾಜಿಯದಾಗಿರುತ್ತದೆ. [ಶಿವಾಜಿಯು ಗೂಢತಂತ್ರದಮೂಲಕ ಅಲ್ಪಸಂಖ್ಯಾಕರೂ, ಅಲ್ಪಬಲರೂ ಆದ ಮಾವಳಿಜನರು ಪ್ರಚಂಡಬಲದ ಮುಸಲ್ಮಾನರಿಗೂ ಭಾರಿಯಾದರು.] ಆದ್ದರಿಂದ ರಾಜಕಾರಣವನ್ನು ನಡಿಸುವವರು ದೇಶ-ಕಾಲ-ಪರಿಸ್ಥಿತಿಯನ್ನು ಅನುಸರಿಸುವಾಗೂ "ರಾಜಕಾರಣವು ಗೂಢತಂತ್ರಮಯವೆಂ"ಬ ಸಿದ್ಧಾಂತವನ್ನು ಲಕ್ಷದಲ್ಲಿಡತಕ್ಕದ್ದು.

ಇನ್ನು, ವ್ಯಕ್ತರಾಜಕರಣದಿಂದ ದೇಶದತುಂಬ ಕಾರ್ಯಪ್ರವೃತ್ತಿಯ ತೀವ್ರಪ್ರಸಾರವಾಗುವದೊಂದು ಗುಣವಿರುತ್ತದೆಂದು ತೋರಬಹುದು; ಆದರೆ ಅಧಿಕಾರ ತಾರತಮ್ಯವಿಲ್ಲದೆ ಆದ ಈ ಪ್ರಸಾರವು, ಶಾಶ್ವತಕಾರ್ಯಕಾರಿಯಾಗದೆ, ಹಾಲಿನ ಉಕ್ಕಿನಂತೆ ಕಾಲಾಂತರದಿಂದ ಕುಗ್ಗಿ, ಸ್ವಚ್ಛಂದವೃತ್ತಿಯು ರಾಷ್ಟ್ರದ ವೈಉಣ್ಣಲಿಕ್ಕೆ ಅದು ಎಲ್ಲಿ ಕಾರಣವಾಗುವದೋ ಎಂಬ ಸಂಶಯವು ಉತ್ಪನ್ನವಾಗುವದು!



## ೯ ಹಿಡಿಂಬವಧ ಪರ್ವ

**೧೫೨ನೇ ಅಧ್ಯಾಯ—ಹಿಡಿಂಬಾ-ಭೀಮ ಸಂವಾದ**—ಜನಮೇಜಯಾ, ಪಾಂಡವರು ಮಲಗಿಕೊಂಡಿದ್ದ ಆಲದಮರದ ಸಮೀಪದಲ್ಲಿಯೇ ಒಂದು ತಾಲವೃಕ್ಷವನ್ನು ಆಶ್ರಯಿಸಿ ಹಿಡಿಂಬನೆಂಬ ರಾಕ್ಷಸನು ವಾಸಿಸುತ್ತಿದ್ದನು. ಆತನು ಮಹಾಕ್ರೂರನೂ, ಮನುಷ್ಯಮಾಂಸಭಕ್ಷಕನೂ, ಮಹಾಬಲಿಷ್ಠನೂ, ಶೂರನೂ ಇದ್ದನು. ಆತನ ಮೈಬಣ್ಣ ಕಪ್ಪು, ಕಣ್ಣುಗಳು ಪಿಂಗಟಬಣ್ಣದವು, ಕೋರೆದಾಡೆಗಳು ತೀಕ್ಷ್ಣ, ಕಿವಿಗಳು ಶಂಕ್ವಾಕೃತಿ, ಗಡ್ಡಮೀಸೆಗಳು ಕೆಂಪುಬಣ್ಣದವು ಇದ್ದವು; ಆದ್ದರಿಂದ ಆತನ ಮೋರೆಯು ಅಕ್ರಾಳವಿಕ್ರಾಳವಾಗಿ ತೋರುತ್ತಿತ್ತು. ಆತನು ಹಸಿದು ಮಾಂಸವನ್ನು

ಇಚ್ಛಿಸುತ್ತಿದ್ದನು. ಹೀಗಿರುವಾಗ ಆ ಭಯಂಕರ ರಾಕ್ಷಸನ ದೃಷ್ಟಿಯು ಮಲಗಿಕೊಂಡಿದ್ದ ಪಾಂಡವರ ಕಡೆಗೆ ಹೋಗಲು, ಆತನು ಒಡ್ಡುಮುರಿದು ಆಕಳಿಸಿ ತಲೆತುರಿಸಿಕೊಳ್ಳುತ್ತ, ಆನಂದದಿಂದ ತನ್ನ ತಂಗಿಯಾದ ಹಿಡಿಂಬೆ ಯನ್ನು ಕುರಿತು—"ತಂಗೀ, ನನ್ನ ಪ್ರೀತಿಯ ನರಮಾಂಸವು ಬಹುದಿವಸ ದಮೇಲೆ ಇಂದು ದೊರೆತಿರುವದರಿಂದ, ನನ್ನ ಬಾಯಲ್ಲಿ ನೀರುಒಡೆದಿವೆ. ನನ್ನ ತೀಕ್ಷ್ಣವಾದ ಈ ಎಂಟು ಹಲ್ಲುಗಳನ್ನೂ ಮನುಷ್ಯಮಾಂಸದಲ್ಲಿ ಚುಚ್ಚಿ, ಕುತ್ತಿಗೆಯ ರಕ್ತನಾಲಗಳನ್ನು ಒಡೆದು ಬಿಸಿಬಿಸಿ ನೆತ್ತರವನ್ನು ಕುಡಿಯುವೆನು; ಆದರೆ ನೀನು ಬೇಗನೆ ಆ ಆಲದಮರದ ಬುಡಕ್ಕೆ ಹೋಗಿ ಅಲ್ಲಿ ಮಲಗಿದವರು ಯಾರೆಂಬದನ್ನು ಅರಿತು ಅವರನ್ನು ಕೊಂದು ಇಲ್ಲಿಗೆ ತಕ್ಕೊಂಡು ಬಾ. ಇಬ್ಬರೂ ಯಥೇಚ್ಛ ಮಾಂಸಭಕ್ಷಣಮಾಡಿ ಆನಂದದಿಂದ ಕುಣಿದಾಡೋಣ."

ಜನಮೇಜಯಾ, ಅಣ್ಣನ ಅಪ್ಪಣೆಯನ್ನು ಮನ್ನಿಸಿ ಹಿಡಿಂಬೆಯು ಆಲದಮರದ ಬುಡಕ್ಕೆ ಹೋಗಿ, ಸುಂದರ ರೂಪವುಳ್ಳ ಭವ್ಯಾಕಾರದ ಬಲಿಷ್ಠ ಭೀಮನನ್ನು ನೋಡಿ ಮರುಳಾದಳು. ಆಕೆಯು ಮನಸ್ಸಿನಲ್ಲಿ— "ಈ ಶ್ಯಾಮಸುಂದರನ ಬಾಹುಗಳು ದೀರ್ಘ, ಹೆಗಲು ಸಿಂಹನಂತೆ, ಕುತ್ತಿ ಗೆಯು ಶಂಖದಂತೆ, ಕಣ್ಣುಗಳು ಕಮಲದಂತೆ ಇದ್ದು, ಈತನ ತೇಜಸ್ಸು ವಿಲಕ್ಷಣವಾಗಿರುವದು. ಈತನೇ ನನಗೆ ತಕ್ಕಪತಿಯು; ಆದ್ದರಿಂದ ಅಣ್ಣನು ಹೇಳಿದ ಕ್ರೂರಕರ್ಮವನ್ನು ನಾನು ಸರ್ವಥಾ ಮಾಡಲಾರೆನು; ಯಾಕಂ ದರೆ, ಪತಿಪ್ರೇಮವು ಬಂಧುಪ್ರೇಮಕ್ಕಿಂತ ಮಿಗಿಲಾದದ್ದು. ಈತನನ್ನು ಕೊಲ್ಲುವದರಿಂದ ನನ್ನ ಅಣ್ಣನಿಗೂ, ನನಗೂ ಕ್ಷಣಿಕಸಮಾಧಾನವಾಗಬ ಹುದು; ಆದರೆ ಈತನನ್ನು ಕೊಲ್ಲದಿರುವದರಿಂದ ನಾನು ಚಿರಕಾಲ ಆನಂದ ದಿಂದಿರಬಹುದು" ಎಂದು ಆಲೋಚಿಸಿ, ಬೇಕಾದ ರೂಪವನ್ನು ಧರಿಸುವ ಸಾಮರ್ಥ್ಯವುಳ್ಳ ಆಕೆಯು ಒಬ್ಬ ಸುಂದರ ಸ್ತ್ರೀಯಾದಳು. ಆಕೆಯು ಧರಿಸಿದ ದಿವ್ಯಾಲಂಕಾರಗಳಿಂದ ಆಕೆಯ ಸೌಂದರ್ಯವು ಮತ್ತಿಷ್ಟು ಎದ್ದು ಕಾಣುತ್ತಿತ್ತು. ಆಕೆಯು ಭೀಮನಬಳಿಯಲ್ಲಿ ಬಂದು ನಿಂತುಕೊಂಡು ಗಲ್ಲದಲ್ಲಿ ನಗುತ್ತ ಆತನನ್ನು ಕುರಿತು—

ಹಿಡಿಂಬೆ—ಎಲೈ ಪುರುಷಶ್ರೇಷ್ಠಾ, ನೀನು ಯಾರು? ಇಲ್ಲಿಗೆ ಯಾಕೆ ಬಂದೆ? ಇಲ್ಲಿ ಮಲಗಿರುವ ಈ ದಿವ್ಯದೇಹಿ ಪುರುಷರು ಯಾರು? ಎಲೈ ಪುಣ್ಯವಂತಾ, ಈ ಸುಕುಮಾರದೇಹದ ಶ್ಯಾಮವರ್ಣದ ಸ್ತ್ರೀಯು, ಮನೆಯಲ್ಲಿ ನಿಶ್ಚಿಂತೆಯಿಂದ ಮಲಗಿಕೊಂಡು ನಿದ್ದೆಮಾಡುವಂತೆ, ಈ ಘೋರಾರಣ್ಯದಲ್ಲಿ ನಿದ್ದೆಮಾಡುತ್ತಿರುವಳಲ್ಲ? ಈಕೆಯು ಯಾರು? ಈ ಗಹನಾರಣ್ಯದಲ್ಲಿ ರಾಕ್ಷಸನು ವಾಸಿಸುವನೆಂಬದು ನಿಮಗೆ ಗೊತ್ತಿದ್ದಂತೆ ತೋರುವದಿಲ್ಲ. ಇಲ್ಲಿ ಹಿಡಿಂಬನೆಂಬ ದುಷ್ಟರಾಕ್ಷಸನು ವಾಸಿಸುತ್ತಿರುವನು. ನಾನು ಆತನ ತಂಗಿಯು. ನಿಮ್ಮ ಮಾಂಸತಿನ್ನುವ ದುಷ್ಟವಾಸನೆಯಿಂದ ನಿಮ್ಮನ್ನು ಕೊಂದು ತರುವದಕ್ಕಾಗಿ ನನ್ನನ್ನು ನಮ್ಮ ಅಣ್ಣನು ಕಳಿಸಿರುವನು. ಆದರೆ ದೇವಪುತ್ರನಂತೆ ತೇಜಸ್ವಿಯಾದ ನಿನ್ನನ್ನು ನೋಡಿ, ನಿನ್ನ ಹೊರತು ಅನ್ಯಪತಿಯನ್ನು ವರಿಸಲಿಕ್ಕಿಲ್ಲವೆಂದು ನಾನು ನಿಶ್ಚಯಿಸಿರುವೆನು, ಈ ಮಾತು ಸತ್ಯವು. ನಾನು ಕಾಮಪೀಡಿತಳಾಗಿರುವೆನು. ನನ್ನನ್ನು ನೀನು ಅಂಗೀಕರಿಸು. ಮನುಷ್ಯಭಕ್ಷಕನಾದ ಹಿಡಿಂಬರಾಕ್ಷಸನಿಂದ ನಾನು ನಿಮ್ಮನ್ನು ರಕ್ಷಿಸುವೆನು. ನಾನು ಆಕಾಶದಲ್ಲಿ ಸಂಚರಿಸಬಲ್ಲವಳಾದದ್ದರಿಂದ, ಬೇಕಾದಲ್ಲಿಗೆ ಹೋಗಿ ದುರ್ಗಮಪ್ರದೇಶಗಳಲ್ಲಿಯೂ ನಾವು ರಮಿಸೋಣ.

ಭೀಮ—ಎಲೈ ರಾಕ್ಷಸೀ, ನನ್ನ ತಾಯಿಯೂ, ನನ್ನ ಈ ಅಣ್ಣತಮ್ಮಂದಿರೂ ಇಲ್ಲಿ ಸುಖದಿಂದ ನಿದ್ದೆಮಾಡುತ್ತಿರುವರು. ಇಲ್ಲಿ ರಾಕ್ಷಸನು ವಾಸಿಸುತ್ತಿದ್ದು, ಅವನು ಇವರ ಮಾಂಸವನ್ನು ತಿನ್ನಲಿಚ್ಛಿಸುವನೆಂದು ನೀನು ಹೇಳುತ್ತೀ. ಅಂದಬಳಿಕ ಇಂಥ ಪ್ರಸಂಗದಲ್ಲಿ ಇವರನ್ನು ಸಂರಕ್ಷಿಸುವ ಸಾಮರ್ಥ್ಯವುಳ್ಳ ನನ್ನಂಥ ವೀರನು, ವಿಷಯಲಂಪಟನಾಗಿ ಇವರನ್ನು ಬಿಟ್ಟು ಎಂದಾದರೂ ಹೋಗಬಹುದೇ?

ಹಿಡಿಂಬೆ—ಮಹಾರಾಜ, ತಮಗೆ ಪ್ರಿಯವಾದದ್ದನ್ನು ಮಾಡಲು ನಾನು ಸಿದ್ಧಳಿರುವೆನು. ಇವರೆಲ್ಲರನ್ನೂ ಎಚ್ಚರಗೊಳಿಸಿರಿ. ಆ ಮನುಷ್ಯಭಕ್ಷಕ ರಾಕ್ಷಸನ ಭಯದಿಂದ ನಾನು ಇವರನ್ನು ಮುಕ್ತಮಾಡುವೆನು.

ಭೀಮ—ರಾಕ್ಷಸೀ, ನಿನ್ನ ಯಃಕಶ್ಚಿತ ಅಣ್ಣನ ಅಂಜಿಕೆಯಿಂದ ನನ್ನ ಈ ಅಣ್ಣತಮ್ಮಂದಿರನ್ನೂ, ತಾಯಿಯನ್ನೂ ಎಬ್ಬಿಸಲಾ? ಎಲೈ

ಅಂಜುಬುರುಕೀ, ನನ್ನೊಡನೆ ಯುದ್ಧಮಾಡಲು ಮನುಷ್ಯ, ರಾಕ್ಷಸ, ಗಂಧರ್ವ ಮೊದಲಾದವರಲ್ಲಿ ಯಾರೂ ಸಮರ್ಥರಲ್ಲ; ಆದ್ದರಿಂದ ನೀನು ಇಲ್ಲಿ ಇರು, ಅಥವಾ ಹೋಗು, ಅಥವಾ ನಿನ್ನ ಆ ನರಮಾಂಸಭಕ್ಷಕ ಅಣ್ಣನನ್ನು ಇಲ್ಲಿಗೆ ಕಳಿಸಿಕೊಡು.

**೧೫೩-೧೫೪ನೇ ಅಧ್ಯಾಯಗಳು— ಹಿಡಿಂಬ-ಭೀಮ ಸಂವಾದ—** ಜನಮೇಜಯಾ, ಹೀಗೆ ಇತ್ತ ಹಿಡಿಂಬ-ಭೀಮರ ಸಂವಾದವು ನಡೆದಿರುವಾಗ ಅತ್ತ ಹಿಡಿಂಬರಾಕ್ಷಸನು, ತನ್ನ ತಂಗಿಯು ಇನ್ನೂ ಬರಲಿಲ್ಲವೆಂಬ ಸಿಟ್ಟಿನಿಂದ, ಕಣ್ಣುಗಳು ಕೆಂಪಾಗಲು, ತಾಲವೃಕ್ಷದಿಂದ ದುಮುಕಿ ಪಾಂಡವರು ಮಲಗಿರುವ ಕಡೆಗೆ ಸಾಗಿ ಬರತೊಡಗಿದನು ಆತನನ್ನು ನೋಡಿ ಹಿಡಿಂಬೆಯು ಅಂಜಿ ಭೀಮನನ್ನು ಕುರಿತು—

ಹಿಡಿಂಬೆ—ಅಗೋ ನೋಡಿರಿ, ಆ ರಾಕ್ಷಸನು ಸಿಟ್ಟಾಗಿ ಬರುತ್ತಿರುವನು. ಈಗ ನಾನು ಹೇಳುವಂತೆ ನೀವು ಮಾಡಿರಿ. ನನ್ನಲ್ಲಿ ರಾಕ್ಷಸಬಲವಿದ್ದು, ನಾನು ಇಚ್ಛಾಗಮನವುಳ್ಳವಳಾಗಿರುವೆನು; ಆದ್ದರಿಂದ ನೀವೆಲ್ಲರೂ ನನ್ನ ಬಗಲಲ್ಲಿ ಕುಳಿತುಕೊಳ್ಳಿರಿ, ಅಂದರೆ ಆಕಾಶಮಾರ್ಗದಿಂದ ನಿಮ್ಮನ್ನು ಕರಕೊಂಡು ಹೋಗುವೆನು. ಹು! ಬೇಗನೆ ನೀವು ಇವರೆಲ್ಲರನ್ನು ಎಬ್ಬಿಸಿರಿ.

ಭೀಮಸೇನ—ಎಲೈ ಸುಂದರೀ, ನೀನು ಎಷ್ಟುಮಾತ್ರವೂ ಅಂಜಬೇಡ. ನಾನಿರುವಾಗ ಈ ರಾಕ್ಷಸನಿಂದ ನಮಗೆ ಯಾವ ಅಪಾಯವೂ ಆಗಲಾರದು. ಈಗ ನಿನ್ನ ಕಣ್ಣೆದುರಿಗೇ ಈತನನ್ನು ಕೊಲ್ಲುವೆನು ನೋಡು. ಎಲೈ ಸುಮಧ್ಯಮೇ, ಈ ಒಬ್ಬ ರಾಕ್ಷಸನೇ ಏಕೆ, ಎಲ್ಲರಾಕ್ಷಸರೂ ಒಟ್ಟುಗೂಡಿ ಬಂದರೂ ನನ್ನಮುಂದೆ ಅವರು ನಿಲ್ಲಲಾರರು.

ಹಿಡಿಂಬೆ—ನರಶ್ರೇಷ್ಠಾ, ದೇವತಾಸ್ವರೂಪರಾದ ನಿಮ್ಮನ್ನು ನಾನು ಕಡಿಮೆಯವರೆಂದು ತಿಳಿಯುವದಿಲ್ಲ; ಆದರೆ ನಿಮ್ಮಮೇಲಿರುವ ನನ್ನ ಪ್ರೇಮದಿಂದ ಅಂಧಳಾಗಿ ನಾನು ಹೀಗೆ ಮಾತಾಡಿದೆನು.

ಈಮೇರೆಗೆ ಇವರು ಮಾತಾಡುತ್ತಿರಲು, ಆ ನರಮಾಂಸಭಕ್ಷಕ ಹಿಡಿಂಬನು ಅವರಬಳಿಗೆ ಬಂದನು. ಚಿನ್ನದ ಪುತ್ತಳಿಯಂತೆ ಸುಂದರ ಮನುಷ್ಯರೂಪಧರಿಸಿ ಭೀಮನಬಳಿಯಲ್ಲಿ ನಿಂತಿದ್ದ, ತನ್ನ ತಂಗಿ

ಯನ್ನು ನೋಡಿ ಆ ಹಿಡಿಂಬರಾಕ್ಷಸನು ಸಿಟ್ಟಿನಿಂದ "ಎಲ್ಲೆ ದುಷ್ಟೆ, ನೀನು ಸುಂದರ ಮನುಷ್ಯರೂಪವನ್ನು ಧರಿಸಿ ಇದನ್ನೇನು ಆರಂಭಿಸಿರುವೆ? ಮಾಂಸತಿನ್ನುವ ನನ್ನ ಇಚ್ಛೆಗೆ ನೀನು ವಿಘ್ನವನ್ನುಂಟುಮಾಡುವೆಯಾ? ಹಿಡಿಂಬೇ, ನೀನು ಹೇಗೆ ಹೀಗೆ ಮರುಳಾದೆ? ನನ್ನ ಸಿಟ್ಟಿನ ಅಂಜಿಕೆಯು ನಿನಗೆ ಉಳಿಯಲಿಲ್ಲವೆ? ಎಲ್ಲೆ ಚಾಂಡಾಲೀ, ವ್ಯಭಿಚಾರೀ, ರಾಕ್ಷಸಕುಲಕ್ಕೆ ಕಲಂಕವನ್ನುಂಟುಮಾಡಿದೆಯಲ್ಲ! ಇವರೊಡನೆ ಸ್ನೇಹಬಳಸಿ ನನ್ನ ಅಹಿತ ಮಾಡಲಿಚ್ಛಿಸುತ್ತಿರುವ ನಿನ್ನನ್ನು ಈಗ ಕೊಂದುಬಿಡುವೆನು.

ಹೀಗೆ ಹಿಡಿಂಬರಾಕ್ಷಸನು ಸಿಟ್ಟಿನಿಂದ ಮಾತಾಡಿ, ಮಲಗಿದ ಪಾಂಡವರಮೇಲೆ ಏರಿಬರಲು, ಆತನನ್ನು ತಡೆದು ಭೀಮನು—"ರಾಕ್ಷಸಾ, ನಿಲ್ಲು ನಿಲ್ಲು. ಮಲಗಿದವರ ಮೇಲೆ ಏರಿಬರುವದರಲ್ಲಿ ಯಾವ ಪೌರುಷವು? ಹೆಂಗಸರನ್ನು ಕೊಲ್ಲುವದಾದರೂ ನಿನ್ನ ಶೌರ್ಯಕ್ಕೆ ಒಪ್ಪುವದಿಲ್ಲ. ನಿನ್ನ ತಂಗಿಯ ಅಪರಾಧವಾದರೂ ಏನು? ಸ್ತ್ರೀಸ್ವಭಾವಕ್ಕನುಸರಿಸಿ ಕಾಮಪೀಡಿತಳಾದ ಆಕೆಯು ನನಗೆ ಮೋಹಿಸಿದಳು. ಅಪರಾಧವಿದ್ದರೆ ಕಾಮನದಿರಬಹುದು. ನಮ್ಮೊಡನೆ ಯುದ್ಧಮಾಡುವದನ್ನು ಬಿಟ್ಟು ವ್ಯರ್ಥ ಸ್ತ್ರೀವಧ ಮಾಡುವದು ಯೋಗ್ಯವಲ್ಲ. ಮದ್ದಾನೆಯು ಕಠಿಣಪದಾರ್ಥಗಳನ್ನು ಕಾಲಿನಿಂದ ತುಳಿದು ಪುಡಿಪುಡಿಮಾಡುವಂತೆ, ನಿನ್ನ ಮಸ್ತಕವನ್ನು ತುಳಿದು ಪುಡಿಪುಡಿಮಾಡುವೆನು.'' ಅನ್ನಲು, ಹಿಡಿಂಬನು—"ಎಲ್ಲೆ ಮಾನವಾ, ವ್ಯರ್ಥ ಬಡಬಡಿಸಬೇಡ. ನನ್ನಗಂಟುಬಿದ್ದಬಳಿಕ ನಿನಗೆ ಗೊತ್ತಾಗುವದು. ಮೊದಲು ನಿನ್ನನ್ನುಕೊಂದು ನಿನ್ನ ರಕ್ತಕುಡಿದು ಆಮೇಲೆ ಈ ಮಲಗಿದವರನ್ನು ಕೊಲ್ಲುವೆನು ಆಮೇಲೆ ಈ ದುಷ್ಟ ಸ್ತ್ರೀಯ ಪ್ರಾಣಹರಣಮಾಡುವೆನು.

ಈಮೇರೆಗೆ ನುಡಿದು ಹಿಡಿಂಬನು ಕೈಮುಂದೆಮಾಡಿ ಭೀಮನನ್ನು ಹಿಡಿಯಹೋಗಲು, ಭೀಮನು ಅವನ ಎರಡೂಕೈಗಳನ್ನು ಹಿಚಿಕಿಹಿಡಿದು, ಮಲಗಿದವರ ನಿದ್ದೆಗೇಡಾದೀತೆಂದು ತಿಳಿದು, ಹಿಡಿಂಬನನ್ನು ಎತ್ತಿ ಮೂವತ್ತೆರಡುಮೊಳ ಅತ್ತಕಡೆಗೆ ಎಳೆದೊಯ್ದನು ಆಗ ರಾಕ್ಷಸನು ಕೈಬಿಡಿಸಿಕೊಳ್ಳಲು ಒದ್ದಾಡುತ್ತ ಭಯಂಕರ ಧ್ವನಿಯಿಂದ ಒದರತೊಡಗಲು, ಭೀಮನು ಮತ್ತೂದೂರ ಅವನನ್ನು ಎಳೆದೊಯ್ದನು. ಆಗ ಅವರಿಬ್ಬರು ವೀರರ ಗುದುಮುರಿಗೆಗೆ ಆರಂಭವಾಯಿತು. ಅವರಿಬ್ಬರ ಕಾದಾಟದಲ್ಲಿ

ದೊಡ್ಡ ದೊಡ್ಡ ಗಿಡಗಳು ಮುರಿದುಬಿದ್ದವು. ಬಳ್ಳಿಬಡೆಕಲಗಳು ನಾಶ ಹೊಂದಿದವು. ಬಳಿಕ ಅವರ ಹೊಡದಾಟದ ಗದ್ದಲಕ್ಕೆ ಮನುಷ್ಯಶ್ರೇಷ್ಠ ರಾದ ಪಾಂಡವರೂ, ಅವರ ತಾಯಿಯಾದ ಕುಂತಿಯೂ ಎಚ್ಚತ್ತರು. ಆಗ ಮುಂದೆ ನಿಂತುಕೊಂಡಿರುವ ಸುಂದರರೂಪದ ಹಿಡಿಂಬೆಯು ಅವರ ಕಣ್ಣಿಗೆಬಿದ್ದಳು. ಆಕೆಯನ್ನು ನೋಡಿ ಅರ್ಜುನನೇ ಮೊದಲಾದ ಪಾಂಡ ವರಿಗೆ ಆಶ್ಚರ್ಯವಾಯಿತು, ಕುಂತಿಯೂ ಬೆರಗಾದಳು. ಆಕೆಯು ಹಿಡಿಂ ಬೆಗೆ—"ಅವ್ವಾ, ಲೋಕೋತ್ತರ ಸುಂದರಿಯಾದ ನೀನು ಯಾರು? ಯಾರವಳು? ಇಲ್ಲಿಗೆ ಏಕೆಬಂದೆ? ನೀನು ವನದೇವತೆಯೋ, ಅಪ್ಸರೆಯೋ ಯಾರಿರುವೆ ಹೇಳು?" ಎಂದು ಕೇಳಲು, ಹಿಡಿಂಬೆಯು, ತನ್ನ ಅಣ್ಣನಾದ ಹಿಡಿಂಬನ ಕ್ರೂರತನವನ್ನೂ, ತಾನು ಭೀಮನನ್ನು ಮನಸಾಪತಿಯಾಗಿ ವರಿಸಿದ್ದನ್ನೂ, ಭೀಮ-ಹಿಡಿಂಬರ ಯುದ್ಧಪ್ರಸಂಗವನ್ನೂ ಒಂದುಳಿಯ ದಂತೆ ಹೇಳಿದಳು. ಅದನ್ನು ಕೇಳಿ ಧರ್ಮ, ಅರ್ಜುನ, ನಕುಲ, ಸಹದೇ ವರು ಭೀಮ-ಹಿಡಿಂಬರ ಯುದ್ಧನಡೆದಲ್ಲಿಗೆ ಹೋದರು. ಆಗ ಅವರಿಬ್ಬರು ವೀರರೂ ಈರ್ಷೆಯಿಂದ ಕಾದುತ್ತಿದ್ದರು. ಅವರಿಬ್ಬರು ಕಾದುವ ರಭ ಸಕ್ಕೆ ಆಕಾಶದಲ್ಲಿ ಧೂಳುಮುಸುಕಿತ್ತು. ಪರ್ವತಪ್ರಾಯಗಳಾದ ಅವರಿ ಬ್ಬರ ದೇಹಗಳೂ ಧೂಳು ಮುಸುಗಿ, ಮಂಜುಮುತ್ತಿದ ಪರ್ವತಗಳಂತೆ ತೋರುತ್ತಿದ್ದವು. ಅದನ್ನುನೋಡಿ ಅರ್ಜುನನು ಭೀಮನಿಗೆ—"ಭೀಮ ಸೇನಾ, ಅಂಜಬೇಡ. ನಿನಗೆ ರಾಕ್ಷಸನ ಲಕ್ಷ್ಯವಿದ್ದಂತೆ ನನಗೇನೂ ತೋರು ವದಿಲ್ಲ; ಆದರೂ ನಾನು ಸಹಾಯಮಾಡಲು ಸಿದ್ಧನಿರುವೆನು. ನಕುಲ-ಸಹದೇವರು ತಾಯಿಯ ರಕ್ಷಣಮಾಡುವದರಿಂದ ಅದರಚಿಂತೆಯು ಬೇಡ; ಆದರೆ ಭೀಮಾ, ಸೂರ್ಯೋದಯಕಾಲವು ಸಮೀಪಿಸಿತು. ಈ ಸಂಧಿಕಾಲ ದಲ್ಲಿರಾಕ್ಷಸರಬಲವುಹೆಚ್ಚುತ್ತಿರುತ್ತದೆ. ನೋಡು, ರಾಕ್ಷಸನು ಮಾಯಾವಿ ಸ್ವರೂಪವನ್ನು ಧರಿಸತೊಡಗಿರುವನು. ಆದ್ದರಿಂದ ಇವನನ್ನು ಬೇಗನೆ ಬಾಹುಪಂಜರದಲ್ಲಿ ಹಿಡಿದು ಹಿಚಿಕಿಕೊಂದುಬಿಡು," ಎಂದು ಹೇಳಿದನು. ಆಗ ಭೀಮನು ಹಿಡಿಂಬನನ್ನು ಸಿಟ್ಟಿನಿಂದ ಎತ್ತಿ ನೆಲಕ್ಕೆ ಅಪ್ಪಳಿಸಿ, ಯಜ್ಞಪಶುವನ್ನು ಗುದ್ದಿಗುದ್ದಿ ಕೊಲ್ಲುವಂತೆ ಅವನನ್ನು ಗುದ್ದಹತ್ತಿದನು. ಆಗ ರಾಕ್ಷಸನು ಭಯಂಕರವಾಗಿ ಒದರತೊಡಗಲು, ಅರಣ್ಯವು ಗದ



ಹಿಡಿಂಬ ವಧ.

ಗಮಿಸಿತು. ಆಗ ಭೀಮನು ಹಿಡಿಂಬನನ್ನು ಕೊಂದು ಅರಣ್ಯವನ್ನು ನಿಷ್ಕಂಟಕವಾಗಿ ಮಾಡಿದನು. ಅದನ್ನು ನೋಡಿ ಪಾಂಡವರಿಗೆ ಬಹಳ ಸಂತೋಷವಾಗಿ, ಅವರು ಭೀಮನನ್ನು ಸನ್ಮಾನಿಸಿದರು. ಆಗ ಅರ್ಜುನನು—"ಇಲ್ಲಿಯೇ ಸಮೀಪದಲ್ಲಿ ನಗರವಿರಬಹುದು, ಅಲ್ಲಿಗೆಹೋಗೋಣ; ದೇವರು ನಮ್ಮನ್ನು ರಕ್ಷಿಸಲಿ; ನಮ್ಮಸುದ್ದಿಯು ದುರ್ಯೋಧನನಿಗೆ ಗೊತ್ತಾಗದಿರಲಿ," ಅನ್ನಲು, ಅವರೆಲ್ಲರೂ ಹಾದಿಯನ್ನು ನಡೆಯಹತ್ತಿದರು. ಹಿಡಿಂಬೆಯೂ ಅವರನ್ನು ಹಿಂಬಾಲಿಸಿ ನಡೆದಳು.

**೧೫೫ನೇ ಅಧ್ಯಾಯ—ಹಿಡಿಂಬಾಸ್ವೀಕಾರ**—ಈವರೆಗೆ ಪಾಂಡವರೂ, ಕುಂತಿಯೂ, ಹಿಡಿಂಬೆಯೂ ಮಾರ್ಗಕ್ರಮಣ ಮಾಡುತ್ತಿರುವಾಗ, ಭೀಮನು ಹಿಡಿಂಬೆಯನ್ನು ಕುರಿತು—"ಹಿಡಿಂಬೇ, ನೀನು ಒಳ್ಳೇ ಮೋಹಕರೂಪವನ್ನು ತಾಳಿ ನಮ್ಮಸಂಗಡ ಇರುತ್ತೀ; ಆದರೆ ನೀನು ನಿನ್ನ ಅಣ್ಣನ ಹಾದಿಯನ್ನೇ ಹಿಡಿದುಹೋಗಬೇಕಾಗುವದು. ಹಲವು ಮಾಯಾವೀರೂಪಗಳನ್ನು ಧರಿಸಿ ದ್ವೇಷವನ್ನು ಸಾಧಿಸುವದು ರಾಕ್ಷಸರ ಸ್ವಭಾವವಾಗಿರುವದು," ಅನ್ನಲು, ಧರ್ಮರಾಜನು—"ಭೀಮಸೇನಾ, ನಿನಗೆ ಸಿಟ್ಟು ಬಂದಿದ್ದರೂ ನೀನು ಈಕೆಯನ್ನು ಕೊಲ್ಲಬೇಡ. ಸ್ತ್ರೀವಧವು ಅಧರ್ಮವಾಗಿರುವದು. ಭೀಮಾ, ಶರೀರರಕ್ಷಣಕ್ಕಿಂತ ಧರ್ಮರಕ್ಷಣವು ಶ್ರೇಷ್ಠವಾಗಿರುವದು. ನಿನ್ನನ್ನು ಕೊಲ್ಲುವದಕ್ಕಾಗಿ ಬಂದಿದ್ದ ಹಿಡಿಂಬರಾಕ್ಷಸನನ್ನು ನೀನು ಕೊಂದೇಇರುತ್ತೀ. ಇನ್ನು ಈಕೆಯು ಆತನ ಪ್ರತ್ಯಕ್ಷ ತಂಗಿಯಿರುವದರಿಂದ, ಅಣ್ಣನ ಮರಣವು ಈಕೆಗೆ ಸಹನವಾಗಲಿಕ್ಕಿಲ್ಲ; ಆದರೂ ಈಕೆಯಿಂದ ನಮಗಾಗುವದೇನು?" ಎಂದು ಕೇಳಿದನು. ಭೀಮನ ಮಾತುಗಳನ್ನು ಕೇಳಿ ಹಿಡಿಂಬೆಗೆ ಬಹಳ ವ್ಯಸನವಾಯಿತು. ಆಕೆಯು ಕುಂತಿ-ಧರ್ಮರಾಜರ ಕಾಲಿಗೆರಗಿ ಕುಂತಿಯನ್ನು ಕುರಿತು—"ಎಲ್ಲೈ ಸಾಧ್ವಿಯೇ, ಕಾಮವಾಸನೆಯ ದುಃಖವು ಸ್ತ್ರೀಯರಿಗೆ ಯಾವಬಗೆಯದಿರುವದೆಂಬದನ್ನು ನಿನಗೆ ಹೇಳುವ ಕಾರಣವಿಲ್ಲ; ಅಂತಹ ದುಃಖವು ಭೀಮಸೇನನಿಂದ ನನಗೆ ಒದಗಿದ್ದು, ಈವರೆಗೆ ನಾನು ಕಾಲನಿರೀಕ್ಷಣ ಮಾಡುತ್ತ ಅದನ್ನು ಹೇಗಾದರೂ ಸಹಿಸಿದೆನು. ಎಲ್ಲೈ ಕಲ್ಯಾಣೀ, ನಿನ್ನ ಮಗನನ್ನು ನಾನು ಮನಸ್ಸಿನಿಂದ ಲಗ್ನವಾಗಿರುವೆನು; ಆತನ

ಸಲುವಾಗಿ ಆಪ್ತರು, ಇಷ್ಟರು, ಮಿತ್ರರು, ಜಾತಿ, ಧರ್ಮ ಇವೆಲ್ಲವನ್ನೂ ಬಿಟ್ಟೆನು. ಹೀಗಿರುವಾಗ ಈ ವೀರನು ನನ್ನನ್ನು ನಿರಾಕರಿಸಿದರೆ, ನನ್ನ ಪ್ರಾಣಗಳು ಹೊರಟುಹೋಗುವವು ; ಆದ್ದರಿಂದ ನನ್ನನ್ನು ದಾಸಿಯೆಂದಾದರೂ ತಿಳಿದು, ನನಗೂ ನನ್ನ ಪತಿಗೂ ಸೌಖ್ಯವುಂಟಾಗುವಂತೆ ಮಾಡಿರಿ. ನಿಮಗೆ ದುಸ್ತರಕಷ್ಟದ ಪ್ರಸಂಗ ಒದಗಿದರೆ, ಅದನ್ನು ನಾನು ನಿವಾರಣ ಮಾಡುವೆನು. ದೂರ ಪ್ರವಾಸಮಾಡುವದಿದ್ದಲ್ಲಿ ನಿಮ್ಮೆಲ್ಲರನ್ನು ಹೊತ್ತುಕೊಂಡು ಬೇಕಾದಲ್ಲಿಗೆ ಹೋಗುವೆನು. ನನ್ನಂಥ ಅನುರಕ್ತ ಸ್ತ್ರೀಯನ್ನು ತ್ಯಜಿಸುವದು ಧರ್ಮವಲ್ಲ. ವಿಪತ್ಕಾಲದಲ್ಲಿ ಬೇಕಾದ ಉಪಾಯದಿಂದ ಪ್ರಾಣರಕ್ಷಣಮಾಡಬಹುದಾಗಿದ್ದರೂ, ಅದನ್ನಾದರೂ ಧರ್ಮವನ್ನನುಸರಿಸಿಯೇ ಮಾಡಬೇಕು. ಅಂಥವನನ್ನೇ ಧರ್ಮಜ್ಞನೆಂದು ಕರೆಯಬೇಕು. ಅಂಥ ಧರ್ಮಿಷ್ಠರಿಗೆ ವಿಪತ್ತು ಒದಗುವದೆಂದರೆ, ಮೂರ್ತಿಮಂತವಾದ ಧರ್ಮದ ಹಾನಿಯೇಸರಿ. ಸಾರಾಂಶ, ಯಾವಕಾಲದಲ್ಲಿಯೂ ಧರ್ಮವನ್ನು ಬಿಡಲಾಗದು. ಧರ್ಮದಿಂದಲೇ ಪುಣ್ಯವು ಒದಗುವದು. ಪುಣ್ಯವು ಪ್ರಾಣರಕ್ಷಕವಾಗಿರುವದಲ್ಲದೆ, ಹೋದಪ್ರಾಣವನ್ನು ಅದು ತಿರುಗಿ ತಂದು ಕೊಡುವದು; ಆದ್ದರಿಂದ ಧರ್ಮಕ್ಕನುಸರಿಸಿ ಭೀಮನು ನನ್ನ ಪಾಣಿಗ್ರಹಣಮಾಡುವಂತೆ ಮಾಡಿರಿ ; ಇಲ್ಲದಿದ್ದರೆ ಧರ್ಮಹಾನಿಯಾಗುವದು.

ಹಿಡಿಂಬೆಯು ಈ ಮಾತುಗಳನ್ನು ಕೇಳಿ ಧರ್ಮರಾಜನು ಆಕೆಯನ್ನು ಕುರಿತು—"ಹಿಡಿಂಬೇ, ನಿನ್ನಮಾತು ಸತ್ಯವು. ನೀನಂದಂತೆ ಆಗಬೇಕಾದರೆ, ನಾನು ಹೇಳಿದಂತೆ ನೀನು ಆಚರಿಸಿ ನಡೆಯಬೇಕಾಗುವದು. ಎಲೈ ಕಲ್ಯಾಣೀ, ಭೀಮನ ಸ್ನಾನಸಂಧ್ಯೆಗಳಾದಬಳಿಕ ನೀನು ಆತನನ್ನು ಬೇಕಾದಲ್ಲಿಗೆ ಕರೆದೊಯ್ದು ಆತನೊಡನೆ ಸಂಜೆಯವರೆಗೆ ವಿಹರಿಸಿ, ಹೊತ್ತು ಮುಣುಗುವದರೊಳಗೆ ಆತನನ್ನು ನಮ್ಮಬಳಿಗೆ ಕಳುಹಿಸಬೇಕು." ಎಂದು ಹೇಳಿದನು. ಧರ್ಮರಾಜನ ಅಪ್ಪಣೆಯನ್ನು ಪಾಲಿಸುವ ಭೀಮನೂ ಈ ಮಾತಿಗೆ ಒಪ್ಪಿಕೊಂಡನು. ಆತನು ಹಿಡಿಂಬೆಯನ್ನು ಕುರಿತು—"ಎಲೈ ಸುಂದರೀ, ನನಗೆ ಧರ್ಮರಾಜನ ಅಪ್ಪಣೆಯು ಶಿರಸಾಮಾನ್ಯವಾಗಿರುವದು; ಆದರೆ ಸತ್ಯವನ್ನು ಸ್ಮರಿಸಿ ನಾನು ನಿನಗೆ ಹೇಳುವೆನೇನಂದರೆ, ನಿನ್ನ ಹೊಟ್ಟೆಯಲ್ಲಿ ಒಬ್ಬ ಮಗನು ಹುಟ್ಟುವವರೆಗೆ ಮಾತ್ರ ನಾನು ನಿನ್ನ ಸಮಾ

ಗಮ ಮಾಡುವೆನು. ನನ್ನ ಈ ನಿರ್ಬಂಧವು ನಿನಗೆ ಒಪ್ಪಿಗೆಯಾಗಿದ್ದರೆ ಹೇಳು" ಎಂದು ಕೇಳಿದನು. ಅದಕ್ಕೆ ಹಿಡಿಂಬೆಯು ಒಪ್ಪಿಕೊಂಡು ಭೀಮಸೇನನನ್ನು ಕರಕೊಂಡು ಆಕಾಶಮಾರ್ಗದಿಂದ ತನಗೆ ಬೇಕಾದ ಸ್ಥಳಕ್ಕೆ ಹೋದಳು. ಆ ಸ್ಥಳವು ಅತ್ಯಂತ ರಮಣೀಯವಾದದ್ದಿತ್ತು. ಅಲ್ಲಿಯೂ ಹಿಡಿಂಬೆಯು ಸುಂದರ ರೂಪವನ್ನು ಧರಿಸಿ, ವಸ್ತ್ರಾಲಂಕಾರಗಳಿಂದ ಅಲಂಕೃತಳಾಗಿ ಮಧುರಭಾಷಣಗಳಿಂದ ಭೀಮಸೇನನ ಮನಸ್ಸನ್ನು ರಮಿಸುತ್ತಿದ್ದಳು. ಆಕೆಯು ಒಮ್ಮೆ ಅರಣ್ಯಪ್ರದೇಶಗಳಲ್ಲಿ, ಒಮ್ಮೆ ಪರ್ವತಶಿಖರಗಳಲ್ಲಿ, ಒಮ್ಮೆ ರಮ್ಯವಾದ ನದೀತೀರದಲ್ಲಿ, ಒಮ್ಮೆ ಮನೋಹರವಾದ ದ್ವೀಪಗಳಲ್ಲಿ ಭೀಮನೊಡನೆ ರಮಿಸುವಳು.

ಹೀಗೆ ಹಿಡಿಂಬೆಯು ರಮಿಸುತ್ತಿರುವಾಗ ಆಕೆಗೆ ಒಬ್ಬ ಮಗನು ಹುಟ್ಟಿದನು. ಆತನು ಒಳ್ಳೇ ಬಲಿಷ್ಠನಾಗಿದ್ದನು. ಆತನ ಕಣ್ಣುಗಳು ವಿದ್ರೂಪ, ತುಟಿಗಳು ಕೆಂಪಗೆ, ರೂಪವು ಅಕ್ರಾಳವಿಕ್ರಾಳ! ಆತನ ಧ್ವನಿಯು ಬಹು ಗಂಭೀರವಾದದ್ದಿತ್ತು. ಈತನು ಹುಟ್ಟುತ್ತಲೇ ಅಸ್ತ್ರವಿದ್ಯಾಪ್ರವೀಣನಾಗಿದ್ದನು. ಈತನು ಮನುಷ್ಯನಿಂದ ಉತ್ಪನ್ನನಾಗಿದ್ದರೂ ಅಮಾನುಷನಾಗಿದ್ದನು. ಸಣ್ಣವನಿರುವಾಗೂ ದೊಡ್ಡದೊಡ್ಡ ರಾಕ್ಷಸರಿಗೆ ಸಹ ಆತನು ಬಗ್ಗುತ್ತಿದ್ದಿಲ್ಲ. ಜನಮೇಜಯಾ, ರಾಕ್ಷಸಸ್ತ್ರೀಯರ ಗರ್ಭಧಾರಣವೂ, ಪ್ರಸೂತಿಯೂ ಒಮ್ಮೆಲೆ ಆಗುವವು. ಈ ನಿಯಮದಂತೆ ಹಿಡಿಂಬೆಗೆ ಗರ್ಭಧಾರಣವಾದಕೂಡಲೆ ಮಗನು ಹುಟ್ಟಿದನು. ರಾಕ್ಷಸರಿಗೆ ಇಚ್ಛಿತರೂಪ ತಾಳಲಿಕ್ಕೆ ಬರುವದೆಂಬ ಮಾತು ನಿನಗೆ ಗೊತ್ತೇ ಇರುವದು. ಇರಲಿ. ಹೀಗೆ ಹಿಡಿಂಬೆಗೆ ಮಗನು ಹುಟ್ಟಿದಕೂಡಲೆ ಆತನು ತಾಯಿತಂದೆಗಳ ಚರಣಗಳಿಗೆ ಎರಗಿದನು. ಆಗ ಆತನ ತಾಯಿಯು, ಈ ಕೂಸಿನ "ಘಟ" ಅಂದರೆ ಮಸ್ತಕವು "ಉತ್ಕಚ" ಅಂದರೆ ಕೇಶರಹಿತವಾದದ್ದು ಇರುವದೆಂದು ಅಂದದ್ದರಿಂದ, ಆ ಹುಡುಗನಿಗೆ "ಘಟೋತ್ಕಚ" ಎಂಬ ಹೆಸರನ್ನು ಇಟ್ಟರು. ಘಟೋತ್ಕಚನ ಜನ್ಮದಿಂದ ಭೀಮ ಹಿಡಿಂಬೆಯರ ಸಹವಾಸಯೋಗವು ತಪ್ಪಿತು. ಬಳಿಕ ಹಿಡಿಂಬೆಯು ಕೆಲವು ನಿಯಮಗಳನ್ನು ಗೊತ್ತುಮಾಡಿಕೊಂಡು ತನ್ನ ಪೂರ್ವಸ್ಥಿತಿಯನ್ನು ಹೊಂದಿದಳು. ಘಟೋತ್ಕಚನ ಪ್ರೇಮವು ಪಾಂಡವರಲ್ಲಿ ಬಹಳ. ಅವರಾದರೂ ಘಟೋ

ತ್ಕಚನನ್ನು ಬಹಳವಾಗಿ ಪ್ರೀತಿಸುತ್ತಿದ್ದರು. ಘಟೋತ್ಕಚನು ತನ್ನ ಅಜ್ಜಿಯನ್ನೂ, ಕಕ್ಕಂದಿರನ್ನೂ ನಮಸ್ಕರಿಸಿ—"ಎಲೈ ಶ್ರೇಷ್ಠಜನರೇ, ನಾನು ಎಲ್ಲಬಗೆಯಿಂದಲೂ ನಿಮ್ಮವನಾಗಿರುತ್ತೇನೆ; ಆದ್ದರಿಂದ ನಿಮ್ಮ ಯಾವ ಕೆಲಸಮಾಡಬೇಕೆಂಬದನ್ನು ನಿಃಶಂಕವಾಗಿ ಅಜ್ಞಾಪಿಸಿರಿ" ಎಂದು ಕೇಳಿಕೊಳ್ಳಲು, ಕುಂತಿಯು—"ಬಾಲಕಾ, ನೀನು ಕುರುಕುಲದಲ್ಲಿ ಉತ್ಪನ್ನನಾಗಿದ್ದು, ಪ್ರತ್ಯಕ್ಷ ಭೀಮನಂತೆ ಇರುತ್ತೀ; ಆದ್ದರಿಂದ ನೀನು ಈ ಅಯ್ವರಿಗೂ ಹಿರಿಯಮಗನಾದೆ; ಅಂದಬಳಿಕ ನೀನು ಇವರಿಗೆ ಯಾವಾಗಲೂ ಸಹಾಯಮಾಡುತ್ತೀರು." ಎಂದು ಹೇಳಿದಳು. ಅದನ್ನು ಕೇಳಿ ಘಟೋತ್ಕಚನು ಪುನಃ ಕುಂತಿಯನ್ನು ನಮಸ್ಕರಿಸಿ—"ಅಜ್ಜೀ, ರಾವಣ ಇಂದ್ರಜಿತುಗಳಂತೆ ಸಾಮರ್ಥ್ಯದಲ್ಲಿಯೂ, ಪರಾಕ್ರಮದಲ್ಲಿಯೂ ನಾನು ಈ ಲೋಕದಲ್ಲಿ ಶ್ರೇಷ್ಠನಾಗಿರುವೆನು; ಆದ್ದರಿಂದ ಈ ಪಾಂಡವರಿಗೆ ಬೇಕಾದಸಹಾಯಮಾಡುವದು ನನಗೆ ಅಶಕ್ಯವಾಗಿರುವದಿಲ್ಲ. ಇವರು ನೆನಸಿದಾಗ ನಾನು ಸಿದ್ಧನಾಗಿರುವೆನು" ಎಂದು ಹೇಳಿ ಅವರ ಅಪ್ಪಣೆ ಪಡೆದು ಉತ್ತರದಿಕ್ಕಿಗೆ ಸಾಗಿದನು. ಜನಮೇಜಯಾ, ಅಪ್ರತಿಮ ವೀರ್ಯಶಾಲಿಯಾದ ಕರ್ಣನ "ವಾಸವದತ್ತ" ಎಂಬ ಶಕ್ತಿಯನ್ನು ಸಹಿಸುವವರು ಪಾಂಡವರಿಗೆ ಯಾರಾದರೂ ಬೇಕಾಗಿದ್ದರು; ಅದಕ್ಕಾಗಿಯೇ ಮಹಾತ್ಮನಾದ ಇಂದ್ರನು ಕರ್ಣನ ಪ್ರತಿಕಕ್ಷಿಯಾದ ಘಟೋತ್ಕಚನನ್ನು ನಿರ್ಮಾಣ ಮಾಡಿದನು.

**೧೫೬ನೇ ಅಧ್ಯಾಯ-ವ್ಯಾಸದರ್ಶನ**—ಜನಮೇಜಯಾ, ಮುಂದೆ ಆ ಮಹಾರಥಿಗಳಾದ ಪಾಂಡವರು ಬೇಟೆಯ ಮೃಗಗಳನ್ನು ಕೊಲ್ಲುತ್ತ ಮತ್ಸ್ಯ, ತ್ರಿಗರ್ತ, ಪಾಂಚಾಲ, ಕೀಚಕ ಮೊದಲಾದ ಪ್ರದೇಶಗಳೊಳಗಿನ ರಮಣೀಯ ವನಸ್ಥಳಗಳನ್ನು ನೋಡುತ್ತ ನೋಡುತ್ತ, ಒಂದು ಅರಣ್ಯದಿಂದ ಮತ್ತೊಂದು ಅರಣ್ಯಕ್ಕೆ ಸಾಗತೊಡಗಿದರು. ಆಗ ಆ ಮಹಾತ್ಮರು ತಪಸ್ವಿಗಳ ವೇಷವನ್ನು ಧರಿಸಿ ಎಲ್ಲರೂ ಜಡೆಗಳನ್ನು ಬಿಟ್ಟಿದ್ದರು; ನಾರಬಟ್ಟೆಗಳನ್ನು ಉಟ್ಟಿದ್ದರು: ಕೃಷ್ಣಾಜಿನಗಳನ್ನು ಹೊತ್ತಿದ್ದರು ; ಕುಂತಿಯೂ ಅವರ ಸಂಗಡ ಇದ್ದಳು. ಅವರುಒಮ್ಮೆ ಸಾವಕಾಶವಾಗಿ, ಒಮ್ಮೆ ವೇಗದಿಂದ ಹಾದಿಯನ್ನು ನಡೆಯುತ್ತಿದ್ದರು ವೇಗದಿಂದ ಹಾದಿಯನಡೆಯುವಾಗ ಅವರು

ತಾಯಿಯನ್ನು ಹೆಗಲಮೇಲೆ ಕುಳ್ಳಿರಿಸಿಕೊಳ್ಳುತ್ತಿದ್ದರು. ಹಾದಿಯಲ್ಲಿ ಅವರು ವೇದ-ವೇದಾಂಗ-ನೀತಿಶಾಸ್ತ್ರಗಳ ಅಧ್ಯಯನಮಾಡುತ್ತಿದ್ದರು. ಹೀಗೆ ಅವರನಿತ್ಯಕ್ರಮವು ನಡೆದಿರುವಾಗ, ಒಂದುದಿವಸ ಅವರ ಪಿತಾಮಹರಾದ ವ್ಯಾಸರದರ್ಶನವು ಅವರಿಗೆ ಆಯಿತು. ಆಗ ಕುಂತಿಯೇ ಮೊದಲಾಗಿ ಅವರೆಲ್ಲರೂ ವ್ಯಾಸರಿಗೆ ಸಾಷ್ಟಾಂಗವಾಗಿ ನಮಸ್ಕರಿಸಿ ಕೈಜೋಡಿಸಿ ನಿಂತುಕೊಂಡರು. ಆಗ ವ್ಯಾಸರು—"ನಿಮ್ಮನ್ನು ಧೃತರಾಷ್ಟ್ರಪುತ್ರರು ಅನ್ಯಾಯದಿಂದ ಹೊರಗೆ ಹಾಕಿದ್ದನ್ನು ಕೇಳಿದಕೂಡಲೆ, ನಿಮಗೊದಗಿದ ಸಂಕಟವನ್ನು ದೂರಮಾಡುವದಕ್ಕಾಗಿ ನಾನು ಇಲ್ಲಿಗೆ ಬಂದಿದ್ದೇನೆ. ಪಾಂಡವರೇ, ನಿಮ್ಮಮೇಲೆ ಈ ಸಂಕಟ ಒದಗಿದ್ದಕ್ಕಾಗಿ ದುಃಖಪಡಬೇಡಿರಿ; ಯಾಕಂದರೆ ಆಗುವದೆಲ್ಲ ನಿಮ್ಮ ಹಿತಕ್ಕಾಗಿಯೇ ಆಗುತ್ತಿರುತ್ತದೆ. ನನಗೆ ನೀವೂ, ಅವರೂ ಇಬ್ಬರೂ ಸಮಾನರೇ; ಆದರೆ ದೀನರೂ, ಬಾಲಕರೂ ಆದವರಮೇಲೆಯೇ ಮನುಷ್ಯರು ಯಾವಾಗಲೂ ಮಮತೆಮಾಡುವದರಿಂದ, ಆ ಸ್ಥಿತಿಯಲ್ಲಿರುವ ನಿಮ್ಮಮೇಲೆ ನನ್ನ ಪ್ರೇಮವು ವಿಶೇಷವಾಗಿ ಇರುತ್ತದೆ; ಆದ್ದರಿಂದ ನಾನು ನಿಮಗೊಂದು ಮಾತು ಹೇಳುತ್ತೇನೆ ಕೇಳಿರಿ. ಇಲ್ಲಿ ಸಮೀಪದಲ್ಲಿ ಏಕಚಕ್ರವೆಂಬ ಹೆಸರಿನ ಒಂದು ನಗರವಿದೆ. ಅಲ್ಲಿ ಒಂದು ತಿಂಗಳವರೆಗೆ ನೀವು ಗುಪ್ತವಾಗಿ ವಾಸಿಸಿ, ನಾನು ಬರುವ ಹಾದಿಯನ್ನು ನೋಡುತ್ತ ಇರಬೇಕು. ಎಲೈ ಕುಂತೀ, ಈ ಧರ್ಮಿಷ್ಠನಾದ ಯುಧಿಷ್ಠಿರನು, ಭೀಮಾರ್ಜುನರ ಬಲದಿಂದ ಸಮುದ್ರವಲಯಾಂಕಿತವಾದ ಪೃಥ್ವಿಯನ್ನು ತನ್ನದಾಗಿ ಮಾಡಿಕೊಂಡು, ಅದರೊಳಗಿನ ಎಲ್ಲ ಅರಸರಮೇಲೆ ಸಾರ್ವಭೌಮಾಧಿಕಾರವನ್ನು ನಡಿಸುತ್ತ, ಪ್ರಜೆಗಳನ್ನು ಉತ್ತಮರೀತಿಯಿಂದ ಪಾಲಿಸುವನು. ಈ ಮಹಾರಥಗಳಾದ ಅಣ್ಣತಮ್ಮಂದಿರು ಐಕಮತ್ಯದಿಂದ ನಡೆದುಕೊಂಡು, ರಾಜಸೂಯ-ಅಶ್ವಮೇಧಾದಿ ಮಹಾಯಜ್ಞಗಳನ್ನು ಮಾಡುವರು. ಇಷ್ಟಮಿತ್ರರೊಡನೆ ರಾಜ್ಯಭೋಗಗಳನ್ನು ಭೋಗಿಸುವರು" ಎಂದು ಹೇಳಿ, ಆ ನಗರದಲ್ಲಿ ಒಬ್ಬ ಬ್ರಾಹ್ಮಣನ ಮನೆಯೊಳಗೆ ಅವರನ್ನು ಇಟ್ಟು, ಪ್ರಭುಗಳಾದ ವ್ಯಾಸರು ಅಲ್ಲಿಂದ ಹೊರಟುಹೋದರು.



## ಶ್ರೀ ಶೇಷಸದ್ಗುರು-ಸೂಕ್ತಿರೂಪ

## ರಹಸ್ಯಗಳು

**(೧) ಪ್ರಧಾನಧರ್ಮಾನುಷ್ಠಾನಾವಸರದಲ್ಲಿ ಗೌಣಧರ್ಮಲೋಪವು ಪ್ರತ್ಯವಾಯುಕವಲ್ಲ**—ಹಿಂದೆ ೩೪ನೇ ಪುಟದ ೧೧ನೇ ರಹಸ್ಯದಲ್ಲಿ ಹೇಳಿದಂತೆ, ಲೌಕಿಕಧರ್ಮಗಳಲ್ಲಿ—ಮಾತೃಧರ್ಮ, ಪಿತೃಧರ್ಮ, ಪುತ್ರಧರ್ಮ, ಪತಿಧರ್ಮ, ಪತ್ನೀಧರ್ಮ, ರಾಜಧರ್ಮ, ಪ್ರಜಾಧರ್ಮ ಇತ್ಯಾದಿ ಒಂದಲ್ಲ ಎರಡಲ್ಲ, ಹಲವುಧರ್ಮಗಳು ಬರುವವು. ಈ ಎಲ್ಲ ಧರ್ಮಗಳ ಸಂಬಂಧವು ಬಹುತರ ಪ್ರತಿಒಬ್ಬ ಮನುಷ್ಯನಿಗೆ ಇರುತ್ತಿದ್ದರೂ, ಆತನಿಗೆ ಅನೇಕ ಧರ್ಮಗಳನ್ನು ಒಂದೇಕಾಲಕ್ಕೆ ಪಾಲಿಸುವ ಪ್ರಸಂಗ ಒದಗಿದಾಗ, ಆತನು ಆ ಪಾಲಿಸತಕ್ಕ ಧರ್ಮಗಳಲ್ಲಿ ಪ್ರಧಾನ ಧರ್ಮವಾವುದು, ಗೌಣಧರ್ಮವಾವುದು ಎಂಬದನ್ನು ನಿರ್ಣಯಿಸಿಕೊಂಡು, ಪ್ರಧಾನಧರ್ಮವನ್ನನುಸರಿಸಿ ನಡೆಯಬೇಕಾಗುತ್ತದೆ. ಪ್ರಧಾನಧರ್ಮವೆಂದರೆ, ಹಿತಸಂಬಂಧವು ಹೆಚ್ಚುಇರುವ ಧರ್ಮವು; ಗೌಣಧರ್ಮವೆಂದರೆ, ಹಿತಸಂಬಂಧವು ಕಡಿಮೆಯಿರುವಧರ್ಮವು. ಈ ಬಗೆಯ ಪ್ರಧಾನ-ಗೌಣಧರ್ಮಗಳನ್ನು ವಿಂಗಡಿಸಿ, ಅವುಗಳಲ್ಲಿ ಪ್ರಧಾನಧರ್ಮವನ್ನು ಅನುಸರಿಸುವ ಪ್ರಸಂಗವು ಈ ಉಪಪರ್ವದಲ್ಲಿ ಹಿಡಿಂಬೆಗೆ ಬಂದಿರುತ್ತದೆ. ಅದು ಹೇಗೆಂಬದನ್ನು ಕುರಿತು ವಿಚಾರಮಾಡೋಣ.

ಹಿಡಿಂಬೆಯು ತನ್ನ ಅಣ್ಣನ ಅಪ್ಪಣೆಯಂತೆ ಪಾಂಡವರನ್ನು ಕೊಲ್ಲುವದಕ್ಕಾಗಿ, ಅವರು ಮಲಗಿದ್ದ ಆಲದಗಿಡದ ಬುಡಕ್ಕೆ ಬಂದಳಷ್ಟೆ? ಆದರೆ ಎಚ್ಚತ್ತು ಕಾಯುತ್ತ ಕುಳಿತಿದ್ದ ಭೀಮನ ರೂಪಕ್ಕೆ ಮರುಳಾಗಿ, ಆಕೆಯು ಆತನನ್ನು ಪತಿಯೆಂದು ಮನಸಾವರಿಸಲು, ಆಕೆಗೆ ಪತಿಯಾದ ಭೀಮನ ರಕ್ಷಣಮಾಡುವ ಪತ್ನೀಧರ್ಮಪಾಲನದ ಪ್ರಸಂಗವು ಬಂದಿತು. ಹೀಗೆ ಆಕೆಯು ಪಾಲಿಸಬೇಕಾದ ಬಾಂಧವ್ಯಧರ್ಮ-ಪತ್ನೀಧರ್ಮಗಳೆರಡರಲ್ಲಿ ಪತ್ನೀಧರ್ಮವೇ ಪ್ರಧಾನಧರ್ಮವಾಗುವದು; ಯಾಕಂದರೆ ಸ್ತ್ರೀಯರಿಗೆ ಪತಿಯೇ ಗತಿಪ್ರದನಲ್ಲದೆ ಮತ್ತೊಬ್ಬರಲ್ಲ. ಮನೆಯಮಗಳನ್ನು ಆಕೆಯ ಪತಿಗೆ ದಾನವಾಗಿ ಕೊಡಲು, ಆಕೆಗೆ ತವರಮನೆಯವರ ಹಿತಸಂಬಂಧವು

ಗೌಣವಾಗಿ, ಪತಿಯ ಹಿತಸಂಬಂಧವು ಪ್ರಧಾನವಾಗುವದು. ಅಂತೇ ಹಿಡಿಂಬೆಯು ತನ್ನ ಪತಿಯ ಪ್ರಾಣರಕ್ಷಣದ ಅವಸರವಲ್ಲ, ಅಣ್ಣನ ಪ್ರಾಣ ರಕ್ಷಣಕ್ಕಾಗಿ ಯತ್ನಿಸದಿರುವದು ಪ್ರತ್ಯವಾಯಕವಲ್ಲವು

ಹೀಗೆ ಹಿತಸಂಬಂಧದ ತಾರತಮ್ಯದ ದೃಷ್ಟಿಯಿಂದ ನೋಡಿದರೆ, ಕುಟುಂಬಧರ್ಮ, ಸಮಾಜಧರ್ಮ, ರಾಷ್ಟ್ರಧರ್ಮ, ವಿಶ್ವಧರ್ಮ ಇವುಗ ಳೆಲ್ಲ ಕ್ರಮವಾಗಿ ಗೌಣತ್ವವು ಹೆಚ್ಚು ಹೆಚ್ಚು ಆರೋಪಿತವಾಗುತ್ತ ಹೋಗುವದು; ಅಂದರೆ ಕುಟುಂಬಧರ್ಮಕ್ಕಿಂತ ಸಮಾಜಧರ್ಮವು ಗೌಣವು, ಸಮಾಜಧರ್ಮಕ್ಕಿಂತ ರಾಷ್ಟ್ರಧರ್ಮವು ಗೌಣವು, ರಾಷ್ಟ್ರಧರ್ಮ ಕ್ಕಿಂತ ವಿಶ್ವಧರ್ಮವು ಗೌಣವು, ಎಂದು ಒಪ್ಪಿಕೊಳ್ಳಬೇಕಾಗುತ್ತದೆ; ಯಾಕಂದರೆ, ವ್ಯಕ್ತಿಯ ನಿತ್ಯವಾದ ಪ್ರತ್ಯಕ್ಷ ಹಿತಸಂಬಂಧವು, ಕುಟುಂ ಬಕ್ಕಿದ್ದಷ್ಟು ಸಮಾಜಕ್ಕಿರುವದಿಲ್ಲ, ಸಮಾಜಕ್ಕಿದ್ದಷ್ಟು ರಾಷ್ಟ್ರಕ್ಕಿರುವ ದಿಲ್ಲ, ರಾಷ್ಟ್ರಕ್ಕಿದ್ದಷ್ಟು ವಿಶ್ವಕ್ಕಿರುವದಿಲ್ಲ; ಆದರೆ ರಾಷ್ಟ್ರಾಂತರ್ಗತವಾದ ಸರ್ವಧರ್ಮಗಳ ರಕ್ಷಣವನ್ನು ರಾಷ್ಟ್ರೀಯಸತ್ತೆಯು ಮಾಡುತ್ತಿರುವದ ರಿಂದ, ಆ ರಾಷ್ಟ್ರೀಯ ಸತ್ತೆಯು ಅತ್ಯಲ್ಪಕಾಲದಲ್ಲಿ ನಷ್ಟವಾಗಿಹೋಗುವ ಪ್ರಸಂಗ ಒದಗಿದಾಗ, ರಾಷ್ಟ್ರೀಯಧರ್ಮಕ್ಕೆ ಪ್ರಾಧಾನ್ಯಬರಲು, ರಾಷ್ಟ್ರದ ಅಂತಯ ಧರ್ಮಗಳೆಲ್ಲ ಗೌಣವಾಗುವವು. ಆಗ ಆ ರಾಷ್ಟ್ರದವರು ತಮ್ಮ ಸರ್ವ ಧರ್ಮ ರಕ್ಷಕ ರಾಷ್ಟ್ರೀಯಸತ್ತೆಯನ್ನು, ಏಕಮುಖದಿಂದ ಕಾಯ್ದು ಕೊಳ್ಳುವ ಪ್ರಸಂಗದಲ್ಲ, ಅವರಿಗೆ ತಮ್ಮ ದೇಹದಪರಿವೆಯೇ ಇಲ್ಲದಾ ಗಲು, ಅಂತರ್ಯಧರ್ಮಗಳ ಸ್ಮೃತಿಯೇ ಅವರಿಗೆ ಉಳಿಯುವದಿಲ್ಲ; ಆದ್ದರಿಂದ ಇಂಥ ಪ್ರಸಂಗದಲ್ಲಾದ ಧರ್ಮಲೋಪವು ಪ್ರತ್ಯವಾಯಕ ವಲ್ಲ. ಅಂತೇ ಹಿಂದೆ ೩೨೫ನೇ ಪುಟದಲ್ಲಿ ಧರ್ಮನಿಷ್ಠನಾದ ದ್ರುಪದರಾಜನ ಸತ್ತೆಯು ಪಾಂಡವ-ಕೌರವರಿಂದ ನಷ್ಟವಾಗುವ ಪ್ರಸಂಗವು ಒದಗಲು, ದ್ರುಪದನ ಪ್ರಜೆಗಳು ಜೀವದ ಹಂಗುದೊರೆದು ಗಂಡಸರು, ಹೆಂಗಸರು, ಹುಡುಗರು, ಮುದುಕರು, ರೋಗಿಗಳುಕೂಡ ತಮ್ಮ ಕೈಗೆಸಿಕ್ಕದ್ದನ್ನು ತಕ್ಕೊಂಡು, ಶತ್ರುಗಳ ನಿವಾರಣೆಮಾಡುವದಕ್ಕಾಗಿ ಯುದ್ಧಭೂಮಿಗೆ ಹೊರಟಿರುವರು.

ಹೀಗೆ ರಾಷ್ಟ್ರೀಯ ಸತ್ತಾನಾಶಕ ಕ್ಷಣಿಕಪ್ರಸಂಗದಲ್ಲಿ, ಪ್ರಜೆಗಳಿಗೆ ತಮ್ಮ ದೇಹದ ಪರಿವೆಯಿಲ್ಲದಾದದ್ದರಿಂದ, ದೇಹರಕ್ಷಕವಾದ ತಮ್ಮ ಆಂತರ್ಯಧರ್ಮಪಾಲನದ ಪರಿವೆಯಿಲ್ಲದಾದರೂ, ಅದೇರಾಷ್ಟ್ರೀಯ ಸತ್ತೆಯ ನಾಶವು ಕಾಲಾಂತರದಲ್ಲ ಅನಿಶ್ಚಿತವಾಗಿ ಆಗುವ ಪ್ರಸಂಗವಿದ್ದಲ್ಲ, ಹೀಗೆ ಆಂತರ್ಯಧರ್ಮಗಳನ್ನು ಬುದ್ಧಿಪೂರ್ವಕ ಉಲ್ಲಂಘಿಸುವದು ಸರ್ವಘಾತಕರವಲ್ಲವು. ಭಾರತದ ಹದಿನೆಂಟುದಿನಗಳಯುದ್ಧದಲ್ಲಿ ದ್ರುಪದನ ಪ್ರಜೆಗಳಂತೆ ಆಂತರ್ಯಧರ್ಮಗಳ ಉಲ್ಲಂಘನವನ್ನು, ಉಭಯಪಕ್ಷದ ಪ್ರಜೆಗಳೂ ಮಾಡದಿರುವದು ವಿಚಾರಮಾಡತಕ್ಕ ಮಾತಾಗಿದೆ. ಯುಧಿಷ್ಠಿರನಂತು ಯುದ್ಧಕ್ಕೆಸಿದ್ಧನಾಗಿ ನಿಂತಿರುವಾಗ, ಶತ್ರುಸೈನ್ಯದಲ್ಲಿದ್ದ ತನ್ನ ಗುರುಗಳನ್ನೂ, ಹಿರಿಯರನ್ನೂ ವಂದಿಸಿ, ಅವರ ಅಪ್ಪಣೆಪಡೆದು ಯುದ್ಧವನ್ನು ಆರಂಭಿಸಿರುವನು. ರಾಷ್ಟ್ರಹಿತಮಾಡುವನೆವದಿಂದ ಪ್ರಜೆಗಳು ತಮ್ಮ ಆಂತರ್ಯಧರ್ಮಗಳನ್ನು ಬುದ್ಧಿಪೂರ್ವಕ ಉಲ್ಲಂಘಿಸಹತ್ತಿದರೆ, ರಾಷ್ಟ್ರಕ್ಕೆ ಧರ್ಮೋಲ್ಲಂಘನದ ಕೆಟ್ಟಚಟಬಿದ್ದು, ಮನೆತನಗಳ ಹಾಗು ಸಮಾಜಗಳ ಹೊಂದಿಕೆಕೆಟ್ಟುಹೋಗಿ ರಾಷ್ಟ್ರದ ಒಕ್ಕಟ್ಟಿಗೆ ಬಾಧೆಯುಂಟಾಗಲು, ರಾಷ್ಟ್ರವು ಬಲಹೀನವೂ, ಹೆಚ್ಚು ಪರತಂತ್ರವೂ ಆಗುವ ಸಂಭವವಿರುತ್ತದೆ. ಈ ಪದ್ಧತಿಯಿಂದ ರಾಷ್ಟ್ರಹಿತಮಾಡುವದೆಂದರೆ, ಮನೆತನಕೆಡಿಸಿ ರಾಷ್ಟ್ರಹಿತಮಾಡಹೋದಂತಾಗುವ ಸಂಭವವಿರುತ್ತದೆ. ಹೀಗಾದಲ್ಲಿ ಇಂಥ ಮುರಕಮನೆಗಳ ರಾಷ್ಟ್ರವು ಯಾವ ಸೌಭಾಗ್ಯಪಡೆದೀತೆಂಬದನ್ನು, ವಿವೇಕಿಗಳು ಶಾಂತಮನಸ್ಸಿನಿಂದ ದೂರ ಲಕ್ಷಗೊಟ್ಟು ವಿಚಾರಿಸಬಹುದಾಗಿದೆ.

## ೧೦ ಬಕವಧಪರ್ವ

**೧೫೭ನೇ ಅಧ್ಯಾಯ—ಬ್ರಾಹಣನ ಚಿಂತೆ**—ಜನಮೇಜಯಾ, ಪಾಂಡವರು ಏಕಚಕ್ರನಗರಕ್ಕೆ ಬಂದಬಳಿಕ ಅವರು ರಮಣೀಯವಾದ ಅರಣ್ಯಗಳನ್ನೂ, ಭೂಪ್ರದೇಶಗಳನ್ನೂ, ನದಿಗಳನ್ನೂ, ಸರೋವರಗಳನ್ನೂ ನೋಡಲಿಕ್ಕೆ ಹೋಗುತ್ತಿದ್ದರು. ವಿಶೇಷವಾಗಿ ಅವರು ಮನೆಯಲ್ಲಿರುವದೇ ಕಡಿಮೆ. ನಿರ್ವಾಹಕ್ಕಾಗಿ ಅವರು ಭಿಕ್ಷೆಬೇಡುತ್ತಿದ್ದರು. ಗುಣವಂತರಾದ ಅವರನ್ನು

ನೋಡಿದಕೂಡಲೆ ಜನರಿಗೆ ಬಹಳ ಸಂತೋಷವಾಗುತ್ತಿತ್ತು. ಅವರು ದೊರೆತ ಭಿಕ್ಷವನ್ನು ರಾತ್ರಿ ತಾಯಿಯ ಕೈಯಲ್ಲಿ ಕೊಡುತ್ತಿದ್ದರು. ಮಕ್ಕಳು ತಂದುಕೊಟ್ಟ ಭಿಕ್ಷೆಯಲ್ಲಿ ತಾಯಿಯು ಸಮನಾಗಿ ಎರಡುಭಾಗ ಮಾಡಿ, ಒಂದು ಭಾಗವನ್ನು ಭೀಮನಿಗೆ ಕೊಡುತ್ತಿದ್ದಳು. ಉಳಿದ ಭಾಗವನ್ನು ತಾವು ಐವರು ಸಮನಾಗಿ ಹಂಚಿಕೊಂಡು ಉಣ್ಣುತ್ತಿದ್ದರು. ಹೀಗೆ ಕೆಲವು ದಿವಸ ಸುಖದಿಂದ ಕಾಲಹರಣಮಾಡುತ್ತಿರಲು, ಒಂದುದಿವಸ ಭೀಮನ ಹೊರತು ಉಳಿದವರು ಭಿಕ್ಷೆಗೆ ಹೋಗಿರುವಾಗ, ಅವರು ಇರುತ್ತಿದ್ದ ಬ್ರಾಹ್ಮಣನ ಮನೆಯವರೆಲ್ಲ ದೊಡ್ಡದನಿಯಿಂದ ಅಳುವದು ಕುಂತಿಯ ಕಿವಿಗೆಬಿದ್ದು, ಆಕೆಯ ಅಂತಃಕರಣವು ಕಳವಳಿಸಿತು. ಆಕೆಯು ಭೀಮನನ್ನು ಕುರಿತು— "ಭೀಮಾ, ಈ ಬ್ರಾಹ್ಮಣನ ಮನೆಯವರಿಗೆ ಏನೋ ಸಂಕಟವು ಒದಗಿದಂತೆ ಕಾಣುತ್ತದೆ. ನಾವು ಇಷ್ಟುದಿವಸ ಇವರ ಮನೆಯಲ್ಲಿ ಸುಖದಿಂದ ವಾಸಿಸಿರುವೆವು. ಮಂದಿ ಮಾಡಿದ ಉಪಕಾರವನ್ನು ಯಾವಾಗಲೂ ಸ್ಮರಿಸುತ್ತ, ಒಳ್ಳೆಯರೀತಿಯಿಂದ ಪ್ರತ್ಯುಪಕಾರಮಾಡುವದು ಮನುಷ್ಯತ್ವದ ಲಕ್ಷಣವು; ಆದ್ದರಿಂದ ಈ ಬ್ರಾಹ್ಮಣನಿಗೆ ಈಗ ಪ್ರತ್ಯುಪಕಾರಮಾಡಲಿಕ್ಕೆ ಬರುವಹಾಗಿದ್ದರೆ ನಾವು ಮಾಡೋಣ" ಅನ್ನಲು, ಭೀಮನು—"ಅವ್ವಾ, ಹೋಗು, ಬ್ರಾಹ್ಮಣನಿಗೆ ಏನು ಸಂಕಟಬಂದಿರುವದೆಂಬದನ್ನು ಕೇಳಿಬಾ. ಅದನ್ನು ನಿವಾರಣಮಾಡಲಿಕ್ಕೆ ಬರುವಹಾಗಿದ್ದರೆ, ನಾನು ಸಂತೋಷದಿಂದ ಮಾಡುವೆನು" ಎಂದು ಹೇಳಿದನು. ಆಗ ಕುಂತಿಯು ಲಗಬಗೆಯಿಂದ ಬ್ರಾಹ್ಮಣನ ಬಳಿಗೆ ಹೋದಳು. ಆಗ ಬ್ರಾಹ್ಮಣನೂ, ಆತನ ಹೆಂಡತಿಯೂ, ಒಂದು ಸಣ್ಣಹುಡುಗಿಯೂ, ಒಂದು ಚಿಕ್ಕ ಗಂಡುಮಗುವೂ ಅಳುತ್ತ ಕುಳಿತಿದ್ದರು. ಆಗ ಬ್ರಾಹ್ಮಣನು ತನ್ನೊಳಗೆ—"ಧಿಕ್ಕಾರವು; ನಿಸ್ಸಾರವೂ-ನಿರರ್ಥಕವೂ-ಪರಾಧೀನವೂ-ದುಃಖಮೂಲವೂ ಆದ ನನ್ನ ಬಾಳಿಗೆ ಧಿಕ್ಕಾರವು! ಭಯಂಕರ ಸಂಕಟಗಳನ್ನಾದರೂ ಎಷ್ಟಂತ ಸಹನ ಮಾಡಬೇಕು? ದೇಹದಲ್ಲಿ ಪ್ರಾಣಗಳಿರುವವರೆಗೆ ದುಃಖ-ಸಂತಾಪಗಳು ಬೆನ್ನು ಹತ್ತಿರುವವು. ಸುಖವಾಗಬೇಕೆಂದು ಯತ್ನಿಸಿದಂತೆ ದುಃಖಗಳು ಹೆಚ್ಚುತ್ತಿರುವವು. ಧರ್ಮ-ಅರ್ಥ-ಕಾಮಗಳನ್ನು ಆತ್ಮನೊಬ್ಬನೇ ಭೋಗಿಸುವನು; ಆದರೆ ಅವುಗಳ ವಿಯೋಗವು ಅತ್ಯಂತ ದುಃಖದಾಯಕವಾಗು

ವದು. ಮೋಕ್ಷವು ಉತ್ತಮವಾದದ್ದೆಂದು ಹೇಳುವರು; ಆದರೆ ಅದು ಇರುತ್ತದೆಂಬದೇ ಯಾವಬಗೆಯಿಂದಲೂ ಸಿದ್ಧವಾಗುವದಿಲ್ಲ. ಅರ್ಥಸಂಪಾದನವು ನರಕಕ್ಕೆ ಕಾರಣವು ಅರ್ಥವನ್ನು ಸಂಪಾದಿಸುವಾಗ ಕಷ್ಟ, ಸಂಪಾದಿಸಿದ ಅರ್ಥವನ್ನು ಕಾಯುವಾಗ ಕಷ್ಟ; ಸಂಪಾದಿಸಿದ ಅರ್ಥವು ನಷ್ಟವಾದರೆ ಕಷ್ಟದಲ್ಲಿ ಪರಮಕಷ್ಟ! ಸದ್ಯಕ್ಕೆ ನನ್ನಮೇಲೆ ಬಂದಿರುವ ಸಂಕಟದಿಂದ ನಾನು ಹೇಗೆ ಪಾರಾಗಿ ಹೋಗಬೇಕು? ನಾನು ಮೊದಲೇ ಹೆಂಡಿರುಮಕ್ಕಳನ್ನು ಕಟ್ಟಿಕೊಂಡು ಎಲ್ಲಿಗಾದರೂ ಹೋಗಿಬಿಟ್ಟಿದ್ದರೆ ಬಹಳ ನೆಟ್ಟಗಾಗುತ್ತಿತ್ತು; ಆದರೆ ಈಗ ಅಂದು ಮಾಡುವದೇನು?

ಹೀಗೆ ಬ್ರಾಹ್ಮಣನು ತನ್ನೊಳಗೆ ಅಂದುಕೊಂಡು ತನ್ನ ಹೆಂಡತಿಯನ್ನು ಕುರಿತು—"ಎಲೈ ದುಷ್ಟಸ್ತ್ರೀಯೇ, ನಾನು ಇಲ್ಲಿಂದ ಹೋಗೋಣವೆಂದು ನಿನಗೆ ಪರಿಪರಿಯಾಗಿ ಹೇಳಿದೆನು; ಆದರೆ ನೀನು ನನ್ನ ಮಾತು ಕೇಳಲಿಲ್ಲ. ನನ್ನಹಾಗು ನನ್ನ ತಾಯಿತಂದೆಗಳ ಜನ್ಮಭೂಮಿಯೆಂದು ನೀನು ಈ ಊರಹಿಡಿದು ಕುಳಿತುಕೊಂಡೆ. ಈಗ ನಮ್ಮಮೇಲೆ ಬಂದಿರುವ ಸಂಕಟವನ್ನು ನೋಡು. ಈ ಪ್ರಸಂಗದಲ್ಲಿ ನನ್ನ ನಾಶವಾಗುವದೇ ಯೋಗ್ಯವು. ಘಾತಕಮನುಷ್ಯನಂತೆ ಬಂಧು ಬಳಗದವರನ್ನು ಬಲಿಕೊಟ್ಟು ನಾನು ಬದುಕಿ ಇರಲಾರೆನು. ಧರ್ಮಾಚರಣೆಯಲ್ಲಿ ಸಹಾಯಕಳೂ, ಸಹನಶೀಲಳಾದ ತಾಯಿಯಂತೆ ನನ್ನ ಸಂಗೋಪನಮಾಡುವವಳೂ, ದೇವರು ಒದಗಿಸಿಕೊಟ್ಟಿರುವ ನನ್ನ ಸ್ನೇಹಿತಳೂ, ನನ್ನ ಸಂಸಾರಸುಖದ ನಿತ್ಯದ ಮಾರ್ಗವೂ, ತಾಯಿತಂದೆಗಳು ಒದಗಿಸಿಕೊಟ್ಟಿರುವ ನನ್ನ ಗೃಹಸ್ಥಾಶ್ರಮದ ಪಾಲುಗಾರಳೂ, ಮಂತ್ರಪೂರ್ವಕವಾದ ವಿವಾಹದಿಂದ ಅಂಗೀಕರಿಸಲ್ಪಟ್ಟವಳೂ ಕುಲೀನಳೂ, ತರುಣಿಯೂ, ಪತಿವ್ರತೆಯೂ ಆದ ನಿನ್ನನ್ನು ನನ್ನ ಜೀವದ ಸಲುವಾಗಿ ನಾಶಗೊಳಿಸಲು ನಾನು ಸರ್ವಥಾ ಸಿದ್ಧನಾಗಲಾರೆನು. ನನ್ನ ಈ ಮಗಳಂತು ತೀರಚಿಕ್ಕವಳು; ಆಕೆಯು ಪತಿಯ ಇಡಗಂಟಾಗಿದ್ದು ಆಕೆಯನ್ನು ಬ್ರಹ್ಮದೇವನು ನನ್ನಲ್ಲಿ ಇಟ್ಟಿರುವನು. ಪಿತೃಗಳೂ, ನಾನೂ ದೌಹಿತ್ರರಿಂದಾಗುವ ಸದ್ಗತಿಯನ್ನು ಇಚ್ಛಿಸುತ್ತಿರುವೆವು ಅಂದಬಳಿಕ ಈಕೆಯನ್ನು ನಾಶಗೊಳಿಸುವದು ಹೇಗೆ? ನನ್ನ ಚಿಕ್ಕಬಾಲಕನಂತು ಹಸುಗೂಸು; ನನ್ನ ವಂಶದ ಆಧಾರವು. ಅದನ್ನಾದರೂ ಹೇಗೆ

ನಾಶಗೊಳಿಸಬೇಕು ? ಇನ್ನು ನಾನೇ ಸಾಯಬೇಕೆಂದರೆ ನನ್ನ ತರುವಾಯ ಇವರೆಲ್ಲರೂ ಉಳಿಯಲಾರರು ; ಆದ್ದರಿಂದ ನಾವೆಲ್ಲರೂ ಒಮ್ಮೆಲೆ ಸಾಯು ವದು ನೆಟ್ಟಗೆ.

**೧೫೮ನೇ ಅಧ್ಯಾಯ—ಬ್ರಾಹ್ಮಣಸ್ತ್ರೀಯ ಭಾಷಣ**—ಪತಿಯ ಈ ಮಾತುಗಳನ್ನು ಕೇಳಿ ಆ ಬ್ರಾಹ್ಮಣಸ್ತ್ರೀಯು—"ಮಹಾರಾಜ, ಒಬ್ಬ ಅಜ್ಞಮನುಷ್ಯನಂತೆ ನೀವು ಯಾಕೆ ಸಂತಾಪಪಡುವಿರಿ ? ಹೇಳಿಕೇಳಿ ಮೃತ್ಯುಲೋಕದ ವಾಸವಿದು ! ಇಲ್ಲಿ ಪ್ರತಿಒಬ್ಬನಿಗೆ ಯಾವಾಗಾದರೂ ಮರಣವು ಬರತಕ್ಕದ್ದೇ ! ಅಂದಬಳಿಕ ಅದಕ್ಕಾಗಿ ಸಂತಾಪಪಟ್ಟು ಉಪ ಯೋಗವೇನು ? ಸ್ತ್ರೀಯನ್ನಾಗಲಿ, ಹೆಣ್ಣುಮಕ್ಕಳನ್ನಾಗಲಿ ಇಚ್ಛಿಸು ವದು ತನ್ನ ಜೀವಿತದ ಸಲುವಾಗಿಯೇ. ಇದನ್ನರಿತು ಅವರಸಲುವಾಗಿ ದುಃಖಿಸುವದನ್ನು ಬಿಟ್ಟುಬಿಡಬೇಕು. ನಾನೇ ನನ್ನ ದೇಹದ ಬಲಿಯನ್ನು ಕೊಡುವೆನು. ಪತಿಯ ಹಿತಕ್ಕಾಗಿ ತನ್ನ ಪ್ರಾಣವನ್ನಾದರೂ ಅರ್ಪಿ ಸುವದು ಪತಿವ್ರತಾಸ್ತ್ರೀಯ ಶ್ರೇಷ್ಠ ಕರ್ತವ್ಯವಾಗಿರುವದು. ನಾನು ಹೋಗುವದರಿಂದ ನಿಮಗೆ ಸುಖವಾಗಿ ನನಗೆ ಸ್ವರ್ಗಪ್ರಾಪ್ತಿಯಾಗುವದ ಲ್ಲದೆ, ಈ ಲೋಕದಲ್ಲಿ ಕೀರ್ತಿಯುಂಟಾಗುವದು. ನೀವು ಇರುವದರಿಂದ ಈ ಚಿಕ್ಕಬಾಲಕನ ಶಿಕ್ಷಣವು ಸರಿಯಾಗಿ ಆಗುವದು. ಈ ಚಿಕ್ಕಮಗುವಿಗೆ ಯೋಗ್ಯಪತಿಯು ದೊರೆಯುವನು ಈ ಕೆಲಸಗಳು ನನ್ನಿಂದಾಗಬಹುದೇ ? ನನ್ನಿಂದ ತಮಗೆ ಗಂಡುಹೆಣ್ಣುಮಕ್ಕಳಾಗಿರುವದರಿಂದ, ನನ್ನನ್ನು ನೀವು ಋಣಮುಕ್ತರಾಗಿ ಮಾಡಿರುವಿರಿ. ಭೂಮಿಯಲ್ಲಿ ಬಿದ್ದ ಮಾಂಸಕ್ಕೆ ಪಕ್ಷಿ ಗಳು ಜಪ್ಪಹಾಕಿರುವಂತೆ, ಪತಿಹೀನ ಸ್ತ್ರೀಯರ ಸಲುವಾಗಿ ದುಷ್ಟರು ಜಪ್ಪಹಾಕಿರುವರು. ಅವರು ತಮ್ಮ ಹೇತುವನ್ನು ಸಾಧಿಸುವದಕ್ಕಾಗಿ ಅನೇಕ ಉಪಾಯಗಳನ್ನು ಮಾಡುವರು ; ದ್ರವ್ಯಲೋಭತೋರಿಸಿ ಮೋಸ ಗೊಳಿಸುವರು ; ಪ್ರಾರ್ಥಿಸುವರು; ಅಂಜಿಕೆಯನ್ನು ತೋರಿಸುವರು ; ಹೀಗಿರುವಾಗ ಪ್ರಸಂಗವಿಶೇಷದಲ್ಲಿ ಕುಲಕ್ಕೆ ಕಲಂಕ ಉತ್ಪನ್ನವಾಗುವ ನಡತೆಯು ಎಷ್ಟೋ ಸ್ತ್ರೀಯರಿಂದ ಆಗುತ್ತದೆ ; ಆದರೆ ನಾನು ಸನ್ಮಾರ್ಗ ದಿಂದ ನಡೆಯಲು ಇಚ್ಛಿಸುತ್ತಿರುವದರಿಂದ, ಅಂಥ ಪ್ರಸಂಗ ಒದಗಿದರೆ, ಪ್ರಾಣತ್ಯಾಗಮಾಡಿದ ಹೊರತು ಬೇರೆ ಉಪಾಯವಿಲ್ಲ. ಅಂದಬಳಿಕ ಆಗ,

ಈ ಹುಡುಗರು ಅನಾಥರಾಗಲಿಕ್ಕಿಲ್ಲವೆ? ಒಟ್ಟಿಗೆ, ನಿಮ್ಮ ವಿಯೋಗವಾದರೆ ನಮ್ಮ ಮೂವರ ನಾಶವೂ ಆಗುವದು. ಮಕ್ಕಳು ಮರಿಗಳಾಗಿ ಪತಿಯಮುಂದೆ ಮರಣಹೊಂದುವದು ಸತಿಯ ಉತ್ತಮ ಗತಿಗೆ ಕಾರಣವೆಂದು ಧರ್ಮಜ್ಞರು ಹೇಳುವರು. ಲೌಕಿಕದಲ್ಲಿಯೂ ಅಂಥವರನ್ನು ಭಾಗ್ಯವಂತರೆಂದು ತಿಳಿಯುವರು. ಸಂತತಿ, ದ್ರವ್ಯ, ಪ್ರಿಯಮಿತ್ರ, ಪತ್ನಿ ಇವರನ್ನು ಬಯಸುವದು, ಆಪನ್ನಿವಾರಣ-ಧರ್ಮರಕ್ಷಣ - ಮೋಕ್ಷಸಾಧನಗಳಿಗಾಗಿಯೇ ಎಂದು ಸಜ್ಜನರು ಹೇಳುವರು. ಆಪತ್ತಿನಲ್ಲಿ ಉಪಯೋಗಿಸುವದಕ್ಕಾಗಿ ದ್ರವ್ಯವನ್ನು ರಕ್ಷಿಸಬೇಕು ; ದ್ರವ್ಯದ ಯೋಗದಿಂದ ಸ್ತ್ರೀಯನ್ನು ರಕ್ಷಿಸಬೇಕು ; ಸ್ತ್ರೀಹಾಗು ದ್ರವ್ಯ ಇವುಗಳ ಯೋಗದಿಂದ ತನ್ನನ್ನು ರಕ್ಷಿಸಬೇಕು ; ಆದ್ದರಿಂದ ಮಹಾರಾಜಾ, ನನಗೆ ಅಪ್ಪಣೆಕೊಟ್ಟು ಈ ಬಾಲಕರನ್ನು ನೀವು ರಕ್ಷಿಸಿರಿ. ಸ್ತ್ರೀಯರ ಪ್ರಾಣಹರಣಮಾಡುವದು ಅಧರ್ಮವೆಂದು ಧರ್ಮಜ್ಞರು ಹೇಳಿರುವರು. ರಾಕ್ಷಸರು ಧರ್ಮಜ್ಞರಿರುವರೆಂದು ಪ್ರಸಿದ್ಧಿಯಿರುವರು. ಆದ್ದರಿಂದ ಬಕರಾಕ್ಷಸನು ಕದಾಚಿತ್ ನನ್ನನ್ನು ಕೊಲ್ಲಲಿಕ್ಕೂ ಇಲ್ಲ; ಕಾರಣ ಧರ್ಮಜ್ಞರೇ, ಯಾವದೃಷ್ಟಿಯಿಂದ ನೋಡಿದರೂ ರಾಕ್ಷಸನಬಳಿಗೆ ನನ್ನನ್ನು ಕಳಿಸುವದೇ ಯೋಗ್ಯವಾಗಿರುತ್ತದೆ; ನಾನು ಹೋದರೆ ನಿಮಗೆ ಎರಡನೆಯ ಸ್ತ್ರೀಯು ದೊರೆಯಬಹುದು. ಯಾಕಂದರೆ ಪುರುಷರು ಅನೇಕಸ್ತ್ರೀಯರನ್ನು ಮಾಡಿಕೊಳ್ಳುವದು ಅಧರ್ಮವಲ್ಲ ; ಆದರೆ ಸ್ತ್ರೀಯರ ಮಾತು ಹಾಗಲ್ಲ. ಇವೆಲ್ಲವನ್ನು ವಿಚಾರಿಸಿ, ಆತ್ಮಘಾತವು ನಿಂದ್ಯವೆಂಬದನ್ನರಿತು ನನ್ನನ್ನು ರಾಕ್ಷಸನಬಳಿಗೆ ಕಳಿಸಿ ನಿಮ್ಮನ್ನೂ, ನಿಮ್ಮ ಕುಲವನ್ನೂ, ಈ ಎರಡು ಹುಡುಗರನ್ನೂ ಸಂಕಟದಿಂದ ಮುಕ್ತಮಾಡಿರಿ" ಎಂದು ನುಡಿಯಲು, ಬ್ರಾಹ್ಮಣನು ಹೆಂಡತಿಯನ್ನು ಗಟ್ಟಿಯಾಗಿ ಅಪ್ಪಿಕೊಂಡನು. ಅವರಿಬ್ಬರ ಕಣ್ಣುಗಳಲ್ಲಿಯೂ ನೀರು ಧಾರೆಯಿಟ್ಟು ಸುರಿಯಹತ್ತಿದವು

**೧೫೯ನೇ ಅಧ್ಯಾಯ--ಬ್ರಾಹ್ಮಣನ ಮಗಳ ಮಾತು**--ಈ ಮೇರೆಗೆ ಬ್ರಾಹ್ಮಣನೂ, ಆತನ ಹೆಂಡತಿಯೂ ಆಡಿದ ಮಾತುಗಳನ್ನು ಕೇಳಿ, ಅವರ ಮಗಳು ದುಃಖದಿಂದ ಅವರನ್ನು ಕುರಿತು—"ನೀವು ಚಿಂತಾಕ್ರಾಂತರಾಗಿ ಹೀಗೆ ಅಳುವದೇಕೆ? ಧರ್ಮದೃಷ್ಟಿಯಿಂದ ನೋಡಿದರೆ,

ಎಂದಿಲ್ಲೊಂದುದಿನ ನನ್ನನ್ನು ನೀವು ತ್ಯಜಿಸಲೇಬೇಕಾಗುವದು; ಆದ್ದರಿಂದ ಈಗೇ ನನ್ನನ್ನು ತ್ಯಜಿಸಿ ನೀವು ಎಲ್ಲರ ಸಂರಕ್ಷಣಮಾಡಿಕೊಳ್ಳಿರಿ. ಸಂತತಿಯನ್ನು ಇಚ್ಛಿಸುವದು, ತಮ್ಮನ್ನು ಸಂಕಟದಿಂದ ಮುಕ್ತಮಾಡುವದಕ್ಕಾಗಿಯೇ ಅಲ್ಲವೆ? ಅಂದಬಳಿಕ ಈಸಕುಂಬಳಕಾಯಿಯಿಂದ ನದಿಯನ್ನು ದಾಟುವಂತೆ, ನನ್ನಿಂದ ನೀವುಸಂಕಟಮುಕ್ತರಾಗಿರಿ. ಅಪ್ಪಾ, ಪುತ್ರನು ಇಹಲೋಕ-ಪರಲೋಕಗಳಲ್ಲಿ ಪಿತೃಗಳನ್ನು ಸಂಕಟಮುಕ್ತರಾಗಮಾಡುವದರಿಂದಲೇ, ಸುಜ್ಞರು ಆತನನ್ನು ಪುತ್ರನೆಂದು ಕರೆಯುವರು; ಆದರೆ ಮಗನಂತೆ ನಾನು ನಿಮ್ಮ ಉಪಯೋಗಕ್ಕೆ ಬೀಳಲಾರೆನು. ಇನ್ನು, ನನ್ನಲ್ಲಿ ದೌಹಿತ್ರರ ಉತ್ಪತ್ತಿಯಾಗಬೇಕೆಂದು, ಪಿತಾಮಹಾದಿ ಪಿತೃಗಳು ಇಚ್ಛಿಸುತ್ತಿರಬಹುದು; ಆದರೆ ನನ್ನ ಹೊಟ್ಟೆಯಲ್ಲಿ ಮಕ್ಕಳಾಗಿ ಅವರು ಆ ಪಿತೃಗಳನ್ನು ಉದ್ಧರಿಸುವದಕ್ಕಿಂತ, ನಾನು ಸ್ವತಃ ನನ್ನ ತಂದೆಯ ಪ್ರಾಣರಕ್ಷಣ ಮಾಡಿ ಆತನನ್ನು ಉದ್ಧರಿಸುವೆನು. ಅಪ್ಪಾ, ಮೇಲಾಗಿ ನನ್ನ ತಮ್ಮನು ತೀರ ಚಿಕ್ಕವನು. ಈ ಸ್ಥಿತಿಯಲ್ಲಿ ನೀವು ಪರಲೋಕವಾಸಿಗಳಾದರೆ, ಸ್ವಲ್ಪಕಾಲದಲ್ಲಿ ಈತನೂ ನಾಶಹೊಂದಬಹುದು. ಹೀಗೆ ನೀವಿಬ್ಬರೂ ನಾಶಹೊಂದಿದರೆ ಪಿತೃಗಳ ಪಿಂಡಗಳ ಉಚ್ಛೇದವಾಗುವದು. ಹೀಗಾಗುವದು ಅತ್ಯಂತ ಅನಿಷ್ಟವು. ನೀವಿಬ್ಬರೂ ಮರಣಹೊಂದುವದರಿಂದ ಅವ್ವನು ಮರಣಹೊಂದುವಳು; ಆಮೇಲೆ ನಾನಾದರೂ ಬದುಕಿ ಉಳಿಯುವದು ಹೇಗೆ? ಆದ್ದರಿಂದ ಈಗೇ ನಾನು ಸತ್ತು ನಿಮ್ಮೆಲ್ಲರನ್ನು ಬದುಕಿಸುವದು ನೆಟ್ಟಗಲ್ಲವೆ? ಅಪ್ಪಾ, ಮಗನು ತನ್ನ ಆತ್ಮನು, ಹೆಂಡತಿಯು ತನ್ನ ಮಿತ್ರಳು; ಕನ್ಯೆಯು ನಿಜವಾಗಿಯೇ ತನ್ನ ಸಂಕಟವು! ಆದ್ದರಿಂದ ಈ ಕಾಲದಲ್ಲಿ ನನ್ನನ್ನು ಯೋಜಿಸಬೇಕು. ಅಪ್ಪಾ, ನಾನು ಸಣ್ಣವಳಾದ್ದರಿಂದ ನಿನ್ನ ತರುವಾಯ ನಾನು, ಅನಾಥಳಾಗಿ ಎಲ್ಲಿಯಾದರೂ ಬಿದ್ದುಕೊಳ್ಳುವದಕ್ಕಿಂತ, ನಿಮ್ಮನ್ನು ಸಂಕಟಮುಕ್ತಮಾಡಿ, ನನ್ನ ದೇಹದ ಸಾರ್ಥಕ್ಯಮಾಡಿಕೊಳ್ಳುವದು ನೆಟ್ಟಗಲ್ಲವೆ?"

ಈ ಮೇರೆಗೆ ಮಗಳು ಆಡಿದ ವಿಚಾರದ ಮಾತುಗಳನ್ನು ಕೇಳಿ, ಆಕೆಯ ತಾಯಿತಂದೆಗಳ ದುಃಖವು ಒತ್ತರಿಸಿತು. ಅವರು ಮೂವರೂ ತೆಕ್ಕೆಬಿದ್ದು ಅಳತೊಡಗಿದರು. ಆಗ ಚಿಕ್ಕಮಗುವು ಅಂಬೆಗಾಲಿಕ್ಕುತ್ತ ಅವರ

ಬಳಿಗೆ ಹೋಗಿ, ಒಂದು ಹುಲ್ಲುಕಡ್ಡಿಯನ್ನು ತಕ್ಕೊಂಡು—"ಅವ್ವಾ, ಅಪ್ಪಾ, ಅಕ್ಕಾ, ಯಾಕೆ ಅಳುವಿರಿ? ಅಳಬೇಡಿರಿ. ಈ ಕಡ್ಡಿಯಿಂದ ರಾಕ್ಷಸನನ್ನು ಕೊಂದುಬಿಡುವೆನು" ಎಂದು ತೊದಲು ಮಾತುಗಳಿಂದ ನುಡಿಯಲು ಅಂತಹ ದುಃಖದ ಪ್ರಸಂಗದಲ್ಲಿಯೂ ಅವರಿಗೆ ಆನಂದವಾಯಿತು. ಇವರನ್ನು ಮಾತಾಡಿಸಲಿಕ್ಕೆ ಇದು ಒಳ್ಳೆಯ ಸಮಯವೆಂದು ತಿಳಿದು, ಕುಂತಿಯು ಬ್ರಾಹ್ಮಣನಬಳಿಗೆ ಹೋಗಿ, ಅಮೃತದ ಮಳೆಗರೆದಂತೆ ಮಾತಾಡತೊಡಗಿದಳು.

**೧೬೦ನೇ ಅಧ್ಯಾಯ—ಬಕ ಭಯಕಥನ—**ಕುಂತಿಯು ಬ್ರಾಹ್ಮಣನನ್ನು ಕುರಿತು—"ಮಹಾರಾಜ, ನಿಮ್ಮ ದುಃಖದ ಮೂಲವನ್ನು ನಾನು ಅರಿಯಬೇಕೆನ್ನುತ್ತೇನೆ, ಹೇಳಬೇಕು. ಅದನ್ನು ನಾಶಮಾಡಲಿಕ್ಕೆ ಬರುವಂತೆ ಇದ್ದರೆ ನಾನು ಮಾಡುವೆನು." ಎಂದು ಕೇಳಲು, ಬ್ರಾಹ್ಮಣನು—"ಅಮ್ಮಾ, ತಪಸ್ವಿನೀ, ಸಜ್ಜನರಿಗೆ ಯೋಗ್ಯವಾದ ಮಾತನ್ನೇ ನೀವು ಆಡುವಿರಿ; ಆದರೆ ನಮ್ಮ ದುಃಖವು ಮನುಷ್ಯರಿಂದ ದೂರವಾಗುವಂತೆ ಇಲ್ಲ; ಯಾಕಂದರೆ, ನಮ್ಮ ಆ ದುಃಖವನ್ನು ದೂರಮಾಡಬೇಕೆನ್ನುವವರು ಮೊದಲು ತಮ್ಮ ಪ್ರಾಣವನ್ನು ಕೊಡಬೇಕಾಗುವದು. ತಾಯಿ, ಈ ನಗರದ ಹತ್ತರ ಬಕನೆಂಬ ಒಬ್ಬ ರಾಕ್ಷಸನಿರುವನು. ಆತನು ಒಳ್ಳೇ ಬಲಿಷ್ಠನಿದ್ದು, ಈ ದೇಶದ, ಅರ್ಥಾತ್ ಈ ನಗರದ ಅಧಿಪತಿಯು ಆಗಿರುವನು. ಆತನು ತನ್ನ ದೊಡ್ಡ ರಾಕ್ಷಸಸೈನ್ಯದ ಸಹಾಯದಿಂದ, ಈ ದೇಶವನ್ನು ಚನ್ನಾಗಿ ರಕ್ಷಿಸುತ್ತಿರುವನು. ಆತನ ಯೋಗದಿಂದ ಈ ದೇಶಕ್ಕೆ ಎಂದೂ ಪರಚಕ್ರಗಳ ಬಾಧೆಯಿಲ್ಲ; ಪಂಚಭೂತಗಳಿಂದಲೂ ಎಂದೂ ಅಪಾಯವಾಗುವದಿಲ್ಲ; ಆದರೆ ನರಮಾಂಸಭಕ್ಷಣಮಾಡುವ ಚಟವು ಆತನಿಗಿರುವದಲ್ಲದೆ, ಆತನ ಆಹಾರವು ಬಹಳವಿರುವದರಿಂದ, ದಿನಾಲು ಆತನಿಗೆ ಮೂವತ್ತುಮಣದ ಅಕ್ಕಿಯಅನ್ನ, ಎರಡುಕೋಣ, ಒಬ್ಬಮನುಷ್ಯ ಇಷ್ಟು ಆಹಾರವನ್ನು ಒದಗಿಸಿಕೊಡಬೇಕಾಗುವದು. ಸರತಿಯಂತೆ ದಿನಾಲು ಒಂದೊಂದು ಮನೆಯವರು, ಇಷ್ಟು ಆಹಾರವನ್ನು ಕೊಡುತ್ತಹೋಗುವ ಪ್ರಚಾರವಿರುವದು. ಈ ಆಹಾರ ಒದಗಿಸಿಕೊಡುವ ಸರತಿಯು ಬಹುಕಾಲದಮೇಲೆ ಒಮ್ಮೆ ಒದಗುತ್ತಿದ್ದರೂ, ಒದಗಿದಾಗ ಆ ಕುಟುಂಬಕ್ಕೆ ಮಹ

ದ್ದುಃಖ ಉಂಟಾಗುವದು. ಆ ದುಃಖದ ಪ್ರಸಂಗವು ಇಂದು ನಮಗೆ ಒದಗಿರುವದು. ಈ ಸರತಿಯನ್ನು ತಪ್ಪಿಸಲಿಕ್ಕೆ ಯಾರಾದರೂ ಯತ್ನಿಸಿದರೆ, ಆ ರಾಕ್ಷಸನು ಆ ಕುಟುಂಬವನ್ನು ಸಹಮೂಲವಾಗಿ ಸಂಹರಿಸುವನು. ಇಲ್ಲಿ ಒಬ್ಬ ಅಯೋಗ್ಯನಾದ ದುರ್ಬಲರಾಜನು, ವೇತ್ರಕೀಯವೆಂಬ ಅರಮನೆಯಲ್ಲಿ ವಾಸಿಸುತ್ತಿರುವನು ; ಆದರೆ ಜನರ ಈ ಕಷ್ಟವನ್ನು ದೂರಮಾಡುವ ಯತ್ನವು ಆತನಿಂದ ಏನೂ ಆಗುವಹಾಗಿಲ್ಲ. ಅಂಥ ದುಷ್ಟರಾಜನ ರಾಜ್ಯದಲ್ಲಿದ್ದಬಳಿಕ, ಇಂಥ ದುಃಖಒದಗುವದು ಸ್ವಾಭಾವಿಕವೇ ಸರಿ. ಮೊದಲು ಯೋಗ್ಯಅರಸನ ಆಶ್ರಯಮಾಡಬೇಕು, ಆಮೇಲೆ ಹೆಂಡತಿ, ಆಮೇಲೆ ದುಡ್ಡು ; ಇಷ್ಟೆಲ್ಲ ಅನುಕೂಲವಾದಬಳಿಕ ಅವುಗಳ ಯೋಗದಿಂದ ಬಂಧುಗಳ ಹಾಗು ಮಕ್ಕಳ ಸಂರಕ್ಷಣಮಾಡಬೇಕು. ನಿಜವಾಗಿಯೆಂದರೆ ನಮಗೆ ಬ್ರಾಹ್ಮಣರಿಗೆ ಹೊಲವಿಲ್ಲ ಮನೆಯಿಲ್ಲ! ಅಂದಬಳಿಕ ಇಂಥ ಅರಸನ ರಾಜ್ಯದಲ್ಲಿ ಯಾಕೆ ಇರಬೇಕು? ನಾವು ಸ್ವತಂತ್ರರಾದವ್ದರಿಂದ ಗುಣಿಜನರಿದ್ದಲ್ಲಿ ವಾಸಿಸಲಿಕ್ಕೆ ನಮಗೆ ಬರುವಹಾಗಿರುವದು. ಬ್ರಾಹ್ಮಣರು ನಾವು, ಹಕ್ಕಿಗಳಿದ್ದಹಾಗೆಯೇ ಸರಿ! ಸುಖಕಂಡಲ್ಲಿ ಹಕ್ಕಿಗಳು ಹೋಗುತ್ತಿರುವಂತೆ ನಾವಾದರೂ ಹೋಗತಕ್ಕದ್ದು ; ಆದರೆ ನಾನು ಹಾಗೆಮಾಡಿರುವದಿಲ್ಲಾದ್ದರಿಂದ ಈಗ ದುಃಖವನ್ನು ಭೋಗಿಸಬೇಕಾಗಿದೆ ಒಬ್ಬ ಮನುಷ್ಯನನ್ನು ಕೊಂಡುಕೊಡಬೇಕೆಂದರೆ ಹತ್ತಿರ ದುಡ್ಡು ಇಲ್ಲ. ಯಾರೊಬ್ಬ ಆಪ್ತರನ್ನು ಕೊಡುವದು ನನ್ನಿಂದ ಆಗುವಹಾಗಿಲ್ಲ; ಆದ್ದರಿಂದ ಆ ರಾಕ್ಷಸನಿಂದ ಪಾರಾಗುವ ಉಪಾಯವು ನನಗೆ ತೋರಲೊಲ್ಲದು ; ಕಾರಣ ನಾವು ಕುಟುಂಬದವರೆಲ್ಲರೂ ರಾಕ್ಷಸನ ಬಳಿಗೆ ಹೋಗಿಬಿಡಬೇಕೆಂದು ಮಾಡಿದ್ದೇವೆ. ಆತನು ನಮ್ಮೆಲ್ಲರನ್ನು ತಿಂದುಬಿಡುವದರಿಂದ ನಮ್ಮೆಲ್ಲರ ದುಃಖನಿವಾರಣವು ಒಮ್ಮೆಲೆ ಆಗಿಹೋಗುವದು."

**೧೬೧ನೇ ಅಧ್ಯಾಯ — ಬಕವಧಾಂಗೀಕಾರ** — ಬ್ರಾಹ್ಮಣನ ಈ ಮಾತುಗಳನ್ನು ಕೇಳಿ ಕುಂತಿಯು—"ಬ್ರಹ್ಮನ್, ನೀವು ನಿರ್ವಥಾ ದುಃಖಪಡಬೇಡಿರಿ ನನ್ನ ಐದುಜನ ಮಕ್ಕಳಲ್ಲಿ ಒಬ್ಬನನ್ನು ನಿಮಗಾಗಿ ಕೊಡುವೆನು. ಐದು ನಾಲ್ವರು ಮಕ್ಕಳು ನನಗೆ ಉಳಿದರೆ, ಅಷ್ಟೇಸಾಕು. ನಿಮ್ಮ ಇಬ್ಬರುಮಕ್ಕಳೂ ಸಣ್ಣವು; ನಿಮ್ಮಿಬ್ಬರಲ್ಲಿ ಒಬ್ಬರು ಹೋದರೂ

ಕುಟುಂಬಘಾತವಾಗುವದು ; ನಿಮ್ಮಲ್ಲಿ ಯಾರು ಹೋಗುವದೂ ನನ್ನ ಮನಸ್ಸಿಗೆ ಬರುವದಿಲ್ಲ.''

ಬ್ರಾಹ್ಮಣ—ಅವ್ವಾ, ತನ್ನ ಜೀವದ ಆಶೆಯಿಂದ ಸ್ವಾರ್ಥವನ್ನು ಲಕ್ಷಿಸಿ ಅತಿಥಿಯ, ಅದರಲ್ಲಿಯೂ ಬ್ರಾಹ್ಮಣನ ಪ್ರಾಣಹರಣಮಾಡುವದು ಯೋಗ್ಯವಲ್ಲ ; ಆದ್ದರಿಂದ ಅಂಥ ಕೆಲಸವನ್ನು ನಾನು ಮಾಡಲಾರೆನು. ಅತ್ಯಂತ ನೀಚರೂ ಇಂಥ ಕೆಲಸವನ್ನು ಮಾಡಲಾರರು. ನಿಜವಾಗಿಯೆಂದರೆ ಬ್ರಾಹ್ಮಣನಸಲುವಾಗಿ ತನ್ನ ಪ್ರಾಣವನ್ನು, ಅಥವಾ ತನ್ನ ಮಕ್ಕಳಪ್ರಾಣವನ್ನು ಕೊಡುವದು ಯೋಗ್ಯವೆಂದು ನನಗೆ ತೋರುವದು. ಆತ್ಮಹತ್ಯೆ-ಬ್ರಹ್ಮಹತ್ಯೆಗಳ ಪ್ರಸಂಗ ಒದಗಿದಾಗ, ನನ್ನ ಮತದಿಂದ ಆತ್ಮಹತ್ಯೆಮಾಡುವದೇ ಯೋಗ್ಯವಾಗಿರುವದು ; ಯಾಕಂದರೆ ಬ್ರಹ್ಮಹತ್ಯೆಯ ಪಾತಕವು ಬಹುದೊಡ್ಡದು. ಅದು ತಿಳಿಯದೆ ಒದಗಿದರೂ ಅದಕ್ಕೆ ಪ್ರಾಯಶ್ಚಿತ್ತವಿಲ್ಲ. ಇನ್ನು ಆತ್ಮಹತ್ಯೆಯ ಪಾತಕವಾದರೂ ಸಣ್ಣದೆಂದು ನಾನು ಹೇಳುವದಿಲ್ಲ ; ಆದರೆ ನಾನಾಗಿ ಆತ್ಮಹತ್ಯೆಮಾಡಿಕೊಳ್ಳದಿರುವಾಗ, ಅನ್ಯರ ಯೋಗದಿಂದ ಅದು ಘಟಿಸಿದರೆ ನನ್ನಕಡೆಗೆ ದೋಷವೇನು ? ಈಗ ನಿನ್ನಮಗನನ್ನು ನಾನು ರಾಕ್ಷಸನಕಡೆಗೆ ಕಳಿಸಿದರೆ, ನಾನು ಬುದ್ಧಿಪೂರ್ವಕ ಬ್ರಹ್ಮಹತ್ಯೆಮಾಡಿದಹಾಗಾಗುವದು. ತನ್ನ ಮನೆಗೆ ಬಂದವರನ್ನು, ಆಶ್ರಯಬೇಡುವವರನ್ನು, ಯಾಚಕರನ್ನು ಕೊಲ್ಲುವದು ಘಾತಕತನವೆಂದು ಸುಜ್ಞರು ತಿಳಿಯುವರು. ಯಾವಕಾರಣದಿಂದಲೂ ಇಂಥ ಕೆಲಸಮಾಡಬಾರದೆಂದು, ಆಪದ್ಧರ್ಮವನ್ನರಿತ ಮಹಾತ್ಮರ ಮತವಿರುವದು ; ಆದ್ದರಿಂದ ನನ್ನ ಕುಟುಂಬದ ನಾಶವಾದರೂ ಚಿಂತೆಯಿಲ್ಲ, ಬ್ರಾಹ್ಮಣವಧಕ್ಕೆ ನಾನು ಎಂದೂ ಅನುಮತಿಯನ್ನು ಕೊಡಲಾರೆನು.

ಕುಂತಿ—ಎಲೈ ಬ್ರಹ್ಮನಿಷ್ಠನೇ, ಬ್ರಾಹ್ಮಣರ ಸಂರಕ್ಷಣಮಾಡಬೇಕೆಂಬ ಇಚ್ಛೆಯಿಂದಲೇ, ನಾನು ನನ್ನ ಮಗನನ್ನು ಕೊಡುವೆನು, ಹಾಗಿಲ್ಲದಿದ್ದರೆ ನನಗೇನು ಮಕ್ಕಳು ಹೆಚ್ಚಾಗಿರುವವೆಯೆ ? ನೂರುಜನ ಮಕ್ಕಳಿದ್ದರೂ ಮಕ್ಕಳನ್ನು ಯಾರು ಕೊಟ್ಟಾರು ? ಮೇಲಾಗಿ, ನನ್ನಮಗನು ಮಹಾಬಲಿಷ್ಠನು, ಮೇಲೆ ಮಂತ್ರಜ್ಞನು. ಆತನು ಎಷ್ಟೋ ಭಯಂಕರ ರಾಕ್ಷಸರನ್ನು ಗೊತ್ತಿಗೆಹಚ್ಚಿದ್ದು ನನಗೆ ಗೊತ್ತಿರುವದು ; ಆದ್ದರಿಂದ

ನನ್ನ ಮಗನು ಬಕನನ್ನು ಸಂಹರಿಸಿ ಸುರಕ್ಷಿತವಾಗಿ ಬರುವನು, ಚಿಂತೆ ಮಾಡಬೇಡ; ಆದರೆ ಈ ಮಾತನ್ನು ನೀನು ಯಾರಮುಂದೂ ಒಡೆಯಲಾಗದು; ಯಾಕಂದರೆ ಮಂತ್ರಕಲಿಸೆಂದು ಜನರು ನನ್ನ ಮಗನನ್ನು ಪೀಡಿಸಬಹುದು. ಅವರಿಂದ ಎರಡನೆಯವರಿಗೆ ಉಪಯೋಗವಾಗದೆ ನನ್ನ ಮಗನಿಗೆ ತ್ರಾಸವುಮಾತ್ರ ಆದೀತು; ಯಾಕಂದರೆ ಗುರುವಿನ ಅಪ್ಪಣೆಯಿಲ್ಲದೆ ಮಂತ್ರವನ್ನು ಎರಡನೆಯವರಿಗೆ ಉಪದೇಶಿಸಿದರೆ, ಆ ಮಂತ್ರವು ಇಬ್ಬರಿಗೂ ಫಲಿಸುವದಿಲ್ಲವೆಂದು ಮಂತ್ರವಿದರು ಹೇಳುವರು.

ಜನಮೇಜಯಾ, ಕುಂತಿಯು ಈ ಮಾತುಗಳನ್ನು ಕೇಳಿ, ಆ ಬ್ರಾಹ್ಮಣದಂಪತಿಗಳಿಗೆ ಪರಮಾನಂದವಾಯಿತು. ಅವರು ಕುಂತಿಯನ್ನು ಬಹಳವಾಗಿ ಕೊಂಡಾಡಿದರು. ಕುಂತಿಯೂ, ಆ ಬ್ರಾಹ್ಮಣನೂ ಆ ಕೆಲಸವನ್ನು ಮಾಡುವದಕ್ಕಾಗಿ ಭೀಮಸೇನನಿಗೆ ಹೇಳಲು, "ಒಳ್ಳೆಯದು, ಆ ಕೆಲಸವನ್ನು ನಾನು ಮಾಡುವೆನು" ಎಂದು ಆತನು ಹೇಳಿದನು.

**೧೬೨ನೇ ಅಧ್ಯಾಯ—ಕುಂತೀ-ಯುಧಿಷ್ಠಿರ ಸಂವಾದ—**

"ಒಳ್ಳೆಯದು, ಆ ಕೆಲಸವನ್ನು ನಾನು ಮಾಡುವೆನು." ಎಂದು ಭೀಮನು ನುಡಿಯುವದಕ್ಕೂ, ಆತನ ಬಂಧುಗಳು ಭಿಕ್ಷೆಬೇಡಿಕೊಂಡು ಮನೆಗೆಬರುವದಕ್ಕೂ ಗಂಟೇಬಿದ್ದು, ಭೀಮನ ಆ ಆವೇಶದಮಾತು ಅವರ ಕಿವಿಗೆ ಬಿದ್ದಿತು. ಆಗ, "ಈತನು ಯಾವದೋ ಅಘೋರಕೃತ್ಯಮಾಡಲು ನಿಶ್ಚಯಿಸಿರುವನೆಂ"ದು ಅವರು ತರ್ಕಿಸಿದರು ಕೂಡಲೆ ಯುಧಿಷ್ಠಿರನು ಕುಂತಿಯನ್ನು ಕುರಿತು—"ಅವ್ವಾ, ಭೀಮನ ಈ ಆವೇಶದ ಮಾತಿನ ಅರ್ಥವೇನು? ಆ ಕೆಲಸಕ್ಕೆ ನಿನ್ನ ಸಮ್ಮತಿಯಿರುವದೆಯೋ, ಅಥವಾ ಆತನೇ ಆ ಕೆಲಸಮಾಡತೊಡಗಿರುವನೋ?" ಎಂದು ಕೇಳಲು, ಕುಂತಿಯು ಯಾವತ್ತು ಸಂಗತಿಯನ್ನು ಹೇಳಿ, ನನ್ನ ಅನುಮತಿಯಿಂದಲೇ ಭೀಮನು ಈ ಕಾರ್ಯಕ್ಕೆ ಕೈಹಾಕಿರುವನೆಂದು ಹೇಳಿದಳು. ತಾಯಿಯಮಾತು ಯುಧಿಷ್ಠಿರನಿಗೆ ಪ್ರಶಸ್ತವಾಗಿ ತೋರಲಿಲ್ಲ. ಆತನು ಕುಂತಿಯನ್ನು ಕುರಿತು—"ಅವ್ವಾ, ಇದೇನು ದುಷ್ಕರಕಾರ್ಯವನ್ನು ಆರಂಭಿಸಿರುವೆ? ತನ್ನ ಮಕ್ಕಳನ್ನು ತ್ಯಜಿಸುವದು ಸಜ್ಜನರಿಗೆ ಸಮ್ಮತವಲ್ಲ. ನಿನ್ನ ಈ ಕೃತಿಯು ಲೌಕಿಕಕ್ಕೂ, ಧರ್ಮಕ್ಕೂ ವಿರುದ್ಧವಾಗಿರುವದು. ಅವ್ವಾ,

ಯಾವನ ಬಾಹುಬಲದ ನಂಬಿಗೆಯಿಂದ ನಾವು ಸುಖದಿಂದ ನಿದ್ರೆಮಾಡು ವೆವೋ, ಯಾವನ ಬಾಹುಬಲವನ್ನು ನೆನಿಸಿ ದುರ್ಯೋಧನ–ಶಕುನಿ ಮೊದ ಲಾದವರಿಗೆ ನಿದ್ದೆ ಬರುವದಿಲ್ಲವೋ, ಯಾವನ ಯೋಗದಿಂದ ಅರಗಿನಮ ನೆಯ ಕುತ್ತಿನಿಂದ ನಾವು ಪಾರಾದೆವೋ, ಯಾವನು ಪುರೋಚನನಂಥವ ನನ್ನು ಕೊಂದನೋ ಅಂಥ ಭೀಮನನ್ನು ಸಾವಿಗೆ ಈಡುಮಾಡಲಿಕ್ಕೆ ನೀನು ಮನಸ್ಸು ಹೇಗೆ ಮಾಡಿದೆ? ದುಃಖದ ಮೂಲಕ ನಿನ್ನ ವಿಚಾರಶ ಕ್ತಿಯು ನಷ್ಟವಾಗಿರುವದೋ ಏನು? ಭೀಮನ ಸಹಾಯದಿಂದ ದುಷ್ಟ ಕೌರವರನ್ನು ಸಂಹರಿಸಿ ಪುನಃ ರಾಜ್ಯವನ್ನು ಸಂಪಾದಿಸಿರುವೆವೆಂತಲೇ ನಾನು ತಿಳಿದಿರುವೆನು.

ಕುಂತಿ—ಯುಧಿಷ್ಠಿರಾ, ನೀನು ಸುಮ್ಮನೆ ಸಂತಾಪಪಡಬೇಡ ನಾನು ಅವಿಚಾರದಿಂದ ಈ ಕೆಲಸವನ್ನು ಮಾಡಿರುವದಿಲ್ಲ. ನಮಗೆ ಆಶ್ರ ಯಕೊಟ್ಟಿರುವ ಬ್ರಾಹ್ಮಣನಿಗೆ, ಪ್ರತ್ಯುಪಕಾರಮಾಡಬೇಕೆಂಬ ಬುದ್ಧಿ ಯಿಂದ ಮಾಡಿದ್ದೇನೆ. ಅನ್ಯರ ಉಪಕಾರವನ್ನು ಸ್ಮರಿಸುವದು ಮನುಷ್ಯ ತ್ವದ ಲಕ್ಷಣವು ಅನ್ಯರು ಮಾಡಿದ ಉಪಕಾರದ ಹಲವು ಪಟ್ಟು ಪ್ರತ್ಯು ಪಕಾರಮಾಡುವದು ಅವಶ್ಯವು. ಅರಗಿನಮನೆಯಲ್ಲಿ, ಹಿಡಿಂಬವಧದಲ್ಲಿ. ನಾನು ಭೀಮನ ಪರಾಕ್ರಮವನ್ನು ಅರಿತಿರುವೆನು. ಭೀಮನ ಬಾಹು ಬಲವು, ಹತ್ತುಸಹಸ್ರ ಆನೆಯಬಲಕ್ಕೆ ಸಮಾನವಾದದ್ದೆಂಬದು ನನಗೆ ಗೊತ್ತಿರುವದು. ಭೀಮನು ಕೂಸಿರುವಾಗ ಕೈಜಾರಿಬೀಳಲು, ಪರ್ವತದ ಕೋಡಗಲ್ಲು ಪುಡಿಪುಡಿಯಾದದ್ದನ್ನು ನಾನು ಕಣ್ಣುಮುಟ್ಟ ನೋಡಿರು ವೆನು. ಪ್ರತ್ಯಕ್ಷ ವಿಷ್ಣುವನ್ನು ಹಿಂದಕ್ಕೆ ಸರಿಸುವಷ್ಟು ಪರಾಕ್ರಮಿಯು ನಮ್ಮ ಭೀಮಸಿರುವನು; ಅಂತೇ ಬ್ರಾಹ್ಮಣನಿಗೆ ಪ್ರತ್ಯುಪಕಾರಮಾಡಲು ಈ ಕೆಲಸಕ್ಕೆ ಕೈಹಾಕಿರುವೆನಲ್ಲದೆ, ಲೋಭದಿಂದಾಗಲಿ, ಅಜ್ಞಾನದಿಂದಾ ಗಲಿ, ಬುದ್ಧಿಭ್ರಂಶದಿಂದಾಗಲಿ ಹಾಕಿರುವದಿಲ್ಲ; ತಿಳಿದೂ ತಿಳಿದೂ ಈ ಕೆಲಸಕ್ಕೆ ಕೈಹಾಕಿದ್ದೇನೆ. ಧರ್ಮಾ, ನನ್ನ ಈ ಕೃತಿಯಿಂದ ಎರಡು ಕೆಲ ಸಗಳು ಸಾಧಿಸುವವು. ಬ್ರಾಹ್ಮಣನಿಗೆ ಪ್ರತ್ಯುಪಕಾರವಾಗುವದು ಒಂದ ನೆಯ ಕೆಲಸವು; ದೊಡ್ಡ ಧರ್ಮಸಾಧನವಾಗುತ್ತಿರುವದು ಎರಡನೆಯ ಕೆಲಸವು! ಬ್ರಾಹ್ಮಣನಿಗೆ ಸಹಾಯಮಾಡುವ ಕ್ಷತ್ರಿಯನಿಗೆ ಉತ್ತಮ

ಲೋಕವು ಪ್ರಾಪ್ತವಾಗುವದು; ಕ್ಷತ್ರಿಯನು ಕ್ಷತ್ರಿಯನ ಜೀವವನ್ನು ಉಳಿಸಿದರೆ ಇಹಪರಗಳಲ್ಲಿ ಉತ್ತಮಕೀರ್ತಿಯಾಗುವದು; ಕ್ಷತ್ರಿಯನು ವೈಶ್ಯನಿಗೆ ಸಹಾಯಮಾಡಿದರೆ, ಸಹಾಯಕನು ಈ ಲೋಕದ ಹಾಗು ಪರ ಲೋಕದ ಮಾನ್ಯರಾಜನಾಗುವನು; ಶರಣುಬಂದ ಶೂದ್ರನನ್ನು ಕ್ಷತ್ರಿಯನು ಸಂಕಟಮುಕ್ತವಾಡಿದರೆ, ಆ ಕ್ಷತ್ರಿಯನ ಜನ್ಮವು ಧನಸಂಪನ್ನವೂ, ರಾಜಪೂಜ್ಯವೂ ಆದಕುಲದಲ್ಲಿ ಆಗುವದು. ಈ ಮಾತನ್ನು ಹಿಂದಕ್ಕೆ ಭಗವಾನ್ ವೇದವ್ಯಾಸರು ನನಗೆ ಹೇಳಿರುವರು; ಎಂದು ಹೇಳಲು, ಧರ್ಮರಾಜನು ಆಕೆಯ ಮಾತಿಗೆ ಒಪ್ಪಿಗೆಯಿತ್ತನು.

**೧೬೩, ೧೬೪ನೇ ಅಧ್ಯಾಯಗಳು— ಭೀಮ-ಬಕರ ಯುದ್ಧ—** ಮರುದಿವಸ ಭೀಮನು ಅನ್ನದ ಬಂಡಿಯನ್ನು ಹೊಡಕೊಂಡು ಬಕಾಸುರ ನಿದ್ದಲ್ಲಿಗೆ ಹೋಗಿ—"ಏ ಬಕಾಸುರಾ, ಈ ಅನ್ನವನ್ನು ತೆಗೆದುಕೋ" ಎಂದು ಹೇಳಿ ತಾನೇ ಆ ಅನ್ನವನ್ನು ಉಣ್ಣತೊಡಗಿದನು. ಬಕನಿಗೆ ಭೀಮನ ಈ ಉದ್ಧಟತನವು ಸಹನವಾಗಲಿಲ್ಲ. ಆತನು ಸಿಟ್ಟಿನಿಂದ ಭೀಮನಬಳಿಗೆ ಬಂದನು. ಆತನು ಬರುವ ವೇಗಕ್ಕೆ ಭೂಮಿಯು ಬಿರಿಯುವದೋ ಎಂಬ ಹಾಗೆ ತೋರುತ್ತಿತ್ತು. ಆ ಅಕ್ರಾಳವಿಕ್ರಾಳ ಸ್ವರೂಪದ ಬಲಿಷ್ಠರಾಕ್ಷಸನ ತೀಕ್ಷ್ಣಕೋರೆದಾಡೆಗಳು ಹೊರಗೆ ಹಾದಿದ್ದವು. ರಕ್ತಮುಣಗಿದ್ದರಿಂದ ಆತನ ಗಡ್ಡಮೀಸೆಗಳು ಕೆಂಪಾಗಿದ್ದವು; ಆದರೆ ಭೀಮನು ಆತನನ್ನು ಲಕ್ಷಿಸದೆ ಅನ್ನವನ್ನು ಉಣ್ಣುತ್ತಲೇ ಇದ್ದನು. ಅದನ್ನು ನೋಡಿ ರಾಕ್ಷಸನು ಹಲ್ಲುಕಡೆಯುತ್ತ ಕಣ್ಣುಕೆಕ್ಕರಿಸಿ ಭೀಮನಿಗೆ—"ಎಲಾ, ನೀನು ಪ್ರತ್ಯಕ್ಷ ಯಮನಮನೆಗೆ ಹೋಗಲಿಕ್ಕೆ ಬಂದಿದ್ದು, ನನ್ನ ಸಲುವಾಗಿ ತಂದಿರುವ ಅನ್ನವನ್ನು ಉಣ್ಣುವೆಯಾ?" ಎಂದು ಕೇಳಿದನು. ಆಗ ಭೀಮನು ನಕ್ಕಹಾಗೆ ಮಾಡಿ ಅನ್ನವನ್ನು ಉಣ್ಣಹತ್ತಿದನು. ಆಗ ರಾಕ್ಷಸನು ಸಿಟ್ಟು ಬೆಂಕಿಯಾಗಿ ಕಸುವಿನಿಂದ ಭೀಮನ ಬೆನ್ನಮೇಲೆ ಒಂದೇಸವನೆ ಗುದ್ದಹತ್ತಲು, ಆಗಂತು ಭೀಮನ ಭೋಜನವು ಸುಖದಿಂದ ಸಾಗಿತು. ಆಗ ರಾಕ್ಷಸನು ಹತ್ತರದ ಒಂದು ಗಿಡವನ್ನು ಕಿತ್ತುಕೊಂಡು ಬಂದನು. ಅಷ್ಟರಲ್ಲಿ ಭೀಮನು ಎಲ್ಲವನ್ನೂ ಉಂಡು ಕೈತೊಳಕೊಂಡು ಯುದ್ಧಕ್ಕೆಸಿದ್ಧನಾಗಿದ್ದನು. ಬಕನು ಗಿಡವನ್ನು ಭೀಮನಮೇಲೆ ಬೀಸಿ ಒಗೆಯಲು, ಭೀಮನು

ಸಹಜವಾಗಿ ಅದನ್ನು ಎಡಗೈಯಿಂದ ಹಿಡಿದು, ತಿರುಗಿ ಬಕನನ್ನೇ ಅದರಿಂದ ಹೊಡೆದನು. ಬಳಿಕ ಅವರಿಬ್ಬರು ವೃಕ್ಷಗಳಿಂದಲೇ ಭಯಂಕರವಾಗಿ ಕಾದಹತ್ತಿದರು. ಅದರಿಂದ ಅಲ್ಲಿಯ ವೃಕ್ಷಗಳು ನಾಶವಾಗಿಹೋದವು. ಆಮೇಲೆ ಬಕನು ಮಲ್ಲಯುದ್ಧವನ್ನು ಮಾಡಲಾರಂಭಿಸಿ ಭೀಮನ ತೆಕ್ಕೆ ಬಿದ್ದನು. ಆಗ ಭೀಮನು ಬಕನನ್ನು ಅವುಕಿ ಹಿಚುಕತೊಡಗಲು, ಬಕನು ಒದ್ದಾಡಹತ್ತಿದನು. ಹೀಗೆ ಬಕನು ಶಕ್ತಿಹೀನನಾಗಲು, ಭೀಮನು ಅವನನ್ನು ನೆಲದಮೇಲೆ ಬಕ್ಕಬೋರಲು ಕೆಡಪಿ, ತನ್ನ ಮೊಣಕಾಲು ಬಕನ ಟೊಂಕದಮೇಲೆ ಊರಿ, ಎಡಗೈಯಿಂದ ಅವನ ಕುತ್ತಿಗೆಯನ್ನು ಒತ್ತಿ, ಬಲಗೈಯಿಂದ ಅವನ ಕುಂಡಿಯ ಚಣ್ಣವನ್ನು ಹಿಡಿದು ಆತನ ಪ್ರಚಂಡ ಶರೀರವನ್ನು ಬೆನ್ನಕಡೆಯಿಂದ ಮಡಿಕೆಹಾಕಹತ್ತಿದನು. ಆಗ ರಾಕ್ಷಸನ ಬಾಯಿಂದ ರಕ್ತಪ್ರವಾಹವು ಹರಿಯಹತ್ತಿ, ಆತನು ಕೆಟ್ಟದನಿಯಿಂದ ಭಯಂಕರವಾಗಿ ಒದರಹತ್ತಿದನು. ಆಗ ಬಲಿಷ್ಠನಾದ ಭೀಮನು ಬಕನ ದೇಹದ ಮಡಿಕೆಮಾಡಲು, ಬಕನ ದೇಹವು ಮುರಿದು ಆತನು ಕೆಟ್ಟದನಿಯಿಂದ ಒದರಿ ಪ್ರಾಣಬಿಟ್ಟನು. ಆತನ ಮರಣಕಾಲದ ಧ್ವನಿಯನ್ನು ಕೇಳಿ ಅವನ ಸೈನಿಕರು ಗಾಬರಿಯಾಗಿ ಬಂದು ನೋಡಲು, ಬಕನ ಈ ಭಯಂಕರ ಮರಣದಿಂದ ಅವರ ಹೃದಯಗಳು ನಡುಗಿ, ಅವರು ಅತ್ಯಂತ ದೀನರಾದರು. ಆಗ ಭೀಮನು ಅವರನ್ನು ಕುರಿತು—"ನೀವು ಮನುಷ್ಯರನ್ನು ತಿಂದರೆ ನಿಮ್ಮಗತಿಯೂ ಹೀಗೆಯೇ ಆಗುವದೆಂ"ದು ಹೇಳಲು, ಅವರು ಭೀಮನ ಮಾತಿಗೆ ಒಪ್ಪಿಕೊಂಡು, ಆತನ ಅಪ್ಪಣೆಯಿಂದ ತಮ್ಮ ಮನೆಬಂದತ್ತ ಹೊರಟುಹೋದರು. ಬಳಿಕ ಭೀಮನು ಬಕನ ಶವವನ್ನು ಏಕಚಕ್ರನಗರದ ಅಗಸಿಯ ಬಾಗಲಿಗೆ ಎಳೆದು ಮನೆಗೆ ಹೋಗಿ, ಧರ್ಮರಾಜನಿಗೆ ಯಾವತ್ತು ಸಂಗತಿಯನ್ನು ಹೇಳಿದನು.

ಮರುದಿವಸ ಬೆಳಗಾಗಲು, ಬಕನ ರಕ್ತಮುಣುಗಿದ ಶವವನ್ನು ನೋಡುವದಕ್ಕಾಗಿ ಜನರ ಜಾತ್ರೆಯು ನೆರೆಯಿತು. ರಾಕ್ಷಸನ ಭಯಂಕರವಾದ ಶವವನ್ನು ನೋಡಿ ಜನರ ಮೈಗೂದಲು ನೆಟ್ಟಗಾದವು. ರಾಕ್ಷಸನ ಮರಣದಿಂದ ಆಶ್ಚರ್ಯಮಗ್ನರಾಗಿದ್ದ ಜನರಿಗೆ ಪರಮಾನಂದವಾಯಿತು. ತಮ್ಮ ಅರಿಷ್ಟವು ದೂರವಾಯಿತೆಂದು ಆ ನಗರದ ಆಬಾಲವೃದ್ಧರು ಪರ



ಬಕಾಸುರನ ಕೊಲೆ.

ಮೋಕ್ಷರನನ್ನು ಪ್ರಾರ್ಥಿಸತೊಡಗಿದರು. ನಗರದಲ್ಲಿ ದೇವರ ಪೂಜೆ-ಪುನಸ್ಕಾರಗಳು ನಡೆದವು. ಉತ್ಸವಕ್ಕೆ ಆರಂಭವಾಯಿತು. ಈ ದಿನದ ಸರತಿಯು ಯಾರದೆಂಬದನ್ನು ಗೊತ್ತುಹಚ್ಚಿ, ಆ ಬ್ರಾಹ್ಮಣನ ಮನೆಗೆ ಹೋಗಿ ವೃತ್ತಾಂತವೇನೆಂದು ಆತನನ್ನು ಕೇಳಲು, ಕುಂತಿಯು ವಚನಬದ್ಧನಾದ ಆತನು ನಿಜವಾದ ಸಂಗತಿಯನ್ನು ಹೇಳಲಾರದೆ, ತನ್ನ ಮನಸ್ಸಿನ ಕಲ್ಪನೆಯಿಂದ ಆ ಜನರನ್ನು ಕುರಿತು—"ನಮಗೊದಗಿದ ಸಂಕಟಕ್ಕಾಗಿ ನಾವು ಅಳುತ್ತಿರಲು, ಒಬ್ಬ ಮಂತ್ರಸಿದ್ಧ ಬ್ರಾಹ್ಮಣನು ನಮ್ಮ ಬಳಿಗೆ ಬಂದು, "ನಾನು ನಿಮ್ಮ ಸಂಕಟವನ್ನು ದೂರಮಾಡುವೆನು, ನನ್ನ ಜೀವದ ಚಿಂತೆಯನ್ನು ನೀವು ಮಾಡಬೇಡಿರಿ" ಎಂದು ಹೇಳಿ, ಅನ್ನದ ಬಂಡಿಯನ್ನು ಹೊಡೆಕೊಂಡು ಹೋದನು ; ಆತನೇ ಈ ಕೆಲಸವನ್ನು ಮಾಡಿರಬಹುದು." ಎಂದು ಹೇಳಿದನು. ಆಗ ಯಾವತ್ತು ನಗರವಾಸಿಗಳು ಆ ಬ್ರಾಹ್ಮಣನ ಸನ್ಮಾನಾರ್ಥವಾಗಿ, ಬಹುದೊಡ್ಡ ಬ್ರಹ್ಮೋತ್ಸವವನ್ನು ಮಾಡಿದರು.

---

## ಶ್ರೀ ಕೇಶವಸದ್ಗುರು-ಸೂಕ್ತಿರೂಪ

## ರಹಸ್ಯಗಳು

**(೨) ರಾಜ್ಯಾಧಿಪತ್ಯವು ಭಗವಾನಶೀಲವು** — ರಾಜ್ಯಾಧಿಪತ್ಯವೆಂದರೆ, ರಾಜ್ಯದ ಒಡೆತನವು. ಇದು, ಶ್ರದ್ಧಾಮೂಲವಾದ ಧರ್ಮನಿಷ್ಠವೆಂತಲೂ, ಸ್ವಾರ್ಥಮೂಲವಾದ ಇಚ್ಛಾನಿಷ್ಠವೆಂತಲೂ ಎರಡುವಿಧವಾಗಿರುವದು. ಧರ್ಮನಿಷ್ಠವೆಂದರೆ, ರಾಜ-ಪ್ರಜರಿಬ್ಬರ ನಿಜವಾದ ಹಿತವನ್ನು ಸಾಧಿಸುವ ಶಾಶ್ವತತತ್ವಗಳಿಗನುಸರಿಸಿ ಮಾಡಿದ ನಿಯಮಗಳಂತೆ ನಡೆಯುವ ಒಡೆತನವು. ಇದರಲ್ಲಿ ರಾಜ-ಪ್ರಜರಿಬ್ಬರೂ ಆ ಹಿತಕಾರಕ ನಿಯಮಗಳಿಗೆ, ಶ್ರದ್ಧೆಯಿಂದ ಶರಣುಹೋಗಿ ನಡೆದುಕೊಳ್ಳಬೇಕಾಗುವದರಿಂದ, ಅವರಿಬ್ಬರ ಸ್ವಾರ್ಥದ ಅತಿರೇಕಕ್ಕೂ ಅಸ್ಪದವಿಲ್ಲದಾಗಲು, ಈ ಒಡೆತನವು ಶಾಂತಿಕಾರಕವಾಗಿ ಬಹುದಿವಸ ಬಾಳುವಂತಹದಾಗಿರುವದು. ಇನ್ನು ಇಚ್ಛಾನಿಷ್ಠವೆಂದರೆ, ರಾಜ-ಪ್ರಜರಿಬ್ಬರ ಯಥೇಚ್ಛಸುಖದ ಇಚ್ಛೆಯನ್ನನುಸರಿಸಿ ನಡೆಯುವ ಒಡೆತನವು. ಇದರಲ್ಲಿ ರಾಜ-ಪ್ರಜರಿಬ್ಬರೂ ತಪ್ಪು

ಸ್ವಾರ್ಥಸ್ಫೂರಿತ ಪುರೋಹಿತ್ಯಗಳನ್ನನುಸರಿಸಿ ನಡೆಯಬೇಕಾಗುವದರಿಂದ, ಅವರಿಬ್ಬರ ಸ್ವಾರ್ಥದ ಅತಿರೇಕಕ್ಕೂ ಒಪ್ಪದಿರಾಗಲು, ಈ ಒಡೆತನವು ಅಶಾಂತಿಕಾರಕವಾಗಿ ಬಹುದಿವಸ ಬಾಳದಂತಹದಾಗಿರುವದು. ನಮ್ಮ ಭರತ ಭೂಮಿಯಲ್ಲಿ, ವೈದಿಕಕಾಲದಿಂದ ಪರದೇಶದವರ ಇಚ್ಛಾನಿಷ್ಠ ಆಳಿಕೆಯು ಉಂಟಾಗುವವರೆಗೆ, ಧರ್ಮನಿಷ್ಠ ರಾಜ್ಯಪದ್ಧತಿಯೇ ಬಳಿಕೆಯಲ್ಲಿದ್ದು, ಕಾಲಮಹಿಮೆಯಿಂದ ಧರ್ಮನಿಷ್ಠೆಯ ಮಾನವು ಕಡಿಮೆ ಕಡಿಮೆಯಾಗುತ್ತ ಬಂದಂತೆ, ರಾಜಪ್ರಜರಿಬ್ಬರಲ್ಲಿಯೂ ಅಶಾಂತಿಯ ಮಾನವು ಹೆಚ್ಚುತ್ತ ಬಂದರೂ, ಆ ಧರ್ಮನಿಷ್ಠ ರಾಜ್ಯಪದ್ಧತಿಯು ಬೇಡವೇಬೇಡವೆನ್ನುವಷ್ಟು ಸ್ವಾರ್ಥದ ಅತಿರೇಕವು ನಮ್ಮ ರಾಜಪ್ರಜರಲ್ಲಿ ಆಗಲಿಲ್ಲ. ಅಂತೇ ಸಹಸ್ರಾವಧಿ ವರ್ಷಗಳಿಂದ ಆ ಧರ್ಮನಿಷ್ಠ ರಾಜ್ಯಪದ್ಧತಿಯು ನಮ್ಮಲ್ಲಿ ನಡೆಯುತ್ತ ಬಂದಿತು. ಆದರೂ ಆಗಾಗ್ಗೆ ಈ ಉಪಪರ್ವದಲ್ಲಿ ಬಂದಿರುವ, ಬಕಾಸುರನ ಅಂಕೆಯಂಥ ದುರ್ಜನ ದುರಿಚ್ಛಾಮೂಲವಾದ ರಾಜ್ಯಪದ್ಧತಿಯು, ಧರ್ಮನಿಷ್ಠರಾಜರಿಂದ ಶಾಸನಾರ್ಹವಾಗಿ ಬಳಿಕೆಯಲ್ಲಿ ಬರುತ್ತಲಿತ್ತೆಂದು ಕಂಡುಬರುತ್ತದೆ.

ವೈದಿಕಕಾಲದಿಂದ ನಮ್ಮ ಪವಿತ್ರ ಧರ್ಮನಿಷ್ಠ ರಾಜ್ಯಪದ್ಧತಿಯ ಅವಲೋಕನಮಾಡಿದರೆ, ಅದು ಮಹಾಜನನಿಷ್ಠದಲ್ಲಿ ಹುಟ್ಟಿ ಧಾರ್ಮಿಕ ರಾಜನಿಷ್ಠದಲ್ಲಿ ಫಲಿಸಿತೆಂದು ಗೊತ್ತಾಗುವದು. ಮಹಾಜನರೆಂದರೆ, ಪ್ರಾಮುಖ್ಯವಾಗಿ ಜ್ಞಾನ, ನಿಸ್ಪೃಹತೆ, ಲೋಕಹಿತತತ್ಪರತೆಗಳುಳ್ಳ ತಪಸ್ವಿಗಳಾದ ಸಭ್ಯರೆಂದು ತಿಳಿಯತಕ್ಕದ್ದು. ಮಹಾತ್ಮರಾದ ಇಂಥ ಸಭ್ಯರು ಸಭೆಸೇರಿ, ತಮ್ಮಲ್ಲಿಯ ಒಬ್ಬನನ್ನು ಸಭಾಪತಿಯನ್ನಾಗಿ ಆರಿಸಿಕೊಂಡು, ಆತನ ಆಧಿಪತ್ಯದೊಳಗೆ ಚರ್ಚಿಸಿ, ರಾಜಪ್ರಜರಿಬ್ಬರ ಹಿತದತತ್ವಗಳನ್ನು ಕಂಡುಹಿಡಿದು, ಅವುಗಳ ಬಳಿಕೆಗಾಗಿ ನಿಯಮಗಳನ್ನು ಗೊತ್ತುಮಾಡಿ, ಆಡಳಿತವನ್ನು ಸಾಗಿಸುತ್ತ ಬಂದರು. ಈ ಪದ್ಧತಿಯ ತೇಜಸ್ವಿಯಾದ ಸುಂದರ ವರ್ಣನವು ವೇದದಲ್ಲಿ ಬಂದಿರುವದು. ಹೀಗೆ ಕೆಲಕಾಲ ಮಹಾಜನರು ಆಡಳಿತದ ಕಾರ್ಯವನ್ನು ನಡಿಸುತ್ತ ಬರುತ್ತಿರಲು, ಮನುವಿನಂಥ ಸ್ವಯಂಸಿದ್ಧಪ್ರಜಾಧಿಪತ್ಯವುಳ್ಳ ಈಶ್ವರಾಂಶರಾಜನು, ಈಶ್ವರೇಚ್ಛೆಯಿಂದ ಉತ್ಪನ್ನನಾಗಿ, ಪೂರ್ವದಲ್ಲಿದ್ದ ಆ ಮಹಾಜನನಿಷ್ಠ ಆಳಿಕೆಯು ನಿಯಮಗ

ಳನ್ನೆಲ್ಲ ಒಟ್ಟುಗೂಡಿಸಿ, ಅವನ್ನು ಶಾಶ್ವತಪಡಿಸಿ ಆ ನಿಯಮಗಳಂತೆ ರಾಜ್ಯವಾಡಳಿತವನ್ನು ನಡಿಸತೊಡಗಿದನು. ಹೀಗೆ ಆ ಮಹಾತ್ಮನಾದ ಮನು ಮಹಾರಾಜನು ಶಾಶ್ವತಪಡಿಸಿದ ನಿಯಮಗಳ ಸಮುಚ್ಚಯವೇ, ವೈದಿಕರಿಗೆ ಪರಮಪೂಜ್ಯವಾಗಿರುವ ಮನುಸ್ಮೃತಿಯಾಗಿರುವದು! ಧರ್ಮಶ್ರದ್ಧಾವಂತರಾದ ಭರತಭೂಮಿಯ ರಾಜಪ್ರಜರಿಬ್ಬರೂ, ಈ ಮನುಸ್ಮೃತಿರೂಪ ಶಾಶ್ವತಕಾಯದೆಯಂತೆ ಶಾಂತತೆಯಿಂದ ನಡೆದುಕೊಳ್ಳುತ್ತ ಬಂದದ್ದರಿಂದ, ರಾಜ-ಪ್ರಜರಿಬ್ಬರ ಸ್ವೇಚ್ಛಾಚಾರಪ್ರೇರಿತ, ಹೊಸಹೊಸ ಕಾಯದೆಗಳ ಹೊರೆಯಲ್ಲಿ ಹಣ್ಣಾಗುವಪ್ರಸಂಗಬರದೆ, ಭಾರತರು ಕಾಲಕ್ಕನುಸರಿಸಿ ಉತ್ಕರ್ಷವನ್ನು ಹೊಂದಿ, ಚಿರಕಾಲ ಶಾಂತಿ-ಸುಖವನ್ನು ಹೊಂದಿದರು. ಇದಕ್ಕೆ ಪುರಾಣಗಳೂ, ಇತಿಹಾಸವೂ ಸಾಕ್ಷಿಯಾಗಿರುತ್ತವೆ.

ಕಾಲಮಹಿಮೆಯಿಂದ ಸೃಷ್ಟಿಯು ನಿಯಮದಂತೆ ಏನೇನೋ ಆಗುತ್ತ ಬಂದು, ಭರತಭೂಮಿಯಲ್ಲಿ ಈ ಧರ್ಮನಿಷ್ಠ ರಾಜ್ಯಪದ್ಧತಿಯು ಅಳಿಯುತ್ತ, ಇಚ್ಛಾನಿಷ್ಠ ರಾಜ್ಯಪದ್ಧತಿಯು ಬಳಕೆಯಲ್ಲಿ ಬರತೊಡಗಿತು. ಈ ಇಚ್ಛಾನಿಷ್ಠ ರಾಜ್ಯಪದ್ಧತಿಯು ಯುಗಮಾನ, ಸ್ವಾರ್ಥಮೂಲ ರಾಜನಿಷ್ಠ ಪದ್ಧತಿಯಲ್ಲಿ ಆಗಿ, ಅದು ಸ್ವಾರ್ಥಮೂಲ ಲೋಕನಿಷ್ಠ ಪದ್ಧತಿಯಲ್ಲಿ ಫಲಿಸಬೇಕಾಗಿರುವದು. ಹೀಗೆ ಫಲಿಸುವಾಗ ಅದು ರಾಜನಿಷ್ಠ, ರಾಜಪ್ರಜಾನಿಷ್ಠ, ಪ್ರಜಾನಿಷ್ಠ, ಲೋಕನಿಷ್ಠ ಎಂದು, ಸ್ವಾರ್ಥಾತಿರೇಕವುಳ್ಳ, ಹಾಗು ಉತ್ತರೋತ್ತರ ಕನಿಷ್ಠಪ್ರತಿಯವಾದ ಮೂರು ರೂಪಗಳನ್ನು ಹೊಂದುತ್ತಹೋಗುವದು; ಅದು ಹೇಗೆಂದರೆ-ಸ್ವಾರ್ಥಮೂಲ ರಾಜನಿಷ್ಠ ಪದ್ಧತಿಯಲ್ಲಿಯು ರಾಜನ ಪ್ರಜಾಭಕ್ಷಕತನವನ್ನು ನೋಡಿ ಪ್ರಜೆಗಳು ರೇಗಿ, ತಮ್ಮ ಮಹಾಶಕ್ತಿಯ ಏಕೀಕರಣದಿಂದ ಅರಸನನ್ನು ಪ್ರತಿಬಂಧಿಸಿ "ತಮ್ಮ ಆಲೋಚನೆಯಿಲ್ಲದೆ ರಾಜನು ರಾಜ್ಯವಾಳಲಾಗದೆಂದು ನಿಯಮನಮಾಡಲು, "ರಾಜಪ್ರಜಾನಿಷ್ಠ" ರಾಜ್ಯಪದ್ಧತಿಯು ಬಳಕೆಯಲ್ಲಿ ಬರುವದು. ಮುಂದೆ ಪ್ರಜೆಗಳಲ್ಲಿ ಮಹಾಜನಶ್ರೀಮಂತ-ಸಾಮಾನ್ಯಜನ ಎಂಬ ಎರಡು ಪಂಗಡಗಳಾಗಿ, ಮಹಾಜನದ ಬಲವು ಅರಸನಕಡೆಗಾಗಲು, ಅವರಿಬ್ಬರ ಶಕ್ತಿಯ ಏಕೀಕರಣವು ಸಾಮಾನ್ಯಜನಕ್ಕೆ ಬಾಧಕವಾಯಿತು. ಆಗ ಸಾಮಾನ್ಯಜನದ

ಮಹಾಶಕ್ತಿಯು ಏಕೀಕರಣವನ್ನು ಹೊಂದಿ, ಆ ರಾಜಶಕ್ತಿ–ಮಹಾಜನ ಶಕ್ತಿಗಳೆರಡನ್ನು ನಿರ್ಬಂಧಿಸಿ, ತಮಗೆ ಅರಸನೇ ಬೇಡವೆಂತಲೂ, ತಮ್ಮ ಮಹಾಶಕ್ತಿಯಿಂದ ಮಹಾಜನರ ಆಧ್ಯತೆಯು ಇಲ್ಲದಾಗ ಬೇಕೆಂತಲೂ ಭಾವಿಸಿತು. ಮುಂದೆ ಈ ಭಾವನೆಯು ಫಲಿಸಲು, ಅರಸನ ಉಚ್ಚಾಟಣವಾಗಿ, ಪ್ರಜೆಗಳೇ ಆರಿಸಿದ ನಿಯತಕಾಲದ ಅಧ್ಯಕ್ಷನ ಆಧಿಪತ್ಯದಲ್ಲಿ, ಪ್ರಜೆಗಳ ಬಹುಮತದಂತೆ ರಾಜ್ಯಾಡಳಿತವು ನಡೆಯತೊಡಗಲು, ಹರಿದು ಹಂಚಿ ಕೊಳ್ಳುವ "ಪ್ರಜಾನಿಷ್ಠ" ಆಡಳಿತವು ಬಳಕೆಯಲ್ಲಿ ಬರುವದು. ಬರ ಬರುತ್ತ ಮಹಾಜನ–ಸಾಮಾನ್ಯಜನವೆಂಬ ಭೇದವೂ ಸಹನವಾಗದೆ, ತಗ್ಗು ದಿನ್ನೆಗಳು ಸಮನಾಗುವ ಚಂದದ ಲೋಕನಿಷ್ಠ ಪದ್ಧತಿಯು ಬಳಕೆಯಲ್ಲಿ ಬರಬೇಕಾಗುವದು.

ಹೀಗೆ ರೂಪಾಂತರ ಹೊಂದುತ್ತ ಬರುತ್ತಿರುವ ಈ ಕ್ಷಣಿಕಪದ್ಧತಿಗಳ ಫಲಿತವು ಯಾದವಿಯಂತೆ ಎಲ್ಲಿ ಆಗುವದೋ ಎಂಬ ಶಂಕೆಯು ಉತ್ಪನ್ನವಾದರೆ ಆಶ್ಚರ್ಯವಲ್ಲ; ಯಾಕಂದರೆ, ಈ ಹರಿದು ಹಂಚಿಕೊಳ್ಳುವ ಲೋಕನಿಷ್ಠ ಪದ್ಧತಿಯ ಅತಿರೇಕವನ್ನು ನಿರ್ಬಂಧಿಸಲಿಕ್ಕೆ, ಕಡೆಗೆ ದೇವರ ಹೊರತು ಬೇರೆ ನಿಯಾಮಕರೇ ಇಲ್ಲದಾಗುವದೆಂಬದು ವಿಚಾರದಿಂದ ಗೊತ್ತಾಗಬಹುದು. ಹೇಗಂದರೆ-ರಾಜಸತ್ತೆಯನ್ನು ಮಹಾಜನ-ಸಾಮಾನ್ಯಜನ ವಿಶಿಷ್ಟವಾದ ಪ್ರಜಾರೂಪ ಮಹಾಶಕ್ತಿಯು ನಿಯಮನಮಾಡುವದು; ಬಳಿಕ ಮಹಾಜನರ ಪ್ರವೃತ್ತಿಯನ್ನು, ಸಾಮಾನ್ಯಜನದ ಮಹಾಶಕ್ತಿಯು ನಿಯಮನ ಮಾಡುವದು; ಆಮೇಲೆ ಉಳಿಯುವ ಸರ್ವಗೋಲಾಕಾರವಾದ ಸ್ವಚ್ಛಂದಪ್ರವೃತ್ತಿಯ ಲೋಕದ ಮಹಾಶಕ್ತಿಯನ್ನು, ಈಶ್ವರನ ಪ್ರಚಂಡತರ ಶಕ್ತಿಯಲ್ಲದೆ, ಬೇರೆಯಾವ ಶಕ್ತಿಯು ನಿಯಮನಮಾಡಲಿಕ್ಕೆ ಉಳಿಯುವದು? ಒಟ್ಟಿಗೆ, ನಿರಾಧಾರವಾಗಿ, ತೇಜಸ್ವಿ ನಿಯಾಮಕರಿಲ್ಲದ್ದಾಗಿ, ಸ್ವಚ್ಛಂದವಾಗಿ ಸಾಗುವ ಲೋಕಸತ್ತಾರೂಪ ಮಹಾಶಕ್ತಿಯನ್ನು ಆಳುವ ಆಳಿಕೆಗಳು, ರಾಷ್ಟ್ರದ ಕಾಲಮಾನದಿಂದ ಕ್ಷಣಶಃ ಬದಲಾಗುತ್ತ ಬದಲಾಗುತ್ತ, ಆ ಬದಲಾವಣೆಯೊಡನೆ ಅಶಾಂತಿ-ದುಃಖಗಳು ಉಂಟಾಗುತ್ತ ಉಂಟಾಗುತ್ತ, ಕಡೆಗೆ ಪರಿಣಾಮವೇನಾಗುವದೋ ಎಂಬದು ಮಾನವೀವಿಚಾರಕ್ಕೆ ತಿಳಿಯದೆ ಹೋಗುತ್ತದೆ!

ಆದರೆ ಪರಿಣಾಮವು ಏನೇ ಆಗಲಿ, ಏನೇ ಹೋಗಲಿ; ಯುಗಧರ್ಮಗಳಿಗನುಸರಿಸಿ ನೀಚಸ್ವಾರ್ಥವು ಹೆಚ್ಚುತ್ತ ಬಂದಂತೆ, ಧರ್ಮನಿಷ್ಠ ರಾಜ್ಯಪದ್ಧತಿಯ ರೂಪಾಂತರವು ಇಚ್ಛಾನಿಷ್ಠ ಪದ್ಧತಿಯಲ್ಲಿ ಆಗಿ, ಆ ಇಚ್ಛಾನಿಷ್ಠ ಪದ್ಧತಿಯು ಕ್ರಮವಾಗಿ ರಾಜನಿಷ್ಠ, ರಾಜಪ್ರಜಾನಿಷ್ಠ, ಪ್ರಜಾನಿಷ್ಠ, ಲೋಕನಿಷ್ಠ ಎಂಬ ರೂಪಗಳನ್ನು ಧರಿಸುವದನ್ನು ಓಘದಿಂದ ನೋಡಿದರೆ, ಅದು ಅಪರಿಹಾರ್ಯವೆಂಬಂತೆ ತೋರುತ್ತದೆ. ಹೀಗೆ ರೂಪಾಂತರವಾಗುತ್ತಾಗುತ್ತ ಕಡೆಗೆ ಮಾನವಜಾತಿಯು, ಧರ್ಮವನ್ನೂ, ದೇವರನ್ನೂ ಮರೆತುಬಿಟ್ಟು ತೀರಾ ನಾಸ್ತಿಕವಾಗಿ ಸ್ವೇಚ್ಛಾಚಾರಿಯಾಗಲು, ಈಶ್ವರನ ವಿಶ್ವರೂಪಕುಟುಂಬದ ಅವ್ಯವಸ್ಥೆಯಾಗಿ, ಕುಟುಂಬಘಾತವಾಗುವ ಪ್ರಸಂಗ ಬರಬಹುದು ಅಂಥ ಪ್ರಸಂಗದಲ್ಲಿ ಆ ದಯಾಮಯ ವಿಶ್ವಾಧ್ಯಕ್ಷ ಪರಮಾತ್ಮನು, ಯಾವದೊಂದು ಉಪಾಯದಿಂದ ತನ್ನ ಹಾಗು ಧರ್ಮದ ನೆನಪನ್ನು ಪುನಃ ವಿಶ್ವಕ್ಕೆ ಕೊಟ್ಟು, ತನ್ನ ವಿಶ್ವರೂಪ ಕುಟುಂಬವನ್ನು ಉದ್ಧರಿಸಲಿಕ್ಕೆ ಸಮರ್ಥನೂ ಆಗಿರುವನು. ಅಂದಬಳಿಕ ಅದರ ಚಿಂತೆಯನ್ನು ನಾವು ಏಕೆ ಮಾಡಬೇಕು? ಒಟ್ಟಿಗೆ, ರಾಜ್ಯಾಧಿಪತ್ಯವು ಪ್ರಗಮನಶೀಲವೆಂಬ ಗುಟ್ಟನ್ನು ತಿಳಿದು, ನಾವು ದೇವರಲ್ಲಿ ವಿಶ್ವಾಸವಿಟ್ಟು ಧರ್ಮಾಶ್ರಯವನ್ನು ಮಾಡಿದರಾಯಿತು! ಅದರಂತೆ, ರಾಷ್ಟ್ರದ ಈ ಆಡಳಿತಗಳ ಚಕ್ರಪರಿಭ್ರಮಣವು ಆಗುತ್ತಲೇ ಇರತಕ್ಕದ್ದೆಂಬ ಸಿದ್ಧಾಂತವನ್ನು ನೆನಪಿನಲ್ಲಿಟ್ಟು, ಅದಕ್ಕಾಗಿ ಆಶ್ಚರ್ಯಪಡದೆ ಸಮಾಧಾನದಿಂದ ಇರತಕ್ಕದ್ದು.



## ೧೧ ಚೈತ್ರರಥಪರ್ವ

**೧೬೫, ರಿಂದ ೧೬೭ನೇ ಅಧ್ಯಾಯಗಳು-ಧೃಷ್ಟದ್ಯುಮ್ನ ದ್ರೌಪದಿಯರ ಉತ್ಪತ್ತಿ**-ಎಲೈ ಜನಮೇಜಯಾ, ದುಷ್ಟಬಕಾಸುರನನ್ನು ಕೊಂದ ಬಳಿಕ ಪಾಂಡವರು ಉಪನಿಷದಗಳ ಅಧ್ಯಯನಮಾಡುತ್ತ, ಆ ಬ್ರಾಹ್ಮಣನ ಮನೆಯಲ್ಲಿಯೇ ನಿಂತುಕೊಂಡರು. ಹೀಗಿರುವಾಗ, ಒಂದುದಿನ ಒಬ್ಬ ಸನ್ನ್ಯಾಸನಾದ ನಿಯಮನಿಷ್ಠ ಬ್ರಾಹ್ಮಣನು, ಅತಿಥಿಯಾಗಿ ಆ ಬ್ರಾಹ್ಮಣನ ಮನೆಗೆ ಬಂದು ಇಳಿದುಕೊಂಡನು. ಆತನು ದೇಶಗಳ ವರ್ತಮಾನವನ್ನು

ಹೇಳುತ್ತ ಹೇಳುತ್ತ, ದ್ರೌಪದಿಯ ಸ್ವಯಂವರದ ಸುದ್ದಿಯನ್ನು ಹೇಳಿ, ದ್ರುಪದರಾಜನ ಮಕ್ಕಳಾದ ಧೃಷ್ಟದ್ಯುಮ್ನ-ದ್ರೌಪದಿಯರು ಅಗ್ನಿಕುಂಡದಿಂದ ಉತ್ಪನ್ನರಾದರೆಂದು ಹೇಳಿದನು. ಈ ಆಶ್ಚರ್ಯವನ್ನು ಕೇಳಿ, ಪಾಂಡವರು ಆ ಸಂಗತಿಯನ್ನು ಸಾದ್ಯಂತವಾಗಿ ಹೇಳಬೇಕೆಂದು ಕೇಳಿಕೊಳ್ಳಲು, ಆ ಬ್ರಾಹ್ಮಣನು ಹೇಳತೊಡಗಿದನು.

ಪಾಂಡವರೇ, ಹಿಂದಕ್ಕೆ ಧನುರ್ವಿದ್ಯಾಪ್ರವೀಣನಾದ ದ್ರೋಣನೆಂಬ ಬ್ರಾಹ್ಮಣನು, ತನ್ನ ಮಿತ್ರನಾದ ಪಾಂಚಾಲದೇಶದ ದ್ರುಪದನೆಂಬ ರಾಜನಬಳಿಗೆ ಧನಾರ್ಥವಾಗಿ ಹೋಗಿ—"ನಾನು ನಿನ್ನ ಮಿತ್ರನು ಬಂದಿದ್ದೇನೆ" ಎಂದು ಹೇಳಿದನು; ಆದರೆ ಮದಾಂಧನಾದ ದ್ರುಪದನು—"ದರಿದ್ರನಾದ ನಿನಗೂ, ಅರಸನಾದ ನನಗೂ ಎಲ್ಲಿಯಾದರೂ ಮಿತ್ರತ್ವವಾಗುವದುಂಟೆ? ಆ ಹಳೆಯ ಮಿತ್ರತ್ವವನ್ನು ತಕ್ಕೊಂಡು ಏನುಮಾಡುವೆ? ಬೇಕಾದರೆ ನಿನಗೆ ಒಪ್ಪತ್ತಿನ ಊಟಹಾಕುವೆನು" ಎಂದು ನುಡಿದು ದ್ರೋಣನ ಅಪಮಾನಮಾಡಿದನು. ಆಗ ದ್ರೋಣನು ಸಿಟ್ಟಾಗಿ ಇದರ ಸೇಡು ತೀರಿಸಿಕೊಳ್ಳಬೇಕೆಂದು, ಕೌರವ-ಪಾಂಡವರಿಗೆ ಧನುರ್ವಿದ್ಯಾಭ್ಯಾಸ ಮಾಡಿಸಿ, ಅರ್ಜುನನಿಂದ ದ್ರುಪದನನ್ನು ಸೋಲಿಸಿ, ಅವನ ಹೆಡಮುರಿಗೆ ಕಟ್ಟಿಸಿ ತನ್ನ ಬಳಿಗೆ ಎಳತರಿಸಿ, ಆತನ ಅರ್ಧರಾಜ್ಯವನ್ನು ಕಸಿದುಕೊಂಡನು! ದ್ರೋಣನು ಮಾಡಿದ ಈ ಅಪಮಾನದ ನೋವು, ಏನುಮಾಡಿದರೂ ದ್ರುಪದನ ಮನಸ್ಸಿನೊಳಗಿಂದ ಹೋಗಲೊಲ್ಲದು. ಆತನು ದಿನದಿನಕ್ಕೆ ಕ್ಷೀಣನಾಗತೊಡಗಿದನು.

ತನ್ನ ಮಕ್ಕಳಲ್ಲಿ ದ್ರೋಣನನ್ನು ಕೊಲ್ಲುವಂಥ ಮಗನು, ಒಬ್ಬನೂ ಇಲ್ಲವೆಂದು ದ್ರುಪದನು ಅಸಮಾಧಾನಪಟ್ಟು, ತನ್ನ ಮಕ್ಕಳನ್ನು ಧಿಕ್ಕರಿಸಿದನು. ಆ ಋಂಗಿನ ಸ್ವಭಾವದ ದ್ರುಪದನು ದ್ರೋಣನನ್ನು ಕೊಲ್ಲುವಂಥ ಮಗನನ್ನು ಪಡೆಯುವದಕ್ಕಾಗಿ, ಕರ್ಮಸಿದ್ಧ ಬ್ರಾಹ್ಮಣರನ್ನು ಹುಡುಕಹತ್ತಿದನು. ಯಮುನೆಯ ಸಮೀಪದ ಭಾಗೀರಥೀತೀರದ ಬ್ರಾಹ್ಮಣವಸತಿಯಲ್ಲಿ, ಯಾಜ, ಉಪಯಾಜ ಎಂಬ ಶ್ರೇಷ್ಠ ಬ್ರಾಹ್ಮಣರು ಆತನ ಕಣ್ಣಿಗೆ ಬಿದ್ದರು. ಅವರು ಶಾಂತಿಯ ಅವಲಂಬನಮಾಡಿ ಪ್ರಖರತಪಶ್ಚರ್ಯ ಮಾಡುವವರಾಗಿದ್ದರು. ಅವರು ಸೂರ್ಯೋಪಾಸಕರಿದ್ದು, ಬ್ರಹ್ಮಚಾರಿ

ದ್ದರು. ಅವರು ಕಾಶ್ಯಪಗೋತ್ರದವರು. ದ್ರುಪದನು ಅವರ ಸಾಮರ್ಥ್ಯ ವನ್ನು ಅನ್ಯರ ಮುಖದಿಂದ ಅರಿತುಕೊಂಡು, ಬೇಡಿದ್ದನ್ನು ಕೊಡುವೆನೆಂದು ಹೇಳಿ ಆವರನ್ನು ಕರತಂದನು. ಅವರಲ್ಲಿ ವ್ರತಧಾರಣಮಾಡುವ ಜಟಾಧಾರಿ ಯಾದ ಉಪಯಾಜನ ಪಾದಸೇವೆ ಮಾಡುತ್ತ ದ್ರುಪದರಾಜನು ಆತನನ್ನು ಕುರಿತು-''ಮುನಿವರ್ಯರೇ, ನಾನು ನಿಮ್ಮ ಮನೋರಥವನ್ನು ಪೂರ್ಣ ಮಾಡುವೆನು ; ಆದರೆ ದ್ರೋಣನನ್ನು ಕೊಲ್ಲುವ ಮಗನು ನನಗೆ ಹುಟ್ಟು ವಂತೆ ಅನುಷ್ಠಾನವನ್ನು ತಾವು ಮಾಡಬೇಕು. ಅದಕ್ಕಾಗಿ ನಾನು ತಮಗೆ ಹತ್ತುಕೋಟಿ ಆಕಳುಗಳನ್ನು, ಅಥವಾ ನಿಮಗೆ ಬೇಕಾದದ್ದನ್ನು ಕೊಡು ವೆನು'' ಎಂದು ಹೇಳಿದನು ; ಆದರೆ ನಿಸ್ಪೃಹಿಯಾದ ಉಪಯಾಜನು ಇಂಥ ಘಾತಕವಾದ ಉಗ್ರಕರ್ಮವನ್ನು ಮಾಡಲಿಕ್ಕೆ ಒಪ್ಪಲಿಲ್ಲ.

ಆದರೂ ದ್ರುಪದನು ಒಂದುವರ್ಷ ಉಪಯಾಜನ ಸೇವೆಮಾಡಿದನು. ಆಗ ಉಪಯಾಜನು ದ್ರುಪದನಿಗೆ—''ರಾಜಾ, ಈ ಕೆಲಸವನ್ನು ನನ್ನ ಅಣ್ಣನಾದ ಯಾಜನು ಮಾಡಬಹುದು ; ಯಾಕಂದರೆ, ಒಮ್ಮೆ ಆತನು ವನ ದಲ್ಲಿ ಬಿದ್ದಿದ್ದ ಹಣ್ಣನ್ನು ಸ್ಥಲಶುದ್ಧಿಯ ವಿಚಾರಮಾಡದೆ ತಕ್ಕೊಂಡನು ಆದರಂತೆ, ಗುರುಗೃಹದಲ್ಲಿದ್ದಾಗ ಆತನು ಉಚ್ಛಿಷ್ಟಭಿಕ್ಷೆಯನ್ನು ''ಸವಿ. ಸವಿ'' ಎಂದು ತಿನ್ನುತ್ತಿದ್ದನು ; ಅಂದಬಳಿಕ ಲಾಭದ ಆಶೆಯಿಂದ ಈ ಕರ್ಮವನ್ನು ಆತನು ಮಾಡಬಹುದು ; ಆದ್ದರಿಂದ ನೀನು ಆತನನ್ನು ಪ್ರಾರ್ಥಿಸು.'' ಎಂದು ಹೇಳಿದನು. ದ್ರುಪದನ ಮನಸ್ಸಿನಲ್ಲಿ ಯಾಜನ ಪವಿತ್ರತೆಯ ವಿಷಯವಾಗಿ ವಿಕಲ್ಪವು ಉತ್ಪನ್ನವಾದರೂ, ಕಾರ್ಯದಲ್ಲಿ ದೃಷ್ಟಿಯನ್ನಿಟ್ಟು, ಆತನಿಂದ ಅನುಷ್ಠಾನಮಾಡಿಸುವದನ್ನು ನಿಶ್ಚಯಿಸಿ ಆತ ನನ್ನು ಕುರಿತು-—''ಎಲೈ ಪ್ರಭುವೇ, ಪ್ರತ್ಯಕ್ಷ ಪರಶುರಾಮನಲ್ಲಿ ಅಸ್ತ್ರಾ ಭ್ಯಾಸಮಾಡಿ, ಆತನಿಂದ ಬ್ರಹ್ಮಾಸ್ತ್ರವನ್ನು ಸಂಪಾದಿಸಿ, ಬ್ರಹ್ಮತೇಜ- ಕ್ಷಾತ್ರತೇಜಗಳೆರಡರಿಂದಲೂ ಅದ್ವಿತೀಯನಾಗಿರುವ ದ್ರೋಣನೆಂಬ ಬ್ರಾಹ್ಮಣನಿರುವನು. ಆತನನ್ನು ಸರಿಗಟ್ಟುವ ವೀರರು ಕ್ಷತ್ರಿಯರಲ್ಲಿಯೂ ಇಲ್ಲವು. ಕ್ಷತ್ರಿಯಾಂತಕನಾದ ಪರಶುರಾಮನೇ ಪ್ರತ್ಯಕ್ಷ ದ್ರೋಣರೂಪ ದಿಂದ ಅವತರಿಸಿರುವನೆಂದು ಹೇಳಬಹುದು. ಆತನು ನನ್ನ ರಾಜ್ಯವನ್ನು ಅಪಹರಿಸಿ ನನ್ನ ಅಪಮಾನಮಾಡಿರುವನು; ಆದ್ದರಿಂದ ಆತನನ್ನು ಕೊಲ್ಲು

ವಂಥ ಒಬ್ಬ ಮಗನು ನನಗೆ ಹುಟ್ಟುವಂತೆ ನೀವು ಅನುಷ್ಠಾನವನ್ನು ಮಾಡ ಬೇಕು. ಈಗ ನಿಮಗೆ ಎಂಬತ್ತು ಸಾವಿರ ಆಕಳುಗಳನ್ನು ಕಾಣಿಕೆಯೆಂದು ನಾನು ಕೊಡುವೆನು; ಮುಂದೆ ಹತ್ತು ಕೋಟಿ ಆಕಳುಗಳನ್ನು ಕೊಡುವೆನು.''

ದ್ರುಪದನ ಮಾತಿಗೆ ಯಾಜನು ಒಪ್ಪಿಕೊಂಡು, ಅದರ ಅನುಷ್ಠಾನದ ಸಹಾಯಕ್ಕಾಗಿ ನಿಸ್ಪೃಹಿಯಾದ ತನ್ನ ತಮ್ಮ ಉಪಯಾಜನನ್ನು ಕರೆದನು. ಅದಕ್ಕೆ ಉಪಯಾಜನು ಒಪ್ಪಿ, ಯಜ್ಞ ಮಾಡುವ ಕ್ರಮವನ್ನು ದ್ರುಪದನಿಗೆ ಹೇಳಿದನು. ಬಳಿಕ ಆ ಅಣ್ಣ ತಮ್ಮಂದಿರು ದ್ರುಪದನಿಂದ ಯಥಾವಿಧಿ ಯಜ್ಞವನ್ನು ಮಾಡಿಸಿದರು. ಹವನದ ಕಡೆಯಲ್ಲಿ ಯಾಜನು ದ್ರುಪದನ ರಾಣಿಯನ್ನು ಕರೆದು—''ಎಲೈ ಪೃಷತನ ಸೊಸೆಯೇ, ಬೇಗನೆ ಇತ್ತ ಬಾ ನಿನ್ನ ಸಲುವಾಗಿ ಗಂಡುಹೆಣ್ಣಿನ ಒಂದು ಜೋಡಿಯು ಪ್ರಾಪ್ತವಾಗಿರುವದು'' ಎಂದು ಹೇಳಿದನು. ಅದಕ್ಕೆ ರಾಣಿಯು—''ಬ್ರಹ್ಮನಿಷ್ಠ ಮುನಿಯೇ, ನಾನು ಇನ್ನೂ ಮೋರೆಯನ್ನು ತೊಳೆದುಕೊಂಡಿರುವದಿಲ್ಲ. ನಾನು ಮೈಗೆ ಹಚ್ಚಿಕೊಂಡಿರುವ ದಿವ್ಯಾನುಲೇಪನವೂ ಹಾಗೆಯೇ ಇರುವದು; ಆದ್ದರಿಂದ ಸ್ವಲ್ಪ ತಡೆಯಿರಿ'' ಎಂದು ಹೇಳಿದಳು. ಅದಕ್ಕೆ ಯಾಜನು—''ಎಲೈ ರಾಜಸ್ತ್ರೀಯೇ, ನಾನು ಈ ಹೋಮದ್ರವ್ಯವನ್ನು ಸ್ವತಃ ಬೇಯಿಸಿ ಸಿದ್ಧ ಮಾಡಿರುವೆನು, ಉಪಯಾಜನು ಇದನ್ನು ಅಭಿಮಂತ್ರಿಸಿರುವನು; ಆದ್ದರಿಂದ ಈ ಮಂತ್ರಿತ ದ್ರವ್ಯವು, ನೀನು ಬಂದರೂ ಬಾರದಿದ್ದರೂ ತನ್ನ ಕಾರ್ಯವನ್ನು ಮಾಡಿಯೇ ಮಾಡುವದು'' ಎಂದು ಹೇಳಿ, ಯಾಜನು ಸಂಸ್ಕಾರಮಾಡಿದ್ದ ಆ ಹೋಮದ್ರವ್ಯವನ್ನು ಅಗ್ನಿಗೆ ಅರ್ಪಿಸಿದನು. ಕೂಡಲೆ ದೇವಕುಮಾರನಿಗೆ ಸರಿಯಾದ ಒಬ್ಬ ಪುತ್ರನು ಅಗ್ನಿಕುಂಡದಿಂದ ಬಂದನು. ಆತನ ವರ್ಣವು ಅಗ್ನಿಜ್ವಾಲೆಯಂತೆ ಇದ್ದು, ಭಯಂಕರವಾಗಿತ್ತು; ಆತನು ಕಿರೀಟವನ್ನೂ, ಉತ್ಕೃಷ್ಟ ಕವಚವನ್ನೂ ಧರಿಸಿದ್ದು, ಕೈಯಲ್ಲಿ ಖಡ್ಗವನ್ನೂ, ಧನುಸ್ಸನ್ನೂ ಹಿಡಿದಿದ್ದನು. ಆತನು ಅಗ್ನಿಕುಂಡದಿಂದ ಮೇಲಕ್ಕೆ ಬಂದಕೂಡಲೆ ಗರ್ಜಿಸಿ ರಥದಲ್ಲಿ ಕುಳಿತು ಹೋಗಹತ್ತಿದನು. ಆಗ ಪಾಂಚಾಲದೇಶದ ಜನರು ಆನಂದಘೋಷ ಮಾಡತೊಡಗಿದರು. ಆಗ ಆಕಾಶದಲ್ಲಿ—''ಈ ರಾಜಪುತ್ರನು ಪಾಂಚಾಲ ದೇಶದ ಭೀತಿಯನ್ನು ದೂರಮಾಡುವವನಿದ್ದು, ಕೀರ್ತಿವಂತನಾಗುವನು.

ಈತನು ದ್ರೋಣನ ನಾಶಕ್ಕಾಗಿ ಉತ್ಪನ್ನವಾಗಿರುವದರಿಂದ, ದ್ರುಪದನಿಗೆ ಸಂತೋಷವನ್ನುಂಟುಮಾಡುವನು" ಎಂಬ ವಾಣಿಯು ಆಯಿತು !

ಇದೇ ಯಜ್ಞವೇದಿಯೊಳಗಿಂದ ಕುಮಾರೀ ದ್ರೌಪದಿಯೂ ಮೇಲಕ್ಕೆ ಬಂದಳು. ಈಕೆಯು ಅತ್ಯಂತ ಸುಂದರಿಯು; ಸಾದಗಪ್ಪಿನವಳು; ಈಕೆಯ ಪ್ರತಿಒಂದು ಅವಯವಗಳೂ ಪ್ರೇಕ್ಷಣೀಯವಾಗಿದ್ದು, ಈಕೆಯ ಮೈಗೆ ನೀಲಕಮಲದ ವಾಸನೆ ಬರುತ್ತಿತ್ತು. ಈಕೆಯ ಆ ಸುಗಂಧವು ಒಂದು ಹರದಾರಿಯವರೆಗೆ ಪಸರಿಸುತ್ತಿತ್ತು. "ಈ ವರಾರೋಹೆಕೃಷ್ಣೆಯು ಯಾವತ್ತು ಸ್ತ್ರೀಯರಲ್ಲಿ ಶ್ರೇಷ್ಠಳಾಗಿದ್ದು, ಕ್ಷತ್ರಿಯರ ಸಂಹಾರಕ್ಕಾಗಿಯೇ ಅವತರಿಸಿರುವಳು. ಯೋಗ್ಯಕಾಲದಲ್ಲಿ ಈಕೆಯು ದೇವತೆಗಳ ಕಾರ್ಯವನ್ನು ಮಾಡುವಳು. ಈಕೆಯಿಂದ ಕೌರವರಿಗೆ ಭಯವು ಉತ್ಪನ್ನವಾಗುವದು." ಎಂದು ಆಕಾಶವಾಣಿಯು ಆಯಿತು. ದ್ರುಪದನ ರಾಣಿಯು ಈ ಕುಮಾರ-ಕುಮಾರಿಕೆಯರಿಗೆ ನನ್ನಹೊರತು ಎರಡನೆಯ ತಾಯಿಯು ಆಗಬಾರದೆಂದು ಯಾಜನನ್ನು ಪ್ರಾರ್ಥಿಸಲು, ಅದಕ್ಕೆ ಆ ಬ್ರಾಹ್ಮಣನು ಒಪ್ಪಿಕೊಂಡನು. ಬಳಿಕ ಇಷ್ಟಾರ್ಥಪೂರ್ತಿಯಾದ ಆ ಬ್ರಾಹ್ಮಣರು ಕುಮಾರನಿಗೆ ಧೃಷ್ಟದ್ಯುಮ್ನನೆಂದು ಹೆಸರಿಟ್ಟರು. 'ಧೃಷ್ಟ' ಅಂದರೆ ದಿಟ್ಟನು, 'ದ್ಯುಮ್ನ' ಅಂದರೆ ಕವಚಕುಂಡಲಾದಿ ಸಂಪತ್ತುಳ್ಳವನು. ದ್ರೌಪದಿಯ ಮೈಬಣ್ಣವು ಸಾದಗಪ್ಪು ಇದ್ದದ್ದರಿಂದ ಆಕೆಗೆ ಆ ಬ್ರಾಹ್ಮಣರು 'ಕೃಷ್ಣಾ' ಎಂದು ಹೆಸರಿಟ್ಟರು. ಧೃಷ್ಟದ್ಯುಮ್ನನ ಧನುರ್ವಿದ್ಯೆಯ ಅಭ್ಯಾಸವು ದ್ರೋಣಾಚಾರ್ಯರಲ್ಲಿಯೇ ಆಯಿತು. ತನ್ನನ್ನು ಕೊಲ್ಲುವದಕ್ಕಾಗಿಯೇ ಧೃಷ್ಟದ್ಯುಮ್ನನು ಹುಟ್ಟಿರುವನೆಂಬದು ಆಚಾರ್ಯರಿಗೆ ಗೊತ್ತಿದ್ದರೂ "ದೈವಯೋಗದಿಂದ ಮುಂದೆ ಆಗುವದು ತಪ್ಪುವದಿಲ್ಲವೆಂ"ದು ತಿಳಿದು, ಆ ಮಹಾಜ್ಞಾನಿ ದ್ರೋಣಾಚಾರ್ಯರು ತಮ್ಮ ಕೀರ್ತಿಯನ್ನು ಕಾಯ್ದುಕೊಳ್ಳುವದಕ್ಕಾಗಿ, ಆ ಕುಮಾರನ ಮೇಲೆ ಹೀಗೆ ಉಪಕಾರ ಮಾಡಿದರು.

**೧೬೮, ೧೬೯ನೇ ಅಧ್ಯಾಯಗಳು—ದ್ರೌಪದೀಪೂರ್ವವೃತ್ತ—** ಜನಮೇಜಯಾ, ಈಮೇರೆಗೆ ಬ್ರಾಹ್ಮಣನು ಯಾವತ್ತು ವೃತ್ತಾಂತವನ್ನು ಹೇಳಲು, ಬಲಶಾಲಿಗಳಾದ ಪಾಂಡವರ ಲಕ್ಷವು ದ್ರೌಪದಿಯ ಸ್ವಯಂವರದ ಕಡೆಗೆ ಹೋಯಿತು. ಇದನ್ನರಿತು ಕುಂತಿಯು ಎಲ್ಲಮಕ್ಕಳ ಅನುಮತಿ

ಯಿಂದ ದ್ರುಪದರಾಜನ ರಾಜಧಾನಿಗೆ ಹೋಗಬೇಕೆಂದು ನಿಶ್ಚಯಿಸಿದಳು. ಅಷ್ಟರಲ್ಲಿ ಸತ್ಯವತೀಪುತ್ರರಾದ ಭಗವಾನ್ ವ್ಯಾಸರು ಅವರಬಳಿಗೆ ಬರಲು, ಅವರೆಲ್ಲರು ಆ ಮಹಾತ್ಮರಿಗೆ ಸಾಷ್ಟಾಂಗವಾಗಿ ಎರಗಿ ಕೈಜೋಡಿಸಿಕೊಂಡು ಎದುರಿಗೆ ನಿಂತುಕೊಂಡರು. ಯಾರಿಗೂ ತಿಳಿಯದಂತೆ ಅವರು ವ್ಯಾಸರನ್ನು ಪೂಜಿಸಿದಬಳಿಕ, ವ್ಯಾಸರು ಅವರನ್ನು ಕುಳ್ಳಿರಿಸಿಕೊಂಡು ಪ್ರೇಮದಿಂದ— "ಬಾಲಕರೇ, ನೀವು ಧರ್ಮವನ್ನೂ, ಶಾಸ್ತ್ರವನ್ನೂ ಅನುಸರಿಸಿ ನಡೆಯು ವಿರಷ್ಟೆ ? ಪೂಜ್ಯರಾದ ಬ್ರಾಹ್ಮಣರ ವಿಷಯದಲ್ಲಿ ನಿಮ್ಮ ಆದರಬುದ್ಧಿಯು ಕಡಿಮೆಯಾಗಿರುವದಿಲ್ಲವಲ್ಲವೆ ?" ಎಂದು ಕೇಳಿ, ಅವರಿಗೆ ಹಲವು ಆಶ್ಚರ್ಯಕಾರಕ ಕಥೆಗಳನ್ನು ಹೇಳಿ ಮತ್ತೆ ಅವರನ್ನು ಕುರಿತು—"ಪೂರ್ವದಲ್ಲಿ ಒಂದು ತಪೋವನದೊಳಗೆ ಮಹಾತ್ಮನಾದ ಋಷಿಯ ಒಬ್ಬ ಮಗಳಿದ್ದಳು ಆಕೆಯು ಪರಮಸುಂದರಿಯಾಗಿದ್ದರೂ, ಪೂರ್ವಕರ್ಮದಿಂದ ಭಾಗ್ಯಹೀನಳಾಗಿದ್ದಳು. ಆಕೆಗೆ ಪತಿಯು ದೊರೆಯದ್ದರಿಂದ ದುಃಖಿತಳಾಗಿದ್ದಳು ತನಗೆ ಪತಿಯು ದೊರೆಯಬೇಕೆಂದು ಆಕೆಯು ಭಗವಾನ್ ಶಂಕರನನ್ನು ಕುರಿತು ಘೋರ ತಪಶ್ಚರ್ಯಮಾಡಿದಳು. ಆಗ ಶಂಕರನು ಪ್ರಸನ್ನನಾಗಿ ಆಕೆಗೆ—

ಶಂಕರ—ಎಲೈ ಕಲ್ಯಾಣೀ, ನಾನು ನಿನಗೆ ಪ್ರಸನ್ನನಾಗಿರುವೆನು ; ಬೇಕಾದ ವರವನ್ನು ಬೇಡಿಕೋ.

ಸ್ತ್ರೀ—"ನನಗೆ ಗಂಡನನ್ನು ಕೊಡು" "ನನಗೆ ಗಂಡನನ್ನು ಕೊಡು" "ನನಗೆ ಗಂಡನನ್ನು ಕೊಡು" "ನನಗೆ ಗಂಡನನ್ನು ಕೊಡು" "ನನಗೆ ಗಂಡನನ್ನು ಕೊಡು"

ಶಂಕರ—ಎಲೈ ಭದ್ರೇ, ನೀನು ಕೇಳಿಕೊಂಡಂತೆ ಭರತಕುಲೋತ್ಪನ್ನರಾದ ಐದುಜನ ಗಂಡಂದಿರು ನಿನಗೆ ಆಗುವರು.

ಸ್ತ್ರೀ—ಭಗವನ್, ಪ್ರಭೋ, ನಿನ್ನ ಪ್ರಸಾದದಿಂದ ನನಗೆ ಒಬ್ಬನೇ ಗಂಡನಾಗಬೇಕೆಂದು ನಾನು ಇಚ್ಛಿಸುವೆನು.

ಶಂಕರ—"ನನಗೆ ಗಂಡನನ್ನು ಕೊಡು" ಎಂದು ನೀನು ಐದುಸಾರೆ ಕೇಳಿದ್ದರಿಂದ, ನಿನಗೆ ಐದುಜನ ಗಂಡಂದಿರು ಬೇಕಾಗಿರುವರೆಂದು ತಿಳಿದು ಹಾಗೆ ನಾನು ವರಪ್ರದಾನ ಮಾಡಿದೆನು ; ಆದ್ದರಿಂದ ನಿನಗೆ ಜನ್ಮಾಂತರದಲ್ಲಿ ಐದುಜನ ಗಂಡಂದಿರು ಆಗುವರು !

ಈ ಮೇರೆಗೆ ಸಂಭಾಷಣವಾದದ್ದನ್ನು ಹೇಳಿ ವ್ಯಾಸರು ಪಾಂಡವರಿಗೆ- "ಪಂಡುಕುಮಾರರೇ, ಈಗ ಆ ಋಷಿಕನ್ಯೆಯೇ ದ್ರುಪದರಾಜನ ಹೊಟ್ಟೆಯಲ್ಲಿ ದ್ರೌಪದಿಯಾಗಿ ಹುಟ್ಟಿರುವಳು. ನೀವು ಆಕೆಯ ಸ್ವಯಂವರಕ್ಕೆ ಹೋಗಿರಿ, ನೀವು ಐವರೂ ಆಕೆಯನ್ನೇ ಮದುವೆಯಾಗಿ ಸುಖಿಗಳಾಗುವಿರಿ" ಎಂದು ಹೇಳಿ, ಕುಂತಿಯ ಅನುಮತಿಯಿಂದ ಹೊರಟುಹೋದರು.

**೧೭೦ನೇ ಅಧ್ಯಾಯ—ಚಿತ್ರರಥ ಹಾಗು ಅರ್ಜುನ ಇವರ ಯುದ್ಧ**—ಜನಮೇಜಯಾ, ಬಳಿಕ ವ್ಯಾಸರ ಅಪ್ಪಣೆಯಂತೆ ಪಾಂಡವರು ಕುಂತಿಯೊಡನೆ ಆ ಬ್ರಾಹ್ಮಣನನ್ನು ನಮಸ್ಕರಿಸಿ, ಆತನ ಆಜ್ಞೆ ಪಡೆದು ದ್ರುಪದರಾಜನ ರಾಜಧಾನಿಗೆ ಹೊರಟರು. ಅವರು ಉತ್ತರದಿಕ್ಕಿನಿಂದ ಸಾಗಿ ಒಂದುಹಗಲು, ಒಂದುರಾತ್ರಿ ಹಾದಿಯನಡೆದು ಗಂಗಾತೀರದಲ್ಲಿರುವ "ಸೋಮಶ್ರಯಾಯಣ"ವೆಂಬ ತೀರ್ಥಕ್ಕೆ ಹೋದರು. ಗೊರಿವೆಯ ಕಟ್ಟಿಗೆಯಿಂದ ಬೆಳಕುಮಾಡುತ್ತ ಅರ್ಜುನನು ಅವರೆಲ್ಲರಮುಂದೆ ಸಾಗಿದ್ದನು. ಹೀಗಿರುವಾಗ ಭಾಗೀರಥಿಯಲ್ಲಿ ಏಕಾಂತವಾಗಿ ತನ್ನ ಸ್ತ್ರೀಯರೊಡನೆ ಜಲಕ್ರೀಡೆಯಾಡುತ್ತಿದ್ದ ಒಬ್ಬ ಗಂಧರ್ವರಾಜನು, ಪಾಂಡವರು ಬರುವ ಸಪ್ಪಳವನ್ನು ಕೇಳಿ ಸಿಟ್ಟಾಗಿ ಧನುಸ್ಸಿನ ಟಣತ್ಕಾರಮಾಡುತ್ತ ಅರ್ಜುನನನ್ನು ಕುರಿತು—

ಗಂಧರ್ವ—ಎಲಾ, ರಾತ್ರಿಯಲ್ಲಿ ಬರುವವರು ನೀವು ಯಾರು? ಇದು ಗಂಧರ್ವ-ರಾಕ್ಷಸರ ಸಂಚಾರ ಕಾಲವೆಂಬುದು ನಿಮಗೆ ಗೊತ್ತಿಲ್ಲವೆ? ಮನುಷ್ಯರ ವ್ಯವಹಾರಕಾಲವು ಹಗಲು; ಆದ್ದರಿಂದ ಹೀಗೆ ರಾತ್ರಿಬರುವವರನ್ನು ನಾವೂ, ರಾಕ್ಷಸರೂ ಕೂಡಿ ಶಿಕ್ಷಿಸುವೆವು. ರಾತ್ರಿ ನೀರಲ್ಲಿ ಸಂಚರಿಸುವದು ದೋಷಕರವೆಂದು ಧರ್ಮಜ್ಞರು ಹೇಳುವರು; ಆದ್ದರಿಂದ ನೀವು ಇತ್ತ ಬರಬೇಡಿರಿ, ಅಲ್ಲಿಯೇನಿಲ್ಲಿರಿ. ನನ್ನ ಬಲವನ್ನವಲಂಬಿಸಿ ನಡೆಯುವ ನಾನು, ಅಂಗಾರವರ್ಮನೆಂಬ ಹೆಸರಿನ ಗಂಧರ್ವನು. ಈ ಗಂಗಾತೀರದ ವನವು ನನ್ನದು; ನನ್ನ ಹೆಸರೇ ಈ ವನಕ್ಕೆ ಇರುವದು. ನನ್ನ ವಿಹಾರಕಾಲದಲ್ಲಿ ದೇವ-ದೈತ್ಯ-ಮನುಷ್ಯ-ಪಶ್ವಾದಿಕರು ಯಾರೂ ಬರದಿರುವಾಗ ನೀವು ಯಾಕೆ ಬಂದಿರಿ?

ಅರ್ಜುನ—ಎಲೈ ದುರ್ಬುದ್ಧಿಯೇ, ಸಮುದ್ರ, ಹಿಮಾಲಯದ ತಪ್ಪಲಪ್ರದೇಶ, ಭಾಗೀರಥೀನದಿ ಇವುಗಳಲ್ಲಿ ಸಂಚರಿಸಲಿಕ್ಕೆ ಹಗಲು-ರಾತ್ರಿ-ಸಂಧ್ಯಾಕಾಲ ಇವುಗಳಲ್ಲ ಯಾರಹಕ್ಕು ಕಾದಿಟ್ಟಿರುವದು? ಎಲೈ ಖೇಚರಾ, ಭಾಗೀರಥಿಯಲ್ಲಿ ಯಾವಾಗ ಬರಲಿಕ್ಕೂ ಪ್ರತಿಬಂಧವಿಲ್ಲ; ಯಾಕಂದರೆ ಯಾವತ್ತು ನದಿಗಳಲ್ಲಿ ಭಾಗೀರಥಿಯು ಶ್ರೇಷ್ಠವಾಗಿದ್ದು, ಅದರಲ್ಲಿ ಸಂಚರಿಸುವ ಕಾಲದ ನಿಯಮವಿಲ್ಲ. ನಾವಂತು ಸಮರ್ಥರಾದದ್ದರಿಂದಲೇ ನಿನ್ನನ್ನು ಲೆಕ್ಕಿಸದೆ ಅಕಾಲದಲ್ಲಿ ಬಂದಿರುವೆವು. ಎಲೈ ಕ್ರೂರನೇ, ದುರ್ಬಲರಾದವರೇ ನಿಮ್ಮ ಗಂಧರ್ವರ ಮಾನವನ್ನು ಕಾಯುವರು. ಗಂಗೆಯು ಭೂಲೋಕದಲ್ಲಿಯೇ ಅಲ್ಲ, ಅಲಕನಂದಾ, ವೈತರಣೀ ಎಂಬ ಹೆಸರುಗಳಿಂದ ಕ್ರಮವಾಗಿ ಸ್ವರ್ಗಲೋಕ, ಪಿತೃಲೋಕಗಳಲ್ಲಿಯೂ ಸೇವ್ಯಳಾಗಿರುವಳು. ಒಟ್ಟಿಗೆ, ಸ್ವರ್ಗವನ್ನು ಒದಗಿಸಿಕೊಡುವ, ಹಾಗು ಶುಭವನ್ನುಂಟುಮಾಡುವ ಭಾಗೀರಥಿಗೆ ಬೇಕಾದವರು ಬೇಕಾದಾಗ ಹೋಗಬಹುದು; ಆದ್ದರಿಂದ ನಾವು ಈ ಭಾಗೀರಥಿಯನ್ನು ಈಗ ಸ್ಪರ್ಶಮಾಡಿಯೇ ತೀರುವೆವು.

ಅರ್ಜುನನ ಎಟ್ಟುತನದ ಈ ಮಾತುಗಳನ್ನು ಕೇಳಿ ಅಂಗಾರವರ್ಣನು ಸಿಟ್ಟಾಗಿ ಅರ್ಜುನನಮೇಲೆ ಬಾಣಪ್ರಯೋಗಮಾಡಿದನು. ಆಗ ಅರ್ಜುನನು ತನ್ನ ಕೈಯೊಳಗಿನ ಗೊರವೀ ಕಟ್ಟಿಗೆಯಿಂದಲೂ, ಢಾಲಿನಿಂದಲೂ ಗಂಧರ್ವನ ಆ ಬಾಣಗಳ ನಿವಾರಣಮಾಡಿ ಆತನಿಗೆ—"ಗಂಧರ್ವಾ, ಮನುಷ್ಯರಿಗಿಂತಲೂ ಗಂಧರ್ವರು ಶ್ರೇಷ್ಠರೆಂದು ನನ್ನ ತಿಳುವಳಿಕೆಯಿರುವದರಿಂದ, ನಾನು ನಿನ್ನೊಡನೆ ಮೋಸದ ಯುದ್ಧವನ್ನುಮಾಡದೆ, ಅಸ್ತ್ರಗಳಿಂದಲೇ ಯುದ್ಧಮಾಡುವೆನು. ನಾನು ಬಿಡುತ್ತಿರುವ ಈ ಅಗ್ನ್ಯಸ್ತ್ರವನ್ನು ನೀನು ಸಹಿಸು. ಇದು ಇಂದ್ರನಿಂದ ಬೃಹಸ್ಪತಿಗೆ, ಬೃಹಸ್ಪತಿಯಿಂದ ಭರದ್ವಾಜನಿಗೆ, ಭರದ್ವಾಜನಿಂದ ಅಗ್ನಿವೇಶನಿಗೆ, ಅಗ್ನಿವೇಶನಿಂದ ನನ್ನ ಗುರುಗಳಾದ ದ್ರೋಣಾಚಾರ್ಯರಿಗೆ ದೊರೆಯಿತು. ದ್ರೋಣಾಚಾರ್ಯರು ಇದನ್ನು ನನಗೆ ಕೊಟ್ಟರು." ಎಂದು ಹೇಳಿ, ಅಗ್ನ್ಯಸ್ತ್ರವನ್ನು ಅಂಗಾರವರ್ಣನ ಮೇಲೆ ಬಿಟ್ಟನು. ಆಗ ಆ ಗಂಧರ್ವನ ರಥವು ಸುಟ್ಟು ಆತನು ಮೂರ್ಛೆಹೊಂದಿದನು. ಆಗ ಅರ್ಜುನನು ಆತನ ಕೇಶಗಳನ್ನು ಹಿಡಿದು

ಧರ್ಮರಾಜನಬಳಿಗೆ ಎಳತರಲು, ಆ ಗಂಧರ್ವನ ಸ್ತ್ರೀ ಕುಂಭಿನಸೀ ಎಂಬ ವಳು ಗಂಡನನ್ನು ಬದುಕಿಸಿಕೊಳ್ಳುವದಕ್ಕಾಗಿ ಧರ್ಮರಾಜನಿಗೆ ಶರಣು ಹೋಗಿ—

ಕುಂಭಿನಸಿ—ಎಲೈ ಮಹಾಭಾಗನೇ, ನನ್ನ ಪತಿಗೆ ಜೀವದಾನ ಕೊಟ್ಟು ನನ್ನನ್ನು ರಕ್ಷಿಸು. ನಾನು ಗಂಧರ್ವಸ್ತ್ರೀಯು ; ನನ್ನ ಹೆಸರು ಕುಂಭಿನಸಿ

ಧರ್ಮರಾಜ—ಅಪ್ಪಾ ಅರ್ಜುನಾ, ಈಗ ಈತನು ಯುದ್ಧದಲ್ಲಿ ಸೋತು ಕೀರ್ತಿಶೂನ್ಯನಾಗಿರುವನು ; ಹೆಂಡತಿಯೇ ರಕ್ಷಿಸುವಂಥ ಪ್ರಸಂಗವು ಈತನಿಗೆ ಈಗ ಒದಗಿರುವದರಿಂದ ಈತನನ್ನು ಬಿಟ್ಟುಬಿಡು.

ಅರ್ಜುನ—ಎಲೈ ಗಂಧರ್ವಾ, ಈ ಕುರುರಾಜ ಯುಧಿಷ್ಠಿರನು ನಿನಗೆ ಅಭಯಕೊಡುವನು ; ಆದ್ದರಿಂದ ನಿನಗೆ ಮರಣಭಯವಿಲ್ಲ.

ಗಂಧರ್ವ—ಆಗಲಿ. ನೀನು ನನ್ನನ್ನು ಸೋಲಿಸಿರುವದರಿಂದ, ಇನ್ನು ನಾನು ನನ್ನ ಅಂಗಾರವರ್ಮ ಎಂಬ ಹೆಸರನ್ನು ಬಿಟ್ಟುಕೊಟ್ಟು, ನನ್ನ ಆ ಹೆಸರಿನ, ಹಾಗು ಸಾಮರ್ಥ್ಯದ ಪ್ರತಿಷ್ಠೆಯನ್ನು ಇನ್ನು ಯಾರ ಮುಂದೆಯೂ ತೋರಿಸದೆ ಇರುವೆನು. ಧರ್ಮರಾಜಾ, ನನಗೆ ಪ್ರಾಣದಾನ ಮಾಡಿದ ಉಪಕೃತಿಗಾಗಿ ಅರ್ಜುನನಿಗೆ ನಾನು "ಚಾಕ್ಷುಷೀ" ಎಂಬ ಗಂಧರ್ವಮಾಯಾವಿದ್ಯೆಯನ್ನು ಕಲಿಸುವೆನು. ಅರ್ಜುನನ ಅಸ್ತ್ರವಿದ್ಯೆಯು ಸರ್ವೋತ್ಕೃಷ್ಟವಾದದ್ದು. ಆತನ ಅಗ್ನ್ಯಸ್ತ್ರದಿಂದ ನನ್ನ ಚಿತ್ರವಿಚಿತ್ರವಾದ ರಥವು ಸುಟ್ಟುಹೋಯಿತು. ಆ ರಥವಯೋಗದಿಂದಲೇ ನನಗೆ ಚಿತ್ರರಥನೆಂಬ ಹೆಸರು ಉಂಟಾಗಿತ್ತು. ಈಗ ನಾನು ಚಿತ್ರರಥನು ಹೋಗಿ ದಗ್ಧರಥನು ಆದೆನು. ನಮ್ಮ ಈ ಚಾಕ್ಷುಷೀವಿದ್ಯೆಯಾದರೂ ಸಾಮಾನ್ಯವಾದದ್ದಲ್ಲ. ಅದನ್ನು ನಾನು ತಪಸ್ಸಿನಿಂದ ಸಂಪಾದಿಸಿರುವೆನು. ಈ ವಿದ್ಯೆಯನ್ನು ಪೂರ್ವದಲ್ಲಿ ಮನುವು ಸೋಮನಿಗೆ ಕೊಟ್ಟನು. ಮುಂದೆ ಅದು ಸೋಮನಿಂದ ವಿಶ್ವಾವಸುವಿಗೆ, ವಿಶ್ವಾವಸುವಿನಿಂದ ನನಗೆ ದೊರೆಯಿತು. ಈ ವಿದ್ಯೆಯಿಂದ ಸ್ವರ್ಗ, ಮೃತ್ಯು, ಪಾತಾಲಲೋಕಗಳಲ್ಲಿರುವ ಬೇಕಾದ ವಸ್ತುಗಳನ್ನು, ಅವು ಬೇಕಾದ ಸ್ಥಿತಿಯಲ್ಲಿರುವಾಗ ನೋಡಬಹುದು. ಈ ವಿದ್ಯೆಯ ಮೂಲಕವಾಗಿಯೇ ಗಂಧರ್ವರು ನಾವು ದೇವತೆಗ

ಳಿಗೆ ಸಮಾನರಾಗಿರುವೆವು. ಆರುತಿಂಗಳು ಒಂಟಿಗಾಲಿನಿಂದ ನಿಂತಾಗ ಈ ವಿದ್ಯೆಯು ಪ್ರಾಪ್ತವಾಗುವದು. ಎಲೈ ಪುರುಷಶ್ರೇಷ್ಠ ಧರ್ಮರಾಜಾ, ಇದಲ್ಲದೆ ನಿನಗೂ ನಿನ್ನ ತಮ್ಮಂದಿರಿಗೂ ನಮ್ಮ ಗಂಧರ್ವಲೋಕದ ಕುದುರೆಗಳನ್ನು ಕೊಡಬೇಕೆಂದಿದ್ದೇನೆ. ಕ್ಷತ್ರಿಯರಿಗೆ ಕುದುರೆಗಳು ಅವಶ್ಯವಾಗಿ ಬೇಕು. ಗಂಧರ್ವಲೋಕದ ಕುದುರೆಗಳ ಬಣ್ಣವು ಒಡೆಯನ ಇಚ್ಛೆಯಂತೆ ಆಗುವದು. ವೇಗವೂ ಆತನ ಇಚ್ಛೆಯಂತೆಯೇ ಆಗುವದು. ಒಡೆಯನು ಇಚ್ಛಿಸಿದಾಗ ಅವು ಆತನ ಮುಂದೆ ಬಂದು ನಿಂತುಕೊಳ್ಳುವವು.

ಅರ್ಜುನ—ಗಂಧರ್ವಾ, ನಾನು ಪ್ರತಿಯಾಗಿ ಏನೂ ಕೊಡದೆ ಎರಡನೆಯವರಿಂದ ಏನನ್ನಾದರೂ ಇಸಿದುಕೊಳ್ಳುವದು ಯೋಗ್ಯವಲ್ಲ.

ಗಂಧರ್ವ—ಅರ್ಜುನಾ, ನೀನು ನನಗೆ ಪ್ರಾಣದಾನ ಮಾಡಿರುವದರಿಂದ ನಿನ್ನ ನೆನಪು ನನಗಾಗುವದು. ನಾನು ಚಾಕ್ಷುಷೀ ವಿದ್ಯೆಯನ್ನು ನಿನಗೆ ಕೊಟ್ಟರೆ, ನನ್ನ ನೆನಪು ನಿನಗೆ ಆಗುವದು ; ಆದರೆ ಪ್ರತಿಯಾಗಿ ಏನಾದರೂ ಕೊಡಬೇಕೆಂದು ನೀನು ಇಚ್ಛಿಸುತ್ತಿದ್ದರೆ, ನಿನ್ನ ಅಗ್ನ್ಯಸ್ತ್ರವನ್ನು ನನಗೆ ಕೊಡು.

ಅರ್ಜುನ—ಗಂಧರ್ವಾ, ನಿನ್ನ ಇಚ್ಛೆಯಂತೆಯೇ ಆಗಲಿ. ನಾವಿಬ್ಬರೂ ನಮ್ಮ ವಿದ್ಯೆಯು ಪರಸ್ಪರ ವಿನಿಮಯಮಾಡೋಣ. ಆದರೆ ಮಿತ್ರಾ ಗಂಧರ್ವಾ, ನಮಗೆ ಮನುಷ್ಯರಿಗೆ ನಿಮ್ಮಿಂದ ಯಾವ ಭಯವಿರುವದು ? ಶತ್ರುಗಳನ್ನು ಮರ್ದಿಸುವ ವೇದಜ್ಞರಾದ ನಾವೆಲ್ಲರೂ ಹಾದಿಯು ಹಿಡಿದು ಹೋಗುತ್ತಿರಲು, ನೀನು ನಮ್ಮನ್ನು ಯಾಕೆ ಬೆದರಿಸಿದೆ ? ಇದನ್ನೆಲ್ಲ ನನಗೆ ಹೇಳು.

ಗಂಧರ್ವ—ಮಹಾರಾಜ, ನಿಮ್ಮಲ್ಲಿ ಅಗ್ನಿಯು ಇಲ್ಲದಿರುವದರಿಂದ ನೀವು ಗೃಹಸ್ಥಾಶ್ರಮಿಗಳಲ್ಲ ; ಸಂಧ್ಯಾಕಾಲದಲ್ಲಿ ಸಮಿಧೆಗಳನ್ನು ಕೊಡದಿರುವದರಿಂದ ಬ್ರಹ್ಮಚಾರಿಗಳೂ ಅಲ್ಲ ; ಅಂದ ಬಳಿಕ ನಿಮಗೆ ಯಾವ ಆಶ್ರಮವೂ ಇಲ್ಲವೆಂಬುದು ಸಿದ್ಧವಾಯಿತು. ಬ್ರಾಹ್ಮಣನಿಗಂತು ಆಶ್ರಮವು ಇರಲೇಬೇಕು ; ಅಂದ ಬಳಿಕ ನೀವು ಬ್ರಾಹ್ಮಣರಿರಲಿಕ್ಕಿಲ್ಲವೆಂದು ನನಗೆ ತೋರಿತು. ನಿಮ್ಮ ಮುಂದೆ ಪುರೋಹಿತನಿಲ್ಲದ್ದರಿಂದ ನೀವು ಕ್ಷತ್ರಿಯರೂ ಇರಲಿಕ್ಕಿಲ್ಲವೆಂದು ನನಗೆ ತೋರಿತು. ಅಂತೇ ಪಾಂಡುಪುತ್ರರೇ, ನಾನು

ನಿಮ್ಮನ್ನು ಗದ್ದರಿಸಿದೆನು. ನಾನು ನಿಮ್ಮ ಕುಲದ ಕೀರ್ತಿಯನ್ನೂ, ನಿಮ್ಮ ಕೀರ್ತಿಯನ್ನೂ ಕೇಳಿದ್ದೇನೆ. ನಿಮ್ಮ ಗುರುಗಳಾದ ದ್ರೋಣಾಚಾರ್ಯರ ದೊಡ್ಡ ಯೋಗ್ಯತೆಯನ್ನೂ ನಾನು ಬಲ್ಲೆನು ; ಆದರೆ ಪ್ರತ್ಯಕ್ಷ ನಿಮ್ಮ ಪರಿಚಯ.ವಾಗದ್ದರಿಂದ ಹೀಗಾಯಿತು. ಇದಲ್ಲದೆ, ನಿಮ್ಮನ್ನು ನಾನು ಗದ್ದರಿಸಲಿಕ್ಕೆ ಬೇರೊಂದು ಕಾರಣವುಂಟು. ಎಲೈ ಕುರುವಂಶಜಾ, ಬಾಹುಬಲದ ಆಶ್ರಯವುಳ್ಳವನು, ತನ್ನ ಹೆಂಡತಿಯಮುಂದೆ ಅನ್ಯರುಮಾಡುವ ತನ್ನ ಅತಿಕ್ರಮವನ್ನು ಸಹಿಸುವದು ಯೋಗ್ಯವಲ್ಲ ; ಆದ್ದರಿಂದ ನಾನು ಹೆಂಡತಿಯೊಡನೆ ಜಲಕ್ರೀಡೆಯಾಡುವಾಗ ನೀವುಮಾಡಿದ ನನ್ನ ಅತಿಕ್ರಮಣವನ್ನು ನಾನು ಸಹಿಸದಾದೆನು. ರಾತ್ರಿ ನಮ್ಮ ಸಾಮರ್ಥ್ಯವು ಹೆಚ್ಚುವದರಿಂದಲೂ, ಹೆಂಡತಿಯು ನನ್ನ ಬಳಿಯಲ್ಲಿದ್ದದ್ದರಿಂದಲೂ ನಾನು ಸಿಟ್ಟಿಗೆದ್ದೆನು. ನಿನ್ನಲ್ಲಿ ಬ್ರಹ್ಮಚರ್ಯಪಾಲನವು ಇದ್ದದ್ದರಿಂದ ನೀನು ನನ್ನನ್ನು ಗೆದ್ದೆ. ವಿಷಯಸುಖಮಗ್ನಕ್ಷತ್ರಿಯನು ರಾತ್ರಿ ನಮ್ಮೊಡನೆ ಯುದ್ಧಮಾಡಿ ಜೀವದಿಂದ ಉಳಿಯಲಾರನು. ವಿಷಯಸುಖ ಭೋಗಿಸುವ ಕ್ಷತ್ರಿಯನಿದ್ದರೂ, ಆತನು ಪುರೋಹಿತನನ್ನು ಮುಂದೆಮಾಡಿಕೊಂಡು ಬಂದವನಾಗಿದ್ದರೆ ನಮ್ಮನ್ನು ಗೆಲ್ಲಬಹುದು ; ಆದ್ದರಿಂದ ಎಲೈ ತಾಪತ್ಯನೇ, ಶ್ರೇಯಸ್ಸನ್ನು ಬಯಸುವ ಕ್ಷತ್ರಿಯನು ಮನೋನಿಗ್ರಹಿಯಾದ ಪುರೋಹಿತನನ್ನು ಮಾಡಿಕೊಳ್ಳಬೇಕು. ರಾಜಪುರೋಹಿತನು ವೇದ ಹಾಗು ಷಡಂಗಗಳಲ್ಲಿ ಮಗ್ನನಾದವನೂ, ಪವಿತ್ರನೂ, ಸತ್ಯವಾದಿಯೂ, ಧರ್ಮಾತ್ಮನೂ, ಸುಶಿಕ್ಷಿತವಾದ ಅಂತಃಕರಣವುಳ್ಳವನೂ ಇರಬೇಕು. ಇಂಥ ಪುರೋಹಿತನುಳ್ಳವನಿಗೆ ಈ ಲೋಕದಲ್ಲಿ ಜಯವೂ, ಮರಣಹೊಂದಿದ ಬಳಿಕ ಸ್ವರ್ಗವೂ ಪ್ರಾಪ್ತವಾಗುವವು. ಪುರೋಹಿತನಿಲ್ಲದ ಕ್ಷತ್ರಿಯನು ಕೇವಲ ತನ್ನ ಕುಲೀನತೆಯಿಂದಾಗಲಿ, ಶೌರ್ಯದಿಂದಾಗಲಿ ಪೃಥ್ವಿಯನ್ನು ಗೆದ್ದುಕೊಳ್ಳಲಾರನು. ಅರ್ಜುನಾ, ಬ್ರಾಹ್ಮಣರು ಪ್ರಮುಖರಾಗಿರುವ ರಾಜ್ಯವನ್ನು ಚಿರಕಾಲ ರಕ್ಷಿಸುವದು ಶಕ್ಯವಾಗಿರುವದೆಂಬ ಮಾತನ್ನು ಲಕ್ಷದಲ್ಲಿಡು.''

**೧೭೧, ೧೭೨, ೧೭೩ನೇ ಅಧ್ಯಾಯಗಳು — ತಪತ್ಯಾಖ್ಯಾನ—**

ಗಂಧರ್ವನ ಈ ಮಾತುಗಳನ್ನು ಕೇಳಿ ಅರ್ಜುನನು-''ಗಂಧರ್ವಾ, ನನ್ನನ್ನು ತಾಪತ್ಯನೆಂದು ಕರದೆಯಲ್ಲ, ಅದರ ಕಾರಣವೇನು?'' ಎಂದು ಕೇಳಲು,

ಗಂಧರ್ವನು—"ಅರ್ಜುನಾ, ಶ್ರೀ ಸೂರ್ಯನಾರಾಯಣನಿಗೆ ತಪತಿಎಂಬ ಒಬ್ಬ ಹೆಣ್ಣುಮಗಳಿದ್ದಳು. ಆಕೆಯು ಸಾವಿತ್ರಿಯ ತಂಗಿಯು. ಆಕೆಯು ತಪಶ್ಚರ್ಯಮಾಡುತ್ತಿದ್ದದ್ದರಿಂದ 'ತಪತಿ' ಎಂಬ ಹೆಸರಿನಿಂದ ಪ್ರಸಿದ್ಧಳಾಗಿದ್ದಳು. ಆಕೆಯನ್ನು ಸೌಂದರ್ಯದಲ್ಲಿ ಸರಿಗಟ್ಟುವವರು ತ್ರೈಲೋಕ್ಯದಲ್ಲ ಯಾರೂ ಇದ್ದಿಲ್ಲ. ತನ್ನ ಮಗಳು ವಿವಾಹಕ್ಕೆ ಯೋಗ್ಯಳಾಗಿದ್ದರೂ, ಸ್ವರೂಪ-ಗುಣ-ಶಾಸ್ತ್ರಜ್ಞಾನಗಳಿಂದ ಸಂಪನ್ನನಾದ ಯೋಗ್ಯವರನು ಸಿಗದ್ದರಿಂದ, ಸೂರ್ಯನು ಚಿಂತಾಮಗ್ನನಾಗಿದ್ದನು. ಇತ್ತ ಋಕ್ಷರಾಜನ ಮಗನಾದ ಕೌರವಶ್ರೇಷ್ಠ-ಸಂವರಣನೆಂಬ ಬಲಶಾಲಿಯು ನಿತ್ಯ ಸೂರ್ಯೋಪಾಸನೆಯನ್ನು ಮಾಡುತ್ತಿದ್ದನು. ಆಗ ಕೃತಜ್ಞನೂ, ಧರ್ಮಜ್ಞನೂ, ಸ್ವರೂಪಸುಂದರನೂ ಆದ ಸಂವರಣರಾಜನು, ತನ್ನ ಮಗಳಿಗೆ ಯೋಗ್ಯವರನೆಂದು ಶ್ರೀ ಸೂರ್ಯನಾರಾಯಣನು ತಿಳಿದು, ಆತನಿಗೆ ತನ್ನ ಮಗಳನ್ನು ಕೊಡಬೇಕೆಂದು ನಿಶ್ಚಯಿಸಿದನು.

ಮುಂದೆ ಒಂದುದಿನ ಅದ್ವಿತೀಯ ಪರಾಕ್ರಮಿಯಾದ ಸಂವರಣರಾಜನು ಅರಣ್ಯದಲ್ಲಿ ಬೇಟೆಯಾಡುತ್ತಿರುವಾಗ ಆತನ ಕುದುರೆಯು ಸಾಯಲು, ಆತನು ಕಾಲನಡಿಗೆಯಿಂದಲೇ ಅರಣ್ಯದಲ್ಲಿ ಸಂಚರಿಸತೊಡಗಿದನು. ಆಗ ಅಪ್ರತಿಮ ಸುಂದರಿಯಾದ ಒಬ್ಬ ವಿಶಾಲಾಕ್ಷಿಯು ಆತನ ಕಣ್ಣಿಗೆಬಿದ್ದಳು. ಆಗ ಆ ಕನ್ಯೆಯು ಒಬ್ಬಳೇ ಇದ್ದಳು; ರಾಜನೂ ಒಬ್ಬನೇ ಇದ್ದನು. ರಾಜನು ಎವೆಯಿಕ್ಕದೆ ಆಕೆಯನ್ನು ನೋಡುತ್ತ ಆಕೆಯನ್ನು ಕುರಿತು—"ಎಲೈ ಸುಂದರೀ, ನೀನು ಯಾರು? ಯಾರವಳು? ಯಾವಉದ್ದೇಶದಿಂದ ಇಲ್ಲಿ ನಿಂತಿರುವೆ? ನೀನು ಒಬ್ಬಳೇ ಅರಣ್ಯದಲ್ಲಿ ಸಂಚರಿಸುವ ಕಾರಣವೇನು? ನಿನ್ನನ್ನು ನೋಡಿ ನಾನು ಅತ್ಯಂತ ಕಾಮಪೀಡಿತನಾಗಿದ್ದೇನೆ" ಅನ್ನಲು, ಆ ಸುಂದರಿಯು ಯಾವಮಾತನ್ನೂ ಆಡದೆ, ಮೋಡದಲ್ಲಿ ಮಿಂಚು ಅಡಗುವಂತೆ ಅದೃಶ್ಯಳಾದಳು! ಆಗ ರಾಜನು ವಿಲಾಪಮಾಡುತ್ತ ಆ ಸುಂದರಿಯನ್ನು ಹುಡುಕುತ್ತ ಆಕೆಯನ್ನು ಕಾಣದೆ ಮುಹೂರ್ತಮಾತ್ರ ಮೂರ್ಛಿತನಾದನು. ಆಗ ಆ ಸುಂದರಿಯು ಪುನಃ ಪ್ರಕಟವಾಗಿ ಸಂವರಣರಾಜನನ್ನು ಕುರಿತು—

ಸ್ತ್ರೀ—ಎಲೈ ಶತ್ರುಮರ್ದನಾ ರಾಜಾ, ಏಳು ಏಳು. ನಿನಗೆ ಕಲ್ಯಾಣವಾಗಲಿ. ನಿನ್ನಂಥ ಲೋಕವಿಖ್ಯಾತ ರಾಜನಿಗೆ ಹೀಗೆ, ಮೋಹವುತ್ಪನ್ನವಾಗುವದು ಯೋಗ್ಯವಲ್ಲ.

ಸಂವರಣ—ಎಲೈ ಸುಂದರೀ, ನಾನು ಕಾಮಮೋಹಿತನಾಗಿ ನಿನ್ನಲ್ಲಿ ಅನುರಕ್ತನಾಗಿದ್ದೇನೆ, ನನ್ನನ್ನು ಸ್ವೀಕಾರಮಾಡು. ಇಲ್ಲದಿದ್ದರೆ ನನ್ನ ಪಂಚಪ್ರಾಣಗಳು ಉಳಿಯಲಾರವು.

ಸ್ತ್ರೀ—ರಾಜಾ, ನೀನನ್ನುವದೆಲ್ಲ ಸತ್ಯವು; ಆದರೆ ನನ್ನ ದೇಹದಮೇಲೆ ನನ್ನ ಅಧಿಕಾರವಿಲ್ಲ, ಆದರಮೇಲೆ ನನ್ನ ತಂದೆಯ ಅಧಿಕಾರವಿರುವದು. ನನ್ನಲ್ಲಿ ನಿನ್ನ ನಿಜವಾದ ಪ್ರೀತಿಯು ಇದ್ದರೆ, ಶ್ರೀ ಸೂರ್ಯನಾರಾಯಣನ ಕಡೆಗೆ ನನ್ನನ್ನು ಕೇಳುವದಕ್ಕಾಗಿ ಯಾರನ್ನಾದರೂ ಕಳಿಸು. ನೃಪಶ್ರೇಷ್ಠಾ, ನಾನು ನಿನ್ನ ಮನಸ್ಸನ್ನು ಆಕರ್ಷಿಸಿರುವಂತೆ, ನೀನಾದರೂ ನನ್ನ ಮನಸ್ಸನ್ನು ಆಕರ್ಷಿಸಿರುತ್ತೀ. ನನ್ನ ದೇಹದಮೇಲೆ ನನ್ನ ಅಧಿಕಾರವಿಲ್ಲದ್ದರಿಂದ ನಾನು ನಿನ್ನಬಳಿಗೆ ಬರಲಾರೆನು ; ಯಾಕಂದರೆ ಸ್ತ್ರೀಯರು ಸ್ವತಂತ್ರರಲ್ಲ. ನಿನ್ನಂಥ ಐಶ್ವರ್ಯಸಂಪನ್ನರಾಜನು ಪತಿಯಾಗಬೇಕೆಂದು ಯಾವಸ್ತ್ರೀಯು ಇಚ್ಛಿಸಲಿಕ್ಕಿಲ್ಲ? ರಾಜಾ, ನನ್ನ ಹೆಸರು ತಪತಿ ; ನಾನು ಸೂರ್ಯನಾರಾಯಣನ ಮಗಳು, ಸಾವಿತ್ರಿಯ ತಂಗಿಯು.

ಈಮೇರೆಗೆ ಹೇಳಿ, ಆ ಪವಿತ್ರ ಸ್ತ್ರೀಯು ಆಕಾಶಮಾರ್ಗದಿಂದ ಹೊರಟುಹೋದಳು. ಆಗ ಆ ರಾಜನು ಪುನಃ ಮೂರ್ಛಿತನಾಗಿ ಬೀಳಲು, ಆತನ ಸಚಿವನು ಹುಡುಕುತ್ತ ಹುಡುಕುತ್ತ ಅಲ್ಲಿಗೆ ಬಂದು, ಶೀತೋಪಚಾರಗಳಿಂದ ರಾಜನನ್ನು ಎಚ್ಚರಗೊಳಿಸಿ—"ಎಲೈ ನರಶ್ರೇಷ್ಠನೇ, ನೀನು ಹೆದರಬೇಡ, ನಿನ್ನ ಕಲ್ಯಾಣವಾಗಲಿ" ಎಂದು ಸಮಾಧಾನಪಡಿಸಿದನು. ಸಂವರಣರಾಜನು ತನ್ನ ಸೈನ್ಯವನ್ನೆಲ್ಲ ಹಿಂದಕ್ಕೆ ಕಳಿಸಿ, ಸಚಿವನನ್ನೊಬ್ಬನನ್ನಿಟ್ಟುಕೊಂಡು ಸ್ನಾನಾದಿಗಳಿಂದ ಶುಚಿರ್ಭೂತನಾಗಿ, ಸೂರ್ಯಾರಾಧನೆಯನ್ನು ಮಾಡುವ ಇಚ್ಛೆಯಿಂದ ಸೂರ್ಯನ ಕಡೆಗೆ ನೋಡುತ್ತ ನಿಂತುಕೊಂಡು, ತನ್ನ ಪುರೋಹಿತರಾದ ಋಷಿಶ್ರೇಷ್ಠ ವಶಿಷ್ಠರ ಸ್ಮರಣಮಾಡಿದನು. ಹೀಗೆ ಅಹೋರಾತ್ರ ಒಂದೇ ಸವನೆ ಹನ್ನೆರಡು ದಿನ ನಿಂತುಕೊಳ್ಳಲು, ವಶಿಷ್ಠರು ಆತನ ಬಳಿಗೆ ಬಂದು, ಆತನ ಮನೋದಯವನ್ನರಿತು

ಆ ತಪತಿಯನ್ನು ಕೇಳುವದಕ್ಕಾಗಿ, ಸಂವರಣನ ಸಮಕ್ಷ ಸೂರ್ಯನ ಬಳಿಗೆ ಹೋದರು. ಅವರು ಭಗವಾನ್ ಸೂರ್ಯನಾರಾಯಣನ ಮುಂದೆ ಕೈಜೋಡಿಸಿ ನಿಂತುಕೊಂಡು—"ನಾನು ವಶಿಷ್ಠನು ಬಂದಿರುವೆನು." ಎಂದು ಪ್ರೇಮದಿಂದ ಹೇಳಿದರು. ಆಗ ಮಹಾ ತೇಜಸ್ವಿಯಾದ ಸೂರ್ಯನು—"ಎಲೈ ಮಹರ್ಷೇ, ನಿನಗೆ ಸ್ವಾಗತವು. ನಿನ್ನ ಇಚ್ಛೆಯೇನಿರುವದು ಹೇಳಬೇಕು" ಎಂದು ಕೇಳಲು, ವಶಿಷ್ಠರು—"ಭಗವನ್ ಸೂರ್ಯನಾರಾಯಣಾ, ಸಾವಿತ್ರಿಯ ತಂಗಿಯಾದ ತಪತಿಯನ್ನು, ಸಂವರಣರಾಜನಿಗೆ ಕೊಡಬೇಕೆಂದು ಕೇಳಲಿಕ್ಕೆ ಬಂದಿದ್ದೇನೆ. ಆ ರಾಜನು ಕೀರ್ತಿಸಂಪನ್ನನೂ, ಉದಾರನೂ ಇದ್ದು, ಧರ್ಮ ಹಾಗು ಅರ್ಥ ಇವುಗಳ ಜ್ಞಾನವು ಆತನಿಗೆ ಚನ್ನಾಗಿ ಇರುವದರಿಂದ, ನಿನ್ನ ಮಗಳಿಗೆ ತಕ್ಕವರನಾಗಿರುವನು" ಎಂದು ಹೇಳಿದನು. ಅದಕ್ಕೆ ಸೂರ್ಯನಾರಾಯಣನು—"ಬ್ರಹ್ಮರ್ಷೇ, ಹೀಗೆ ನೀವು ಹೇಳುವದರಿಂದ ತಪತಿಯನ್ನು ಸಂವರಣರಾಜನಿಗೆ ಕೊಡುವೆನು. ಸಂವರಣನು ರಾಜರಲ್ಲಿ ಶ್ರೇಷ್ಠನು, ನೀವು ಋಷಿಗಳಲ್ಲಿ ಶ್ರೇಷ್ಠರು, ತಪತಿಯು ಸ್ತ್ರೀಯರಲ್ಲಿ ಶ್ರೇಷ್ಠಳು; ಆದ್ದರಿಂದ ಸಂವರಣನಿಗೆ ಕನ್ಯಾದಾನ ಮಾಡಿಕೊಡುವದೇ ಯೋಗ್ಯವು." ಎಂದು ಹೇಳಿ, ತಪತಿಯನ್ನು ವಶಿಷ್ಠರಸಂಗಡ ಕಳಿಸಿಕೊಟ್ಟನು.

ವಶಿಷ್ಠರು ತಪತಿಯನ್ನು, ಸಂವರಣರಾಜನು ಅನುಷ್ಠಾನ ಮಾಡುತ್ತಿರುವಲ್ಲಿಗೆ ಕರತಂದರು. ಅಷ್ಟರಲ್ಲಿ ಆ ರಾಜನ ಹನ್ನೆರಡು ದಿನಗಳ ವ್ರತವು ಮುಗಿದಿರಲು, ಆ ತಪತಿಯೊಡನೆ ಆತನ ವಿವಾಹವಾಯಿತು. ವಶಿಷ್ಠರ ಅನುಮತಿಯಿಂದ ಸಂವರಣನು ರಾಜ್ಯದಾಡಳಿತವನ್ನೆಲ್ಲ ಸಚಿವನಿಗೆ ಒಪ್ಪಿಸಿ, ತಾನು ಅದೇ ಪರ್ವತದಲ್ಲಿ ತಪತಿಯೊಡನೆ ವಿಹರಿಸಹತ್ತಿದನು. ಹೀಗೆ ಆತನು ಕ್ರೀಡಿಸುತ್ತಿರುವಾಗ ಹನ್ನೆರಡು ವರ್ಷಗಳು ಕ್ರಮಿಸಿ ಹೋದವು. ಅರಸನು ಹೀಗೆ ಕಾಮಾಸಕ್ತನಾದದ್ದರಿಂದ, ಆತನ ರಾಜ್ಯದಲ್ಲಿ ಯಜ್ಞಯಾಗಾದಿಗಳು ನಿಂತುಹೋಗಲು, ಇಂದ್ರನು ಹನ್ನೆರಡುವರ್ಷ ಮಳೆಗರೆಯದ್ದರಿಂದ ಭಯಂಕರ ಬರಬಿದ್ದು, ಜನಸಂಹಾರದ ಮಿತಿಯು ಮೀರಿತು. ಆಗ ವಶಿಷ್ಠರು ಕನಿಕರಪಟ್ಟು, ದೇಶದಲ್ಲಿ ರಾಜನಿಲ್ಲದಿರುವದು ದುರ್ಭಿಕ್ಷಕ್ಕೆ ಕಾರಣವೆಂದು ತಿಳಿದು, ಸಂವರಣರಾಜನನ್ನು ಆತನ ರಾಜ್ಯಕ್ಕೆ ಕರತಂದು,

ಯಜ್ಞಯಾಗಾದಿಗಳನ್ನು ಮಾಡಿಸಿದರು. ಅವರಿಂದ ನಾಳೆಯಾಗಿ ಎಲ್ಲ ಕಡೆಗೂ ಸುಭಿಕ್ಷವಾಯಿತು. ಅರ್ಜುನಾ, ಈ ಸಂವರಣರಾಜನಿಂದ ತಪತಿಯಲ್ಲಿ ಕುರುರಾಜನು ಹುಟ್ಟಿದನು. ಆತನೇ ನಿಮ್ಮ ವಂಶದ ಮೂಲಪುರುಷನು. ಹೀಗೆ ನಿಮ್ಮ ಕುಲದ ಉತ್ಪತ್ತಿಗೆ ತಪತಿಯೇ ಕಾರಣವಾದದ್ದರಿಂದ ನೀವೆಲ್ಲರೂ ತಾಪತ್ಯರು

**೧೭೪ನೇ ಅಧ್ಯಾಯ—ವಶಿಷ್ಠನ ವೃತ್ತಾಂತ**—ಜನಮೇಜಯಾ, ವಶಿಷ್ಠನ ತಪೋಬಲವನ್ನು ಕೇಳಿ, ಅರ್ಜುನನು ಕೌತುಕಪಟ್ಟು ಗಂಧರ್ವನನ್ನು ಕುರಿತು—"ನೀನು ವಶಿಷ್ಠನೆಂದು ಹೇಳಿದೆಯಲ್ಲ, ಆತನು ಯಾರು? ಆತನ ವೃತ್ತಾಂತವನ್ನು ಹೇಳು." ಎಂದು ಕೇಳಲು, ಗಂಧರ್ವನು—ಅರ್ಜುನಾ, ವಶಿಷ್ಠನು ಬ್ರಹ್ಮದೇವನ ಮಾನಸಪುತ್ರನು. ಆತನ ಹೆಂಡತಿಯು ಅರುಂಧತಿ. ಇಂದ್ರಿಯಗಳನ್ನು ವಶಮಾಡಿಕೊಂಡದ್ದರಿಂದ, ಆ ಮಹರ್ಷಿಗೆ ವಶಿಷ್ಠನೆಂಬ ಹೆಸರು ಬಂದಿರುವದು. ಆತನು ಕಾಮ ಕ್ರೋಧಗಳನ್ನು ಜಯಿಸಿದವನು. ಅತ್ಯಂತ ಶಾಂತನು. ವಿಶ್ವಾಮಿತ್ರನು ಆ ಮಹಾತ್ಮನ ನೂರುಮಂದಿ ಮಕ್ಕಳನ್ನು ಕೊಂದರೂ, ಆ ಉದಾರಾಂತಃಕರಣದ ವಶಿಷ್ಠನು ಕುಶಿಕವಂಶದ (ವಿಶ್ವಾಮಿತ್ರನ ವಂಶದ) ನಾಶವನ್ನು ಮಾಡಲಿಲ್ಲ. ಪುತ್ರಶೋಕದಿಂದ ಆತನಿಗೆ ಸಂತಾಪವಾಗಿದ್ದರೂ, ಬೇಕಾದದ್ದನ್ನು ಮಾಡುವ ಸಾಮರ್ಥ್ಯವು ಆತನಲ್ಲಿ ಇದ್ದರೂ, ಆತನು ಕೈಲಾಗದವನಂತೆ ಸ್ವಸ್ಥ ಕುಳಿತುಕೊಂಡನು. ತನ್ನ ಮಕ್ಕಳು ಸತ್ತ ಬಳಿಕ ಅವರನ್ನು ಯಮನ ಮನೆಯೊಳಗಿಂದ ತರುವ ಸಾಮರ್ಥ್ಯವಿದ್ದರೂ, ಸಮುದ್ರವು ಮರ್ಯಾದೆಯ ಉಲ್ಲಂಘನ ಮಾಡದಿರುವಂತೆ, ಈತನು ಯಮನನ್ನು ಅತಿಕ್ರಮಿಸಲಿಲ್ಲ. ಜಿತೇಂದ್ರಿಯನಾದ ಆ ಮಹಾತ್ಮನ ಪೌರೋಹಿತ್ಯವು ಪ್ರಾಪ್ತವಾದ ಬಳಿಕ, ಸಾರ್ವಭೌಮರಾದ ಇಕ್ಷ್ವಾಕುವಂಶದವರಿಗೆ ರಾಜ್ಯಪ್ರಾಪ್ತಿಯು ಆಯಿತು; ಆ ರಾಜರು ಹಲವು ಯಜ್ಞಗಳನ್ನು ಮಾಡಿದರು. ಹೀಗೆ ರಾಜನ ಕಲ್ಯಾಣವಾಗಬೇಕಾದರೆ ಪುರೋಹಿತನು ಬೇಕು; ಆದ್ದರಿಂದ, ಧರ್ಮವೇ ಅಂತಃಕರಣದ ಮುಖ್ಯವಿಷಯವಾಗಿವುಳ್ಳ, ವೇದಜ್ಞನಾದ, ಗುಣವಂತ ಬ್ರಾಹ್ಮಣನನ್ನು ನೀವು ಪುರೋಹಿತನನ್ನಾಗಿ ಮಾಡಿಕೊಳ್ಳಿರಿ. ಪೃಥ್ವಿಯನ್ನು ಗೆದ್ದುಕೊಳ್ಳುವ ಇಚ್ಛೆಯುಳ್ಳವರು, ಅರಸನು ಬ್ರಾಹ್ಮಣನನ್ನು ಅಗ್ರೇಸರನನ್ನಾಗಿ ಮಾಡಬೇಕು.

**೧೭೫ನೇ ಅಧ್ಯಾಯ—ವಶಿಷ್ಠನ ಆಖ್ಯಾನ**—ಗಂಧರ್ವನು ಹೀಗೆ ಹೇಳಿದ್ದನ್ನು ಕೇಳಿ ಅರ್ಜುನನು—"ಗಂಧರ್ವಾ, ವಶಿಷ್ಠ-ವಿಶ್ವಾಮಿತ್ರರು ಆಶ್ರಮವಾಸಿಗಳಾಗಿದ್ದು, ಅವರಲ್ಲಿ ವೈರವು ಉತ್ಪನ್ನವಾದ ಕಾರಣ ವೇನು ?" ಎಂದು ಕೇಳಲು, ಗಂಧರ್ವನು—"ಪಾರ್ಥಾ, ಹೇಳುತ್ತೇನೆ ಕೇಳು. ಕಾನ್ಯಕುಬ್ಜ ದೇಶದಲ್ಲಿ ಕುಶಿಪುತ್ರನಾದ ಗಾಧಿಯೆಂಬ ಒಬ್ಬ ಲೋಕವಿಖ್ಯಾತ ರಾಜನಿದ್ದನು. ಆತನಿಗೆ ವಿಶ್ವಾಮಿತ್ರನೆಂಬ ಒಬ್ಬ ಮಗನಿದ್ದನು. ವಿಶ್ವಾಮಿತ್ರನು ಒಳ್ಳೇ ಧರ್ಮನಿಷ್ಠನೂ, ಪರಾಕ್ರಮಿಯೂ ಆಗಿದ್ದು, ಆತನಲ್ಲಿ ದೊಡ್ಡ ಸೈನ್ಯವಿದ್ದದ್ದರಿಂದ ಶತ್ರುಗಳು ಆತನಿಗೆ ಬಹಳವಾಗಿ ಅಂಜುತ್ತಿದ್ದರು. ಒಮ್ಮೆ ವಿಶ್ವಾಮಿತ್ರನು ಬೇಟೆಯಾಡಿ ದಣಿದು ನೀರಡಿಸಿ ಸೈನ್ಯದೊಡನೆ ವಶಿಷ್ಠನ ಆಶ್ರಮಕ್ಕೆ ಹೋದನು. ಆಗ ವಶಿಷ್ಠನು ಸಂತೋಷದಿಂದ ವಿಶ್ವಾಮಿತ್ರನನ್ನು ಆದರಿಸಿ, ತನ್ನ ನಂದಿನಿ ಎಂಬ ಕಾಮಧೇನುವಿನ ಸಹಾಯದಿಂದ, ಆ ರಾಜನನ್ನು ಸೈನ್ಯಸಹಿತವಾಗಿ ಊಟ-ಉಡಿಗೆ, ವಸ್ತ್ರಪಾತ್ರಗಳಿಂದ ಉತ್ತಮರೀತಿಯಿಂದ ಸತ್ಕರಿಸಿದನು. ಇದನ್ನು ನೋಡಿ ವಿಶ್ವಾಮಿತ್ರನಿಗೆ ಬಹಳ ಆಶ್ಚರ್ಯವಾಯಿತು. ಶೋಧಾಂತದಲ್ಲಿ ಇದೆಲ್ಲ ಕಾಮಧೇನುವಿನ ಪ್ರಭಾವವೆಂದು ತಿಳಿದು, ಆ ರಾಜನು ಕಾಮಧೇನುವನ್ನು ನೋಡಿದನು. ಆ ಶುಭ್ರವರ್ಣದ ಸುಂದರವಾದ ಪರಿಪುಷ್ಟ ಆಕಳನ್ನು ನೋಡಿ, ವಿಶ್ವಾಮಿತ್ರನಿಗೆ ಲೋಭವು ಉತ್ಪನ್ನವಾಯಿತು. ಆತನು ಕೂಡಲೆ ವಶಿಷ್ಠನನ್ನು ಕುರಿತು—

ವಿಶ್ವಾಮಿತ್ರ—ನಿಮಗೆ ಹತ್ತುಕೋಟಿ ಆಕಳನ್ನು, ಅಥವಾ ರಾಜ್ಯವನ್ನು ಕೊಡುವೆನು. ಈ ಆಕಳನ್ನಿಷ್ಟು ಕೊಡಿರಿ.

ವಶಿಷ್ಠ—ರಾಜಾ, ಈ ಆಕಳನ್ನು ನಾನು ಕೊಡಲಾರೆನು ; ಯಾಕಂದರೆ, ದೇವತೆಗಳು, ಅತಿಥಿಗಳು, ಪಿತೃಗಳು, ಯಾಗಗಳು ಇವಕ್ಕೆ ಬೇಕಾಗುವ ಹಾಲನ್ನು ಇದು ಕೊಡುವದು.

ವಿಶ್ವಾಮಿತ್ರ—ವಶಿಷ್ಠಮುನಿಗಳೇ, ನಾನು ಹತ್ತುಕೋಟಿ ಆಕಳನ್ನು, ಅಥವಾ ರಾಜ್ಯವನ್ನು ಕೊಡುತ್ತಿದ್ದು, ನೀವು ಆ ಆಕಳನ್ನು ಕೊಡದಿದ್ದರೆ, ನಾನು ಅದನ್ನು ಬಲಾತ್ಕಾರದಿಂದ ತಕ್ಕೊಂಡುಹೋಗುವೆನು. ಹೇಗಿದ್ದರೂ ನಾನು ಕ್ಷತ್ರಿಯನು, ನೀವು ಬ್ರಾಹ್ಮಣರು. ನಿಮ್ಮ ಸಾಮರ್ಥ್ಯವು ಅಧ್ಯ

ಯನ ಹಾಗು ತಪಶ್ಚರ್ಯ! ಇಂದ್ರಿಯನಿಗ್ರಹಮಾಡಿ ಶಾಂತಿಯನ್ನವಲಂಬಿಸಿರುವ ನಿಮ್ಮ ಬ್ರಾಹ್ಮಣರಲ್ಲಿ ಏನು ಪರಾಕ್ರಮವಿರುವದು? ಅಲ್ಲದೆ, ಪರಾಕ್ರಮದಿಂದ ಇಚ್ಛಿತವಸ್ತುವನ್ನು ಸಂಪಾದಿಸುವದು ಕ್ಷತ್ರಿಯರ ಧರ್ಮವೇ ಆಗಿರುವದು.

ವಶಿಷ್ಠ—ವಿಶ್ವಾಮಿತ್ರಾ, ನೀನು ಸ್ವತಃ ರಾಜನಿದ್ದು ಪರಾಕ್ರಮಿಯಿರುವೆ; ಅದರಲ್ಲಿ ನಿನ್ನಸಂಗಡ ದೊಡ್ಡಸೈನ್ಯವಿರುವದು; ಅಂದಬಳಿಕ ನಿನ್ನ ಮನಸ್ಸಿಗೆ ಬಂದಂತೆ ನೀನು ಮಾಡು.

ಹೀಗೆ ವಶಿಷ್ಠರು ಹೇಳಲು, ವಿಶ್ವಾಮಿತ್ರನ ಅಪ್ಪಣೆಯಂತೆ ಆತನ ಸೈನಿಕರು, ನಂದಿನಿಯನ್ನು ಹೊಡೆಯುತ್ತ ಬಡೆಯುತ್ತ ಎಳೆದೊಯ್ಯಹತ್ತಿದರು. ಆಗ ನಂದಿನಿಯು ಹೋಗಲಾರದೆ, ಅಂಬಾ ಎಂದು ಒದರುತ್ತ ಮತ್ತೆಮತ್ತೆ ವಶಿಷ್ಠರಬಳಿಗೆ ಬರತೊಡಗಿತು. ಆಗ ವಶಿಷ್ಠರು—

ವಶಿಷ್ಠ—ಎಲೈ ಕಲ್ಯಾಣೀ, ನೀನು ಮೇಲೆಮೇಲೆ ಒದರುತ್ತ ನನ್ನ ಬಳಿಗೆಬರುತ್ತೀ; ಆದರೆ ಎಲೈ ಭದ್ರೇ, ನಂದಿನೀ, ನಾನು ಕ್ಷಮಾಶೀಲ ಬ್ರಾಹ್ಮಣನು; ವಿಶ್ವಾಮಿತ್ರನು ಬಲಾತ್ಕಾರದಿಂದ ಒಯ್ಯುತ್ತಿರುವಾಗ ನಾನೇನು ಮಾಡಲಿ?

ನಂದಿನಿ—ಭಗವನ್, ವಿಶ್ವಾಮಿತ್ರನ ಸೈನಿಕರು ನನ್ನನ್ನು ಹೊಡೆಯುವದನ್ನು ನೋಡಿ, ತಮಗೆ ದಯವು ಬರುವದಿಲ್ಲವೆ?

ವಶಿಷ್ಠ—ನಂದಿನೀ, ಕ್ಷತ್ರಿಯರ ಬಲವು ಪರಾಕ್ರಮವಾಗಿದ್ದು, ಬ್ರಾಹ್ಮಣರ ಬಲವು ಕ್ಷಮಾಗುಣವಾಗಿರುವದು. ನಿನಗೆ ಇಷ್ಟು ತ್ರಾಸವಾಗುತ್ತಿದ್ದರೂ ಅದನ್ನು ದೂರಮಾಡಲಿಕ್ಕೆ ನನಗೆ ಬರುವಹಾಗಿಲ್ಲ; ಆದ್ದರಿಂದ ನಿನ್ನಮನಸ್ಸಿಗೆ ಬರುತ್ತಿದ್ದರೆ, ನೀನು ವಿಶ್ವಾಮಿತ್ರನಸಂಗಡ ಹೋಗು.

ನಂದಿನಿ—ಮಹಾರಾಜ, ಹಾಗಾದರೆ ನೀವು ನನ್ನನ್ನು ಬಿಟ್ಟುಬಿಟ್ಟಿರೋ ಏನು? ನೀವು ನನ್ನನ್ನು ತ್ಯಜಿಸದಿದ್ದರೆ, ಬಲಾತ್ಕಾರದಿಂದ ನನ್ನನ್ನು ಒಯ್ಯುವದು ಯಾರಿಗೂ ಶಕ್ಯವಿಲ್ಲ.

ವಶಿಷ್ಠ—ನಂದಿನೀ, ನಾನೇನು ನಿನ್ನನ್ನು ತ್ಯಜಿಸಿರುವದಿಲ್ಲ; ಶಕ್ಯವಿದ್ದರೆ ನಿಂತುಕೊ; ಆದರೆ ನಿನ್ನ ಈ ಕರವನ್ನು ಕಣ್ಣಿಯಿಂದ ಗಟ್ಟಿಯಾಗಿ ಕಟ್ಟಿ ಒಯ್ಯುತ್ತಿರುವರು.

ವಶಿಷ್ಠರಮುಖದಿಂದ ಹೊರಟ "ಶಕ್ಯವಿದ್ದರೆ ನಿಂತುಕೋ" ಎಂಬ ಶಬ್ದಗಳು ಕಿವಿಗೆ ಬಿದ್ದಕೂಡಲೆ, ನಂದಿನಿಯು ಕಣ್ಣು ಕೆಂಪಗೆಮಾಡಿ ಬಾಲ ನೆಗಹಿ ಭಯಂಕರವಾಗಿ ಒದರಹತ್ತಿ, ಬಾಲದಿಂದ ಬೆಂಕಿಯನ್ನು ಸುರಿಸಹತ್ತಿತು. ಅದರ ಆ ಭಯಂಕರಸ್ವರೂಪವನ್ನು ಯಾರಿಂದಲೂ ನೋಡುವದಾಗದಾಯಿತು. ಆಗ ಕಾಮಧೇನುವು ತನ್ನ ಬಾಲದಿಂದ ಪಲ್ಲವರನ್ನೂ, ಕೆಚ್ಚಲದಿಂದ ದ್ರವಿಡರನ್ನೂ-ಶಕರನ್ನೂ, ಜನನೇಂದ್ರಿಯದಿಂದ ಯವನರನ್ನೂ, ಸಗಣಿ-ಉಚ್ಚೆಗಳಿಂದ ಶಬರರನ್ನೂ, ಪಕ್ಕೆಯಿಂದ ಪೌಂಡ್ರ, ಕಿರಾತ, ಯವನ, ಬರ್ಬರ, ಸಿಂಹಲ, ಖಸರನ್ನೂ, ನೊರೆಯಿಂದ ಚಿಬುಕ, ಪುಲಿಂದ, ಚೀನ, ಹೂಣ, ಕೇರಲರನ್ನೂ, ಹೀಗೆ ತನ್ನ ಅವಯವಗಳಿಂದ ಅನೇಕಪ್ರಕಾರದ ಮ್ಲೇಂಛಸೈನ್ಯವನ್ನು ನಿರ್ಮಾಣಮಾಡಿತು. ಆ ಪ್ರಚಂಡಸೈನ್ಯವು ವಿಶ್ವಾಮಿತ್ರನ ಸೈನ್ಯವನ್ನು ಹೊಡೆದೋಡಿಸಿತು ; ಆದರೆ ಒಬ್ಬರನ್ನೂ ಕೊಲ್ಲಲಿಲ್ಲ. ಈ ಆಶ್ಚರ್ಯವನ್ನು ನೋಡಿ ವಿಶ್ವಾಮಿತ್ರನು ಬೆರಗಾಗಿ, ತನ್ನ ಕ್ಷತ್ರಿಯತ್ವಕ್ಕಾಗಿ ಬೇಸತ್ತು—"ಈ ಕ್ಷತ್ರಿಯ ಸಾಮರ್ಥ್ಯಕ್ಕೆ ಧಿಕ್ಕಾರವು ! ಬ್ರಹ್ಮತೇಜದಿಂದುಂಟಾಗುವ ಸಾಮರ್ಥ್ಯವೇ ನಿಜವಾದ ಸಾಮರ್ಥ್ಯವು" ಎಂದು ನುಡಿದು, ರಾಜ್ಯವನ್ನೂ, ಸರ್ವ ವಿಷಯಗಳನ್ನೂ ತ್ಯಜಿಸಿ, ಘೋರತಪಶ್ಚರ್ಯದಿಂದ ಬ್ರಾಹ್ಮಣ್ಯವನ್ನು ಪಡೆದು, ಸ್ವರ್ಗಾಧಿಪತಿಯಾದ ಇಂದ್ರನೊಡನೆ ಸೋಮಪಾನವನ್ನು ಮಾಡಿದನು. ಅರ್ಜುನಾ, ಮುಂದಿನ ಕಥೆಯನ್ನು ಹೇಳುವೆನು ಕೇಳು.

**೧೭೬ನೇ ಅಧ್ಯಾಯ -ಕಲ್ಮಾಷಪಾದಾಖ್ಯಾನ—** ಗಂಧರ್ವನು ಅರ್ಜುನನನ್ನು ಕುರಿತು "ಪಾರ್ಥಾ, ಪೂರ್ವದಲ್ಲಿ ಈ ಭೂತಲದಲ್ಲಿ ಇಕ್ಷ್ವಾಕುವಂಶದ ಕಲ್ಮಾಷಪಾದನೆಂಬಹೆಸರಿನ ತೇಜಸ್ವಿಯಾದ ಒಬ್ಬ ರಾಜನಿದ್ದನು. ಆತನು ಒಮ್ಮೆ ಬೇಟೆಯಾಡಿ ದಣಿದು ತನ್ನ ರಾಜಧಾನಿಗೆ ಬರುತ್ತಿರುವಾಗ, ಒಬ್ಬನೇ ಹಾಯುವಷ್ಟು ಇರುವ ಇಕ್ಕಟ್ಟಿನ ಹಾದಿಗೆ ಆತನು ಬಂದನು. ಆಗ ಎದುರಿನಿಂದ ವಶಿಷ್ಠರ ಹಿರಿಯಮಗನಾದ ಮಹಾತಪಸ್ವಿ ಶಕ್ತಿಯೆಂಬವನು, ಅಕಸ್ಮಾತ್ತಾಗಿ ರಾಜನ ಎದುರಿಗೆ ಬಂದನು. ಆಗ ಕಲ್ಮಾಷಪಾದನು ಶಕ್ತಿಗೆ—"ನನ್ನ ಹಾದಿಯಿಂದ ದೂರಸರಿ" ಅನ್ನಲು, ಶಕ್ತಿಯು-"ಮಹಾರಾಜಾ, ಬ್ರಾಹ್ಮಣನನ್ನು ಕಾಣದಿರುವವರೆಗೆ ಹಾದಿಯ

ಮೇಲೆ ಕ್ಷತ್ರಿಯನ ಅಧಿಕಾರವು, ಬ್ರಾಹ್ಮಣನನ್ನು ಕಂಡಬಳಿಕ ಅದರ ಮೇಲೆ ಬ್ರಾಹ್ಮಣನ ಅಧಿಕಾರವು ; ಆದ್ದರಿಂದ ಯಾವ ಕೆಲಸಮಾಡುತ್ತಿದ್ದರೂ, ಅರಸನು ಬ್ರಾಹ್ಮಣನಿಗೆ ಹಾದಿಯನ್ನು ಬಿಡಬೇಕೆಂದು ಧರ್ಮವಿರುವದರಿಂದ, ನೀನು ಒತ್ತಟ್ಟಿಗಾಗು.'' ಎಂದು ಹೇಳಿದನು. ಹೀಗೆ ಅವರಿಬ್ಬರು–''ನೀನು ಒತ್ತಟ್ಟಿಗಾಗು–ನೀನು ಒತ್ತಟ್ಟಿಗಾಗು'' ಎಂದು ವಾದಿಸುತ್ತಿರುವಾಗ ಕಲ್ಮಾಷಪಾದನು ಸಿಟ್ಟಾಗಿ, ರಾಕ್ಷಸನಂತೆ ಶಕ್ತಿಯನ್ನು ಚಬಕದಿಂದ ಹೊಡೆದನು. ಆಗ ಸಿಟ್ಟಿನಿಂದ ಎಚ್ಚರದಪ್ಪಿದ ಆ ವಶಿಷ್ಠಪುತ್ರನು ಕಲ್ಮಾಷಪಾದನಿಗೆ–''ಎಲಾ ನೀಚಾ, ನೀನು ತಪಸ್ವಿಗಳನ್ನು ರಾಕ್ಷಸನಂತೆ ಹೊಡೆಯುತ್ತಿರುವದರಿಂದ, ಇಂದು ಮೊದಲಾಗಿ ನೀನು ನರಮಾಂಸಭಕ್ಷಕರಾಜನಾಗಿ ಪೃಥ್ವಿಯಲ್ಲಿ ಸಂಚರಿಸು'' ಎಂದು ಶಾಪವನ್ನು ಕೊಟ್ಟನು !

ಪಾರ್ಥಾ, ಈ ಕಲ್ಮಾಷಪಾದನಿಂದಲೇ ವಿಶ್ವಾಮಿತ್ರನು ಯಜ್ಞಮಾಡಿಸುವ ನಿಶ್ಚಯಮಾಡಿದ್ದರಿಂದ, ವಶಿಷ್ಠನಿಗೂ, ವಿಶ್ವಾಮಿತ್ರನಿಗೂ ದ್ವೇಷವು ಉತ್ಪನ್ನವಾಯಿತು. ಇರಲಿ. ಶಕ್ತಿಯು ಕಲ್ಮಾಷಪಾದನಿಗೆ ಶಾಪಕೊಟ್ಟಮೇಲೆ ವಿಶ್ವಾಮಿತ್ರನು ಆರಾಜನಿಗೆ–''ಕಲ್ಮಾಷಪಾದಾ, ನಿನಗೆ ಶಾಪಕೊಟ್ಟ ಈತನು ವಶಿಷ್ಠನಮಗನು'' ಎಂದು ಹೇಳಲು, ತಂದೆಯಂತೆ ಈತನೂ ಪ್ರಭಾವಶಾಲಿಯಿರಬಹುದೆಂದ. ತಿಳಿದು, ಕಲ್ಮಾಷಪಾದನು ಪಶ್ಚಾತ್ತಾಪಪಟ್ಟು ಶಕ್ತಿಯನ್ನು ಪ್ರಾರ್ಥಿಸಿ ಕ್ಷಮೆಬೇಡಿ ಉಶ್ಶಾಪವ ಪಡೆಯಬೇಕೆನ್ನುತ್ತಿರಲು, ಅಷ್ಟರಲ್ಲಿ ವಿಶ್ವಾಮಿತ್ರನು ಒಬ್ಬ ರಾಕ್ಷಸನಿಗೆ ರಾಜನ ದೇಹದಲ್ಲಿ ಪ್ರವೇಶಿಸಲು ಆಜ್ಞಾಪಿಸಿದನು. ಶಕ್ತಿಯಶಾಪ, ವಿಶ್ವಾಮಿತ್ರನ ಅಪ್ಪಣೆ ಇವೆರಡರ ಯೋಗದಿಂದ ರಾಕ್ಷಸನು ಕಲ್ಮಾಷಪಾದನ ಶರೀರದಲ್ಲಿ ಪ್ರವೇಶಿಸಲು, ಆ ರಾಜನಿಗೆ ಏನೂ ತೋಚದೆ, ಆತನು ವನದಲ್ಲಿ ಸಂಚರಿಸತೊಡಗಿದನು ಇತ್ತ ವಿಶ್ವಾಮಿತ್ರನೂ, ಶಕ್ತಿಯೂ ತಮ್ಮ ತಮ್ಮ ಸ್ಥಳಗಳಿಗೆ ಹೊರಟುಹೋದರು. ಕಲ್ಮಾಷಪಾದರಾಜನು ವನದಲ್ಲಿ ಸಂಚರಿಸುತ್ತಿರುವಾಗ, ಒಬ್ಬ ಬ್ರಾಹ್ಮಣನು ಆತನಿಗೆ ಮಾಂಸಮಿಶ್ರಿತ ಅನ್ನವನ್ನು ಬೇಡಿದನು. ಅದಕ್ಕೆ ರಾಜನು–''ನೀವು ಇಲ್ಲಿ ಎರಡುಗಳಿಗೆ ಕುಳಿತುಕೊಳ್ಳಿರಿ. ನಾನು ತಿರುಗಿ ಬಂದಬಳಿಕ ನಿಮಗೆ ಇಚ್ಛಾಭೋಜನ ಮಾಡಿಸು

ವೆನು.'' ಎಂದು ಹೇಳಿದನು; ಆದರೆ ರಾಜನಿಗೆ ಆ ಮಾತು ಮರೆತು ಹೋಗಿ, ಆತನು ಅಂತಃಪುರದಲ್ಲಿ ಮಲಗಿದಾಗ, ಮಧ್ಯರಾತ್ರಿಯಲ್ಲಿ ಪಕ್ಕನೆ ನೆನಪಾಯಿತು. ಕೂಡಲೆ ರಾಜನು ಅಡಿಗೆಯವನನ್ನು ಕರೆಸಿ—''ಸೂದಾ, ಅರಣ್ಯದಲ್ಲಿ ನನ್ನ ಹಾದಿಯನ್ನು ನೋಡುತ್ತ ಒಬ್ಬ ಬ್ರಾಹ್ಮಣನು ಕುಳಿತಿರುವನು. ನೀನು ಈಗಲೇ ಮಾಂಸಮಿಶ್ರಿತ ಅನ್ನವನ್ನು ತಕ್ಕೊಂಡು ಹೋಗಿ ಆತನಿಗೆ ಕೊಡು'' ಎಂದು ಹೇಳಿದನು; ಆದರೆ ಅಡಿಗೆಯವನಿಗೆ ಮಾಂಸವು ಎಲ್ಲಿಯೂ ದೊರೆಯದ್ದರಿಂದ, ಆತನು ರಾಜನಿಗೆ ಅದರಂತೆ ತಿಳಿಸಲು, ರಾಕ್ಷಸಸಂಚಾರವಾಗಿರುವ ಅರಸನು ಅಡಿಗೆಯವನಿಗೆ—''ಎರಡನೆಯ ಮಾಂಸವು ದೊರೆಯದಿದ್ದರೆ, ಮನುಷ್ಯಮಾಂಸವೇ ಆಗಲೊಲ್ಲದೇಕೆ, ಏನಾದರೂ ಒಯ್ದು ಒಮ್ಮೆ ಆ ಬ್ರಾಹ್ಮಣನಿಗೆ ಊಟಕ್ಕೆಹಾಕು'' ಎಂದು ಹೇಳಿದನು. ರಾಜನ ಈ ಮಾತನ್ನು ಕೇಳಿ ಅಡಿಗೆಯವನು, ಮರಣಶಿಕ್ಷೆ ವಿಧಿಸಿದವರಬಳಿಗೆ ಹೋಗಿ, ಅಲ್ಲಿ ನರಮಾಂಸವನ್ನು ಸಂಪಾದಿಸಿ ಅಡಿಗೆ ಮಾಡಿ, ಅದನ್ನು ಆ ಹಸಿದಬ್ರಾಹ್ಮಣನಿಗೆ ಒಯ್ದು ಹಾಕಿದನು. ಆ ಬ್ರಾಹ್ಮಣನು ಅನ್ನವನ್ನು ಜ್ಞಾನದೃಷ್ಟಿಯಿಂದ ನೋಡಿ, ಇದು ಮನುಷ್ಯಮಾಂಸವೆಂದು ತಿಳಿದು ಸಂತಾಪದಿಂದ—''ಆ ನರಾಧಮನು ನನಗೆ ಈ ಅಭೋಜ್ಯವನ್ನು ಕೊಡುತ್ತಿರುವಬರಿಂದ, ಆತನಿಗೆ ಇಂಥ ಅನ್ನದಲ್ಲಿಯೇ ಇಚ್ಛೆಯುಂಟಾಗುವದು. ಆ ರಾಜನು ಶಕ್ತಿಯ ಶಾಪದಂತೆ ಮನುಷ್ಯಮಾಂಸದಲ್ಲಿ ಆಸಕ್ತನಾಗಿ, ಪ್ರಾಣಿಗಳ ಬೇಸರಕ್ಕೆ ಕಾರಣನಾಗಿ, ಅರಣ್ಯದಲ್ಲಿ ಸಂಚರಿಸತೊಡಗುವನು'' ಎಂದು ಶಾಪಕೊಟ್ಟನು!

ಹೀಗೆ ಕಲ್ಮಾಷಪಾದನು ಶಕ್ತಿಯ ಹಾಗು ಆ ಬ್ರಾಹ್ಮಣನ ಶಾಪದಿಂದ ಉನ್ಮತ್ತನಾಗಿ ಅರಣ್ಯದಲ್ಲಿ ಸಂಚರಿಸುತ್ತಿರುವಾಗ, ಶಕ್ತಿಯು ಆತನ ಕಣ್ಣಿಗೆ ಬಿದ್ದನು. ಆಗ ಆ ಭೂಪಶ್ರೇಷ್ಠನು ಶಕ್ತಿಗೆ—''ನೀನು ನನಗೆ ಅಯೋಗ್ಯಶಾಪವನ್ನು ಕೊಟ್ಟಿರುವದರಿಂದ, ಮನುಷ್ಯಭಕ್ಷಣದ ಕಾರ್ಯಕ್ಕೆ ನಿನ್ನಿಂದಲೇ ನಾನು ಆರಂಭಿಸುವೆನು.'' ಎಂದುಹೇಳಿ ಶಕ್ತಿಯನ್ನು ಕೊಂದು, ಹುಲಿಯಂತೆ ಆತನನ್ನು ಹರಿದು ತಿಂದನು. ಹೀಗೆ ಶಕ್ತಿಮುನಿಯು ಮರಣಹೊಂದಿದ್ದನ್ನು ನೋಡಿ, ವಿಶ್ವಾಮಿತ್ರನು ವಶಿಷ್ಠನ ಉಳಿದ ಮಕ್ಕಳನ್ನು ತಿನ್ನುವಂತೆ ರಾಕ್ಷಸನನ್ನು ಪುನಃ ಪುನಃ ಪ್ರೇರಿಸಲು, ಕಲ್ಮಾಷಪಾದನು

ವಶಿಷ್ಠನ ಯಾವತ್ತು ಮಕ್ಕಳನ್ನು ಕೊಂದುಬಿಟ್ಟನು. ಹೀಗೆ ತನ್ನ ಎಲ್ಲ ಮಕ್ಕಳ ಸಂಹಾರವಾದದ್ದನ್ನು ನೋಡಿ, ವಶಿಷ್ಠನಿಗೆ ಅಪಾರಶೋಕವಾಗಿ ಆತನು ಆತ್ಮಹತ್ಯಮಾಡಿಕೊಳ್ಳುವ ನಿಶ್ಚಯಮಾಡಿದರೂ, ಆ ಮಹಾತ್ಮನಾದ ಋಷಿಶ್ರೇಷ್ಠನು ವಿಶ್ವಾಮಿತ್ರನ ನಾಶಮಾಡುವ ವಿಚಾರವನ್ನು ಮನಸ್ಸಿನಲ್ಲಿ ತರಲಿಲ್ಲ. ಮುಂದೆ ಆ ಭಗವಾನ್ ವಶಿಷ್ಠಋಷಿಯು ಆತ್ಮಹತ್ಯಮಾಡಿಕೊಳ್ಳಬೇಕೆಂದು, ಮೇರುಪರ್ವತದ ಶಿಖರದಮೇಲಿಂದ ದುಮುಕಿದನು; ಅರಣ್ಯದಲ್ಲಿ ಅಗ್ನಿಯನ್ನು ಪ್ರಜ್ವಲಿಸಿ ಅದರಲ್ಲಿ ಹಾರಿಕೊಂಡನು; ತನ್ನ ಕೊರಳಲ್ಲಿ ದೊಡ್ಡ ಕಲ್ಲುಕಟ್ಟಿಕೊಂಡು ಸಮುದ್ರದಲ್ಲಿ ಹಾರಿದನು; ಆದರೂ ಆಯಾ ಮಹಾಭೂತಗಳು ಅಂದರೆ ಪೃಥ್ವಿ, ಅಗ್ನಿ, ಜಲಗಳು ಆತನನ್ನು ಕೊಲ್ಲದೆ, ಸುರಕ್ಷಿತವಾಗಿ ಇರಿಸಿದವು. ಆಗ ಪ್ರಶಂಸನೀಯ ನಿಯಮಧಾರಣಮಾಡುವ ಆ ವಶಿಷ್ಠಬ್ರಹ್ಮಋಷಿಯು ಖಿನ್ನನಾಗಿ ತನ್ನ ಆಶ್ರಮಕ್ಕೆ ಹೊರಟುಹೋದನು.

**೧೭೭ನೇ ಅಧ್ಯಾಯ — ಕಲ್ಮಾಷ ಶಾಪಮೋಕ್ಷ** — ವಶಿಷ್ಠಋಷಿಗಳು ತಮ್ಮ ಶೂನ್ಯವಾದ ಆಶ್ರಮವನ್ನು ನೋಡಿ ದುಃಖಿತರಾಗಿ ಅಲ್ಲಿಂದ ಹೊರಟು, ಅರಣ್ಯ–ನದಿ–ಪರ್ವತಗಳಲ್ಲಿ ಸಂಚರಿಸತೊಡಗಿದರು. ಒಂದು ನದಿಯು ಮಳೆಗಾಲದಮೂಲಕ ತುಂಬಿಹರಿಯುತ್ತಿರಲು, ಅದರಲ್ಲಿ ಹಾರಿ ಪ್ರಾಣಕೊಡಬೇಕೆಂದು ಅವರು ಹಗ್ಗಗಳಿಂದ ಕಟ್ಟಿಕೊಂಡು ಆ ನದಿಯಲ್ಲಿ ಹಾರಿದರು; ಆದರೆ ಆ ನದಿಯು ವಶಿಷ್ಠರು ಕಟ್ಟಿಕೊಂಡ ಹಗ್ಗಗಳನ್ನು ಹರಿದು, ಅವರನ್ನು ಸುರಕ್ಷಿತ ಭೂಮಿಯಮೇಲೆ ತಂದು ಇರಿಸಿತು! ಆಗ ವಶಿಷ್ಠರು ದುಃಖಿಸಿ ಮುಂದಕ್ಕೆ ಹೋಗುತ್ತಿರಲು, ಹಿಮಾಲಯದಿಂದ ಬರುತ್ತಿರುವ ಭೀಮಾನದಿಯು ಅವರಿಗೆಹತ್ತಿತು. ಆ ನದಿಯ ಪಾತ್ರವು ದೊಡ್ಡದಿದ್ದು ಅದು ಮೊಸಳೆಗಳಿಂದ ತುಂಬಿತ್ತು. ಆಗ ವಶಿಷ್ಠರು ಅದರಲ್ಲಿ ಹಾರಿಕೊಳ್ಳಲು, "ಅಗ್ನಿಯಂತೆ ಪವಿತ್ರನಾದ ಈ ಋಷಿಯು ನನ್ನಲ್ಲಿ ಮರಣಹೊಂದುವದು ಯೋಗ್ಯವಲ್ಲವೆಂ"ದು ತಿಳಿದು ಭೀಮಾನದಿಯು ನೂರು ಮಾರ್ಗಗಳಿಂದ ಓಡಿಹೋಗಿ ವಶಿಷ್ಠರನ್ನು ಒಣನೆಲದಲ್ಲಿ ಇರಿಸಿತು; ಅಂದಿನಿಂದ ಆ ನದಿಗೆ "ಶತದ್ರು" ಎಂಬ ಹೆಸರು ಉಂಟಾಯಿತು. ಹೀಗಾಗಿ ತನಗೆ ಮರಣಬರುವದು ಅಶಕ್ಯವೆಂದು ತಿಳಿದು, ವಶಿಷ್ಠರು ತಮ್ಮ ಆಶ್ರಮದಕಡೆಗೆ

ತೆರಳಿದರು. ಆಗ ಅವರ ಹಿಂದಿನಿಂದ "ಅದೃಶ್ಯಂತಿ" ಎಂಬ ಹೆಸರಿನ ಅವರ ಸೊಸೆಯು ಬರುತ್ತಿದ್ದು, ಅರ್ಥಪೂರ್ಣವಾದ ಷಡಂಗಗಳನ್ನನುಸರಿಸಿದ ವೇದಧ್ವನಿಯು ಅವರಿಗೆ ಕೇಳಿಸತೊಡಗಿತು. ಆಗ ಅವರು, ಈ ವೇದಧ್ವನಿಯು ಎಲ್ಲಿಯದೆಂದು ಹಿಂದಿರುಗಿ ನೋಡಿ, ಆ ಸ್ತ್ರೀಯನ್ನು ಕುರಿತು—

ವಸಿಷ್ಠ—ತಂಗೀ, ಪೂರ್ವದಲ್ಲಿ ಶಕ್ತ್ರಿಯು ಸಾಂಗವೇದಾಧ್ಯಯನವನ್ನು ಮಾಡುತ್ತಿರುವಾಗ, ಆತನ ಧ್ವನಿಯನ್ನು ನಾನು ಕೇಳಿರುವೆನು. ಈಗ ಅಂಥ ಧ್ವನಿಯೇ ಕೇಳಿಸುವದರಿಂದ ಈ ಧ್ವನಿಯು ಯಾರದು ?

ಅದೃಶ್ಯಂತಿ—ಮುನಿವರ್ಯರೇ, ತಮ್ಮ ಶಕ್ತ್ರಿಯಿಂದ ನನ್ನ ಉದರದಲ್ಲಿ ಗರ್ಭವು ನಿಂತಿರುವದು, ಈ ಧ್ವನಿಯು ಆ ಗರ್ಭದ್ದು. ಅದು ವೇದಾಧ್ಯಯನಮಾಡಹತ್ತಿ ಹನ್ನೆರಡುವರ್ಷಗಳಾದವು.

ಸೊಸೆಯ ಈ ಮಾತುಗಳನ್ನು ಕೇಳಿ ವಶಿಷ್ಠರಿಗೆ ಆನಂದವಾಯಿತು "ಇಷ್ಟಿಗೆ ನನ್ನ ಸಂತತಿಯು ಉಳಿದಿರುವದು" ಎಂದು ತಿಳಿದು, ಅವರು ಆತ್ಮಘಾತಮಾಡಿಕೊಳ್ಳುವ ತಮ್ಮ ವಿಚಾರವನ್ನು ಬಿಟ್ಟುಕೊಟ್ಟರು. ಮುಂದೆ ಹಾದಿಯ ಹಿಡಿದು ಹೋಗುವಾಗ ಅವರಿಗೆ ಕಲ್ಮಾಷಪಾದನ ಭೆಟ್ಟಿಯಾಯಿತು. ಆಗ ಆ ರಾಜನು ರಾಕ್ಷಸಸಂಚಾರದಿಂದ ಮತ್ತನಾಗಿ ವಶಿಷ್ಠಋಷಿಗಳನ್ನು ತಿನ್ನಲಿಕ್ಕೆ ಬಂದನು. ಆಗ ಅದೃಶ್ಯಂತಿಯು ತನ್ನನ್ನು ರಕ್ಷಿಸಬೇಕೆಂದು ಪ್ರಾರ್ಥಿಸಲು, ವಶಿಷ್ಠರು ಹೂಂಕಾರಮಾತ್ರದಿಂದ ಕಲ್ಮಾಷಪಾದನ ನಿವಾರಣಮಾಡಿ, ಕಮಂಡಲೂದಕದಿಂದ ಪ್ರೋಕ್ಷಿಸಿ ಆತನನ್ನು ಶಾಪಮುಕ್ತಮಾಡಿದರು. ಅರಸನು ಶಾಪಗ್ರಸ್ತನಾಗಿ ಅಂದಿಗೆ ಹನ್ನೆರಡುವರ್ಷವಾಗಿತ್ತು. ಆಗ ಪೂರ್ವದಂತೆ ತೇಜಸ್ವಿಯಾದ ಕಲ್ಮಾಷಪಾದನು ವಶಿಷ್ಠರಿಗೆ ಸಾಷ್ಟಾಂಗವಾಗಿ ಎರಗಿ—"ಮುನಿಶ್ರೇಷ್ಠರೇ, ನಾನು ಸುದಾಸಪುತ್ರನಾದ ಕಲ್ಮಾಷಪಾದನಿದ್ದು, ತಮ್ಮ ಯಜಮಾನನಿರುವೆನು; ಆದ್ದರಿಂದ ನಾನು ತಮ್ಮ ಯಾವ ಕಾರ್ಯವನ್ನು ಮಾಡಲಿ ?" ಎಂದು ಕೇಳಲು, ವಶಿಷ್ಠರು—"ರಾಜಾ, ಯೋಗಾಯೋಗವಿದ್ದಂತೆ ಆಗುವದು ಆಗಿಹೋಯಿತು. ಅದಕ್ಕಾಗಿ ನೀನು ಶೋಕಿಸಬೇಡ. ಇನ್ನು ನೀನು ನಿನ್ನ ರಾಜಧಾನಿಗೆ ಹೋಗಿ, ಉತ್ತಮರೀತಿಯಿಂದ ಪ್ರಜಾಪಾಲನ

ಮಾಡು ; ಆದರೆ ಬ್ರಾಹ್ಮಣರ ಅವಮಾನವನ್ನು ಮಾತ್ರ ಎಂದೂ ಮಾಡಬೇಡ" ಎಂದು ಹೇಳಿದನು. ಅದಕ್ಕೆ ಕಲ್ಮಾಷಪಾದನು—"ಮಹಾಭಾಗಾ, ಇನ್ನು ನಾನು ಬ್ರಾಹ್ಮಣರ ಅವಮಾನವನ್ನು ಎಂದೂ ಮಾಡದೆ ಉತ್ತಮರೀತಿಯಿಂದ ಅವರನ್ನು ಪೂಜಿಸುವೆನು ; ಆದರೆ ನನ್ನ ಇಕ್ಷ್ವಾಕು ವಂಶದ ಋಣದಿಂದ ಮುಕ್ತನಾಗುವದಕ್ಕಾಗಿ, ನಿಮ್ಮಿಂದ ಉತ್ತಮ ಸಂತತಿಯನ್ನು ಪಡೆಯಬೇಕೆಂದು ಇಚ್ಛಿಸುತ್ತೇನೆ ; ಆದ್ದರಿಂದ ಶೀಲ, ರೂಪ, ಗುಣಗಳಿಂದ ಯುಕ್ತನಾಗಿದ್ದು, ಇಕ್ಷ್ವಾಕುವಂಶವನ್ನು ಅಭಿವೃದ್ಧಿಗೊಳಿಸುವ ಸಂತತಿಯನ್ನು ಕೊಡಲು ತಾವೇ ಸಮರ್ಥರು" ಎಂದು ಹೇಳಲು, ವಶಿಷ್ಠರು "ಹಾಗೇ ಆಗಲಿ" ಎಂದು ಒಡಂಬಟ್ಟರು.

ಬಳಿಕ ಅರಸನೊಡನೆ ವಶಿಷ್ಠಮುನಿಗಳು ಪ್ರಸಿದ್ಧರಾಜಧಾನಿಯಾದ ಅಯೋಧ್ಯಾನಗರವನ್ನು ಪ್ರವೇಶಿಸಿದರು. ತಮ್ಮರಾಜನನ್ನು ನೋಡಿ ಪ್ರಜೆಗಳಿಗೆ ಪರಮಾನಂದವಾಯಿತು. ಅವರು ಪಟ್ಟಣವನ್ನು ಗುಡಿ-ತೋರಣ-ಪತಾಕಾದಿಗಳಿಂದ ಶೃಂಗರಿಸಿದ್ದರಿಂದ, ಮೊದಲೇ ಸುಂದರವಾಗಿದ್ದ ಆ ಪಟ್ಟಣವು ಅತ್ಯಂತ ಶೋಭಾಯಮಾನವಾಯಿತು. ಅರ್ಜುನಾ, ಅರಸನು ಅಯೋಧ್ಯೆಗೆ ಬಂದಬಳಿಕ, ಸಂತತಿಯನ್ನು ಪಡೆಯುವದಕ್ಕಾಗಿ, ತನ್ನ ಪಟ್ಟರಾಣಿಯನ್ನು ವಶಿಷ್ಠರಬಳಿಗೆ ಕಳಿಸಿದನು. ಆಗ ಭಾಗ್ಯಸಂಪನ್ನರಾದ ವಶಿಷ್ಠಋಷಿಗಳು ಸಮಾಧಿಯನ್ನು ಪಡೆದು, ದಿವ್ಯವಿಧಿಯಿಂದ ಆ ರಾಣಿಯ ಸಮಾಗಮ ಮಾಡಿ ಉತ್ತಮ ಗರ್ಭವನ್ನು ಸ್ಥಾಪಿಸಿದರು. ಮುಂದೆ ರಾಜನು ವಶಿಷ್ಠಋಷಿಗಳನ್ನು ಸತ್ಕರಿಸಿದಬಳಿಕ ಋಷಿಗಳು ತಮ್ಮ ಆಶ್ರಮಕ್ಕೆ ಹೋದರು. ಆಮೇಲೆ ಬಹುದಿವಸಗಳಾದರೂ ಕಲ್ಮಾಷಪಾದನ ರಾಣಿಯು ಹಡೆಯಲೊಲ್ಲಳು. ಆಗ ಆ ಕೀರ್ತಿಸಂಪನ್ನರಾಣಿಯು ಪಾಷಾಣದಿಂದ ತನ್ನ ಹೊಟ್ಟೆಯನ್ನು ಒಡೆದಳು. ಆದರೂ ಗರ್ಭದಲ್ಲಿರುವ ರಾಜರ್ಷಿಯಾದ ಅಶ್ಮಕನು ಹೊರಗೆ ಬರಲಿಲ್ಲವು. ಕಡೆಗೆ ಹನ್ನೆರಡನೆಯವರ್ಷ ಈತನು ಹುಟ್ಟಿದನು. ಈತನೇ "ಪೌದನ್ಯ" ಎಂಬ ಹೆಸರಿನ ನಗರವನ್ನು ಸ್ಥಾಪಿಸಿದನು.

**೧೭೮ನೇ ಅಧ್ಯಾಯ --ಔರ್ವೋಪಾಖ್ಯಾನ**–ಅರ್ಜುನಾ, ಅಯೋಧ್ಯಾನಗರದಿಂದ ವಶಿಷ್ಠರು ತಮ್ಮ ಆಶ್ರಮಕ್ಕೆ ಬಂದಬಳಿಕ, ಅವರ ಸೊಸೆಯಾದ ಅದೃಶ್ಯಂತಿಯು ಪ್ರತಿ ಶಕ್ತಿಋಷಿಯಂತೆ ಇದ್ದ ಒಬ್ಬ ಮಗನನ್ನು

ಹಡೆದಳು. ವಶಿಷ್ಠರೇ ಆತನ ತಂದೆಯಂತೆ ಎಲ್ಲ ಸಂಸ್ಕಾರಗಳನ್ನು ಮಾಡಿದರು. "ಪರಾಸು" ಅಂದರೆ, "ಮರಣೋನ್ಮುಖರು" ಆದಾಗ ವಶಿಷ್ಠರನ್ನು ಸ್ಥಾಪಿಸಿದ್ದರಿಂದ, ಅಂದರೆ ವಶಿಷ್ಠರನ್ನು ಸ್ವಸ್ಥಸ್ಥಿತಿಯವರನ್ನಾಗಿ ಮಾಡಿದ್ದರಿಂದ ಆ ಕೂಸಿಗೆ ವಶಿಷ್ಠರು 'ಪರಾಶರ' ಎಂಬ ಹೆಸರನ್ನಿಟ್ಟರು. ಪರಾಶರನಾದರೂ ವಶಿಷ್ಠರನ್ನೇ ತನ್ನ ತಂದೆಯೆಂದು ತಿಳಿದು, ಅವರನ್ನು "ತಾತ" ಎಂದು ಕರೆಯುತ್ತಿದ್ದನು. ಅದನ್ನು ಕೇಳಿ ಅದೃಶ್ಯಂತಿಗೆ ದುಃಖವಾಗಿ ಆಕೆಯ ಕಣ್ಣೀರು ಉದುರುತ್ತಿದ್ದವು. ಆಕೆಯು ತನ್ನ ಮಗನನ್ನು ಕುರಿತು—"ತಮ್ಮಾ, ವಶಿಷ್ಠರನ್ನು "ತಾತ" ಎಂದು ಕರೆಯಬೇಡ; ಯಾಕಂದರೆ ಹಡೆದವರನ್ನು ತಾತ ಎಂದು ಕರೆಯಬೇಕು. ವಶಿಷ್ಠರು ನಿನ್ನ ಹಡೆದವರಲ್ಲ, ಹಡೆದವರ ತಂದೆಯು. ನಿನ್ನ ಹಡೆದವರನ್ನು ರಾಕ್ಷಸನು ತಿಂದುಬಿಟ್ಟಿರುವನು." ಎಂದು ಹೇಳಲು, ಪರಾಶರನಿಗೆ ಬಹಳ ದುಃಖವಾಯಿತು. ಕೂಡಲೆ ಸತ್ಯವಾದಿಯಾದ ಆತನು ಎಲ್ಲ ಲೋಕಗಳನ್ನು ನಾಶಮಾಡಬೇಕೆಂದು ಮನಸ್ಸಿನಲ್ಲಿ ತಂದನು. ಆಗ ವಶಿಷ್ಠರು ಆತನನ್ನು ನಿಷೇಧಿಸಿ—"ಅಪ್ಪಾ ಪರಾಶರಾ, ಹೀಗೆ ಲೋಕಗಳನ್ನು ನಾಶಮಾಡುವದು ಯೋಗ್ಯವಲ್ಲ. ನಿನಗೆ ಔರ್ವನ ಕಥೆ ಹೇಳುವೆನು ಕೇಳು. ಹಿಂದಕ್ಕೆ ಕೃತವೀರ್ಯನೆಂಬ ಪ್ರಖ್ಯಾತ ಸಾರ್ವಭೌಮರಾಜನಿದ್ದನು. ಆತನು ಭೃಗುಕುಲದೊಳಗಿನ ಬ್ರಾಹ್ಮಣರ ಯಜಮಾನನು. ಆ ರಾಜನು ಸೋಮಯಾಗವನ್ನು ಮಾಡಿ, ಭೃಗುಕುಲೋತ್ಪನ್ನ ಬ್ರಾಹ್ಮಣರಿಗೆ ವಿಪುಲ ದಕ್ಷಿಣೆಯನ್ನೂ, ಧಾನ್ಯವನ್ನೂ ಕೊಟ್ಟು ಸಂತುಷ್ಟರಾಗಮಾಡಿದನು. ಮುಂದೆ ಕೃತವೀರ್ಯನ ತರುವಾಯ ಆತನ ವಂಶದವರಿಗೆ ಬಡತನವು ಬರಲು, ಅವರು ತಮ್ಮ ಪುರೋಹಿತರಾದ ಭೃಗುಕುಲದ ಬ್ರಾಹ್ಮಣರನ್ನು ದುಡ್ಡು ಕೇಳಿದರು. ಅಷ್ಟರಲ್ಲಿ ಕೆಲವರು ಬ್ರಾಹ್ಮಣರು, ಕ್ಷತ್ರಿಯರ ಕಾಟ ಬೇಡವೆಂದು ತಮ್ಮಲ್ಲಿಯ ದುಡ್ಡನ್ನು ದಾನಮಾಡಿಬಿಟ್ಟಿದ್ದರು; ಕೆಲವರು ತಮ್ಮ ದುಡ್ಡನ್ನು ಹುಗಿದಿಟ್ಟರು; ಕೆಲವರು ದೂರ ಲಕ್ಷಗೊಟ್ಟು ದುಡ್ಡನ್ನು ರಾಜನಿಗೆ ಕೊಟ್ಟರು. ಒಂದುದಿನ ಅಕಸ್ಮಾತ್ ಭೃಗುಕುಲೋತ್ಪನ್ನ ಬ್ರಾಹ್ಮಣನ ಮನೆಯಲ್ಲಿ ಒಬ್ಬ ಕ್ಷತ್ರಿಯನಿಗೆ ಹುಗಿದಿಟ್ಟಿದ್ದ ದುಡ್ಡು ಸಿಗಲು, ಎಲ್ಲ ಕ್ಷತ್ರಿಯರು ಒಟ್ಟುಗೂಡಿದರು. ಆಗ ಭಾರ್ಗವಬ್ರಾಹ್ಮಣರು ಕ್ಷತ್ರಿ

ಯರಿಗೆ ಶರಣುಹೋದರೂ, ಅವರು ಅದನ್ನು ಲಕ್ಷಿಸದೆ ಭೃಗುಕುಲದ ಬ್ರಾಹ್ಮಣರನ್ನು ಕಂಡಲ್ಲಿ ಕೊಲ್ಲಹತ್ತಿದರು. ಅಷ್ಟರಿಂದ ಅವರು ತೃಪ್ತರಾಗದೆ, ಗರ್ಭದಲ್ಲಿದ್ದ ಭೃಗುವಂಶದ ಶಿಶುಗಳನ್ನೂ ಕೊಲ್ಲುತ್ತ, ದೇಶದಲ್ಲೆಲ್ಲ ಸಂಚರಿಸತೊಡಗಿದರು. ಆಗ ಸ್ತ್ರೀಯರು ಭಯದಿಂದ ಗುಡ್ಡಗಳನ್ನು ಸೇರಿದರು. ಒಬ್ಬ ಭೃಗುವಂಶದ ಸ್ತ್ರೀಯು, ತನ್ನ ವಂಶವೃಧ್ಯರ್ಥವಾಗಿ ತನ್ನ ಗರ್ಭವನ್ನು ಸಡಲಿಸಿ ತನ್ನ ತೊಡೆಯಲ್ಲಿ ಇಟ್ಟುಕೊಂಡಿದ್ದಳು. ಇದನ್ನು ಕ್ಷತ್ರಿಯರ ಭಯದಿಂದ ಒಬ್ಬ ಬ್ರಾಹ್ಮಣಸ್ತ್ರೀಯು, ಗುಪ್ತರೀತಿಯಿಂದ ಹೋಗಿ ಕ್ಷತ್ರಿಯರಿಗೆ ತಿಳಿಸಿದಳು. ಆಗ ಕ್ಷತ್ರಿಯರು ಒಟ್ಟುಗೂಡಿ ಆ ಗರ್ಭವನ್ನು ಸಂಹರಿಸುವದಕ್ಕಾಗಿ ಆ ಸ್ತ್ರೀಯನ್ನು ನೋಡುತ್ತಿರಲು, ಆ ಗರ್ಭವು ತೊಡೆಒಡೆದು ಹೊರಬಿದ್ದು, ಅದರ ಪ್ರಖರ ತೇಜಸ್ಸಿನಿಂದ ಕ್ಷತ್ರಿಯರ ಕಣ್ಣುಗಳು ಹೋಗಿ, ಅವರು ಕುರುಡರಾಗಿ ಪರ್ವತದಲ್ಲಿ ಸಂಚರಿಸತೊಡಗಿದರು. ಅವರು ಬ್ರಾಹ್ಮಣಸ್ತ್ರೀಗೆ ಶರಣು ಹೋಗಿ— "ಎಲೈ ಭಗವತಿ, ನಮ್ಮಮೇಲೆ ನೀನು ದಯಮಾಡು. ನಿನ್ನ ಪ್ರಸಾದದಿಂದ ನಮ್ಮ ಕ್ಷತ್ರಿಯರಿಗೆ ಕಣ್ಣುಗಳು ಬರಲಿ. ನೀನೂ, ನಿನ್ನ ಮಗನೂ ನಮ್ಮಮೇಲೆ ಅನುಗ್ರಹಮಾಡಿರಿ" ಎಂದು ಪ್ರಾರ್ಥಿಸಿದರು.

ಕ್ಷತ್ರಿಯರ ಈ ಪ್ರಾರ್ಥನೆಯನ್ನು ಕೇಳಿ ಆ ಸ್ತ್ರೀಯು—"ಅಪ್ಪಗಳಿರಾ, ನಾನು ನಿಮ್ಮಮೇಲೆ ಸಿಟ್ಟಾಗಿಲ್ಲ ನಿಮ್ಮ ಕಣ್ಣುಗಳನ್ನೂ ಕಳೆದಿರುವದಿಲ್ಲ. ಈ ಭೃಗುಪುತ್ರನು ನಿಮ್ಮಮೇಲೆ ಸಿಟ್ಟಾಗಿ ನಿಮ್ಮ ಕಣ್ಣು ಕಳೆದಿರುವನು. ನಿಮ್ಮ ಭಯದಿಂದ ಈ ಗರ್ಭವನ್ನು ನೂರುವರ್ಷ ನಾನು ನನ್ನ ತೊಡೆಯಲ್ಲಿ ಧರಿಸಿದೆನು. ಈತನು ಗರ್ಭದಲ್ಲಿರುವಾಗಲೇ ಪುನಃ ಭೃಗುವಂಶದ ಹಿತವನ್ನು ಮಾಡುವ ಇಚ್ಛೆಯಿಂದ ಷಡಂಗಸಹಿತವಾಗಿ ವೇದಗಳು ಈತನಲ್ಲಿ ಪ್ರವೇಶಿಸಿದವು. ಈತನು ನಿಮ್ಮಮೇಲೆ ಸಿಟ್ಟಾಗಿ ನಿಮ್ಮ ನಾಶಮಾಡಲು ಯತ್ನಿಸುತ್ತಿರುವನು. ಈತನಿಂದಲೇ ನಿಮ್ಮ ಕಣ್ಣುಗಳು ಹೋಗಿರುವವು. ಊರುವಿನಿಂದ ಉತ್ಪನ್ನವಾಗಿರುವ ಈ ಔರ್ವನನ್ನೇ ನೀವು ಪ್ರಾರ್ಥಿಸಿರಿ" ಎಂದು ಹೇಳಲು, ಕ್ಷತ್ರಿಯರು ತಮ್ಮನ್ನು ಉದ್ಧರಿಸಬೇಕೆಂದು ಔರ್ವನನ್ನು ಪ್ರಾರ್ಥಿಸಿದರು. ಔರ್ವನಾದರೂ ಅವರ ಪ್ರಾರ್ಥನೆಯನ್ನು ಲಕ್ಷಿಸಿ, ಅವರಿಗೆ ಕಣ್ಣುಗಳನ್ನು

ಕೊಟ್ಟೆವು ; ಆದರೆ ಸಿಟ್ಟು ಇಳಿಯದೆ, ಲೋಕಗಳ ನಾಶವಮಾಡಬೇಕೆಂದು ಆತನು ಉಗ್ರತಪಸ್ಸು ಮಾಡಹತ್ತಿದನು. ಅದರಿಂದ ಯಾವತ್ತು ಲೋಕಗಳು ಸಂತಪ್ತವಾದವು. ತಮ್ಮ ಭೃಗುಕುಲವನ್ನು ಆನಂದಪಡಿಸಲು ಈತನು ಯತ್ನಿಸುವನೆಂದು ತಿಳಿದು, ಆತನ ಪಿತೃಗಳು ಪಿತೃಲೋಕದಿಂದ ಆತನಬಳಿಗೆ ಬಂದು ಆತನನ್ನು ಕುರಿತು—

ಪಿತೃಗಳು—ಬಾಳಾ, ಔರ್ವ, ನಿನ್ನ ಉಗ್ರತಪಶ್ಚರ್ಯದ ಪ್ರಭಾವವು ನಮಗೆ ಗೊತ್ತಾಗಿದೆ. ಇನ್ನು ನೀನು ಲೋಕಗಳಮೇಲೆ ಅನುಗ್ರಹ ಮಾಡಿ ನಿನ್ನ ಸಿಟ್ಟನ್ನು ತಾಳಿಕೋ. ಅಪ್ಪಾ ಔರ್ವ, ಸುಸಂಸ್ಕೃತವಾದ ಅಂತಃಕರಣವುಳ್ಳ ನಾವು, ನಮ್ಮನ್ನು ಕ್ಷತ್ರಿಯರು ಸಂಹರಿಸುವಾಗ ಔದಾಸೀನ್ಯವನ್ನು ತಾಳಿದ್ದು, ನಮ್ಮಲ್ಲಿ ಸಾಮರ್ಥ್ಯವಿಲ್ಲದ್ದಕ್ಕಾಗಿಯಲ್ಲ; ನಮ್ಮ ಆಯುಷ್ಯವು ಬಹಳ ಹೆಚ್ಚಾಗಿದ್ದದ್ದರಿಂದ, ನಾವು ಬೇಸತ್ತು ನಮ್ಮ ನಾಶದ ಉಪಾಯವನ್ನು ನಾವೇ ಉಂಟುಮಾಡಿದೆವು. ಕ್ಷತ್ರಿಯರಿಗೆ ಸಿಟ್ಟು ಬರಬೇಕೆಂದು ನಾವೇ ಬುದ್ಧಿಪೂರ್ವಕವಾಗಿ ದ್ರವ್ಯವನ್ನು ಹುಗಿದಿಟ್ಟೆವು. ಸ್ವರ್ಗಾಪೇಕ್ಷಿಗಳಾದ ನಮಗೆ ದುಡ್ಡಿನ ಮಹತ್ವವೇನು ಹೇಳು? ಮೇಲಾಗಿ ಕುಬೇರನು ನಮಗೆ ವಿಪುಲ ದ್ರವ್ಯವನ್ನು ಕೊಟ್ಟಿರುವದರಿಂದ, ಆ ಕ್ಷತ್ರಿಯರ ದುಡ್ಡನ್ನು ನಾವು ಕೊಟ್ಟಿದ್ದರೂ, ನಮಗೆ ದುಡ್ಡಿನ ಕೊರತೆಯಾಗುತ್ತಿದ್ದಿಲ್ಲ. ಆತ್ಮಹತ್ಯಮಾಡಿಕೊಳ್ಳುವವರಿಗೆ ಪುಣ್ಯಲೋಕಗಳು ಪ್ರಾಪ್ತವಾಗುವದಿಲ್ಲವೆಂಬ ಕಾರಣದಿಂದಲೂ, ನಮ್ಮ ಸಂಹಾರದ ಕಾರಣವನ್ನು ನಾವೇ ಉಂಟುಮಾಡಿದೆವು ಸಾರಾಂಶ, ನಾವೇ ಕ್ಷತ್ರಿಯರಿಂದ ಸಂಹಾರ ಕರ್ಮವನ್ನು ಮಾಡಿಸಿದೆವು; ಆದ್ದರಿಂದ ನೀನು ಮಾಡುವದು ನಮಗೆ ಎಷ್ಟುಮಾತ್ರವೂ ಪ್ರಿಯವಿಲ್ಲ ; ಆದ್ದರಿಂದ ಪಾಪಕಾರಣವಾದ ಸರ್ವ ಲೋಕತಾಪದಾಯಕ ಕರ್ಮದಿಂದ ನಿನ್ನ ಮನಸ್ಸನ್ನು ತಿರುಗಿಸು. ಕ್ಷತ್ರಿಯರ ನಾಶವನ್ನು ಮಾಡಬೇಡ, ಸಪ್ತಲೋಕಗಳ ನಾಶವನ್ನೂ ಮಾಡಬೇಡ. ತಪಸ್ಸಿನ ತೇಜವನ್ನು ದೂಷಿತವಾಗಿ ಮಾಡುವ ವೃದ್ಧಿಂಗತವಾದ ನಿನ್ನ ಸಿಟ್ಟನ್ನು ಬಿಟ್ಟುಬಿಡು.

ಔರ್ವ—ಪಿತೃಗಳೇ, ನನ್ನ ಪ್ರತಿಜ್ಞೆಯು ನಿಷ್ಫಲವಾಗಲಾರದು. ಸಿಟ್ಟಿನಿಂದ ಕಾರ್ಯಮಾಡದಿದ್ದರೆ, ಅಗ್ನಿಯು ಅರಣಿಯನ್ನು ಸುಡುವಂತೆ,

ಸಿಟ್ಟು ನನ್ನನ್ನೇ ಸುಟ್ಟೀತು! ಸಕಾರಣಬಂದ ಸಿಟ್ಟನ್ನು ಸಹಿಸುವವನು ಧರ್ಮ-ಅರ್ಥ-ಕಾಮುಗಳನ್ನು ರಕ್ಷಿಸಲು ಅಸಮರ್ಥನೆಂದು ತಿಳಿಯಬೇಕು. ಶಿಷ್ಟಪಾಲನ-ದುಷ್ಟಶಾಸನಗಳಲ್ಲಿ ರಾಜನು, ಸಿಟ್ಟನ್ನು ಯೋಗ್ಯಸ್ಥಳದಲ್ಲಿ ಉಪಯೋಗಿಸತಕ್ಕದ್ದು; ಆದರೆ ಕ್ಷತ್ರಿಯರು ಈ ಮೊದಲು ನಮ್ಮವಂಶದ ವರಮೇಲೆ ಮಾಡಿದ ಸಿಟ್ಟಿನ ಉಪಯೋಗವುಮಾತ್ರ ಯೋಗ್ಯವಾದದ್ದಲ್ಲ. ಗರ್ಭದಲ್ಲಿರುವ ಶಿಶುಗಳನ್ನು ಕೂಡ ಸಂಹರಿಸುವ ಕ್ಷತ್ರಿಯಾಧಮರನ್ನು ವಧಿಸುವದು ನನ್ನ ಕರ್ತವ್ಯವಾಗಿರುವದು. ಲೋಕದಲ್ಲಿ ಪಾಪದ ನಿಷೇಧ ಮಾಡುವವರು ಇರುವತನಕ, ಪಾಪಮಾಡುವವರು ಹುಟ್ಟುವದಿಲ್ಲ. ನಿಷೇಧ ಮಾಡುವವರು ಇಲ್ಲದಾದರೆ, ಪಾಪಮಾಡುವವರ ಸಂಖ್ಯೆಯು ಹೆಚ್ಚುವದು. ದುಷ್ಟಕ್ಷತ್ರಿಯರನ್ನು ನಿಗ್ರಹಿಸುವವರು ಇಲ್ಲದ್ದರಿಂದಲೇ, ಅವರು ಇಂಥ ಪಾಪಕರ್ಮವನ್ನು ಮಾಡಿದರು; ಮುಂದೆಯೂ ಅವರು ಮಾಡುವವರೇ. ಈ ಲೋಕದಲ್ಲಿರುವ ರಾಜರೂ, ಐಶ್ವರ್ಯಸಂಪನ್ನರೂ ತಮ್ಮಲ್ಲಿ ಸಾಮರ್ಥ್ಯವಿದ್ದರೂನಮ್ಮ ಪಿತೃಗಳನ್ನು ರಕ್ಷಿಸದೆ ಇದ್ದದ್ದರಿಂದ, ನಾನು ಆ ಲೋಕದವರ ಮೇಲೆ ಸಿಟ್ಟಾಗಿರುವೆನು; ಯಾಕಂದರೆ, ನಾನು ಲೋಕದ ನಿಯಂತ್ರವಾಗಿರುತ್ತೇನೆ. ನನ್ನಲ್ಲಿ ಸಾಮರ್ಥ್ಯವಿದ್ದರೂ, ನಿಮ್ಮ ಮಾತನ್ನು ಮನ್ನಿಸಿ ನಾನು ದುಷ್ಟರ ಶಾಸನ ಮಾಡದಿದ್ದರೆ, ಲೋಕದ ಪಾಪವು ನನಗೆ ತಟ್ಟೀತು; ಆದರೆ ಪಿತೃಗಳೇ, ಲೋಕಕಲ್ಯಾಣೇಚ್ಛೆಯು ನಿಮಗಿರುವದರಿಂದ ಲೋಕಭಕ್ಷಣಮಾಡುವ ನನ್ನ ಪ್ರತಿಜ್ಞೆಯೂ ಸುಳ್ಳಾಗಬಾರದು; ಲೋಕದ ಹಾಗು ನನ್ನ ಕಲ್ಯಾಣವೂ ಆಗಬೇಕು. ಅಂಥ ಉಪಾಯವನ್ನು ನೀವೇ ಹೇಳಿರಿ.

ಪಿತೃಗಳು—ಔರ್ವ, ಕ್ರೋಧದ ಮೂಲಕವಾಗಿ ನಿನ್ನಲ್ಲಿ ಉತ್ಪನ್ನವಾಗಿರುವ ಅಗ್ನಿಯು ಲೋಕವನ್ನು ಭಕ್ಷಿಸಲು ಇಚ್ಛಿಸುವದಷ್ಟೆ? ಅದನ್ನು ನೀನು ಜಲದಲ್ಲಿ ಬಿಟ್ಟುಬಿಡು; ಅಂದರೆ ಲೋಕಭಕ್ಷಣಮಾಡುವ ನಿನ್ನ ಇಚ್ಛೆಯೂ ಸಫಲವಾಗುವದು; ಜಗತ್ತಿನ ಕಲ್ಯಾಣವೂ ಆಗುವದು. ಯಾಕಂದರೆ, ಜಲದಲ್ಲಿ ಹೋದ ನಿನ್ನ ಕ್ರೋಧಾಗ್ನಿಯು ಜಲವನ್ನು ಭಕ್ಷಣಮಾಡುವದು; ಜಲದಲ್ಲಿ ಯಾವತ್ತು ಲೋಕಗಳು ವಾಸಿಸುತ್ತಿರುವವು. ಯಾವತ್ತು ರಸಗಳು ಜಲಮಯವಾಗಿದ್ದು, ಯಾವತ್ತು ಜಗತ್ತಾದರೂ

ಜಲಮಯವೇ ಇರುವದು. ಎಲೈ ಬ್ರಾಹ್ಮಣಶ್ರೇಷ್ಠಾ, ನಿನ್ನ ಇಚ್ಛೆಯಿದ್ದರೆ ನಿನ್ನ ಕ್ರೋಧಾಗ್ನಿಯು ಜಲವನ್ನು ಭಕ್ಷಿಸುತ್ತ ಸಮುದ್ರದಲ್ಲಿ ಇರಲಿ; ಅಂದರೆ ಲೋಕಭಕ್ಷಣವಾದಂತಾಗಿ ಜಗತ್ತಿನ ಸಂಹಾರವಾಗದೆ ಉಳಿಯುವದು.

ಈಮೇರೆಗೆ ಹೇಳಿ ವಶಿಷ್ಠರು ಪರಾಶರನನ್ನು ಕುರಿತು—"ಅಪ್ಪಾ, ಪರಾಶರಾ, ಉರ್ವನು ಬಿಟ್ಟ ಕ್ರೋಧಾಗ್ನಿಯೇ ಈಗ ಉರ್ವಾನಲವೆಂಬ ಹೆಸರಿನಿಂದ ಸಮುದ್ರದಲ್ಲಿ ವಾಸಿಸಿ, ಸಮುದ್ರಜಲವನ್ನು ಶೋಷಿಸುತ್ತಿರುವದು. ನಿನಗೆ ಕಲ್ಯಾಣವಾಗಲಿ. ಪರಲೋಕದ ತಿಳುವಳಿಕೆ ಇರುವದರಿಂದ ನೀನಾದರೂ ಲೋಕಗಳನ್ನು ಸಂಹರಿಸುವದು ಯೋಗ್ಯವಲ್ಲ." ಎಂದು ಹೇಳಲು, ಪರಾಶರನು ಯಾವತ್ತು ಲೋಕಗಳ ನಾಶಮಾಡುವ ವಿಷಯದ ತನ್ನ ಸಿಟ್ಟನ್ನು ಬಿಟ್ಟುಬಿಟ್ಟನು; ಆದರೆ ಶಕ್ತಿಯನ್ನು ರಾಕ್ಷಸನು ವಧಿಸಿದ್ದನ್ನು ಸ್ಮರಿಸಿ, ರಾಕ್ಷಸಯಾಗಮಾಡುವದನ್ನು ನಿಶ್ಚಯಿಸಿದನು. ಆತನ ಈ ಎರಡನೆಯ ಪ್ರತಿಜ್ಞೆಯನ್ನು ಭಂಗಗೊಳಿಸಲು ವಶಿಷ್ಠರು ಇಚ್ಛಿಸಲಿಲ್ಲ. ಆಗ ಪರಾಶರನು ರಾಕ್ಷಸಯಜ್ಞದೀಕ್ಷಿತನಾಗಿ ಅಗ್ನಿಗಳ ಬಳಿಯಲ್ಲಿ ಪ್ರತಿ'ಅಗ್ನಿಯಂತೆ ಕುಳಿತುಕೊಂಡನು. ಆ ತಪಸ್ವಿಯಾದ ಪರಾಶರನನ್ನು ಈ ಭಯಂಕರ ಕರ್ಮದಿಂದ ಹಿಂದಿರುಗಿಸುವದು ಸಾಮಾನ್ಯ ಜನರಿಗೆ ಶಕ್ಯವಿದ್ದಿಲ್ಲ; ಆದ್ದರಿಂದ ರಾಕ್ಷಸರನ್ನು ಉಳಿಸುವ ಇಚ್ಛೆಯಿಂದ ಉದಾರಮನಸ್ಸಿನ ಅತ್ರಿ, ಪುಲಸ್ತ್ಯ, ಪುಲಹ, ಕ್ರತು, ಮಹಾಕ್ರತು ಮೊದಲಾದ ದೊಡ್ಡದೊಡ್ಡ ಮುನಿಗಳು ಅಲ್ಲಿಗೆ ಬಂದರು. ಅವರಲ್ಲಿ ಪುಲಸ್ತ್ಯ ಮಹಾಮುನಿಯು ಪರಾಶರನನ್ನು ಕುರಿತು—"ಅಪ್ಪಾ, ಪರಾಶರಾ, ನನ್ನ ಸಂತತಿಯ ಉಚ್ಛೇದಮಾಡುವದು ನಿನಗೆ ಸರ್ವಥಾ ಯೋಗ್ಯವಲ್ಲ; ಯಾಕಂದರೆ, ನೀನು ತಪೋನಿಷ್ಠ ಬ್ರಾಹ್ಮಣನಿರುತ್ತೀ. ತಪಸ್ವಿಗಳು ಇಂಥ ಕರ್ಮಮಾಡಬೇಕೆಂದು ಯಾವಶಾಸ್ತ್ರದಲ್ಲಿ ಹೇಳಿದ್ದೋ ನನಗೆ ಗೊತ್ತಿರುವದಿಲ್ಲ. ತಪೋನಿಷ್ಠರ ಮುಖ್ಯಧರ್ಮವು ಶಾಂತಿಯು. ಅದರಂತೆ ನೀನು ಆಚರಿಸುವದು ಯೋಗ್ಯವು. ನಿನ್ನ ತಂದೆಯ ಕೀರ್ತಿಯನ್ನಾದರೂ ಲಕ್ಷಿಸಿ, ಅಂಥ ಧರ್ಮಿಷ್ಠನ ಮಗನು ಇಂಥ ಅಧರ್ಮದ ಕೃತಿಯನ್ನು ಮಾಡುವದು ಲಾಂಛನಾಸ್ಪದವೆಂದು ತಿಳಿದು ಈ ರಾಕ್ಷಸಯಜ್ಞ

ವನ್ನು ನೀನು ನಿಲ್ಲಿಸು. ರಾಕ್ಷಸನು ನಿನ್ನ ತಂದೆಯನ್ನು ಕೊಲ್ಲಲಿಕ್ಕೆ ನಿನ್ನ ತಂದೆಯೇ ಕಾರಣನು; ಯಾಕಂದರೆ, ನಿನ್ನ ತಂದೆಯು ಅಂಥ ಭಯಂಕರ ಶಾಪವನ್ನು ಕೊಡದಿದ್ದರೆ, ಆತನನ್ನು ಕೊಲ್ಲಲಿಕ್ಕೆ ರಾಕ್ಷಸನು ಹೇಗೆ ಸಮರ್ಥನಾಗುತ್ತಿದ್ದನು? ನಿನ್ನ ತಂದೆಯು ಸ್ವತಃ ಮೃತ್ಯುವನ್ನು ಬರಮಾಡಿಕೊಂಡನು. ತಿರುಗಿ ಕೇಳಿದರೆ ವಿಶ್ವಾಮಿತ್ರನೂ ನಿಮಿತ್ತಮಾತ್ರನೇ ಸರಿ; ಕಲ್ಮಾಷಪಾದನ ವಿಷಯದಲ್ಲಾದರೂ ಹೀಗೆಯೇ ವಿಚಾರಮಾಡತಕ್ಕದ್ದು. ಮೇಲಾಗಿ ಶಕ್ತಿಯೇ ಮೊದಲಾದ ವಶಿಷ್ಠನ ಮಕ್ಕಳು ಸ್ವರ್ಗದಲ್ಲಿ ದೇವತೆಗಳ ಸಹವಾಸದಲ್ಲಿರುವದರಿಂದ, ಅವರ ಹಾನಿಯೂ ಆಗಿರುವದಿಲ್ಲ. ಅವರು ಅಲ್ಲಿ ಆನಂದದಿಂದ ಇರುವರು. ಇದನ್ನೆಲ್ಲ ವಶಿಷ್ಠರು ಅರಿತಿರುವರು; ಆದ್ದರಿಂದ ಜ್ಞಾನವಂತನಾದ ಪರಾಶರನೇ, ಪಾಪ! ಬಡರಾಕ್ಷಸರ ನಾಶವನ್ನು ನಿಷ್ಕಾರಣವಾಗಿ ಮಾಡಬೇಡ. ಈ ಯಜ್ಞವನ್ನು ನೀನು ಮುಗಿಸು; ನಿನ್ನ ಕಲ್ಯಾಣವಾಗಲಿ'' ಎಂದು ಹೇಳಲು, ಪರಾಶರನು ರಾಕ್ಷಸಸತ್ರವನ್ನು ಮುಗಿಸಿ, ಆ ಯಜ್ಞಕ್ಕಾಗಿ ಸಿದ್ಧಮಾಡಿದ ಅಗ್ನಿಯನ್ನು, ಹಿಮಾಲಯದ ಉತ್ತರದ ಒಂದು ನಿಬಿಡವಾದ ಮಹಾರಣ್ಯದಲ್ಲಿ ಚಲ್ಲಿಕೊಟ್ಟನು. ಈಗಲೂ ಆ ಅಗ್ನಿಯು ಪರ್ವದಿನದಲ್ಲಿ ರಾಕ್ಷಸರನ್ನೂ, ವೃಕ್ಷಗಳನ್ನೂ, ಪಾಷಾಣಗಳನ್ನೂ ಭಕ್ಷಿಸುತ್ತಿರುವದು.

**೧೮೩, ೧೮೪ನೇ ಅಧ್ಯಾಯಗಳು— ಕಲ್ಮಾಷಪಾದ ಶಾಪಕಥನವೂ, ಪುರೋಹಿತವರಣವೂ**—ಅರ್ಜುನನು ಗಂಧರ್ವನನ್ನು ಕುರಿತು— "ಮಿತ್ರಾ, ಕಲ್ಮಾಷಪಾದನು ತನ್ನ ಹೆಂಡತಿಯನ್ನು ಉಪಭೋಗಕ್ಕಾಗಿ ವಶಿಷ್ಠರಕಡೆಗೆ ಯಾಕೆ ಕಳಿಸಿದನು? ವಶಿಷ್ಠರಾದರೂ ಅಧರ್ಮವೆನಿಸುವ ಅಗಮ್ಯಾಗಮನವನ್ನು ಹೇಗೆ ಮಾಡಿದರು?'' ಎಂದು ಕೇಳಲು, ಗಂಧರ್ವನು—"ಅರ್ಜುನಾ, ಹೇಳುವೆನು ಕೇಳು ಶಕ್ತಿಯ ಶಾಪದಿಂದ ಕಲ್ಮಾಷಪಾದನು ರಾಕ್ಷಸನಾಗಿ ಹೆಂಡತಿಯೊಡನೆ ಹಸಿದು ಸಂಚರಿಸುತ್ತಿದ್ದನು. ವಶಿಷ್ಠರಿಂದ ಆತನ ಶಾಪವಿಮೋಚನವು ಇನ್ನೂ ಆಗಿದ್ದಿಲ್ಲ. ಆಗ ಒಬ್ಬ ಬ್ರಾಹ್ಮಣನೂ, ಆತನ ಹೆಂಡತಿಯೂ ವಿಷಯಸುಖಪ್ರವೃತ್ತರಾದದ್ದು ಆತನ ಕಣ್ಣಿಗೆ ಬಿದ್ದಿತು. ಆ ದಂಪತಿಗಳಾದರೂ ಕಲ್ಮಾಷಪಾದನನ್ನು ನೋಡಿ ಅಂಜಿ ಓಡಹತ್ತಿದರು. ಆಗ ಕಲ್ಮಾಷಪಾದನು ಅವರಲ್ಲಿ ಬ್ರಾಹ್ಮ

ಣನನ್ನು ಹಿಡಿದನು ಆಗ ಬ್ರಾಹ್ಮಣನ ಹೆಂಡತಿಯು ದುಃಖದಿಂದ ರಾಜನನ್ನು ಕುರಿತು—"ಎಲೈ ಸದಾಚಾರಸಂಪನ್ನನಾದ ರಾಜನೇ, ನನ್ನ ಮಾತನ್ನು ಕೇಳು. ನೀನು ಸೂರ್ಯವಂಶದ ರಾಜನು, ಧರ್ಮಿಷ್ಠನು, ಗುರುಸೇವೆ ಮಾಡಿದವನು. ಈಗ ಶಾಪಮೂಲಕ ಭ್ರಷ್ಟನಾಗಿದ್ದರೂ ಇಂಥ ಪಾಪಕರ್ಮ ಮಾಡುವದು ನಿನಗೆ ಯೋಗ್ಯವಲ್ಲ. ನನ್ನ ಋತುಕಾಲವು ಪ್ರಾಪ್ತವಾಗಿದ್ದು, ಸಂತತಿಯ ಸಲುವಾಗಿ ಪತಿಸಮಾಗಮ ಮಾಡುತ್ತಿರುವಾಗ ನನ್ನ ಇಚ್ಛೆಯು ಪೂರ್ಣವಾಗಿರುವದಿಲ್ಲ ; ಆದ್ದರಿಂದ ರಾಜಶ್ರೇಷ್ಠಾ, ನನ್ನ ಮೇಲೆ ದಯಮಾಡಿ ನನ್ನ ಪತಿಯನ್ನು ಬಿಟ್ಟುಬಿಡು" ಎಂದು ಬೇಡಿಕೊಂಡಳು ; ಆದರೆ ಕಲ್ಮಾಷಪಾದನು ಕೇಳದೆ, ಹುಲಿಯು ಚಿಗರೆಯನ್ನು ಹರಿದು ತಿನ್ನುವಂತೆ, ಬ್ರಾಹ್ಮಣನನ್ನು ಆತನ ಹೆಂಡತಿಯ ಕಣ್ಣೆದುರಿಗೆ ಹರಿದುತಿಂದನು. ಅದನ್ನು ನೋಡಿ ಆ ಪತಿವ್ರತೆಯು ಕ್ರೋಧಸಂತಪ್ತಳಾಗಿ-"ಎಲೈ ದುಷ್ಟಾ, ನನ್ನ ಮನೋರಥವು ಪೂರ್ಣವಾಗದಿರುವಾಗ ನೀನು ನನ್ನ ಪತಿಯನ್ನು ಕೊಂದದ್ದರಿಂದ, ನಿನಗೆ ನಾನು ಶಾಪಕೊಡುವೆನು. ಋತುಕಾಲದಲ್ಲಿ ನಿನ್ನ ಹೆಂಡತಿಯ ಸಮಾಗಮವು ಒದಗುವಾಗ ನಿನಗೆ ಮರಣವು ಒದಗಲಿ; ಮತ್ತು ವಶಿಷ್ಠರ ಮಕ್ಕಳನ್ನು ನೀನು ಕೊಂದಿರುವೆಯಷ್ಟೇ ? ಆ ವಶಿಷ್ಠರ ಸಮಾಗಮಮಾಡಿದಬಳಿಕ ನಿನ್ನ ಹೆಂಡತಿಗೆ ಸಂತಾನವಾಗುವದು. ಎಲೈ ನರಾಧಮನೇ, ಅದೇ ಮಗನೇ, ನಿನ್ನ ವಂಶವೃದ್ಧಿಗೆ ಕಾರಣನಾಗುವನು." ಎಂದು ಶಾಪವನ್ನು ಕೊಟ್ಟಳು ; ಆದ್ದರಿಂದ ಅರ್ಜುನಾ, ಹೀಗೆ ಬ್ರಾಹ್ಮಣಸ್ತ್ರೀಯ ಶಾಪದಮೂಲಕವಾಗಿ ವಶಿಷ್ಠರು ಕಲ್ಮಾಷಪಾದನ ಹೆಂಡತಿಯಲ್ಲಿ ಸಂತತಿಯನ್ನು ಉತ್ಪನ್ನಮಾಡಬೇಕಾಯಿತು." ಎಂದು ಹೇಳಿದನು. ಆಗ ಅರ್ಜುನನು ಗಂಧರ್ವನಿಗೆ—

ಅರ್ಜುನ—ಗಂಧರ್ವಾ, ನಿನ್ನ ಹೇಳಿಕೆಯಂತೆ ನಾವು ಪುರೋಹಿತರನ್ನು ಮಾಡಿಕೊಳ್ಳಲಿಕ್ಕೆ ಸಿದ್ಧರಿರುವೆವು ; ಆದರೆ ವೇದಜ್ಞನಾದ ಬ್ರಾಹ್ಮಣನು ಯಾವನಿರುವನೆಂಬದನ್ನು ಹೇಳು ; ಯಾಕಂದರೆ ಎಲ್ಲಸಂಗತಿಯು ನಿನಗೆ ಗೊತ್ತಿರುತ್ತದೆ

ಗಂಧರ್ವ— ದೇವಲಮುನಿಯ ತಮ್ಮನಾದ ಧೌಮ್ಯಮುನಿಯು ಉತ್ಕೋಚಕವೆಂಬ ತೀರ್ಥದಲ್ಲಿ ತಪಶ್ಚರ್ಯಮಾಡುತ್ತಿರುವನು. ನಿನ್ನ ಇಚ್ಛೆಯಿದ್ದರೆ ಆತನನ್ನು ಪುರೋಹಿತನನ್ನಾಗಿ ಮಾಡಿಕೋ.

ಜನಮೇಜಯಾ, ಆಮೇಲೆ ಅರ್ಜುನನು ಗಂಧರ್ವನ ಮಾತಿಗೆ ಒಪ್ಪಿ, ಆತನಿಗೆ ಆಗ್ನೇಯಾಸ್ತ್ರವನ್ನು ಕೊಟ್ಟು—"ಗಂಧರ್ವಾ, ನೀನು ಕೊಡುವ ಕುದುರೆಗಳನ್ನು ನಾವು ಕೇಳಿದಾಗ ಕೊಡು, ನಿನ್ನ ಕಲ್ಯಾಣವಾಗಲಿ" ಎಂದು ಹೇಳಿದಬಳಿಕ, ಪಾಂಡವರೂ, ಗಂಧರ್ವನೂ ಪರಸ್ಪರರನ್ನು ಸನ್ಮಾನಿಸಿದ ಮೇಲೆ, ಅವರು ಆ ಭಾಗೀರಥೀತೀರದಿಂದ ಹೊರಟುಹೋದರು. ಬಳಿಕ ಪಾಂಡವರು ಉತ್ಕೋಚಕ ತೀರ್ಥಕ್ಕೆ ಹೋಗಿ, ತಮ್ಮ ಪೌರೋಹಿತ್ಯವನ್ನು ಮಾಡಬೇಕೆಂದು ಧೌಮ್ಯರನ್ನು ಪ್ರಾರ್ಥಿಸಿದರು. ಆಗ ಧೌಮ್ಯರು ಫಲಮೂಲಾದಿಗಳಿಂದ ಪಾಂಡವರನ್ನು ಸತ್ಕರಿಸಿ, ಅವರ ಪೌರೋಹಿತ್ಯವನ್ನು ಸ್ವೀಕರಿಸಿದರು. ಬಳಿಕ ಧೌಮ್ಯಮುನಿಯು ಪುಣ್ಯಾಹವಾಚನ ಮಾಡಿದಮೇಲೆ, ಆ ನರಪತಿಶ್ರೇಷ್ಠರಾದ ಪಾಂಡವರು ದ್ರೌಪದಿಯ ಸ್ವಯಂವರಕ್ಕೆ ಹೊರಡುವ ವಿಚಾರವನ್ನು ಮಾಡಿದರು

---

## ಶ್ರೀ ಶೇಷದಾಸರು–ಸೂಕ್ತಿರೂಪ

# ರಹಸ್ಯಗಳು

**(೩) ನಸ್ತ್ರೀಸ್ವಾತಂತ್ರ್ಯಮರ್ಹತಿ**—ಈ ಉಪಪರ್ವದ ೪೨೫ನೇ ಪುಟದಲ್ಲಿ ಸೂರ್ಯಪುತ್ರಿಯಾದ "ತಪತಿ" ಎಂಬ ಸುಂದರಿಯು, ತನ್ನನ್ನು ಲಗ್ನವಾಗಬೇಕೆಂದು ಇಚ್ಛಿಸುವ ಸಂವರಣರಾಜನನ್ನು ಕುರಿತು—"ರಾಜಾ, ನನ್ನ ದೇಹದಮೇಲೆ ನನ್ನ ತಂದೆಯ ಅಧಿಕಾರವಿರುವದಲ್ಲದೆ, ನನ್ನ ಅಧಿಕಾರವಿಲ್ಲವು" ಎಂದು ಹೇಳಿರುವಳು. ಭಗವತೀ ತಪತಿಯು ಸರ್ವಸಾಮಾನ್ಯ ಸ್ತ್ರೀಯಲ್ಲ, ದೇವಯೋನಿಯವಳು ; ಸೃಷ್ಟಿ–ಸ್ಥಿತಿ–ಲಯಕರ್ತೃವಾದ ಭಗವಾನ್ ಶ್ರೀ ಸೂರ್ಯನಾರಾಯಣನ ಮಗಳು. ಅಂಥವಳು ತನ್ನ ಪಾರತಂತ್ರ್ಯವನ್ನು ಒಪ್ಪಿಕೊಂಡಿರುವದರಿಂದ, ಸ್ತ್ರೀಯರ ಪಾರತಂತ್ರ್ಯವು ಸ್ವಾಭಾವಿಕವಾಗಿದ್ದು, ಅದು ಅವರ ಕಲ್ಯಾಣಕ್ಕಾಗಿಯೇ ಇರುತ್ತದೆಂದು ತಿಳಿಯಬೇಕಾಗುತ್ತದೆ ; ಆದರೆ ಅದು ಹೇಗೆಂಬದನ್ನು ಕುರಿತು ತತ್ವತಃ ಅತಿಸಂಕ್ಷೇಪದಲ್ಲಿ ವಿಚಾರಿಸೋಣ.

ಈ ಜಗತ್ತಿನೊಳಗಿನ ವಸ್ತುಗಳು ಸಚೇತನವೆಂತಲೂ, ಅಚೇತನವೆಂತಲೂ ಎರಡು ವಿಧವಾಗಿರುವವಷ್ಟೆ? ಮೊದಲು ಅಚೇತನವಸ್ತುಗಳಲ್ಲಿ ಕೂಡ ಈ ಸ್ವಾತಂತ್ರ್ಯ-ಪಾರತಂತ್ರ್ಯಗಳು, ಸ್ವಯಂಸಿದ್ಧವಾಗಿ ಹೇಗೆ ಇರುತ್ತವೆಂಬದನ್ನು ಆಲೋಚಿಸೋಣ. ಸೂರ್ಯಗೋಲವು ಅಚೇತನವಸ್ತುವಾಗಿದ್ದು, ಅದು ಪೃಥಿವ್ಯಾದಿ ಗ್ರಹಗಳಿಗಿಂತ ಬಹಳದೊಡ್ಡದಾಗಿರುತ್ತದೆ; ಆದ್ದರಿಂದ ಆ ಪೃಥಿವಿಯೇ ಮೊದಲಾದ ಗ್ರಹಗಳು, ಸೂರ್ಯನ ಗುರುತ್ವಾಕರ್ಷಣದಮೂಲಕ ಆತನಿಗೆ ಅಧೀನವಾಗಿ, ಪಾರತಂತ್ರ್ಯದಿಂದ ಆತನ ಸುತ್ತ ತಿರುಗುತ್ತವೆಂಬ ಮಾತು ಶಾಸ್ತ್ರದಿಂದ ಸಿದ್ಧವಾಗಿರುತ್ತದೆ. ಅದರಂತೆ, ಪೃಥ್ವಿಯಮೇಲಿನ ವಸ್ತುಗಳೆಲ್ಲ ಪೃಥ್ವಿಯ ಗುರುತ್ವದ ಆಕರ್ಷಣದ ಮೂಲಕ ಪರತಂತ್ರವಾಗಿ, ಅದನ್ನು ಅತಿಕ್ರಮಿಸಿ ಹೋಗಲಾರವೆಂಬ ಮಾತು ಅನುಭವಸಿದ್ಧವಾಗಿರುವದು. ಹೀಗೆ ಜಡಪದಾರ್ಥಗಳಲ್ಲಿ ಲಘುತ್ವ-ಗುರುತ್ವಗಳು ಉಂಟಾಗಲಿಕ್ಕೆ, ಅವುಗಳಲ್ಲಿರುವ ಘಟಕದ್ರವ್ಯಗಳ ನ್ಯೂನಾಧಿಕ್ಯಗಳೇ ಕಾರಣವೆಂದು ಶಾಸ್ತ್ರತಃ ಸಿದ್ಧವಾಗಿರುತ್ತದೆ.

ಇನ್ನು, ಸಚೇತನಪದಾರ್ಥಗಳ ಸ್ವಾತಂತ್ರ್ಯ-ಪಾರತಂತ್ರ್ಯಗಳನ್ನು ಕುರಿತು ವಿಚಾರಮಾಡೋಣ. ಸಚೇತನಪದಾರ್ಥಗಳೆಂದರೆ, ಚೇತನವುಳ್ಳ ಜಡಪದಾರ್ಥಗಳೆಂದು ತಿಳಿಯತಕ್ಕದ್ದು. ಜಗತ್ತು ಚೇತನಾಮಯವಾದದ್ದೆಂದು ಈ ಪರ್ವದ ೨೨೩ನೇ ಪುಟದಲ್ಲಿ ಹೇಳಿರುವದರಿಂದ, ಅಚೇತನಪದಾರ್ಥಗಳಲ್ಲಿ ಚೇತನವು ಸುಪ್ತಾವಸ್ಥೆಯಲ್ಲಿರುತ್ತದೆಂತಲೂ, ಸಚೇತನ ಪದಾರ್ಥಗಳಲ್ಲಿ ಅದು ಜಾಗೃದವಸ್ಥೆಯಲ್ಲಿರುತ್ತದೆಂತಲೂ ನಮ್ಮ ಅನುಭವದೃಷ್ಟಿಯಿಂದ ಹೇಳಬೇಕಾಗುವದು. ಜಡಪದಾರ್ಥಗಳ ಲಘುತ್ವ-ಗುರುತ್ವಗಳಿಗೆ ಅವುಗಳ ಘಟಕದ್ರವ್ಯಗಳ ನ್ಯೂನಾಧಿಕ್ಯಗಳು ಕಾರಣವೆಂದು ಮೇಲೆ ಹೇಳಿದೆಯಷ್ಟೆ? ಸಚೇತನಪದಾರ್ಥಗಳಲ್ಲಿ ಜಡಗಳಾದ ಅವುಗಳ ದೇಹಗಳೇ ಪ್ರಾಮುಖ್ಯವಾಗಿ ದೃಶ್ಯವಾಗಿರುವದರಿಂದ, ಸಚೇತನಪದಾರ್ಥಗಳ ಲಘುತ್ವ-ಗುರುತ್ವಗಳಿಗೂ ಈ ಘಟಕದ್ರವ್ಯಗಳ ನ್ಯೂನಾಧಿಕ್ಯವು ಪ್ರಥಮ ಕಾರಣವಾಗಿರುತ್ತದೆಂದು ತಿಳಿಯತಕ್ಕದ್ದು.

ಹೀಗೆ ಸಚೇತನಪದಾರ್ಥಗಳ ಸ್ವಾತಂತ್ರ್ಯ-ಪಾರತಂತ್ರ್ಯಗಳಿಗೆ, ಅವುಗಳ ದೇಹಗಳಲ್ಲಿಯ ಘಟಕದ್ರವ್ಯಗಳ ನ್ಯೂನಾಧಿಕ್ಯವು ಪ್ರಥಮಕಾರ

ಣವಾಗಿರುವದಲ್ಲದೆ, ಚೇತನದ ಯೋಗದಿಂದ ಆ ಸಚೇತನಪದಾರ್ಥಗಳ ದೇಹಗಳ ದ್ವಾರದಿಂದ ಪ್ರಕಟವಾಗುವ ಶಾರೀರಬಲ, ಬುದ್ಧಿಬಲ, ವಿಕಾರ ರಾಹಿತ್ಯ ಇವುಗಳ ನ್ಯೂನಾಧಿಕ್ಯಗಳು ಮುಖ್ಯಕಾರಣಗಳಾಗಿರುತ್ತವೆ. ಇವು ಗಳ ಸ್ಪಷ್ಟೀಕರಣಕ್ಕಾಗಿ, ಆನೆ–ಸಿಂಹಗಳೆಂಬ ಎರಡು ಸಚೇತನ ಪದಾರ್ಥ ಗಳನ್ನು ಉದಾಹರಣೆಗಾಗಿ ತಕ್ಕೊಳ್ಳೋಣ. ಸಿಂಹದ ದೇಹದಲ್ಲಿಗಿಂತ ಆನೆಯ ದೇಹದಲ್ಲಿ ಘಟಕದ್ರವ್ಯಗಳ ಮಾನವು ಹೆಚ್ಚು ಇರುವದರಿಂದಲೂ, ಸಿಂಹಕ್ಕಿಂತ ಆನೆಯು ಬಲಿಷ್ಠವಾಗಿರುವದರಿಂದಲೂ ಆನೆಯು ಸಿಂಹದ ಸಂಬಂಧದ ಗುರುತ್ವವನ್ನು ಪಡೆಯಬಹುದಾಗಿತ್ತು; ಆದರೆ ಅತ್ಯಂತ ಮಹತ್ವದ ಬುದ್ಧಿಬಲದ ಪರಾಕ್ರಮ-ಶೌರ್ಯ–ಧೈರ್ಯಾದಿ ಗುಣಗಳು ಆನೆಗಿಂತ ಸಿಂಹದಲ್ಲಿ ಹೆಚ್ಚು ಇರುವವು; ಮತ್ತು ಆನೆಯು ಸಿಂಹವನ್ನು ಕಂಡು ಹೆದರಿ ಮಾನಸಿಕ–ದೈಹಿಕ ವಿಕಾರಗಳನ್ನು ಹೊಂದಿದಷ್ಟು ಸಿಂಹವು ಹೊಂದುವದಿಲ್ಲ; ಅರ್ಥಾತ್ ಆನೆಗಿಂತ ಸಿಂಹದಲ್ಲಿ ವಿಕಾರರಾಹಿತ್ಯವು ಹೆಚ್ಚು ಇದ್ದಂತಾಯಿತು. ಹೀಗೆ ಒಟ್ಟಿನಲ್ಲಿ ಸಿಂಹದಲ್ಲಿ ಆನೆಗಿಂತ ಬುದ್ಧಿಬಲ-ವಿಕಾ ರರಾಹಿತ್ಯ ಇವು ಹೆಚ್ಚು ಇದ್ದಂತಾದವು; ಆದ್ದರಿಂದಲೇ ಆನೆಯಬದಲು ಸಿಂಹವು ಗುರುತ್ವವನ್ನು ಹೊಂದಿರುವದು. ಸಾರಾಂಶ, ಸಚೇತನ ಪದಾ ರ್ಥಗಳ ಲಘುತ್ವ-ಗುರುತ್ವಗಳಿಗೆ ಅವುಗಳ–೧ ಘಟಕದ್ರವ್ಯ ೨ ಶಾರೀರ ಬಲ ೩ ಬುದ್ಧಿಬಲ, ೪ ವಿಕಾರರಾಹಿತ್ಯ ಎಂಬ ನಾಲ್ಕರ ನ್ಯೂನಾಧಿಕ್ಯಗಳು ಕಾರಣವಾಗಿರುವವೆಂದು ತಿಳಿಯತಕ್ಕದ್ದು.

ಮೇಲೆ ಅತ್ಯಂತ ಮಹತ್ವದ್ದೆಂದು ಹೇಳಿರುವ ಬುದ್ಧಿಬಲದ ನ್ಯೂನಾ ಧಿಕ್ಯಗಳ ದೃಷ್ಟಿಯಿಂದ, ಸಚೇತನ ಪದಾರ್ಥಗಳಲ್ಲಿ ತಿರ್ಯಗ್‌ಯೋನಿಯೆಂ ತಲೂ, ಮನುಷ್ಯಯೋನಿಯೆಂತಲೂ, ದೇವಯೋನಿಯೆಂತಲೂ ಮೂರುವ ರ್ಗಗಳನ್ನು ಮಾಡಬೇಕಾಗುವದು. ಇವು ಮೂರುವರ್ಗಗಳು ಉತ್ತರೋ ತ್ತರ ಶ್ರೇಷ್ಠಕೋಟಿಯ ಯೋನಿಗಳಾಗಿರುತ್ತವೆ; ಅಂದರೆ ಆನೆ–ಸಿಂಹ ಮೊದಲಾದ ತಿರ್ಯಗ್‌ಯೋನಿಗಿಂತ ಮನುಷ್ಯಯೋನಿಯು ಶ್ರೇಷ್ಠ, ಮನು ಷ್ಯಯೋನಿಗಿಂತ ದೇವಯೋನಿಯು ಶ್ರೇಷ್ಠ! ಈ ಶ್ರೇಷ್ಠತ್ವದ ಸ್ಥಾಪನೆಗೆ ಪ್ರಾಮುಖ್ಯವಾಗಿ ಬುದ್ಧಿಬಲದ ಉತ್ತರೋತ್ತರ ಆಧಿಕ್ಯವು ಕಾರಣವಾಗಿ ದ್ದರೂ, ಆ ಬುದ್ಧಿಬಲದ ಪ್ರಭಾವರೂಪವಾದ ಧರ್ಮಾಚರಣೆಯ ನ್ಯೂನಾ

ಧಿಕ್ಯಗಳೂ ಕಾರಣವಾಗಿರುವವು ; ಅಂದರೆ ತಿರ್ಯಗ್ಯೋನಿಗೆ ಧರ್ಮಾಧರ್ಮವಿಚಾರವಿಲ್ಲದೆ, ಅದು ಕೇವಲ ಹುಟ್ಟುಗುಣದಂತೆ ನಡೆಯುವದರಿಂದ ಅದು ಎಲ್ಲಕ್ಕೂ ಹೀನ, ಮನುಷ್ಯಯೋನಿಯಲ್ಲಿ ಧರ್ಮಜ್ಞಾನವಿರುವದರಿಂದ ತಿರ್ಯಗ್ಯೋನಿಗಿಂತ ಅದು ಶ್ರೇಷ್ಠ, ದೇವಯೋನಿಯು ಧರ್ಮಮಯವಾಗಿರುವದರಿಂದ ಮನುಷ್ಯಯೋನಿಗಿಂತಲೂ ಅದು ಅತ್ಯಂತ ಶ್ರೇಷ್ಠ! ಈ ಎಲ್ಲ ವಿವೇಚನವನ್ನು ಮನಸ್ಸಿನಲ್ಲಿ ತಂದು, ಈಗ ನಾವು ನಿರ್ಣಯಿಸಬೇಕಾಗಿರುವ ಮನುಷ್ಯಯೋನಿ - ದೇವಯೋನಿಗಳ, ಪ್ರಾಮುಖ್ಯವಾಗಿ ಮನುಷ್ಯಯೋನಿಯ ಲಘುತ್ವ-ಗುರುತ್ವಗಳಿಗೆ— ೧ ಘಟಕದ್ರವ್ಯ ೨ ಶಾರೀರಬಲ ೩ ಬುದ್ಧಿಬಲ ೪ ವಿಕಾರವಶತೆ ೫ ಧರ್ಮಪಾಲನ ಈ ಐದರ ನ್ಯೂನಾಧಿಕ್ಯಗಳು ಕಾರಣವಾಗಿರುತ್ತವೆಂದು ತಿಳಿಯತಕ್ಕದ್ದು.

ಇನ್ನು ಮೇಲಿನ ಐದುಕಾರಣಗಳ ಯೋಜನೆಯಿಂದ, ಮನುಷ್ಯಯೋನಿ-ದೇವಯೋನಿಗಳಲ್ಲಿಯ ಸ್ತ್ರೀಪುರುಷರಲ್ಲಿ, ಸೃಷ್ಟಿಕರ್ತನ ಸಂಕೇತದಂತೆ ಸ್ತ್ರೀಯರು ಪುರುಷರಿಗೆ ಅಧೀನರೋ, ಪುರುಷರು ಸ್ತ್ರೀಯರಿಗೆ ಅಧೀನರೋ ಎಂಬದನ್ನು ಕುರಿತು ವಿಚಾರಮಾಡೋಣ. ವಾಡಿಕೆಯಾಗಿ ಸ್ತ್ರೀ-ಪುರುಷರ ಶರೀರಯಷ್ಟಿಗಳ ಅವಲೋಕನಮಾಡಿದರೆ, ಹಲಕೆಲವು ಅಪವಾದಗಳನ್ನು ಬಿಟ್ಟು, ಒಟ್ಟಿನಲ್ಲಿ ಪುರುಷರು ದೃಢಕಾಯರೂ, ಸ್ತ್ರೀಯರು ಕೋಮಲಕಾಯರೂ ಇರುವರೆಂಬ ಮಾತು ಅನುಭವಸಿದ್ಧವಾಗಿರುವದು ; ಆದ್ದರಿಂದ ಘಟಕದ್ರವ್ಯಗಳ ಆಧಿಕ್ಯವು, ಸ್ತ್ರೀಯರದೇಹಕ್ಕಿಂತ ಪುರುಷರ ದೇಹದಲ್ಲಿಯೇ ಹೆಚ್ಚು ಇರಬೇಕಾದದ್ದರಿಂದ, ಒಂದನೆಯ ಕಾರಣದಂತೆ ಸ್ತ್ರೀಯರೇ ಪುರುಷರ ಅಧೀನರಾಗಿರಬೇಕಾಗುವದು.

ಇನ್ನು ಎರಡನೆಯ ಕಾರಣವಾದ ಶಾರೀರಬಲದ ದೃಷ್ಟಿಯಿಂದಲೂ ಇದೇಮಾತು ಸಿದ್ಧವಾಗುವದು. ಪುರುಷರು ಸ್ತ್ರೀಯರಿಗಿಂತಲೂ ಶಾರೀರಬಲದಲ್ಲಿ ವರಿಷ್ಠರಾಗಿರುವದರಿಂದಲೇ, ಯುದ್ಧಾದಿ ಶಾರೀರಬಲದ ಕೆಲಸಗಳಲ್ಲಿ, ಅಲ್ಪಸ್ವಲ್ಪ ಅಪವಾದಗಳನ್ನು ಬಿಟ್ಟರೆ, ರಣಶೂರರು ಪುರುಷರೇ ಎಂದು ಎಣಿಸಲ್ಪಟ್ಟಿರುವದರಿಂದ, ಅನಾದಿಕಾಲದಿಂದ ಪುರುಷರೇ ಸೈನ್ಯದಲ್ಲಿ ಸೇರುತ್ತ ಬಂದಿರುವರು. ಅದರಂತೆ, ಮಲ್ಲಯುದ್ಧಾದಿಗಳು ಪುರುಷರವೆಂದಲ್ಲದೆ ಸ್ತ್ರೀಯರವೆಂದು ತಿಳಿಯುತ್ತ ಬಂದಿರುವದಿಲ್ಲ. ಈ ಮಾತಿಗೆ

ಅಲ್ಲೊಂದು ಇಲ್ಲೊಂದು ಅಪವಾದವಿದ್ದರೂ ಇರಬಹುದು; ಆದರೆ ಒಟ್ಟಿನಲ್ಲಿ ಪುರುಷರು ಬಲಿಷ್ಠರೂ, ಸ್ತ್ರೀಯರು ಅಬಲೆಯರೂ ಆಗಿರುವದರಿಂದ, ಈ ಎರಡನೆಯ ಕಾರಣದಿಂದಲೂ ಸ್ತ್ರೀಯರು ಪುರುಷರಿಗೆ ಅಧೀನರಾಗಿರಬೇಕಾಗುವದು.

ಇನ್ನು ಮೂರನೆಯ ಕಾರಣವಾದ ಬುದ್ಧಿಬಲದ ಮಾತೂ ಹೀಗೆಯೇ ಸರಿ. ಓದುಬರಹ ಬರುವದು, ಅಥವಾ ವಾಕ್ಪಟುತ್ವವನ್ನು ತೋರಿಸುವದು, ಅಥವಾ ಲೇಖನಕಲಾನೈಪುಣ್ಯವನ್ನು ಸಂಪಾದಿಸುವದು ಬುದ್ಧಿಪ್ರಭಾವದ ಮುಖ್ಯಲಕ್ಷಣಗಳಲ್ಲ. ಜಗತ್ಕಲ್ಯಾಣಕಾರಕಗಳಾದ ಲೌಕಿಕ-ಪಾರಮಾರ್ಥಿಕ ಶೋಧಗಳನ್ನು ಮಾಡುವದೂ, ವಿವಿಧಬಗೆಯ ಉದಾತ್ತತೆಗಳಿಂದ ಪರರನ್ನು ಆಕ್ರಮಿಸುವದೂ ಬುದ್ಧಿಪ್ರಭಾವದ ಮುಖ್ಯಲಕ್ಷಣಗಳಾಗಿರುತ್ತವೆ. ಈ ದೃಷ್ಟಿಯಿಂದ ನೋಡಿದರೆ, ಅನಾದಿಕಾಲದಿಂದ ಇಡಿಯ ಜಗತ್ತಿನೊಳಗಿನ ಯಾವತ್ತು ದೇಶಗಳಲ್ಲಿ, ಅತ್ಯಲ್ಪ ಅಪವಾದಗಳನ್ನು ಬಿಟ್ಟರೆ, ಪುರುಷರೇ ಎರಡೂಬಗೆಯ ಶೋಧಮಾಡುವಲ್ಲಿ, ಹಾಗು ಪರಾಕ್ರಮದಲ್ಲಿ ಮುಂದುವರಿದಿರುವರಲ್ಲದೆ, ಸ್ತ್ರೀಯರು ಮುಂದುವರಿದಿರುವದಿಲ್ಲವು; ಆದ್ದರಿಂದ ಬುದ್ಧಿಯ ಆಧಿಕ್ಯದಿಂದಲೂ ಸ್ತ್ರೀಯರು ಪುರುಷರಿಗೆ ಅಧೀನರಾಗಿರಬೇಕಾಗುವದು.

ಇನ್ನು ನಾಲ್ಕನೆಯ ಕಾರಣವಾದ ವಿಕಾರರಾಹಿತ್ಯದ ದೃಷ್ಟಿಯಿಂದ ವಿಚಾರಮಾಡೋಣ. ವಿಕಾರಗಳು ಮಾನಸಿಕ, ದೈಹಿಕ ಎಂದು ಎರಡುವಿಧವಾಗಿರುವವು. ಮಾನಸಿಕವಿಕಾರವೆಂದರೆ, ಕ್ರೋಧ, ಭಯ, ದುಃಖ, ಆನಂದ, ಲಜ್ಜಾ ಮುಂತಾದವುಗಳ ಯೋಗದಿಂದಾಗುವ ಮಾನಸಿಕ ಸ್ವರೂಪಭೇದಗಳು. ದೈಹಿಕವಿಕಾರವೆಂದರೆ, ಬಾಲ್ಯ, ತಾರುಣ್ಯ, ವಾರ್ಧಕ್ಯ ಮುಂತಾದವುಗಳ ಯೋಗದಿಂದ ಆಗುವ ದೈಹಿಕ ಸ್ವರೂಪಭೇದಗಳು. ಇವೆರಡುಬಗೆಯ ವಿಕಾರಗಳೂ ಪುರುಷರಿಗಿಂತ ಸ್ತ್ರೀಯರಿಗೇ ಹೆಚ್ಚು ಆಗುವವು. ಯಾಕೆಂದರೆ ಮೇಲೆ ಹೇಳಿದ ಕ್ರೋಧ, ಭಯ, ದುಃಖ, ಆನಂದ, ಲಜ್ಜಾ ಮೊದಲಾದವುಗಳ ಪರಿಣಾಮಗಳು ಸ್ತ್ರೀಯರ ಮನಸ್ಸಿನ ಮೇಲೆ ಅಲ್ಪಕಾರಣಗಳಿಂದ ತಟ್ಟನೆ ಆಗಿ, ಅಲ್ಪಕಾರಣಗಳಿಂದ ತಟ್ಟನೆ ಅಳಿಸಿಹೋಗುವವು. ಆದರೆ ಪುರುಷರಿಗೆ ಅಷ್ಟುಕ್ಕಷ್ಟಕ್ಕೆ ಹಾಗೆ ವಿಕಾರಗಳಾಗುವದಿಲ್ಲ ಆದರಂತೆ,

ಬಾಲ್ಯ, ತಾರುಣ್ಯ, ವಾರ್ಧಕ್ಯಗಳ ಮೂಲಕ ಆಗುವ ದೈಹಿಕ ವಿಕಾರಗಳು ಸ್ತ್ರೀಯರಿಗೂ, ಪುರುಷರಿಗೂ ಸಮಾನವಾಗಿದ್ದರೂ, ರಜೋದರ್ಶನ,ಗರ್ಭಧಾರಣ, ಪ್ರಸವ ಮೊದಲಾದ ದೈಹಿಕ ವಿಕಾರಗಳು ಪುರುಷರಿಗಿಂತ ಸ್ತ್ರೀಯರಿಗೆ ಹೆಚ್ಚಿನವಾಗಿರುವವು; ಆದ್ದರಿಂದ ವಿಕಾರರಾಹಿತ್ಯದ ಕೊರತೆಯಿಂದಲೂ, ಸ್ತ್ರೀಯರು ಪುರುಷರಿಗೆ ಅಧೀನರಾಗಿರಬೇಕಾಗುವದು.

ಇನ್ನು ೫ನೆಯ ಕಾರಣವಾದ ಧರ್ಮಪಾಲನದ ದೃಷ್ಟಿಯಿಂದ ವಿಚಾರಮಾಡೋಣ. ಈ ದೃಷ್ಟಿಯಿಂಧ ಸ್ತ್ರೀಯರು ಪುರುಷರಿಗಿಂತಲೂ ಶ್ರೇಷ್ಠರೆಂದು ಒಡಂಬಡಬೇಕಾಗುತ್ತದೆ; ಯಾಕಂದರೆ, ಸ್ತ್ರೀಯರ ಕೋಮಲಾಂತಃಕರಣ, ದಯಾರ್ದ್ರಹೃದಯ, ಪ್ರೇಮಮಯ ಮನೋವೃತ್ತಿ, ಪರೋಪಕಾರನಿರತತೆ ಮೊದಲಾದ ಪವಿತ್ರ ಸುಕುಮಾರಗುಣಗಳಮೂಲಕ ಅವರಲ್ಲಿ ಭಾವಿಕತನವು ಹೆಚ್ಚಿ, ಧರ್ಮತತ್ವಗಳು ಅವರ ಹೃದಯದಲ್ಲಿ ನೆಲೆಗೊಳ್ಳುವವು; ಆದ್ದರಿಂದ ಪುರುಷರಿಗಿಂತ ಸ್ತ್ರೀಯರು ಧರ್ಮಲಂಡರಾಗುವದು ಕಡಿಮೆ. ಇಂಥ ಹೀನಕಾಲದಲ್ಲಿಯೂ, ಭರತಭೂಮಿಯಲ್ಲಿ ಧರ್ಮವು ದೊಡ್ಡಪ್ರಮಾಣದಿಂದ ಸ್ತ್ರೀಯರಿಂದಲೇ ಉಳಿದದ್ದಾಗಿರುತ್ತದೆ; ಆದರೆ ಅವರ ಈ ಪವಿತ್ರಧರ್ಮಪಾಲನವು, ಪುರುಷರ ಸಂರಕ್ಷಣವಿಲ್ಲದೆ ನಿರ್ವಿಘ್ನದಿಂದಾಗದು. ಉದಾಹರಣಕ್ಕಾಗಿ ಸ್ತ್ರೀಯರ ಶ್ರೇಷ್ಠಧರ್ಮವಾದ ಪಾತಿವ್ರತ್ಯಪಾಲನದ ದೃಷ್ಟಿಯಿಂದಲೇ ಕೆಳಗೆ ಸ್ವತಂತ್ರವಾಗಿ ಸ್ವಲ್ಪ ವಿಚಾರಮಾಡೋಣ.

ಈ ಜಗತ್ತಿನೊಳಗಿನ ವಸ್ತುಗಳೆಲ್ಲ ಭೋಕ್ತೃ-ಭೋಗ್ಯಗಳೆಂಬ ಎರಡು ಧರ್ಮಗಳಿಂದ ಕಟ್ಟಲ್ಪಟ್ಟಿರುವವು. ಭೋಕ್ತೃವೆಂದರೆ ಭೋಗಿಸುವ ವಸ್ತುವು ಭೋಗ್ಯವೆಂದರೆ ಭೋಗಕ್ಕೆ ವಿಷಯವಾದ ವಸ್ತುವು. ಈ ದೃಷ್ಟಿಯಿಂದ ನೋಡಿದರೆ, ಜಗತ್ತಿನ ಪ್ರತಿಒಂದು ವಸ್ತುವು ಭೋಕ್ತೃವೂ ಆಗಿರುವದು, ಭೋಗ್ಯವೂ ಆಗಿರುವದು ಎಂಬ ಮಾತು ವಿಚಾರದಿಂದ ಗೊತ್ತಾಗಬಹುದು. ಉದಾಹರಣಾರ್ಥವಾಗಿ, ಕಾಳು-ಕಡಿ ಮೊದಲಾದ ಸಸ್ಯಪದಾರ್ಥಗಳು ಪ್ರಾಣಿಗಳ ಭೋಗ್ಯವಸ್ತುಗಳಷ್ಟೆ? ಆದರೆ ಅವೇಪ್ರಾಣಿಗಳು ಸತ್ತು ಅವುಗಳ ದೇಹಗಳು ಕೊಳೆತು ಗೊಬ್ಬರವಾದರೆ, ರೂಪಾಂತರಹೊಂದಿದ ಆ ಪ್ರಾಣಿಗಳೇ ಸಸ್ಯಗಳ ಭೋಗ್ಯವಸ್ತುಗಳಾದ

ಅದರಂತೆ ಸ್ತ್ರೀಯರು ಪುರುಷರಿಗೆ ಭೋಗ್ಯರಾದರೆ, ಪುರುಷರು ಸ್ತ್ರೀಯರಿಗೆ ಭೋಗ್ಯರಾಗುವರು. "ಜೀವೋ ಜೀವಸ್ಯ ಜೀವನಂ" ಎಂಬ ಸಿದ್ಧಾಂತದಂತೆ, ಒಂದು ಪ್ರಾಣಿಯು ಮತ್ತೊಂದು ಪ್ರಾಣಿಯನ್ನು ತಿಂದೇ ಜೀವಿಸಬೇಕಾಗುವದು. ಹೀಗೆ ಪ್ರತಿಒಂದು ವಸ್ತುವು, ಭೋಕ್ತೃ-ಭೋಗ್ಯಗಳೆಂಬ ಎರಡೂ ಧರ್ಮಗಳುಳ್ಳದ್ದಾಗಿದ್ದರೂ, ವಿಕಾರವಶತೆಯು ಹೆಚ್ಚಿಇದ್ದ ಪ್ರಾಣಿಗಳಲ್ಲಿ ಭೋಗ್ಯಧರ್ಮವು ಹೆಚ್ಚು, ವಿಕಾರವಶತೆಯು ಕಡಿಮೆಯಿರುವ ಪ್ರಾಣಿಯಲ್ಲಿ ಭೋಕ್ತೃಧರ್ಮವು ಹೆಚ್ಚು ಇರುವವು. ಮೇಲೆಯಂತು ಪುರುಷರಿಗಿಂತ ಸ್ತ್ರೀಯರಲ್ಲಿ, ವಿಕಾರವಶತೆಯು ಹೆಚ್ಚುಎಂದು ಸಿದ್ಧವಾಗಿರುವದರಿಂದ, ಯಾರು ಭೋಗ್ಯರಾದಂತಾಯಿತು ?

ಈ ಸೃಷ್ಟಿಯಲ್ಲಿ ಭೋಕ್ತೃಗಳ ಮನಸ್ಸು ತಮ್ಮ ಭೋಗ್ಯವಸ್ತುಗಳ ಕಡೆಗೆ ಧಾವಿಸಿ ಅವನ್ನು ಆಕ್ರಮಿಸುವದು ಸ್ವಾಭಾವಿಕವು ! ಅದರಂತೆ ಪುರುಷರಮನಸ್ಸು ಸ್ತ್ರೀಯರಕಡೆಗೆ ಹರಿದು, ಒಮ್ಮೊಮ್ಮೆಬಲಾತ್ಕಾರದ ಪ್ರಸಂಗವೂ ಒದಗುವದು ! ಆದ್ದರಿಂದ ಹಗಲುರಾತ್ರಿಯೆನ್ನದೆ ಪುರುಷರು ಒಬ್ಬೊಂಟಿಗರಾಗಿ ಬೇಕಾದಲ್ಲಿ ಹೋಗುವಂತೆ, ಸ್ತ್ರೀಯರು ಹೋದರೆ ಅವರ ಪಾತಿವ್ರತ್ಯಧರ್ಮವು ಸುರಕ್ಷಿತವಾಗಿ ಉಳಿಯುವ ಸಂಭವವಿಲ್ಲ ; ಆದ್ದರಿಂದಲೇ, ಸ್ತ್ರೀಯರು ಬಾಲ್ಯದಲ್ಲಿ ತಂದೆಯಿಂದಲೂ, ಪ್ರಾಯದಲ್ಲಿ ಗಂಡನಿಂದಲೂ, ವಾರ್ಧಕ್ಯದಲ್ಲಿ ಮಕ್ಕಳಿಂದಲೂ ಸಂರಕ್ಷಿಸಲ್ಪಡಬೇಕೆಂದು ಸ್ವತಃ ಸ್ತ್ರೀಯರ, ಹಾಗು ರಾಷ್ಟ್ರದ ಕಲ್ಯಾಣಕ್ಕಾಗಿ ಶ್ರುತಿ-ಸ್ಮೃತಿಗಳ ಅಪ್ಪಣೆಗನುಸರಿಸಿ ಜ್ಞಾನಿಗಳು ಹೇಳಿರುವರು. ಇಹ-ಪರ-ಸುಖ-ಸಾಧನವಾದ ಸ್ತ್ರೀಯರ ಧರ್ಮವನ್ನು ಪಾಲಿಸುವದಕ್ಕಾಗಿ, ಹೀಗೆ ಸುರಕ್ಷಿತತೆಯ ಪಾರತಂತ್ರ್ಯಕ್ಕೆ ಸ್ತ್ರೀಯರು ಒಳಗಾಗಿದ್ದರೂ, ಅವರ ಐಹಿಕಸುಖಕ್ಕೂ, ಪಾರಮಾರ್ಥಿಕ ಉನ್ನತಿಗೂ ಯಾವತರದ ಪ್ರತಿಬಂಧವೂ ಇಲ್ಲದೆ, ತಿರುಗಿ ಅವರಿಗೆ ಪುರುಷರ ಸಂರಕ್ಷಣದ ಸಹಾಯದ ಲಾಭವಾಗುತ್ತಿರುವದರಿಂದ, ನಮ್ಮ ಭರತಭೂಮಿಯಲ್ಲಿ ಸೀತಾ-ದ್ರೌಪದಿ-ಸಾವಿತ್ರಿ ಮುಂತಾದ ಅನಂತಸಾಧ್ವಿಯರು ಕುಲಭೂಷಣರಾಗಿ ಐಹಿಕ-ಪಾರಮಾರ್ಥಿಕ ಸುಖವನ್ನು ಭೋಗಿಸುವ ಪಾತ್ರತೆಯನ್ನು ಪಡೆದು, ಕೆಲವರು ತಮ್ಮ ಪತಿಗಳನ್ನು ಕೂಡ ಉದ್ಧರಿಸಿ ಈಗಲೂ ಕೀರ್ತಿಶೇಷರಾಗಿ ಇರುವರು! ಇದರಮೇಲಿಂದ ನೋಡಿ

ವರೆ, ಆರ್ಯಸ್ತ್ರೀಯರಿಗೆ ಈಗಿನ ರಕ್ತಶೋಷಕ ಪಾರತಂತ್ರ್ಯದ ಗಾಳಿ ಕೂಡ ಸೋಂಕಿರುವದಿಲ್ಲ; ಸೋಂಕುವ ಸಂಭವವೂ ಇಲ್ಲ. "ನಸ್ತ್ರೀಸ್ವಾತಂತ್ರ್ಯಮರ್ಹತಿ" ಎಂಬ ವಾಕ್ಯದ ಅರ್ಥವನ್ನು, "ಸ್ತ್ರೀಯು ಸುರಕ್ಷಿತೆಯಾಗದೆ ಸಿಕ್ಕಲ್ಲಿ ಸ್ವಚ್ಛಂದವಾಗಿ ಹೋಗಲು ತಕ್ಕವಳಲ್ಲವೆಂ"ದು ಮಾಡದೆ; ಅವರ ಆ ಸುರಕ್ಷಿತತೆಯನ್ನು ಈಗಿನ ಪ್ರಗತಿಘಾತಕವಾದ ದುಷ್ಟರ ರಕ್ತಶೋಷಕಪಾರತಂತ್ರ್ಯಕ್ಕೆ ಹೋಲಿಸಿ, ಘಾತಕವಾದ ಸ್ತ್ರೀಯರ ಉಚ್ಛೃಂಖಲವೃತ್ತಿಗೆ ಆಸ್ಪದಕೊಡುತ್ತಿರುವದು ಭರತಭೂಮಿಯ ದುರ್ದೈವದ, ಅಥವಾ ಸತ್ವನಾಶದ ಲಕ್ಷಣವಾಗಿರುವದು. ಸ್ತ್ರೀಯರೆಂದರೆ ಪೂಜ್ಯರಾದ ತಾಯಂದಿರೂ, ಗುರುಪತ್ನೀಯರೂ, ಸನ್ಮಾನನೀಯ ಭಗಿನಿಯರೂ, ಅಕ್ಕರೆಯ ಮಕ್ಕಳೂ, ಪ್ರೀತ್ಯಾಸ್ಪದರಾದ ಹೆಂಡಿರೂ ಆಗಿರುವರು. ಅಂಥವರನ್ನು ಪಾಪದಾಯಕವಾದ ಪ್ರಗತಿನಾಶಕ, ರಕ್ತಶೋಷಕ ಪಾರತಂತ್ರ್ಯಕ್ಕೆ ಗುರಿಮಾಡಿ, ಪುರುಷರು ಯಾವ ಇಹಪರ ಸೌಖ್ಯವನ್ನು ಸುರಿದುಕೊಳ್ಳಬಹುದು? ಇಷ್ಟು ವಿವೇಕವೂ ಶ್ರುತಿ-ಸ್ಮೃತಿಗಳಿಗೂ, ನಮ್ಮ ಪ್ರಾಚೀನ ಋಷಿಗಳಿಗೂ ಇರಲಿಕ್ಕಿಲ್ಲವೆ? ಹೀಗೆ ಸ್ತ್ರೀಯರು ಪುರುಷರಿಂದ ಸುರಕ್ಷಿತವಾಗಿರಬೇಕೆಂದು ಯತ್ನಿಸುವದೇ ಘಾತಕಪಾರತಂತ್ರ್ಯದ ಲಕ್ಷಣವಾಗಿದ್ದರೆ, ತಂದೆ-ತಾಯಿಗಳಿಂದ ಕೂಸುಗಳೂ, ಕುಟುಂಬದ ಯಜಮಾನನಿಂದ ಕುಟುಂಬವೂ, ಅರಸನಿಂದ ಪ್ರಜೆಗಳೂ, ಕ್ಷತ್ರಿಯರಿಂದ ಬ್ರಾಹ್ಮಣರೂ, ಬಹಳವೇಕೆ, ಲೋಕಸತ್ತೆಯಿಂದ ಲೋಕವೂ ಸುರಕ್ಷಿತವಾಗಿರಬೇಕೆಂದು ಯತ್ನಿಸುವದೂ ಕೂಡ ಘಾತಕಪಾರತಂತ್ರ್ಯವಾಗುವದಲ್ಲ! ಹೀಗಿದ್ದರೆ ಸ್ವೇಚ್ಛಾಚಾರವೊಂದು ಮಾತ್ರ ನಿಜವಾದ ಸ್ವಾತಂತ್ರ್ಯವೆಂದು ಹೇಳಿದ ಹಾಗಾಗುತ್ತದೆ! ಕಾಲಮಹಿಮೆಯು ಮುಂದೆ ಯಾರ ಆಟವೂ ನಡೆಯದೆಂಬ ಮಾತೇ ನಿಜವು



## ೧೩ ಸ್ವಯಂವರಪರ್ವ

**೧೮೪ನೇ ಅಧ್ಯಾಯ— ಬ್ರಾಹ್ಮಣರಹಾಗು ಪಾಂಡವರ ಸಂವಾದ—** ಜನಮೇಜಯಾ, ಹೀಗೆ ಧೌಮ್ಯರು ಪುಣ್ಯಾಹವಾಚನ ಕರ್ಮ

ವನ್ನು ಮಾಡಿದನಂತರ ಪಾಂಡವರು ಕುಂತಿಯೊಡನೆ ದ್ರೌಪದಿಯ ಸ್ವಯಂವರವನ್ನು ನೋಡುವದಕ್ಕಾಗಿ ದಕ್ಷಿಣಪಾಂಚಾಲದೇಶಕ್ಕೆ ಹೊರಟರು. ಸ್ವಯಂವರಕ್ಕೆ ಹೊರಟ್ಟಿದ್ದ ಅನೇಕ ಬ್ರಾಹ್ಮಣಸಮುದಾಯಗಳು ಹಾದಿಯಲ್ಲಿ ಅವರನ್ನು ಕೂಡಿದವು ಆಗ ಬ್ರಾಹ್ಮಣರು ಪಾಂಡವರಿಗೆ—

ಬ್ರಾಹ್ಮಣ—ನೀವು ಯಾರು ? ಎಲ್ಲಿಂದಬಂದಿರಿ ?

ಯುಧಿಷ್ಠಿರ—ನಾವೆಲ್ಲರೂ ಅಣ್ಣತಮ್ಮಂದಿರು. ಈಕೆಯು ನಮ್ಮ ತಾಯಿಯು. ನಾವು ಏಕಚಕ್ರನಗರದಿಂದ ಬಂದೆವು.

ಬ್ರಾಹ್ಮಣರು—ಹಾಗಾದರೆ ನೀವು ನಮ್ಮೊಡನೆ ಪಾಂಚಾಲದೇಶಕ್ಕೆ ನಡೆಯಿರಿ. ಅಲ್ಲಿ ದ್ರುಪದರಾಜನ ಮನೆಯಲ್ಲಿ ಸ್ವಯಂವರದ ದೊಡ್ಡ ಉತ್ಸವವಾಗತಕ್ಕದ್ದಿದ್ದು, ಅದಕ್ಕಾಗಿ ಅಪಾರದ್ರವ್ಯವು ವೆಚ್ಚವಾಗುವದು. ನಾವೆಲ್ಲರೂ ಅಲ್ಲಿಗೇ ಹೋಗುವೆವು. ಅಹೋ ! ಯಜ್ಞವೇದಿಕೆಯಿಂದ ಹುಟ್ಟಿದ ದ್ರೌಪದಿಯು ಅತ್ಯಂತ ಸುಂದರಿಯಿದ್ದು, ಆಕೆಯ ಸ್ವಯಂವರಕ್ಕಾಗಿ ಅನೇಕ ದೇಶಗಳ ದೊಡ್ಡ ದೊಡ್ಡರಾಜರು ಬರುವರು. ಅವರು ತಮಗೆ ಜಯವು ಪ್ರಾಪ್ತವಾಗಬೇಕೆಂದು ಬ್ರಾಹ್ಮಣರಿಗೆ ವಿಪುಲ ದಕ್ಷಿಣೆಯೊಡನೆ ಗೋದಾನಗಳನ್ನು ಮಾಡಿ, ಸುಗ್ರಾಸ ಭೋಜನ ಮಾಡಿಸುವರು. ನೀವು ಉತ್ಸವವನ್ನು ನೋಡಿ ದಕ್ಷಿಣೆತಕ್ಕೊಂಡು, ಬೇಕಾದರೆ ನಮ್ಮಸಂಗಡಲೇ ತಿರುಗಿ ಬರಬಹುದು. ನೀವೆಲ್ಲ ಅಣ್ಣತಮ್ಮಂದಿರು ತೇಜಸ್ವಿಗಳು ಇರುವದರಿಂದ, ದ್ರೌಪದಿಯು ನಿಮ್ಮೊಳಗಿನವರೊಬ್ಬರಿಗೆ ಮಾಲೆಹಾಕಿದರೂ ಹಾಕಬಹುದು. (ಅರ್ಜುನನಕಡೆಗೆ ಬೆರಳುಮಾಡಿ) ಈತನನ್ನು ಶತ್ರುವಿಜಯಕ್ಕಾಗಿ ನಿಯಮಿಸಿದರೆ, ದೈವಯೋಗದಿಂದ ಈತನು ಅವರನ್ನು ಸೋಲಿಸಿ ದ್ರವ್ಯವನ್ನು ಸಂಪಾದಿಸಬಹುದು.

ಯುಧಿಷ್ಠಿರ—ಮಹಾರಾಜ, ಇಷ್ಟು ಪ್ರೇಮದಿಂದ, ಕನಿಕರದಿಂದ ಹೇಳುತ್ತಿರುವದರಿಂದ ನಾವೂ ನಿಮ್ಮ ಸಂಗಡ ಸ್ವಯಂವರಕ್ಕೆ ಬರುವೆವು, ನಡೆಯಿರಿ.

**೧೮೫, ೧೮೬ನೇ ಅಧ್ಯಾಯಗಳು—ದ್ರುಪದಪುರಪ್ರವೇಶ—** ಜನಮೇಜಯಾ, ಈ ಮೇರೆಗೆ ಸಂಭಾಷಣವಾದ ಬಳಿಕ ಬ್ರಾಹ್ಮಣರು ಪಾಂಡವರೊಡನೆ ದ್ರುಪದನ ದಕ್ಷಿಣ ಪಾಂಚಾಲದೇಶಕ್ಕೆ ಹೊರಟರು. ಹಾದಿ

ಯಲ್ಲಿ ಅವರಿಗೆ ವ್ಯಾಸರ ದರ್ಶನವಾಯಿತು. ಪಾಂಡವರು ಆ ಋಷಿಶ್ರೇಷ್ಠರನ್ನು ಪೂಜಿಸಿ, ಅವರಿಗೆ ಯಾವತ್ತು ಸಂಗತಿಯನ್ನು ತಿಳಿಸಿದರು. ಅದಕ್ಕೆ ವ್ಯಾಸರು ಸಮ್ಮತಿಸಲು, ಪಾಂಡವರು ಹಾದಿಯಲ್ಲಿ ಸರೋವರಗಳನ್ನೂ, ವನಪ್ರದೇಶಗಳನ್ನೂ ನೋಡುತ್ತ, ಪಾಂಚಾಲದೇಶಕ್ಕೆ ಮುಟ್ಟಿದರು. ಅವರು ಮೊದಲು ಪಟ್ಟಣವನ್ನು ನೋಡಿ ಒಂದು ಕುಂಬಾರನ ಮನೆಯಲ್ಲಿ ಇಳಿದು, ಭಿಕ್ಷೆಯನ್ನು ಬೇಡಹತ್ತಿದ್ದರಿಂದ ಯಾರಿಗೂ ಅವರ ಗೊತ್ತು ಹತ್ತಲಿಲ್ಲ.

ಇತ್ತ ದ್ರುಪದನು ದ್ರೌಪದಿಯನ್ನು ಅರ್ಜುನನಿಗೇ ಕೊಡಬೇಕೆಂದು ಮಾಡಿದ್ದನು ; ಆದರೆ ಅರ್ಜುನನು ಎಲ್ಲಿ ಇರುವನೆಂಬದು ಗೊತ್ತಾಗದ್ದರಿಂದ, ಆತನನ್ನು ಹುಡುಕುವ ಉದ್ದೇಶದಿಂದಲೇ ಸ್ವಯಂವರವನ್ನು ಮಾಡಿದನು. ಅರ್ಜುನನ ಹೊರತು ಎರಡನೆಯವರಿಗೆ ಮಣಿಸಲಿಕ್ಕೆ ಬಾರದ ಬಲಿಷ್ಠವಾದ ಧನುಸ್ಸನ್ನು ಸ್ವಯಂವರದಲ್ಲಿಟ್ಟು, ಆಕಾಶದಲ್ಲಿ ತಿರುಗುತ್ತಿರುವ ಕೃತ್ರಿಮ ಯಂತ್ರವನ್ನು ಸಿದ್ಧಮಾಡಿಸಿ, ಅದರಲ್ಲಿ ಒಂದು ಗುರಿಯನ್ನಿಟ್ಟು, ಸಿದ್ಧವಾಗಿದ್ದ ಬಾಣಗಳಿಂದ ಆ ಗುರಿಯನ್ನು ಹೊಡೆದವರಿಗೆ ದ್ರೌಪದಿಯು ಮಾಲೆಹಾಕುವಳೆಂದು ಪ್ರಸಿದ್ಧಮಾಡಿದನು. ಆ ಸುದ್ದಿಯನ್ನು ಕೇಳಿ ಪೃಥ್ವಿಯೊಳಗಿನ ಎಲ್ಲರಾಜರೂ, ಕರ್ಣನೊಡನೆ ದುರ್ಯೋಧನಾದಿ ಕೌರವರೂ, ಮಹಾತ್ಮರಾದ ಬ್ರಹ್ಮಋಷಿಗಳೂ, ದೇಶದೇಶಗಳೊಳಗಿನ ವಿದ್ವಾಂಸರಾದ ಬ್ರಾಹ್ಮಣರೂ ಬಂದರು. ದ್ರುಪದರಾಜನಾದರೂ ಅವರೆಲ್ಲರ ಸತ್ಕಾರವನ್ನು ಉತ್ತಮರೀತಿಯಿಂದ ಮಾಡುವ ವ್ಯವಸ್ಥೆಯನ್ನು ಇಟ್ಟಿದ್ದನು. ಅತಿಭವ್ಯವೂ, ಸುಂದರವೂ ಆದ ಸ್ವಯಂವರ ಮಂಟಪವನ್ನೂ, ಅದರ ಸುತ್ತುಮುತ್ತು ರಾಜರಿಗೆ ಇಳಿದುಕೊಳ್ಳುವದಕ್ಕಾಗಿ ಸುಂದರ ಅರಮನೆಗಳನ್ನೂ ಕಟ್ಟಿಸಿದನು. ಸ್ವಯಂವರಮಂಟಪದಲ್ಲಿ ಕುಳಿತುಕೊಳ್ಳುವದಕ್ಕಾಗಿ ಸುಂದರ ಮಂಚಕಾದಿಗಳು ಸಿದ್ಧವಾಗಿದ್ದವು. ಸ್ವಯಂವರಮಂಟಪದ ಸುತ್ತುಮುತ್ತು ಭದ್ರವಾದ ಗೋಡೆಗಳಿದ್ದವು, ಅವುಗಳ ಹೊರಬದಿಯಲ್ಲಿ ಕಂದಕಗಳನ್ನು ಅಗಿದಿದ್ದರು. ಗೋಡೆಗಳಿಗೆ ಎಲ್ಲದಿಕ್ಕುಗಳಲ್ಲಿ ಭವ್ಯವಾದ ಬಾಗಿಲುಗಳಿದ್ದು, ಅವುಗಳ ಎದುರಿಗೆ ಸುಂದರವಾದ ಪೂಲುಗಳನ್ನು ಕಟ್ಟಿದ್ದರು. ಛತ್ರುಮೊದಲಾದವುಗಳಿಂದ

ಯಾವತ್ತು ಮಂಟಪವು ಶೃಂಗರಿಸಲ್ಪಟ್ಟಿತ್ತು. ಅಗರು ಧೂಪಗಳ ಸುಗಂಧವು ಮಂಟಪದ ತುಂಬ ಇಡಗಿತ್ತು. ಅಲ್ಲಿ ಚಂದನದ ಧಳಿಯನ್ನು ಹಾಕಿದ್ದರು. ಆ ಮಂಟಪದ ಸುತ್ತುಮುತ್ತಲಿನ ಮನೆಗಳು ಆಕಾಶವನ್ನು ಮುಟ್ಟುವವೋ ಅನ್ನುವಂತೆ ಬಹು ಎತ್ತರವಾಗಿದ್ದವು. ಅಲ್ಲಿ ಹಲವು ಓಲಗದವರ ಮೇಳಗಳು ಓಲಗಬಾರಿಸುತ್ತಿರುವಾಗ, ಜನರ ಕಲಕಲಧ್ವನಿಯೊಡನೆ ಆ ಮಂಟಪಪ್ರದೇಶವು ನಾದಮಯವಾಗಿ ಹೋಗಿತ್ತು. ಪ್ರತಿಒಂದು ಸ್ಥಳದಲ್ಲ ಉತ್ತಮ ವ್ಯವಸ್ಥೆಯಿರಬೇಕೆಂದು ತಿಳಿದು ಅಲ್ಲಲ್ಲಿ ಸೇವಕರನ್ನು ನಿಯಮಿಸಿದ್ದರು. ಆ ಮಂದಿರದ ಸುಗಂಧವು ಸುತ್ತುಮುತ್ತು ನಾಲ್ಕು ಹರದಾರಿಯವರೆಗೆ ವ್ಯಾಪಿಸಿತ್ತು. ಸಮಾರಂಭದ ದಿವಸವು ಸಮೀಪಿಸಿದಂತೆ ಜನರ ಸಮೂಹವು ಹೆಚ್ಚಾಗತೊಡಗಿತು. ಹಲವು ಧರ್ಮಕೃತ್ಯಗಳು, ನೃತ್ಯಗಾಯನಾದಿ ಮನೋರಂಜಕ ಪ್ರಸಂಗಗಳು ಸಾಗಿದವು. ಸಮಾರಂಭದ ದಿವಸ ಯಾವತ್ತು ರಾಜರು ಸಭಾಮಂಟಪದಲ್ಲ ಮಂಚಗಳಮೇಲೆ ಕಿಕ್ಕಿರಿದು ಕುಳಿತುಕೊಂಡರು. ಅವರ ಸಂಗಡ ಪಾಂಡವರೂ ಬಂದಿದ್ದು, ಅವರು ಬ್ರಾಹ್ಮಣರ ಸಮೂಹದಲ್ಲಿ ಕುಳಿತಿದ್ದರು. ದ್ರೌಪದಿಯನ್ನು ನೋಡಲು ಎಲ್ಲರೂ ಆತುರರಾಗಿದ್ದರು. ಹದಿನಾರನೆಯದಿವಸ ದ್ರೌಪದಿಯು ಸ್ನಾನಮಾಡಿ ಬೆಲೆಯುಳ್ಳ ವಸ್ತ್ರಾಲಂಕಾರಗಳಿಂದ ಅಲಂಕೃತಳಾಗಿ ಸಭಾಮಂಟಪಕ್ಕೆ ಬಂದಳು. ಆಕೆಯ ಕೈಯಲ್ಲಿ ಸುಂದರವಾದ ಹೂಮಾಲೆಯಿತ್ತು. ಆಗ ಸೋಮಕನೆಂಬ ಹೆಸರಿನ ದ್ರುಪದರಾಜನ ಪುರೋಹಿತನು ಅಗ್ನಿಗೆ ಆಜ್ಯಾಹುತಿಯನ್ನು ಕೊಟ್ಟು ಪುಣ್ಯಾಹವಾಚನೆಯನ್ನು ಮಾಡಿಸಿದನು. ಆಗ ಎಲ್ಲಪ್ರಕಾರದ ಮಂಗಲವಾದ್ಯಗಳು ಬಾರಿಸತೊಡಗಿದವು.

ಈಮೇರೆಗೆ ಯಥಾವಿಧಿ ಸತ್ಕೃತ್ಯಗಳಾದಬಳಿಕ ಎಲ್ಲವಾದ್ಯಗಳು ನಿಂತವು. ದ್ರುಪದಪುತ್ರನಾದ ಧೃಷ್ಟದ್ಯುಮ್ನನು ತನ್ನ ತಂಗಿಯನ್ನು ಕರಕೊಂಡು ಮುಂದಕ್ಕೆ ಬಂದು, ಎಲ್ಲಅರಸರಿಗೆ ಕೇಳಿಸುವಂತೆ ಗಂಭೀರವೂ, ಮಧುರವೂ, ಅರ್ಥಪೂರ್ಣವೂ ಆದ ಮಾತುಗಳನ್ನು ಆಡಿದನು. ಆತನು—"ಎಲೈ ಅರಸರುಗಳಿರಾ, ನಾನು ಹೇಳುವದನ್ನು ಲಕ್ಷಪೂರ್ವಕವಾಗಿ ಕೇಳಿರಿ. ಇಲ್ಲಿ ಧನುಸ್ಸುವಿರುವದು. ಅದರ ಹತ್ತಿರ ಅತ್ಯಂತ ತೀಕ್ಷ್ಣಗಳಾದ ಬಾಣಗಳಿರುವವು. ಅವುಗಳಲ್ಲಿ ಐದುಬಾಣಗಳನ್ನು

ತಕ್ಕೊಂಡು ಗರಗರ ತಿರುಗುತ್ತಿರುವ ಈ ಯಂತ್ರದ ಛಿದ್ರದೊಳಗಿಂದ ಒಮ್ಮೆಲೆ ಹೊಡೆದು, ಅದರೊಳಗಿನ ಗುರಿಯನ್ನು ಕೆಡವಬೇಕು. ಹೀಗೆ ಲಕ್ಷ್ಯಭೇದಮಾಡುವವನು ಕುಲೀನನೂ, ಸುರೂಪಿಯೂ, ಬಲಿಷ್ಠನೂ ಇರಬೇಕು. ಈ ಮಹತ್ಕೃತ್ಯವನ್ನು ಮಾಡುವವನಕೊರಳಿಗೆ ನನ್ನತಂಗಿಯು ಮಾಲೆಹಾಕುವಳು.'' ಎಂದುಹೇಳಿ, ಬೇರೆಬೇರೆ ಅರಸರ ಹೆಸರುಗಳನ್ನೂ, ಅವರ ಪರಾಕ್ರಮವನ್ನೂ ಕ್ರಮವಾಗಿ ದ್ರೌಪದಿಗೆ ಹೇಳತೊಡಗಿದನು. ಆಗ ಅಭಿಮಾನಿಗಳೂ, ಪರಾಕ್ರಮಿಗಳೂ, ಪ್ರಾಯಸ್ಥರೂ ಆದ ಅರಸರು, ನಮಗೆ ದ್ರೌಪದಿಯು ದೊರೆಯಬೇಕೆಂಬ ಮತ್ಸರದಿಂದ ಪರಸ್ಪರರನ್ನು ನೋಡಹತ್ತಿದರು. ದ್ರೌಪದಿಯನ್ನು ನೋಡಿ ಅವರೆಲ್ಲರ ಶರೀರದಲ್ಲಿ ಮದನನ ಸಂಚಾರವಾಗಿತ್ತು. ದ್ರೌಪದಿಯು ನನ್ನವಳೇ ಇರುವಳೆಂದು ಅನ್ನುತ್ತ ಆವರು ಮಂಚಗಳಿಂದ ಒಮ್ಮೆಲೆ ಕೆಳಗಿಳಿದು ದ್ರೌಪದಿಯನ್ನು ಗೆದ್ದುಕೊಳ್ಳುವ ಇಚ್ಛೆಯಿಂದ ರಂಗಭೂಮಿಗೆ ಬಂದರು. ದ್ರೌಪದಿಯು ತಮಗೆ ದೊರೆಯಬೇಕೆಂದು ಅವರು ತಮ್ಮ ಮಿತ್ರರನ್ನು ದ್ವೇಷಿಸತೊಡಗಿದರು. ಆಗ ಯಾವತ್ತು ದೇವತೆಗಳು ವಿಮಾನಗಳಲ್ಲಿ ಕುಳಿತು ಆಕಾಶ ಮಾರ್ಗದಲ್ಲಿ ಬಂದಿದ್ದರು. ಅದರಂತೆ ದೈತ್ಯ, ಗರುಡ, ಗಂಧರ್ವ, ದೇವರ್ಷಿ, ಗುಹ್ಯಕ, ಚಾರಣ ಮೊದಲಾದವರೂ ಬಂದಿದ್ದರು. ಶ್ರೀ ಕೃಷ್ಣನೊಡನೆ ಯಾದವರೂ ಬಂದಿದ್ದರು. ಶ್ರೀ ಕೃಷ್ಣನು, ಬೂದಿಮುಚ್ಚಿದ ಕೆಂಡದಂತೆ ಬ್ರಾಹ್ಮಣರ ಸಮೂಹದಲ್ಲಿ ಕುಳಿತಿದ್ದ ಪಾಂಡವರ ಗೊತ್ತುಹಿಡಿದು, ಆ ಸುದ್ದಿಯನ್ನು ಮೆಲ್ಲನೆ ಬಲರಾಮನಿಗೆ ತಿಳಿಸಿದನು. ಅವರನ್ನು ನೋಡಿ ಬಲರಾಮನಿಗೆ ಆನಂದವಾಗಿ, ಆತನು ಶ್ರೀ ಕೃಷ್ಣನ ಕಡೆಗೆ ನೋಡಿದನು. ಪಂಚಪಾಂಡವರೂ ದ್ರೌಪದಿಯನ್ನು ನೋಡಿ ಮದನಶರಪೀಡಿತರಾಗಿದ್ದರು. ದ್ರೌಪದಿಯು ತಮಗೆ ಪ್ರಾಪ್ತವಾಗಬೇಕೆಂದು ರಾಜರು ಕ್ರಮವಾಗಿ ತಮ್ಮ ಪರಾಕ್ರಮವನ್ನು ಪ್ರಕಟಿಸತೊಡಗಿ, ಆ ಬಲವಾದ ಧನುಸ್ಸನ್ನು ಮಣಿಸಲಾರದೆ ಭೂಮಿಯಮೇಲೆ ಬೀಳತೊಡಗಿದರು! ಹೀಗುಹತ್ತಿದ ಆ ಅರಸರು ಕಿರೀಟ, ಹಾರ, ಕುಂಡಲಗಳು ಅವ್ಯವಸ್ಥಿತವಾಗಿರಲು ದ್ರೌಪದಿಯ ಆಶೆಯನ್ನು ಬಿಟ್ಟು ತಿರುಗಿ ಹೋಗತೊಡಗಿದರು

ಈಮೇರೆಗೆ ಆದ ಯಾವತ್ತು ರಾಜರ ಸ್ಥಿತಿಯನ್ನು ನೋಡಿ ಧನುರ್ಧರಾಗ್ರೇಸರನಾದ ಕರ್ಣನು ಧನುಸ್ಸಿನ ಬಳಿಗೆ ಬಂದನು. ಆತನು ಕೂಡಲೆ ಧನುಸ್ಸಿಗೆ ಹೆದೆಏರಿಸಿ ಹಾಹಾಅನ್ನುವದರೊಳಗೆ ಅದಕ್ಕೆ ಬಾಣಗಳನ್ನು ಹೂಡಿದನು. ಹೀಗೆ ಮಹಾತೇಜಸ್ವಿಯಾದ ಸೂರ್ಯಪುತ್ರ-ಕರ್ಣನು ದ್ರೌಪದಿಯನ್ನು ಸಂಪಾದಿಸುವ ಪ್ರತಿಜ್ಞೆಯಿಂದ ಧನುಸ್ಸಿಗೆ ಬಾಣಗಳನ್ನು ಹೂಡಲು, ಈತನು ಗುರಿಯನ್ನು ಹೊಡೆವನೆಂದು ಪಾಂಡವರು ತಿಳಿದರು; ಆದರೆ ಆ ಕರ್ಣನನ್ನು ನೋಡಿದಕೂಡಲೆ ದ್ರೌಪದಿಯು—"ನಾನು ಸೂತಪುತ್ರನನ್ನು ಲಗ್ನವಾಗುವದಿಲ್ಲ." ಎಂದು ಗಟ್ಟಿಯಾಗಿ ನುಡಿದಳು ಆಗ ಹೀನಕುಲದಲ್ಲಿ ಜನ್ಮಕೊಟ್ಟಿದ್ದಕ್ಕಾಗಿ ಆ ವೀರನು ಸಿಟ್ಟಾದನು; ಮತ್ತು ಸೂರ್ಯನಂಥವನಿಂದಲೂ ಇಂಥ ತಪ್ಪಾಯಿತೆಂದು ನಕ್ಕು, ತನ್ನ ತಂದೆಯಾದ ಸೂರ್ಯನನ್ನು ನೋಡಿ, ಉಳಿದವರ ಕೈಯಿಂದ ಜಾರಿಬಿದ್ದ ಆ ಧನುಸ್ಸನ್ನು ಚಲ್ಲಿಕೊಟ್ಟುಬಿಟ್ಟನು! ಬಳಿಕ ಸುತ್ತುಮುತ್ತಲಿನ ಕ್ಷತ್ರಿಯರು ಆ ಧನುಸ್ಸಿಗೆ ಕೈಹಾಕದಿರಲು, ಚೇದಿದೇಶಾಧಿಪತಿಯೂ, ಯಮನಿಗೆ ಸಮಾನನೂ, ಮಹಾಬುದ್ಧಿವಂತನೂ, ಧೈರ್ಯಸಂಪನ್ನನೂ, ವೀರನೂ ಆದ ಧಮಘೋಷನಮಗ ಶಿಶುಪಾಲನು ಮುಂದಾಗಿ, ಧನುಸ್ಸಿಗೆ ಕೈಹಾಕಿದಕೂಡಲೆ ಮೊಣಕಾಲೂರಿ ನೆಲಕ್ಕೆ ಬಿದ್ದನು. ಅದರಂತೆ ಮಹಾಬಲಾಢ್ಯನೂ, ವೀರ್ಯಶಾಲಿಯೂ ಆದ ಮಗದಾಧಿಪತಿ ಜರಾಸಂಧನು ಸ್ತಬ್ಧನಾಗಿ ಪರ್ವತದಂತೆ ನಿಂತು ಧನುಸ್ಸನ್ನು ಬೊಗ್ಗಿಸುವಾಗ ಮೊಣಕಾಲೂರಿ ಭೂಮಿಯಮೇಲೆ ಬಿದ್ದನು; ಆದ್ದರಿಂದ ಆ ರಾಜನು ಎದ್ದು, ಕೂಡಲೆ ತನ್ನ ದೇಶಕ್ಕೆ ಹೊರಟುಹೋದನು. ಬಳಿಕ ಮದ್ರದೇಶಾಧಿಪತಿಯಾದ ಮಹಾಬಲಿಷ್ಠ ಶಲ್ಯನು ಎದ್ದು, ಧನುಸ್ಸನ್ನು ಬಗ್ಗಿಸಹೋಗಲು, ಆತನ ಗತಿಯು ಹೀಗೆಯೇ ಆಯಿತು; ಆದ್ದರಿಂದ ಸಮಾಜದಲ್ಲಿ ಗದ್ದಲವೆದ್ದಿತು ಅರಸರ ಪೌರುಷವು ತಗ್ಗಿತು. ಆಗ ಬ್ರಾಹ್ಮಣರ ಸಮೂಹದಲ್ಲಿ ಕುಳಿತಿದ್ದ ಕುಂತೀಪುತ್ರ ಅರ್ಜುನನು ಧನುಸ್ಸನ್ನು ಸಜ್ಜುಮಾಡಿ ಬಾಣಹೂಡುವ ವಿಚಾರವನ್ನು ಮನಸ್ಸಿನಲ್ಲಿ ತಂದನು.

**೧೮೮ನೇ ಅಧ್ಯಾಯ—ಅರ್ಜುನನು ಲಕ್ಷ್ಯವನ್ನು ಭೇಧಿಸಿದ್ದು—** ಹೀಗೆ ಯಾವತ್ತು ಅರಸರು ಪೌರುಷಹೀನರಾಗಿ ಸುಮ್ಮನೆ ಕುಳಿತಿರುವಾಗ

ಅರ್ಜುನನು ಬ್ರಾಹ್ಮಣರ ಸಮೂಹದೊಳಗಿಂದ ಎದ್ದು ಧನುಸ್ಸಿನಬಳಿಗೆ ಹೋಗತೊಡಗಿದನು. ಆಗ ಅಲ್ಲಿಯ ಮುಖ್ಯಮುಖ್ಯ ಬ್ರಾಹ್ಮಣರು ಕೃಷ್ಣಾಜಿನಗಳನ್ನು ಜಾಡಿಸುತ್ತ ಕೂಗಹತ್ತಿದರು. ಅವರಲ್ಲಿ ಎಷ್ಟೋಜನರು ಅಸಮಾಧಾನಪಟ್ಟರು, ಎಷ್ಟೋಜನರು ಆನಂದಪಟ್ಟರು. ಅವರಲ್ಲಿ ಚತುರರೂ, ಕಲ್ಪಕರೂ ಆದವರು ತಮ್ಮೊಳಗೆ—"ಅಹೋ, ಕರ್ಣ-ಶಲ್ಯ-ದುರ್ಯೋಧನರಂಥ ಅಸ್ತ್ರವಿದ್ಯಾನಿಪುಣರಿಂದ ಆಗದ ಕಾರ್ಯವನ್ನು, ಅಸ್ತ್ರಾಭ್ಯಾಸಮಾಡದವನೂ, ಶಕ್ತಿಯಿಂದಲೂ ಅತ್ಯಂತ ದುರ್ಬಲನಾಗಿರುವವನೂ ಆದ ಈ ಬ್ರಹ್ಮಚಾರಿಯು ಮಾಡಲು ಹೇಗೆ ಸಮರ್ಥನಾದಾನು? ಸುಮ್ಮನೆ ನಾವು ರಾಜರ ಉಪಹಾಸಕ್ಕೂ, ದ್ವೇಷಕ್ಕೂ ಗುರಿಯಾಗಬೇಕಾದೀತು! ಆನಂದದಿಂದಾಗಲಿ, ಗರ್ವದಿಂದಾಗಲಿ, ಅಥವಾ ಬ್ರಾಹ್ಮಣರ ಅವಸರದ ಸ್ವಭಾವದಿಂದಾಗಲಿ ಈತನು ಧನುಸ್ಸನ್ನು ಸಜ್ಜುಮಾಡಲಿಕ್ಕೆ ಹೋಗುತ್ತಿದ್ದರೆ ಈತನನ್ನು ನಿಷೇಧಿಸಿರಿ; ಯಾಕೆಂದರೆ ಈತನು ಹೋಗದಿರುವದೇ ನೆಟ್ಟಗೆ" ಎಂದರು. ಮತ್ತೆ ಕೆಲವರು—"ನಾವು, ಉಪಹಾಸಕ್ಕೂ ಪಾತ್ರರಾಗುವದಿಲ್ಲ; ಕ್ಷುದ್ರತನವೂ ನಮ್ಮ ಪಾಲಿಗೆ ಬರುವದಿಲ್ಲ; ಅರಸರ ದ್ವೇಷಕ್ಕೂ ನಾವು ಗುರಿಯಾಗುವದಿಲ್ಲ; ಅದ್ದರಿಂದ ಬ್ರಹ್ಮಚಾರಿಯು ಹೋಗಲಿ" ಎಂದರು. ಮತ್ತೆ ಕೆಲವರು—"ತರುಣನಾದ ಈ ಬ್ರಹ್ಮಚಾರಿಯು ಮಹಾತೇಜಸ್ವಿಯಿರುವನು; ಒಳ್ಳೇ ಬಲಿಷ್ಠನಿರುವನು; ಈತನ ನಡಿಗೆಯು ಸಿಂಹನ ನಡಿಗೆಯಂತೆ ಗಂಭೀರವಾಗಿರುವದು. ಕೈಲಾಗದಂತೆ ಇದ್ದರೆ ತಾನಾಗಿ ಧನುಸ್ಸಿನಬಳಿಗೆ ಈತನು ಯಾಕೆ ಹೋದಾನು? ಅಲ್ಲದೆ, ಶರೀರಧಾರಣಮಾಡಿರುವ ದೇವಾದಿಕರ ಲೋಕದಲ್ಲಿ ಬ್ರಾಹ್ಮಣರಿಗೆ ಅಸಾಧ್ಯವಾದ ಕರ್ಮವು ಯಾವದಿರುವದು? ಬ್ರಾಹ್ಮಣರು ಕೇವಲ ಜಲಭಕ್ಷಣ-ವಾಯುಭಕ್ಷಣ ಮಾಡುವದರಿಂದ, ದೇಹದಿಂದ ಕೃಶರಾಗಿ ದುರ್ಬಲರಾಗಿದ್ದರೂ, ಅವರ ವ್ರತವು ದೃಢವಾಗಿದ್ದು, ಅವರು ತಮ್ಮ ಸ್ವಂತದ ತೇಜಸ್ಸಿನಿಂದ ಅತ್ಯಂತ ಬಲಿಷ್ಠರಾಗಿರುವರು. ಆದ್ದರಿಂದ ಬ್ರಾಹ್ಮಣರ ಆಚರಣೆಯು ಒಳ್ಳೆಯದಿರಲಿ—ಕೆಟ್ಟದಿರಲಿ, ಅವರನ್ನು ಅವಮಾನಗೊಳಿಸಬಾರದು. ನೋಡಿರಿ, ಜಮದಗ್ನಿಪುತ್ರನಾದ ಪರಶುರಾಮನು ಪೃಥ್ವಿಯೊಳಗಿನ ಯಾವತ್ತು ಕ್ಷತ್ರಿಯರನ್ನು ಗೆದ್ದುಬಿಟ್ಟನು; ಅಗಸ್ತಿಯು ತನ್ನ



ದ್ರೌಪದಿ ಸ್ವಯಂವರ

ಬ್ರಹ್ಮತೇಜದ ಯೋಗದಿಂದ, ಅಗಾಧವಾದ ಸಮುದ್ರವನ್ನು ಕುಡಿದನು ; ಅದರಂತೆ, ಈತನಾದರೂ ಧನುಸ್ಸನ್ನು ಸಜ್ಜುಮಾಡನೆಂದು ಹೇಗೆ ಹೇಳ ಬೇಕು ? "ಈ ಮಹಾಪರಾಕ್ರಮಿಯಾದ ವಟುವು ಬೇಗನೆ ಧನುಸ್ಸನ್ನು ಸಜ್ಜುಮಾಡಲಿ" ಎಂದು ನೀವೆಲ್ಲರೂ ಅನ್ನಿರಿ" ಅನ್ನಲು, "ತಥಾಸ್ತು" ಎಂದು ಬ್ರಾಹ್ಮಣಸಮುದಾಯವು ನುಡಿಯಿತು.

ಈಮೇರೆಗೆ ಬ್ರಾಹ್ಮಣಸಮುದಾಯದಲ್ಲಿ ಹಲವು ತರ್ಕವಿತರ್ಕಗಳು ನಡೆದಿರಲು, ಅರ್ಜುನನು ಧನುಸ್ಸಿನಬಳಿಗೆ ಹೋಗಿ ಅದಕ್ಕೆ ಪ್ರದಕ್ಷಿಣನಮಸ್ಕಾರಮಾಡಿ, ವರದಾಯಕನಾದ ಭಗವಾನ್ ಶಂಕರನನ್ನು ನಮಸ್ಕರಿಸಿ, ಶ್ರೀ ಕೃಷ್ಣನನ್ನು ಸ್ಮರಿಸಿ ಕೂಡಲೆ ಧನುಸ್ಸಿಗೆ ಹೆದೆಏರಿಸಿ, ಪಂಚಬಾಣಗಳನ್ನು ಹೂಡಿ ಗುರಿಯನ್ನು ಹೊಡೆಯಲು, ಗುರಿಯು ಚೂರುಚೂರಾಗಿ ಬಿದ್ದಿತು ! ಇಂದ್ರನು ಅರ್ಜುನನಮೇಲೆ ಹೂಮಳೆಗರೆದನು. ಸಾವಿರಾರು ಜನ ಬ್ರಾಹ್ಮಣರು ಆನಂದಭರಿತರಾಗಿ ತಮ್ಮ ವಸ್ತ್ರಗಳ ಧ್ವಜಗಳನ್ನು ನಿಲ್ಲಿಸಿದರು. "ತಮ್ಮಿಂದಾಗದ ಕಾರ್ಯವನ್ನು ಒಬ್ಬ ಬ್ರಾಹ್ಮಣವಟುವು ಮಾಡಿದನಲ್ಲ!" ಎಂಬ ಅವಮಾನದಿಂದ ರಾಜರು ಹಾಹಾಕಾರವನ್ನು ಮಾಡತೊಡಗಿದರು. ನೂರಾರು ವಾದ್ಯಗಳು ಬಾರಿಸತೊಡಗಿದವು. ನಾಲ್ಕೂಕಡೆಗೆ ಹೂಮಳೆ ಸುರಿಯತೊಡಗಿತು. ಸೂತರೂ, ಮಾಗಧರೂ ಸ್ತುತಿಸಹತ್ತಿದರು. ಅರ್ಜುನನನ್ನು ನೋಡಿದಕೂಡಲೆ ದ್ರುಪದನಿಗೆ ಆನಂದವಾಯಿತು. ಅರಸರು ಸಿಟ್ಟಾಗಿ ಯುದ್ಧಕ್ಕೆ ನಿಂತರೆ, ತಾನು ಅವರನ್ನು ಹೊಡೆದೋಡಿಸುವ ನಿಶ್ಚಯವನ್ನು ಆತನು ಮಾಡಿದನು. ಗದ್ದಲವು ಹೆಚ್ಚಾಗಲು, ಯುಧಿಷ್ಠಿರನು ನಕುಲ ಸಹದೇವರೊಡನೆ ಮನೆಗೆ ಹೊರಟುಹೋದನು. ಇತ್ತ ದ್ರೌಪದಿಯು, ಇಂದ್ರಸಮಾನನಾದ ಅರ್ಜುನನು ಲಕ್ಷ್ಯಭೇದಮಾಡಿದ್ದನ್ನು ನೋಡಿ, ಬಿಳಿಯವಸ್ತ್ರಗಳನ್ನೂ, ಹೂಮಾಲೆಯನ್ನೂ ತಕ್ಕೊಂಡು ಮುಗುಳುನಗೆಯಿಂದ ಆತನ ಬಳಿಗೆ ಹೋದಳು. ಆಗ ಅರ್ಜುನನು ಆಕೆಯನ್ನು ಗೆದ್ದು, ರಂಗಭೂಮಿಯಿಂದ ಹೊರಡಲು, ದ್ರೌಪದಿಯೂ ಆತನನ್ನು ಹಿಂಬಾಲಿಸಿ ನಡೆದಳು.

**೧೮೯ನೇ ಅಧ್ಯಾಯ—ನೃಪಾಲಕೋಪ**—ದ್ರುಪದನು ಲಕ್ಷ್ಯಭೇದಮಾಡಿದ ಬ್ರಾಹ್ಮಣನಿಗೆ ದ್ರೌಪದಿಯು ಕೊಡುವದನ್ನು ನೋಡಿ, ಎಲ್ಲ

ಜನ್ಮದಲ್ಲಿ ಪ್ರಾರಬ್ಧಕರ್ಮದ ಫಲಕ್ಕಾಗಿ ಪೂರ್ಣಯತ್ನವಾಗಿರದಿದ್ದರೆ, ಈ ಜನ್ಮದಲ್ಲಿ ಅದರ ಫಲಕ್ಕಾಗಿ ಉಳಿದ ಯತ್ನವನ್ನು ಮಾಡಬೇಕಾಗುವದು. ಇದರಮೇಲೆಯೂ ಯತ್ನಮಾಡದೆಬಿಟ್ಟರೆ, ಆ ಪ್ರಾರಬ್ಧಕರ್ಮಗಳು ಮತ್ತೊಂದು ಜನ್ಮದಲ್ಲಿ ಫಲಕೊಡುವದಕ್ಕಾಗಿ ಪುನಃ ಸಂಚಿತದಲ್ಲಿ ಕೂಡುವವು. ಒಟ್ಟಿಗೆ, ಮನುಷ್ಯನು ತನ್ನ ಸ್ವಭಾವಕ್ಕನುಸರಿಸಿ ಫಲಕ್ಕಾಗಿ ಸಂಕಲ್ಪವನ್ನು, ಸಂಕಲ್ಪಸಿದ್ಧಿಗಾಗಿ ಯತ್ನವನ್ನು ಮಾಡಲೇಬೇಕಾಗುವದು.

ಈ ಕರ್ಮಬಂಧನವನ್ನು ಮನಸ್ಸಿನಲ್ಲಿ ತಂದರೆ, ಮೈನಡುಗಿ ಸುಖದುಃಖಗಳ ಭೋಗದ ಕತ್ತರಿಯೊಳಗಿಂದ, ನಾವು ಹೇಗೆ ಪಾರಾಗಬೇಕೆಂದು ವಿಚಾರವಂತರ ಎದೆಒಡೆದು ನೀರಾಗಬಹುದು; ಆದರೆ ಈ ಕರ್ಮವು ತಪ್ಪಬೇಕಾದರೆ, ಅಂದರೆ ಮೋಕ್ಷವು ದೊರೆಯಬೇಕಾದರೆ, ಮನುಷ್ಯನು ಉಪಾಸನೆಯಿಂದ ಈಶ್ವರಕೃಪೆಯನ್ನು ಸಂಪಾದಿಸಬೇಕು; ಅಂದರೆ ಉಂಡುತೀರಿಸಲಾಗದ ಸಂಚಿತಕರ್ಮದ ಅಪಾರವಾದ ರಾಶಿಯು ಸುಟ್ಟುಹೋಗುವದು; ಪ್ರಾರಬ್ಧವನ್ನು ಅಂದರೆ ಈಶಸಂಕಲ್ಪದಂತೆ ನಿಯಾಮಕವಾದದ್ದನ್ನು ಉಂಡುತೀರಿಸಬೇಕು; ಆಗಾಮಿಕರ್ಮವನ್ನು ಸತ್ಸಮಾಗಮದಿಂದ ನಿಷ್ಕಾಮವಾಗಿ, ಅಂದರೆ ಈಶ್ವರಾರ್ಪಣಪೂರ್ವಕವಾಗಿ ಮಾಡಿ ನಷ್ಟಪಡಿಸಬೇಕು; ಅಂದರೆ ಕರ್ಮಬಂಧನವು ದೂರವಾಗಿ ಗುರುಕೃಪೆಯಿಂದ ಮೋಕ್ಷವು ದೊರೆಯುವದು.



## ೧೪ ರಾಜ್ಯಾಲಂಭಪರ್ವ

**೨೦೦ನೇ ಅಧ್ಯಾಯ—ದುಃಖಿತರಾದ ದುರ್ಯೋಧನಾದಿಗಳ ಗಮನ**—ಈ ಮೇರೆಗೆ ಶುಭಲಕ್ಷಣ ಸಂಪನ್ನಳಾದ ದ್ರೌಪದಿಯು, ಪಾಂಡವರ ಪತ್ನಿಯಾದಳೆಂಬ ಸುದ್ದಿಯನ್ನು ಗೂಢಚಾರರಮುಖದಿಂದ ಕೇಳಿ, ಯಾವತ್ತು ರಾಜರು ತಮ್ಮ ತಮ್ಮ ದೇಶಗಳಿಗೆ ಹೋದರು. ಈ ಸುದ್ದಿಯನ್ನು ದುರ್ಯೋಧನನು ಕೇಳಿ ದುಃಖಿತನಾದನು. ಆತನು ತನ್ನ ಪರಿವಾರದೊಡನೆ ಹಸ್ತಿನಾವತಿಗೆ ಹೊರಟನು. ಆಗ ನಿರ್ಲಜ್ಜನಾದ ದುಃಶಾಸನನು ಆತನನ್ನು ಕುರಿತು—"ರಾಜಾ, ಏನು ಹೇಳಲೋ! ಅರ್ಜುನನು

ಕೃಷ್ಣಾಜಿನಗಳನ್ನು ಝಾಡಿಸುತ್ತ "ಅಹೋ! ಹೆದರಬೇಡಿರಿ, ಹೆದರಬೇಡಿರಿ; ನಾವು ಶತ್ರುಗಳೊಡನೆ ಯುದ್ಧಮಾಡುವೆವು." ಎಂದು ನುಡಿದರು. ಅವರ ಆ ಮಾತುಗಳನ್ನು ಕೇಳಿ ಅರ್ಜುನನು ನಕ್ಕಹಾಗೆಮಾಡಿ–"ಬ್ರಾಹ್ಮಣಶ್ರೇಷ್ಠರೇ, ತಾವು ಸ್ವಸ್ಥವಾಗಿದ್ದು, ಏನಾಗುತ್ತದೆಂಬದನ್ನು ನೋಡಿರಿ. ಕೊಬ್ಬೇರಿಬರುವ ಈ ಕ್ಷತ್ರಿಯರನ್ನು, "ಮಾಂತ್ರಿಕನು ಸರ್ಪಗಳನ್ನು ಮಂತ್ರದಿಂದ ಹಿಂದಕ್ಕೆ ಸರಿಸುವಂತೆ ಹಿಂದಕ್ಕೆ ಸರಿಸುವೆನು," ಎಂದು ಹೇಳಿ, ಭೀಮನೊಡನೆ ಯುದ್ಧಕ್ಕೆ ಸಿದ್ಧನಾಗಿ ಬಾಣಗಳನ್ನು ಬಿಡತೊಡಗಿದನು. ಆಗ ಕ್ಷತ್ರಿಯರು—"ಅಹೋ, ಯುದ್ಧಮಾಡುವ ಇಚ್ಛೆಯಿಂದ ಬ್ರಾಹ್ಮಣನು ಬಂದರೂ, ಸಂಗ್ರಾಮದಲ್ಲಿ ಆತನನ್ನು ಕೊಲ್ಲಬೇಕೆಂದು ಶಾಸ್ತ್ರವಿರುವದು ; ಆದ್ದರಿಂದ ಈ ಬ್ರಾಹ್ಮಣನನ್ನು ಯುದ್ಧದಲ್ಲಿ ಕೊಲ್ಲಲಿಕ್ಕೆ ಯಾವಪ್ರಕಾರದ ಪ್ರತ್ಯವಾಯವೂ ಇಲ್ಲ" ಎಂದು ನುಡಿದು, ಯಾವತ್ತು ಕ್ಷತ್ರಿಯರು ಒಮ್ಮೆಲೆ ಆ ಬ್ರಾಹ್ಮಣವೇಷಧಾರಿಯಾದ ಅರ್ಜುನನಮೇಲೆ ಸಾಗಿಹೋದರು. ಆಗ ದ್ರೌಪದಿಯನ್ನು ಸಂಪಾದಿಸುವ ಇಚ್ಛೆಯಿಂದ, ಕರ್ಣನು ಅರ್ಜುನನೊಡನೆ, ಶಲ್ಯನು ಭೀಮಸೇನನೊಡನೆ, ದುರ್ಯೋಧನ ಪ್ರಭೃತಿ ಉಳಿದ ಕ್ಷತ್ರಿಯರು ಆ ಬ್ರಾಹ್ಮಣರೊಡನೆ ಕಾದತೊಡಗಿದರು. ಕರ್ಣಾರ್ಜುನರ ಯುದ್ಧವು ಭಯಂಕರವಾಯಿತು. ಬ್ರಾಹ್ಮಣವೇಷಧಾರಿ ಅರ್ಜುನನ ಪರಾಕ್ರಮವೂ, ಶಸ್ತ್ರಾಸ್ತ್ರನೈಪುಣ್ಯವೂ ಕರ್ಣನ ಅನುಭವಕ್ಕೆ ಚನ್ನಾಗಿ ಬಂದು, ಆತನು ಬ್ರಾಹ್ಮಣವೇಷಧಾರಿ ಅರ್ಜುನನಿಗೆ—

ಕರ್ಣ—ಎಲೈ ಬ್ರಾಹ್ಮಣಶ್ರೇಷ್ಠಾ, ನಿನ್ನ ಬಾಹುವೀರ್ಯವನ್ನೂ, ನಿನ್ನ ಉತ್ಸಾಹವನ್ನೂ, ಶಸ್ತ್ರಾಸ್ತ್ರಗಳಲ್ಲಿ ಸಂಪಾದಿಸಿರುವ ನಿನ್ನ ವಿಜಯವನ್ನೂ ನೋಡಿ ನನಗೆ ಬಹಳ ಸಂತೋಷವಾಗುತ್ತದೆ. ಎಲೈ ಅತ್ಯಂತ ಶ್ರೇಷ್ಠನಾದ ಬ್ರಾಹ್ಮಣನೇ, ನೀನೇನು ಸಾಕ್ಷಾತ್‌ಧನುರ್ವೇದವೋ, ಪರಶುರಾಮನೋ, ಇಂದ್ರನೋ, ಸಾಕ್ಷಾತ್ ವಿಷ್ಣುವೋ ಯಾರಿರುವೆ ಹೇಳು. ನೀನು ಇಂಥವರಲ್ಲಿ ಯಾವನಾದರು ಒಬ್ಬನು ಇದ್ದು, ಬ್ರಾಹ್ಮಣವೇಷದಿಂದ ಯುದ್ಧಮಾಡುತ್ತಿರುವಂತೆ ನನಗೆ ತೋರುತ್ತದೆ. ಹಾಗಲ್ಲದಿದ್ದರೆ, ಯುದ್ಧದಲ್ಲಿ ಸಿಟ್ಟಾದ ನನ್ನೊಡನೆ ಸಾಕ್ಷಾತ್ ಶಚೀಪತಿ ಇಂದ್ರನು,

ಅಥವಾ ಪಂಡುಪುತ್ರ ಅರ್ಜುನನು ಅಲ್ಲದೆ ಯುದ್ಧಮಾಡಲು ಮತ್ತೊಬ್ಬರು ಸಮರ್ಥರಲ್ಲವು.

ಅರ್ಜುನ—ಕರ್ಣಾ, ನಾನು ಧನುರ್ವೇದವೂ ಅಲ್ಲ; ಪರಾಕ್ರಮಿಯಾದ ಪರಶುರಾಮನೂ ಅಲ್ಲ; ಆದರೆ ಯಾವತ್ತು ಶಸ್ತ್ರಧರರಲ್ಲಿ ಶ್ರೇಷ್ಠನಾದ ಒಬ್ಬ ಬ್ರಾಹ್ಮಣನಿರುತ್ತೇನೆ; ಮತ್ತು ಗುರುವಿನ ಶಿಕ್ಷಣದಿಂದ ಬ್ರಹ್ಮಾಸ್ತ್ರ-ಐಂದ್ರಾಸ್ತ್ರಗಳಲ್ಲಿ ಒಳ್ಳೇ ಪ್ರವೀಣನಾಗಿ, ನಿನ್ನನ್ನು ಯುದ್ಧದಲ್ಲಿ ಸೋಲಿಸುವದಕ್ಕಾಗಿ ನಿನ್ನ ಮುಂದೆ ನಿಂತಿದ್ದೇನೆ; ಆದ್ದರಿಂದ ಎಲೈ ವೀರಾ, ಧೈರ್ಯತಾಳು, ಗಡಬಡಿಸಬೇಡ.

ಬ್ರಾಹ್ಮಣನ ಈ ಮಾತುಗಳನ್ನು ಕೇಳಿ, ಬ್ರಹ್ಮತೇಜವು ಅಜಿಂಕ್ಯವೆಂದು ತಿಳಿದು, ಕರ್ಣನು ಯುದ್ಧಮಾಡುವದನ್ನು ಬಿಟ್ಟನು. ಇತ್ತ ಶಲ್ಯನು ಭೀಮನೊಡನೆ ಮಹಾ ಪರಾಕ್ರಮದಿಂದ ಎರಡು ಗಳಿಗೆ ಕಾದಲು, ಭೀಮನು ಶಲ್ಯನ ಎರಡೂಕೈಗಳನ್ನು ಹಿಡಿದು, ಆತನನ್ನು ನೆಲಕ್ಕೆ ಅಪ್ಪಳಿಸಿದನು. ಅದನ್ನು ನೋಡಿ ಬ್ರಾಹ್ಮಣರು ಗಹಗಹಿಸಿ ನಕ್ಕರು. ಹೀಗೆ ನೆಲಕ್ಕೆಅಪ್ಪಳಿಸಿದ ಶಲ್ಯನನ್ನು, ಭೀಮನು ಕೊಲ್ಲಬಹುದಾಗಿದ್ದರೂ ಆತನು ಕೊಲ್ಲಲಿಲ್ಲ. ಈ ಮೇರೆಗೆ ಕರ್ಣ-ಶಲ್ಯರು ಪರಾಜಿತರಾದದ್ದನ್ನು ನೋಡಿ ಉಳಿದ ಅರಸರು-"ಇಲ್ಲಿ ಬ್ರಾಹ್ಮಣಸಮೂಹವು ಹೆಚ್ಚಾಗಿರುವದು; ಬ್ರಾಹ್ಮಣರು ಎಂತಹ ಅಪರಾಧಮಾಡಿದರೂ, ವಧಿಸಲು ಯೋಗ್ಯರಲ್ಲ; ಆದ್ದರಿಂದ ಬ್ರಾಹ್ಮಣಸಮುದಾಯವು ಇಲ್ಲದಹಾಗಾದಬಳಿಕ ಮತ್ತೆ ಯುದ್ಧಮಾಡೋಣವಂತೆ," ಎಂದು ನುಡಿದು ಯುದ್ಧವನ್ನು ನಿಲ್ಲಿಸಿಬಿಟ್ಟರು. ಅವರ ಆ ಮಾತುಗಳನ್ನುಕೇಳಿ, ಭೀಮಾರ್ಜುನರು ಯುದ್ಧಮಾಡುವದನ್ನು ಬಿಟ್ಟು ಮನೆಗೆ ಹೊರಡಲು, ದ್ರೌಪದಿಯೂ ಅರ್ಜುನನನ್ನು ಹಿಂಬಾಲಿಸಿ ಹೊರಟಳು. ಇತ್ತ ಕುಂತಿಯು, ಭಿಕ್ಷೆಗೆ ಹೋಗಿದ್ದ ತನ್ನ ಮಕ್ಕಳು ಬರುವ ಹೊತ್ತು ಮೀರಿದ್ದರೂ ಇನ್ನೂ ಬಾರದ್ದರಿಂದ, "ಧೃತರಾಷ್ಟ್ರಪುತ್ರರು ತನ್ನ ಮಕ್ಕಳನ್ನು ಕೊಂದರೋ, ಅಥವಾ ದೀರ್ಘದ್ವೇಷಿಗಳಾದ ರಾಕ್ಷಸರು ಅವರ ಪ್ರಾಣಹರಣಮಾಡಿದರೋ" ಎಂದು, "ಪ್ರೇಮವಿದ್ದಲ್ಲಿ ಕುಕಲ್ಪನೆಗಳು ಬಹಳವೆಂ"ಬ ನಿಯಮದಂತೆ ಹಲವು ಕೆಟ್ಟಕಲ್ಪನೆಗಳನ್ನು ಮಾಡತೊಡಗಿದ್ದಳು. ಅಷ್ಟರಲ್ಲಿ ಆರುತಾಸು ಮೀರಿಹೋಗಿರುವಾಗ ಅರ್ಜುನನು

ಮನೆಗೆ ಬಂದನು. ಆಗ ಬ್ರಾಹ್ಮಣಸಮುದಾಯವು ಅವನನ್ನು ಸುತ್ತುಗಟ್ಟಿತ್ತು.

**೧೯೧ನೇ ಅಧ್ಯಾಯ—ಧರ್ಮಾರ್ಜುನಸಂವಾದ**—ಆ ಕುಂಬಾರನಮನೆಗೆ ಹೋದಬಳಿಕ ಆನಂದಿತರಾಗಿದ್ದ ಭೀಮಾರ್ಜುನರು, ದ್ರೌಪದಿಯನ್ನೇ ಭಿಕ್ಷೆಯಾಗಿ ಕುಂತಿಗೆ ಒಪ್ಪಿಸಿದರು! ಆಗ ಕುಂತಿಯು ಗುಡಿಸಿಲೊಳಗೆ ಇದ್ದದ್ದರಿಂದ ದ್ರೌಪದಿಯನ್ನು ನೋಡಿದ್ದಿಲ್ಲ ಬರಿಯ ಭಿಕ್ಷೆಯೆಂಬ ಶಬ್ದವಷ್ಟೇ ಆಕೆಯ ಕಿವಿಗೆ ಬಿದ್ದದ್ದರಿಂದ, ಆಕೆಯು ವಾಡಿಕೆಯಂತೆ—"ಮಕ್ಕಳಿರಾ, ನೀವೆಲ್ಲರೂ ಕೂಡಿ ಸೇವನಮಾಡಿರಿ" ಎಂದು ನುಡಿದಳು! ಆ ಮೇಲೆ ಆಕೆಯು ದ್ರೌಪದಿಯನ್ನು ನೋಡಿ, "ನಾನು ಅನರ್ಥಕಾರಕ ಭಾಷಣಮಾಡಿದೆನೆಂ"ದು ನುಡಿದು, ಆನಂದಿತಳಾಗಿದ್ದ ದ್ರೌಪದಿಯ ಕೈಹಿಡಿದು, ಆಕೆಯನ್ನು ಧರ್ಮರಾಜನಬಳಿಗೆ ಕರಕೊಂಡುಹೋಗಿ, ಎಲ್ಲ ಸಂಗತಿಯನ್ನು ಆತನಿಗೆ ಹೇಳಿ—"ಎಲೈ ಕುರುಕುಲಶ್ರೇಷ್ಠಾ, ನನ್ನ ಮಾತು ಸುಳ್ಳಾಗಲೂಬಾರದು, ಅಧರ್ಮವುಆಗಿ ಈದ್ರೌಪದಿಯುತಿರ್ಯಗ್ಯೋನಿಯಲ್ಲ ಸುತ್ತತೊಡಗಲೂಬಾರದು. ಅಂಥ ಉಪಾಯವನ್ನು ನೀನು, ಹೇಳು" ಎಂದು ಕೇಳಿದಳು. ಆಗ ಧರ್ಮನು ಕೆಲಹೊತ್ತುವಿಚಾರಿಸಿ ಅರ್ಜುನನನ್ನು ಕುರಿತು—

ಧರ್ಮ—ಅರ್ಜುನಾ, ನೀನು ದ್ರೌಪದಿಯನ್ನು ಗೆದ್ದುಕೊಂಡು ಬಂದಿರುವದರಿಂದ, ಈ ರಾಜಕನ್ಯೆಗೆ ನಿನ್ನ ಯೋಗದಿಂದಲೇ ವಿಶೇಷ ಶೋಭೆಯುಂಟಾಗುವದು; ಆದ್ದರಿಂದ ಅಗ್ನಿಯನ್ನು ಪ್ರದೀಪ್ತವಾಗಿ ಮಾಡಿ ಈಕೆಯ ಪಾಣಿಗ್ರಹಣವನ್ನು ಮಾಡು.

ಅರ್ಜುನ—ನರೇಂದ್ರಾ, ನೀನು ನನ್ನನ್ನು ಅಧರ್ಮದಲ್ಲಿ ಕೆಡವಬೇಡ, ನೀನು ಹೇಳುವದು ಶಿಷ್ಟಧರ್ಮವಲ್ಲ. ಮೊದಲು ಹಿರಿಯನಾದ ನಿನ್ನ ಲಗ್ನವಾಗಬೇಕು, ಆಮೇಲೆ ಈ ಮಹಾ ಪರಾಕ್ರಮಿಯಾದ ಭೀಮನ ಲಗ್ನವಾಗಬೇಕು, ಆ ಮೇಲೆ ನನ್ನದು, ಬಳಿಕ ನಕುಲ ಸಹದೇವರದು. ರಾಜಾ, ಭೀಮಸೇನನೂ, ನಾನೂ, ನಕುಲ—ಸಹದೇವರೂ ಆಜ್ಞಾಧಾರಕರಾದ ನಿನ್ನ ದಾಸರು. ಹೀಗಿರುವದರಿಂದ ಧರ್ಮಕ್ಕೆ ಬಾಧೆ ಬಾರದಂತೆ, ಕೀರ್ತಿಗೆ ಕಾರಣವಾಗುವಂತೆ, ದ್ರುಪದ ರಾಜನಿಗೆ ಸಂತೋಷವಾಗುವಂತೆ

ಮಾಡಬೇಕಾದದ್ದನ್ನು ನೀನು ಮಾಡಿ, ನನ್ನನ್ನು ಆಜ್ಞಾಪಿಸು. ನಾವು ನಿನ್ನ ಅಧೀನರು.

ಹೀಗೆ ಭಕ್ತಿ-ಪ್ರೇಮಪೂರ್ಣವಾದ ಅರ್ಜುನನ ಮಾತುಗಳನ್ನು ಕೇಳಿ, ಆ ಪಾಂಡುಪುತ್ರರು, ತಮ್ಮಕಡೆಗೆ ನೋಡುತ್ತಿರುವ ದ್ರೌಪದಿಯ ಕಡೆಗೆ ನೋಡಿದರು; ಬಳಿಕ ತಮ್ಮಕಡೆಗೆ ಪರಸ್ಪರ ನೋಡಿದರು. ಆಗ ಅವರೆಲ್ಲರಿಗೂ ದ್ರೌಪದಿಯವಿಷಯದ ಇಚ್ಛೆಯು ಉತ್ಪನ್ನವಾಗಿ, ಅವರೆಲ್ಲರೂ ಕಾಮಶರಪೀಡಿತರಾದರು. ಇದನ್ನರಿತು ಧರ್ಮರಾಜನು ಮನಸ್ಸಿನಲ್ಲಿ—"ಈ ಲಕ್ಷಣಗಳಮೇಲಿಂದ, ಹಿಂದಕ್ಕೆ ವ್ಯಾಸರು ಹೇಳಿದಂತೆ ಈ ದ್ರೌಪದಿಯು, ನಮ್ಮ ಐವರು ಪಾಂಡವರ ಹೆಂಡತಿಯೂ ಆಗುವಂತೆ ತೋರುತ್ತದೆ. ದ್ರೌಪದಿಯನ್ನು ಒಬ್ಬರೇ ಲಗ್ನವಾಗುವದರಿಂದ, ನಮ್ಮ ಪರಸ್ಪರರಲ್ಲಿ ವೈಮನಸ್ಸು ಉತ್ಪನ್ನವಾಗಬಹುದು," ಎಂದು ಯೋಚಿಸಿ, ತನ್ನ ಬಂಧುಗಳನ್ನು ಕುರಿತು—"ಈ ಕಲ್ಯಾಣಿಯಾದ ದ್ರೌಪದಿಯು ನಮ್ಮೆಲ್ಲರಿಗೂ ಹೆಂಡತಿಯಾಗಬಹುದು." ಎಂದು ಹೇಳಲು, ತಮ್ಮಅಣ್ಣನ ಈ ಮಾತುಗಳನ್ನು ಕೇಳಿ, ಆ ಸತ್ವಸಂಪನ್ನರಾದ ಎಲ್ಲ ಪಾಂಡುಪುತ್ರರು ಆ ಮಾತನ್ನು ಮನಸ್ಸಿನಲ್ಲಿ ಚಿಂತಿಸತೊಡಗಿದರು

ಇತ್ತ ಬಲರಾಮನೊಡನೆ ಯಾದವಶ್ರೇಷ್ಠನಾದ ಶ್ರೀಕೃಷ್ಣನು ಪಾಂಡವರನ್ನು ಕಾಣುವದಕ್ಕಾಗಿ ಆ ಕುಂಬಾರನಮನೆಗೆ ಬಂದು, ತಮ್ಮಂದಿರೊಡನೆ ಕುಳಿತಿದ್ದ ಧರ್ಮರಾಜನನ್ನೂ, ಸೋದರತ್ತೆಯಾದ ಕುಂತಿಯನ್ನೂ ನಮಸ್ಕರಿಸಿ—"ನಾನು ಕೃಷ್ಣನು ಬಂದಿರುವೆನು" ಎಂದು ಹೇಳಿದನು. ಆ ಬಲರಾಮ-ಕೃಷ್ಣರನ್ನು ನೋಡಿ ಪಾಂಡವರಿಗೆ ಆನಂದವಾಯಿತು. ಧರ್ಮರಾಜನು ಕೃಷ್ಣನಿಗೆ ಕುಶಲಪ್ರಶ್ನಗಳನ್ನು ಮಾಡಿ, "ನಾವು ಗುಪ್ತವೇಷದಿಂದಿರುವಾಗ ನಿಮಗೆ ಹೇಗೆ ಗೊತ್ತಾಯಿತೆಂ"ದು ಕೇಳಲು, ಕೃಷ್ಣನು—"ರಾಜಾ, ಅಗ್ನಿಯು ಮುಚ್ಚಿದ್ದರೂ, ಅದರ ಗೊತ್ತು ಆಗೇ ಆಗುವದು. ರಂಗಸ್ಥಳಾದಿಗಳಲ್ಲಿ ಮಾಡಿದ ಪರಾಕ್ರಮವು ನಿಮ್ಮಹೊರತು ಅನ್ಯರಿಗೆ ಹೇಗೆ ಶಕ್ಯವಾದೀತು? ನೀವು ಅರಗಿನ ಮನೆಯಿಂದ ಪಾರಾದದ್ದೂ, ದುರ್ಯೋಧನನ ದುಷ್ಟ ಆಲೋಚನೆಯು ಕೊನೆಗಾಣದೆಯಿದ್ದದ್ದೂ ಪರಮಾನಂದಕರವು. ಇನ್ನು, ನನ್ನ ಮನಸ್ಸಿನಲ್ಲಿದ್ದಂತೆ ನಿಮ್ಮ

ಕಲ್ಯಾಣವಾಗಲಿ. ಎಲೈ ಪಾರ್ಥರೇ, ಯಾವರಾಜರಿಗೂ ನಿಮ್ಮ ಗೊತ್ತು ಹತ್ತುವದು ಯೋಗ್ಯವಲ್ಲ; ನಾವು ಬಹಳಹೊತ್ತು ಇಲ್ಲಿ ಇದ್ದರೆ, ಕದಾಚಿತ್ ನಿಮ್ಮ ಸುದ್ದಿಯು ಗೊತ್ತಾದೀತು." ಎಂದು ಹೇಳಿ, ಧರ್ಮನ ಅನುಮತಿಯಿಂದ ಆ ಬಲರಾಮ-ಕೃಷ್ಣರು ಹೊರಟುಹೋದರು.

**೧೯೨ನೇ ಅಧ್ಯಾಯ— ಅತ್ತೆಯಮನೆಯಲ್ಲಿಯ ದ್ರೌಪದಿಯ ನಡತೆ**—ಜನಮೇಜಯಾ, ಭೀಮಾರ್ಜುನರು ಕುಂಬಾರನಮನೆಗೆ ಹೋಗುವಾಗ ಅವರಿಗೆ ಗೊತ್ತಾಗದಂತೆ, ಧೃಷ್ಟದ್ಯುಮ್ನನು ಅವರ ಬೆನ್ನಹಿಂದೆ ಹೋಗಿ, ಅವರಿಗೆಕಾಣದಂತೆ ಅವರಬಳಿಯಲ್ಲಿ ಕುಳಿತುಕೊಂಡನು. ಭೀಮಾರ್ಜುನ- ನಕುಲ-ಸಹದೇವರು ಸಾಯಂಕಾಲದಲ್ಲಿ ಭಿಕ್ಷೆಯನ್ನು ತಂದು ಧರ್ಮರಾಜನಿಗೆ ಒಪ್ಪಿಸಲು, ಊಟದ ಹೊತ್ತಾದದ್ದನ್ನು ನೋಡಿ ಕುಂತಿಯುದ್ರೌಪದಿಯನ್ನುಕುರಿತು-"ಎಲೈ ಕಲ್ಯಾಣೀ, ನೀನು ಈ ಅನ್ನವನ್ನು ತಕ್ಕೊಂಡು ಇದರೊಳಗಿಂದ ಮೊದಲು ದೇವತೆಗಳ ಪ್ರೀತಿಗಾಗಿ ಬಲಿಯನ್ನು ತೆಗೆದಿಡು; ಬ್ರಾಹ್ಮಣರಿಗೆ ಭಿಕ್ಷೆಯನ್ನು ಹಾಕು; ಅನ್ನಾರ್ಥಿಗಳಾದ ಜನರು ಸುತ್ತುಮುತ್ತು ಬಂದಿದ್ದರೆ ಅವರಿಗೆ ಅನ್ನಕೊಡು. ಆಮೇಲೆ ಉಳಿದ ಅನ್ನದಲ್ಲಿ ಸಮನಾಗಿ ಎರಡುಭಾಗಮಾಡಿ, ಒಂದುಭಾಗವನ್ನುತೆಗೆದಿಟ್ಟು, ಉಳಿದಭಾಗದಲ್ಲಿನನಗೂನಿನಗೂ ಅನ್ನವನ್ನುತೆಗೆದಿಟ್ಟು, ಉಳಿದ ಅನ್ನದಲ್ಲಿ ಸಮನಾಗಿ ನಾಲ್ಕುಭಾಗಮಾಡಿ, ಭೀಮನಹೊರತು ಉಳಿದ ನಾಲ್ವರಿಗೆ ಒಂದೊಂದು ಭಾಗದಂತೆಕೊಡು. ಇನ್ನುಳಿದಅರ್ಧಭಾಗವನ್ನೆಲ್ಲ ನಮ್ಮ ಭೀಮನಿಗೆ ಕೊಟ್ಟುಬಿಡು; ಯಾಕಂದರೆ ರೂಪಸಂಪನ್ನನಾದ ಬಲಿಷ್ಠಭೀಮನಿಗೆ ಹಸಿವೆಯು ಬಹಳ." ಎಂದು ಹೇಳಲು, "ಅತ್ತೆಯು ಹೇಳಿದ್ದು ತನ್ನ ಹಿತಕ್ಕಾಗಿಯೇ" ಎಂದು ತಿಳಿದು, ಅದರಂತೆ ದ್ರೌಪದಿಯು ಅನ್ನದ ವ್ಯವಸ್ಥೆಯನ್ನು ಮಾಡಿದಳು. ಊಟವಾದಬಳಿಕ ಮಾದ್ರೀಪುತ್ರ ಸಹದೇವನು ಮಲಗಿಕೊಳ್ಳುವದಕ್ಕಾಗಿ ದರ್ಭೆಯನ್ನು ಹಾಸಲು, ಎಲ್ಲರೂ ಅದರಮೇಲೆ ತಮ್ಮತಮ್ಮ ಕೃಷ್ಣಾಜಿನಗಳನ್ನು ಹಾಸಿ ಮಲಗಿಕೊಂಡರು. ಕುಂತಿಯು ಅವರ ತಲೆಗಿಂಬಿಗೆ ಮಲಗಿಕೊಂಡಳು. ದ್ರೌಪದಿಯು ಅವರ ಕಾಲದೆಸೆಯಲ್ಲ ಮಲಗಿಕೊಂಡಳು. ಜನಮೇಜಯಾ, ಮೆತ್ತನ್ನ ಗಾದಿಯಮೇಲೆ ಮಲಗಿಕೊಳ್ಳುವ ಅಭ್ಯಾಸವಿದ್ದ ಆ ಕೋಮಲಾಂಗಿ ದ್ರೌಪ

ದಿಯು, ಕಾಲಕೆಳಗಿನ ತಲೆಗಿಂಬಿನಂತೆ ಬಿದ್ದುಕೊಂಡಳು. ಅದಕ್ಕಾಗಿ ಆಕೆಯ ಮನಸ್ಸಿಗೆ ಸ್ವಲ್ಪವೂ ಅಸಮಾಧಾನವಾಗಲಿಲ್ಲ; ಇಂಥ ನಿರ್ಧನರ ಪದರಿನಲ್ಲಿ ಬಿದ್ದೆನೆಂದು ಪಾಂಡವರ ಅಪಮಾನವನ್ನು ಆಕೆಯುಮಾಡಲಿಲ್ಲ. ಹಾಸಿಗೆಯಮೇಲೆ ಮಲಗಿರುವಾಗಲೇ ಪಾಂಡವರು ಸೇನಾಪತಿಗಳಿಗೆಒಪ್ಪುವ ಯುದ್ಧದ ಮಾತುಗಳನ್ನೂ, ದಿವ್ಯಾಸ್ತ್ರ, ರಥ, ಗಜ, ಖಡ್ಗ, ಗದೆ, ಪರಶು ಮೊದಲಾದವುಗಳ ಸಂಬಂಧದ ಮಾತುಗಳನ್ನೂ ಆಡತೊಡಗಿದರು. ಇದನ್ನೆಲ್ಲ ಧೃಷ್ಟದ್ಯುಮ್ನನು ನೋಡಿ, ಪಾಂಡವರ ಗೊತ್ತುಹತ್ತಿದ್ದರಿಂದ ಚಿಂತಾಕ್ರಾಂತನಾಗಿದ್ದ ದ್ರುಪದನಬಳಿಗೆ, ಈ ಎಲ್ಲಸುದ್ದಿಯನ್ನು ಹೇಳುವದಕ್ಕಾಗಿ ಹೊರಟುಹೋದನು. ಧೃಷ್ಟದ್ಯುಮ್ನನು ಬಂದದ್ದನ್ನು ನೋಡಿ ದ್ರುಪದನು—"ಎಲಾ, ಕೃಷ್ಣೆಯು ಎಲ್ಲಿರುವಳು? ಒಬ್ಬ ಹೀನವರ್ಣದ ಶೂದ್ರನ ಕೈಗೆಹತ್ತಿ, ಶ್ಮಶಾನದಲ್ಲಿ ಬಿದ್ದ ಕೋಮಲಪುಷ್ಪದಂತೆ ಆಕೆಯು ವ್ಯರ್ಥಳಾಗಿರುವದಿಲ್ಲವಷ್ಟೆ? ಅಥವಾ ಆಕೆಯನ್ನು ಒಬ್ಬ ಪರತಂತ್ರವೈಶ್ಯನುಗೆದ್ದಿರುವನೋ? ಎಲಾ, ಆಕೆಯನ್ನು ಗೆದ್ದುಕೊಂಡು ಹೋಗಿರುವವನು ಕ್ಷತ್ರಿಯನಿರುವನೋ, ಶ್ರೇಷ್ಠವರ್ಣದ ಬ್ರಾಹ್ಮಣನಿರುವನೋ? ಕೇವಲಶೌರ್ಯದಿಂದ ನನ್ನ ಕೃಷ್ಣೆಯನ್ನು ಬಲಾತ್ಕಾರದಿಂದ ಅಪಹರಿಸಿ, ಒಬ್ಬ ಹೀನವರ್ಣದವನು ಬುದ್ಧಿಪೂರ್ವಕವಾಗಿ, ತನ್ನ ಎಡಗಾಲನ್ನು ನನ್ನ ತಲೆಯಮೇಲೆ ಇಟ್ಟಿರುವನೋ? ಆದರೆ ಪುತ್ರಾ, ನೀನು ಆನಂದದಿಂದಿರುವದರಿಂದ ಆ ನರಶ್ರೇಷ್ಠ ಅರ್ಜುನನೊಡನೆ ನಮ್ಮ ಸಂಬಂಧವಾದ ಸಂಶಯವುನನಗೆ ಬರುತ್ತದೆ; ಆದ್ದರಿಂದ ಇದ್ದ ಸಂಗತಿಯನ್ನು ಬೇಗನೆಹೇಳು.

---

## ಶ್ರೀ ಶೇಷಸದ್ಗುರು-ಸೂಕ್ತಿರೂಪ

# ರಹಸ್ಯಗಳು

**(೪) ಆರ್ಯಸ್ತ್ರೀಯರು ಧರ್ಮಮಯರು**— ಈ ಉಪಪರ್ವದಲ್ಲಿ ಅರ್ಜುನನು ಧನುರ್ಭಂಗಮಾಡಿದಕೂಡಲೆ, ದ್ರೌಪದಿಯು ಆತನನ್ನು ಹಿಂಬಾಲಿಸಿಹೋಗಿ, ಹಾಗು ರಾತ್ರಿ ಆತನ ಕಾಲಿಡೆಸೆಯಲ್ಲಿ ಮಲಗಿ ತನ್ನ

ಪತ್ನೀಧರ್ಮವನ್ನು ಪಾಲಿಸಿದಳು ; ಮತ್ತು ಅತ್ತೆಯಾದ ಕುಂತಿಯ ಅಪ್ಪಣೆಯಂತೆ, ಆ ತನ್ನ ಅತ್ತೆಯು ತನಗೆ ಹಿತವನ್ನೇ ಹೇಳುವಳೆಂಬ ಸದ್ಭಾವದಿಂದ ಪಾಂಡವರಿಗೆ ಭಿಕ್ಷಾನ್ನವನ್ನು ಹಂಚಿ, ತನ್ನ ಸೊಸೆಯ ಧರ್ಮವನ್ನು ಪಾಲಿಸಿದಳು. ಹೀಗೆ ರಾಜಪುತ್ರಿಯಾದ ದ್ರೌಪದಿಯು ತಟ್ಟನೆ ಧರ್ಮ ಪಾಲಿಸಿದ್ದನ್ನು ನೋಡಿದರೆ, ಆರ್ಯಸ್ತ್ರೀಯರು ಧರ್ಮಮಯರು, ಅಥವಾ ಧರ್ಮಮೂರ್ತಿಗಳು ಎಂಬ ಮಾತು ನಿಶ್ಚಿತವಾಗುತ್ತದೆ. ತಾನು ರಾಜಪುತ್ರಿಯಿದ್ದು, ಪತಿಯ ಪರಿವಾರದ ಕುಂಬಾರನಮನೆಯ ವಾಸದಿಂದಾಗಲಿ, ಪತಿಯ ಭಿಕ್ಷಾವೃತ್ತಿಯಿಂದಾಗಲಿ, ಭಿಕ್ಷೆಯೇ ಕುಲವ್ರತವಾಗಿರುವ ಪತಿಯ ಬ್ರಾಹ್ಮಣ್ಯದಿಂದಾಗಲಿ ದ್ರೌಪದಿಯು ವಿಷಾದ ಪಡದೆಯಿರುವದು, ಈಗಿನ ಧರ್ಮಭ್ರಷ್ಟಕಾಲದಲ್ಲಿ ಅದ್ಭುತವಾಗಿ ತೋರಿದರೆ ಆಶ್ಚರ್ಯವಲ್ಲ.

ಯಾವಕಾಲದಲ್ಲಿಯೇ ಆಗಲಿ, ಪುರುಷರಷ್ಟು ಸ್ತ್ರೀಯರು ಧರ್ಮಭ್ರಷ್ಟರಾಗಿರುವದಿಲ್ಲ. ರಾಮಾಯಣದ ಧರ್ಮಪ್ರಧಾನಕಾಲದಲ್ಲಿ ರಾವಣನು ಧರ್ಮಭ್ರಷ್ಟನು, ಆದರೆ ಆತನ ಹೆಂಡತಿ ಮಂಡೋದರಿಯು ಧರ್ಮಿಷ್ಠಳು. ಮಹಾಭಾರತದ ಕುಟಿಲತಂತ್ರದ ಹೀನಕಾಲದಲ್ಲಿ ಧೃತರಾಷ್ಟ್ರ, ದುರ್ಯೋಧನರು ಧರ್ಮಭ್ರಷ್ಟರು ; ಆದರೆ ಅವರ ಹೆಂಡಿರಾದ ಕ್ರಮವಾಗಿ ಗಾಂಧಾರಿ—ಭಾನುಮತಿಯರು ಧರ್ಮಿಷ್ಠರು. ಕಾಲಮಹಿಮೆಯಿಂದ ನಮ್ಮಲ್ಲಿ ಧರ್ಮಭ್ರಷ್ಟತೆಯು ಹೆಚ್ಚುತ್ತ ಹೆಚ್ಚುತ್ತ, ಈಗ ನಮ್ಮ ಧರ್ಮಭ್ರಷ್ಟತೆಯ ಮಿತಿಯು ಮೀರುತ್ತ ಬಂದಿದ್ದರೂ, ಇಂಥ ಹೀನಕಾಲದಲ್ಲಿಯೂ, ನಮ್ಮಲ್ಲಿ ಧರ್ಮನಿಷ್ಠರ ಸಂಖ್ಯೆಯು ಪುರುಷರಿಗಿಂತ ಸ್ತ್ರೀಯರಲ್ಲಿ ಹೆಚ್ಚು ಇರುವದು. ಪ್ರಾಚೀನಕಾಲದಲ್ಲಿಯ ಸಾವಿತ್ರಿಯಂಥ ಎಷ್ಟೋ ಧರ್ಮವೃತ್ತಿಯ ಸಾಧ್ವಿಯರು, ಈಗಿನಕಾಲದಲ್ಲಿಯೂ ತಾವು ಉದ್ಧೃತರಾಗುವದಲ್ಲದೆ, ತಮ್ಮ ಗಂಡಂದಿರನ್ನು ಉದ್ಧರಿಸುತ್ತಿರಬಹುದು.

ಸ್ತ್ರೀಯರ ಈ ಧರ್ಮಮಯವೃತ್ತಿಯ ಮಹಿಮೆಯು ಸಾಮಾನ್ಯವಾದದ್ದಲ್ಲ, ಅದು ಪ್ರಸಂಗವಿಶೇಷದಲ್ಲಿ ದೇವರನ್ನೂ ಹಿಡಿದು ಎಳತರಬಹುದೆಂಬದಕ್ಕೆ ದ್ರೌಪದಿಯ ವಸ್ತ್ರಾಪಹರಣವೇ ಸಾಕ್ಷಿಯಾಗಿರುವದು! ಇಂಥ ಪವಿತ್ರಸ್ತ್ರೀಯರ ಸಹವಾಸದಿಂದ ಪುರುಷರೂ ಧರ್ಮಿಷ್ಠರಾಗಿ, ಅವರಿಬ್ಬರ ಧರ್ಮಸಮ್ಮತ ಬ್ರಹ್ಮಚರ್ಯಪಾಲನದಿಂದ ಅವರ ಸಂತತಿಯು

ಶಾರೀರಬಲ–ಬುದ್ಧಿಬಲಗಳ ಅಭಿವೃದ್ಧಿಯಾಗಿ ರಾಷ್ಟ್ರದ ತೇಜೋವೃದ್ಧಿಗೆ ಸಹಾಯವಾಗುವದು. ಧಾರ್ಮಿಕಸ್ತ್ರೀಯರಲ್ಲಿ ಅಗ್ರಗಣ್ಯಳಾದ ದ್ರೌಪದಿಯ ಉಸಾಬರಿಗೆ ಹೋದದ್ದರಿಂದಲೇ ದುಶ್ಶಾಸನನ ಆಯುಷ್ಯವು ಕ್ಷೀಣವಾಯಿತು ; ದುರ್ಯೋಧನನ ವಂಶದ ಕ್ಷಯವಾಯಿತು. ಸಭೆಯಲ್ಲಾದ ಆ ಪತಿವ್ರತೆಯ ವಿಡಂಬನೆಯನ್ನು ನೋಡಿ ಸುಮ್ಮನಿದ್ದ ತಪ್ಪಿಗಾಗಿ, ಕ್ಷತ್ರಿಯಕುಲದ ನಾಶವಾಯಿತು ! ಭಾರತದ ಯುದ್ಧಕ್ಕೆ ಪಾಂಡವರು ಕಾರಣರಲ್ಲ, ದ್ರೌಪದಿಯು ಕಾರಣಳು ! ಹೀಗೆ ಸಾಧ್ವೀಸ್ತ್ರೀಯರು ದುಷ್ಟರನ್ನು ಪ್ರತ್ಯಕ್ಷವಾಗಿ ನಾಶಮಾಡದಿದ್ದರೂ, ತಮ್ಮ ಪಾತಿವ್ರತ್ಯದ ಮಹಿಮೆಯಿಂದ ಗೂಢವಾದ ದೈವೀಶಕ್ತಿಯನ್ನು ಜಾಗ್ರತಗೊಳಿಸಿ, ಪರ್ಯಾಯದಿಂದ ಆ ದುಷ್ಟರ ನಾಶಕ್ಕೆ ಕಾರಣರಾಗುವರು ! ಒಟ್ಟಿಗೆ, ರಾಷ್ಟ್ರದ ತೇಜ–ಬಲಗಳ ವೃದ್ಧಿಗೆ ಧರ್ಮಿಷ್ಠಸ್ತ್ರೀಯರೇ ಕಾರಣರಾಗಿರುವದರಿಂದ, ಅವರ ಧರ್ಮನಾಶಕ ಸ್ವಚ್ಛಂದವೃತ್ತಿಯು ನಿಶ್ಚಯವಾಗಿ ರಾಷ್ಟ್ರದ ಅವನತಿಗೆ ಕಾರಣವಾಗಿರುವದೆಂದು ತಿಳಿಯಬೇಕು.



## ೧೩ ವೈವಾಹಿಕಪರ್ವ

**೧೯೩ನೇ ಅಧ್ಯಾಯ—ದ್ರುಪದನಿಗೆ ಧೃಷ್ಟದ್ಯುಮ್ನನ ಉತ್ತರವು**—ತಂದೆಯ ಈ ಪ್ರಶ್ನಗಳನ್ನು ಕೇಳಿ ಧೃಷ್ಟದ್ಯುಮ್ನನು ತಾನು ನೋಡಿದ ಭೀಮಾರ್ಜುನರ ಪರಾಕ್ರಮವನ್ನೂ, ದ್ರೌಪದಿಯು ಅರ್ಜುನನ ಕೃಷ್ಣಾಜಿನವನ್ನು ತಕ್ಕೊಂಡು ಆತನ ಬೆನ್ನುಹತ್ತಿ ಹೋದದ್ದನ್ನೂ, ಕುಂಬಾರನ ಮನೆಯಲ್ಲಿ ತಾನು ನೋಡಿದ ಸಂಗತಿಯೆಲ್ಲವನ್ನೂ ಒಂದುಳಿಯದಂತೆ ಹೇಳಿ, ಮತ್ತೆ ತಂದೆಯನ್ನು ಕುರಿತು—“ಅಪ್ಪಾ, ರಾತ್ರಿ ಅವರು ಮಲಗಿದಾಗ ಆಡಿದ ಮಾತುಗಳನ್ನು ಕೇಳಿದರೆ, ಅವರು ನಿಶ್ಚಯವಾಗಿ ಕ್ಷತ್ರಿಯರಿರುವರೆಂದು ನನಗೆ ತರ್ಕವಾಗುತ್ತದೆ ; ಅಲ್ಲದೆ, ಪಾಂಡುಪುತ್ರನಾದ ಅರ್ಜುನನಿಗೆ ಕೃಷ್ಣೆಯನ್ನು ಅರ್ಪಿಸಬೇಕೆಂಬ ತಮ್ಮ ಇಚ್ಛೆಯೂ ಪೂರ್ಣವಾದಂತೆ ತೋರುತ್ತದೆ; ಯಾಕಂದರೆ ಅರ್ಜುನನಹೊರತು ಮತ್ತೊಬ್ಬರು ಹಾಗೆ ಆಯಾಸವಿಲ್ಲದೆ ಲಕ್ಷ್ಯಭೇದವನ್ನು ಮಾಡಬಹುದೆ?

ಕುಂಬಾರನ ಮನೆಯಲ್ಲಿರುವ ಆ ಐವರನ್ನೂ, ಅವರ ತಾಯಿಯಂತೆ ತೋ ರುವ ಒಬ್ಬ ಹೆಣ್ಣುಮಗಳನ್ನೂ ನೋಡಿದರೆ, ಅವರು ತಾಯಿಯೊಡನೆ ಗುಪ್ತರೀತಿಯಿಂದ ಸಂಚರಿಸುತ್ತಿರುವ ಪಾಂಡವರಿರಬಹುದೆಂದು ನನಗೆ ತೋರುತ್ತದೆ" ಎಂದು ಹೇಳಲು, ದ್ರುಪದನಿಗೆ ಬಹಳ ಆನಂದವಾಯಿತು. ಆತನು ಕೂಡಲೆ ತನ್ನ ಪುರೋಹಿತನನ್ನು ಕುಲಾಲನಮನೆಗೆ ಕಳಿಸಿ, ಅವರು ಯಾರಿರುವರೆಂಬದನ್ನು ನಿಶ್ಚಯದಿಂದ ತಿಳಿದುಕೊಂಡು ಬರಲು, ಹೇಳಿ ದನು. ಆಗ ಪುರೋಹಿತನು ಪಾಂಡವರಬಳಿಗೆ ಬಂದು ಅವರ ಶ್ಲಾಘನ ಮಾಡಿ—"ನಿಮ್ಮಲ್ಲಿ ಲಕ್ಷ್ಯಭೇದಮಾಡಿದ ಪುರುಷಶ್ರೇಷ್ಠನನ್ನು ನೋಡಿ ನಮ್ಮ ದ್ರುಪದರಾಜನಿಗೆ ಬಹಳ ಸಂತೋಷವಾಗಿದೆ. ನಮ್ಮ ಆ ರಾಜನು ನೀವು ಬೇಡಿದ್ದನ್ನು ಕೊಟ್ಟು ನಿಮ್ಮನ್ನು ಸಂತುಷ್ಟರಾಗಿ ಮಾಡಬೇಕೆಂದು ಇಚ್ಛಿಸುತ್ತಿರುವನು; ಆದ್ದರಿಂದ ನೀವು ದಯಮಾಡಿ ನಿಮ್ಮ ಕುಲಪರಂ ಪರೆಯನ್ನು ಹೇಳಬೇಕು; ಅಂದರೆ, "ಬ್ರಾಹ್ಮಣರು ದ್ರುಪದಕನ್ಯೆಯನ್ನು ಒಯ್ದ"ರೆಂದು ದೋಷವಿಡುವ ದುಷ್ಟರ ಮಾನಖಂಡನವಾಗಿ, ನನಗೂ, ನಮ್ಮ ಅರಸನಿಗೂ, ಯಾವತ್ತೂ ಪರಿವಾರಕ್ಕೂ ಬಹಳ ಸಂತೋಷವಾಗು ವದು. ದ್ರುಪದರಾಜನ ಮನಸ್ಸಿನಲ್ಲಿ ಅರ್ಜುನನಿಗೆ ತನ್ನ ಮಗಳನ್ನು ಕೊಡಬೇಕೆಂದು ಬಹಳ ಇತ್ತು" ಎಂದು ನುಡಿದು, ಪುರೋಹಿತನು ವಿನ ಯದಿಂದ ನಿಂತುಕೊಳ್ಳಲು, ಯುಧಿಷ್ಠಿರನ ಅಪ್ಪಣೆಯಂತೆ ಭೀಮನು ರಾಜಮಾನ್ಯನಾದ ಆ ಪುರೋಹಿತನನ್ನು ಯಥಾವಿಧಿಪೂಜಿಸಿ ಸತ್ಕರಿಸಿದನು. ಬಳಿಕ ಯುಧಿಷ್ಠಿರನು ಪುರೋಹಿತನನ್ನು ಕುರಿತು—"ಎಲೈ ಬ್ರಾಹ್ಮಣ ಶ್ರೇಷ್ಠನೇ, ದ್ರುಪದನು ಕ್ಷತ್ರಿಯಧರ್ಮವನ್ನನುಸರಿಸಿ ಸ್ವಯಂವರವನ್ನು ಹೂಡಿದನು. ಅದಕ್ಕೆ ದ್ರೌಪದಿಯ ಒಪ್ಪಿಗೆಯೂ ಇತ್ತು. ಲಕ್ಷ್ಯವನ್ನು ಭೇದಿಸಿದವರಿಗೆ ದ್ರೌಪದಿಯನ್ನು ಕೊಡುವ ಪಣವಿದ್ದ ಬಳಿಕ, ದ್ರೌಪದಿ ಯನ್ನು ಯಾರು ಮದುವೆಯಾದರೇನು? ಅವರ ಕುಲಗೋತ್ರಗಳನ್ನು ಕೇಳಿ ಮಾಡುವದೇನು? ಆದರೂ ದ್ರುಪದನು ಅಸಮಾಧಾನಪಡುವ ಕಾರಣವಿಲ್ಲ. ದ್ರೌಪದಿಯು ಯೋಗ್ಯಸ್ಥಾನವನ್ನೇ ಹೊಂದಿರುವಳು. ನಾವು ಭಿಕ್ಷುಕರಾಗಿ ತೋರಿದರೂ ನಮ್ಮಿಂದ ದ್ರೌಪದಿಯನ್ನು ಅಪಹರಿಸ ಲಿಕ್ಕೆ ತ್ರೈಲೋಕ್ಯದಲ್ಲಿ ಯಾರೂ ಸಮರ್ಥರಾಗಲಾರರು" ಎಂದು ಹೇಳಿ

ದನು. ಅಷ್ಟರಲ್ಲಿ ಮತ್ತೊಬ್ಬ ದೂತನು ಬಂದು ಭೋಜನದ ಸಿದ್ಧತೆ ಯಾಗಿರುವದೆಂದು ಹೇಳಿದನು. ಆಗ ಪಾಂಡವರು ನಿತ್ಯಕರ್ಮಗಳನ್ನು ತೀರಿಸಿಕೊಂಡು, ಸಿದ್ಧವಾಗಿದ್ದ ರಥದಲ್ಲಿ ಕುಳಿತು ಕೃಷ್ಣೆಯೊಡನೆ ದ್ರುಪದನ ಮನೆಗೆ ನಡೆದರು. ಕೃಷ್ಣೆಯೂ, ಕುಂತಿಯೂ ಒಂದು ರಥದಲ್ಲಿ ಕುಳಿತು. ಕೊಂಡರು. ಮುಂದೆ ಹೋಗಿದ್ದ ಪುರೋಹಿತನ ಮುಖದಿಂದ ಧರ್ಮರಾಜನ ಎಲ್ಲಮಾತುಗಳನ್ನು ಕೇಳಿ, ಅವರು ನಿಜವಾಗಿ ಯಾರಿರುವರೆಂಬದನ್ನು ಪರೀಕ್ಷಿಸುವದಕ್ಕಾಗಿ ದ್ರುಪದರಾಜನು, ಯುದ್ಧೋಪಯೋಗದ, ಶಿಲ್ಪಕಲೆಯ, ಸಂಸಾರೋಪಯೋಗದ, ತಿಂಬುಂಬುವ ವಿವಿಧವಸ್ತುಗಳನ್ನು ಸಂಗ್ರಹಿಸಿದನು. ಪಾಂಡವರ ಭವ್ಯರೂಪಗಳನ್ನೂ, ಅವರ ತೇಜಸ್ಸನ್ನೂ ನೋಡಿ ದ್ರುಪದನಿಗೂ, ಯಾವತ್ತು ಸಚಿವರಿಗೂ, ಮಕ್ಕಳಿಗೂ, ಉಳಿದ ಯಾವತ್ತು ಪರಿವಾರಕ್ಕೂ ಬಹಳ ಸಂತೋಷವಾಯಿತು. ಪಾಂಡವರು ರತ್ನ ಖಚಿತಗಳಾದ ಸಿಂಹಾಸನಗಳಮೇಲೆ ನಿಶ್ಶಂಕೆಯಿಂದ ಕುಳಿತುಕೊಂಡರು. ಅವರಿಗೆ ದ್ರುಪದನ ಐಶ್ವರ್ಯದಿಂದ ಸ್ವಲ್ಪವೂ ಆಶ್ಚರ್ಯವುಂಟಾಗಿದ್ದಿಲ್ಲ. ಅಷ್ಟರಲ್ಲಿ ದಾಸಿಯರು ಬಂಗಾರ-ಬೆಳ್ಳಿಗಳ ಪಾತ್ರೆಗಳಲ್ಲಿ ಷಡ್ರಸಾನ್ನಗಳನ್ನು ಬಡಿಸಲು, ತೃಪ್ತಿಕರವಾದ ಭೋಜನವಾಯಿತು. ದ್ರುಪದನ್ನು ಸಂಗ್ರಹಿಸಿಟ್ಟಿದ್ದ ವಿವಿಧವಸ್ತುಗಳಲ್ಲಿ ಪಾಂಡವರು ಯುದ್ಧೋಪಯೋಗದ ವಸ್ತುಗಳನ್ನು ಮಾತ್ರ ಸ್ವೀಕರಿಸಿದ್ದನ್ನು ನೋಡಿ, "ಇವರು ಕ್ಷತ್ರಿಯರೇ" ಎಂದು ದ್ರುಪದನು ನಿಶ್ಚಯಿಸಿದನು.

**೧೯೪ನೇ ಅಧ್ಯಾಯ—ಧರ್ಮರಾಜನಿಗೆ ದ್ರುಪದನ ಪ್ರಶ್ನೆಗಳು**—ಜನಮೇಜಯಾ, ಬಳಿಕ ದ್ರುಪದನು ಧರ್ಮರಾಜನನ್ನು ಹತ್ತಿರ ಕರೆದು ಬ್ರಾಹ್ಮಣರಿಗೆ ಉಚಿತವಾದ ಉಪಚಾರಗಳನ್ನು ಮಾಡಿ ಆ ತೇಜಸ್ವಿಯಾದ ಕುಂತೀಪುತ್ರನನ್ನು ಕುರಿತು—"ನೀವು ಯಾರು ? ಕ್ಷತ್ರಿಯರೋ, ಬ್ರಾಹ್ಮಣರೋ ? ಗುಣಸಂಪನ್ನರಾದ ವೈಶ್ಯರೋ, ಅಥವಾ ಶೂದ್ರರೋ? ಅಥವಾ ಕೃಷ್ಣೆಯ ಸ್ವಯಂವರವನ್ನು ನೋಡುವ ಉದ್ದೇಶದಿಂದ ಬಂದ ಕಪಟಬ್ರಾಹ್ಮಣವೇಷಧರಿಸಿದ ದೇವತೆಗಳೊ ? ಇವರಲ್ಲಿ ನೀವು ಯಾರಿರುವಿರೆಂಬದನ್ನು ಹೇಳಿರಿ. ಈ ಗೂಢವು ಸ್ಪಷ್ಟವಾಗುವದರಿಂದಲೇ ನನಗೆ ಸಂತೋಷವಾಗಿ, ನಿಮ್ಮ ಭಾಗ್ಯೋದಯವು ಉತ್ತಮ

ರೀತಿಯಿಂದ ಆಗುವದು. ಅರಸನಮುಂದೆ ಸತ್ಯವನ್ನು ಹೇಳುವದೇ ಯೋಗ್ಯವು. ಮಾಡಿದ ಯಜ್ಞಯಾಗಗಳ, ಕಟ್ಟಿದ ಕೆರೆಬಾವಿಗಳ, ನೆರವೇರಿಸಿದ ಬೇರೆ ಸತ್ಕೃತ್ಯಗಳ ಶ್ರೇಯಸ್ಸು ಸುಳ್ಳಿನಿಂದ ನಾಶವಾಗುವದು; ಆದ್ದರಿಂದ ಸುಳ್ಳು ಆಡಬಾರದು. ಎಲೈ ಶತ್ರುಮರ್ದನಾ, ನಿನ್ನ ಭಾಷಣವನ್ನು ಕೇಳಿ ನಾನು ಯಥಾವಿಧಿ ಕೃಷ್ಣೆಯ ಲಗ್ನಮಾಡಬೇಕೆಂದು ನಿಶ್ಚಯಿಸಿರುತ್ತೇನೆ.

ಯುಧಿಷ್ಠಿರ—ಎಲೈ ಪಾಂಚಾಲಪತೇ, ನೀನು ಪ್ರಸನ್ನನಾಗು, ಖಿನ್ನನಾಗಬೇಡ ನಿನ್ನ ಇಷ್ಟಹೇತುವು ನಿಶ್ಚಯವಾಗಿ ಸಿದ್ಧವಾಗಿರುವದೆಂದು ತಿಳಿ. ನಾವು ಜಾತಿಯಿಂದ ಕ್ಷತ್ರಿಯರಾಗಿದ್ದು, ಮಹಾತ್ಮನಾದ ಪಂಡುರಾಜನ ಮಕ್ಕಳಾಗಿದ್ದೇವೆ! ಕುಂತಿಯ ಮಕ್ಕಳಲ್ಲಿ ನಾನು ಹಿರಿಯನು. ರಾಜಸಭೆಯಲ್ಲಿ ಕನ್ಯೆಯನ್ನು ಗೆದ್ದವರು ಭೀಮಾರ್ಜುನರು. ಈ ಅವಳಿಜವಳಿಗಳಿಬ್ಬರು ನಕುಲ–ಸಹದೇವರು. ಕೃಷ್ಣೆಯ ಬಳಿಯಲ್ಲಿ ಕುಳಿತವಳು ನನ್ನ ತಾಯಿಯಾದ ಕುಂತಿಯು. ಮಹಾರಾಜಾ, ನಿಜವಾದ ಸಂಗತಿಯನ್ನು ಹೇಳಿದ್ದೇನೆ. ನಮಗೆ ನೀನು ಹಿರಿಯನು; ನಮ್ಮ ಸರ್ವಾಧಾರವು ನೀನೇ ಆಗಿರುವೆ.

ಜನಮೇಜಯಾ, ಧರ್ಮರಾಜನ ಈ ಮಾತುಗಳನ್ನು ಕೇಳಿ ದ್ರುಪದನಿಗೆ ಪರಮಾನಂದವಾಯಿತು. ಹಸ್ತಿನಾವತಿಯನ್ನು ಬಿಟ್ಟಾಗಿನಿಂದ ಯಾವತ್ತು ವರ್ತಮಾನವನ್ನು ಕುರಿತು ಆತನು ಯುಧಿಷ್ಠಿರನನ್ನು ವಿಚಾರಿಸಿದನು. ಯುಧಿಷ್ಠಿರನೂ ಒಂದುಳಿಯದಂತೆ ಯಾವತ್ತು ಸಂಗತಿಯನ್ನು ಹೇಳಿದನು. ಅದನ್ನು ಕೇಳಿ ದ್ರುಪದನು ಧೃತರಾಷ್ಟ್ರನನ್ನು ಬಹಳವಾಗಿ ನಿಂದಿಸಿ, ಪಾಂಡವರಿಗೆ ಪುನಃ ರಾಜ್ಯವನ್ನು ಸಂಪಾದಿಸಿಕೊಡಲು ಪ್ರತಿಜ್ಞೆ ಮಾಡಿದನು. ಆತನು ಮಕ್ಕಳೊಡನೆ ಪಾಂಡವರನ್ನು ಕುರಿತು—

ದ್ರುಪದ—ಈ ಮಹಾಬಾಹುವಾದ ಅರ್ಜುನನು ಯಥಾವಿಧಿ ಕೃಷ್ಣೆಯ ಪಾಣಿಗ್ರಹಣಮಾಡಬೇಕು. ಇಂದೇ ಮುಹೂರ್ತವು ಚನ್ನಾಗಿರುವದರಿಂದ, ಆತನು ಕುಲಧರ್ಮವೊದಲಾದವನ್ನು ಇಂದೇ ಮಾಡಿಕೊಳ್ಳಲಿ.

ಯುಧಿಷ್ಠಿರ—ಎಲೈ ಲೋಕನಾಥನೇ, ನನಗೂ ದಾರಸಂಗ್ರಹವು ಕರ್ತವ್ಯವಾಗಿರುವದು.

ಈ ರೀತಿಯು ಅಪ್ರಶಸ್ತವಾಗಿ ತೋರುವದು. ಇನ್ನು ಧರ್ಮವು ಸೂಕ್ಷ್ಮ ವಾಗಿರುವದರಿಂದ, ಹೀಗೆಯೇ ಮಾಡಿರೆಂದು ಹೇಳುವ ಸಾಹಸಕ್ಕೆ ನಾನು ಹೋಗುವದಿಲ್ಲ.

ಯುಧಿಷ್ಠಿರ—ನನ್ನ ಮುಖದಿಂದ ಎಂದೂ ಅನೃತವಾಣಿಯು ಹೊರ ಟಿರುವದಿಲ್ಲ. ಅಪ್ರಶಸ್ತವಾದ ಮಾತಿನಕಡೆಗೆ ಸ್ವಾಭಾವಿಕವಾಗಿಯೇ ನನ್ನ ಮನಸ್ಸಿನ ಒಲವು ಇರುವದಿಲ್ಲ. ಅಂದಬಳಿಕ ಈಗಿನ ಪ್ರಸಂಗದಲ್ಲಿ ಬಹು ಪತಿತ್ವಕ್ಕೆ ನನ್ನ ಮನಸ್ಸು ಒಪ್ಪುವದರಿಂದ ಅದು ಧರ್ಮವಿರುದ್ಧವಲ್ಲವೆಂ ಬದು ನನ್ನ ನಿಶ್ಚಯವು. ಪುರಾಣಕಾಲದಲ್ಲಿ ಜಟಿಲಾ ಎಂಬ ಹೆಸರಿನ ಸದಾಚರಣಿಯ ಸ್ತ್ರೀಯು ಏಳುಜನ ಋಷಿಗಳೊಡನೆ ರಮಿಸಿದಳೆಂಬ ಇತಿಹಾಸವು ಉಪಲಬ್ಧವಾಗಿರುವದು. ಅದರಂತೆ "ವಾರ್ಕ್ಷಿ" ಎಂಬ ಹೆಸ ರಿನ ಮುನಿಕನ್ಯೆಯು ತಪಸ್ಸಿನಿಂದ ಶುದ್ಧಚಿತ್ತರಾದ ಪ್ರಾಚೇತಸ ಎಂಬ ಹೆಸರಿನ ಹತ್ತುಜನ ಅಣ್ಣತಮ್ಮಂದಿರೊಡನೆ ಕೂಡಿದಳೆಂದು ಎರಡನೆಯ ಸಾಕ್ಷಿಯು ಇರುವದು. ಎಲೈ ಧರ್ಮಶ್ರೇಷ್ಠನೇ, ಗುರುವಿನ ವಚನವನ್ನೇ ಧರ್ಮವೆಂದು ತಿಳಿಯಬೇಕೆಂದು ಜ್ಞಾನಿಗಳು ಹೇಳುವರು; ತಾಯಿಯು ಎಲ್ಲಗುರುಗಳಲ್ಲಿ ಶ್ರೇಷ್ಠಳೆಂದು ಶಾಸ್ತ್ರವು ಹೇಳುವದು. ಅಂದಬಳಿಕ ತಾಯಿಯ ಮಾತೇ ಧರ್ಮವೆಂದು ಸಿದ್ಧವಾಯಿತು. ಆದ್ದರಿಂದ ದ್ವಿಜ ಶ್ರೇಷ್ಠನೇ, ತಾಯಿಯ ಅಪ್ಪಣೆಯಂತೆ ಈಕೆಯನ್ನು ಐವರೂ ಸ್ವೀಕರಿಸು ವದೇ ನಮ್ಮ ಶ್ರೇಷ್ಠಧರ್ಮವೆಂದು ನಾನು ತಿಳಿಯುವೆನು.

ಕುಂತಿ—ಧರ್ಮಪರಾಯಣನಾದ ಯುಧಿಷ್ಠಿರನು ಹೇಳುವದು ಅಕ್ಷ ರಶಃ ನಿಜವಿರುವದು. ನಾನು ಹಾಗೆ ಐವರೂ ಹಂಚಿಕೊಳ್ಳಿರೆಂದು ಹೇಳಿದ್ದು ನಿಜವು; ಆದರೆ ನನ್ನ ಆ ಮಾತು ಅಧರ್ಮವಾಗಿದ್ದರೆ, ನಾನು ಪಾಪ ಮುಕ್ತಳಾಗುವ ಬಗೆಯು ಹೇಗೆ?

ವ್ಯಾಸ—ಎಲೈ ಕಲ್ಯಾಣೀ, ನೀನು ಚಿಂತಿಸಬೇಡ. ಅಧರ್ಮ ದೋಷದಿಂದ ನೀನು ಮುಕ್ತಳಾಗುವೆ; ಯಾಕಂದರೆ ನೀನು ಹೇಳಿದ್ದು ಸನಾತನಧರ್ಮವನ್ನು ಅನುಸರಿಸಿಯೇ ಇರುವದು. ದ್ರುಪದಾ, ಯುಧಿ ಷ್ಠಿರನು ಹೇಳಿದಂತೆ ಇದು ನಿಶ್ಚಯವಾಗಿ ಧರ್ಮವಿರುವದು; ಆದರೆ ಅದು ಹೇಗೆಂಬದನ್ನು ನಾನು ಏಕಾಂತದಲ್ಲಿ ನಿನಗೆ ಹೇಳುವೆನು ನಡೆ.

**೧೯೭ನೇ ಅಧ್ಯಾಯ-ಪಂಚೇಂದ್ರೋಪಾಖ್ಯಾನ**— ದ್ರುಪದಾ, ಹಿಂದಕ್ಕೆ ದೇವತೆಗಳು ನೈಮಿಷಾರಣ್ಯದಲ್ಲಿ ಸತ್ರವನ್ನು ಆರಂಭಿಸಿದಾಗ, ಯಮನು ಶಾಮಿತ್ರನ (ಪಶುಘಾತಕನ) ಕೆಲಸವನ್ನು ಕೈಕೊಂಡು ದೀಕ್ಷೆ ಹೊಂದಿದ್ದರಿಂದ, ಮನುಷ್ಯರ ಕೊಲ್ಲುವ ಕೆಲಸವನ್ನು ಬಿಟ್ಟುಬಿಟ್ಟನು ; ಆದ್ದರಿಂದ ಮನುಷ್ಯರ ಸಂಖ್ಯೆಯು ಮಿತಿಮೀರಿ ಬೆಳೆಯಿತು. ಆಗ ದೇವತೆಗಳು ಅಂಜಿ ಬ್ರಹ್ಮದೇವನ ಬಳಿಗೆಹೋಗಿ ದೂರಿಕೊಂಡರು. ಆಗ ಬ್ರಹ್ಮದೇವನು ದೇವತೆಗಳನ್ನು ಕುರಿತು—"ದೇವತೆಗಳಿರಾ, ನೀವು ಅಮರರಿದ್ದು, ಮರಣಹೊಂದುತ್ತಿರುವ ಮನುಷ್ಯರಿಗೆ ಯಾಕೆ ಅಂಜುವಿರಿ?" ಎಂದು ಕೇಳಲು, ದೇವತೆಗಳು—"ಬ್ರಹ್ಮದೇವಾ, ಯಮನು ಕೊಲ್ಲುವದನ್ನೇ ಬಿಟ್ಟುಬಿಟ್ಟಿರುವದರಿಂದ ಮನುಷ್ಯರೂ ಈಗ ಅಮರರೇ ಆಗಿರುವರು ; ಆದ್ದರಿಂದ ಮೊದಲಿನ ತಾರತಮ್ಯವು ಈಗ ಉಳಿದಿರುವದಿಲ್ಲ." ಎಂದು ಹೇಳಿದರು. ಅದಕ್ಕೆ ಬ್ರಹ್ಮನು—"ದೇವತೆಗಳಿರಾ, ಅಂಜಬೇಡಿರಿ ; ಯಜ್ಞಸಮಾಪ್ತಿಯಾದಬಳಿಕ ಯಮನ ಕೈತೆರವಾಗಲು, ಆತನ ರೂಪವು ನಿಮ್ಮ ವೀರ್ಯದಿಂದಲೇ ವಿಭಕ್ತವೂ, ವೃದ್ಧಿಂಗತವೂ ಆಗಿ, ಆತನು ಮನುಷ್ಯರ ಭಯಂಕರ ಸಂಹಾರಮಾಡುವನು, ನೀವು ಚಿಂತೆಮಾಡಬೇಡಿರಿ." ಎಂದು ಹೇಳಿದನು.

ದ್ರುಪದಾ, ಬ್ರಹ್ಮದೇವನ ಈ ಮಾತುಗಳನ್ನು ಕೇಳಿ ಇಂದ್ರಾದಿ ದೇವತೆಗಳು ಸತ್ರನಡೆದಲ್ಲಿಗೆ ಹೋಗಿ, ಒಟ್ಟುಗೂಡಿ ಕುಳಿತುಕೊಂಡರು. ಅಷ್ಟರಲ್ಲಿ ಭಾಗೀರಥಿಯಲ್ಲಿ ಒಂದು ಕಮಲವು ಅವರ ದೃಷ್ಟಿಗೆ ಬಿದ್ದಿತು. ಆಗ ಸಮರ್ಥನಾದ ಇಂದ್ರನು ಆ ಕಮಲದಬಳಿಗೆ ಹೋಗಲು, ಒಬ್ಬ ತೇಜಃಪುಂಜಳಾದ ಸುಂದರಿಯು ಭಾಗೀರಥಿಯಲ್ಲಿ ಅಳುತ್ತ ಕಣ್ಣೀರು ಉದುರಿಸುತ್ತಿರಲು, ಹನಿಗೊಂದರಂತೆ ಸುವರ್ಣಕಮಲಗಳು ಉತ್ಪನ್ನವಾಗುತ್ತಿದ್ದವು. ಆಗ ಆ ಇಂದ್ರನು ಇದೇನು ಆಶ್ಚರ್ಯವೆಂದು ಆ ಸ್ತ್ರೀಯನ್ನು ಕೇಳಿದನು. ಅದಕ್ಕೆ ಆಕೆಯು—"ದೇವರಾಜನೇ, ನನ್ನ ಸಂಗಡ ಬಾ. ನಾನು ಇಲ್ಲಿ ಯಾಕೆ ಅಳುತ್ತಿರುವೆನೆಂಬದರ ಕಾರಣವು ನಿನಗೆ ಗೊತ್ತಾಗುವದು." ಎಂದು ಹೇಳಿ, ಆತನನ್ನು ಹಿಮಾಲಯದ ಶಿಖರದ ಮೇಲೆ ಕರೆದುಕೊಂಡು ಹೋದಳು. ಅಲ್ಲಿ ಸಿದ್ಧಾಸನದಿಂದ ಒಬ್ಬ ತರು

ಣನು ತರುಣಿಯೊಡನೆ ಲೆತ್ತನಾಡುತ್ತಿದ್ದನು. ತಾನು ತ್ರಿಲೋಕಗಳ ಅಧಿಪತಿಯಾಗಿದ್ದು, ತನ್ನನ್ನು ಈ ತರುಣನು ಮನ್ನಿಸುವದಿಲ್ಲವೆಂಬ ಅಹಂಕಾರದಿಂದ ಇಂದ್ರನು ಆ ತರುಣನನ್ನು ಕುರಿತು—"ಎಲೈ ವಿದ್ವನ್, ಈ ಭುವನವು ನನ್ನ ಅಧಿಕಾರದಲ್ಲಿರುವದೆಂಬದು ನಿನಗೆ ಗೊತ್ತಿಲ್ಲವೆ?" ಎಂದು ಕೇಳಿದನು; ಆದರೆ ಆ ತರುಣನು ದ್ಯೂತಮಗ್ನನಾದದ್ದರಿಂದ ಇಂದ್ರನ ಈ ಮಾತನ್ನು ಲೆಕ್ಕಿಸಲೇ ಇಲ್ಲವು ಅದನ್ನು ನೋಡಿ ಇಂದ್ರನು ಸಿಟ್ಟಾಗಿ-"ಎಲೈ ತರುಣಾ, ನಾನು ಈ ಸ್ಥಳದ ಸ್ವಾಮಿಯೆಂಬದನ್ನು ನೀನು ಅರಿತಿಲ್ಲವೆ ?" ಎಂದು ಮತ್ತೆ ಕೇಳಿದನು.

ದ್ರುಪದಾ, ಇಂದ್ರನ ಈ ಮಾತುಗಳನ್ನು ಕೇಳಿ ದೇವಾಧಿದೇವನಾದ ಶಂಕರನಿಗೆ ಮೊದಲು ನಗೆಬಂದಿತು ಆಮೇಲೆ ಸಾವಕಾಶವಾಗಿ ಆತನು ಇಂದ್ರನ ಕಡೆಗೆ ದಿಟ್ಟಿಸಿ ನೋಡತೊಡಗಿದನು ಅವರಿಬ್ಬರ ದೃಷ್ಟಿಗಳು ಕೂಡಲು, ಇಂದ್ರನ ಕೈಕಾಲು ತಣ್ಣಗಾದವು. ಆತನ ಎತ್ತಿದ ವಜ್ರಾಯುಧವು ಕಳಚಿಬಿದ್ದಿತು. ಲೆತ್ತದ ಆಟವು ಮುಗಿದಬಳಿಕ ಶ್ರೀಶಂಕರನು ಆ ಸ್ತ್ರೀಯನ್ನು ಕರೆದು—"ಆ ಇಂದ್ರನನ್ನು ಇತ್ತ ನನ್ನ ಹತ್ತರ ಕರೆದುಕೊಂಡು ಬಾ! ಆತನಿಗೆ ಪುನಃ ಗರ್ವವು ಉಂಟಾಗದಂತೆ ಮಾಡಿಬಿಡುವೆನು." ಎಂದು ಹೇಳಲು, ಆ ಸ್ತ್ರೀಯು ಇಂದ್ರನ ಕೈಹಿಡಿದಳು. ಆಕೆಯ ಹಸ್ತಸ್ಪರ್ಶವಾದಕಡಲೆ ಇಂದ್ರನ ಕೈಕಾಲ ನರಗಳು ಸತ್ತು ಆತನು ನೆಲಕ್ಕೆ ಬಿದ್ದನು. ಅದನ್ನು ನೋಡಿ ಉಗ್ರತೇಜಸ್ವಿಯಾದ ಶಂಕರನು ಆತನನ್ನು ಕುರಿತು—"ಇಂದ್ರಾ, ಇನ್ನುಮೇಲೆ ಹೀಗೆ ಗರ್ವಿಷ್ಠನಾಗಬೇಡ. ನಿನ್ನ ಬಲ–ವೀರ್ಯಗಳು ಅತರ್ಕ್ಯವಾಗಿರುವದರಿಂದ, ಇದಿಷ್ಟು ಹಿಮಾಲಯಪರ್ವತವನ್ನು ಒತ್ತಟ್ಟಿಗೆ ಸರಿಸು. ಅದರ ಬುಡದಲ್ಲಿರುವ ವಿವರದಲ್ಲಿ ನೀನು ಸೇರು. ಅಲ್ಲಿ ನಿನ್ನಂತೆಯೇ ತೇಜಸ್ವಿಗಳಾದ ನಾಲ್ಕು ಜನ ಪುರುಷರಿರುವರು." ಎಂದು ಹೇಳಿದನು. ಆಗ ಶಿವಾಜ್ಞೆಯಂತೆ ಇಂದ್ರನು ಹಿಮಾಲಯವನ್ನು ಸರಿಸಲು, ಬಿಲದಲ್ಲಿ ತನ್ನಂತಹ ನಾಲ್ಕು ಜನ ಪುರುಷರನ್ನು ಕಂಡು, "ತನ್ನ ಗತಿಯು ಇದರಂತೆಯೇ ಆಗುವದೋ ಏನೋ" ಎಂದು ಚಿಂತಿಸಿದನು. ಆಗ ಶಂಕರನು ಸಿಟ್ಟಿನಿಂದ—"ಇಂದ್ರಾ, ನೀನು ಮೂರ್ಖತನದಿಂದ ಮೊದಲು ನನ್ನ ಅಪಮಾನ ಮಾಡಿರುವೆ; ಅದ್ದ

ರಿಂದ ಪಿಟ್ಟಿಂದು ಮಾತಾಡದೆ ಈ ವಿವರವನ್ನು ಪ್ರಶ್ನಿಸು. ಹೀಗಾಗದೆ ನಿನ್ನ ಸೊಕ್ಕು ಇಳಿಯಲಾರದು.'' ಎಂದು ಹೇಳಿದನು.

ಶ್ರೀ ಶಂಕರನ ಈ ಮಾತುಗಳನ್ನು ಕೇಳಿ ಇಂದ್ರನು ಆ ಭಗವಂತನನ್ನು ಅಂಗಲಾಚಿ ಬೇಡಿಕೊಳ್ಳಹತ್ತಿದನು. ಆಗ ಶಂಕರನು–''ಇಂದ್ರಾ ನಿನಗೂ, ಈ ನಾಲ್ಕುಜನರಿಗೂ ಬಹಳ ಸೊಕ್ಕು ಇರುವದು. ನಿನ್ನನ್ನು ಹೀಗೆ ಶಿಕ್ಷಿಸುವದೇ ಯೋಗ್ಯವು; ಆದರೆ ನೀನು ಬೇಡಿಕೊಳ್ಳುವದರಿಂದ ನಾನು ನಿಮಗೆ ಹೀಗೆ ಹೇಳುವೆನು ನೀವು ಐವರೂ ಮನುಷ್ಯಯೋನಿಯಲ್ಲಿ ಹುಟ್ಟುವಿರಿ. ನೀವು ಇತರರಿಗೆ ಅಸಹ್ಯವಾದ ಉಗ್ರಪರಾಕ್ರಮವನ್ನು ಮಾಡಿ, ಸಾವಿರಾರು ಜನರನ್ನು ಸಂಹರಿಸುವಿರಿ. ಆಮೇಲೆ ಸ್ವಕರ್ಮಾರ್ಜಿತವೂ, ಮಹಾಪುರುಷಸೇವಿತವೂ ಆದ ಇಂದ್ರಲೋಕವನ್ನು ಕುರಿತು ಪ್ರಾಪ್ತರಾಗುವಿರಿ. ನಾನು ಹೇಳುವದರಲ್ಲಿ ಅನೇಕ ಹೇತುಗಳಿರುವದರಿಂದ, ನಾನು ಹೇಳಿದಂತೆ ನೀವು ಮಾಡಿರಿ'' ಎಂದು ಹೇಳಿದನು. ಅದಕ್ಕೆ ಪೂರ್ವೇಂದ್ರರು—''ಶಂಕರಾ, ಒಮ್ಮೆ ಮನುಷ್ಯಯೋನಿಯಲ್ಲಿ ಹುಟ್ಟಿದಬಳಿಕ, ಅದರಿಂದ ಬಿಡುಗಡೆಯಾಗುವದು ಪರಮದುಸ್ತರವು; ಆದರೂ ನಿನ್ನ ಆಜ್ಞೆಯನ್ನು ಶಿರಸಾವಹಿಸಿ ದೇವಯೋನಿಯಿಂದ ಮನುಷ್ಯಯೋನಿಗೆ ಹೋಗುವೆವು; ಆದರೆ ಅಲ್ಲಿ ಯಮಧರ್ಮ, ವಾಯು, ಇಂದ್ರ, ಅಶ್ವಿನೀಕುಮಾರರು ಎಂಬ ಐದು ದೇವತೆಗಳಿಂದ ನಮ್ಮ ಗರ್ಭವು ಮಾನುಷಜನನಿಯ ಉದರದಲ್ಲಿ ಸ್ಥಾಪಿತವಾಗಬೇಕು; ಮತ್ತು ನಮಗೆ ಮುಂದೆ ದಿವ್ಯಾಸ್ತ್ರಗಳು ಪ್ರಾಪ್ತವಾಗಬೇಕು; ಅಂದರೆ ನಾವು ಈಗ ಮಿತಿಮೀರಿ ಸಂಖ್ಯೆಯು ಬೆಳೆದಿರುವ ಮನುಷ್ಯರ ನಿಃಪಾತಮಾಡಿ, ತಿರುಗಿ ಇಂದ್ರಲೋಕಕ್ಕೆ ಬರುವೆವು.

ದ್ರುಪದಾ, ಪೂರ್ವೇಂದ್ರರ ಈ ಮಾತುಗಳನ್ನು ಕೇಳಿ, ಸದ್ಯದಲ್ಲಿ ಅಧಿಕಾರಾರೂಢನಾಗಿರುವ ಐದನೆಯ ಇಂದ್ರನು ಶಂಕರನನ್ನು ಕುರಿತು–''ಆಗಲಿ, ಈ ನಾಲ್ವರು ಮನುಷ್ಯಯೋನಿಯಲ್ಲಿ ಹುಟ್ಟುತ್ತಿದ್ದರೆ, ನನ್ನ ಬದಲು ನನ್ನ ಅಂಶಭೂತನಾದ ಒಬ್ಬ ಪುರುಷನನ್ನು ಇವರ ಸಹಾಯಕ್ಕಾಗಿ ಕೊಡುವೆನು.'' ಎಂದು ಹೇಳಿದನು. ರಾಜಾ, ಹೀಗೆ ವಿಶ್ವಭುಕ್, ಭೂತಧಾಮಾ, ಶಿಬಿ, ಶಾಂತಿ ಎಂಬ ಆ ನಾಲ್ಕುಜನ ಪೂರ್ವೇಂದ್ರರ,

ಹಾಗು ಪ್ರಕೃತದ ಐದನೆಯ ಇಂದ್ರನ ಬೇಡಿಕೆಯನ್ನು ಭೋಲಾಶಂಕರನು ಒಪ್ಪಿಕೊಂಡು, ಆ ಅಳುತ್ತಿರುವ ತ್ರಿಭುವನಸುಂದರಿಯಾದ ಸ್ವರ್ಗ ಲಕ್ಷ್ಮಿಯು, ಮೃತ್ಯುಲೋಕದಲ್ಲಿ ಈ ಐವರ ಪತ್ನಿಯಾಗುವಂತೆ ನಿಯಮಿಸಿದನು. ಬಳಿಕ ಆ ಆರುಜನರನ್ನು ಕರಕೊಂಡು ಅತರ್ಕ್ಯನೂ, ಅನಂತನೂ, ಅನಾದಿಯೂ, ಅವ್ಯಕ್ತನೂ, ಪುರಾಣನೂ, ಸನಾತನನೂ, ವಿಶ್ವರೂಪನೂ ಆದ ನಾರಾಯಣನ ಬಳಿಗೆ ಹೋಗಲು, ಆತನೂ ಶಂಕರನ ಸಂಕೇತವನ್ನು ಒಪ್ಪಿಕೊಂಡು, ತನ್ನ ಒಂದು 'ಕರಿಯಕೂದಲನ್ನೂ, ಒಂದು ಬಿಳಿಯ ಕೂದಲನ್ನೂ ಅಂದರೆ ಕೇಶರೂಪ ಎರಡು ಶಕ್ತಿಗಳನ್ನು ಯಾದವಕುಲದೊಳಗಿನ ದೇವಕಿ-ರೋಹಿಣಿಯರಲ್ಲಿ ಕ್ರಮವಾಗಿ ಸ್ಥಾಪಿಸಿದನು. ಅವುಗಳಲ್ಲಿ ಶುಭ್ರಕೇಶವು ಬಲರಾಮನಾಗಿಯೂ, ಕೃಷ್ಣಕೇಶವು ಕೃಷ್ಣನಾಗಿಯೂ, ಐವರು ಇಂದ್ರರು ಪಂಚಪಾಂಡವರಾಗಿಯೂ, ಸ್ವರ್ಗಲಕ್ಷ್ಮಿಯು ದ್ರೌಪದಿಯಾಗಿಯೂ ಭೂಭಾರಹರಣಕ್ಕಾಗಿ ಹುಟ್ಟಿರುವರು. ದ್ರುಪದಾ, ಹೀಗೆ ದೈವೀಸಂಕೇತವಿಲ್ಲದಿದ್ದರೆ, ಯಜ್ಞವೇದಿಕೆಯಿಂದ ಆಶ್ಚರ್ಯಕಾರಕರಾದ ಇಬ್ಬರು ಮಕ್ಕಳು ನಿನಗೆ ಹುಟ್ಟಬಹುದೆ? ನಿನ್ನ ನಂಬಿಗೆಗಾಗಿ ನಾನು ನಿನಗೆ ದಿವ್ಯದೃಷ್ಟಿಗಳನ್ನು ಕೊಡುವೆನು; ಅಂದರೆ ಈ ಕುಂತೀಪುತ್ರರ ಪೂರ್ವದ ಇಂದ್ರರೂಪಗಳೂ, ದ್ರೌಪದಿಯ ಪೂರ್ವದ ಸ್ವರ್ಗಲಕ್ಷ್ಮಿಯ ರೂಪವೂ ನಿನ್ನ ಕಣ್ಣಿಗೆ ಬೀಳುವವು" ಎಂದು ಹೇಳಿ, ದ್ರುಪದನಿಗೆ ದಿವ್ಯದೃಷ್ಟಿಗಳನ್ನು ಕೊಟ್ಟರು. ಆಗ ಆ ಆರುಜನರ ಪೂರ್ವದ ದಿವ್ಯರೂಪಗಳನ್ನು ನೋಡಿ ದ್ರುಪದನು ಆಶ್ಚರ್ಯಪಟ್ಟು ವ್ಯಾಸರನ್ನು ಕುರಿತು—"ಎಲೈ ಮಹರ್ಷೇ, ಇಂಥ ಚಮತ್ಕಾರವನ್ನು ತೋರಿಸುವದು ತಮ್ಮಂಥ ಸಮರ್ಥರಿಗೆ ಸಹಜಸಾಧ್ಯವು" ಎಂದು ಹೇಳಿದನು. ಆಗ ಮತ್ತೆ ವ್ಯಾಸರು ದ್ರುಪದನಿಗೆ—"ದ್ರುಪದಾ, ದ್ರೌಪದಿಗೆ ಐವರು ಗಂಡಂದಿರಾಗಲಿಕ್ಕೆ ಪೂರ್ವಜನ್ಮದಲ್ಲಿ ಆಕೆಗಾಗಿದ್ದ ಭಗವಾನ್ ಶಂಕರನ ವರವೇ ಕಾರಣವು. ದ್ರೌಪದಿಯು ಪೂರ್ವದಲ್ಲಿ ಒಬ್ಬ ಋಷಿಕುಮಾರಿಯಾಗಿರುವಾಗ, ಯೋಗ್ಯ ಪತಿಯು ಸಿಗಬೇಕೆಂದು ಶ್ರೀ ಶಂಕರನನ್ನು ಕುರಿತು ತಪಶ್ಚರ್ಯಮಾಡಿ ಗಂಡನನ್ನು ಕೊಡೆಂದು ಐದುಸಾರೆ ಬೇಡಿಕೊಳ್ಳಲು, ಶಂಕರನು ನಿನಗೆ ಜನ್ಮಾಂತರದಲ್ಲಿ ಐದುಜನ ಗಂಡಂದಿರಾಗುವರೆಂದು ಹೇಳಿದ್ದರಿಂದ, ಈಗ

ದ್ರೌಪದಿಗೆ ಪಾಂಡವರೈವರು ಗಂಡಂದಿರಾಗುವರು. ದ್ರುಪದರಾಜಾ, ಇನ್ನು ನಿನ್ನ ಮನಸ್ಸಿಗೆ ಸರಿಯಾಗಿ ತೋರಿದಂತೆ ಮಾಡು.

**೧೯೮ನೇ ಅಧ್ಯಾಯ—ದ್ರೌಪದೀ ವಿವಾಹ**- ಮಹಾನುಭಾವ ಮುನೇ, ನಿಮ್ಮ ಈ ಪರಮಯೋಗ್ಯವಾದ ಭಾಷಣವನ್ನು ಕೇಳಿ ನನ್ನ ಯಾವತ್ತು ಸಂಶಯವು ದೂರವಾಯಿತು. ದೈವದಲ್ಲಿದ್ದದ್ದು ತಪ್ಪುವದಿಲ್ಲವೆಂಬ ಮಾತು ಅನುಭವಕ್ಕೆ ಬಂದಿತು. ದ್ರೌಪದಿಗೆ ಒಬ್ಬ ಪತಿಯುದೊರೆಯಬೇಕೆಂದು ನಾನು ಮಾಡಿದ ಯತ್ನದಿಂದಲೇ, ಆಕೆಗೆ ಐದುಜನ ಗಂಡಂದಿರು ದೊರೆತರು; ಆದ್ದರಿಂದ ಪೂರ್ವದಲ್ಲಿ ಪ್ರಾರಬ್ಧವು ಹಾಕಿಟ್ಟದ್ದ ಗಂಟು ಈ ಜನ್ಮದ ಕರ್ಮದಿಂದ ಉಚ್ಚಟ್ಟುವದಿಲ್ಲವೆಂಬ ಮಾತು ಸಿದ್ಧವಾಯಿತು. ಸ್ವತಃ ಶಂಕರನೇ ದ್ರೌಪದಿಗೆ ಐದುಜನ ಗಂಡಂದಿರನ್ನು ನಿಯಮಿಸಿರುವದರಿಂದ, ಅದರಂತೆ ನಡೆಯುವದು ಧರ್ಮವಾಗಲಿ, ಅಧರ್ಮವಾಗಲಿ ಅದರ ದೋಷವು ನನಗಿಲ್ಲವೆಂದು ತಿಳಿದು, ಈ ಐವರಿಗೆ ಅವರ ಇಚ್ಛೆಯಂತೆ ದ್ರೌಪದಿಯ ಪಾಣಿಗ್ರಹಣಮಾಡಲಿಕ್ಕೆ ನಾನು ಒಪ್ಪಿಗೆಯನ್ನು ಕೊಡುವೆನು.

ದ್ರುಪದನ ಈ ಮಾತುಗಳನ್ನು ಕೇಳಿ ಭಗವಾನ್ ವ್ಯಾಸರು ಧರ್ಮರಾಜನನ್ನು ಕುರಿತು—"ಅಪ್ಪಾ ಯುಧಿಷ್ಠಿರಾ, ಇಂದು ಮುಹೂರ್ತವು ಚನ್ನಾಗಿರುವದು. ಸಂಪತ್ತುಕೊಡುವ ನಕ್ಷತ್ರದಲ್ಲಿ ಚಂದ್ರನ ಯೋಗವಿರುವದರಿಂದ, ನೀನು ಮೊದಲು ಕೃಷ್ಣೆಯ ಪಾಣಿಗ್ರಹಣಮಾಡು." ಎಂದು ಹೇಳಿದರು. ಧರ್ಮರಾಜನಿಗಾದ ವ್ಯಾಸರ ಅಪ್ಪಣೆಯನ್ನು ಕೇಳಿ, ದ್ರುಪದನು ವಸ್ತ್ರಾಲಂಕಾರಗಳಿಂದ ಅಲಂಕೃತಳಾಗಿದ್ದ ದ್ರೌಪದಿಯನ್ನು, ವರಗಳಿಗೆ ಕೊಡತಕ್ಕ ವಸ್ತ್ರಾಲಂಕಾರಗಳೊಡನೆ ಅಲ್ಲಿಗೆ ಕರಿಸಿದನು. ಆಮೇಲೆ ಆನಂದಭರಿತರಾಗಿದ್ದ ದ್ರುಪದನ ಪರಿವಾರದವರು ಅಲ್ಲಿ ನೆರೆದರು. ಅಲಂಕೃತವಾದ ಆ ವಿವಾಹಮಂಟಪವು ಚಿತ್ರವಿಚಿತ್ರ ಉಡಿಗೆತೊಡಿಗೆಯ ಸೈನಿಕರ ಸಾಲುಗಳಿಂದಲೂ, ಶ್ರೀಮಂತರ ಸಮೂಹದಿಂದಲೂ ಶೋಭಾಯಮಾನವಾಯಿತು. ಪಾಂಡವರು ಮಂಗಲಸ್ನಾನಮಾಡಿ ವಿವಾಹಮಂಟಪವನ್ನು ಪ್ರವೇಶಿಸಿದರು. ಮೊದಲು ಯುಧಿಷ್ಠಿರನೊಡನೆ ದ್ರೌಪದಿಯು ವಿಧ್ಯುಕ್ತ ವಿವಾಹವಾಯಿತು. ಬಳಿಕ ಧೌಮ್ಯಮುನಿಗಳು ಯುಧಿಷ್ಠಿರನಿಗೆ ಹೋಗಲು ಆಜ್ಞೆಯಿತ್ತು, ರಾಜಗೃಹದಿಂದ ಹೊರಟುಹೋದರು. ಮುಂದೆ

ವಾಗದ ಸತ್ಸಂಕಲ್ಪಗಳನ್ನು ಮಾಡಿ, ಆ ಸಂಕಲ್ಪಸಿದ್ಧಿಗಾಗಿ ಪರಮೇಶ್ವರ ನಿಗೆ ಶರಣುಹೋಗಿ ಯತ್ನಿಸುವಂತೆ ಯತ್ನಿಸಬೇಕು. ಕಾರ್ಯವು ಸಾಧಿಸಿ ದರೆ, ಈಶಸಂಕಲ್ಪವು ಸಾಧಿಸಿತೆಂದು ಆ ಭಗವಂತನಿಗೆ ಕೃತಜ್ಞರಾಗಬೇ ಕಲ್ಲದೆ, ವ್ಯರ್ಥ ಗರ್ವಪಡಬಾರದು; ಕಾರ್ಯವು ಸಾಧಿಸದಿದ್ದರೆ, ದೇವರ ಸಂಕಲ್ಪವಿಲ್ಲೆಂದು ತಿಳಿದು ಸಮಾಧಾನಪಡಬೇಕಲ್ಲದೆ, ದುಃಖಪಟ್ಟು ಕೊರ ಗಬಾರದು.

ಇನ್ನು, ಈಶಸಂಕಲ್ಪವೆಂದರೇನು? ಈಶಸಂಕಲ್ಪದಂತೆಯೇ ಕಾರ್ಯವಾಗುವದು ಸಿದ್ಧವಿದ್ದರೆ ಅಜ್ಞಾನಿಗಳು ನಾವು, ಸಂಕಲ್ಪವನ್ನಾ ದರೂ ಯಾಕೆ ಮಾಡಬೇಕು? ಆ ಸಂಕಲ್ಪವನ್ನು ಸಾಧಿಸುವದಕ್ಕಾಗಿ ಯತ್ನವನ್ನಾದರೂ ಯಾಕೆ ಮಾಡಬೇಕು? ಎಂಬ ಸಂಶಯಗಳು ಬರಬ ಹುದಾಗಿದೆ; ಆದ್ದರಿಂದ ಮೊದಲು ಈಶಸಂಕಲ್ಪವೆಂದರೇನೆಂಬದನ್ನು ಕುರಿತು ಅತಿಸಂಕ್ಷೇಪವಾಗಿ ವಿಚಾರಿಸೋಣ. ಈ ಲೋಕದಲ್ಲಿ ಜನ್ಮಹೊಂ ದಿದ ಪ್ರಾಣಿಯು ಕರ್ಮಮಾಡದೆ ಒಂದು ಕ್ಷಣವಾದರೂ ಇರಲಾರದೆಂಬದು ಶ್ರೀ ಭಗವದ್ಗೀತೆಯ–"ನಹಿಕಶ್ಚಿತ್ ಕ್ಷಣಮಪಿ ಜಾತುತಿಷ್ಠತ್ಯಕರ್ಮ ಕೃತ್" ಈ ವಾಕ್ಯದಂತೆ ಸಿದ್ಧಾಂತವಾಗಿರುವದು. ಅಂದಬಳಿಕ ಮನುಷ್ಯನು ತನ್ನ ಸ್ವಭಾವಕ್ಕನುಸರಿಸಿ ಸಂಕಲ್ಪಮಾಡುತ್ತಲೂ, ಆ ಸಂಕಲ್ಪದಂತೆ ಕಾರ್ಯಮಾಡುತ್ತಲೂ ಇರಲೇಬೇಕಾಗುವದು. ಹೀಗೆ ಕರ್ಮಮಾಡುತ್ತಿ ರುವಾಗ ಕೆಲವು ಕರ್ಮಗಳ ಫಲಗಳು ತತ್ಕಾಲದಲ್ಲಿ, ಕೆಲವು ಕರ್ಮಗಳ ಫಲ ಗಳು ಕಾಲಾಂತರದಲ್ಲಿ ದೊರೆಯುವವು. ಉದಾಹರಣಾರ್ಥ–ಉಂಡಕೂಡಲೆ ತೃಪ್ತಿರೂಪಫಲವು ಸಿಕ್ಕುಬಿಡುವದು; ಆದರೆ ಹತ್ತಿಯುಬಿತ್ತಿದ್ದರೆ ಅದರಿಂದ ದೊರೆಯುವ ವಸ್ತ್ರರೂಪಫಲವು, ಕಾಲಾಂತರದಿಂದ ದೊರೆಯುವದು. ಹೀಗೆ ಜನ್ಮಹೊಂದಿದ ಮನುಷ್ಯನು ಸಾಯುವವರೆಗೆ ಪರವಶನಾಗಿ ಸಂಕಲ್ಪಮಾ ಡುತ್ತ, ಕರ್ಮಮಾಡುತ್ತ ಇರುವಾಗ, ಕರ್ಮಫಲಕಾಲವು ಒದಗುವದ ರೊಳಗಾಗಿ ಆಯುಷ್ಯತೀರಿ ಆ ಮನುಷ್ಯನು ಸತ್ತರೆ, ಉಳಿದ ಕರ್ಮಫಲ ಗಳು ಜನ್ಮಾಂತರದಲ್ಲಿ ಫಲಕೊಡುವದಕ್ಕಾಗಿ ಕೂಡಿಬಿದ್ದು ಉಳಿಯುವವು. ಹೀಗೆ ಹಲವು ಜನ್ಮಗಳಿಂದ ಕೂಡಿಬೀಳುತ್ತ, ಅಂದರೆ, ಸಂಚಿತವಾಗುತ್ತ ಬಂದಿದ್ದ ಕರ್ಮಗಳ ಅನಂತವಾದ ರಾಶಿಯು, ಪ್ರತಿಒಂದು ಪ್ರಾಣಿಯ

ಬ್ರಾಹ್ಮಣರೂಪದಿಂದ ಬಾರದಿದ್ದರೆ, ಆತನಿಗೆ ದ್ರೌಪದಿಯು ನಿಶ್ಚಯವಾಗಿ ದೊರೆಯುತ್ತಿದ್ದಿಲ್ಲ. ಆತನನ್ನು ಅರ್ಜುನನೆಂದು ಯಾರೂ ಗುರುತಿಸಲಿಲ್ಲ. ಒಟ್ಟಿನಲ್ಲಿ ಈವರೆಗೆ ನಾವು ಇಷ್ಟು ಯತ್ನಮಾಡಿದರೂ ಪಾಂಡವರ ನಾಶವಾಗದ್ದರಿಂದ, ದೈವವೇ ಬಲವತ್ತರವಾಗಿದ್ದು, ಅದರಮುಂದೆ ಪುರುಷ ಪ್ರಯತ್ನವು ವ್ಯರ್ಥವೆಂದು ಹೇಳಬೇಕಾಗುವದು. ಪಾಂಡವರು ಇನ್ನೂ ಜೀವದಿಂದ ಇರುವದರಿಂದ, ನಮ್ಮ ಪೌರುಷವನ್ನು ಧಿಕ್ಕರಿಸಬೇಕಾಗುವದು." ಎಂದು ನುಡಿದು, ಪುರೋಚನನನ್ನು ನಿಂದಿಸುತ್ತಿರಲು, ಅವರು ಅಸಮಾಧಾನದಿಂದ ಹಸ್ತಿನಾವತಿಯನ್ನು ಸೇರಿದರು. ದ್ರುಪದನಂಥ ಬಲಾಢ್ಯರಾಜನ ಸಹಾಯವು ಪಾಂಡವರಿಗೆ ದೊರೆತದ್ದರಿಂದಂತು ಅವರು ಬಹಳ ಖಿನ್ನರಾಗಿ, ಅವರ ಜಿಗದಾಟಗಳು ಅಲ್ಲಿಂದಲ್ಲೇ ನಿಂತುಹೋದವು.

ಇತ್ತ ವಿದುರನು, ಪಾಂಡವರಿಗೆ ದ್ರೌಪದಿಯು ದೊರೆತು, ಧೃತರಾಷ್ಟ್ರಪುತ್ರರು ಹತಗರ್ವರಾದದ್ದನ್ನು ಕೇಳಿ ಪ್ರಸನ್ನವಾದ ಅಂತಃಕರಣದಿಂದ ಧೃತರಾಷ್ಟ್ರನನ್ನು ಕುರಿತು—"ಎಲೈ ಪ್ರಜಾನಾಥನೇ, ಕುರುಗಳ ಉತ್ಕರ್ಷವಾದದ್ದು ಬಹಳ ನೆಟ್ಟಗಾಯಿತು" ಎಂದು ಹೇಳಲು, ಅದನ್ನು ಕೇಳಿದಕೂಡಲೆ—"ಬಹಳ ನೆಟ್ಟಗಾಯಿತು ಬಹಳನೆಟ್ಟಗಾಯಿತು" ಎಂದು ಧೃತರಾಷ್ಟ್ರನು ನುಡಿದನು ; ಯಾಕಂದರೆ ವಿದುರನ ಮಾತುಗಳಿಂದ ದ್ರೌಪದಿಯು ತನ್ನ ಹಿರಿಯಮಗನಾದ ದುರ್ಯೋಧನನಿಗೆ ಮಾಲೆಹಾಕಿದಳೆಂದು ಆ ಪ್ರಜ್ಞಾಚಕ್ಷುವು ತಿಳಿದು, ನಿಜವಾದ ಸಂಗತಿಯು ಲಕ್ಷ್ಯದಲ್ಲಿ ಬಾರದೆ ಆತನು—"ದ್ರೌಪದಿಯನ್ನು ವಸ್ತ್ರಾಲಂಕಾರಗಳಿಂದ ಅಲಂಕರಿಸಿ ಕರೆದುಕೊಂಡು ಬಾ" ಎಂದು ದುರ್ಯೋಧನನನ್ನು ಅಜ್ಞಾಪಿಸಿದನು. ಇದನ್ನು ಕೇಳಿದಕೂಡಲೆ ವಿದುರನು—"ದ್ರೌಪದಿಯು ಪಾಂಡವರನ್ನು ಲಗ್ನವಾದಳು. ಅವರೆಲ್ಲರೂ ಸ್ವರಕ್ಷಿತರಾಗಿರುವರು. ದ್ರುಪದನು ಅವರ ಆದರ ಸತ್ಕಾರಗಳನ್ನು ಚನ್ನಾಗಿ ಮಾಡಿದನು. ಸ್ವಯಂವರ ಮಂಟಪದಲ್ಲಿ ಬಲಾಢ್ಯರಾದ ಪಾಂಡವರ ಬಹುಜನ ಸಂಬಂಧಿಕರು ಬಂದು ಅವರನ್ನು ಕೂಡಿದರು" ಎಂದು ಹೇಳಲು, ಧೃತರಾಷ್ಟ್ರನು—"ವಿದುರಾ, ಪಂಡುವಿಗೆ ಪಾಂಡವರು ಪ್ರಿಯರಾಗಿರುವಂತೆ, ನನಗೂ ಪ್ರಿಯರಾಗಿರುವರು. ಅದರಲ್ಲಿಯೂ ಪಾಂಡವರು ಚತುರರೂ, ಶೂರರೂ ಇರುವದರಿಂದ ನನಗೆ ವಿಶೇಷ

ಪ್ರಿಯರಾಗಿರುವರು. ಬಲಾಢ್ಯರಾದ ಪಾಂಡವರಿಗೆ ಅವರ ಇಷ್ಟಮಿತ್ರರ ಸಹಾಯದೊರೆತು, ದ್ರುಪದರಾಜನಂಥ ಬಲಾಢ್ಯರಾಜನ ಸಂಬಂಧವಾದ ದ್ದರಿಂದ, ಭ್ರಷ್ಟರಾಜ್ಯರಾದ ಅವರು ಪುನಃ ರಾಜ್ಯವನ್ನು ಯಾಕೆ ಸಂಪಾ ದಿಸಲಿಕ್ಕಿಲ್ಲ?'' ಎಂದು ಕೇಳಲು, ವಿದುರನು—''ಪಾಂಡವರ ಸಂಬಂಧದ ಇದೇ ಬುದ್ಧಿಯು ನಿನಗೆ ಕಡೆತನಕ ಇರಲಿ'' ಎಂದು ಹೇಳಿ ತನ್ನ ಮನೆಗೆ ಹೋದನು.

ಬಳಿಕ ದುರ್ಯೋಧನ-ಕರ್ಣರು ಧೃತರಾಷ್ಟ್ರನ ಬಳಿಗೆ ಬಂದು— ''ರಾಜಾ, ವಿದುರನಸಮಕ್ಷ ನಿನಗೆ ದೋಷವಿಡುವದು ನಮ್ಮಿಂದಾಗಲಿಲ್ಲ; ಆದರೆ ಈಗ ಏಕಾಂತವಿರುವದರಿಂದ ಸ್ಪಷ್ಟವಾಗಿ ನಿನ್ನನ್ನು ಕೇಳುತ್ತೇನೆ; ಶತ್ರುವಿನ ಉತ್ಕರ್ಷವನ್ನು ನಿಮ್ಮ ಉತ್ಕರ್ಷವೆಂದು ನೀವು ತಿಳಿಯುವಿರಾ? ವಿದುರನ ಸಮಕ್ಷ ಶತ್ರುಗಳ ಸ್ತೋತ್ರಮಾಡುವಿರಿ. ಎಲೈ ತಾತನೇ, ಇದಕ್ಕೇನೆನ್ನಬೇಕು? ಶತ್ರುಗಳಿಂದ ಅಪಾಯವು ನಮಗಾಗದಂತೆ ಉಪಾ ಯಗಳನ್ನು ನಾವು ಹುಡುಕುತ್ತಿರುವೆವು,'' ಅನ್ನಲು, ಧೃತರಾಷ್ಟ್ರನು— ''ಅಪ್ಪಗಳಿರಾ, ನಿಮ್ಮಂತೆಯೇ ನನ್ನ ಮನಸ್ಸಿನಲ್ಲಾದರೂ ಇರುತ್ತದೆ; ಆದರೆ ನನ್ನ ನಿಜವಾದ ಸ್ವರೂಪವನ್ನು ವಿದುರನೆದುರಿಗೆ ಸ್ಪಷ್ಟವಾಗಿ ತೋರಿಸುವ ಇಚ್ಛೆ ನನಗಿಲ್ಲದ್ದರಿಂದ, ನಾನು ಯಾವಾಗಲೂ ಪಾಂಡವರ ಸ್ತೋತ್ರವನ್ನೇ ಮಾಡುತ್ತಿರುವೆನು. ನನ್ನ ಆ ಸ್ತೋತ್ರದಮೇಲೆ ನೀವು ಹೋಗಬೇಡಿರಿ. ದುರ್ಯೋಧನಾ, ಈಗ ಸಮಯಕ್ಕೆ ತಕ್ಕ ಕೃತ್ಯವನ್ನು ನನಗೆ ಹೇಳು; ಅದರಂತೆ ರಾಧೇಯಾ, ನಿನಗೆ ಯೋಗ್ಯವಾಗಿ ತೋರಿ ದ್ದನ್ನು ನನಗೆ ಹೇಳು.

**೨೦೧, ೨೦೨ನೇ ಅಧ್ಯಾಯಗಳು—ದುರ್ಯೋಧನ-ಕರ್ಣರು ಸೂಚಿಸಿದ ಪಾಂಡವರ ನಾಶದ ಉಪಾಯಗಳು**—ದುರ್ಯೋಧನ— ಎಲೈ ರಾಜನೇ, ಚತುರರಾದ ಬ್ರಾಹ್ಮಣರಕಡೆಯಿಂದ ಕುಂತಿಯ ಮಕ್ಕ ಳಿಗೂ, ಮಾದ್ರಿಯ ಮಕ್ಕಳಿಗೂ ಒಡಕುಹುಟ್ಟಿಸುವಂತೆ ಮಾಡಬೇಕು. ಅಥವಾ ಅಪಾರವಾದ ಸಂಪತ್ತನ್ನು ಕೊಟ್ಟು ದ್ರುಪದರಾಜನನ್ನು ಸಪರಿ ವಾರ ನಮ್ಮಕಡೆಗೆ ಮಾಡಿಕೊಳ್ಳಬೇಕು. ಇಲ್ಲವೆ, ಈಗ ಇದ್ದಲ್ಲಿ ಇರು ವದೇ ನೆಟ್ಟಗೆ, ಹಸ್ತಿನಾವತಿಗೆ ಬರುವದರಿಂದ ತಮಗೆ ಕ್ಷೇಮವಾಗದೆಂಬ

ಭಾವವನ್ನು ಪಾಂಡವರಲ್ಲಿ ಉತ್ಪನ್ನಮಾಡಬೇಕು; ಅಥವಾ ಪಾಂಡವರಲ್ಲಿ ಪರಸ್ಪರ ಒಡಕುಹುಟ್ಟುವಂತೆ ಮಾಡಬೇಕು ; ಇಲ್ಲವೆ ಪಾಂಡವರವಿಷಯ ವಾಗಿ ದ್ರೌಪದಿಯ ಮನಸ್ಸನ್ನು ಕೆಡಿಸಬೇಕು; ಅಥವಾ ಪಾಂಡವರ ಆಟ ವೆಲ್ಲ ಭೀಮನಿಂದ ನಡೆದಿರುವದರಿಂದ, ಏನಾದರೂ ಉಪಾಯಮಾಡಿ ಭೀಮನನ್ನು ಕೊಲ್ಲಿಸಿಬಿಡಬೇಕು ಭೀಮನ ಸಹಾಯವಿದ್ದರೆ ಅರ್ಜುನನ ಪೌರುಷವು, ಇಲ್ಲದಿದ್ದರೆ ಆತನು ಕರ್ಣನ ನಾಲ್ಕರಲ್ಲಿ ಒಂದುಹಿಸೆಗೆ ಸರಿ ಯಾಗನು. ರಾಜಾ, ನನಗೆ ತೋಚಿದ ಉಪಾಯಗಳನ್ನು ಸೂಚಿಸಿದ್ದೇನೆ; ಅವುಗಳಲ್ಲಿ ಯೋಗ್ಯವಾದ ಉಪಾಯವನ್ನು ಬೇಗನೆ ಕೈಕೊಳ್ಳಬೇಕು ; ಆದರೆ ಕರ್ಣಾ, ನಿನ್ನ ಮನಸ್ಸಿನಲ್ಲಿ ಏನಿರುವದು ?

ಕರ್ಣ—ದುರ್ಯೋಧನಾ, ನಿನ್ನ ಈ ಬುದ್ಧಿಯು ನನ್ನ ಮನಸ್ಸಿಗೆ ಬರುವದಿಲ್ಲ; ಯಾಕಂದರೆ, ಇಂಥ ಉಪಾಯಗಳಿಂದ ಪಾಂಡವರ ನಾಶವಾ ಗುವದು ಶಕ್ಯವಿಲ್ಲವು. ಈವರೆಗೆ ಇಂಥ ಯತ್ನಗಳನ್ನು ನೀನು ಅಲ್ಪಸ್ವಲ್ಪ ಮಾಡಿದೆಯಾ? ಆದರೆ ಅವರು ಇನ್ನೂ ಜೀವದಿಂದಲೇ ಇರುವರಲ್ಲವೆ? ಎಲಾ, ಸಣ್ಣವರಿರುವಾಗ ಪಾಂಡವರು ನಿನ್ನ ಮನೆಯಲ್ಲಿಯೇ ಇದ್ದರು; ಅವರಿಗೆ ಯಾರ ಸಹಾಯವೂ ಇದ್ದಿಲ್ಲ. ಅಂಥಹೊತ್ತಿನಲ್ಲಿಯೂ ನಿನ್ನಿಂದ ಅವರ ನಾಶವಾಗಲಿಲ್ಲ ಈಗಂತು ಅವರಿಗೆ ಬಲಿಷ್ಠರ ಸಹಾಯವು ದೊರೆ ತಿದ್ದು, ಅವರು ನಿನ್ನ ಗಡಿಯ ಹೊರಗೆ ಇರುವರು. ಇಂಥಹೊತ್ತಿನಲ್ಲಿ ನಿನ್ನ ಈ ಹಂಚಿಕೆಗಳುಹೇಗೆನಡೆಯಬೇಕು? ಅವರಿಗೆ ದೈವಾನುಕೂಲವಿರುವದೆಂದು ಸ್ಪಷ್ಟವಾಗುತ್ತದೆ. ಇನ್ನುಮೇಲೆ ಅವರು ತಮ್ಮ ತಂದೆ–ಅಜ್ಜಂದಿರ ರಾಜ್ಯದ ಮೇಲೆ ಹಕ್ಕುಹೇಳುತ್ತ ಮುಂದಕ್ಕೆ ಬರುವರು. ಒಬ್ಬ ಹೆಂಡತಿಯಲ್ಲಿ ರಮ ಮಾಣರಾಗುವವರೊಳಗೆ ಒಡಕುಹುಟ್ಟಿಸುವದು ಶಕ್ಯವಲ್ಲ ; ಯಾಕಂದರೆ ಅಂಥವರುಬಹುಶಃ ಏಕವಿಚಾರದಿಂದ ನಡೆಯುವರು. ಇನ್ನು, ದ್ರೌಪದಿಯ ಮನಸ್ಸನ್ನೇ ತಿರುಗಿಸಬೇಕೆಂದು ನೀನುಅನ್ನುತ್ತೀ; ಆದರೆ ಅದೂಶಕ್ಯವಲ್ಲ; ಯಾಕಂದರೆ, ಭಿಕ್ಷೆಬೇಡುತ್ತಿರುವಾಗ ಪಾಂಡವರಿಗೆ ಮೆಚ್ಚಿದ ದ್ರೌಪದಿಯು, ಈಗ ಅವರು ಬಲಿಷ್ಠರೂ, ಅಸ್ತ್ರಕೋವಿದರೂ ಇರುವರೆಂದು ತಿಳಿದಿರುವಾಗ ಅವರನ್ನು ತಿರಸ್ಕರಿಸಬಹುದೇ? ದುರ್ಯೋಧನಾ, ನಿನಗೊಂದು ಗುಟ್ಟನ್ನು ಹೇಳುತ್ತೇನೆ, ಸ್ತ್ರೀಯರಿಗೆ ಬಹುಜನ ಭೋಕ್ತಾರರು ಇರಬೇಕೆಂಬ ಇಚ್ಛೆ ಯಿರುತ್ತದೆ. ಅಂದಬಳಿಕ ಅನಾಯಾಸವಾಗಿಯೇ, ಐವರು ಪತಿಗಳು ಇರು

ವಾಗ ದ್ರೌಪದಿಯು ಅವರನ್ನು ಯಾಕೆ ನಿರಾಕರಿಸುವಳು? ಅದರಂತೆ, ಅತ್ಯಂತ ಸಭ್ಯನಾದ ದ್ರುಪದನನ್ನು, ನೂರಾರು ರಾಜ್ಯಕೊಟ್ಟೂ ವಶಮಾಡಿಕೊಳ್ಳುವದು ಶಕ್ಯವಲ್ಲ. ಆತನ ಮಗನಾದ ಧೃಷ್ಟದ್ಯುಮ್ನನೂ ಗುಣಿಯಾಗಿದ್ದು, ಪಾಂಡವರನ್ನು ಅತ್ಯಂತವಾಗಿ ಪ್ರೀತಿಸುವನು. ಇಂಥ ಯಾವ ಉಪಾಯಗಳೂ ಪಾಂಡವರಮೇಲೆ ನಡೆಯಲಾರವು; ಆದ್ದರಿಂದ ಸ್ಪಷ್ಟವಾದ ನನ್ನ ಮತವೇನಂದರೆ, ಪಾಂಡವರು ಬೇರುಬಿಟ್ಟು ಬಲಿಷ್ಠರಾಗುವದರೊಳಗೆ ನೀನು ಅವರೊಡನೆ ಯುದ್ಧಮಾಡಿ, ಅವರನ್ನು ನಾಶಗೊಳಿಸಬೇಕು. ಸುಮ್ಮನೆ ಇಲ್ಲದ ಹದಿನೆಂಟು ಉಪಾಯಮಾಡುವದು ನೆಟ್ಟಗಲ್ಲ. ಕೃಷ್ಣನ ಪ್ರೇಮವೂ ಪಾಂಡವರಮೇಲೆ ಬಹಳ. ಪಾಂಡವರ ಹಿತಕ್ಕಾಗಿ ಸರ್ವಸ್ವವನ್ನೂ ಅರ್ಪಿಸಲಿಕ್ಕೆ ಆತನು ಹಿಂದೆಮುಂದೆ ನೋಡನು; ಆದ್ದರಿಂದ ದ್ರುಪದನು ಕೇವಲ ಪಾಂಡವರನ್ನು ಅವಲಂಬಿಸುವದರೊಳಗೆ, ಹಾಗು ಕೃಷ್ಣನು ಯಾದವರೊಡನೆ ಪಾಂಡವರನ್ನು ಕೂಡುವದರೊಳಗೆ ಬಲಿಷ್ಠನಾದ ನೀನು ನಿನ್ನ ಅಪಾರಸೈನ್ಯವನ್ನು ತಕ್ಕೊಂಡುಹೋಗಿ, ಈಗಲೇ ಪಾಂಡವರನ್ನು ಯುದ್ಧದಲ್ಲಿ ಸಂಹರಿಸಿಬಿಡಬೇಕು. ಪರಾಕ್ರಮಡವಾದ ಹೊರತು ಈ ಕೆಲಸವಾಗುವದಿಲ್ಲ. ಮಹಾತ್ಮನಾದ ಭರತನು ಸ್ವಪರಾಕ್ರಮದಿಂದಲೇ ತ್ರೈಲೋಕ್ಯಗಳ ಆಧಿಪತ್ಯಪಡೆದನು. ಎಲೈ ಪ್ರಜಾನಾಥಾ, ಕ್ಷತ್ರಿಯನೆಂದಕೂಡಲೆ ಆತನಿಗೆ ಪರಾಕ್ರಮವೇ ಭೂಷಣವು. ಪರಾಕ್ರಮವೇ ಈ ಶೂರಜಾತಿಯ ಧರ್ಮವಾಗಿರುವದು; ಆದ್ದರಿಂದ, ಈಗಲೇ ದ್ರುಪದನಮೇಲೆ ಸಸೈನ್ಯ ಸಾಗಿಹೋಗಿ ಅವನನ್ನು ಸದೆಬಡಿದು, ಪಾಂಡವರನ್ನು ಹೆಡಮುರಿಗೆ ಕಟ್ಟಿಕೊಂಡು ಬರೋಣ. ಆಮೇಲೆ ಅಖಂಡವಾದ ಪೃಥ್ವಿಯನ್ನು ಭೋಗಿಸುತ್ತ ಕುಳಿತುಕೋ''

ಈಮೇರೆಗೆ ಕರ್ಣನು ಹೇಳಲು, ಪ್ರತಾಪಿಯಾದ ಧೃತರಾಷ್ಟ್ರನು ಮೆಚ್ಚಿ—''ಸೂತಪುತ್ರಾ, ನಿನ್ನಂಥ ಬುದ್ಧಿವಂತನಾದ ಅಸ್ತ್ರನಿಪುಣವೀರನಿಗೆ ಈ ಪರಾಕ್ರಮದ ಮಾತುಗಳು ಬಹಳವಾಗಿ ಒಪ್ಪುತ್ತವೆ. ಆದರೂ ಭೀಷ್ಮ-ದ್ರೋಣ-ವಿದುರರೊಡನೆ ನೀವಿಬ್ಬರು ಇನ್ನೂ ಆಲೋಚಿಸಿ, ನಮಗೆ ಸುಖಲಾಭವಾಗುವಂತೆ ಮಸಲತ್ತುಮಾಡಿರಿ.'' ಎಂದು ಹೇಳಿ, ಧೃತರಾಷ್ಟ್ರನು ಭೀಷ್ಮಾದಿ ಮಂತ್ರಿಗಳನ್ನು ಕರೆಸಿದನು.

**೨೧೩ನೇ ಅಧ್ಯಾಯ— ಭೀಷ್ಮ ಸಭಾಷಣ**-ಭೀಷ್ಮ—ಹೇಗಿದ್ದರೂ ಪಾಂಡವರೊಡನೆ ಯುದ್ಧಮಾಡುವದು ನನಗೆ ಸೇರುವದಿಲ್ಲ. ನನಗೆ ಧೃತರಾಷ್ಟ್ರನು ಹೇಗೋಹಾಗೆ ಪಂಡುವು; ಹೇಗೆ ಗಾಂಧಾರಿಯಮಕ್ಕಳೋ, ಹಾಗೆ ನನಗೆ ಕುಂತಿಯಮಕ್ಕಳು. ಧೃತರಾಷ್ಟ್ರಾ, ನನ್ನಂತೆ ನೀನೂ ಅವರ ರಕ್ಷಣಮಾಡಬೇಕು. ದುರ್ಯೋಧನಾದಿ ಕೌರವರಿಗಾದರೂ ಪಾಂಡವರು ದೂರಿನವರಲ್ಲ; ಆದ್ದರಿಂದ ಅವರೊಡನೆ ಯುದ್ಧಮಾಡದೆ ಅವರೊಡನೆ ಸ್ನೇಹಬಳಿಸಿ, ಅವರಿಗೆ ಅರ್ಧರಾಜ್ಯಕೊಡಬೇಕೆಂದು ನನ್ನ ಸ್ಪಷ್ಟಮತವಿರುವದು; ಯಾಕಂದರೆ, ಈ ರಾಜ್ಯವು ಪಾಂಡವರಿಗೂ ಪಿತ್ರಾರ್ಜಿತವೇ ಆಗಿರುವದು. ಅಂದಬಳಿಕ ದುರ್ಯೋಧನಾ, ಪಾಂಡವರಿಗೆ ಅವರ ಪಿತ್ರಾರ್ಜಿತರಾಜ್ಯವು ದೊರೆಯದಿದ್ದರೆ, ನಿನಗಾಗಲಿ, ಬೇರೆ ಕೌರವರಿಗಾಗಲಿ ಅದು ಯಾಕೆ ದೊರೆಯಬೇಕು ? ಇನ್ನು, ನೀನು ಅನ್ಯಾಯದಿಂದ ರಾಜ್ಯವನ್ನು ಅಪಹರಿಸಿರುವ ಮಾತು ಬೇರೆ; ಆದರೆ ನ್ಯಾಯದಿಂದ ನೋಡಿದರೆ, ನಿನಗಿಂತ ಮೊದಲು ಪಾಂಡವರು ರಾಜ್ಯಾಧಿಕಾರಿಗಳಾಗಿರುವರು. ಸಾರಾಂಶ, ಎಲೈ ಪುರುಷವ್ಯಾಘ್ರಾ, ಸವಿ ಉಳಿದು ನೀನು ಪಾಂಡವರಿಗೆ ಅರ್ಧರಾಜ್ಯ ಕೊಡುವದರಲ್ಲಿ ನಿನ್ನ ಹಾಗು ಎಲ್ಲರ ಹಿತವಿರುವದು. ನೀನು ಹೀಗೆ ನಡೆಯದಿದ್ದರೆ, ನಿನ್ನ ಪಕ್ಷದ ಕಲ್ಯಾಣವಾಗದೆ, ಜಗತ್ತಿನತುಂಬ ನಿನ್ನ ಅಪಕೀರ್ತಿಯಾಗುವದು. ಅಪ್ಪಾ ದುರ್ಯೋಧನಾ, ಕೀರ್ತಿಯ ಸಂರಕ್ಷಣವನ್ನು ಅವಶ್ಯವಾಗಿ ಮಾಡಬೇಕು. ಕೀರ್ತಿಯೇ ದೊಡ್ಡಬಲವು. ಕೀರ್ತಿಶಾಲಿಯಾದ ಮನುಷ್ಯನು ಸತ್ತರೂ ಬದುಕಿಇದ್ದಹಾಗೆಯೇ; ಕೀರ್ತಿಹೀನ ಮನುಷ್ಯನು ಇದ್ದೂ ಸತ್ತಹಾಗೆಯೇ; ಆದ್ದರಿಂದ ನ್ಯಾಯದಿಂದ ನಡೆದು ಪಾಂಡವರಿಗೆ ಅರ್ಧರಾಜ್ಯವನ್ನು ಕೊಡು. ಪಾಂಡವರು ಬದುಕಿದ್ದೊಂದು ಸುದೈವವೆಂದು ತಿಳಿ. ಅವರು ಅರಗಿನ ಮನೆಯಲ್ಲಿ ಸತ್ತರೆಂಬ ಸುದ್ದಿಯನ್ನು ಕೇಳಿದಾಗಿನಿಂದ, ಜನರಿಗೆ ಮೋರೆತೋರಿಸುವದು ನನಗೆ ಕಠಿಣವಾಗಿತ್ತು. ಪಾಂಡವರು ಜೀವದಿಂದಿರುವಾಗ ಅವರ ಪಿತ್ರಾರ್ಜಿತರಾಜ್ಯವನ್ನು ಸಾಕ್ಷಾತ್ ವಜ್ರಧರ ಇಂದ್ರನೂ ಕಸಿದುಕೊಳ್ಳಲಾರನು. ಅಂದಬಳಿಕ ನಿನ್ನಂಥವನಿಗೆ ಆ ರಾಜ್ಯವು ಹೇಗೆ ದಕ್ಕೀತು ? ಅವರು ಪರಾಕ್ರಮಿಗಳಿದ್ದು ಧರ್ಮಿಷ್ಠರಿರುವದರಿಂದ ಹೀಗಾಗುವದು ಸ್ವಾಭಾವಿಕವೆ? ನಿನಗೆ ನ್ಯಾಯವು

ಬೇಕಾಗಿದ್ದರೆ, ಕಲ್ಯಾಣೇಚ್ಛೆಯು ನಿನಗಿದ್ದರೆ, ನನಗೆ ಪ್ರಿಯವಾಗಬೇಕೆಂದು ನಿನ್ನ ಮನಸ್ಸಿನಲ್ಲಿದ್ದರೆ ಪಾಂಡವರಿಗೆ ಅರ್ಧರಾಜ್ಯವನ್ನು ಕೊಟ್ಟು ಅವರೊಡನೆ ಸ್ನೇಹಬಳಿಸು.

**೨೦೮ನೇ ಅಧ್ಯಾಯ-ದ್ರೋಣನ ಭಾಷಣ**—ರಾಜಾ, ನಿಜವಾದ ಹಿತೇಚ್ಛುಮಂತ್ರಿಯು, ಧರ್ಮ–ಅರ್ಥ–ಯಶಸ್ಸುಗಳಿಗೆ ಸಾಧಕವಾದದ್ದನ್ನೇ ಹೇಳಬೇಕೆಂದು ನಾನು ಕೇಳಿದ್ದೇನೆ. ಅದರಿಂದ ಭೀಷ್ಮನ ಮಾತು ನನಗೆ ಮಾನ್ಯವಾಗಿರುವದು. ನೀನು ಕುಂತೀಪುತ್ರರಿಗೆ ಅವರಪಾಲು ಕೊಟ್ಟುಬಿಡುವದು ಸನಾತನಧರ್ಮವಾಗಿರುವದು ; ಆದ್ದರಿಂದ ಪಾಂಡವರಿಗೆ ವಸ್ತ್ರಾಭರಣಗಳನ್ನು ಕೊಟ್ಟು, ಒಬ್ಬ ಸವಿಮಾತಾಡುವ ಮನುಷ್ಯನನ್ನು ದ್ರುಪದನಕಡೆಗೆ ಕಳಿಸು. ವಧೂವರರಿಗೆ ರತ್ನಾದಿಗಳನ್ನು ಕೊಟ್ಟು–"ಈ ಸಂಬಂಧವು ಕುರುಕುಲಕ್ಕೆ ಉತ್ಕರ್ಷಕಾರಕವಾಗಿರುವದರಿಂದ ಧೃತರಾಷ್ಟ್ರನಿಗೂ, ದುರ್ಯೋಧನನಿಗೂ ಬಹಳ ಸಂತೋಷವಾಗಿರುವದೆಂ"ದು ದ್ರುಪದನಹಾಗು ಧೃಷ್ಟದ್ಯುಮ್ನನಸಮಕ್ಷ ನಿನ್ನವರು ಮೇಲೆಮೇಲೆ ಅನ್ನುವಂತೆ ಮಾಡು. ಅದರಂತೆ, ಕುಂತಿ, ದ್ರುಪದ, ಧೃಷ್ಟದ್ಯುಮ್ನ ಮೊದಲಾದವರನ್ನು ವಸ್ತ್ರಾಲಂಕಾರಗಳಿಂದ ಸತ್ಕರಿಸಿ, ಆಮೇಲೆ ಪಾಂಡವರನ್ನು ಹಸ್ತಿನಾವತಿಗೆ ಕಳಿಸುವ ವಿಷಯದಲ್ಲಿ ದ್ರುಪದನಮುಂದೆ ಪ್ರಸ್ತಾಪ ತೆಗೆಯುವಂತೆ ಹೇಳು. ದ್ರುಪದನ ಅನುಜ್ಞೆಯು ದೊರೆತಬಳಿಕ ಪಾಂಡವರನ್ನು ಕರತರುವದಕ್ಕಾಗಿ ಆರಿಸಿದ ಸೈನ್ಯದೊಡನೆ ದುಃಶಾಸನ-ವಿಕರ್ಣರು ಹೋಗಲಿ. ಶ್ರೇಷ್ಠಪಾಂಡವರು ಇಲ್ಲಿಗೆ ಬಂದಬಳಿಕೂ ಅವರೊಡನೆ ಸ್ನೇಹದಿಂದ ನಡೆದುಕೋ. ಅಂದರೆ ಪ್ರಜೆಗಳೆಲ್ಲ ಅವರವಿಷಯದಲ್ಲಿ ಸಂತುಷ್ಟರಾಗಿ, ಆ ಪಾಂಡವರು ಪಿತ್ರಾರ್ಜಿತರಾಜ್ಯಭಾಗವನ್ನು ಸುಖದಿಂದ ಉಪಭೋಗಿಸುವರು.

ದ್ರೋಣಾಚಾರ್ಯರ ಈ ಮಾತುಗಳನ್ನು ಕೇಳಿ ಕರ್ಣನು—"ಈ ಭೀಷ್ಮ–ದ್ರೋಣರನ್ನು ದ್ರವ್ಯ–ಸನ್ಮಾನಗಳಿಂದ ಸಂತೋಷಪಡಿಸುತ್ತ, ಯಾವ ಮಾತನ್ನೂ ಇವರಿಂದ ಮುಚ್ಚಿ ಇಡದಿದ್ದರೂ, ಇವರು ನಮ್ಮ ಕಲ್ಯಾಣದ ಮಾರ್ಗವನ್ನು ಹೇಳುವದಿಲ್ಲವಲ್ಲ! ಮಹಾರಾಜನೇ, ಇದಕ್ಕಿಂತ ಆಶ್ಚರ್ಯದ ಸಂಗತಿಯು ಯಾವದಿರಬಹುದು? ದುಷ್ಟಮನು

ಷ್ಯನು ತನ್ನ ನಿಜವಾದ ಭಾವವನ್ನು ಬಚ್ಚಿಟ್ಟು, ಏನಾದರೂ ಕಲ್ಯಾಣದ ಮಾರ್ಗಹೇಳುವದು ಸಜ್ಜನರಿಗೆ ಹೇಗೆ ಮಾನ್ಯವಾದೀತು? ಹಿತೇಚ್ಛುವು ನಿಷ್ಕಪಟವಾದ ಆಲೋಚನೆಯನ್ನು ಹೇಳಬೇಕು. ಇನ್ನು ಸುಖದುಃಖ ಗಳು ದೈವಾಧೀನವಾದದ್ದರಿಂದ, ದೈವದಲ್ಲಿದ್ದಂತೆ ಆಗುವದು. ದೈವಾನು ಕೂಲವಿದ್ದರೆ, ಮನುಷ್ಯನು ಸುಶಿಕ್ಷಿತನಿರಲಿ–ಅಶಿಕ್ಷಿತನಿರಲಿ, ಹುಡುಗನಿ ರಲಿ–ದೊಡ್ಡವನಿರಲಿ, ಸಹಾಯಸಂಪನ್ನನಿರಲಿ–ಸಹಾಯಹೀನನಿರಲಿ ಆತ ನಿಗೆ ಬೇಕಾದದ್ದು ಬೇಕಾದಲ್ಲಿ ದೊರೆಯುವದು. ಹಿಂದಕ್ಕೆ ಅಂಬುವೀಚ ರಾಜನು ಕೇವಲ ಹೆಳವನಿದ್ದನು. ಆತನ ಮಣಿಕರ್ಣಿಕನೆಂಬ ಅಮಾತ್ಯನು, ಬೇಕಾದಷ್ಟು ಪ್ರಬಲನಾಗಿ ರಾಜನ ಉಪಭೋಗದ ವಸ್ತುಗಳನ್ನು ತಾನು ಉಪಭೋಗಿಸಹತ್ತಿದನು; ಆದರೆ ಅಂಬುವೀಚರಾಜನನ್ನು ಪದಚ್ಯುತ ಮಾಡುವದು ಆತನಿಂದ ಆಗಲಿಲ್ಲ; ಆದ್ದರಿಂದ ರಾಜಾ ಧೃತರಾಷ್ಟ್ರ, ನಿನ್ನದೈವದಲ್ಲಿ ರಾಜ್ಯವಿದ್ದರೆ ಅದನ್ನು ಯಾರೂ ಕಸಿದುಕೊಳ್ಳುವದಿಲ್ಲ; ದೈವದಲ್ಲಿರದಿದ್ದರೆ ನೀನು ಎಷ್ಟು ಪೇಚಾಡಿದರೂ ಅದು ನಿನಗೆ ದಕ್ಕುವ ದಿಲ್ಲ; ಆದರೆ ನಾನು ಹೇಳುವದಿಷ್ಟೇ, ಯಾರು ಯೋಗ್ಯ ಆಲೋಚನೆ ಹೇಳುವರು, ಯಾರು ಅಯೋಗ್ಯ ಆಲೋಚನೆ ಹೇಳುವರು ಎಂಬದನ್ನು ನೀನು ಮನಸ್ಸಿನಲ್ಲಿ ತೂಗಿನೋಡು. ಇನ್ನು ಬೇರೆಬೇರೆಜನರ ಆಲೋಚನೆ ಕೇಳಿಕೊಳ್ಳಲಿಕ್ಕೇನು ನಾನು ಬೇಡವೆನ್ನುವದಿಲ್ಲ.

ಕರ್ಣನ ಈ ಮಾತುಗಳನ್ನು ಕೇಳಿ ದ್ರೋಣಾಚಾರ್ಯರು–"ದುಷ್ಟಾ, ನಿನ್ನ ಹೊಟ್ಟೆನೋವು ನನಗೆ ಗೊತ್ತಿರುವದು. ಪಾಂಡವರನ್ನು ಕಂಡರೆ ನಿನಗೆ ಆಗುವದಿಲ್ಲ. ನಮ್ಮ ಆಲೋಚನೆಯಂತೆ ನಡೆದರೆ, ಅವರಮೇಲಿನ ನಿನ್ನ ದ್ವೇಷವು ನಡೆಯುವದಿಲ್ಲವೆಂದು ನೀನು ಹೀಗೆ ಹೇಳುವೆಯಷ್ಟೆ? ನೀನು ಏನೇಹೇಳು, ನಮ್ಮ ಮಾತೇ ಕುರುಕುಲಕ್ಕೆ ಹಿತಕರವಾಗಿರುವದು. ಆದರೂ ಇದು ದುಷ್ಟ ಆಲೋಚನೆಯೆಂದು ನೀನು ಅನ್ನುವಪಕ್ಷದಲ್ಲಿ, ಏನುಮಾಡಬೇಕೆಂಬದನ್ನು ನೀನು ಬೊಗಳು. ನಮ್ಮಮಾತಿನ ವಿರುದ್ಧ ವಾಗಿ ನಡೆದರೆ, ಕೌರವರ ನಾಶವಾಗುವದೆಂಬದನ್ನು ಸೆರಗಿಗೆ ಗಂಟುಹೊ ಡೆದು ನೆನಪಿನಲ್ಲಿಟ್ಟುಕೋ.

**೨೦೫ನೇ ಅಧ್ಯಾಯ—ವಿದುರನಭಾಷಣ**—ಧೃತರಾಷ್ಟ್ರ, ನಿಃಸಂಶಯ ನಿನಗೆ ಕಲ್ಯಾಣವಾಗುವ ಮಾತನ್ನೇ ಹೇಳುವದು, ನಿನ್ನ ಬಂಧುಗಳ ಕರ್ತವ್ಯವಾಗಿರುವದು ; ಆದರೆ ಹೇಳಿದಂತೆ ನಡೆಯುವ ಮನಸ್ಸಿಲ್ಲದವರಲ್ಲಿ ಉಪದೇಶವು ನಾಟುವದಿಲ್ಲ. ಭೀಷ್ಮ-ದ್ರೋಣರು ಹೇಳುವವಮಾತುಗಳು, ನಿನಗೆ ಹಿತಕಾರಕಗಳಾಗಿದ್ದರೂ ಅದರಂತೆ ನೀನು ನಡೆಯುವದಿಲ್ಲ. ಅವರ ಮಾತು ಅಯೋಗ್ಯವೆಂದು ರಾಧೇಯ ಕರ್ಣನು ಹೇಳುವನು. ರಾಜಾ, ನಾನು ಮನಸ್ಸಿನಲ್ಲಿ ಬಹಳ ವಿಚಾರಮಾಡಿ ನೋಡಿದೆನು ; ಆದರೆ ಭೀಷ್ಮ-ದ್ರೋಣರಂಥ ಪುರುಷಸಿಂಹರಿಗಿಂತ, ಹೆಚ್ಚಿನ ಜ್ಞಾನಿಗಳು ಯಾರೂ ಕಾಣುವದಿಲ್ಲವು. ಇವರು ಈವರೆಗೆ ನಿನಗೆ ಅಹಿತಕಾರಕ ಮಾತುಗಳನ್ನು ಹೇಳಿರುವದಿಲ್ಲ. ಹಾಗೆ ಹೇಳಲಿಕ್ಕೆ ನೀನಾದರೂ ಅವರಿಗೆ ಅಂಥ ಅಹಿತವನ್ನೇನು ಮಾಡಿರುತ್ತೀ ? ಈ ಧರ್ಮಜ್ಞರು ದ್ರವ್ಯಲೋಭದಿಂದ ಸುಳ್ಳುಹೇಳತಕ್ಕವರಲ್ಲ ; ಆದರೆ ಇವರ ಹೇಳಿಕೆಯಂತೆ ನಡೆಯುವದು ನಿನ್ನ ಸಂಕಲ್ಪವಿದ್ದಂತೆ ತೋರುವದಿಲ್ಲ. ಪಾಂಡವರು ಅಜಿಂಕ್ಯರೆಂದು ಭೀಷ್ಮರು ಹೇಳಿದ್ದು ಅಕ್ಷರಶಃ ನಿಜವಿರುತ್ತದೆ. ದೇವರ ಕೃಪೆಯಿಂದ ನಿನ್ನ ನಾಶವು ಪಾಂಡವರಿಂದ ಆಗದಿರಲಿ. ಅರ್ಜುನನು ಅಸ್ತ್ರಕೋವಿದನಾದದ್ದರಿಂದ ಇಂದ್ರನೂ ಆತನನ್ನು ಸೋಲಿಸಲಾರನು. ಭೀಮನು ನವನಾಗಸಹಸ್ರಬಲದವನು. ಧರ್ಮರಾಜನಂತು ಧರ್ಮದ ಮೂರ್ತಿಯು. ಧೈರ್ಯ, ದಯಾ, ಕ್ಷಮಾ, ಸತ್ಯ, ಪರಾಕ್ರಮ ಇವು ಆತನಲ್ಲಿ ಪೂರ್ಣವಾಗಿ ವಾಸಿಸುವವು. ರಾಜಾ, ಬಲರಾಮನು ಯಾರ ಪಕ್ಷಪಾತಿಯೋ, ಕೃಷ್ಣನು ಯಾರಮಂತ್ರಿಯೋ, ಸಾತ್ಯಕಿಯು ಯಾರ ಅನುಯಾಯಿಯೋ, ದ್ರುಪದನು ಯಾರ ಮಾವನೋ, ಧೃಷ್ಟದ್ಯುಮ್ನನು ಯಾರ ಬೀಗನೋ ಆ ಪಾಂಡವರನ್ನು ಯುದ್ಧದಲ್ಲಿ ಗೆಲ್ಲುವದು ಅಶಕ್ಯವು. ಪುರೋಚನನಿಂದ ನಿನಗೆ ಬಂದಿರುವ ಅಪಕೀರ್ತಿಯನ್ನು ಈಗ ಪಾಂಡವರಿಗೆ ರಾಜ್ಯವನ್ನು ಕೊಟ್ಟು ಕಳೆದುಕೋ. ಇದರಿಂದ ಕುರುಕುಲದಮೇಲೆ ಅನುಗ್ರಹಮಾಡಿದಂತಾಗುವದು ; ಕ್ಷಾತ್ರಕುಲದ ಉತ್ಕರ್ಷವಾಗುವದು ; ನಮ್ಮೊಡನೆ ವೈಮನಸ್ಸು ಇರುವ ಬಲಾಢ್ಯನಾದ ದ್ರುಪದರಾಜನ ಸ್ನೇಹಸಂಪಾದನವಾಗುವದು. ಧೃತರಾಷ್ಟ್ರ, ಶ್ರೀಕೃಷ್ಣನಿದ್ದಲ್ಲಿ ಜಯವು ತಪ್ಪಿದ್ದಲ್ಲ. ಪಾಂಡವರು ಜೀವದಿಂದಿರುವ

ದನ್ನು ಕೇಳಿ ಪುರಜನರು ಅವರನ್ನು ನೋಡಲು ಆತುರರಾಗಿರುವರು. ಆದ್ದರಿಂದ ಪಾಂಡವರನ್ನು ಇಲ್ಲಿಗೆ ಕರೆಸಿ ಜನರ ಹೇತುವನ್ನು ಪೂರ್ಣ ಮಾಡು. ಸಾಮೋಪಚಾರದಿಂದ ಆಗುವ ಕೆಲಸಕ್ಕಾಗಿ ಯುದ್ಧವನ್ನು ಹೂಡ ಬೇಡ. ರಾಜಾ, ದುರ್ಯೋಧನ, ಕರ್ಣ, ಶಕುನಿ ಇವರು ಧರ್ಮನಷ್ಟರೂ, ದುರ್ಬುದ್ಧಿಗಳೂ, ಮೂರ್ಖರೂ ಇರುವರು. ಅವರ ಹೇಳಿಕೆಯಂತೆ ನೀನು ಹೋಗಬೇಡ. ಎಲೈ ಗುಣವಂತನೇ, ಈ ದುರ್ಯೋಧನನ ಮೂರ್ಖತನ ದಿಂದ ಪ್ರಜಾಕ್ಷಯವಾಗುವದೆಂದು ನಾನು ಯಾವಾಗೋ ನಿನಗೆ ಹೇಳಿರು ವೆನು. ಅಂಥಸಮಯವು ಈಗ ಬರತೊಡಗಿರುವದರಿಂದ, ಪುನಃ ನಿನ್ನನ್ನು ಎಚ್ಚರಗೊಳಿಸುವೆನು. ಜಾಗರೂಕನಾಗಿರು.

**೨೦೬ನೇ ಅಧ್ಯಾಯ — ವಿದುರನು ದ್ರುಪದನಪಟ್ಟಣಕ್ಕೆ ಹೋದದ್ದು** — ಜನಮೇಜಯಾ, ವಿದುರನ ಈ ಉಪದೇಶವನ್ನು ಕೇಳಿ, ಧೃತರಾಷ್ಟ್ರನು ಪಾಂಡವರನ್ನು ಕರತರುವದಕ್ಕಾಗಿ ಆತನನ್ನು ದ್ರುಪದನ ಬಳಿಗೆ ಕಳಿಸಿದನು. ಶಾಸ್ತ್ರನಿಪುಣನಾದ ವಿದುರನು ಮೊದಲು ದ್ರುಪದ ನನ್ನು ಕಂಡನು. ದ್ರುಪದನೂ ನ್ಯಾಯಕುಶಲನಿದ್ದನು. ಪರಸ್ಪರರ ಕುಶಲ ಪ್ರಶ್ನಗಳಾದವು. ಅಲ್ಲಿಯೇ ಪಾಂಡವ–ಕೇಶವರು ವಿದುರನ ಕಣ್ಣಿಗೆಬಿದ್ದರು. ಅವರನ್ನು ವಿದುರನು ಪ್ರೇಮಪೂರ್ವಕ ಆಲಿಂಗಿಸಿ ಆರೋಗ್ಯವನ್ನು ವಿಚಾರಿಸಿದನು. ಬಳಿಕ ಪಾಂಡವರು ಯಥಾಕ್ರಮ ವಿದುರನನ್ನು ಪೂಜಿಸಿದರು. ಆಮೇಲೆ ವಿದುರನು ಪಾಂಡವರಿಗೆ— "ಧೃತರಾಷ್ಟ್ರನು ಪ್ರೇಮಪೂರ್ವಕ ನಿಮ್ಮ ಯೋಗಕ್ಷೇಮವನ್ನು ವಿಚಾರಿ ಸಿರುವನೆಂ"ದು ಹೇಳಿದನು. ಪಾಂಡವ, ದ್ರುಪದ ಮೊದಲಾದವರಿಗೆ ತಂದ ಉಡುಗರೆಗಳನ್ನು ಅವರವರಿಗೆ ವಿದುರನು ಕೊಟ್ಟನು. ಆಮೇಲೆ ವಿನ ಯಶಾಲಿಯಾದ ವಿದುರನು ಶ್ರೀಕೃಷ್ಣನಸಮಕ್ಷ ದ್ರುಪದನಿಗೆ, ಧೃತರಾಷ್ಟ್ರ–ಭೀಷ್ಮ–ದ್ರೋಣರು ನಿನ್ನ ಕುಶಲವ ವಿಚಾರಿಸಿರುವರೆಂತಲೂ, ನಿನ್ನೊ ಡನೆ ತಮಗಾದ ಸಂಬಂಧಕ್ಕಾಗಿ ಆದ ಆನಂದವನ್ನು ತಿಳಿಸೆಂದು ಹೇಳಿರು ವರೆಂತಲೂ ಹೇಳಿದನು. ಆತನು ಮತ್ತೆ ದ್ರುಪದನನ್ನು ಕುರಿತು— "ಯಜ್ಞಸೇನಾ, ಬಹಳ ಹೇಳುವದೇನು? ನಿನ್ನ ಸಂಬಂಧವಾದದ್ದರಿಂದ ಧೃತರಾಷ್ಟ್ರಾದಿಗಳಿಗಾದ ಆನಂದವು, ಪ್ರತ್ಯಕ್ಷ ರಾಜ್ಯಲಾಭದಿಂದಲೂ ಅವರಿಗಾಗುವದಿಲ್ಲ, ಆದ್ದರಿಂದ ದ್ರುಪದರಾಜಾ, ಬೇಗನೆ ಪಾಂಡವರನ್ನು

ಹಸ್ತಿನಾವತಿಗೆ ಕಳಿಸಿಕೊಡು. ಪ್ರಜೆಗಳು ಅವರನ್ನು ನೋಡಲು ಉತ್ಸುಕರಾಗಿರುವರು. ಕುರುಕುಲದ ಸ್ತ್ರೀಯರು ದ್ರೌಪದಿಯನ್ನು ನೋಡಲು ಆತುರಪಡುತ್ತಿರುವರು. ಹಸ್ತಿನಾವತಿಯನ್ನು ಬಿಟ್ಟು ಬಹುದಿವಸವಾದದ್ದರಿಂದ, ಪಾಂಡವರಿಗೂ ಚಡಪಡಿಕೆಯಾಗಿರಬಹುದು. ಅವರು ಬರುವರೆಂಬ ಸುದ್ದಿಯನ್ನು ಹೇಳುವದಕ್ಕಾಗಿ ನಾನು ಹಸ್ತಿನಾವತಿಗೆ ಒಂಟೆಯ ಸವಾರರನ್ನು ಮುಂದೆ ಕಳಿಸುವೆನು.

**೨೦೭ನೇ ಅಧ್ಯಾಯ—ಪಾಂಡವರು ಹಸ್ತಿನಾವತಿಗೆಬಂದದ್ದು**–ವಿದುರನ ಈ ಮಾತುಗಳನ್ನು ಕೇಳಿ ದ್ರುಪದನು ಆತನನ್ನು ಕುರಿತು—

ದ್ರುಪದ—ಪ್ರಾಜ್ಞಾ ವಿದುರಾ, ನಿನ್ನ ಮಾತು ನನ್ನ ಮನಸಿಗೆ ಬಂದಿತು. ಮಹಾತ್ಮರಾದ ಪಾಂಡವರು ಅತ್ತಕಡೆಗೆ ಹೋಗುವದು ರೀತಿಗೆ ಸರಿಯಾದದ್ದು ; ಆದರೆ ನನ್ನ ಸಂಬಂಧವು ಸೂಕ್ಷ್ಮವಾಗಿರುವದರಿಂದ, ನನ್ನ ಬಾಯಿಂದ ಹೋಗಿರೆಂದು ಅವರಿಗೆ ಹೇಳುವದು ಯೋಗ್ಯವಾಗಿ ತೋರುವದಿಲ್ಲ. ಪಾಂಡವರ ಹಾಗು ಅವರ ಹಿತಕರ್ತೃಗಳಾದ ಬಲರಾಮ-ಕೃಷ್ಣರ ಮನಸ್ಸಿಗೆ ಬಂದಾಗ ಅವರು ಹೋಗಲಿ.

ಯುಧಿಷ್ಠಿರ—ಮಹಾರಾಜಾ ದ್ರುಪದಾ, ಅನುಯಾಯಿಗಳೊಡನೆ ನಾವು ನಿನ್ನನ್ನು ಸರ್ವಥಾ ಅವಲಂಬಿಸಿರುವೆವು. ನೀನು ಸ್ವಸಂತೋಷದಿಂದ ಆಜ್ಞಾಪಿಸಿದಂತೆ ನಾವು ಮಾಡುವೆವು.

ಕೃಷ್ಣ—ಪಾಂಡವರು ಅತ್ತಕಡೆಗೆ ಹೋಗುವದು ನನಗೆ ನೆಟ್ಟಗೆ ಕಾಣುತ್ತದೆ ; ಆದರೆ ದ್ರುಪದನು ಎಲ್ಲ ಧರ್ಮವನ್ನು ಬಲ್ಲವನಾದದ್ದರಿಂದ ಆತನು ಹೇಳಿದ್ದು ನಿಜವು.

ದ್ರುಪದ—ಮಹಾಬಾಹು ಪುರುಷೋತ್ತಮನು ಹೇಳಿದ್ದೇ ನಿಸ್ಸಂಶಯವಾಗಿ ನನಗೆ ಮಾನ್ಯವು. ಯಾಕಂದರೆ ಪಾಂಡವರ ಹಿತದಸಲುವಾಗಿ ಹಗಲು ರಾತ್ರಿ ವಾಸುದೇವನು ಚಿಂತಿಸುವಂತೆ, ಪ್ರತ್ಯಕ್ಷ ಯುಧಿಷ್ಠಿರನೂ ಚಿಂತಿಸುತ್ತಿರಲಿಕ್ಕಿಲ್ಲ.

ಈ ಮೇರೆಗೆ ನುಡಿದು ದ್ರುಪದನು ಹಸ್ತಿನಾವತಿಗೆ ಹೋಗುವದಕ್ಕಾಗಿ ಪಾಂಡವರಿಗೆ ಅನುಜ್ಞೆಯಿತ್ತನು. ಆಗ ವಿದುರ, ಕೃಷ್ಣ, ಪಾಂಡವರು ಕುಂತಿ-ದ್ರೌಪದಿಯರನ್ನು ಕರಕೊಂಡು ಹಸ್ತಿನಾವತಿಗೆ ಬಂದರು.

ವಿಕರ್ಣ, ದ್ರೋಣ, ಕೃಪಾದಿಗಳು ಅವರನ್ನು ಎದುರುಗೊಂಡು ಕರತರಲು, ಪುರಜನರು ಬಹಳ ಸಂತೋಷಪಟ್ಟರು. ಪ್ರತ್ಯಕ್ಷ ಪಂಡುರಾಜನೇ ಬಂದಂತೆ ಅವರಿಗೆ ಆನಂದವಾಯಿತು. ಪಾಂಡವರಿಗೆ ಸಂತೋಷವಾಗುವಂಥ ಹಲವು ಆನಂದೋದ್ಗಾರಗಳು ಅವರ ಮುಖದಿಂದ ಹೊರಟವು. ಧೃತರಾಷ್ಟ್ರ, ಭೀಷ್ಮ, ಬೇರೆ ಗುರುಜನರು ಇವರನ್ನು ಪಾಂಡವರು ವಂದಿಸಿದರು. ಕುಶಲಪ್ರಶ್ನಗಳಾದಬಳಿಕ ಧೃತರಾಷ್ಟ್ರನು ಗೊತ್ತುಮಾಡಿಕೊಟ್ಟ ಮನೆಯಲ್ಲಿ ಅವರು ವಾಸಿಸಿದರು. ಅಲ್ಲಿ ಅವರು ಕೆಲವುದಿನ ವಿಶ್ರಾಂತಿಯನ್ನು ಹೊಂದಿದಬಳಿಕ ಧೃತರಾಷ್ಟ್ರ-ಭೀಷ್ಮರು ಅವರನ್ನು ಕರೆಸಿದರು. ಆಮೇಲೆ ಧೃತರಾಷ್ಟ್ರನು ಪಾಂಡವರಿಗೆ—"ಯುಧಿಷ್ಠಿರಾ, ಇನ್ನು ನಿಮಗೂ, ಕೌರವರಿಗೂ ಕಲಹಬೇಡ. ನಿಮಗೆ ನಾನು ಅರ್ಧರಾಜ್ಯಕೊಡುವೆನು. ಖಾಂಡವಪ್ರಸ್ಥಕ್ಕೆ ಹೋಗಿ ಸುಖದಿಂದ ವಾಸಮಾಡಿರಿ." ಎಂದು ಹೇಳಿದನು. ಬಳಿಕ ಪಾಂಡವರು ಕೃಷ್ಣೆಯೊಡನೆ ಖಾಂಡವಪ್ರಸ್ಥವನ್ನು ಪ್ರವೇಶಿಸಿದರು.

**ಇಂದ್ರಪ್ರಸ್ಥನಿರ್ಮಾಣ**—ಜನಮೇಜಯಾ, ಪಾಂಡವರು ಖಾಂಡವಾರಣ್ಯಕ್ಕೆ ಹೋದಬಳಿಕ ಶುದ್ಧವೂ, ಕಲ್ಯಾಣಕಾರಕವೂ ಆದ ಪ್ರದೇಶವನ್ನು ನೋಡಿ, ವ್ಯಾಸರನ್ನು ಮುಂದೆಮಾಡಿಕೊಂಡು ಇಂದ್ರಪ್ರಸ್ಥನಗರವನ್ನು ಸ್ಥಾಪಿಸಿದರು. ಮೊದಲು ಅರಿಷ್ಟನಿವಾರಣಾರ್ಥವಾಗಿ ಶಾಂತಿ ಮೊದಲಾದವನ್ನು ಮಾಡಿ, ನಗರದ ರೂಪರೇಖೆಗಳನ್ನು ತೆಗೆದರು. ಬಳಿಕ ಸಮುದ್ರಪ್ರಾಯವಾದ ಕಂದಕವನ್ನು ತೋಡಿ, ಎತ್ತರವಾದ ಗೋಡೆಗಳನ್ನು ಕಟ್ಟಿ, ಮಧ್ಯದಲ್ಲಿ ಸುಂದರವಾದ ಮಂದಿರಗಳನ್ನು ರಚಿಸಿದರು. ಅಲ್ಲಿಯ ಮಾರ್ಗಗಳು ಪ್ರಶಸ್ತವಾಗಿದ್ದು, ಒಂದೇ ಅಳತೆಯವಾಗಿದ್ದವು. ನಗರದ ರಕ್ಷಣಕ್ಕಾಗಿ ಅಲ್ಲಲ್ಲಿ ತೋಪು ಮೊದಲಾದ ಯುದ್ಧೋಪಯೋಗಿ ಯಂತ್ರಗಳನ್ನು ಇಟ್ಟರು. ಅದರಿಂದ ನಗರಕ್ಕೆ ಶೋಭೆಯೂ ಉಂಟಾಯಿತು. ಅಲ್ಲಿ ಸಾಲಾಗಿ ಅಂತಸ್ತಿನ ಮನೆಗಳು ಒಪ್ಪುತ್ತಿದ್ದವು. ಒಂದು ಶುಭಕಾರಕ ಭೂಭಾಗದಲ್ಲಿ ಯುಧಿಷ್ಠಿರನ ಅರಮನೆಯು ಸರ್ವಶ್ರೇಷ್ಠವಾಗಿ ಶೋಭಿಸುತ್ತಿತ್ತು. ನ್ಯಾಯಿಯಾದ ಯುಧಿಷ್ಠಿರನ ರಾಜ್ಯದಲ್ಲಿ ವೇದಜ್ಞರಾದ ಬ್ರಾಹ್ಮಣರು ಪ್ರೀತಿಯಿಂದ ಇರತೊಡಗಿದರು. ಬೇರೆಬೇರೆ ದೇಶಗ

ಳಿಂದ ಬೇರೆಬೇರೆ ಭಾಷೆಗಳನ್ನಾಡುವ ಜನರು, ದ್ರವ್ಯಸಂಪಾದಿಸುವ ಇಚ್ಛೆಯಿಂದ ಅಲ್ಲಿ ವಾಸಿಸಿದರು. ಹಲವು ಶಿಲ್ಪಿಗರು ಆ ಪಟ್ಟಣಕ್ಕೆ ಬಂದರು. ಆ ಪಟ್ಟಣದ ಸುತ್ತುಮುತ್ತು ಮನೋಹರವಾದ ಉದ್ಯಾನವಿದ್ದು, ಅಲ್ಲಿ ವಿವಿಧವೃಕ್ಷಗಳು ಸಾಲಾಗಿ ಒಪ್ಪುತ್ತಿದ್ದವು. ವಿವಿಧವಾದ ಆಕಾರದ ಸರೋವರಗಳು ಸ್ವಚ್ಛಜಲಪೂರ್ಣವಾಗಿ ಕಮಲಗಳಿಂದ ಶೋಭಿಸುತ್ತಿದ್ದವು ಅಲ್ಲಲ್ಲಿ ವಿಹಾರಸ್ಥಾನಗಳೂ, ಕೃತಕವಾದ ಪರ್ವತಗಳೂ ಕಂಗೊಳಿಸುತ್ತಿದ್ದವು. ರಾಜಾ ಜನಮೇಜಯಾ, ಇಂಥ ರಮಣೀಯವೂ, ಪುಣ್ಯಶೀಲಜನರುಳ್ಳದ್ದೂ ಆದ ರಾಜಧಾನಿಯಲ್ಲಿ ವಾಸಿಸುತ್ತಿದ್ದದ್ದರಿಂದ, ಪಾಂಡವರ ಆನಂದವು ಅಖಂಡವಾಗಿ ಹೆಚ್ಚಹತ್ತಿತು. ಈಮೇರೆಗೆ ಪಾಂಡವರನ್ನು ಆ ರಾಜಧಾನಿಯಲ್ಲಿ ಸ್ಥಾಪಿಸಿ ಅವರ ಅನುಮತಿಯಿಂದ ಬಲರಾಮನೊಡನೆ ಶ್ರೀಕೃಷ್ಣನು ದ್ವಾರಕೆಗೆ ಹೋದನು.

**೨೦೮ನೇ ಅಧ್ಯಾಯ—ನಾರದರ ಆಗಮನ**—ಹೀಗೆ ಪಾಂಡವರು ಇಂದ್ರಪ್ರಸ್ಥದಲ್ಲಿ ನ್ಯಾಯದಿಂದ ರಾಜ್ಯವಾಳುತ್ತ ಪ್ರಜಾರಂಜಕರಾಗಿ ಆನಂದದಿಂದ ಇರುತ್ತಿರಲು, ಒಂದುದಿನ ನಾರದರು ಅವರ ಸಭೆಗೆಬಂದರು. ಆಗ ಯುಧಿಷ್ಠಿರನು ತನ್ನ ಆಸನವನ್ನು ಅವರಿಗೆ ಕೊಟ್ಟು ಅರ್ಘ್ಯಪಾದ್ಯಾದಿಗಳಿಂದ ಅವರನ್ನು ಪೂಜಿಸಿದನು. ಬಳಿಕ ನಾರದರು ಪಾಂಡವರಿಗೆ ಕುಳಿತುಕೊಳ್ಳಿರೆಂದು ಹೇಳಲು, ಅವರು ತಮ್ಮ ಸ್ಥಾನಗಳಲ್ಲಿ ಕುಳಿತುಕೊಂಡರು. ಆಗ ಯುಧಿಷ್ಠಿರನು ದ್ರೌಪದಿಗೆ ನಾರದರು ಬಂದ ಸುದ್ದಿಯನ್ನು ಹೇಳಿಕಳಿಸಲು, ಆಕೆಯು ಪಾಂಡವರೊಡನೆ ಕುಳಿತಿದ್ದ ನಾರದರಬಳಿಗೆ ಬಂದು ಅವರನ್ನು ನಮಸ್ಕರಿಸಿ, ಮರ್ಯಾದೆಯಿಂದ ಸೆರಗುಹೊದ್ದುಕೊಂಡು ನಿಂತುಕೊಂಡಳು. ಆಗ ನಾರದರು ಆಕೆಯನ್ನು ಆಶೀರ್ವದಿಸಿ, ಇನ್ನು ನೀನು ಹೋಗೆಂದು ಹೇಳಿದರು. ದ್ರೌಪದಿಯು ಹೋದಬಳಿಕ ಭಗವಾನ್ ನಾರದರು ಯುಧಿಷ್ಠಿರನೇ ಮೊದಲಾದ ಪಂಚಪಾಂಡವರನ್ನು ಕುರಿತು—"ಈ ಕೀರ್ತಿಮತಿಯಾದ ಪಾಂಚಾಲಕನ್ಯೆಯು ನಿಮ್ಮ ಐವರ ಧರ್ಮಪತ್ನಿಯಾಗಿರುವದರಿಂದ, ಆಕೆಯಮೂಲಕ ನಿಮ್ಮಲ್ಲಿ ಭೇದಭಾವವು ಉತ್ಪನ್ನವಾಗದಂತೆ ನೀವು ನಡೆದುಕೊಳ್ಳಿರಿ. ಇಲ್ಲದಿದ್ದರೆ ನಿಮ್ಮ ಗತಿಯು ಸುಂದೋಪಸುಂದರೆಂಬ ಅಣ್ಣತಮ್ಮಂದಿರಂತೆ ಆದೀತು," ಎಂದು

ಹೇಳಲು, ಯುಧಿಷ್ಠಿರನು ಸುಂದೋಪಸುಂದರ ಕಥೆಯನ್ನು ಹೇಳಬೇಕೆಂದು ಕೇಳಿಕೊಂಡನು.

**೨೦೯ನೇ ಅಧ್ಯಾಯ—ಸುಂದೋಪಸುಂದರ ಕಥೆ**—ಅಪ್ಪಾ, ಯುಧಿಷ್ಠಿರಾ, ಹಿರಣ್ಯಕಶಿಪು ಎಂಬ ಹೆಸರಿನ ಮಹಾದೈತ್ಯನ ವಂಶದಲ್ಲಿ ನಿಕುಂಭನೆಂಬ ಹೆಸರಿನ ಒಬ್ಬ ದೊಡ್ಡ ತಪಸ್ವಿಯಾದ ದೈತ್ಯನು ಹುಟ್ಟಿದನು. ಆತನ ಮಕ್ಕಳು ಸುಂದೋಪಸುಂದರೆಂಬವರು. ಅವರು ಅತ್ಯಂತ ಕ್ರೂರರು, ಪರಾಕ್ರಮಿಗಳು, ಮಹಾಬಲಿಷ್ಠರು ಇದ್ದರು. ಅವರಿಬ್ಬರಲ್ಲಿ ಪರಸ್ಪರ ಪ್ರೇಮಬಹಳ. ಅವರಿಬ್ಬರೂ ಒಂದೇ ನಿರ್ಧಾರದವರಾಗಿದ್ದು, ಅವರು ಯಾವತ್ತು ಕೆಲಸಗಳಲ್ಲಿ ಒಂದೇ ವಿಚಾರದಿಂದ ನಡೆಕೊಳ್ಳುತ್ತಿದ್ದರು. ಯಾವ ಕೆಲಸಮಾಡುವದಾದರೂ ಕೂಡಿಯೇ ಮಾಡುತ್ತಿದ್ದರು. ಅವರು ಪರಸ್ಪರ ಹಿತಮಾಡುತ್ತಿದ್ದರು ; ಪರಸ್ಪರರು ಸವಿಮಾತುಗಳನ್ನಾಡುತ್ತಿದ್ದರು. ಒಟ್ಟಿಗೆ, ಒಂದೇವಸ್ತುವನ್ನು ಎರಡು ಭಾಗಮಾಡಿರುವಂತೆ ಅವರು ಇರುತ್ತಿದ್ದರು. ಹೀಗಿರುವಾಗ ಅವರು ತ್ರೈಲೋಕ್ಯಗಳನ್ನು ಗೆಲ್ಲಬೇಕೆಂಬ ಸಂಕೇತದಿಂದ ಘೋರ ತಪಸ್ಸುಮಾಡುವದಕ್ಕೆ ದೀಕ್ಷಿತರಾಗಿ, ವಿಂಧ್ಯಪರ್ವತಕ್ಕೆ ಹೋದರು. ಅಲ್ಲಿ ಅವರು ಜಟಾವಲ್ಕಲಗಳನ್ನು ಧರಿಸಿ ದೀರ್ಘಕಾಲ ತಪಸ್ಸುಮಾಡಿದರು ದೇವತೆಗಳು ಅಸೂಯೆಪಟ್ಟು ಎಷ್ಟೆ ವಿಘ್ನಮಾಡಿದರೂ ಅವರ ತಪಸ್ಸು ಭಂಗವಾಗಲಿಲ್ಲ. ಅವರ ತಪಸ್ಸಿನಿಂದ ತ್ರೈಲೋಕ್ಯಗಳಿಗೆ ತಾಪವಾಗತೊಡಗಿತು. ಆಗ ಬ್ರಹ್ಮದೇವನು ಆ ದೈತ್ಯರಬಳಿಗೆ ಬಂದು—"ವರಗಳನ್ನು ಕೇಳಿಕೊಳ್ಳಿರಿ" ಅನ್ನಹತ್ತಿದನು. ಆಗ ಆ ದೃಢಪರಾಕ್ರಮಿಗಳಾದ ಸುಂದೋಪಸುಂದರು ಬ್ರಹ್ಮದೇವನಿಗೆ—

ಸುಂದೋಪಸುಂದ—ಪಿತಾಮಹನೇ, ನೀನು ನಮ್ಮ ತಪಸ್ಸಿಗೆ ಸಂತುಷ್ಟನಾಗಿದ್ದರೆ, ನಮ್ಮಿಬ್ಬರಿಗೆ ಮಾಯೆ, ಅಸ್ತ್ರವಿದ್ಯೆ, ಅತುಲಬಲ, ಬೇಕಾದ ರೂಪಧರಿಸುವ ಸಾಮರ್ಥ್ಯ, ಅಮರತ್ವ ಇವನ್ನು ಕೊಡು.

ಬ್ರಹ್ಮದೇವ—ಅಸುರರೇ, ಅಮರತ್ವವನ್ನೊಂದು ಬಿಟ್ಟು ಉಳಿದವೆಲ್ಲ ನಿಮಗೆ ಪ್ರಾಪ್ತವಾಗುವವು. ನೀವು ತ್ರೈಲೋಕ್ಯಗಳನ್ನು ಗೆಲ್ಲುವ ಉದ್ದೇಶದಿಂದ ತಪಸ್ಸು ಮಾಡಿರುವದರಿಂದ, ನಿಮಗೆ ಅಮರತ್ವವನ್ನು

ಕೊಡಲಾಗುವದಿಲ್ಲ. ಅಮರರಿಗೆ ಸಮಾನವಾದ ಸ್ಥಿತಿಯು ಪ್ರಾಪ್ತವಾಗು ವಂತಹದೊಂದು ವರವನ್ನು ಬೇಕಾದರೆ ಬೇಡಿಕೊಳ್ಳಿರಿ.

ಸುಂದೋಪಸುಂದ—ಹಾಗೆಯೇ ಆಗಲಿ. ನಮ್ಮಿಬ್ಬರಿಗೆ ಪರಸ್ಪರ ರಿಂದಲ್ಲದೆ ಬೇರೆ ಯಾವ ಸ್ಥಾವರಜಂಗಮ ವಸ್ತುಗಳಿಂದಲೂ ಮರಣವು ಉಂಟಾಗದಂತೆ ವರಪ್ರದಾನಮಾಡು.

ಬ್ರಹ್ಮದೇವ—ಹಾಗೇ ಆಗಲಿ, ನಿಮ್ಮ ಇದುವರಗಳೂ ಸಿದ್ಧಿಸುವವು.

ಯುಧಿಷ್ಠಿರಾ, ಹೀಗೆ ವರಪ್ರದಾನಮಾಡಿ ಬ್ರಹ್ಮದೇವನು ಹೊರಟು ಹೋಗಲು, ಸುಂದೋಪಸುಂದರು ಸರ್ವಲೋಕಗಳಿಗೂ ಅವಧ್ಯರಾಗಿ ತಮ್ಮ ಮನೆಗೆ ಬಂದರು. ಅವರ ಆಪ್ತೇಷ್ಟರಿಗೂ, ಪರಮಾನಂದವಾ ಯಿತು. ಸುಂದೋಪಸುಂದರು ಜಟಾವಲ್ಕಲಾದಿಗಳನ್ನು ಬಿಟ್ಟು ಕಿರೀಟ ಕುಂಡಲಾದಿಗಳನ್ನು ಧರಿಸಿ ತಮ್ಮ ರಾಜ್ಯದಲ್ಲಿ ಸದಾ ಕೌಮುದೀ ಉತ್ಸವ ವನ್ನು ನಡೆಸಿದರು. ಅವರ ಆಪ್ತೇಷ್ಟರು ಸದಾ ಆನಂದಮಗ್ನರಾಗಿರು ವರು. ಆ ದೈತ್ಯರ ನಗರದಲ್ಲಿ ಎಲ್ಲಕಡೆಯಲ್ಲಿ ಆನಂದವು ತುಂಬಿತುಳುಕು ತ್ತಿತ್ತು. ಅವರಿಗೆ ನಾನಾಪ್ರಕಾರದ ರೂಪಗಳನ್ನು ಧರಿಸಲಿಕ್ಕೆ ಬರುತ್ತಿ ದ್ದದ್ದರಿಂದ, ನಿತ್ಯ ಹೊಸಹೊಸ ಕ್ರೀಡೆಗಳನ್ನು ಮಾಡುವಾಗ, ಅವರ ಅನೇಕ ವರ್ಷಗಳು ಒಂದು ದಿವಸದಂತೆ ಹೊರಟುಹೋದವು.

**೨೧೧ನೇ ಅಧ್ಯಾಯ—ಸುಂದೋಪಸುಂದರ ಹಾವಳಿ—ಈ** ಮೇರೆಗೆ ಬಹುದಿವಸ ಆನಂದದಿಂದಿರುತ್ತಿರಲು, ಆ ಸುಂದೋಪಸುಂದರಿಗೆ ತ್ರೈಲೋಕ್ಯಗಳನ್ನು ಗೆಲ್ಲುವ ಇಚ್ಛೆಯುಂಟಾಯಿತು. ಅವರು ಗುರುಹಿರಿ ಯರ, ಹಾಗು ಮಂತ್ರಿಗಳ ಅನುಮತಿಯನ್ನು ಪಡೆದು, ಪ್ರಯಾಣನಿಷಿದ್ಧ ವಾದ ಮಘಾನಕ್ಷತ್ರದಲ್ಲಿ ರಾತ್ರಿ ವಿಜಯಾರ್ಥವಾಗಿ ಹೊರಟರು. ಅವರು ದೇವಲೋಕಕ್ಕೆ ಹೋಗಲು, ದೇವತೆಗಳು ಅವರ ವರಪ್ರದಾನದ ಸಂಗತಿ ಯನ್ನು ಬಲ್ಲವರಾದದ್ದರಿಂದ, ತಮ್ಮತಮ್ಮ ಲೋಕಗಳನ್ನು ಅವರಿಗೆ ಬಿಟ್ಟು ಕೊಟ್ಟು ಬ್ರಹ್ಮಲೋಕಕ್ಕೆ ಹೋದರು. ಹೀಗೆ ದೇವಲೋಕಗಳು ಅನಾ ಯಾಸವಾಗಿ ಕೈಸೇರಲು, ಆ ದೈತ್ಯರು ಪಾತಾಲಕ್ಕೆ ಹೋಗಿ ಸರ್ಪಗಳನ್ನು ಸದೆಬಡಿದು ಪಾತಾಳಲೋಕವನ್ನು ಕೈಸೇರಿಸಿಕೊಂಡು, ಸಮುದ್ರದಲ್ಲಿ ವಾಸಿಸುವ ಮ್ಲೇಂಛಜಾತಿಯ ನಾಶಮಾಡಿ, ಭೂಲೋಕದ ವಿಜಯವನ್ನು

ಆರಂಭಿಸಿದರು. ಅವರು ಯಜ್ಞಯಾಗಾದಿಗಳನ್ನು ಕೆಡಿಸುವರು; ಋಷಿಗಳನ್ನು ಕೊಲ್ಲುವರು; ಅವರ ಆಶ್ರಮಗಳನ್ನು ಹಾಳಗೆಡವುವರು. ಋಷಿಗಳು ಸಿಟ್ಟಾಗಿ ಶಾಪಕೊಡಲು, ಬ್ರಹ್ಮದೇವರ ವರದಿಂದ ಅವರ ಶಾಪಗಳು ಆ ದೈತ್ಯರಮೇಲೆ ನಾಟಬಾಗುವವು! ಆಗ ಋಷಿಗಳು ದಾರಿಸಿಕ್ಕತ್ತ ಓಡಿ ಹೋಗಹತ್ತುವರು. ಹೀಗೆ ದುಷ್ಟದೈತ್ಯರ ಹಾವಳಿಯಿಂದ ಬ್ರಾಹ್ಮಣ-ಕ್ಷತ್ರಿಯ ಜಾತಿಗಳು ನಷ್ಟವಾದವು. ಎಲ್ಲಕಡೆಯಲ್ಲಿ ಹಾಹಾಕಾರವುಂಟಾಯಿತು. ವ್ಯವಹಾರೋದ್ಯೋಗಗಳು ನಡೆಯದಾದವು. ಒಕ್ಕಲತನವು ಕಟ್ಟಾಯಿತು. ಯಜ್ಞಯಾಗಾದಿಗಳು ನಿಂತವು. ವೇದಾಧ್ಯಯನವು ಲೋಪವಾಯಿತು ನೋಡಿದತ್ತ ಮುರಕ ಆಶ್ರಮಗಳು, ನೋಡಿದತ್ತ ಹಾಳುಮನೆಗಳು, ನೋಡಿದತ್ತ ಎಲುವಿನ ರಾಶಿಗಳು! ಹೀಗಾಗಿ ಕಣ್ಣು ತೆರೆದು ನೋಡುವದೂ ಭಯಪ್ರದವಾಯಿತು; ನಕ್ಷತ್ರಗಳೂ, ಚಂದ್ರ ಸೂರ್ಯರೂ ನಿಸ್ತೇಜರಾದರು. ದೇವತೆಗಳ ಸೊಂಡೆಗಳು ಒಣಗಿದವು. ಹೀಗೆ ತಮ್ಮ ವಿಜಯಕ್ಕೆ ಎಲ್ಲಿಯೂ ಸ್ಥಳವಿಲ್ಲವೆಂಬದನ್ನೂ, ತಮಗೆ ಎದುರು ಯಾರೂ ಇಲ್ಲವೆಂಬದನ್ನೂ ಅರಿತು, ಸುಂದೋಪಸುಂದರು ಕುರುಕ್ಷೇತ್ರಕ್ಕೆ ಬಂದು ಇರತೊಡಗಿದರು.

**೨೧೧ನೇ ಅಧ್ಯಾಯ—ಸುಂದೋಪಸುಂದ ವಧೋಪಾಯ—**

ಹೀಗೆ ಎಲ್ಲಕಡೆಯಲ್ಲಿಯೂ ಭಯಂಕರ ಪ್ರಳಯವು ಉಂಟಾಗಿರುವಾಗ ಜಿತೇಂದ್ರಿಯರೂ, ಜಿತಕ್ರೋಧರೂ, ಜಿತಾತ್ಮರೂ ಆದ ದೇವರ್ಷಿ—ಮಹರ್ಷಿಗಳು, ಸಿದ್ಧರು ವ್ಯಥೆಪಟ್ಟು ಜಗತ್ತಿನಮೇಲೆ ಕೃಪೆಮಾಡುವದಕ್ಕಾಗಿ ಬ್ರಹ್ಮಲೋಕಕ್ಕೆ ಹೋಗಿ, ಸುಂದೋಪಸುಂದರ ಹಾವಳಿಯನ್ನು ಯಾವತ್ತು ದೇವತೆಗಳ ಹಾಗು ಋಷಿಗಳ ಸಮಕ್ಷ ಕ್ರಮವಾಗಿ ವರ್ಣಿಸಿದರು. ಆಗ ಆ ಸಭೆಯಲ್ಲಿ ನೆರೆದವರು ಸುಂದೋಪಸುಂದರನ್ನು ನಾಶಗೊಳಿಸುವ ಉಪಾಯವನ್ನು ಯೋಚಿಸಬೇಕೆಂದು, ಬ್ರಹ್ಮದೇವನಿಗೆ ಒತ್ತಾಯಮಾಡಿದರು. ಗಳಿ ಬ್ರಹ್ಮದೇವನು ಕ್ಷಣಹೊತ್ತು ಆಲೋಚಿಸಿ ವಿಶ್ವಕರ್ಮನನ್ನು ಕರೆದು—"ನೀನು ಲೋಕೋತ್ತರ ಸುಂದರಿಯಾದ ಒಬ್ಬ ಸ್ತ್ರೀಯನ್ನು ನಿರ್ಮಿಸು" ಎಂದು ಹೇಳಿದನು. ಆಗ ವಿಶ್ವಕರ್ಮನು ಜಗತ್ತಿನೊಳಗಿನ ಸೌಂದರ್ಯದ ಎಳ್ಳುಕಾಳಷ್ಟು ಎಳ್ಳುಕಾಳಷ್ಟು ಭಾಗವನ್ನು ತಕ್ಕೊಂಡು, ಸೌಂದರ್ಯದ

ನಿಧಿಯಾದ ಒಬ್ಬ ಸ್ತ್ರೀಯನ್ನು ನಿರ್ಮಿಸಲು, ಬ್ರಹ್ಮದೇವನು ಆಕೆಗೆ "ತಿಲೋತ್ತಮೆ" ಎಂದು ಹೆಸರನ್ನಿಟ್ಟನು ಆಗ ತಿಲೋತ್ತಮೆಯು ಬ್ರಹ್ಮದೇವನನ್ನು ಕುರಿತು–"ಎಲೈ ಪ್ರಜಾನಾಥನೇ, ನನ್ನನ್ನು ಯಾವ ಕೆಲಸಕ್ಕಾಗಿ ನಿರ್ಮಿಸಿದೆ?" ಎಂದು ಕೇಳಲು, ಬ್ರಹ್ಮದೇವನು–"ತಿಲೋತ್ತಮೇ, ನೀನು ಸುಂದೋಪಸುಂದರ ಬಳಿಗೆ ಹೋಗಿ, ನಿನ್ನ ಸೌಂದರ್ಯದ ಸಹಾಯದಿಂದ ಅವರಲ್ಲಿ ಕಲಹವನ್ನುಂಟುಮಾಡು," ಎಂದು ಹೇಳಲು, ತಿಲೋತ್ತಮೆಯು ಅದಕ್ಕೆ ಒಪ್ಪಿಕೊಂಡು ಸುಂದೋಪಸುಂದರ ಬಳಿಗೆ ಹೋದಳು.

**೨೧೨ನೇ ಅಧ್ಯಾಯ—ಸುಂದೋಪಸುಂದರ ನಿಧನ—** ಇತ್ತ ಸುಂದೋಪಸುಂದರು ಮೂರು ಲೋಕಗಳನ್ನು ಜಯಿಸಿ, ತಮಗೆ ಯಾರೂ ಎದುರಿಲ್ಲದ್ದರಿಂದ ಕೃತಕೃತ್ಯರಾದೆವೆಂದು ತಿಳಿದು, ಯಾವತ್ತು ಲೋಕಗಳಲ್ಲಿಯ ಉತ್ತಮೋತ್ತಮ ವಸ್ತುಗಳನ್ನು ಸೆಳೆದು ತಂದು, ದೇವತೆಗಳಂತೆ ಅವರು ಕೇವಲ ಭೋಗಾಸಕ್ತರಾದರು. ಅವರಲ್ಲಿ ಆಲಸ್ಯವು ಸೇರಿತು. ಅವರು ಎಲ್ಲಕಡೆಯಲ್ಲಿ ಸ್ವಚ್ಛಂದದಿಂದ ಕ್ರೀಡಿಸತೊಡಗಿದರು. ಒಮ್ಮೆ ವಿಂಧ್ಯಪರ್ವತದ ಶಿಖರದಮೇಲೆ ಸಭೆಯಲ್ಲಿ ಕುಳಿತು, ಸ್ತ್ರೀಯರ ಗೀತ–ನರ್ತನಗಳಿಂದ ಸಂತುಷ್ಟರಾಗಿರುವಾಗ, ಹೂಗಳನ್ನು ಎತ್ತುವ ನೆವದಿಂದ ತಿಲೋತ್ತಮೆಯು ಅಲ್ಲಿಗೆ ಬಂದಳು. ಮೇಲುವಸ್ತ್ರವನ್ನು ಹೊದ್ದುಕೊಂಡಿರದೆ, ಆಕೆಯು ತೆಳುವಾದ ಕೆಂಪುವಸ್ತ್ರವನ್ನುಟ್ಟುಕೊಂಡಿದ್ದಳು. ಮೊದಲೇ ದೈತ್ಯರು ಸೊಕ್ಕಿದವರು; ಅದರಲ್ಲಿ ಮದ್ಯಪಾನಮಾಡಿದ್ದರು. ಇಂಥ ಸ್ಥಿತಿಯಲ್ಲಿ ತಿಲೋತ್ತಮೆಯಂಥ ಸುಂದರಸ್ತ್ರೀಯು ಕಣ್ಣಿಗೆ ಬಿದ್ದಬಳಿಕ ಕೇಳುವದೇನು? ಆಕೆಯನ್ನು ನೋಡಿದಕೂಡಲೆ ಅವರು ಆತುರದಿಂದ ತಮ್ಮಸ್ಥಳದಿಂದೆದ್ದು, ತಿಲೋತ್ತಮೆಯ ಬಳಿಗೆ ಬಂದು ಭೋಗಾರ್ಥವಾಗಿ ಆಕೆಯನ್ನು ಪ್ರಾರ್ಥಿಸತೊಡಗಿದರು. ಸುಂದನು ಆಕೆಯ ಬಲಗೈಯನ್ನು ಹಿಡಿದನು. ಉಪಸುಂದನು ಆಕೆಯ ಎಡಗೈಯನ್ನು ಹಿಡಿದನು. ಆಗ ಸುಂದನು ಉಪಸುಂದನಿಗೆ—"ಉಪಸುಂದಾ, ನಾನು ಹಿರಿಯನು. ಈಕೆಯು ನನ್ನ ಹೆಂಡತಿಯು. ಅರ್ಥಾತ್ ಈಕೆಯು ನಿನಗೆ ತಾಯಿಯಾದದ್ದರಿಂದ ನೀನು ಹಿಂದಕ್ಕೆ ಸರಿ" ಅಂದನು. ಆಗ ಉಪಸುಂದನು—"ಹೀಗೇನು ಹೇಳುವೆ? ಈಕೆಯು ನನ್ನ ಹೆಂಡತಿಯಾದದ್ದರಿಂದ ನಿನಗೆ

ಸೊಸೆಯಂತೆ ಇರುವಳು ; ಆದ್ದರಿಂದ ನೀನು ಈಕೆಯನ್ನು ಮುಟ್ಟಬೇಡ'' ಎಂದು ಹೇಳಿದನು. ಒಡನೆ ಅವರು—''ಇವಳು ನನ್ನವಳು'' ''ಇವಳು ನನ್ನವಳು'' ಎಂದು ಕಲಹಬೆಳೆಸಿ, ಪರಸ್ಪರರು ಗದೆಗಳೊಡನೆ ಹೊಡೆದಾಡಿ ಇಬ್ಬರೂ ಮರಣಹೊಂದಿದರು !

ಈಮೇರೆಗೆ ಕಥೆಹೇಳಿ ನಾರದರು ಪಾಂಡವರಿಗೆ—''ಪಾಂಡವರೇ, ಹೀಗಿರುವದರಿಂದ ದ್ರೌಪದಿಯಮೂಲಕ ನಿಮ್ಮಲ್ಲಿ ಕಲಹ ಉಂಟಾಗದಂತೆ ಏನಾದರೂ ನಿರ್ಬಂಧಮಾಡಿಕೊಳ್ಳಿರಿ. ಪ್ರೇಮಭಾವದಿಂದ ಈ ಮಾತು ನಿಮಗೆ ನಾನು ಹೇಳುವೆನು. ನನ್ನಮೇಲೆ ನಿಮ್ಮ ನಿಜವಾದ ಲೋಭವಿದ್ದರೆ, ನನ್ನ ಸೂಚನೆಯಂತೆ ಮಾಡಿರಿ'' ಎಂದು ಹೇಳಿದರು. ಜನಮೇಜಯಾ, ಆ ಎಲ್ಲಬಂಧುಗಳು ಪರಸ್ಪರ ಪ್ರೇಮಬದ್ಧರಾದದ್ದರಿಂದ ನಾರದರ ಉಪದೇಶವು ಅವರಿಗೆ ಇಷ್ಟವಾಗಿ ತೋರಿತು. ಅವರು ತಮ್ಮತಮ್ಮೊಳಗೆ—''ಇನ್ನುಮೇಲೆ ನಮ್ಮೊಳಗಿನ ಯಾವನಾದರೊಬ್ಬನು ದ್ರೌಪದಿಯೊಡನೆ ಏಕಾಂತದಲ್ಲಿ ಕುಳಿತಿರುವಾಗ, ಅತ್ತಕಡೆಗೆ ಎರಡನೆಯವನು ಕಣ್ಣೆತ್ತಿ ನೋಡಿದರೆ, ಬ್ರಹ್ಮಚರ್ಯವ್ರತವನ್ನು ಧರಿಸಿ ಹನ್ನೆರಡುವರ್ಷ ವನವಾಸವನ್ನು ಭೋಗಿಸಬೇಕು'' ಎಂದು ನಿಯಮವನ್ನು ಮಾಡಿಕೊಂಡರು.



### ಶ್ರೀ ಶೇಷಸದ್ಗುರು-ಸೂಕ್ತಿರೂಪ

## ರಹಸ್ಯಗಳು

**(೪೮) ಅತ್ಯುತ್ಕರ್ಷವು ಪತನಹೇತುವು**—ಈ ಉಪಪರ್ವದಲ್ಲಿ ಸುಂದೋಪಸುಂದರು ಉತ್ಕರ್ಷಹೊಂದುತ್ತ ಹೊಂದುತ್ತ, ಕಡೆಗೆ ಅಪಕರ್ಷವನ್ನು ಹೇಗೆ ಹೊಂದಿದರೆಂಬದನ್ನು ವಿಚಾರಿಸಲೇಬೇಕು; ಯಾಕಂದರೆ ಉತ್ಕರ್ಷಾಪಕರ್ಷಗಳ ಚಕ್ರಪರಿಭ್ರಮಣವು ವ್ಯಕ್ತಿಗಾಗಲಿ ರಾಷ್ಟ್ರಕ್ಕಾಗಲಿ ಬಿಟ್ಟಿದ್ದಲ್ಲ. ಬೆಳಕಿನಮುಂದೆ ಕತ್ತಲೆಯೂ, ಕತ್ತಲೆಯಮುಂದೆ ಬೆಳಕೂ ಇರುವಂತೆ, ಉತ್ಕರ್ಷದಮುಂದೆ ಅಪಕರ್ಷವೂ, ಅಪಕರ್ಷದಮುಂದೆ ಉತ್ಕರ್ಷವೂ ಇದ್ದೇ ಇರುವವು; ಆದ್ದರಿಂದ ಯಾವ ವ್ಯಕ್ತಿಯೇ

ಆಗಲಿ, ಯಾವ ರಾಷ್ಟ್ರವೇ ಆಗಲಿ ತನ್ನ ಉತ್ಕರ್ಷಕ್ಕಾಗಿ ಉಬ್ಬಿ ಮೈಮರೆತು ಧರ್ಮಭ್ರಷ್ಟವಾಗಬಾರದು; ಅಪಕರ್ಷಕ್ಕಾಗಿ ಕುಗ್ಗಿಯೂ ಧರ್ಮಭ್ರಷ್ಟವಾಗಬಾರದು; ಯಾಕಂದರೆ ಉತ್ಕರ್ಷಾಪಕರ್ಷಗಳಂತೆ ಧರ್ಮವು ಚಂಚಲವಾಗಿರದೆ ಸ್ಥಿರವಾಗಿರುವದರಿಂದ, ಧರ್ಮಿಷ್ಠನನ್ನು ಉತ್ಕರ್ಷಾಪಕರ್ಷಗಳು ವಿಕಾರವಶನಾಗಮಾಡಲಾರವು; ಆದ್ದರಿಂದ ಧರ್ಮಿಷ್ಠನು ಆವೆರಡೂ ಸ್ಥಿತಿಗಳಲ್ಲಿ ಸಮಾಧಾನದಿಂದ ಇದ್ದು ಧರ್ಮಸಂಗ್ರಹಮಾಡುವನು; ಯಾಕಂದರೆ "ಧರ್ಮೋ ರಕ್ಷತಿ ರಕ್ಷಿತಃ" ಎಂಬ ಉಕ್ತಿಯಂತೆ ಧರ್ಮವ ರಕ್ಷಿಸುವವನನ್ನು ಧರ್ಮವು ರಕ್ಷಿಸುವದು.

ಈ ಜಗತ್ತಿನಲ್ಲಿ ಜೀವರಿಗೆ, ಈಶ್ವರನೂ, ಆತನ ಸೃಷ್ಟಿಯೂ ಇವೆರಡಲ್ಲದೆ ಅನ್ಯ ಆಧಾರವಿಲ್ಲೆಂಬದು ಯಾರಿಗಾದರೂ ತಿಳಿಯಬಹುದಾಗಿದೆ. ಈಶ್ವರನ ಸ್ವರೂಪವು ಸಮತೆಯು, ಸೃಷ್ಟಿಯ ಸ್ವರೂಪವು ವಿಷಮತೆಯು. ಸಮತಾಧರ್ಮದಲ್ಲಿ ಉತ್ಕರ್ಷಾಪಕರ್ಷಗಳು ಇರಲಾರವೆಂದು ಹೇಳುವ ಕಾರಣವಿಲ್ಲ. ಅಂದಬಳಿಕ ಉತ್ಕರ್ಷಾಪಕರ್ಷಗಳು ವಿಷಮಧರ್ಮದ ಸೃಷ್ಟಿಗೆ ಸಂಬಂಧಿಸಿದವಾದವು. ಪರಮಾತ್ಮನನ್ನು ಮರೆತು ಸೃಷ್ಟಿಯ ಸುಖದಿಂದ ರಮಿಸುವವರನ್ನು ಉತ್ಕರ್ಷಾಪಕರ್ಷಗಳ ಚಕ್ರವು ಬೆನ್ನುಹತ್ತಿದ್ದೇ. ಅಂದಬಳಿಕ ಸೃಷ್ಟಿಯ ಸ್ವಾಭಾವಿಕಧರ್ಮವಾಗಿದ್ದ ಆ ಚಕ್ರಭ್ರಮಣಕ್ಕಾಗಿ ಆಶ್ಚರ್ಯಪಡುವ ಕಾರಣವಿಲ್ಲ. ಈವರೆಗೆ ಯಾವ ವ್ಯಕ್ತಿಯೂ, ಯಾವ ಕುಟುಂಬವೂ, ಯಾವ ಸಮಾಜವೂ; ಯಾವ ರಾಷ್ಟ್ರವೂ ನಿರಂತರ ಉತ್ಕರ್ಷವನ್ನೂ ಹೊಂದಿರುವದಿಲ್ಲ, ನಿರಂತರ ಅಪಕರ್ಷವನ್ನೂ ಹೊಂದಿರುವದಿಲ್ಲ. ಇಂದ್ರಿಯನಿಗ್ರಹಮೂಲವಾದ ತಪಶ್ಚರ್ಯದಿಂದ ಉತ್ಕರ್ಷವಾಗುವದು; ಉತ್ಕರ್ಷದಿಂದ ಉಚ್ಚವಿಷಯಭೋಗ ಉಂಟಾಗುವದು; ಆ ಉಚ್ಚವಿಷಯಭೋಗದ ಉನ್ಮಾದದಿಂದುಂಟಾಗುವ ಆಲಸ್ಯ, ನಿರುದ್ಯೋಗ, ಮದಾಂಧತೆ, ಸ್ವಚ್ಛಂದವೃತ್ತಿ ಮುಂತಾದ ಅಪಚಾರಗಳಿಂದ ಅಂತಃಸತ್ವಕ್ಕೆ ಕ್ಷಯರೋಗವುಂಟಾಗಲು, ಕಡೆಗೆ ಅಪಕರ್ಷವಾಗುವದು! ಈ ಕ್ರಮವು ಸುಂದೋಪಸುಂದರಂತೆ ಯಾವ ರಾಷ್ಟ್ರಕ್ಕಾದರೂ, ವ್ಯಕ್ತಿ–ಕುಟುಂಬ–ಸಮಾಜಗಳಿಗಾದರೂ ಸಂಬಂಧಿಸುವದು. ಈ ಮರ್ಮವನ್ನರಿತು, ರಾಷ್ಟ್ರಾಭಿಮಾನಿಗಳು ತಮ್ಮ

ಕಾಷ್ಟ್ರಕ್ಕುಂಟಾದ ಅಪಕರ್ಷವು ಬರಬಾರದ್ದು. ಬಂತೆಂಬಂತೆ ಗಾಬರಿಯಾಗಿ ಕಂಗೆಟ್ಟು, ವಿವೇಕವಿಲ್ಲದೆ, ರಾಷ್ಟ್ರದ ಉತ್ಕರ್ಷವನ್ನು ಧರ್ಮಭ್ರಷ್ಟರಾಗಿಯಾಗಿಯಾದರೂ ಮಾಡಿಕೊಳ್ಳಬೇಕೆಂಬ ಅವಿವೇಕತನದ ಉಲಕೋಚಿತನಕ್ಕೆ ಹೋಗಿ, ಮತ್ತಿಷ್ಟು ರಾಷ್ಟ್ರದಅಪಕರ್ಷಮಾಡಹೆ, ರಾಷ್ಟ್ರವು ಇಂದ್ರಿಯನಿಗ್ರಹಸಮರ್ಥವೂ, ಧರ್ಮಿಷ್ಠವೂ, ಈಶ್ವರನಿಷ್ಠವೂ, ತಪಸ್ವಿಯೂ ಆಗುವಂತೆ ಪ್ರಯತ್ನಪೂರ್ವಕ ಯತ್ನಿಸುತ್ತ, ಸಮಾಧಾನದಿಂದ ಕಾಲನಿರೀಕ್ಷಣಮಾಡತಕ್ಕದ್ದು. ದೈತ್ಯರ ಉತ್ಕರ್ಷಕಾಲದಲ್ಲಿ ದೇವತೆಗಳು ಕೂಡಇದೇ ಮಾರ್ಗವನ್ನು ಅನುಸರಿಸಿರುವರು.



## ೧೫ ಅರ್ಜುನ-ವನವಾಸಪರ್ವ

**೨೧೩ನೇ ಅಧ್ಯಾಯ**-ಅರ್ಜುನನ **ವನವಾಸನಿಮಿತ್ತ**-ಈಮೇರೆಗೆ ಪಾಂಡವರು ಪರಸ್ಪರ ನಿರ್ಬಂಧಮಾಡಿಕೊಂಡು ಪರಸ್ಪರ ಪ್ರೇಮದಿಂದ ಕಾಲಹರಣಮಾಡುತ್ತಿರುವಾಗ, ಒಂದುದಿನ ಒಬ್ಬ ಬ್ರಾಹ್ಮಣನ ಯಜ್ಞೋಪಯೋಗದ ಆಕಳುಗಳನ್ನು ಕಳ್ಳರು ಅಪಹರಿಸಿಕೊಂಡು ಹೋದರು. ಆಗ ಆ ಬ್ರಾಹ್ಮಣನು ಸಿಟ್ಟಾಗಿ ಇಂದ್ರಪ್ರಸ್ಥದ ಅರಮನೆಯ ಬಾಗಿಲಿಗೆ ಬಂದು—"ಪಾಂಡವರೇ, ದುಷ್ಟರಾದ ಕಳ್ಳರು ನನ್ನ ಆಕಳುಗಳನ್ನು ಅಪಹರಿಸಿಕೊಂಡುಹೋದರು, ಬೇಗನೆ ಬಿಡಿಸಿಕೊಡಿರಿ. ಪ್ರಜೆಗಳ ಉತ್ಪನ್ನದ ಆರರಲ್ಲಿಯ ಒಂದು ಭಾಗವನ್ನು ತಕ್ಕೊಂಡು ಯಾವರಾಜನು ಪ್ರಜೆಗಳ ಭಯವನ್ನು ದೂರಮಾಡುವದಿಲ್ಲವೋ, ಆತನಿಗೆ ಪ್ರಜೆಗಳು ಮಾಡಿದ ಪಾಪಗಳೆಲ್ಲ ತಟ್ಟುವವೆಂದು ಶಾಸ್ತ್ರವಚನವಿರುವದು. ಅಪ್ಪಗಳಿರಾ, ಆಕಳುಗಳೆಂದರೆ ಬ್ರಾಹ್ಮಣರ ಸರ್ವಸ್ವವು. ಅವು ಹೋದವೆಂದರೆ, ಬ್ರಾಹ್ಮಣರ ಧರ್ಮಕಾರ್ಯಗಳೆಲ್ಲ ನಿಂತುಹೋಗುವವು; ಆದ್ದರಿಂದ ನನ್ನ ಆಕಳುಗಳನ್ನು ಯಾರಾದರೂ ಬಿಡಿಸಿಕೊಡಿರಿ."

ಬ್ರಾಹ್ಮಣರ ಈ ಶೋಕಧ್ವನಿಯು ಅರ್ಜುನನ ಕಿವಿಗೆ ಬಿದ್ದಕೂಡಲೆ ಆತನು ಬ್ರಾಹ್ಮಣನಿಗೆ—"ಅಂಜಬೇಡಿರಿ ಅಂಜಬೇಡಿರಿ" ಎಂದು ಅಭಯವಿತ್ತು, ಶಸ್ತ್ರಗಳನ್ನು ತಕ್ಕೊಳ್ಳುವದಕ್ಕಾಗಿ ಅವಸರದಿಂದ ಆಯುಧಾಗಾ

ರಹಕಡೆಗೆ ನಡೆದನು; ಆದರೆ ಅಲ್ಲಿ ಧರ್ಮರಾಜನು ದ್ರೌಪದಿಯೊಡನೆ ಏಕಾಂತದಲ್ಲಿದ್ದನು ; ಅದರಿಂದ ಅರ್ಜುನನು ಯೋಚಿಸಹತ್ತಿದನು. ಇತ್ತ ಆಯುಧಾಗಾರವನ್ನು ಪ್ರವೇಶಿಸುವದೂ ಕಷ್ಟ, ಅತ್ತ ಬ್ರಾಹ್ಮಣನ ಸಂಕಟವನ್ನು ದೂರಮಾಡದಿರುವದೂ ಕಷ್ಟ. ಹೀಗಾಗಿ ಅರ್ಜುನನು ವಿಚಾರಿಸುತ್ತ ಮನಸ್ಸಿನಲ್ಲಿ—"ದುಃಖಿತಪ್ರಜೆಗಳ ದುಃಖನಿವಾರಣಮಾಡದಿರುಹದು ಅರಸರಿಗೆ ಮಹಾಪಾಪವು, ಅಲ್ಲದೆ ಪ್ರಜಾಪಾಲನದ ವಿಷಯದಲ್ಲಿ ನಮ್ಮ ಮೇಲಿರುವ ಪ್ರಜೆಗಳ ವಿಶ್ವಾಸವು ತಪ್ಪೀತು ; ಆದ್ದರಿಂದ ನಾನು ಹನ್ನೆರಡುವರ್ಷ ವನವಾಸಭೋಗಿಸಿದರೂ ಚಿಂತೆಯಿಲ್ಲ, ಬ್ರಾಹ್ಮಣನ ಕಷ್ಟವನ್ನು ದೂರಮಾಡುವದೇ ಯೋಗ್ಯವು."

ಹೀಗೆ ಆಲೋಚಿಸಿ ಅರ್ಜುನನು ಆಯುಧಾಗಾರವನ್ನು ಹೊಕ್ಕು, ಶಸ್ತ್ರಗಳನ್ನು ತಕ್ಕೊಂಡು, ಧರ್ಮರಾಜನ ಅಪ್ಪಣೆಪಡೆದು, ಬ್ರಾಹ್ಮಣನನ್ನು ಹಿಂಬಾಲಿಸಿ ಹೋಗಿ, ಕಳ್ಳರಿಂದ ಆತನ ಆಕಳುಗಳನ್ನು ಬಿಡಿಸಿಕೊಟ್ಟನು. ಬಳಿಕ ಅರ್ಜುನನು ಧರ್ಮರಾಜನಬಳಿಗೆ ಹೋಗಿ—"ಅಣ್ಣಾ, ನಿನ್ನನ್ನು ನಾನು ಏಕಾಂತದಲ್ಲಿ ಕಂಡದ್ದರಿಂದ, ನನ್ನ ಪ್ರತಿಜ್ಞಾಭಂಗವಾಯಿತು. ಅದಕ್ಕಾಗಿ ನಾನು ಹನ್ನೆರಡುವರ್ಷ ವನವಾಸಮಾಡುವೆನು" ಎಂದು ಹೇಳಿದನು. ಆಗ ಧರ್ಮರಾಜನು ಶೋಕಾಕುಲನಾಗಿ ದೈನ್ಯದಿಂದ—"ಎಲಾ, ನೀನು ಇದೇನು ಹೇಳುವೆ ? ದೊಡ್ಡವರ ಏಕಾಂತದಲ್ಲಿ ಸಣ್ಣವರು ಹೋದರೆ, ಸಣ್ಣವರ ಧರ್ಮಲೋಪವಾಗುವದಿಲ್ಲ, ದೊಡ್ಡವರಧರ್ಮಲೋಪವಾಗುತ್ತದೆ. ನೀನು ಏಕಾಂತದಲ್ಲಿ ಬಂದದ್ದಕ್ಕಾಗಿ ನನಗೆ ವ್ಯತ್ಯಾಸವಿಲ್ಲ, ಅದಕ್ಕೆ ನನ್ನ ಅನುಮೋದನವಿರುತ್ತದೆ ; ಆದ್ದರಿಂದ ಎಲೈ ಮಹಾಬಾಹುವೇ, ನೀನು ವನಕ್ಕೆ ಹೋಗಬೇಡ," ಎಂದು ಹೇಳಲು, ಅರ್ಜುನನು—"ಅಣ್ಣಾ, ಧರ್ಮಾಚರಣೆಯವಿಷಯದಲ್ಲಿ ಕಪಟವು ಸಲ್ಲದೆಂದು ನಾನು ಕೇಳಿದ್ದೇನೆ ; ಆದ್ದರಿಂದ ಧರ್ಮವಾಕ್ಯದ ಶ್ಲೇಷಾರ್ಥಮಾಡಿ ಓಡಿಹೋಗುವ ಕಳ್ಳ ಹಾದಿಯನ್ನು ಹುಡುಕುವದು ಯೋಗ್ಯವಲ್ಲ. ನಾನು ಸತ್ಯವನ್ನು ಸ್ಮರಿಸಿ, ನನ್ನ ಈ ಆಯುಧಗಳ ಆಣೆಮಾಡಿ ಸ್ಪಷ್ಟವಾಗಿ ಹೇಳುತ್ತೇನೆ, ಎಂಥ ಸಂಕಟ ಒದಗಿದರೂ ಸತ್ಯದಿಂದ ನಾನು ಚಲಿಸುವದಿಲ್ಲ," ಎಂದು ನುಡಿದು ಧರ್ಮರಾಜನ ಅನುಮತಿಪಡೆದು ಹನ್ನೆರಡುವರ್ಷ ವನವಾಸಮಾಡುವದಕ್ಕಾಗಿ ಹೊರಟುಹೋದನು.

**೨೧೪ನೇ ಅಧ್ಯಾಯ— ಅರ್ಜುನ ಉಲೂಪಿಯರ ಸಮಾಗಮ—**
ಜನಮೇಜಯಾ, ಅರ್ಜುನನು ವನಕ್ಕೆ ಹೊರಡಲು, ಮಹಾತ್ಮರಾದ ಬ್ರಾಹ್ಮಣರೂ, ಸಾಧುಗಳೂ, ಭಗವದ್ಭಕ್ತರೂ, ಊರ್ಧ್ವರೇತರಾದ ಬ್ರಹ್ಮಚಾರಿಗಳೂ, ಸನ್ಯಾಸಿಗಳೂ ಆತನನ್ನು ಅನುಸರಿಸಿ ನಡೆದರು. ಆರ್ಜುನನು ಹಲವು ತೀರ್ಥ, ಕ್ಷೇತ್ರ, ನದಿಗಳನ್ನು ಸಂಚರಿಸುತ್ತ, ಗಂಗಾದ್ವಾರಕ್ಕೆ ಹೋಗಿ ಅಲ್ಲಿ ವಾಸಿಸಿದನು. ಬ್ರಾಹ್ಮಣರ ಅಗ್ನಿಹೋತ್ರಾದಿಗಳಿಂದ ಆ ಸ್ಥಳವು ವ್ಯಾಪ್ತವಾಯಿತು. ಹೀಗಿರುವಾಗ ಒಂದುದಿನ ಅರ್ಜುನನು ಭಾಗೀರಥಿಯ ಸ್ನಾನಮಾಡಿ ಸಂಧ್ಯಾದಿಕರ್ಮಗಳನ್ನು ತೀರಿಸಿಕೊಂಡು, ಇನ್ನು ಅಗ್ನಿಗೆ ಆಹುತಿಗಳನ್ನು ಕೊಡಬೇಕೆನ್ನುತ್ತಿರಲು, ಆತನ ರೂಪವನ್ನು ನೋಡಿ ಮೋಹಿತಳಾದ ಉಲೂಪಿಯೆಂಬ ನಾಗಕನ್ಯೆಯು ಆತನನ್ನು ಕರಕೊಂಡು ಪಾತಾಳಕ್ಕೆ ಹೋದಳು. ಸುದೈವದಿಂದ ಅಲ್ಲಿ ಕೌರವ್ಯನೆಂಬ ನಾಗನ ಮನೆಯಲ್ಲಿ ಉತ್ತಮರೀತಿಯಿಂದ ಪೂಜಿಸಿದ ಅಗ್ನಿಯು ಸಿದ್ಧವಿದ್ದದ್ದರಿಂದ, ಅರ್ಜುನನು ಅದರಲ್ಲಿ ಆಹುತಿಗಳನ್ನು ಕೊಟ್ಟನು. ಅದರಿಂದ ಅಗ್ನಿಯು ಸಂತುಷ್ಟನಾದನು ಬಳಿಕ ಅರ್ಜುನನು ಉಲೂಪಿಯನ್ನು ಕುರಿತು—

ಅರ್ಜುನ—ಎಲೈ ಕಲ್ಯಾಣೀ, ನೀನು ಇದೇನುಮಾಡಿದೆ? ಈ ದೇಶವು ಯಾರದು? ನೀನು ಯಾರಮಗಳು?

ಉಲೂಪಿ—ನಾನು ಐರಾವತಕುಲದಲ್ಲಿ ಉತ್ಪನ್ನವಾಗಿರುವ ಕೌರವ್ಯನೆಂಬ ಹೆಸರಿನ ನಾಗನ ಮಗಳು. ನನ್ನಹೆಸರು ಉಲೂಪಿ. ನಿನ್ನನ್ನು ನೋಡಿ ಮೋಹಿತಳಾದದ್ದರಿಂದ, ನಮ್ಮ ಈ ಪಾತಾಳಲೋಕಕ್ಕೆ ನಿನ್ನನ್ನು ಕರತಂದೆನು; ಆದ್ದರಿಂದ ನೀನು ಅವಿವಾಹಿತಳಾದ ನನ್ನನ್ನು ಪರಿಗ್ರಹಿಸಬೇಕು.

ಅರ್ಜುನ—ನಾನು ಸ್ವತಂತ್ರನಲ್ಲ. ನನ್ನ ಅಣ್ಣನಾದ ಧರ್ಮರಾಜನಬಳಿಯಲ್ಲಿ ಹನ್ನೆರಡುವರ್ಷ ಬ್ರಹ್ಮಚರ್ಯದಿಂದ ವನವಾಸಮಾಡುವ ಪ್ರತಿಜ್ಞೆಯನ್ನು ಮಾಡಿ ನಾನು ಹೊರಟುಬಂದಿದ್ದೇನೆ; ಆದ್ದರಿಂದ ನಿನ್ನ ಇಚ್ಛೆಯನ್ನು ಪೂರ್ಣಮಾಡಲು ಬರುವಹಾಗಿಲ್ಲ.

ಉಲೂಪಿ—ಎಲೈ ಪಂಡುಪುತ್ರಾ, ನೀನು ಮಾಡಿದ ಪ್ರತಿಜ್ಞೆಯ ಸಂಗತಿಯೆಲ್ಲ ನನಗೆ ಗೊತ್ತಿರುವದು. ನಿನ್ನ ಬ್ರಹ್ಮಚರ್ಯವು ದ್ರೌಪದಿಯುವಿಷಯವಾಗಿ ಇರುಹದು. ಹನ್ನೆರಡುವರ್ಷ ದ್ರೌಪದಿಯ ಸಂಪರ್ಕ ಮಾಡದೆ ವನವಾಸಮಾಡಬೇಕೆಂದು ಬ್ರಹ್ಮಚರ್ಯದ ಅರ್ಥವಿರುವದು. ಇದರಮೇಲೆಯೂ ಅಲ್ಪಸ್ವಲ್ಪ ಪಾಪವು ತಗಲುತ್ತದೆಂದು ನಿನಗೆ ತೋರಿದರೆ, ನನಗೆ ಪ್ರಾಣದಾನಮಾಡಿದ ಪುಣ್ಯದಿಂದ ಅದನ್ನು ಪರಿಹರಿಸಿಕೋ, ಶರಣಾಗತರಕ್ಷಕನೆಂದು ನಿನ್ನ ಪ್ರಸಿದ್ಧಿಯಿರುವದು.

ನಾಗಕನ್ಯೆಯ ಈ ಮಾತುಗಳನ್ನು ಕೇಳಿ ಅರ್ಜುನನು ಆಕೆಯ ಮಾತುಗಳು ಧರ್ಮಸಮ್ಮತವಾಗಿರುವವೆಂದು ತಿಳಿದು, ಆ ರಾತ್ರಿ ಆಕೆಯ ಮನೆಯಲ್ಲಿದ್ದು, ಆಕೆಯ ಇಚ್ಛೆಯನ್ನು ಪೂರ್ಣಮಾಡಿದನು. ಬಳಿಕ ಉಲೂಪಿಯು ಅರ್ಜುನನನ್ನು ಪುನಃ ಗಂಗಾದ್ವಾರಕ್ಕೆ ಕಳಿಸಿ—"ನೀನು ಜಲದಲ್ಲಿ ಸರ್ವತ್ರ ವಿಜಯಿಯಾಗು. ಯಾವತ್ತು ಜಲಚರಗಳು ನಿನಗೆ ವಶವಾಗುವವು" ಎಂದು ವರಪ್ರದಾನ ಮಾಡಿದಳು.

**೨೧೫ನೇ ಅಧ್ಯಾಯ - ಅರ್ಜುನ ಚಿತ್ರಾಂಗದಾ ಸಮಾಗಮ**—ಜನಮೇಜಯಾ, ಗಂಗೆಯಿಂದ ಹೊರಗೆ ಬಂದಬಳಿಕ ಅರ್ಜುನನು ಬ್ರಾಹ್ಮಣರೊಡನೆ ತೀರ್ಥಯಾತ್ರೆಮಾಡುತ್ತಿರುವಾಗ, ಕಳಿಂಗರಾಷ್ಟ್ರದ ಸೀಮೆಯಲ್ಲಿ ಬ್ರಾಹ್ಮಣರು ನಿಂತುಕೊಳ್ಳಲು, ತಾನೊಬ್ಬನೇ ಮಣಿಪುರದ ರಾಜ್ಯವನ್ನು ಸೇರಿದನು. ಮಣಿಪುರದ ರಾಜನಾದ ಚಿತ್ರವಾಹನನ ಹೊಟ್ಟೆಯಲ್ಲಿ ಚಿತ್ರಾಂಗದೆಯೆಂಬ ಒಬ್ಬ ಸುಂದರ ಕನ್ಯೆಯಿದ್ದಳು. ಆಕೆಯನ್ನು ನೋಡಿ ಅರ್ಜುನನು ಮೋಹಿತನಾಗಿ, ಚಿತ್ರವಾಹನನಿಗೆ ತನ್ನ ಕುಲಗೋತ್ರಗಳನ್ನು ಹೇಳಿ, ಚಿತ್ರಾಂಗದೆಯನ್ನು ತನಗೆ ಲಗ್ನಮಾಡಿಕೊಡೆಂದು ಕೇಳಿದನು. ಆಗ ಚಿತ್ರವಾಹನನು ಸೌಮ್ಯಶಬ್ದಗಳಿಂದ ಅರ್ಜುನನನ್ನು ಕುರಿತು—"ಧನಂಜಯಾ, ನಮ್ಮ ಕುಲದಲ್ಲಿ ಪ್ರಭಂಜನನೆಂಬ ಹೆಸರಿನ ಒಬ್ಬ ಪೂರ್ವಜನು ಆಗಿಹೋದನು. ಆತನು ಮಕ್ಕಳಸಲುವಾಗಿ ಭಗವಾನ್ ಶಂಕರನನ್ನು ಕುರಿತು ಉತ್ತಮ ತಪಶ್ಚರ್ಯಮಾಡಲು, "ನಿನ್ನ ವಂಶದಲ್ಲಿ ಒಂದೇಸಂತತಿಯಾಗುತ್ತ ಬರುವದೆಂ"ದ್ದು ಆ ಭಗವಂತನು ವರಪ್ರದಾನಮಾಡಿದನು. ಅಂತೆ ಈವರೆಗೆ ಒಂದೇ ಸಂತತಿಯಾಗುತ್ತ

ಬಂದಿದ್ದು, ಈಗ ಚಿಂತ್ರಾಂಗದೆಯೆಂಬ ಒಬ್ಬಳೇ ಮಗಳು ನನ್ನ ಹೊಟ್ಟೆಯಲ್ಲಿ ಹುಟ್ಟಿರುವಳು. ಇನ್ನು ನನಗೆ ಸಂತತಿಯಾಗುವಹಾಗಿಲ್ಲ. ಈಕೆಯನ್ನೇ ಗಂಡುಮಗನೆಂದು ತಿಳಿದು ರಕ್ಷಿಸುತ್ತ, ಈಕೆಯಿಂದ ಹುಟ್ಟಿದ ಮಗನಿಂದ ನನ್ನ ವಂಶವೃದ್ಧಿಯನ್ನು ಮಾಡಿಕೊಳ್ಳಬೇಕೆಂದು ನಾನು ಹಾದಿಯನೋಡುತ್ತಿರುವೆನು; ಆದ್ದರಿಂದ ಅರ್ಜುನಾ, ಈಕೆಯಿಂದ ಹುಟ್ಟಿದ ಮಗನನ್ನು ನೀನು ನನಗೆ ಕೊಡುವಹಾಗಿದ್ದರೆ, ಈಕೆಯನ್ನು ನಿನಗೆ ಲಗ್ನಮಾಡಿಕೊಡುವೆನು.'' ಎಂದು ಹೇಳಿದನು. ಅದಕ್ಕೆ ಅರ್ಜುನನು ಒಪ್ಪಿಕೊಂಡು, ಚಿತ್ರಾಂಗದೆಯನ್ನು ಲಗ್ನವಾಗಿ ಆಕೆಯ ಸಮಾಗಮದಲ್ಲಿ ಮೂರುವರ್ಷವಿದ್ದು, ಒಬ್ಬ ಮಗನು ಹುಟ್ಟಿದಬಳಿಕ ಚಿತ್ರವಾಹನನ ಹಾಗು ಚಿತ್ರಾಂಗದೆಯ ಅನುಮತಿಯಿಂದ ದೇಶಪರ್ಯಟನಕ್ಕೆ ಹೊರಟು ಹೋದನು.

**೨೧೬ನೇ ಅಧ್ಯಾಯ—ವರ್ಗೆಯೆಂಬ ಅಪ್ಸರೆಯುಉದ್ಧಾರ—** ಬಳಿಕ ಅರ್ಜುನನು ತಪಸ್ವಿಜನರಿಂದ ಶೋಭಿಸುವ ದಕ್ಷಿಣಸಮುದ್ರತೀರದಲ್ಲಿರುವ ಪವಿತ್ರ ತೀರ್ಥಗಳಿಗೆ ಹೋದನು. ಅಲ್ಲಿ ಅಗಸ್ತ್ಯತೀರ್ಥ, ಸುಭದ್ರತೀರ್ಥ, ಪೌಲೋಮತೀರ್ಥ, ಕಾರಂಧಮತೀರ್ಥ, ಭಾರದ್ವಾಜತೀರ್ಥ ಎಂಬ ಐದು ಪವಿತ್ರ ತೀರ್ಥಗಳಿದ್ದವು. ಪೂರ್ವದಲ್ಲಿ ಈ ತೀರ್ಥಗಳು ಬಹುಜನ ಋಷಿಸೇವ್ಯಗಳಾಗಿದ್ದರೂ, ಈಗ ಯಾವ ಋಷಿಗಳೂ ಆ ತೀರ್ಥದಲ್ಲಿ ಸ್ನಾನಮಾಡುತ್ತಿದ್ದಿಲ್ಲ; ಯಾಕಂದರೆ ಆ ಐದು ತೀರ್ಥಗಳಲ್ಲಿ ಒಂದೊಂದು ಮೊಸಳೆಯಿದ್ದು, ಸ್ನಾನಕ್ಕೆ ಹೋದವರನ್ನು ಅವು ಹಿಡಿಯುತ್ತಿದ್ದವು. ಈ ಸಂಗತಿಯನ್ನು ಬ್ರಾಹ್ಮಣರ ಮುಖದಿಂದ ಅರಿತ ಅರ್ಜುನನು, ಜನರು ಬೇಡಬೇಡವೆಂದರೂ ಸೌಭದ್ರತೀರ್ಥದಲ್ಲಿ ನಿಶ್ಶಂಕೆಯಿಂದ ಹಾರಿ ಸ್ನಾನಮಾಡತೊಡಗಿದನು. ಆಗ ಮೊಸಳೆಯು ಬಂದು ಆತನನ್ನು ಹಿಡಿದು ಒಳಗೆ ಜಗ್ಗಹತ್ತಲು, ಬಲಶಾಲಿಯಾದ ಅರ್ಜುನನು ಅದನ್ನು ಎಳೆಕೊಂಡು ನೀರಹೊರಗೆ ಬಂದನು. ಕೂಡಲೆ ಆ ಮೊಸಳೆಯು ಉತ್ತಮ ಸ್ತ್ರೀರೂಪವನ್ನು ತಾಳಿ ಅರ್ಜುನನಮುಂದೆ ನಿಂತುಕೊಂಡಿತು. ಆ ಲೋಕೋತ್ತರ ಸುಂದರಿಯನ್ನು ನೋಡಿ ಅರ್ಜುನನು-''ಎಲೈ ಶುಭಾಂಗೀ, ನೀನು ಯಾರು? ಜಲಚರಜನ್ಮವು ನಿನಗೆ ಯಾಕೆ ಬಂದಿತ್ತು?''

ಎಂದು ಕೇಳಿದನು. ಅದಕ್ಕೆ ಆ ಸ್ತ್ರೀಯು—"ಎಲೈ ಮಹಾಬಾಹುವೇ, ನಾನು ಒಬ್ಬ ಅಪ್ಸರೆಯು, ನನ್ನ ಹೆಸರು ವರ್ಗಾ. ನನ್ನ ಮೇಲೆ ಕುಬೇರನ ಪ್ರೀತಿ ಬಹಳ. ನನ್ನ ಸಖಿಯರು ಸೌರಭೇಯೂ, ಸಮೀಚೀ, ಬುದ್ಬಿದಾ, ಲತಾ ಎಂಬ ನಾಲ್ವರು ಇದ್ದರು. ನಾವು ಐವರೂ ಕುಬೇರನ ಕಡೆಗೆ ಹೋಗುವಾಗ, ಹಾದಿಯಲ್ಲಿ ಒಬ್ಬ ಉಗ್ರತಪಸ್ವಿಯಾದ ಸುಂದರ ಬ್ರಾಹ್ಮಣನನ್ನು ನೋಡಿದೆವು. ಆತನ ಸೌಂದರ್ಯವನ್ನೂ, ಉಗ್ರತಪಸ್ಸನ್ನೂ ನೋಡಿ ಆತನ ತಪೋಭಂಗಮಾಡಬೇಕೆಂದು ಆತನಬಳಿಗೆ ಹೋಗಿ, ನೃತ್ಯಗಾಯನಾದಿಗಳಿಂದ ಆತನನ್ನು ಮೋಹಗೊಳಿಸತೊಡಗಿದೆವು; ಆದರೆ ಆತನು ನಮ್ಮನ್ನು ಲಕ್ಷಿಸಲೇ ಇಲ್ಲ! ತನ್ನ ನಿಗ್ರಹವನ್ನು ಬಿಡಲಿಲ್ಲ. ಆತನು ಸಿಟ್ಟಿನಿಂದ ನಮಗೆ—"ನೀವು ಶತಸಂಖ್ಯೆವರ್ಷ ಮೊಸಳೆಗಳಾಗಿ ನೀರಲ್ಲಿ ಬೀಳಿರಿ" ಎಂದು ಶಾಪಕೊಟ್ಟನು.

ಎಲೈ ಭಾರತಶ್ರೇಷ್ಠಾ, ಈ ಶಾಪವಚನವನ್ನು ಕೇಳಿ ನಮ್ಮ ಪ್ರಾಣಗಳು ತಳಮಳಿಸಿದವು. ನಾವು ಆ ಬ್ರಾಹ್ಮಣನಿಗೆ ಶರಣುಹೋಗಿ—"ಭಗವನ್, ರೂಪ, ಯೌವನ, ಮದನಬಾಧೆಗಳ ಯೋಗದಿಂದ ಈ ಅಪರಾಧವು ನಮ್ಮಿಂದ ಘಟಿಸಿತು. ಕ್ಷಮಾಶೀಲರಾದ ಬ್ರಾಹ್ಮಣರು ತಾವು ನಮ್ಮನ್ನು ಕ್ಷಮಿಸಬೇಕು. ಧರ್ಮಜ್ಞರ ದೃಷ್ಟಿಯಿಂದ ಸ್ತ್ರೀಯರು ಅವಧ್ಯರಾಗಿರುವರು; ಆದ್ದರಿಂದ ತಮ್ಮ ಧರ್ಮವನ್ನು ಲಕ್ಷಿಸಿ ನಮ್ಮನ್ನು ಹಿಂಸಿಸಬೇಡಿರಿ. ಬ್ರಾಹ್ಮಣರು ಎಲ್ಲ ಪ್ರಾಣಿಗಳ ಮಿತ್ರರೆಂಬ ಜ್ಞಾನಿಗಳ ಮಾತನ್ನು ಈಗ ಸತ್ಯವಾಗಿ ಮಾಡಿರಿ." ಎಂದು ಪ್ರಾರ್ಥಿಸಲು, ಆ ಬ್ರಾಹ್ಮಣನು—"ಅಪ್ಸರೆಯರೇ, ನೀವು ನನಗೆ ಶರಣುಬಂದು ಪ್ರಾರ್ಥಿಸುವದರಿಂದ, ಶಾಪದಲ್ಲಿರುವ ಶತಶಬ್ದವನ್ನು ಅನಂತ ಎಂಬ ಅರ್ಥದಲ್ಲಿ ಉಪಯೋಗಿಸದೆ, ಕೇವಲ ನೂರು ಎಂಬ ಅರ್ಥದಲ್ಲಿ ಉಪಯೋಗಿಸುವೆನು. ನೀವು ನೀರಲ್ಲಿರುವಾಗ ನಿಮ್ಮನ್ನು ನೀರಿನಿಂದ ಹೊರಗೆ ಎಳೆತರುವ ಮನುಷ್ಯನು ನಿಮ್ಮನ್ನು ಉದ್ಧರಿಸುವನು" ಎಂದು ಹೇಳಿ, ಉಶ್ಶಾಪವನ್ನು ಕೊಟ್ಟನು; ಆದರೆ ಅರ್ಜುನಾ, ನಮ್ಮನ್ನು ಹೀಗೆ ಯಾರು ಉದ್ಧರಿಸಬಹುದೆಂದು ಯೋಚಿಸುತ್ತಿರುವಾಗ, ನಾರದರು ಬಂದು ನಮಗೆ ಈ ಐದುಸರೋವರಗಳಲ್ಲಿ ಮೊಸಳೆಗಳಾಗಿ ವಾಸಿಸಹೇಳಿದ್ದಲ್ಲದೆ, ಸ್ವಲ್ಪದಿವಸಗಳಲ್ಲಿಯೇ

ಶುದ್ಧಾತ್ಮನಾದ ಧನಂಜಯನು ನಿಮ್ಮನ್ನು ಉದ್ಧರಿಸುವನೆಂತಲೂ ಹೇಳಿ ದರು. ಅದರಂತೆ ಎಲೈ ವೀರನೇ, ನೀನು ನನ್ನನ್ನು ಉದ್ಧರಿಸಿದೆ. ಅದ ರಂತೆ ನಮ್ಮ ಸಖಿಯರನ್ನೂ ಉದ್ಧರಿಸು." ಎಂದು ಪ್ರಾರ್ಥಿಸಿದಳು. ಆಗ ಅರ್ಜುನನು ಉಳಿದ ಸರೋವರಗಳಲ್ಲಿ ಮೊಸಳೆಗಳಾಗಿದ್ದ, ಮೇಲೆ ಹೇಳಿದ ನಾಲ್ಕುಜನ ಅಪ್ಸರೆಯರನ್ನೂ ಉದ್ಧರಿಸಿದನು.

ಮತ್ತೊಮ್ಮೆ ಚಿತ್ರಾಂಗದೆಯನ್ನು ಕಾಣುವದಕ್ಕಾಗಿ ಮಣಿಪುರಕ್ಕೆ ಹೋದನು. ಆಕೆಯಲ್ಲಿ ಅರ್ಜುನನಿಂದ ಹುಟ್ಟಿದಮಗನಿಗೆ ಬಭ್ರುವಾಹನ ನೆಂದು ಹೆಸರಿಟ್ಟಿದ್ದರು. ಅರ್ಜುನನು ಚಿತ್ರವಾಹನನಿಗೆ—"ನೀನು ಹೇಳಿ ದಂತೆ ಈ ಬಭ್ರುವಾಹನನನ್ನು ಚಿತ್ರಾಂಗದೆಯ ಮೂಲ್ಯವಾಗಿ ಸ್ವೀಕರಿಸಿ, ನನ್ನನ್ನು ಋಣಮುಕ್ತಮಾಡೆಂ"ದು ಹೇಳಿ, ಚಿತ್ರಾಂಗದೆಗೆ—"ನೀನು ನನ್ನ ಪ್ರಾಣದಂತೆ ಇದ್ದ ಬಭ್ರುವಾಹನನನ್ನು ಜಾಗರೂಕತೆಯಿಂದ ರಕ್ಷಿಸು. ಈತನು ಕುಲದೀಪಕನಾಗುವನು. ನೀನು ನನ್ನ ವಿರಹದಿಂದ ದುಃಖಿಸಬೇಡ. ಮುಂದೆ ನಮ್ಮ ಅಣ್ಣನಾದ ಯುಧಿಷ್ಠಿರನು ರಾಜಸೂಯ ಯಜ್ಞಮಾಡುವಾಗ, ಅರಸರೆನಿಸಿಕೊಳ್ಳುವವರೆಲ್ಲರೂ ರತ್ನಾದಿಗಳನ್ನು ತಕ್ಕೊಂಡು ಆತನಬಳಿಗೆ ಬರುವರು. ಆಗ ನಿನ್ನ ತಂದೆಯಾದ ಚಿತ್ರವಾಹ ನನೂ ಬರುವನು. ಆತನ ಸೇವೆಮಾಡುವ ನೆವದಿಂದ ನೀನೂ ಹಸ್ತಿನಾ ವತಿಗೆ ಬಾ. ಆಗ ನನ್ನ ಬಂಧುಗಳಾದವರಭೆಟ್ಟಿಯು ನಿನಗೆ ಆಗಿ, ನೀನು ನನ್ನೊಡನೆ ಸುಖದಿಂದ ಇರುವೆ," ಎಂದು ಹೇಳಿ, ಅರ್ಜುನನು ಗೋಕರ್ಣ ಕ್ಷೇತ್ರಕ್ಕೆ ಹೋಗುವದಕ್ಕಾಗಿ ಹೊರಟನು.

**೭೧೮ನೇ ಅಧ್ಯಾಯ—ಅರ್ಜುನನ ದ್ವಾರಕಾಗಮನ**—ಅರ್ಜು ನನು **ಗೋಕರ್ಣ**ಕ್ಷೇತ್ರದ ಯಾತ್ರೆಯನ್ನು ಮಾಡಿಕೊಂಡು, ಪಶ್ಚಿಮ ಸಮುದ್ರತೀರದ ತೀರ್ಥಗಳನ್ನೂ, ಪುಣ್ಯಸ್ಥಳಗಳನ್ನೂ ನೋಡುತ್ತ ಪ್ರಭಾಸಕ್ಷೇತ್ರಕ್ಕೆ ಬಂದನು. ಆಗ ಶ್ರೀಕೃಷ್ಣನು ಈ ಸುದ್ದಿಯನ್ನು ಕೇಳಿ, ತನ್ನ ಮಿತ್ರನಾದ ಅರ್ಜುನನನ್ನು ಕಾಣುವದಕ್ಕಾಗಿ ಅಲ್ಲಿಗೆ ಬಂ ದನು. ಆಗ ನರ–ನಾರಾಯಣಸ್ವರೂಪರಾದ ಅರ್ಜುನ–ಕೃಷ್ಣರು ಪರ ಸ್ಪರರನ್ನು ಆಲಿಂಗಿಸಿ ಕುಶಲಪ್ರಶ್ನಗಳನ್ನು ಮಾಡಿ, ಆ ವನದಲ್ಲಿ ಕೆಲ ಕಾಲ ವಾಸಿಸಿದರು. ಶ್ರೀಕೃಷ್ಣನು ತೀರ್ಥಾಟನದ ಕಾರಣವನ್ನು

ಕೇಳಲು, ಅರ್ಜುನನು ಎಲ್ಲ ಸಂಗತಿಯನ್ನು ಹೇಳಿದನು. ಅವರು ಆ ಪ್ರಭಾ ಸಕ್ಷೇತ್ರದಲ್ಲಿ ಕೆಲಕಾಲ ರಮಿಸಿದರು. ಇತ್ತ ಕೃಷ್ಣನ ಅಪ್ಪಣೆಯಂತೆ ಯಾದವರು ರೈವತಪರ್ವತವನ್ನು ಶೃಂಗರಿಸಿ ಅಲ್ಲಿ ವಸತಿಸ್ಥಾನವನ್ನು ಕಲ್ಪಿಸಿದ್ದರು. ಅಲ್ಲಿ ಕೃಷ್ಣಾರ್ಜುನರು ಸುಖದಿಂದ ಕೆಲಕಾಲ ವಾಸಿಸಿದರು. ಬಳಿಕ ಅರ್ಜುನನು ದ್ವಾರಕೆಗೆ ಬಂದು ಗುರುಜನರನ್ನು ವಂದಿಸಲು, ಪರಸ್ಪರ ಕುಶಲಪ್ರಶ್ನಗಳಾದವು. ಯಾದವರು ಅರ್ಜುನನನ್ನು ಬಹಳವಾಗಿ ಸತ್ಕರಿಸಿದರು.



## ಶ್ರೀ ಶೇಷಸದ್ಗುರು–ಸೂಕ್ತಿರೂಪ

# ರಹಸ್ಯಗಳು

**(೪೯) ಪ್ರಜೆಗಳ ಧರ್ಮರಕ್ಷಣವು ರಾಜರ ತಾಂ ಕರ್ತವ್ಯವು**– ಈ ಉಪಪರ್ವದಲ್ಲಿ ಅರ್ಜುನನು, ಬ್ರಾಹ್ಮಣನ ಕಳವಾಗಿ ಹೋಗಿದ್ದ ಆಕಳುಗಳನ್ನು, ತಾನು ವನವಾಸ ಭೋಗಿಯಾಗಬೇಕಾಗುವದನ್ನು ಲಕ್ಷಿಸದೆ ಬ್ರಾಹ್ಮಣನಿಗೆ ರಾತ್ರಿಯಲ್ಲಿಯೇ ತಂದುಕೊಟ್ಟದ್ದನ್ನು ನೋಡಿದರೆ, ಅರಸರಿಗೆ ಪ್ರಜೆಗಳ ಧರ್ಮರಕ್ಷಣವು ಪವಿತ್ರಕರ್ತವೆಂದು ಹೇಳಬೇಕಾಗುತ್ತದೆ. ಹಿಂದೆ ೭೪ನೇ ಪುಟದ ೧೧ನೇ ರಹಸ್ಯದಲ್ಲಿ, ಧರ್ಮಗಳು ಲೌಕಿಕಗಳೆಂತಲೂ, ಪಾರಮಾರ್ಥಿಕವೆಂತಲೂ ಎರಡು ವಿಧಗಳಾಗಿರುವವೆಂದು ಹೇಳಿ, ಅವು ಯಾವವೆಂಬದನ್ನೂ ವಿವರಿಸಿ ಹೇಳಿರುತ್ತದೆ; ಅಂದರೆ ಪಿತೃಧರ್ಮ, ಮಾತೃಧರ್ಮ, ಪುತ್ರಧರ್ಮ, ಪತಿಧರ್ಮ, ಪತ್ನೀಧರ್ಮ, ರಾಜಧರ್ಮ, ಪ್ರಜಾಧರ್ಮ, ರಾಷ್ಟ್ರೀಯಧರ್ಮ ಮುಂತಾದ ಹಲವು ಧರ್ಮಗಳು ವ್ಯಾವಹಾರಿಕ ಧರ್ಮಗಳಾಗಿರುತ್ತವೆಂತಲೂ, ಈಶ್ವರೋಪಾಸನಾರೂಪಧರ್ಮವೆಂಬದೊಂದೇ ಧರ್ಮವು ಆಧ್ಯಾತ್ಮಿಕ ಧರ್ಮವಾಗಿರುತ್ತದೆಂತಲೂ ಹೇಳಿರುತ್ತದೆ.

ಧರ್ಮಪಾಲನವು ಶ್ರದ್ಧಾಮೂಲವೆಂತಲೂ, ಸ್ವಾರ್ಥಮೂಲವೆಂತಲೂ ಎರಡುವಿಧವಾದದ್ದಿರುವದು. ಪಾರಮಾರ್ಥಿಕಧರ್ಮಪಾಲವು

ಶ್ರದ್ಧಾಪ್ರಧಾನವೂ, ಲೌಕಿಕಧರ್ಮಗಳ ಪಾಲನವು ಸ್ವಾರ್ಥಪ್ರಧಾನವೂ ಆಗಿರುವವು. ಶ್ರದ್ಧಾಮೂಲಧರ್ಮಪಾಲನವು ಪವಿತ್ರವೂ, ಸ್ಥಿರವೂ ಆಗಿದ್ದರೆ, ಸ್ವಾರ್ಥಮೂಲಧರ್ಮಪಾಲನವು ಅಪವಿತ್ರವೂ, ಅಸ್ಥಿರವೂ ಆಗಿರುವದು. ಪಾರಮಾರ್ಥಿಕಧರ್ಮವನ್ನು, ಅಂದರೆ ಈಶ್ವರೋಪಾಸನಾ ರೂಪಧರ್ಮವನ್ನು ಆಸಕ್ತಿಯಿಂದ ಪಾಲಿಸಿದ ಮಾನದಿಂದ, ಮನುಷ್ಯನಲ್ಲಿ ಧರ್ಮಶ್ರದ್ಧೆಯು ಅಭಿವೃದ್ಧವಾಗುತ್ತ ಹೋಗಿ, ಆ ಶ್ರದ್ಧೆಯು ಲೌಕಿಕ ಧರ್ಮಪಾಲನದಲ್ಲಿಯೂ ಉಂಟಾಗುತ್ತದೆ. ಅಂದರೆ, ದೇವಭಕ್ತನಾದ ಮಗನು ತಂದೆ ತಾಯಿಗಳನ್ನೂ, ದೇವಭಕ್ತಳಾದ ಹೆಂಡತಿಯು ಗಂಡನನ್ನೂ, ದೇವಭಕ್ತನಾದ ಪ್ರಜೆಯು ರಾಜನನ್ನೂ ತಮ್ಮ ಸ್ವಾರ್ಥಮೂಲರೆಂದು ತಿಳಿದು ಮನ್ನಿಸದೆ, ದೇವರೆಂದು ತಿಳಿದು ಮನ್ನಿಸುವರು.

ಹೀಗಾಗದೆ ಅರಸನು ತಾನು ಸ್ವತಃ ದೇವರನ್ನೂ, ಧರ್ಮವನ್ನೂ ಮರೆತು ಕೇವಲ ಲೌಕಿಕನಾಗಿ ತನ್ನ ರಾಜ್ಯದಾಹಳಿತರೂಪ ಲೌಕಿಕ ವ್ಯವಹಾರಕ್ಕೆ ಸಾಧನಗಳಾದ ಪ್ರಜೆಗಳ ಲೌಕಿಕಧರ್ಮಗಳನ್ನಷ್ಟು, ತನ್ನ, ಹಾಗು ಆಯಾ ಧರ್ಮದವರ ಲೌಕಿಕ ಕಾಯದೆಗಳಂತೆ ಪಾಲಿಸುತ್ತ, ಅಪಳಿತವನ್ನು ಸಾಗಿಸಿದರೆ, ಮತ್ತು ತನ್ನ ರಾಜ್ಯದೊಳಗಿನ ಬೇರೆ ಬೇರೆಧರ್ಮದ ಪ್ರಜೆಗಳಲ್ಲಿಯ ಪರಸ್ಪರ ದ್ವೇಷಾಸೂಯಗಳು ತನ್ನ ಆಳಿಕೆಯ ಚಿರಸ್ಥಯಿಗೆ ಕಾರಣವೆಂದು ಸ್ವಾರ್ಥಮೂಲವಾದ ತಪ್ಪು ತಿಳುವಳಿಕೆಯಿಂದ, ತಾನು ಪ್ರಜೆಗಳ ಪಾರಮಾರ್ಥಿಕಧರ್ಮದಲ್ಲಿ ಕೈಹಾಕುವದಿಲ್ಲವೆಂಬ ಉದಾಸೀನಭಾವವನ್ನು ನಟಿಸಿದರೆ, ಪ್ರಜೆಗಳಲ್ಲಿಯ ಧರ್ಮಶ್ರದ್ಧೆಯು ನಷ್ಟವಾಗಿ, ಅವರ ಲೌಕಿಕಧರ್ಮಪಾಲನವು ಕೇವಲ ಸ್ವಚ್ಛಂದವೃತ್ತಿಯ ಸ್ವಾರ್ಥವನ್ನು ಅವಲಂಬಿಸುವದು, ಪ್ರಜೆಗಳ ಈ ಸ್ವಚ್ಛಂದವೃತ್ತಿಗೆ ಬಾಧೆಬರಲು, ಪಿತೃದ್ರೋಹ. ಪತಿದ್ರೋಹ ಮುಂತಾದ ದ್ರೋಹಗಳೊಡನೆ ರಾಜದ್ರೋಹವೂ ಅವರಲ್ಲಿ ಉಂಟಾಗಿ, ರಾಜಪ್ರಜರಿಬ್ಬರೂ ಅನರ್ಥಕ್ಕೆ ಗುರಿಯಾಗಬೇಕಾಗುವದು.

ರಾಜ್ಯಾಧಿಪತಿಯು ರಾಜ್ಯದೊಳಗಿನ ಎಲ್ಲ ಧರ್ಮಗಳ ಅಧಿಪತಿಯಾದದ್ದರಿಂದ ಅವುಗಳ ರಕ್ಷಕನೂ, ಪೋಷಕನೂ ಆಗಿರುವೆನೆಂಬದನ್ನು ಮರೆತರಾಜರ ಗತಿಯು ಹೀಗಾಗುವದೇ ಸರಿ! ಈ ಅನರ್ಥವು ಉಂಟಾಗ್ಗ

ಬಾರದೆಂತಲೇ ಹಿಂದುಸ್ಥಾನದೊಳಗೆ ಹಿಂದು, ಮುಸಲ್ಮಾನ, ಭೌದ್ಧ, ಜೈನ ಮೊದಲಾದ ಧರ್ಮದ ಅರಸರು ತಮ್ಮ ರಾಜ್ಯದೊಳಗಿನ ಎಲ್ಲ ಧರ್ಮಗಳ ಪ್ರಜೆಗಳ ದೇವತಾ ಔಪಾಸನೆಗೆ ಅನುಕೂಲವಾಗಿ, ಪಾರಮಾರ್ಥಿಕ ಧರ್ಮಶ್ರದ್ಧೆಯು ಪ್ರಜೆಗಳಲ್ಲಿ ಉಳಿಯಬೇಕೆಂದು ಆಯಾಧರ್ಮದವರ ದೇವಸ್ಥಾನ, ಮಸೀದೆ, ಬಸ್ತಿ, ವಿಹಾರ ಮೊದಲಾದವುಗಳಿಗೆ ಜಮೀನುಗಳನ್ನೂ, ವರ್ಷಾಶನಗಳನ್ನೂ ಹಾಕಿಕೊಟ್ಟಿರುವರು; ಆದ್ದರಿಂದ ಈ ರಹಸ್ಯವನ್ನರಿತ ಅರಸರಾದವರು ಪ್ರಜೆಗಳ ಲೌಕಿಕ ಪಾರಮಾರ್ಥಿಕ ಧರ್ಮಗಳೆರಡರ ಶಿಕ್ಷಣಕ್ಕೂ ಆಶ್ರಯವನ್ನೂ, ಉತ್ತೇಜನವನ್ನೂ ಕೊಡತಕ್ಕದ್ದು. ಅರ್ಜುನನು ಬ್ರಾಹ್ಮಣನ ಆಕಳುಗಳನ್ನು, ಆತನ ಊಟಕ್ಕೆ ಹಾಲುಮೊಸರು ಇಲ್ಲದಂತಾಗಿ ಆತನ ಲೌಕಿಕ ಹಾನಿಯಾದೀತೆಂದು ತಿಳಿದು ಅವನ್ನು ರಾತ್ರಿ ಕಷ್ಟಪಟ್ಟು ತಂದುಕೊಡಲಿಲ್ಲ; ಬೆಳಗಾದಕೂಡಲೆ ನಡೆಯಬೇಕಾದ ಆ ಬ್ರಾಹ್ಮಣನ ಔಪಾಸನೆಯ ವ್ಯವಹಾರಗಳಿಗೆ ವಿಘ್ನವಾದೀತೆಂಬ ಪಾಪಭಯದಿಂದ ತಂದುಕೊಟ್ಟನು. ಈ ರಹಸ್ಯವನ್ನಾದರೂ ರಾಜರಾದವರು ನೆನಪಿನಲ್ಲಿಡತಕ್ಕದ್ದು.



## ೧೬ ಸುಭದ್ರಾಹರಣಪರ್ವ

**೨೧೯ನೇ ಅಧ್ಯಾಯ**—ಸುಭದ್ರಾಹರಣವಿಚಾರ—ರಾಜಾ ಜನಮೇಜಯಾ, ಮುಂದೆ ಸ್ವಲ್ಪದಿವಸಗಳಲ್ಲಿ ರೈವತಪರ್ವತದಮೇಲೆ, ಕೆಲವು ದಿವಸಗಳವರೆಗೆ ನಡೆಯುವಂಥ ಆ ಪರ್ವತದ ಉತ್ಸವವು ಬಂದಿತು. ಆ ಉತ್ಸವವನ್ನು ವೃಷ್ಣಿ–ಅಂಧಕಕುಲದ ಯಾದವರು ಮಾಡುತ್ತಿದ್ದರು. ಆಗ ವೃಷ್ಣಿ–ಅಂಧಕ–ಭೋಜಕುಲದ ವೀರರು ಆ ರೈವತಪರ್ವತದ ಪ್ರೀತ್ಯರ್ಥವಾಗಿ ಬ್ರಾಹ್ಮಣರಿಗೆ ಸಾವಿರಾರು ಪ್ರಕಾರದ ದಾನಗಳನ್ನು ಕೊಡುತ್ತಿದ್ದರು. ಆ ಪರ್ವತದಲ್ಲಿ ಸುಂದರ ಮಂದಿರಗಳಿದ್ದದ್ದರಿಂದ, ಅದಕ್ಕೆ ವಿಲಕ್ಷಣ ಶೋಭೆಯುಂಟಾಗಿತ್ತು. ಅಲ್ಲಿ ನೃತ್ಯ–ಗಾಯನದ ಉತ್ಸವಗಳು ನಡೆಯುತ್ತಿದ್ದವು. ನಾಗರಿಕರು ಯಾರು ರಥದಲ್ಲಿ ಕುಳಿತು, ಯಾರು ಆನೆ ಕುದರೆಗಳನ್ನೇರಿ, ಯಾರು ಕಾಲನಡಿಗೆಯಿಂದ ನಡೆದು ಆ ಉತ್ಸವನೋಡು

ವದಕ್ಕಾಗಿ ಬರುತ್ತಿದ್ದರು. ಬಲರಾಮ, ಪ್ರದ್ಯುಮ್ನ, ಸಾಂಬ, ಅಕ್ರೂರ, ಸಾರಣ, ಗದ, ಪೃಥು, ಸಾತ್ಯಕಿ, ಉದ್ಧವ ಮೊದಲಾದ ಪ್ರಸಿದ್ಧ ಯಾದವರು ತಮ್ಮ ತಮ್ಮ ಸ್ತ್ರೀಯರೊಡನೆ ಆ ಉತ್ಸವಕ್ಕಾಗಿ ಬಂದು ಅದನ್ನು ಸಾಂಗಗೊಳಿಸುತ್ತಿದ್ದರು. ಹೀಗೆ ಅತ್ಯದ್ಭುತವೂ, ಆಶ್ಚರ್ಯಕಾರಕವೂ ಆದ ಆ ಮಹೋತ್ಸವವನ್ನು ನೋಡುವದಕ್ಕಾಗಿ ಕೃಷ್ಣಾರ್ಜುನರೂ ಬಂದಿದ್ದು, ಅವರಿಬ್ಬರೂ ಕೂಡಿಯೇ ಸಂಚರಿಸುತ್ತಿದ್ದರು. ಆಗ ಸರ್ವಾಲಂಕಾರಗಳಿಂದ ಅಲಂಕೃತಳಾಗಿ ಸಖಿಯರ ಮಧ್ಯದಲ್ಲಿ ಕುಳಿತಿರುವ ವಸುದೇವನ ಮಗಳಾದ ಸುಭದ್ರೆಯು, ಅರ್ಜುನನ ಕಣ್ಣಿಗೆ ಬಿದ್ದಳು. ಆಕೆಯನ್ನು ನೋಡಿ ಅರ್ಜುನನು ಕಾಮಪೀಡಿತನಾಗಿ ಆಕೆಯನ್ನು ಎವೆಯಿಕ್ಕದೆ ನೋಡತೊಡಗಿದನು. ಆಗ ಅರ್ಜುನನ ಆ ಭಾವವನ್ನು ತಿಳಿದು ಕೃಷ್ಣನು ನಗುತ್ತ ಅರ್ಜುನನನ್ನು ಕುರಿತು—

ಶ್ರೀಕೃಷ್ಣ—ಅರ್ಜುನಾ, ವನವಾಸಮಾಡುವವನ ಮನಸ್ಸು ಹೀಗೆ ಕಾಮಮೋಹಿತವಾಗುವದು ಬಹು ಆಶ್ಚರ್ಯವು. ಎಲಾ, ಈಕೆಯು ವಸುದೇವನ ಪುತ್ರಿಯೂ, ಪ್ರತ್ಯಕ್ಷ ನನ್ನ ತಂಗಿಯೂ ಆದ ಸುಭದ್ರೆಯಲ್ಲವೆ? ಈಕೆಯು ಅಪ್ಪನ ಅತಿಪ್ರೀತಿಯವಳು. ಅರ್ಜುನಾ, ನಿನ್ನ ಕಲ್ಯಾಣವಾಗಲಿ. ಈಕೆಯಮೇಲೆ ನಿನ್ನ ಮನಸ್ಸು ಇದ್ದರೆ, ನಾನು ಸ್ವತಃ ಅಪ್ಪನಮುಂದೆ ಈ ಮಾತು ತೆಗೆಯುವೆನು.

ಅರ್ಜುನ—ಗೋಪಾಲಕೃಷ್ಣಾ, ಸುಭದ್ರೆಯು ರೂಪವತಿಯಾಗಿರುವದರಿಂದ, ಯಾರಮನಸ್ಸನ್ನು ಹರಣಮಾಡಲಿಕ್ಕಿಲ್ಲ? ಈ ವೃಷ್ಣಿಕುಲೋತ್ಪನ್ನಳಾದ ಸುಭದ್ರೆಯು ನನ್ನ ಪಟ್ಟರಾಣಿಯಾಗುವಂತೆ ಮಾಡಿದರೆ, ನೀನು ಎಲ್ಲಬಗೆಯಿಂದ ನನ್ನ ಕಲ್ಯಾಣಮಾಡಿದಂತಾಗುವದು; ಆದ್ದರಿಂದ ಕೃಷ್ಣಾ, ಈಕೆಯ ಪ್ರಾಪ್ತಿಗಾಗಿ ನಾನು ಏನು ಉಪಾಯಮಾಡಲಿ ಹೇಳು.

ಶ್ರೀಕೃಷ್ಣ—ಅರ್ಜುನಾ, ಕ್ಷತ್ರಿಯರು ಸ್ವಯಂವರವಿಧಿಯಿಂದ ವಿವಾಹಮಾಡಿಕೊಳ್ಳುವದು ಉತ್ತಮ ಪಕ್ಷವು; ಆದರೆ ಸ್ತ್ರೀಸ್ವಭಾವವು ಚಂಚಲವಾದದ್ದರಿಂದ ಸುಭದ್ರೆಯು ಸ್ವಯಂವರದಲ್ಲಿ ಯಾರಿಗೆ ಮಾಲೆಹಾಕುವಳೋ ಯಾರಿಗೆ ಗೊತ್ತು? ಇನ್ನು ಸ್ತ್ರೀಯರನ್ನೇ ಬಲಾತ್ಕಾರದಿಂದ ಅಪಹರಿಸಿ ಲಗ್ನಮಾಡಿಕೊಳ್ಳುವದೂ ಶೂರಕ್ಷತ್ರಿಯರಿಗೆ ಪ್ರಶಸ್ತವೆಂದು

ಧರ್ಮಶಾಸ್ತ್ರವು ಹೇಳುವದು; ಆದ್ದರಿಂದ ಅರ್ಜುನಾ, ನೀನು ನನ್ನ ತಂಗಿಯನ್ನು ಬಲಾತ್ಕಾರದಿಂದ ಹರಣಮಾಡು.

ಜನಮೇಜಯಾ, ಈಮೇರೆಗೆ ವಿಚಾರಮಾಡಿ, ಮುಂದೆ ಏನುಮಾಡಬೇಕೆಂಬದನ್ನು ಅವರು ತಮ್ಮೊಳಗೆ ನಿಶ್ಚಯಿಸಿಕೊಂಡು, ಕೂಡಲೆ ಒಂಟಿಯ ಸವಾರನಿಂದ ಧರ್ಮರಾಜನಿಗೆ ಈ ಸುದಿಯ್ದನ್ನು ತಿಳಿಸಿ, ಆತನ ಒಪ್ಪಿಗೆಯನ್ನು ಪಡೆದರು.

**೨೨೦ನೇ ಅಧ್ಯಾಯ** — ಸುಭದ್ರಾಹರಣ — ಜನಮೇಜಯಾ, ಹೀಗೆ ಧರ್ಮರಾಜನ ಅನುಮೋದನವು ದೊರೆತಬಳಿಕ ಅರ್ಜುನನು ಕೃಷ್ಣನ ಅನುಮೋದನವನ್ನು ಪಡೆದು ರಥದಲ್ಲಿ ಕುಳಿತು ಬೇಟೆಯನೆವದಿಂದ ಹೊರಟನು. ಆತನ ಆ ರಥವನ್ನು ನೋಡಿದಕೂಡಲೆ ಶತ್ರುಗಳ ಹರ್ಷವು ಅಡಗಿಹೋಗುತ್ತಿತ್ತು. ಇತ್ತ ಸುಭದ್ರೆಯು ಆ ಶ್ರೇಷ್ಠನಾದ ರೈವತಪರ್ವತವನ್ನು ಪೂಜಿಸಿದಳು. ಅದರಂತೆ ಅಲ್ಲಿಯ ಸರ್ವದೇವತೆಗಳನ್ನೂ, ಬ್ರಾಹ್ಮಣರನ್ನೂ ಪೂಜಿಸಿ ಅವರ ಆಶೀರ್ವಾದವನ್ನು ಪಡೆದಳು. ಬಳಿಕ ಆಕೆಯು ಆ ಪರ್ವತಕ್ಕೆ ಪ್ರದಕ್ಷಿಣೆಮಾಡಿ ದ್ವಾರಾವತಿಗೆ ಹೋಗುವದಕ್ಕಾಗಿ ಹೊರಟಳು. ಆಗ ಅರ್ಜುನನು ಆಕೆಯನ್ನು ರಥದಲ್ಲಿ ಬಲಾತ್ಕಾರದಿಂದ ಕುಳ್ಳಿರಿಸಿಕೊಂಡು ಇಂದ್ರಪ್ರಸ್ಥದ ದಾರಿಯನ್ನು ಹಿಡಿದನು.

ಹೀಗೆ ಅರ್ಜುನನು ಸುಭದ್ರೆಯನ್ನು ಹರಣಮಾಡಿದಕೂಡಲೆ, ಸೈನಿಕರು ದ್ವಾರಕೆಗೆ ಹೋಗಿ ಅಲ್ಲಿ ಇರುವ "ಸುಧರ್ಮ" ಎಂಬ ಸಭೆಗೆ ಈ ಸುದ್ದಿಯನ್ನು ಹೇಳಿದರು. ಕೂಡಲೆ ಸಭಾಧ್ಯಕ್ಷನು ಭೇರಿಯನ್ನು ಹೊಡಿಸಲು, ಯಾವತ್ತು ಯಾದವರು ಕ್ಷೋಭಿಸಿ, ಅನ್ನನೀರುಗಳ ಪರಿವೆಯಿಲ್ಲದೆ ಸಭೆಯಲ್ಲಿ ನೆರೆದು, ತಮ್ಮತಮ್ಮ ಆಸನಗಳಲ್ಲಿ ಕುಳಿತರು. ಆಗ ಸೈನಿಕರೂ, ಸಭಾಪಾಲನೂ ಅವರಿಗೆ ಅರ್ಜುನನ ಯಾವತ್ತು ಕೃತಿಗಳನ್ನು ಹೇಳಿದರು. ಅದನ್ನು ಕೇಳಿದಕೂಡಲೆ ಸಿಟ್ಟಿನಿಂದ ಕಣ್ಣುಕೆಂಪಗೆಮಾಡಿದ್ದ ಆ ಅಭಿಮಾನಿ ವೀರರಿಗೆ ಅತ್ಯಂತ ಅಸಮಾಧಾನವಾಗಿ, ಅವರು ಅರ್ಜುನನಮೇಲಿನ ಸಿಟ್ಟಿನಿಂದ ಕೂಡಲೆ ಎದ್ದರು. ಅವರು ತಮ್ಮ ರಥಗಳನ್ನು ಬೇಗನೆ ಸಿದ್ಧಮಾಡಿ ತರಬೇಕೆಂದು ತಮ್ಮ ಸೇವಕರನ್ನು ಆಜ್ಞಾಪಿಸಿದರು ಆಗ ದ್ವಾರಕೆಯತುಂಬ ಗದ್ದಲವುಂಟಾಯಿತು. ಆಗ ವಿಶಾಲದೇಹಿ



ಸುಭದ್ರಾಪಹರಣ.

ಯಾದ ಬಲಿಷ್ಠ ಬಲರಾಮನು ಆ ವೀರರನ್ನು ಕುರಿತು—"ವೀರರೇ, ಬುದ್ಧಿಶಾಲಿಯಾದ ಕೃಷ್ಣನು ಸುಮ್ಮನೆಯಿರುವಾಗ ನೀವು ಅವಿಚಾರದಿಂದ ಏನು ಮಾಡುತ್ತಿರುವಿರಿ?" ಅನ್ನಲು, ಯಾವತ್ತು ವೀರರು ಶಾಂತರಾಗಿ ತಮ್ಮತಮ್ಮ ಸ್ಥಳಗಳಲ್ಲಿ ಕುಳಿತುಕೊಂಡರು. ಬಳಿಕ ಬಲರಾಮನು ಕೃಷ್ಣನನ್ನು ಕುರಿತು—"ಜನಾರ್ದನಾ, ಈ ಕಾಲದಲ್ಲಿ ನೀನು ಒಂದೂ ಮಾತಾಡದೆ ಸ್ವಸ್ಥವಾಗಿ ಕುಳಿತು ಮೋಜು ನೋಡುತ್ತಿರುವೆಯಲ್ಲ? ಎಲಾ, ಅರ್ಜುನನು ಧೈರ್ಯ-ಸತ್ವಾದಿ ಗುಣಗಳಿಂದ ಚ್ಯುತನಾಗಲಿಕ್ಕಿಲ್ಲವೆಂದು ತಿಳಿದು, ನಿನ್ನ ಸಲುವಾಗಿ ನಾವು ಇಷ್ಟು ಆತನ ಸತ್ಕಾರವನ್ನು ಮಾಡಿದೆವು; ಆದರೆ ಕುಲಕಲಂಕನಾದ ಆ ದುಷ್ಟನು ಆ ಮಾನಕ್ಕೆ ಸರ್ವಥಾ ಪಾತ್ರನಲ್ಲವೆಂಬಂತೆ ತೋರುತ್ತದೆ. ಆತನು ಉಂಡಮನೆಯ ಗಳ ಎಣಿಸುವವನೇ ಸರಿ! ನಮ್ಮನ್ನು ಲೆಕ್ಕಿಸದೆ, ಕೃಷ್ಣಾ, ನಿನ್ನ ಅನಾದರವನ್ನೂ ಮಾಡಿ, ಅರ್ಜುನನು ಸುಭದ್ರೆಯನ್ನು ಬಲಾತ್ಕಾರದಿಂದ ಅಪಹರಿಸಿಕೊಂಡು ಹೋದನು! ಆದರೆ ಎಲಾ, ಗೋವಿಂದಾ, ಆತನು ಏನೆಂದು ತಿಳಿದಿರುವನು? ನಾನೊಬ್ಬನೇ ಇದೇ ದಿವಸ ಪೃಥ್ವಿಯನ್ನು ನಿಷ್ಕೌರವವಾಗಿ ಮಾಡಿಬಿಟ್ಟೇನು!" ಎಂದು ನುಡಿಯಲು, ಅದನ್ನು ವೃಷ್ಣಿ, ಅಂಧಕ ಭೋಜಕುಲದ ಯಾದವರು ಅನುಮೋದಿಸಿದರು.

---

## ಶ್ರೀ ಶೇಷಸದ್ಗುರು-ಸೂಕ್ತಿಗಳ

## ರಹಸ್ಯಗಳು

(೫೧) **ಸ್ವಭಾವೋ ದುರತಿಕ್ರಮಃ**—ಹಿಂದೆ ೧೫೦ ನೇ ಪುಟದಲ್ಲಿಯ ೧೯ನೇ ರಹಸ್ಯವು ಈ ರಹಸ್ಯಕ್ಕೆ ಸಂಬಂಧಿಸಿರುತ್ತದೆ. ಅಲ್ಲಿ—"ಸ್ವಾರ್ಥಮೂಲವಾದ ದ್ವೇಷ, ಅಸೂಯೆ ಮೊದಲಾದ ಗುಣಗಳು ಸ್ವಾರ್ಥಪರಗಳಾದ ಪ್ರಾಣಿಗಳ ಹುಟ್ಟುಗುಣಗಳಾಗಿರುವವೆಂದು ಹೇಳಬಹುದು." ಎಂದು ಹೇಳಿರುವದು. ಹೀಗೆ ಸ್ವಾರ್ಥಮೂಲವಾದ ಹಲವು ಸದ್ಗುಣ-ದುರ್ಗುಣಗಳೊಡನೆ ಮನುಷ್ಯಪ್ರಾಣಿಯು ಹುಟ್ಟುತ್ತಿದ್ದರೂ, ಆ ಗುಣಗ

ಳಲ್ಲಿಯ ಯಾವಗುಣವು ಯಾವ ಮನುಷ್ಯನಲ್ಲಿ ಪ್ರಬಲವಿರುವದೋ, ಅದೇ ಗುಣವು ಆ ಮನುಷ್ಯನ ಸ್ವಭಾವವೆನಿಸುವದು. "ಸಿಟ್ಟು ಜಮದಗ್ನಿಯಸ್ವಭಾವವು, ಚಾಡಿಹೇಳುವದು ನಾರದರ ಸ್ವಭಾವವು, ಗಿಡಗಿಡ ಹಾರುವದು ಮಾರುತಿಯ ಸ್ವಭಾವವು" ಇತ್ಯಾದಿ. ಈ ಸ್ವಭಾವಗುಣವನ್ನು ಬಿಡುವದು ಪರಮಕಷ್ಟವು. ಕದಾಚಿತ್ ಬಿಟ್ಟರೆ, ಮನುಷ್ಯನು ವೈಶಿಷ್ಟ್ಯವಿಲ್ಲದವನಾಗಿ, ಕೆಲಸಕ್ಕೆ ಬಾರದವನಾಗುವನು. ನಾರದರು ದೊಡ್ಡ ಋಷಿಗಳು ಸರಿ; ಆದರೆ ಕಡೆಗೂ ಅವರು ಚಾಡಿಹೇಳುವದನ್ನು ಬಿಡಲಿಲ್ಲ. ಅದರಂತೆ, ಮಾರುತಿಯು ಮಹಾಬುದ್ಧಿಶಾಲಿಯೂ, ಭಗವದ್ಭಕ್ತನೂ ಸರಿ; ಆದರೆ ಗಿಡಗಿಡ ಹಾರುವದನ್ನು ಬಿಡಲಿಲ್ಲ. ನಾರದರ ಚಾಡಿಹೇಳುವ ಗುಣ, ಮಾರುತಿಯ ಗಿಡಗಿಡ ಹಾರುವಗುಣ ಇವುಗಳಿಂದಲೇ ಅವರಿಗೆ ಪ್ರಾಶಸ್ತ್ಯವುಂಟಾಗಿದ್ದು, ಆ ಗುಣಗಳ ಮೂಲಕವಾಗಿಯೇ ಲೋಕಕಲ್ಯಾಣದ ಮಹಾಕಾರ್ಯಗಳನ್ನು ಅವರು ಮಾಡಿದರು. ಜಮದಗ್ನಿಯ ಸಿಟ್ಟಿನಮಾತೂ ಹೀಗೆಯೇ ಇರುವದು. ಆದ್ದರಿಂದ ವ್ಯವಹಾರಸ್ಥರಾಗಿರುವವರು ತಮ್ಮ ಸ್ವಭಾವವನ್ನು ಬಿಡುವ ಗೊಡವಿಗೆ ಹೋಗದೆ, ತಮ್ಮ ಆ ಸ್ವಭಾವದಿಂದ ಅಧರ್ಮವೂ, ಲೋಕದ ಅಹಿತವೂ ಆಗದಂತೆ ಎಚ್ಚರಪಡತಕ್ಕದ್ದು.

ಈ ರಹಸ್ಯವನ್ನು ಈ ಉಪಪರ್ವದಲ್ಲಿ ಹಾಕುವದರ ಉದ್ದೇಶವು, ದೇವರ ಸ್ವಭಾವವನ್ನು ಹೇಳುವದಾಗಿರುತ್ತದೆ. ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ತಾನೇ ತನ್ನ ಮುಖದಿರದ—"ಯೇಯಥಾಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಂ" ಎಂದು ಹೇಳಿರುವನು. ಅಂದರೆ "ಯಾರು ನನಗೆ ಹ್ಯಾಗೋ, ಹಾಗೆ ನಾನು ಅವರಿಗೆ" ಎಂಬದು ಆತನ ಹೇಳುವದರ ತಾತ್ಪರ್ಯವು. ಈ ಉಕ್ತಿಗನುಸರಿಸಿ ದೇವರು ಧರ್ಮಗ್ಲಾನಿಯಾದಾಗೆಲ್ಲ ದೇಶ-ಕಾಲ-ಪರಿಸ್ಥಿತಿಗನುಸರಿಸಿ ಧರ್ಮರಕ್ಷಣಕ್ಕಾಗಿಯೂ, ದುಷ್ಟಶಾಸನ-ಶಿಷ್ಟಪರಿಪಾಲನೆಗಳಿಗಾಗಿಯೂ ಅವತರಿಸಬೇಕಾಗುವದು. ಅದರಂತೆ, ದೇವರು ಕೌರವ ಪಾಂಡವರಕಾಲದ ಠಕ್ಕತನಕ್ಕನುಸರಿಸಿ ಕೃಷ್ಣಾವತಾರ ಮಾಡಿ, ಠಕ್ಕರಿಗೆ ಮಹಾಠಕ್ಕನಾಗಿ ಆಚರಿಸಿ ಧರ್ಮಸ್ಥಾಪನ-ದುಷ್ಟಶಾಸನ-ಶಿಷ್ಟಪರಿಪಾಲನಗಳನ್ನು ಮಾಡಿರುವನು. ಸುಭದ್ರಾ ವಿವಾಹದಲ್ಲಿ ಭಗವಂತನ ಸ್ವಭಾವವು ಪ್ರಕಟವಾಗಿದೆ; ಒಟ್ಟಿಗೆ, ದೇಶ-ಕಾಲ-ಪರಿಸ್ಥಿತಿಗನುಸರಿಸಿ

ನಡೆಯುವದೇ ದೇವರ ಸ್ವಭಾವವಾಗಿರುವದು : ಈ ಸ್ವಭಾವದಿಂದಾದರೂ ದೇವರು ಅಧರ್ಮಪ್ರವೃತ್ತಿಯನ್ನೂ, ಲೋಕದ ಅಕಲ್ಯಾಣವನ್ನೂ ಮಾಡದಿರುವದನ್ನು ನೆನಪಿನಲ್ಲಿಡತಕ್ಕದ್ದು.

## ೧೬ ಹರಣಾಹರಪರ್ವ

**೨೧೦ನೇ ಅಧ್ಯಾಯ-ಶ್ರೀ ಕೃಷ್ಣನ ಭಾಷಣ** - ಜನಮೇಜಯಾ, ಬಳಿಕ ಕೃಷ್ಣನು ಯಾದವವೀರರನ್ನು ಕುರಿತು—"ವೀರರೇ, ಅರ್ಜುನನು ನಮ್ಮ ಕುಲದ ಅಪಮಾನವನ್ನು ಸರ್ವಥಾ ಮಾಡಿರುವದಿಲ್ಲ; ತಿರುಗಿ ಕೇಳಿದರೆ, ನಮ್ಮನ್ನು ಆತನು ಬಹಳವಾಗಿ ಗೌರವಿಸಿರುವನೆಂಬದರಲ್ಲಿ ಸಂಶಯವಿಲ್ಲ! ಸಾತ್ವತರು ನೀವು ಲೋಭಿಗಳಲ್ಲವೆಂದು ಆತನಿಗೆ ತೋರಿದ್ದರಿಂದ, ಆಸುರೀವಿಧಿಯಿಂದ ಆತನು ಸ್ತ್ರೀಯನ್ನು ಸಂಪಾದಿಸುವ ಮನಸ್ಸು ಮಾಡದಿರುವದು ಯೋಗ್ಯವೇ ಸರಿ. ಇನ್ನು, ಸ್ವಯಂವರದಲ್ಲಿ ಚಂಚಲಮನಸ್ಸಿನವರಾದ ಸ್ತ್ರೀಯರು, ಯಾರಿಗೆ ಮಾಲೆ ಹಾಕುವರೆಂಬದರ ನಿಶ್ಚಯವಾಗದಿರಲು, ಅರ್ಜುನನಿಗೆ ಸ್ವಯಂವರವು ಎಷ್ಟುಮಾತ್ರವೂ ಮಾನ್ಯವಾಗಿ ತೋರಿರುವದಿಲ್ಲ. ಇನ್ನು ಕನ್ಯೆಯನ್ನು ದಾನವಾಗಿ ತಕ್ಕೊಳ್ಳುವದು ಯಾವ ಕ್ಷತ್ರಿಯನಿಗೆ ಹೇಗೆ ಮಾನ್ಯವಾದೀತು? ಅಲ್ಲದೆ, ತನ್ನ ಹೊಟ್ಟೆಯ ಕರುಳನ್ನು ಪಶುಗಳಂತೆ ಮಾರಿಕೊಳ್ಳಲಿಕ್ಕೆ ಜಗತ್ತಿನಲ್ಲಿ ಯಾವ ಜಾಣನು ಸಿದ್ಧನಾದಾನು? ಹೀಗೆ ಎಲ್ಲ ವಿವಾಹಗಳಲ್ಲಿಯೊಂದೊಂದು ದೋಷವಿರುವದರಿಂದ, ಅರ್ಜುನನು ರಾಕ್ಷಸವಿಧಿಯಿಂದ ಸುಭದ್ರಾಹರಣ ಮಾಡಿರಬೇಕೆಂದು ನನಗೆತೋರುತ್ತದೆ. ಈ ರಾಕ್ಷಸವಿಧಿಯು ಕ್ಷತ್ರಿಯರಿಗೆಪ್ರಶಸ್ತವೆಂದು ಹೇಳಿರುವದರಿಂದ, ಅರ್ಜುನನ ಈ ಕೃತ್ಯವು ಧರ್ಮಸಮ್ಮತವಾಗಿರುವದು. ಅನಾಯಾಸವಾಗಿ ಉತ್ತಮಸಂಬಂಧವಾಗಿದೆ. ನಿಜವಾಗಿಯೇ ಸುಭದ್ರೆಯು ಒಳ್ಳೇ ದೈವಶಾಲಿಯೆಂತಲೇ ಶ್ರೇಷ್ಠನಾದ ಅರ್ಜುನನು ಆಕೆಯನ್ನು ಹರಣಮಾಡಿದನು. ಅಹೋ! ಈ ಅರ್ಜುನನನ್ನು ಯುದ್ಧದಲ್ಲಿ ಗೆಲ್ಲುವಂಥ ಸಮರ್ಥನು, ಆ ಭಗನೇತ್ರಹಾರಿಯಾದ ವಿರೂಪಾಕ್ಷ ಶಂಕರನಲ್ಲದೆ ಮತ್ತೊಬ್ಬನು ತೋರುವದಿಲ್ಲ; ಆದ್ದರಿಂದ ನೀವೆಲ್ಲರೂ ಶಾಂತರಾಗಿ,

ಅರ್ಜುನನನ್ನು ಬಹುಮಾನದಿಂದ ಕರೆತಂದು, ಆತನೊಡನೆ ಒಳ್ಳೇ ಆನಂದ ದಿಂದ ತಿರುಗಿ ದ್ವಾರಕೆಗೆ ಹೋಗಬೇಕೆಂದು ನಾನು ಹೇಳುತ್ತೇನೆ.

**ಅರ್ಜುನ-ಸುಭದ್ರಾ ವಿವಾಹ**—ಜನಮೇಜಯಾ, ಶ್ರೀಕೃಷ್ಣನ ಈ ಭಾಷಣವು ಎಲ್ಲರಿಗೂ ಒಪ್ಪಿಗೆಯಾಗಲು, ಅವರು ಅದರಂತೆ ಮಾಡಿ ದರು. ಬಳಿಕ ಅರ್ಜುನನು ದ್ವಾರಕೆಗೆ ಬಂದನು ಶ್ರೀಕೃಷ್ಣನು ಸುಭ ದ್ರೆಯೊಡನೆ ಆತನ ಲಗ್ನಮಾಡಿದನು. ಅಲ್ಲಿ ಅರ್ಜುನನು ಒಂದು ವರ್ಷಕ್ಕಿಂತ ಹೆಚ್ಚುದಿನ ಇದ್ದು, ಯಥೇಚ್ಛವಾಗಿ ವಿಹರಿಸಿದನು. ಆಮೇಲೆ ಆತನು ಪುಷ್ಕರತೀರ್ಥಕ್ಕೆ ಹೋಗಿ, ಅಲ್ಲಿಯೇ ವನವಾಸದ ಉಳಿದ ದಿವಸ ಗಳನ್ನು ಕಳೆದು, ಬಳಿಕ ಖಾಂಡವಪ್ರಸ್ಥಕ್ಕೆ ಹೋಗಿ, ಧರ್ಮರಾಜನನ್ನು ಕಂಡು ಬ್ರಾಹ್ಮಣರನ್ನು ವಿಧಿಪೂರ್ವಕ ಪೂಜಿಸಿ, ಬಳಿಕ ದ್ರೌಪದಿಯ ಬಳಿಗೆ ಹೋದನು. ಆಗ ದ್ರೌಪದಿಯು ಅರ್ಜುನನನ್ನು ಕುರಿತು— "ಅರ್ಜುನಾ, ನೀನು ಇತ್ತ ಕಡೆಗೆ ಯಾಕೆ ಬರುತ್ತೀ? ಆ ಯಾದವ ಕನ್ಯೆ ಯಾದ ಸುಭದ್ರೆಯು ಇರುವಲ್ಲಿಗೆ ಹೋಗು. ನನಗಿಂತ ಸುಭದ್ರೆಯ ಮೇಲೆ ನೀನು ಹೆಚ್ಚು ಪ್ರೇಮಮಾಡುವದು ಸ್ವಾಭಾವಿಕವಾಗಿಯೇ ಇರು ವದು ; ಯಾಕಂದರೆ, ಒಂದು ಹೊರೆಯನ್ನು ಎಷ್ಟು ಗಟ್ಟಿಯಾಗಿ ಕಟ್ಟಿ ದರೂ, ಆ ಹೊರೆಯನ್ನು ಮತ್ತೊಂದು ಹಗ್ಗದಿಂದ ಬಿಗಿದರೆ, ಮೊದಲಿನ ಕಟ್ಟು ಸಡಿಲಾಗುವದು ಸ್ವಾಭಾವಿಕವೇ ಸರಿ ; ಅದರಂತೆ ಹೊಸಪ್ರೇಮ ಕ್ಕಿಂತ ಹಳೆಯಪ್ರೇಮವು ಶಿಥಿಲವಾಗತಕ್ಕದ್ದೇ !

ಹೀಗೆ ದ್ರೌಪದಿಯು ಹಲವುಪ್ರಕಾರದಿಂದ ಹಂಗಿಸಲು, ಅರ್ಜು ನನು ಬಗೆಬಗೆಯಿಂದ ಆಕೆಯ ಕ್ಷಮೆಬೇಡಿದನು. ಬಳಿಕ ಆತನು ಸುಭದ್ರೆ ಯನ್ನು ಗೋಪಕನ್ಯೆಯಂತೆ ಅಲಂಕರಿಸಿ ಕುಂತಿಯ ಕಡೆಗೆ ಕಳಿಸಿದನು. ಸುಭದ್ರೆಯು ಕುಂತಿಯನ್ನು ನಮಸ್ಕರಿಸಲು, ಆಕೆಯು ಬಹಳ ಸಂತೋಷ ಪಟ್ಟು ದ್ರೌಪದಿಯನ್ನು ಆಲಿಂಗಿಸಿದಳು. ಬಳಿಕ ಸುಭದ್ರೆಯು ದ್ರೌಪದಿ ಯ ಬಳಿಗೆ ಹೋಗಿ ಆಕೆಯನ್ನು ನಮಸ್ಕರಿಸಿ—"ನಾನು ನಿನ್ನ ದಾಸಿಯು" ಎಂದು ಹೇಳಲು, ದ್ರೌಪದಿಯು ಬಹಳ ಸಂತೋಷಪಟ್ಟು ಸುಭದ್ರೆ ಯನ್ನು ಸತ್ಕರಿಸುವದಕ್ಕಾಗಿ ಎದ್ದುನಿಂತು ಪ್ರೇಮದಿಂದ ಆಲಿಂಗಿಸಿ— "ಸುಭದ್ರೆ, ನಿನ್ನ ಪತಿಯು ಶತ್ರುರಹಿತನಾಗಲಿ." ಎಂದು ಆಶೀರ್ವದಿಸಿ

ದಳು. ಅದನ್ನು ಕೇಳಿ ಸುಭದ್ರೆಗೂ ಆನಂದವಾಯಿತು. ಇವರಿಬ್ಬರೂ ಪರಸ್ಪರರು ಪ್ರೇಮದಿಂದ ನಡೆದುಕೊಳ್ಳುವದನ್ನು ನೋಡಿ ಕುಂತಿಗೂ, ಪಾಂಡವರಿಗೂ ಪರಮಾನಂದವಾಯಿತು ಇತ್ತ ಶ್ರೀಕೃಷ್ಣನು, ಬಲರಾಮನೇ ಮೊದಲಾದ ಎಲ್ಲ ಮುಖ್ಯ ಮುಖ್ಯ ಯಾದವರೊಡನೆ ಪಾಂಡವರಿಗೆ ಲಗ್ನದ ಉಡುಗರೆಗಳನ್ನು ತಕ್ಕೊಂಡು ಪಾಂಡವಪ್ರಸ್ಥಕ್ಕೆ ಬಂದು, ವಿವಿಧವಾದ ವಿಪುಲಸಂಪತ್ತನ್ನು ಉಡುಗರೆಯಾಗಿ ಕೊಟ್ಟನು ಬಳಿಕ ಕೃಷ್ಣನಹೊರತು ಉಳಿದವರೆಲ್ಲರೂ ಸನ್ಮಾನಿತರಾಗಿ ದ್ವಾರಕೆಗೆ ಹೋದರು. ಶ್ರೀಕೃಷ್ಣನು ಮಾತ್ರ ಇಂದ್ರಪ್ರಸ್ಥದಲ್ಲಿ ನಿಂತು, ಅರ್ಜುನನೊಡನೆ ಯಮುನಾತೀರದಲ್ಲಿ ಬೇಟೆಯಾಡುತ್ತ, ವಿವಿಧರೀತಿಯಿಂದ ರಮಿಸುತ್ತಿದನು. ಮುಂದೆ ಸುಭದ್ರೆಯ ಹೊಟ್ಟೆಯಲ್ಲಿ ಅಭಿಮನ್ಯು ಎಂಬ ಒಬ್ಬ ಮಗನೂ, ದ್ರೌಪದಿಯ ಹೊಟ್ಟೆಯಲ್ಲಿ ಐವರು ಪಾಂಡವರಿಂದ ಕ್ರಮವಾಗಿ—ಪ್ರತಿವಿಂಧ್ಯ, ಸುತಸೋಮ, ಶ್ರುತಕೀರ್ತಿ, ಶತಾನೀಕ, ಶ್ರುತಸೇನ ಎಂಬ ಐವರು ಮಕ್ಕಳೂ ಹುಟ್ಟಿದರು ಇವರೆಲ್ಲರೂ ಕುಮಾರರು ಉಪನಯನವಾದ ಬಳಿಕ ಧೌಮ್ಯರಬಳಿಯಲ್ಲಿ ವೇದಾಧ್ಯಯನವನ್ನು ಮಾಡಿ, ಅರ್ಜುನನಬಳಿಯಲ್ಲಿ ಸಂಪೂರ್ಣ ಧನುರ್ವೇದದ ಅಧ್ಯಯನವಮಾಡಿದರು.

---

**ಶ್ರೀ ಶೇಷಸದ್ಗುರು—ಸೂಕ್ತಿರೂಪ**

## ರಹಸ್ಯಗಳು

**(೫೧) ಧರ್ಮಿಷ್ಠರಾದ ಕುಲೀನರು ನೀಚಕರ್ಮಗಳನ್ನು ಆಚರಿಸರು**—ಈ ಉಪಪರ್ವದಲ್ಲಿ ದ್ರೌಪದಿಯೂ ಸುಭದ್ರೆಯೂ ಸವತಿಯರಾದರೂ ಮಾತ್ಸರ್ಯದಿಂದ ಪರಸ್ಪರ ವಿತಷ್ಟತೆಯಿಂದ ನಡೆದುಕೊಳ್ಳದೆ, ಪ್ರೇಮದಿಂದ ನಡೆದುಕೊಂಡು, ತಮ್ಮ ಪತಿಯಾದ ಅರ್ಜುನನ, ಹಾಗು ಗುರು-ಹಿರಿಯರೇ ಮೊದಲಾದ ಉಳಿದ ಪರಿವಾರದ ಅಭಿನಂದನಕ್ಕೂ, ಸಂತೋಷಕ್ಕೂ ಕಾರಣರಾಗಿರುವರು. ಇದಕ್ಕೆ ಕಾರಣವು, ದ್ರೌಪದಿಯೂ ಸುಭದ್ರೆಯೂ ತಮ್ಮ ಶ್ರೇಷ್ಠ-ಕನಿಷ್ಠತನಗಳ ಧರ್ಮಗಳನ್ನು ಪ್ರಾಂಜಲಮನಸ್ಸ

ನಿಂದ ಪಾಲಿಸಿದ್ದಾಗಿರುವದು. ದ್ರೌಪದಿಯು ಅರ್ಜುನನಪಟ್ಟರಾಣಿಯಾದ ದ್ದರಿಂದ, ಆಕೆಯು ಅರ್ಜುನನ ಹೆಂಡಿರಲ್ಲೆಲ್ಲ ಶ್ರೇಷ್ಠಳಾಗಿರುವದು ಸ್ವಾಭಾವಿಕಧರ್ಮವು. ಅದರಂತೆ, ಸುಭದ್ರೆಯು ಅವತಾರಿಕನಾದ ಶ್ರೀಕೃಷ್ಣನ ತಂಗಿಯಾಗಿದ್ದರೂ, ಅರ್ಜುನನ ಕಿರಿಯ ಹೆಂಡತಿಯಾದದ್ದರಿಂದ ದ್ರೌಪದಿಗಿಂತ ಕಡಿಮೆಯಾಗಿರುವದು ಸ್ವಾಭಾವಿಕಧರ್ಮವು. ಈ ತನ್ನ ಕಿರಿಯತನದ ಧರ್ಮವನ್ನು ಪಾಲಿಸುವದಕ್ಕಾಗಿ ವಿವೇಕಿಯಾದ ಸುಭದ್ರೆಯು ದ್ರೌಪದಿಯನ್ನು ನಮಸ್ಕರಿಸಿ—"ನಾನು ನಿನ್ನ ದಾಸಿಯು" ಎಂದು ಹೇಳಿದಳು! ಕೂಡಲೆ ದ್ರೌಪದಿಯು ತನ್ನ ವರಿಷ್ಠ ಧರ್ಮವನ್ನನುಸರಿಸಿ ಸುಭದ್ರೆಯನ್ನು ವಾತ್ಸಲ್ಯದಿಂದ ನಡಿಸಿಕೊಂಡಳು. ಹೀಗೆ ಇವರಿಬ್ಬರೂ ತಮ್ಮ ತಮ್ಮ ಧರ್ಮತಾರತಮ್ಯವರಿತು ನಡೆದುಕೊಂಡದ್ದರಿಂದ, ಅವರಲ್ಲಿ ಮಾತ್ಸರ್ಯದ ಉತ್ಪತ್ತಿಗೆ ಆಸ್ಪದವಾಗಿ ದುರ್ಮಾರ್ಗಪ್ರವೃತ್ತಿಯುಂಟಾಗಲಿಲ್ಲ. ಆದರೆ ಹಿಂದೆ ೯೬ನೇ ಪುಟದಲ್ಲಿ ಕದ್ರು-ವಿನತೆಯರು ಕುಲೀನರಾದರೂ, ತಮ್ಮ ತಮ್ಮ ಧರ್ಮಗಳ ತಾರತಮ್ಯವನ್ನು ಮರೆತು ಸಮಾನಸ್ಕಂಧತ್ವದಿಂದ ಜೂಜಾಡಿದ್ದರಿಂದ, ಮಾತ್ಸರ್ಯದಮೂಲಕ ಇಬ್ಬರೂ ಕಷ್ಟಪಡಬೇಕಾಯಿತು. ಅದರಂತೆ, ಪಾಂಡವರು ತಮ್ಮ ತಮ್ಮ ಧರ್ಮಗಳ ತಾರತಮ್ಯವರಿತು ಯಾವಾಗಲೂ ಎಚ್ಚರದಿಂದ ನಡೆಯುತ್ತಿದ್ದದ್ದರಿಂದಲೇ, ಅವರಲ್ಲಿ ಮಾತ್ಸರ್ಯೋತ್ಪತ್ತಿಯಾಗಿ ಅನಾಚಾರಕ್ಕೆ ಆಸ್ಪದವಾಗದೆ, ಕಡೆಗೆ ಅವರು ಉತ್ಕರ್ಷವನ್ನು ಹೊಂದಿದರು. ಇದಕ್ಕೆ ವಿರುದ್ಧವಾಗಿ ಕೌರವರು—"ಗುರುಹಿರಿಯರು, ದೇವರು ಬ್ರಾಹ್ಮಣರು, ಶ್ರೇಷ್ಠರು ಕನಿಷ್ಠರು" ಎಂಬ ಧರ್ಮತಾರತಮ್ಯವನ್ನನುಸರಿಸದೆ, ಅಹಂಕಾರದಿಂದ ತಾವೇ ಶ್ರೇಷ್ಠರೆಂದು ನಡೆದುಕೊಂಡದ್ದರಿಂದ ಅವರಲ್ಲಿ ಮಾತ್ಸರ್ಯೋತ್ಪತ್ತಿಯಾಗಿ, ಅನಾಚಾರದಮೂಲಕ ಅವರು ನಾಶವನ್ನು ಹೊಂದಿದರು. ಈ ರಹಸ್ಯವನ್ನು ಸುಖಾಪೇಕ್ಷಿಗಳು ನೆನಪಿನಲ್ಲಿಟ್ಟು ತಮ್ಮ ತಮ್ಮ ಧರ್ಮಗಳ ತಾರತಮ್ಯದಂತೆ ನಡೆದರೆ, ಮಾತ್ಸರ್ಯದ ಉತ್ಪತ್ತಿಗೆ ಆಸ್ಪದವೇ ಉಳಿಯುವದಿಲ್ಲ.



## ೧೮ ಖಾಂಡವದಾಹಪರ್ವ

**೨೨೨ನೇ ಅಧ್ಯಾಯ—ಬ್ರಾಹ್ಮಣರೂಪದಿಂದ ಅಗ್ನಿಯು ಬಂದದ್ದು**—ಜನಮೇಜಯಾ, ಪಾಂಡವರು ಇಂದ್ರಪ್ರಸ್ಥದಲ್ಲಿ ರಾಜ್ಯವಾಳ ಹತ್ತಿದ ಬಳಿಕ, ಪ್ರಜಾಪೀಡಕರಾದ ರಾಜರನ್ನು ನಾಶಗೊಳಿಸಿದರು. ಯುಧಿಷ್ಠಿರರಾಜನು, ಧರ್ಮ—ಅರ್ಥ—ಕಾಮಗಳನ್ನು ಒಂದರ ಸೇವನದಿಂದ ಮತ್ತೊಂದಕ್ಕೆ ವಿರೋಧವಾಗದಂತೆ ಒಂದೇಸಮನೆ ಸೇವಿಸುತ್ತಿದ್ದನು. ಬ್ರಹ್ಮಸ್ವರೂಪವನ್ನು ತಿಳಿದಿದ್ದ, ಹಾಗು ವೈದಿಕಕರ್ಮನಿರತನಾದ, ಅದರಂತೆ ನೀತಿಯಿಂದ ನಡೆಯುವ ಯುಧಿಷ್ಠಿರರಾಜನು ದೊರೆತದ್ದರಿಂದ, ಆತನ ರಾಜ್ಯದ ಲಕ್ಷ್ಮಿಯು ಸ್ಥಿರವಾದಳು; ಜ್ಞಾನವು ಪರಮಾವಧಿಯನ್ನು ಹೊಂದಿತು; ಪೃಥ್ವಿಯೊಳಗಿನ ಉಳಿದ ರಾಜರ ನೀತಿಯು ವೃದ್ಧಿಂಗತವಾಯಿತು. ಅರಸನ ಕರ್ತವ್ಯವಾದ ಪ್ರಜಾಪಾಲನವನ್ನು ಸರಿಯಾಗಿ ಮಾಡುವನೆಂಬ ಕಾರಣದಿಂದ ಯುಧಿಷ್ಠಿರರಾಜನಮೇಲೆ ಪ್ರಜೆಗಳು ಪ್ರೇಮಮಾಡುತ್ತಿದ್ದರೆಂಬಂತಲ್ಲ; ಪ್ರಜೆಗಳ ಮನಸ್ಸು ರಂಜಿಸುವಂಥ ಕೆಲಸಗಳನ್ನು ಮಾಡುತ್ತಿದ್ದದ್ದರಿಂದ, ಆತನು ಪ್ರಜೆಗಳಿಗೆ ವಿಶೇಷ ಪ್ರಿಯನಾಗಿದ್ದನು. ಆತನು ಯಾವಾಗಲೂ ಸವಿಮಾತುಗಳನ್ನು ಆಡುತ್ತಿದ್ದನು; ಅಯುಕ್ತವೂ—ಅಸತ್ಯವೂ—ಅಸಹ್ಯವೂ—ಅಪ್ರಿಯವೂ ಆದ ಮಾತುಗಳು ಎಂತಹವೆಂಬದು ಆ ಬುದ್ಧಿವಂತನಿಗೆ ಗೊತ್ತಿದ್ದಿಲ್ಲ. ಒಂದುದಿನ ಅರ್ಜುನನು ಧರ್ಮರಾಜನ ಅನುಮತಿಯಿಂದ ಕೃಷ್ಣನೊಡನೆ ತನ್ನ ಆಪ್ತೇಷ್ಟರ ಪರಿವಾರವನ್ನು ಕೂಡಿಕೊಂಡು ಜಲಕ್ರೀಡೆಗಾಗಿ ಯಮುನಾನದಿಗೆ ಹೋದನು. ಅಲ್ಲಿ ಕೃಷ್ಣಾರ್ಜುನರು ಆನಂದದಿಂದ ಜಲಕ್ರೀಡೆಯನ್ನು ಆಡಿದಬಳಿಕ ಹತ್ತಿರದ ಒಂದು ಸುಂದರಪ್ರದೇಶದಲ್ಲ ಉತ್ತಮವಾದ ಆಸನದಮೇಲೆ ಮಾತಾಡುತ್ತ ಕುಳಿತಿರುವಾಗ, ಜಟಾವಲ್ಕಲಗಳನ್ನು ಧರಿಸಿದ ಅತ್ಯಂತ ತೇಜಸ್ವಿಯಾದ ಒಬ್ಬ ಬ್ರಾಹ್ಮಣನು ಅವರ ಬಳಿಗೆ ಬಂದನು. ಕೂಡಲೆ ಕೃಷ್ಣಾರ್ಜುನರು ಎದ್ದುನಿಂತುಕೊಂಡರು. ಆಗ ಆ ಬ್ರಾಹ್ಮಣನು ಕೃಷ್ಣಾರ್ಜುನರನ್ನು ಕುರಿತು—"ನಾನು ಬ್ರಾಹ್ಮಣವೇಷಧಾರಿಯಾದ ಅಗ್ನಿಯಿರುವೆನೆಂದು ತಿಳಿದು, ನನಗೆ ಈ ಖಾಂಡವವನವನ್ನು ದಗ್ಧಮಾಡಗೊಡಿರಿ. ಇಂದ್ರನ ಮಿತ್ರನಾದ ತಕ್ಷಕನು ಈ ಅರ

ಣ್ಯದಲ್ಲಿ ವಾಸಿಸುತ್ತಿರುವದರಿಂದ, ಇಂದ್ರನು ಆತನನ್ನು ಸಂರಕ್ಷಿಸುವದಕ್ಕಾಗಿ ಈ ಖಾಂಡವವನವನ್ನು ಕಾಯುತ್ತಿರುವನು; ಅದರಿಂದ ನನ್ನ ಆಟವು ನಡೆಯಲೊಲ್ಲದು'' ಎಂದು ಹೇಳಿದನು.

ಹೀಗೆ ವೈಶಂಪಾಯನರು ಜನಮೇಜಯನಿಗೆ ಹೇಳುತ್ತಿರಲು, ಜನಮೇಜಯನು ನಡುವೇ ಬಾಯಿಹಾಕಿ ''ಭಗವನ್, ಅಗ್ನಿಯು ಹೀಗೆ ಖಾಂಡವವನವನ್ನು ಸುಡಲು ಇಚ್ಛಿಸಿದ ಕಾರಣವೇನು'' ಎಂದು ಕೇಳಲು, ವೈಶಂಪಾಯನರು—''ಜನಮೇಜಯಾ, ಹಿಂದಕ್ಕೆ ಶ್ವೇತಕೀ ರಾಜನು ದೂರ್ವಾಸರ ಮುಖಾಂತರ ಯಜ್ಞ ಮಾಡಿ, ಒಂದೇಸಮನೆ ಹನ್ನೆರಡು ವರ್ಷ ಅವಿಚ್ಛಿನ್ನ ತುಪ್ಪದ ಧಾರೆಯಿಂದ ಅಗ್ನಿಯನ್ನು ಆರಾಧಿಸಲು, ಆತನಿಗೆ ಅಜೀರ್ಣರೋಗವಾಯಿತು! ಅದರಿಂದ ಆತನು ನಿಸ್ತೇಜನಾಗಿ ಬ್ರಹ್ಮದೇವನಿಗೆ ಶರಣು ಹೋದನು. ಆಗ ಬ್ರಹ್ಮದೇವನು ಅಗ್ನಿಗೆ—''ನೀನು ಖಾಂಡವವನದಲ್ಲಿರುವ ಪ್ರಾಣಿಗಳ ಮೇದವನ್ನು ಭಕ್ಷಿಸು, ಅಂದರೆ ನಿನ್ನ ರೋಗವು ಹೋಗುವದು'' ಎಂದು ಹೇಳಿದನು. ಅದರಂತೆ ಅಗ್ನಿಯು ಏಳುಸಾರೆ ಖಾಂಡವವನವನ್ನು ಸುಡುವ ಯತ್ನ ಮಾಡಿದರೂ, ಇಂದ್ರನು ಅದನ್ನು ಸಫಲಮಾಡಲಿಲ್ಲ. ಆಗ ಅಗ್ನಿಯು ಪುನಃ ಬ್ರಹ್ಮದೇವನಬಳಿಗೆ ಹೋದನು. ಆಗ ಬ್ರಹ್ಮದೇವನು— ''ಎಲೈ ಅಗ್ನೀ, ನರನಾರಾಯಣರು ಅರ್ಜುನ-ಕೃಷ್ಣರೂಪದಿಂದ ಭೂಮಿಯಲ್ಲಿ ಅವತರಿಸಿರುವರು ಈಗ ಅವರಿಗೆ ನೀನು ಶರಣು ಹೋದರೆ, ನಿನ್ನ ಬಯಕೆಯು ಪೂರ್ಣವಾಗುವದು,'' ಎಂದು ಹೇಳಿದನು. ಅದರಂತೆ ಅಗ್ನಿಯು ಬ್ರಾಹ್ಮಣ ರೂಪದಿಂದ ಬಂದು ಕೃಷ್ಣಾರ್ಜುನರಿಗೆ ಹೇಳಿದನು. ಮುಂದೆ ಅರ್ಜುನನು ಅದಕ್ಕೆ ಏನುಹೇಳಿದನೆಂಬುವದನ್ನು ಹೇಳುವೆನು ಕೇಳು.

ಅರ್ಜುನ—ಅಗ್ನೇ, ನನ್ನಲ್ಲಿ ಉತ್ತಮೋತ್ತಮವಾದ ಹಲವು ಶಸ್ತ್ರಗಳಿರುವವು; ಅವುಗಳಿಂದ ಸುರಾಸುರಜನ ಇಂದ್ರರೊಡನೆ ಯುದ್ಧ ಮಾಡಲು ನಾನು ಸಮರ್ಥನಾಗಿರುವೆನು; ಆದರೆ ಭಗವನ್, ಯುದ್ಧದಲ್ಲಿ ಕಾದುತ್ತಿರುವಾಗ ನನ್ನ ಬಾಹುಬಲಕ್ಕೆ ತಡೆಯುವ ಧನುಸ್ಸೂ, ನನ್ನ ಅಸಂಖ್ಯಬಾಣಗಳನ್ನು ಹೊರುವಂಥ ರಥವೂ, ಅಂತಹ ಪ್ರಚಂಡ ರಥವನ್ನು ಜಗ್ಗುವ ಕುದುರೆಗಳೂ ನನಗೆ ಇಲ್ಲವು; ಆದ್ದರಿಂದ, ಇವು ದೊರೆಯುವ ಉಪಾಯವೇನಾದರೂ ಇದ್ದರೆ ನನಗೆ ಹೇಳು.

**೨೨೫ನೇ ಅಧ್ಯಾಯ—ಕೃಷ್ಣಾರ್ಜುನರಿಗೆ ಯುದ್ಧಸಾಧನಗಳ ಪ್ರಾಪ್ತಿ**—ಅರ್ಜುನನ ಈ ಮಾತುಗಳನ್ನು ಕೇಳಿದಕೂಡಲೆ ಅಗ್ನಿಯು, ಜಲಾಧಿಪನಾದ ವರುಣನನ್ನು ಧ್ಯಾನಿಸಿದನು. ಆಗ ವರುಣನು ಬಂದು ಅಗ್ನಿಯು ಹೇಳಿದಂತೆ ಅರ್ಜುನನಿಗೆ, ಎಂದೂ ಬಾಣಗಳು ತೀರದೆಯಿರುವ ಎರಡು ಬತ್ತಳಿಕೆಗಳನ್ನೂ, ಅತ್ಯದ್ಭುತವಾದ ಗಾಂಡೀವಧನುಸ್ಸನ್ನೂ ಕೊಟ್ಟನು. ಗಾಂಡೀವಧನುಸ್ಸು ಒಂದು ಲಕ್ಷ ಆಯುಧಗಳನ್ನು ಸರಿಗಟ್ಟುವಂತಹದಿತ್ತು. ಅದನ್ನು ನೂರಾರುವರ್ಷಗಳಿಂದ ದೇವ-ದಾನವ-ಗಂಧರ್ವರು ಪರಮಪೂಜ್ಯವೆಂದು ತಿಳಿಯುತ್ತ ಬಂದಿದ್ದರು. ಈ ಧನುಸ್ಸನ್ನಲ್ಲದೆ, ದಿವ್ಯಾಶ್ವಗಳನ್ನು ಹೂಡಿದ ಕಪಿಧ್ವಜವುಳ್ಳ ಒಂದು ದಿವ್ಯರಥವನ್ನು ವರುಣನು ಅರ್ಜುನನಿಗೆ ಕೊಟ್ಟನು. ಆ ರಥಕ್ಕೆ ಹೂಡಿದ್ದ ಬಿಳಿಯಕುದುರೆಗಳು ಗಂಧರ್ವಲೋಕದವು. ರಥದಲ್ಲಿ ಯುದ್ಧೋಪಯುಕ್ತವಾದ ಎಲ್ಲ ಸಾಹಿತ್ಯಗಳು ಸಿದ್ಧವಾಗಿದ್ದವು. ಆ ರಥವನ್ನು, ವಿಶ್ವಕರ್ಮನು ದೊಡ್ಡ ತಪಶ್ಚರ್ಯದಿಂದ ನಿರ್ಮಿಸಿದ್ದನು. ಧ್ವಜದಂಡದಲ್ಲಿರುವ ಭಯಂಕರ ಕಪಿಯೂ, ರಥದಮೇಲೆ ಕುಳಿತಿದ್ದ ನಾನಾಪ್ರಕಾರದ ಭಯಂಕರ ಪ್ರಾಣಿಗಳೂ ತಮ್ಮ ಗರ್ಜನೆಯಿಂದ ಶತ್ರುಗಳನ್ನು ಮೂರ್ಛೆಗೊಳಿಸುತ್ತಿದ್ದವು. ಇಂಥ ದಿವ್ಯರಥಕ್ಕೂ, ದೇವತೆಗಳಿಗೂ ಅರ್ಜುನನು ಪ್ರದಕ್ಷಿಣನಮಸ್ಕಾರಮಾಡಿ ರಥವನ್ನು ಯುದ್ಧಕ್ಕೆ ಸಿದ್ಧನಾಗಿ, ಹತ್ತಿದನು. ವರುಣನು ಶ್ರೀಕೃಷ್ಣನಿಗೆ ಸುದರ್ಶನಚಕ್ರವನ್ನೂ, ಕೌಮೋದಕೀ ಎಂಬ ಭಯಂಕರ ಗದೆಯನ್ನೂ ಕೊಟ್ಟನು. ಸುದರ್ಶನಚಕ್ರವು ಶತ್ರುಗಳನ್ನು ಸಂಹರಿಸಿ ಪುನಃ ಕೃಷ್ಣನಬಳಿಗೆ ಬರುತ್ತಿತ್ತು. ಅಂಥ ಚಕ್ರ-ಗದೆಗಳನ್ನು ಧರಿಸಿ ಕೃಷ್ಣನು ಬೇರೊಂದು ರಥವನ್ನು ಹತ್ತಿದನು. ಆಗ ಅಗ್ನಿಯು ಭಯಂಕರ ಜ್ವಾಲೆಗಳಿಂದ ಅರಣ್ಯವನ್ನು ದಹಿಸತೊಡಗಿದನು.

**೨೨೬, ೨೨೭ನೇ ಅಧ್ಯಾಯಗಳು—ದೇವತೆಗಳಿಗೂ, ಕೃಷ್ಣಾರ್ಜುನರಿಗೂ ಯುದ್ಧ**—ಹೀಗೆ ಅಗ್ನಿಯು ಭಯಂಕರರೀತಿಯಿಂದ ಅರಣ್ಯವನ್ನು ಸುಡುತ್ತಿರುವಾಗ, ಕೃಷ್ಣಾರ್ಜುನರು ಬೇರೆ ಬೇರೆ ರಥಗಳಲ್ಲಿ ಕುಳಿತು ವೇಗದಿಂದ ಸಂಚರಿಸುತ್ತ, ಅರಣ್ಯದೊಳಗಿನ ಒಂದು ಪ್ರಾಣಿಯೂ ಹೊರಗೆ ಹೋಗದೆ ಅಗ್ನಿಗೆ ಆಹುತಿಯಾಗುವಂತೆ ಮಾಡತೊಡಗಿದರು

ಅರಣ್ಯದಲ್ಲಿ ಸಿಕ್ಕಪ್ರಾಣಿಗಳನ್ನು ಅಗ್ನಿಯು ಸುಡುತ್ತಿದ್ದನು; ಹೊರಗೆ ಓಡಿಬರುವ ಪ್ರಾಣಿಗಳನ್ನು ಕೃಷ್ಣಾರ್ಜುನರು ಬಾಣಗಳಿಂದ ತುಂಡರಿಸಿ ಅಗ್ನಿಯಲ್ಲಿ ಕೆಡವುತ್ತಿದ್ದರು. ಆಗ ಪ್ರಾಣಿಗಳು ಭಯಂಕರರೀತಿಯಿಂದ ಕೂಗುತ್ತ ಅರಣ್ಯದಿಂದ ಹೊರಬೀಳುತ್ತಿದ್ದವು. ಅವುಗಳಲ್ಲಿ ಕೆಲವು ಅರ್ಧಸುಟ್ಟಿದ್ದವು; ಕೆಲವು ಪೂರಾ ಕರಕಾಗಿದ್ದವು; ಕೆಲವು ಪೂರಾಸುಟ್ಟು ಅಗ್ನಿರೂಪಗಳಾಗಿ ತೋರುತ್ತಿದ್ದವು. ಆಕಾಶದಲ್ಲಿ ಹಾರುವ ಪಕ್ಷಿಗಳನ್ನು ಕೃಷ್ಣಾರ್ಜುನರು ಬಾಣಗಳಿಂದ ಹೊಡೆದು ಬೆಂಕಿಯಲ್ಲಿ ಕೆಡವುತ್ತಿದ್ದರು. ಜಲಾಶಯಗಳು ಕಾದು ನೀರು ಎಸರು ಬಂದು, ಅವುಗಳೊಳಗಿನ ಪ್ರಾಣಿಗಳು ಸಾಯತೊಡಗಿದವು. ಅಗ್ನಿಜ್ವಾಲೆಗಳು ಆಕಾಶವನ್ನು ಮುಟ್ಟಿದವು; ಅದರಿಂದ ದೇವತೆಗಳು ಉದ್ವಿಗ್ನರಾದರು. ಅವರು ಇಂದ್ರನ ಬಳಿಗೆ ಹೋಗಿ ಖಾಂಡವವನ ದಹನದ ಪರಿಯನ್ನು ತಿಳಿಸಲು, ಇಂದ್ರನು ಸಿಟ್ಟಾಗಿ ಭಯಂಕರ ಜಲವೃಷ್ಟಿಗರೆದನು. ಆಗ ಖಾಂಡವವನವು ಹೊಗೆ, ಮೋಡ, ಮಿಂಚುಗಳಿಂದ ವ್ಯಾಪ್ತವಾದದ್ದರಿಂದ ಭಯಂಕರವಾಗಿ ತೋರಹತ್ತಿತು. ಆ ಕಾಲದಲ್ಲಿ ಖಾಂಡವವನದೊಳಗಿನ ಯಾವ ಪ್ರಾಣಿಯೂ ಹೊರಗೆ ಹೋಗುವಂತೆ ಇದ್ದಿಲ್ಲ. ಆಗ ಸರ್ಪಗಳ ರಾಜನಾದ ಮಹಾಬಲಾಢ್ಯ ತಕ್ಷಕನು ಅಲ್ಲಿ ಇದ್ದಿಲ್ಲ. ಖಾಂಡವಾರಣ್ಯವು ದಗ್ಧವಾಗತೊಡಗಿದ ಕೂಡಲೆ ಆತನು ಕುರುಕ್ಷೇತ್ರಕ್ಕೆ ಹೋಗಿ ಅಲ್ಲಿ ವಾಸಿಸತೊಡಗಿದ್ದನು. ಅಶ್ವಸೇನನೆಂಬ ಹೆಸರಿನ ಮಹಾಪರಾಕ್ರಮಿಯಾದ ತಕ್ಷಕನ ಒಬ್ಬ ಮಗನನ್ನು, ಆತನ ತಾಯಿಯು ನುಂಗಿ ಆತನನ್ನು ಅರಣ್ಯದಿಂದ ದಾಟಿಸಿದಳು. ಆಕೆಯು ಹೊರಬಿದ್ದ ಕೂಡಲೆ ಅರ್ಜುನನು ತೀಕ್ಷ್ಣಬಾಣದಿಂದ ಆಕೆಯ ತಲೆಯನ್ನು ಹಾರಿಸಿದನು. ಇದನ್ನು ನೋಡಿದ ಕೂಡಲೆ ಅಶ್ವಸೇನನನ್ನು ಬಿಡಿಸುವದಕ್ಕಾಗಿ ಇಂದ್ರನು ವಾಯುವ್ಯಾಸ್ತ್ರವನ್ನು ಬಿಟ್ಟು, ಅರ್ಜುನನನ್ನು ಕೂಡಲೆ ಮೋಹಿತನನ್ನಾಗಿ ಮಾಡಿದ್ದರಿಂದ, ಅಶ್ವಸೇನನು ಪಾರಾಗಿ ಹೋದನು. ಆಗ ಅರ್ಜುನನು ಸಿಟ್ಟಾಗಿ ಆಕಾಶದಲ್ಲಿ ಹಾರಿಹೋಗುವ ಪ್ರಾಣಿಗಳನ್ನು ಎರಡೆರಡು ತುಂಡಾಗಿ ತುಂಡರಿಸತೊಡಗಿದನು. ಅರ್ಜುನನು ಇಂದ್ರನ ಜಲವೃಷ್ಟಿಯನ್ನು ವಾಯುವ್ಯಾಸ್ತ್ರದಿಂದ ನಿವಾರಣಮಾಡಲು, ಅಗ್ನಿಯು ನಿರಾತಂಕವಾಗಿ ಮೊದಲಿನಂತೆ ಆನಂದದಿಂದ ವನವನ್ನು

ಸುಡತೊಡಗಿದನು. ಪ್ರಾಣಿಗಳ ಶರೀರದಿಂದ ಹೊರಬೀಳುತ್ತಿರುವ ಮಜ್ಜಾ-ಮೇದಗಳಿಂದ ಆತನು ಬಹಳವಾಗಿ ಪ್ರಜ್ವಲಿಸಿ ಪಸರಿಸಿದನು. ಆಗ ಗರುಡ ಮೊದಲಾದ ಪಕ್ಷಿಗಳು ಆಕಾಶದಲ್ಲಿ ನೆರೆದು, ಕೃಷ್ಣಾರ್ಜುನರನ್ನು ಗಾಯಗೊಳಿಸಹತ್ತಿದವು. ಅನಂತರ, ಸಿಟ್ಟಿನಿಂದ ಮೋರೆಗಳು ಕೆಂಪಾಗಿರಲು, ಸರ್ಪಗಳು ಕೃಷ್ಣಾರ್ಜುನರಮೇಲೆ ವಿಷವನ್ನು ಕಾರತೊಡಗಿದವು. ಆಗ ಅರ್ಜುನನು ಆ ಸರ್ಪಗಳನ್ನು ತುಂಡರಿಸಿ ಬೆಂಕಿಯಲ್ಲಿ ಕೆಡವಿದನು. ಆಮೇಲೆ ಅಸುರ, ಗಂಧರ್ವ, ಯಕ್ಷ, ರಾಕ್ಷಸಾದಿಗಳೂ, ಇಂದ್ರನೂ ಅರ್ಜುನನೊಡನೆ ಯುದ್ಧಮಾಡುವದಕ್ಕಾಗಿ ಬರಲು, ಕೃಷ್ಣಾರ್ಜುನರು ಸಂತಾಪಗೊಂಡು ಅವರನ್ನು ಸೋಲಿಸಿ ಹಿಂದಕ್ಕೆ ಸರಿಸತೊಡಗಿದರು.

---

## ಶ್ರೀ ಶೇಷಸದ್ಗುರು-ಸೂಕ್ತಿರೂಪ

# ರಹಸ್ಯಗಳು

**(೫೨) ಸರ್ವನಾಶಪ್ರಸಂಗದಲ್ಲಿ ಅಲ್ಪನಾಶವು ಕ್ಷಮ್ಯವು—** ಈ ಉಪಪರ್ವದಲ್ಲಿ ಅಗ್ನಿಯು ಖಾಂಡವವನವನ್ನು ದಹಿಸುವಾಗ ಆದ ಭಯಂಕರ ನಾಶವನ್ನು ಲಕ್ಷಿಸಿದರೆ, ಅಗ್ನಿಯೊಡನೆ ಅರ್ಜುನ-ಶ್ರೀಕೃಷ್ಣರೂ ಅನ್ಯಾಯಿಗಳೂ, ಕ್ರೂರರೂ ಎಂದು ತೋರಬಹುದಾಗಿದೆ ; ಆದರೆ ಜಗತ್ತಿನ ಆಧಾರವಾದ ಅಗ್ನಿಯು ನಷ್ಟನಾದರೆ ಜಗತ್ತೇ ನಾಶವಾಗುವಲ್ಲಿ ಸಂಶಯವಿಲ್ಲ ; ಯಾಕೆಂದರೆ, ಜಗತ್ತಿನಲ್ಲಿಯ ಸರ್ವವ್ಯಾಪಿಯಾದ ಅಗ್ನಿಯು, ಅಂದರೆ ಜಠರ ತೇಜವು ಹೋಗಿಬಿಟ್ಟರೆ, ಯಾವ ಪ್ರಾಣಿಗಳು ಅಥವಾ ಯಾವ ಸಸ್ಯಗಳು ಜಗತ್ತಿನಲ್ಲಿ ಜೀವದಿಂದ ಉಳಿಯಬಹುದು ? ಇಂತಹ ಜಗದಾಧಾರನಾದ ಅಗ್ನಿಗೆ ಅಜೀರ್ಣರೋಗವಾಗಿ ಆತನ ನಾಶವಾಗುವ ಪ್ರಸಂಗದಲ್ಲಿ, ನಿಷ್ಪರಿಣಾಮನಾಗಿ ಆತನು ಖಾಂಡವವನವನ್ನು ದಹಿಸಿದ್ದೂ, ಆತನ ಆ ದಹನಕ್ರಿಯೆಗೆ ಶ್ರೀಕೃಷ್ಣಾರ್ಜುನರು ಸಹಾಯ ಮಾಡಿದ್ದೂ, ಜಗತ್ಕಲ್ಯಾಣಕ್ಕೇ ಕಾರಣವೆಂಬಲ್ಲಿ ಸಂಶಯವಿಲ್ಲ. ಬಹುಜನರ ಕಲ್ಯಾಣಕ್ಕಾಗಿ ಪ್ರತಿಫಲಕೊಟ್ಟು ಒಬ್ಬರ ಅಕಲ್ಯಾಣಮಾಡುವ

ಪ್ರಸಂಗವು ಸಾರ್ವತ್ರಿಕಹಿತದೃಷ್ಟಿಯಿಂದ ಈಗಾದರೂ ವ್ಯವಹಾರದಲ್ಲಿ ಅನ್ಯಾಯವೆಂದು ಎಣಿಸಲ್ಪಡುವದಿಲ್ಲ. ಮೇಲಾಗಿ ಖಾಂಡವವನದಲ್ಲ ತಕ್ಷಕಸರ್ಪದಂತಹ ಹಿಂಸ್ರಪ್ರಾಣಿಗಳ ಸಂಖ್ಯೆಯೇ ದೊಡ್ಡದಿದ್ದು, ಅವುಗಳ ನಾಶವೆಂದರೆ, ಜಗತ್ತಿನ ಪೀಡಾನಾಶವೇ ಆಗಿರುವದು. ಇನ್ನು, ಸಹವಾಸದೋಷದಿಂದ ದುಷ್ಟಪ್ರಾಣಿಗಳ ಸಹವಾಸದಲ್ಲಿದ್ದ ಸುಷ್ಟಪ್ರಾಣಿಗಳಿಗೂ ನಾಶವು ಒದಗಿದ್ದು ಅಪರಿಹಾರ್ಯವಾಗಿರುವದು. ಅದರಂತೆ, ಖಾಂಡವ ವನದಲ್ಲಿ ಸತ್ತುಹೋದ ಪ್ರಾಣಿಗಳಿಗೆ ಪ್ರತಿಫಲವೇನು ದೊರೆಯಿತೆಂಬ ಶಂಕೆಯು ಬರಬಹುದು; ಆದರೆ ಜಗತ್ಕಲ್ಯಾಣಕ್ಕಾಗಿ ದೇವತೆಗಳಾದ ಅಗ್ನಿ-ಶ್ರೀನಾರಾಯಣ-ನರ ಇವರಿಂದ ಮರಣಒದಗಿದರೆ, ಹಿಂದಿನ ೧೫೨ನೇ ಪುಟದ ೨೨ನೇ ರಹಸ್ಯದಲ್ಲಿ ಹೇಳಿದಂತೆ ಅವಕ್ಕೆ ಜನ್ಮಾಂತರದಲ್ಲಿ ಉಚ್ಚಗತಿಯು ದೊರೆಯುವದು ಸಿದ್ಧವಾಗಿರುವದು.



## ೧೯ ಮಯದರ್ಶನಪರ್ವ

**೨೨೮. ಮಯಾಸುರನ ಸಂರಕ್ಷಣೆ**—ಕೃಷ್ಣಾರ್ಜುನರ ಈ ಪರಾಕ್ರಮವನ್ನು ನೋಡಿ ಇಂದ್ರನು ಸಂತುಷ್ಟನಾದನು. ಅಷ್ಟರೊಳಗೆ ಆಕಾಶದಲ್ಲಿ—"ಎಲೈ ಇಂದ್ರಾ, ನಿನ್ನ ಮಿತ್ರ ತಕ್ಷಕನು ಈಗ ಕುರುಕ್ಷೇತ್ರದಲ್ಲಿ ಸುರಕ್ಷಿತವಾಗಿರುವನು. ಮೇಲಾಗಿ ಈ ಕೃಷ್ಣಾರ್ಜುನರು ಪುರಾತನ ದೇವತೆಗಳಾದ ತಪಸ್ವಿಶ್ರೇಷ್ಠ ನರನಾರಾಯಣರಿದ್ದು, ಅವರು ಅಜಿಂಕ್ಯರೂ, ದೇವದಾನವಾದಿಗಳಿಗೂ ಪೂಜ್ಯರೂ ಆಗಿರುವರು. ಈ ದೇವತೆಗಳನ್ನು ಗೆಲ್ಲುವದು ಯಾರಿಗೂ ಅಶಕ್ಯವು" ಎಂದು ವಾಣಿಯು ಆಗಲು, ಇಂದ್ರನು ಯುದ್ಧ ಮಾಡುವದನ್ನು ಬಿಟ್ಟು ಯಾವತ್ತು ದೇವತೆಗಳೊಡನೆ ಹೊರಟುಹೋದನು. ಇತ್ತ ನಮುಚಿದೈತ್ಯನ ತಮ್ಮನಾದ ಮಯಾಸುರನು ಅರಣ್ಯದಿಂದ ಹೊರಬೀಳಲು, ಕೃಷ್ಣನು ಆತನನ್ನು ಸಂಹರಿಸತೊಡಗಿದನು; ಅಷ್ಟರಲ್ಲಿ ಮಯನು ದೈನ್ಯದಿಂದ ಅರ್ಜುನನಿಗೆ ಶರಣುಹೋಗಿ—"ನನ್ನನ್ನು ರಕ್ಷಿಸು" ಎಂದು ಪ್ರಾರ್ಥಿಸಿದ್ದರಿಂದ, ಅರ್ಜುನನು ಅಭಯವಿತ್ತನು. ಅದನ್ನು ನೋಡಿ ಶ್ರೀಕೃಷ್ಣನು ಮಯನ ಸಂಹಾರಮಾಡುವ ಗೊಡವಿಗೆಹೋಗಲಿಲ್ಲ.

ಜನಮೇಜಯಾ, ಈಮೇರೆಗೆ ಅಗ್ನಿಯು ಹದಿನೈದು ದಿನ ಅರಣ್ಯವನ್ನು ದಗ್ಧಮಾಡುತ್ತಿರುವಾಗ, ಅಶ್ವಸೇನ, ಮಯಾಸುರ, ನಾಲ್ಕು ಶಾರ್ಙಪಕ್ಷಿಗಳು ಮಾತ್ರ ಜೀವದಿಂದ ಉಳಿದವು.

**೨೨೯ನೇ ಅಧ್ಯಾಯ— ಶಾರ್ಙಕೋಪಾಖ್ಯಾನ** — ಜನಮೇಜಯರಾಜನು ವೈಶಂಪಾಯನನನ್ನು ಕುರಿತು—"ಬ್ರಹ್ಮನ್, ಅಗ್ನಿಯು ಶಾರ್ಙಪಕ್ಷಿಗಳನ್ನು ಯಾಕೆ ಸುಡಲಿಲ್ಲ?" ಎಂದು ಪ್ರಾರ್ಥಿಸಲು, ವೈಶಂಪಾಯನರು—"ರಾಜಾ, ಕೇಳು. ಪೂರ್ವದಲ್ಲಿ ಮಂದಪಾಲನೆಂಬ ಒಬ್ಬ ದೊಡ್ಡ ಋಷಿಯು ಇದ್ದನು. ಆತನು ಮಹಾತಪಸ್ವಿಯು. ದೇಹಾವಸಾನವಾದಬಳಿಕ ಪಿತೃಲೋಕಕ್ಕೆ ಹೋದನು; ಆದರೆ ಆತನಿಗೆ ಸಂತತಿಯಿಲ್ಲದ್ದರಿಂದ ತಪಸ್ಸಿನ ಫಲಗಳಾದ ಪುಣ್ಯಲೋಕಗಳು ಆತನಿಗೆ ಪ್ರಾಪ್ತವಾಗಲಿಲ್ಲವು. ಆದ್ದರಿಂದ ಮಂದಪಾಲನು ಸಂತತಿಯನ್ನು ಪಡೆಯಲಿಚ್ಛಿಸಿ, ಒಮ್ಮೆಲೆ ಹಲವು ಮಕ್ಕಳಾಗುವ ಪಕ್ಷಿಯೋನಿಯಲ್ಲಿ ಜನ್ಮತಾಳಬೇಕೆಂದು ಆತನು ಇಚ್ಛಿಸಿದನು.

ಬಳಿಕ ಮಂದಪಾಲನು ಶಾರ್ಙಪಕ್ಷಿಯಾಗಿ ಹುಟ್ಟಿ "ಜರಿತಾ" ಎಂಬ ಹೆಣ್ಣುಪಕ್ಷಿಯಿಂದ ನಾಲ್ಕುಜನ ಮಕ್ಕಳನ್ನು ಪಡೆದನು. ಆ ಶಿಶುಗಳು ಇನ್ನೂ ತತ್ತಿಯಲ್ಲಿರುವಾಗಲೇ ಮಂದಪಾಲಋಷಿಯು ಜರಿತೆಯನ್ನು ಬಿಟ್ಟು, "ಲಪಿತೆ"ಯೆಂಬ ಎರಡನೆಯ ಸ್ತ್ರೀಯಬಳಿಗೆ ಹೋದನು. ಆದರಿಂದ ಜರಿತೆಯು ದುಃಖಿತಳಾದರೂ, ಅಪತ್ಯಸ್ನೇಹದಮೂಲಕ ಪತಿಯನ್ನು ಹಿಂಬಾಲಿಸಿ ಹೋಗಲಿಲ್ಲ. ಮುಂದೆ ತತ್ತಿಗಳನ್ನು ಒಡೆದು ಮರಿಗಳು ಹೊರಬಿದ್ದಬಳಿಕ, ಜರಿತೆಯು ಬಹಳ ಪ್ರೀತಿಯಿಂದ ಅವುಗಳಿಗೆ ಗುಟುಕು ಕೊಟ್ಟು ಸಂರಕ್ಷಣಮಾಡಿತು. ಹೀಗಿರುವಾಗ ಮಂದಪಾಲನು ತನ್ನ ಚಿಕ್ಕ ಹೆಂಡತಿಯಾದ ಲಪಿತೆಯೊಡನೆ ಅರಣ್ಯದಲ್ಲಿ ಸಂಚರಿಸುತ್ತಿರಲು, ಅಗ್ನಿಯು ಖಾಂಡವವನವನ್ನು ಸುಡುವದಕ್ಕಾಗಿ ಹೋಗುವದನ್ನು ನೋಡಿದನು. ಆಗ ಮಂದಪಾಲನಿಗೆ ತನ್ನ ಮಕ್ಕಳ ನೆನಪು ಆಗಲು, ಆತನು ಅಗ್ನಿಯನ್ನು ಬಗೆಬಗೆಯಿಂದ ಪ್ರಾರ್ಥಿಸಿ ಸಂತುಷ್ಟವಾಗಮಾಡಿ, ತನ್ನ ಮಕ್ಕಳನ್ನು ಸಂರಕ್ಷಿಸಬೇಕೆಂದು ಬೇಡಿಕೊಳ್ಳಲು, ಅಗ್ನಿಯು—"ಹಾಗೇ ಆಗಲಿ" ಎಂದು ಹೇಳಿದನು. ಬಳಿಕ ಅಗ್ನಿಯು ಖಾಂಡವವನವನ್ನು ಸುಡತೊಡ

ಗಲು, ಈ ಶಾರ್ಙ್ಗಪಕ್ಷಿಗಳು ಅಂಜಿ ನಡುಗಹತ್ತಿದವು. ಆಗ ಜರಿತೆಯು ಮಕ್ಕಳಸಲುವಾಗಿ ವಿಲಾಪಮಾಡುತ್ತ ಅವನ್ನು ಕುರಿತು —

ಜರಿತೆ—ಮಕ್ಕಳಿರಾ, ಈ ಸಂಕಟಕಾಲದಲ್ಲಿ ನನಗೆ ಏನೂ ತೋಚದಾಗಿದೆ, ನೀವು ತತ್ತಿಗಳಲ್ಲಿರುವಾಗಲೇ ನಿಮ್ಮ ತಂದೆಯು ನಮ್ಮನ್ನು ಬಿಟ್ಟು ಹೊರಟುಹೋದನು. ನೀವೆಲ್ಲರೂ ದೊಡ್ಡ ಯೋಗ್ಯತೆಯವರಾಗುವಿರೆಂದು ನಿಮ್ಮ ತಂದೆಯು ಹೇಳಿರುವನು; ಆದ್ದರಿಂದ ಈಗ ನಾನು ನಿಮ್ಮ ಸಂರಕ್ಷಣಕ್ಕಾಗಿ ಏನುಮಾಡಲಿ?

ಮಕ್ಕಳು—ಅವ್ವಾ, ನೀನು ನಮ್ಮ ಮೋಹವನ್ನು ಬಿಟ್ಟು ಅಗ್ನಿಯ ಭಯವಿಲ್ಲದಲ್ಲಿಗೆ ಹೋಗಿಬಿಡು. ನಾವು ಇಲ್ಲಿ ಸತ್ತರೂ ನಿನಗೆ ಎರಡನೆಯ ಮಕ್ಕಳಾಗುವರು; ನಿನ್ನ ನಾಶವಾದರೆ ನಮ್ಮ ಕುಲದ ವಿಸ್ತಾರವಾಗುವದು ನಿಂತುಹೋಗುವದು. ನಿನ್ನ ತಂದೆಯ ಸಂತತಿಸಂಬಂಧದ ಇಚ್ಛೆಯನ್ನು ನೀನು ವ್ಯರ್ಥಮಾಡಬೇಡ.

ಜರಿತೆ—ಮಕ್ಕಳಿರಾ, ಈ ಗಿಡದ ಬುಡದಲ್ಲಿರುವ ಈ ಪೋರಿನಲ್ಲಿ ನೀವು ಹೋಗಿರಿ, ನಾನು ಮೇಲೆ ಮಣ್ಣು ಮುಚ್ಚಿಬಿಡುವೆನು. ಅಗ್ನಿಯು ಶಾಂತವಾದಮೇಲೆ ನಾನು ಪುನಃ ಬಂದು ಮಣ್ಣು ತೆಗೆದು ನಿಮ್ಮನ್ನು ಕರಕೊಳ್ಳುವೆನು.

ಮಕ್ಕಳು—ಅವ್ವಾ, ಇನ್ನೂ ರೆಕ್ಕೆಬಾರದೆ ಮಾಂಸದ ಮುದ್ದೆಗಳಂತೆ ಇದ್ದ ನಮ್ಮನ್ನು ಪೋರಿನಲ್ಲಿದ್ದ ಇಲಿಗಳು ತಿಂದುಬಿಟ್ಟಾವು! ಹೊರಗಿದ್ದರೆ ಬೆಂಕಿಸುಡುವದು. ಇಲಿಯ ಬಾಯಿಗೆ ಬಿದ್ದು, ನಿಂದ್ಯಮರಣಕ್ಕೆ ಗುರಿಯಾಗುವದಕ್ಕಿಂತ ಅಗ್ನಿಯಲ್ಲಿ ಬೀಳುವದೇ ನೆಟ್ಟಗೆ ಕಾಣುತ್ತದೆ.

ಜರಿತೆ—ಪೋರಿನೊಳಗಿನ ಇಲಿಯು ಹೊರಬಿದ್ದಾಗ ಒಂದು ಗಿಡಗವು ಅದನ್ನು ತಿಂದದ್ದನ್ನು ನಾನು ನೋಡಿದ್ದೇನೆ; ಆದ್ದರಿಂದ ನೀವು ಪೋರಿನಲ್ಲಿ ಹೋಗಿರಿ.

ಮಕ್ಕಳು—ಗಿಡಗವು ಇಲಿಯ ಒಯ್ದದ್ದನ್ನು ನಾವು ನೋಡಿಲ್ಲ. ಮೇಲಾಗಿ ಒಂದು ಇಲಿಯು ಹೋದರೆ ಪೋರು ನಿರ್ಭಯವಾಯಿತೆಂತಲೂ ಹೇಳಲಾಗುವದಿಲ್ಲ. ಗಾಳಿಯ ದಿಕ್ಕು ಬದಲಾದರೆ ಬೆಂಕಿಯಿಂದ ನಮ್ಮ ಸಂರಕ್ಷಣವಾದೀತು; ಆದರೆ ಪೋರಿನೊಳಗಿನ ಇಲಿಗಳು ನಿಶ್ಚಯವಾಗಿ

ನಾಶವನ್ನು ನೀನು ಮಾಡುತ್ತೀ. ನೀನು ಯಾವತ್ತು ಉಪಾಧಿ ದೋಷ ಗಳಿಂದ ಅಲಿಪ್ತನು. ನೀನೇ ಸೂರ್ಯನಾಗಿ ಕಿರಣಗಳಿಂದ ಪೃಥ್ವಿಯೊಳಗಿನ ನೀರನ್ನೂ, ಬೇರೆ ರಸಗಳನ್ನೂ ಶೋಷಿಸಿ, ಯೋಗ್ಯಕಾಲದಲ್ಲಿ ಅದರ ಮಳೆಗರೆದು, ಅದರ ದ್ವಾರದಿಂದ ಜಗತ್ತಿನ ಸಂರಕ್ಷಣವನ್ನು ಒಳ್ಳೇ ಚಾತುರ್ಯದಿಂದ ಮಾಡುತ್ತೀ. ಅದರಂತೆ, ಪ್ರಳಯಕಾಲದಲ್ಲಿ ಭೂಮಿ, ಉದಕ ಮೊದಲಾದ ಪದಾರ್ಥಗಳೊಳಗಿನ ಸತ್ವಾಂಶವನ್ನು ಗ್ರಹಿಸಿ, ನೀನು ಕಾರಣರೂಪದಿಂದ ವಾಸಿಸಿ, ಪುನಃ ಉತ್ಪತ್ತಿಕಾಲದಲ್ಲಿ ಚೈತನ್ಯಶಕ್ತಿಯನ್ನುಂಟುಮಾಡಿ ವಿಶ್ವವನ್ನು ನಿರ್ಮಿಸುತ್ತೀ ; ಆದ್ದರಿಂದ ಎಲೈ ಹುತಾಶನಾ, ಇಂದು ನೀನು ನಮ್ಮನ್ನು ನಾಶಗೊಳಿಸದೆ ದೂರಹೋಗು.

ದ್ರೋಣನ ಈ ಪ್ರಾರ್ಥನೆಯನ್ನು ಕೇಳಿ ಅಗ್ನಿಯು ಸಂತುಷ್ಟನಾಗಿ ಆತನನ್ನು ಕುರಿತು-ದ್ರೋಣಾ, ನಿನ್ನ ಬ್ರಹ್ಮಪ್ರತಿಪಾದಕ ಸ್ತೋತ್ರದಿಂದ ನಾನು ಸಂತುಷ್ಟನಾಗಿ, ನಿನ್ನ ತಂದೆಗೆ ಕೊಟ್ಟಿದ್ದ ವಚನದಂತೆ ನಾನು ನಿಮ್ಮನ್ನು ರಕ್ಷಿಸುವೆನು, ಚಿಂತೆಮಾಡಬೇಡಿರಿ ; ಆದರೆ ಮತ್ತೇನು ನಿಮ್ಮ ಹಿತಮಾಡಲಿ ?" ಎಂದು ಕೇಳಲು, ದ್ರೋಣನು-"ಎಲೈ ವಿಮಲಾಗ್ನಿಯೇ, ಇಲ್ಲಿಯ ಈ ಬೆಕ್ಕುಗಳು ನಮ್ಮನ್ನು ಬಹಳವಾಗಿ ಪೀಡಿಸುವದರಿಂದ ಅವನ್ನು ನೀನು ಸುಟ್ಟುಬಿಡು" ಎಂದು ಹೇಳಿದನು. ಅಗ್ನಿಯು ಆತನು ಹೇಳಿದಂತೆ ಮಾಡಿ, ಖಾಂಡವವನವನ್ನು ದಹಿಸಹತ್ತಿದನು.

**೫೩೩ನೇ ಅಧ್ಯಾಯ—ಮಂದಪಾಲನು ತನ್ನ ಮಕ್ಕಳನ್ನು ಕಂಡದ್ದು**—ಜನಮೇಜಯಾ, ಇತ್ತ ಮಂದಪಾಲನು ತಾನು ಅಗ್ನಿಗೆ ಹೇಳಿಕೊಂಡಿದ್ದರೂ, ತನ್ನ ಮಕ್ಕಳ ವಿಷಯವಾಗಿ ಚಿಂತಿಸಿ, ಅವರ ಬಳಿಗೆ ಹೋಗಬೇಕೆಂದು ನಿಶ್ಚಯಿಸಿ ತನ್ನ ಚಿಕ್ಕಹೆಂಡತಿಯಾದ ಲಪಿತೆಯನ್ನು ಕುರಿತು—

ಮಂದಪಾಲ—ಲಪಿತೇ, ಆ ಗೂಡಿನಲ್ಲಿರುವ ನನ್ನ ಮಕ್ಕಳ ಗತಿಯು ಏನಾಗಿದೆಯೋ ಏನೋ! ಆದ್ದರಿಂದ ನಾನು ಅವುಗಳಬಳಿಗೆ ಹೋಗುವೆನು.

ಲಪಿತೆ—ಮಹಾರಾಜ, ನಿಮ್ಮ ಮಕ್ಕಳು ಮಹಾತೇಜಸ್ವಿಗಳೂ, ಪರಾಕ್ರಮಿಗಳೂ ಆದ ಋಷಿಗಳಿರುವರೆಂದು ನೀವೇ ಹೇಳಿರುವಿರಿ ; ಅವರ ಸಂರಕ್ಷಣವನ್ನು ನಾನು ಮಾಡುವೆನೆಂದು ಅಗ್ನಿಯು ಹೇಳಿದ್ದನ್ನು ನಾವು

ಪ್ರತ್ಯಕ್ಷ ಕೇಳಿರುವೆನು ; ಅಂದಬಳಿಕ ನಿಮ್ಮ ಮಕ್ಕಳ ಚಿಂತೆಯೇಕೆ? ನಿಮ್ಮ ಈ ಮಕ್ಕಳ ಚಿಂತೆಯು ತೋರಿಕೆಯದು. ನನಗಿಂತ ಜರಿತೆಯಮೇಲೆಯೇ ನಿಮ್ಮಪ್ರೇಮವು ವಿಶೇಷವಾಗಿರುವದರಿಂದ ಹೋಗಬೇಕೆನ್ನುವಿರಿ ಹೋಗಿರಿ, ನಿಮಗೆ ಅತ್ಯಂತ ಪ್ರಿಯಳಾಗಿರುವ ಜರಿತೆಯಬಳಿಗೇ ಹೋಗಿರಿ.

ಮಂದಪಾಲ—ಲಪಿತೇ, ನಿನಗೆ ತೋರುತ್ತಿರುವಂತೆ ನನ್ನ ನಡತೆಯು ಕಾಮುಕನ ನಡತೆಯಂತೆ ಇರುವದಿಲ್ಲ. ಜಗತ್ತಿನಲ್ಲಿ ನಾನು ಕೇವಲ ಸಂತತಿಯ ಸಲುವಾಗಿಯೇ ಸಂಚರಿಸುತ್ತಿರುವೆನು. ಆದ್ದರಿಂದ ನೀನು ಬೇಕಾದದ್ದು ಅನ್ನು, ನಾನು ಹೋಗುವೆನು.

ಜನಮೇಜಯಾ, ಹೀಗೆ ನುಡಿದು ಮಂದಪಾಲನು ಮಕ್ಕಳಬಳಿಗೆ ಬರುವದಕ್ಕಾಗಿ ಹೊರಟನು. ಅಷ್ಟರಲ್ಲಿ ಅಗ್ನಿಯು ದ್ರೋಣನ ಪ್ರಾರ್ಥನೆಯಂತೆ ಅವರನ್ನು ಬಿಟ್ಟು ದೂರಹೋಗಿದ್ದನು. ಜರಿತೆಯೂ ಮಕ್ಕಳ ಬಳಿಗೆ ಬಂದು, ಅವು ಅಗ್ನಿಭಯದಿಂದ ಮುಕ್ತವಾಗಿ ಆನಂದದಿಂದ ಕಿಲಿಬಿಲಿ ಮಾಡುತ್ತಿರುವದನ್ನು ನೋಡಿ ಆನಂದಬಾಷ್ಪಗಳನ್ನು ಸುರಿಸಿದಳು. ಅಷ್ಟರಲ್ಲಿ ಮಂದಪಾಲನು ಅಲ್ಲಿಗೆ ಬರಲು, ಆತನ ಮಕ್ಕಳಲ್ಲಿ ಒಬ್ಬನೂ ಆತನನ್ನು ವಂದಿಸಲೊಲ್ಲನು, ಮಾತಾಡಿಸಲೊಲ್ಲನು. ಹೆಂಡತಿಯೂ ಸುಮ್ಮನೆ ಇದ್ದಳು. ಮಂದಪಾಲನು ಮಾತ್ರ ಮಾತಾಡಿಸಿ ಮಾತಾಡಿಸಿ ಬೇಸತ್ತನು. ಆಗ ಮಂದಪಾಲನು ಅತ್ಯಂತ ಕರುಣಸ್ವರದಿಂದ ಹೆಂಡತಿಗೆ—

ಮಂದಪಾಲ—ಪ್ರಿಯೇ, . ನಾನು ಇಷ್ಟು ಅಂಗಲಾಚಿ ಕೇಳಿದರೂ ನೀನು ಉತ್ತರವನ್ನೇ ಕೊಡಲೊಲ್ಲೆಯಲ್ಲ! ನನ್ನ ಮಕ್ಕಳಲ್ಲಿ ಎಲ್ಲಕ್ಕೂ ಹಿರಿಯನು ಯಾರು? ಕಿರಿಯರು ಕಿರಿಯರು ಯಾರು ಹೇಳು.

ಜರಿತೆ—ನೀವು ಹಿರಿಯರನ್ನು ತಕ್ಕೊಂಡು ಮಾಡುವದೇನು, ಕಿರಿಯರನ್ನು ತಕ್ಕೊಂಡು ಮಾಡುವದೇನು? ನೀವು ಅತ್ಯಂತ ದೈನ್ಯಾವಸ್ಥೆಯಲ್ಲಿದ್ದ ನನ್ನನ್ನು ಬಿಟ್ಟು ಆ ತರುಣಿಯೂ, ಸುಹಾಸ್ಯವದನೆಯೂ ಆದ ಲಪಿತೆಯಬಳಿಗೆ ಹೋದಿರಲ್ಲ, ಈಗಾದರೂ ಆಕೆಯ ಬಳಿಗೇ ಹೋಗಿರಿ.

ಮಂದಪಾಲ—ನಿಜವಾಗಿ ಸ್ತ್ರೀಯರಿಗೆ ಪರಲೋಕಪ್ರಾಪ್ತಿಗೆ ಘಾತಕಗಳಾದವೆಂದರೆ, ಪರಪುರುಷಗಮನ, ಸವತಿಮತ್ಸರ ಇವೆರಡೇ ಸರಿ. ಇವೆರಡೂ ವೈರಾಗ್ನಿಯನ್ನು ಹೊತ್ತಿಸುವಂತಹವಿದ್ದು, ಕ್ರಮವಾಗಿ ಸ್ತ್ರೀ-

ಪುರುಷನ ಮನಸ್ಸನ್ನು [illegible] ಮಾಡುವವು. ಇವೆರಡು ದೊಡ್ಡ ದೋಷಗಳು ಪತಿವ್ರತಾಸ್ತ್ರೀಯರಿಗೆ [illegible] ಅನುಚಿತವಾದವು. ಇತ್ತ, ನಿನ್ನ ಸ್ವರೂಪವೇ ತಿಸ್ಸೇ; ಅತ್ತ, [illegible] ಸ್ವಭಾವವೇ [illegible]! ಆದ್ದರಿಂದ "ನನ್ನ ಹೆಂಡತಿ [illegible]" ಎಂಬ ಮಾತೂ ನಡೆಯಲಾಗದು. ಆದವಲ್ಲಿ ಹೆಂಡತಿಯು [illegible], ಪತಿಸೇವೆಯೊಂದಲ್ಲದ ತನ್ನ ಕರ್ತವ್ಯಗಳನ್ನು [illegible] ಬಿಡುವಳು.

ಜನಮೇಜಯಾ, ಮಂದಪಾಲನ ಈ ಮಾತುಗಳನ್ನು ಕೇಳಿದಬಳಿಕ, ಆತನ ಮಕ್ಕಳು ತಂದೆಯ ಸೇವೆಯಲ್ಲಿ ತತ್ಪರರಾದರು. ಆ ಮಂದಪಾಲನು ಹೆಂಡಿರು ಮಕ್ಕಳೊಡನೆ ಆನಂದದಿಂದ ಇರತೊಡಗಿದನು.

**೨೩೪ನೇ ಅಧ್ಯಾಯ—ವರಪ್ರದಾನ—** ಜನಮೇಜಯಾ, ಹೀಗೆ ಭಗವಾನ್ ಅಗ್ನಿಯು ದುಷ್ಜ್ವರ ನಾಶದಿಂದ ಜಗತ್ತಿನ ಕಲ್ಯಾಣಮಾಡುವದಕ್ಕಾಗಿ ಖಾಂಡವಾರಣ್ಯವನ್ನು ಸುಟ್ಟುಬಿಟ್ಟು ಅರ್ಜುನನಿಗೆ ದರ್ಶನಕೊಟ್ಟನು. ಬಳಿಕಭಗವಾನ್ ದೇವೇಂದ್ರನು ದೇವಗಣಸಹಿತನಾಗಿ ಅಂತರಿಕ್ಷದಿಂದ ಕೆಳಗಿಳಿದು ಕೃಷ್ಣಾರ್ಜುನರನ್ನು ಕುರಿತು—"ನಿಜವಾಗಿ ನೀವಿಬ್ಬರೂ ದೇವತೆಗಳಿಗೂ ಅಶಕ್ಯವಾದ ಕೆಲಸವನ್ನು ಮಾಡಿರುವದರಿಂದ ನಾನು ಸಂತುಷ್ಟನಾಗಿರುವೆನು. ನೀವು ಈ ಭೂಲೋಕದಲ್ಲಿ ಮನುಷ್ಯರಿಗೆ ದುರ್ಲಭವಾದದ್ದೊಂದು ವರವನ್ನು ಬೇಡಿಕೊಳ್ಳಿರಿ" ಎಂದುಹೇಳಿದನು. ಆಗಅರ್ಜುನನು "ದಿವ್ಯಾಸ್ತ್ರಗಳನ್ನು ನನಗೆ ಕೊಡೆಂ"ದು ಕೇಳಿಕೊಳ್ಳಲು, ಇಂದ್ರನು "ನಿನ್ನಮೇಲೆ ಭಗವಾನ್‌ಶಂಕರನು ಪ್ರಸನ್ನನಾದಾಗ ನಿನಗೆನಾನು ದಿವ್ಯಾಸ್ತ್ರಗಳನ್ನು ಕೊಡುವೆನು." ಎಂದು ಹೇಳಿದನು. ಬಳಿಕ ಶ್ರೀ ಕೃಷ್ಣನು ಇಂದ್ರನಿಗೆ—"ನನ್ನಲ್ಲಿ ಈ ಅರ್ಜುನನ ಶಾಶ್ವತಪ್ರೇಮವು ಇರುವಂತೆ ಅನುಗ್ರಹಿಸು" ಎಂದು ಕೇಳಿಕೊಂಡನು. ಅದರಂತೆ ಇಂದ್ರನು ವರಪ್ರದಾನಮಾಡಿ ದೇವಗಣದೊಡನೆ ಸ್ವರ್ಗಲೋಕಕ್ಕೆ ಹೊರಟುಹೋದನು. ಅಗ್ನಿಯು ಖಾಂಡವವನವನ್ನು ಸುಟ್ಟಬಳಿಕ ಐದುದಿನ ವಿಶ್ರಾಂತಿಯನ್ನು ಹೊಂದಿ ಕೃಷ್ಣಾರ್ಜುನರನ್ನು ಕುರಿತು—"ಎಲೈ ಪುರುಷಶ್ರೇಷ್ಠರೇ, ನೀವಿಬ್ಬರೂ ನನ್ನನ್ನು ಯಥೇಚ್ಛ ತೃಪ್ತಿಪಡಿಸಿದಿರಿ. ಇನ್ನು ನಿಮಗೆ ಹೋಗಲಿಕ್ಕೆ ಅನುಜ್ಞೆಕೊಡುವೆನು. ನಿಮ್ಮ ಗತಿಗೆ ಎಲ್ಲಿಯೂ ಪ್ರತಿಬಂಧವಾಗ

ಬಿಕ್ಕಿಲ್ಲ” ಎಂದು ವರಪ್ರದಾನಮಾಡಲು, ಕೃಷ್ಣಾರ್ಜುನರು ಮಯದೈತ್ಯನೊಡನೆ ಯಮುನಾನದಿಯ ತೀರಕ್ಕೆ ಹೋಗಿ ಅಲ್ಲಿ ಒತ್ತಟ್ಟಿಗೆ ಕುಳಿತುಕೊಂಡರು.

---

### ಶ್ರೀಸದ್ಗುರು–ಸೂಕ್ತಿರೂಪ

## ರಹಸ್ಯಗಳು

**(೫೩) ಪರಿವಾರಕ್ಕಾಗಿ ತಾನಲ್ಲ, ತನಗಾಗಿ ಪರಿವಾರವು—** ಈ ಉಪಪರ್ವದೊಳಗಿನ ಶಾರ್ಙ್ಗಕೋಪಾಖ್ಯಾನದಿಂದ ಈ ಸಿದ್ಧಾಂತವು ಸಿದ್ಧವಾಗುತ್ತದೆ. “ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ” ಎಂದು ಬೃಹದಾರಣ್ಯಕಶ್ರುತಿಯು ಹೇಳುತ್ತಿರುವದು. ಮಂದಪಾಲನೆಂಬ ಗಂಡು ಪಕ್ಷಿಯು ತನ್ನ ಸಂತತಿಯನ್ನು ಹೆಚ್ಚಿಸುವ ತನ್ನ ಇಚ್ಛೆಯನ್ನು ಪೂರೈಸಿಕೊಳ್ಳುವದಕ್ಕಾಗಿ, ತನ್ನ ಹೆಂಡತಿಯಾದ ಜರಿತೆಯನ್ನೂ, ಇನ್ನೂ ತತ್ತಿಯಿಂದ ಹೊರಬೀಳದೆಯಿದ್ದ ತನ್ನ ನಾಲ್ಕು ಜನ ಮಕ್ಕಳನ್ನೂ ಬಿಟ್ಟು “ಲಪಿತೆ” ಎಂಬ ಎರಡನೆಯ ಸುಂದರ ಪಕ್ಷಿಯನ್ನು ಹೆಂಡತಿಯಾಗಿ ಮಾಡಿಕೊಂಡಿತು. ಇತ್ತ ಖಾಂಡವವನವು ಸುಡತೊಡಗಲು, ಜರಿತೆಯು ತನ್ನ ರೆಕ್ಕೆಬಾರದ ಮಕ್ಕಳಿಗೆ ಏನೇನೋ ಹೇಳಿ ತನ್ನ ಜೀವ ಉಳಿಸಿಕೊಳ್ಳುವ ಇಚ್ಛೆಯಿಂದ ಅವನ್ನು ಬಿಟ್ಟು ಹೊರಟುಹೋಯಿತು. ಆ ನಾಲ್ಕು ಮರಿಗಳಾದರೂ ತಾವು ಇಲಿಗಳ ಬಾಯಿಗೆ ಬಿದ್ದೇವೆಂದು ಭಯಪಟ್ಟು, ತಮ್ಮ ಜೀವ ಉಳಿಸಿಕೊಳ್ಳುವ ಇಚ್ಛೆಯಿಂದ ತಮ್ಮ ತಾಯಿಯ ಮಾತನ್ನು ಮೀರಿದವು. ಹೀಗೆ ಪ್ರತಿಒಂದು ಪ್ರಾಣಿಯು ತನ್ನ ಇಚ್ಛೆಯನ್ನು ಪೂರ್ಣಮಾಡಿಕೊಳ್ಳುವದಕ್ಕಾಗಿ ತನ್ನ ಪರಿವಾರವನ್ನು ಉಪಯೋಗಿಸುವದಲ್ಲದೆ, ತನ್ನ ಪರಿವಾರದ ಸುಖಕ್ಕಾಗಿ ತನ್ನನ್ನು ವಹಿಸುವದಿಲ್ಲ.

ಈ ಮಾತು ಮನುಷ್ಯರಾದ ನಮಗೂ ಹತ್ತುವದು; ನಾವು ಹಿಂಡುವ ಎಮ್ಮೆಯನ್ನು, ಅದು ಚನ್ನಾಗಿ ಹಿಂಡುವವರೆಗೆ ಚನ್ನಾಗಿ ಪೋಷಿಸು

ತ್ತೇವೆ, ಹಿಂಡದಾಯಿತೆಂದರೆ ಅದನ್ನು ದಂಟಿನ ಗೋದಲಿಗೆ ಕಟ್ಟುತ್ತೇವೆ. ಹೆಂಡತಿಯು ಹೇಳಿದ ಹಾಗೆ ಕೇಳಿ ನಮಗೆ ಸುಖಕೊಡುವವರೆಗೆ ಆಕೆಯನ್ನು ನಾವು ಪ್ರೀತಿಸಿ ರಕ್ಷಿಸುತ್ತೇವೆ ; ನಮಗೆ ವಿರೋಧಿಯಾದರೆ ಆಕೆಯನ್ನು ದ್ವೇಷಿಸುತ್ತೇವೆ. ಅದೂ ಅಲ್ಲದೆ, ನಮಗೆ ಯಾತರಿಂದ, ಅಥವಾ ಯಾರಿಂದ ಹೆಚ್ಚು ಸುಖವಾಗುವದೋ ಅದನ್ನು ಅಥವಾ ಅವರನ್ನು ಹೆಚ್ಚು ಪ್ರೀತಿಸುತ್ತೇವೆ. ಸವಿಯು ಸೇರುವವರು ಬೆಲ್ಲಕ್ಕಿಂತ ಸಕ್ಕರಿಯನ್ನು ಹೆಚ್ಚು ಪ್ರೀತಿಸುವದೂ, ಮುದುಕೆಯಾದ ಹಿರಿಯ ಹೆಂಡತಿಗಿಂತ ಹರೆಯದ ಚಿಕ್ಕ ಹೆಂಡತಿಯನ್ನು ಹೆಚ್ಚು ಪ್ರೀತಿಸುವದೂ ಇದಕ್ಕೆ ಉದಾಹರಣಗಳಾಗಿರುವವು. ತಾನಿರುವದೇ ತನಗೆ ಹೆಚ್ಚು ಸುಖಕರವಾದದ್ದರಿಂದಲೂ, ಎಲ್ಲ ಪರಿವಾರದ ಅಸ್ತಿತ್ವದಿಂದಾಗುವ ಸುಖಕ್ಕಿಂತ ತನ್ನ ಅಸ್ತಿತ್ವದಿಂದಾಗುವಸುಖವೇ ತನಗೆ ಹೆಚ್ಚಿನದಾದ್ದರಿಂದಲೂ, ತನ್ನ ಪರಿವಾರಕ್ಕಿಂತ ತನಗೆತಾನೇ ಶ್ರೇಷ್ಠನೂ,ತನಗೆ ತಾನೇ ಹೆಚ್ಚುಪ್ರಿಯನೂ ಆಗಿರುವದು ಸ್ವಾಭಾವಿಕವು.

ಇದು ಲೌಕಿಕರ ರೀತಿಯಾಯಿತು ; ಆದರೆ ಜ್ಞಾನಿಗಳ ಮಾತು ಹಾಗಲ್ಲ. ಜ್ಞಾನಿಗಳಿಗೆ ತಮ್ಮ ಶ್ರೇಷ್ಠತರ ಆನಂದ ಸ್ವರೂಪದ ಅನುಭವವಾಗಿರುವದರಿಂದ, ಆವರಿಗೆ ತಮ್ಮ ಪರಿವಾರದಿಂದಾಗುವ ಕ್ಷುದ್ರಾನಂದವು ಮಹತ್ವದ್ದಾಗಿ ತೋರುವದಿಲ್ಲ ; ಅಲ್ಲದೆ ತಮ್ಮ ಪರಿವಾರವು ಆತ್ಮದೃಷ್ಟಿಯಿಂದ ತಮಗೆ ಭಿನ್ನವಾಗಿಯೂ ಅವರಿಗೆ ತೋರುವದಿಲ್ಲ. ಆದ್ದರಿಂದಲೇ ಅವರು ಅನ್ಯರಿಂದಾಗುವ ಸುಖ-ದುಃಖಗಳನ್ನು ಲಕ್ಷಿಸದೆ, ಅಜ್ಞಾನಮೂಲಕ ಅನ್ಯರು ಪಡುತ್ತಿರುವ ಹಾಗು ಕೊಡುತ್ತಿರುವ ದುಃಖಕ್ಕಾಗಿ ಮರುಗಿ ಕರುಣಾಳುಗಳಾಗಿ, ನಿರಪೇಕ್ಷಬುದ್ಧಿಯಿಂದ ತಾವಾಗಿಯೇ ಅನ್ಯರ ದುಃಖವನ್ನು ದೂರಮಾಡಲಿಕ್ಕೆ ಹೆಣಗುವರು. ಆದ್ದರಿಂದಲೇ "ಸಂತಃ ಸ್ವಯಂ ಪರಹಿತೇಷು ಕೃತಾಭಿಯೋಗಾಃ" ಎಂಬ ಉಕ್ತಿಯು ಪ್ರಸಿದ್ಧವಾಗಿರುವದು !

---

## ಸಮಾಪ್ತ

**ಶ್ರೀಕೃಷ್ಣಾರ್ಪಣಮಸ್ತು ಮಂಗಲಮಸ್ತು.**